ದಾಸವರೇಣ್ಯ ಶ್ರೀ ಜಗನ್ನಾಥದಾಸ

ವಿರಚಿತ

# ಶ್ರೀ ಹರಿಕಥಾಮೃತಸಾರ

## (ಮೊದಲಿನ ನಾಲ್ಕು ಸಂಧಿಗಳು)

ಒಂದು ಅಧ್ಯಯನ



ಸಂಗ್ರಹ ಮತ್ತು ಅನುವಾದ - ವಿದ್ವಾನ್ ಶ್ರೀ ಕೆ. ಹಯವದನ ಪುರಾಣಿಕ ಎಂ.ಎ.

ಪ್ರಕಾಶಕರು

ಶ್ರೀಮತ್ಕವಿಕುಲತಿಲಕ ಶ್ರೀಮನ್ನ್ಸಿಂಹಭಾಗವತಸುತ
ಶ್ರೀಜಗನ್ನಾಥದಾಸ ವಿರಚಿತ

# ಶ್ರೀಹರಿಕಥಾಮೃತಸಾರ

## ಒಂದು ಅಧ್ಯಯನ

ಭಾಗ-೧

ಮಂಗಳಾಚರಣ ಸಂಧಿ, ಕರುಣಾ ಸಂಧಿ
ವ್ಯಾಪ್ತಿ ಸಂಧಿ, ಭೋಜನರಸವಿಭಾಗ ಸಂಧಿ

ಅನುವಾದಕರು ಮತ್ತು ಸಂಗ್ರಾಹಕರು :
ವಿದ್ವಾನ್ ಕೆ. ಹಯವನದನ ಪುರಾಣಿಕ

ಪ್ರಕಾಶಕರು :
ಸುವರ್ಣ ಮಹೋತ್ಸವ ಸಮಿತಿ
ಅಖಿಲ ಭಾರತ ಮಾಧ್ವ ಮಹಾಮಂಡಲ
ಪೂರ್ಣಪ್ರಜ್ಞ ವಿದ್ಯಾಪೀಠ, ಕತ್ತರಗುಪ್ಪೆ ರಸ್ತೆ, ಬೆಂಗಳೂರು-೫೬೦ ೦೨೮.

ಶ್ರೀಮತ್ಕವಿಕುಲತಿಲಕ ಶ್ರೀಮನ್ನೃಸಿಂಹಭಾಗವತಸುತ ಶ್ರೀಜಗನ್ನಾಥದಾಸ ವಿರಚಿತ

# ಶ್ರೀಹರಿಕಥಾಮೃತಸಾರ—ಒಂದು ಅಧ್ಯಯನ (ಭಾಗ-1)

ಮಂಗಳಾಚರಣ ಸಂಧಿ, ಕರುಣಾ ಸಂಧಿ, ವ್ಯಾಪ್ತಿ ಸಂಧಿ, ಭೋಜನರಸವಿಭಾಗ ಸಂಧಿ

*ಅಖಿಲ ಭಾರತ ಮಾಧ್ವ ಮಹಾಮಂಡಲದ 'ಸುವರ್ಣ ಮಹೋತ್ಸವ'ವು ಫೆಬ್ರವರಿ 6ರಿಂದ 9ರವರೆಗೆ ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ನಡೆದ ಸಂದರ್ಭದಲ್ಲಿ ಮಂಡಲದ ಸಂರಕ್ಷಕರಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು, ಪೇಜಾವರ ಮಠ, ಉಡುಪಿ. ಇವರು ಬಿಡುಗಡೆಗೊಳಿಸಿದರು*


ಪ್ರಕಾಶಕರು ಅಖಿಲ ಭಾರತ ಮಾಧ್ವ ಮಹಾಮಂಡಲ, ಬೆಂಗಳೂರು

ಪುಟಗಳು 509+8

ಪ್ರತಿಗಳು 1000

ಬೆಲೆ ರೂ 140/-

ಮುದ್ರಣ 2003





ಟೈಪ್‌ಸೆಟ್ ಪ್ರಹ್ಲಾದ ಡಿ ವಿ
ಪೂರ್ಣಪ್ರಜ್ಞ ಸಂಶೋಧನ ಮಂದಿರ

ಮುಖಪುಟ ಮಹೇಶ್, ಸ್ಕ್ಯಾನ್ ಇಮೇಜ್, ಬೆಂಗಳೂರು

ಮುದ್ರಣ ಓಂಕಾರ್ ಪ್ರಿಂಟರ್ಸ್, ಬೆಂಗಳೂರು

ಪುಸ್ತಕಗಳು ದೊರೆಯುವ ಸ್ಥಳ

**ಅಖಿಲ ಭಾರತ ಮಾಧ್ವ ಮಹಾಮಂಡಲ**

ಪೂರ್ಣಪ್ರಜ್ಞ ವಿದ್ಯಾಪೀಠ, ಕತ್ತರಗುಪ್ಪೆ ರಸ್ತೆ, ಬೆಂಗಳೂರು-560 028

ಶ್ರೀಮತ್ಕವಿಕುಲತಿಲಕ ಶ್ರೀಮನ್ನೃಸಿಂಹಭಾಗವತಸುತ ಶ್ರೀಜಗನ್ನಾಥದಾಸ ವಿರಚಿತ

# ಶ್ರೀಹರಿಕಥಾಮೃತಸಾರ—ಒಂದು ಅಧ್ಯಯನ (ಭಾಗ-1)

ಮಂಗಳಾಚರಣ ಸಂಧಿ, ಕರುಣಾ ಸಂಧಿ, ವ್ಯಾಪ್ತಿ ಸಂಧಿ, ಭೋಜನರಸವಿಭಾಗ ಸಂಧಿ

ಅಖಿಲ ಭಾರತ ಮಾಧ್ವ ಮಹಾಮಂಡಲದ 'ಸುವರ್ಣ ಮಹೋತ್ಸವ'ವು ಫೆಬ್ರವರಿ 6ರಿಂದ 9ರವರೆಗೆ ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ನಡೆದ ಸಂದರ್ಭದಲ್ಲಿ ಮಂಡಲದ ಸಂರಕ್ಷಕರಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು, ಪೇಜಾವರ ಮಠ, ಉಡುಪಿ. ಇವರು ಬಿಡುಗಡೆಗೊಳಿಸಿದರು

ಪ್ರಕಾಶಕರು ಅಖಿಲ ಭಾರತ ಮಾಧ್ವ ಮಹಾಮಂಡಲ, ಬೆಂಗಳೂರು

ಪುಟಗಳು 509+8

ಪ್ರತಿಗಳು 1000

ಬೆಲೆ ರೂ 140/-

ಮುದ್ರಣ 2003



ಟೈಪ್‌ಸೆಟ್ ಪ್ರಹ್ಲಾದ ಡಿ ವಿ
ಪೂರ್ಣಪ್ರಜ್ಞ ಸಂಶೋಧನ ಮಂದಿರ

ಮುಖಪುಟ ಮಹೇಶ್, ಸ್ಕ್ಯಾನ್ ಇಮೇಜ್, ಬೆಂಗಳೂರು

ಮುದ್ರಣ ಓಂಕಾರ್ ಪ್ರಿಂಟರ್ಸ್, ಬೆಂಗಳೂರು

ಪುಸ್ತಕಗಳು ದೊರೆಯುವ ಸ್ಥಳ

**ಅಖಿಲ ಭಾರತ ಮಾಧ್ವ ಮಹಾಮಂಡಲ**

ಪೂರ್ಣಪ್ರಜ್ಞ ವಿದ್ಯಾಪೀಠ, ಕತ್ತರಗುಪ್ಪೆ ರಸ್ತೆ, ಬೆಂಗಳೂರು-560 028

ಶ್ರೀಮತ್ಕವಿಕುಲತಿಲಕ ಶ್ರೀಮನ್ನೃಸಿಂಹಭಾಗವತಸುತ ಶ್ರೀಜಗನ್ನಾಥದಾಸ ವಿರಚಿತ

# ಶ್ರೀಹರಿಕಥಾಮೃತಸಾರ—ಒಂದು ಅಧ್ಯಯನ (ಭಾಗ-1)

ಮಂಗಳಾಚರಣ ಸಂಧಿ, ಕರುಣಾ ಸಂಧಿ, ವ್ಯಾಪ್ತಿ ಸಂಧಿ, ಭೋಜನರಸವಿಭಾಗ ಸಂಧಿ

*ಅಖಿಲ ಭಾರತ ಮಾಧ್ವ ಮಹಾಮಂಡಲದ 'ಸುವರ್ಣ ಮಹೋತ್ಸವ'ವು ಫೆಬ್ರವರಿ 6ರಿಂದ 9ರವರೆಗೆ ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ನಡೆದ ಸಂದರ್ಭದಲ್ಲಿ ಮಂಡಲದ ಸಂರಕ್ಷಕರಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು, ಪೇಜಾವರ ಮಠ, ಉಡುಪಿ. ಇವರು ಬಿಡುಗಡೆಗೊಳಿಸಿದರು.*

ಪ್ರಕಾಶಕರು ಅಖಿಲ ಭಾರತ ಮಾಧ್ವ ಮಹಾಮಂಡಲ, ಬೆಂಗಳೂರು

ಪುಟಗಳು 509+8

ಪ್ರತಿಗಳು 1000

ಬೆಲೆ ರೂ 140/-

ಮುದ್ರಣ 2003



ಟೈಪ್‌ಸೆಟ್ ಪ್ರಹ್ಲಾದ ಡಿ ವಿ
ಪೂರ್ಣಪ್ರಜ್ಞ ಸಂಶೋಧನ ಮಂದಿರ

ಮುಖಪುಟ ಮಹೇಶ್, ಸ್ಕ್ಯಾನ್ ಇಮೇಜ್, ಬೆಂಗಳೂರು

ಮುದ್ರಣ ಓಂಕಾರ್ ಪ್ರಿಂಟರ್ಸ್, ಬೆಂಗಳೂರು

ಪುಸ್ತಕಗಳು ದೊರೆಯುವ ಸ್ಥಳ

**ಅಖಿಲ ಭಾರತ ಮಾಧ್ವ ಮಹಾಮಂಡಲ**

ಪೂರ್ಣಪ್ರಜ್ಞ ವಿದ್ಯಾಪೀಠ, ಕತ್ತರಗುಪ್ಪೆ ರಸ್ತೆ, ಬೆಂಗಳೂರು-560 028

ಶ್ರೀ 108 ಶ್ರೀ ವೇಜಾವರ ಮಠಾಧೀಶರಾದ

ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಮಹಾನುಭಾವರೂ, ಜ್ಞಾನಿವರೇಣ್ಯರೂ ಆದ ಶ್ರೀ ಜಗನ್ನಾಥದಾಸವರೇಣ್ಯರು ರಚಿಸಿದ ಮೇರು ಕೃತಿ 'ಶ್ರೀಹರಿಕಥಾಮೃತಸಾರ' ಶ್ರೀಮಧ್ವಾಚಾರ್ಯರು ರಚಿಸಿದ ಸರ್ವ-ಮೂಲ ಗ್ರಂಥಗಳು ಹಾಗೂ ಇನ್ನಿತರ ಗ್ರಂಥಗಳ ಸಾರಭೂತವಾದುದೇ ಈ ಹರಿಕಥಾ-ಮೃತಸಾರ ಎಂಬ ಉದ್ದಾಮ ಗ್ರಂಥ ವೈದಿಕ ತತ್ತ್ವಗಳು, ಧರ್ಮ ಮತ್ತು ಭಾರತೀಯ ಸಂಸ್ಕೃತಿಯ ಸಮಗ್ರ ಸಾರಗಳು ಇವುಗಳಲ್ಲಿ ಅಡಕವಾಗಿರುವುವು ಈ ಸಾರವನ್ನು ಎಲ್ಲರೂ ಸವಿಯಲು ಅನುಕೂಲವಾಗುವಂತೆ ನಮ್ಮ ಪ್ರಿಯ ಶಿಷ್ಯರೂ, ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಂಶುಪಾಲರೂ ಆಗಿದ್ದ ಶ್ರೀ ಕೆ ಹಯವದನ ಪುರಾಣಿಕರು ಉತ್ತಮ ವಿಮರ್ಶೆ, ವೈದುಷ್ಯಗಳಿಂದ ತುಂಬಿದ ವಿವರಣೆಯನ್ನು ಒಂದು ಅಧ್ಯಯನದೋಪಾದಿಯಲ್ಲಿ ನಡೆಸಿ-ದ್ದಾರೆ ಇದು ಹಂತ ಹಂತವಾಗಿ ಪ್ರತಿ ತಿಂಗಳು ಅಖಿಲ ಭಾರತ ಮಾಧ್ವ ಮಹಾಮಂಡಲದ ಮುಖಪತ್ರಿಕೆಯಾದ 'ತತ್ವವಾದ' ಮಾಸ ಪತ್ರಿಕೆಯಲ್ಲಿ ಒಂಭತ್ತು ವರ್ಷಗಳಿಂದ ಪ್ರಕಾಶಗೊಳ್ಳುತ್ತಾ ಇತ್ತು ಈವರೆಗೆ ಸುಮಾರು ನಾಲ್ಕು ಸಂಧಿಗಳು ಮುಗಿದಿದ್ದು, ಇದನ್ನು ಒಟ್ಟಿಗೆ ಸೇರಿಸಿ, ಅಖಿಲ ಭಾರತ ಮಾಧ್ವ ಮಹಾಮಂಡಲದ ಸುವರ್ಣ ಮಹೋತ್ಸವದ ಕಾಲದಲ್ಲಿ ಬಿಡುಗಡೆಯನ್ನು ಮಾಡುವ ಕಾರ್ಯ ಪ್ರಶಂಸನೀಯ ಶ್ರೇಷ್ಠ ವಿದ್ವಾಂಸರೂ, ಉತ್ತಮ ಸಂಶೋಧಕರೂ, ಲೇಖಕರೂ ಆದ ಶ್ರೀ ಹಯವದನ ಪುರಾಣಿಕರಿಂದ ಮುಂದಿನ ಎಲ್ಲಾ ಸಂಧಿಗಳು ಪ್ರಕಟವಾಗಿ ನಿರಂತರ ಜ್ಞಾನಸೇವೆ ನಡೆಯಲೆಂದು ಆಶಿಸುತ್ತೇವೆ

ಇತಿ ಸಪ್ರೇಮ ನಾರಾಯಣಸ್ಮರಣೆಗಳು

ಶ್ರೀ ವಿಶ್ವೇಶತೀರ್ಥ ಶ್ರೀಪಾದರು

ಶ್ರೀ ವೇಜಾವರ ಮಠ, ಉಡುಪಿ

# ಮೊದಲ ಮಾತು

ಜಲಜೇಷ್ವನಿಭಾಕಾರಂ ಜಗದೀಶಪದಾಶ್ರಯಮ್ ।
ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ ॥

**ಹರಿದಾಸಪರಂಪರೆ**

ಶ್ರೀಮನ್ಮಧ್ವಾಚಾರ್ಯರು ಶುದ್ಧವೈಷ್ಣವಸಿದ್ಧಾಂತಸ್ಥಾಪನೆಗಾಗಿ ಸರ್ವಮೂಲಗ್ರಂಥ-ಗಳನ್ನು ರಚಿಸಿದರು ಅವುಗಳಲ್ಲಿ ದ್ವಾದಶಸ್ತೋತ್ರ ಹರಿದಾಸವಾಙ್ಮಯ ಪರಂಪರೆಗೆ ಶ್ರೀಕಾರ ಹಾಕಿತು ಸೂತ್ರ ಶೈಲಿಯಲ್ಲಿ ಸಿದ್ಧಾಂತದ ಪ್ರಮೇಯಗಳನ್ನು ಸುಂದರವಾಗಿ ಸಂಗ್ರಹಿಸಿ ಹಾಡಿ ಭಗವಂತನನ್ನು ಒಲಿಸುವ ದಿವ್ಯ ಕೃತಿ ಅದು ಹರಿದಾಸವಾಙ್ಮಯದ ಚೊಚ್ಚಲ ಕೃತಿ, ಮೇರು ಕೃತಿ, ಆದರೆ ಸಂಸ್ಕೃತದಲ್ಲಿದೆ

ಸರ್ವೈರುಚ್ಚಾವಚೈಃ ಶ್ರೌತೈಃ ಪೌರಾಣೈಃ ಪ್ರಾಕೃತೈರಪಿ ।
ಸ್ತುತ್ವಾ ಪ್ರಸೀದ ಭಗವನ್ ಇತಿ ವಂದೇತ ದಂಡವತ್ ॥

ಎಂದು ಭಾಗವತ ಹೇಳುವಂತೆ ಸ್ತೋತ್ರಸಾಹಿತ್ಯ ಸಂಸ್ಕೃತದಲ್ಲಿರಬಹುದು, ಕನ್ನಡ-ದಲ್ಲಿಯೂ ಇರಬಹುದು ಭಗವಂತ ಆಲಿಸುತ್ತಾನೆ, ಮೆಚ್ಚುತ್ತಾನೆ ಸ್ತೋತ್ರ ಪದಗಳನ್ನು ಪಂಡಿತರು ಹಾಡಲಿ, ಪಾಮರರು ಹಾಡಲಿ, ಭಗವಂತ ಒಲಿಯುತ್ತಾನೆ ಸ್ತ್ರೀಪುರುಷರೆಲ್ಲರೂ ತತ್ವಜ್ಞಾನಕ್ಕೆ ಅಧಿಕಾರಿಗಳು, ಭಗವಂತನ ಒಲುಮೆಗೆ ಪಾತ್ರರು ಆದ್ದರಿಂದ ಸಂಸ್ಕೃತದಂತೆ ಕನ್ನಡದಲ್ಲಿಯೂ ಸ್ತೋತ್ರಸಾಹಿತ್ಯ ಬೆಳೆಯಬೇಕು ಎಂದು ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀನರಹರಿತೀರ್ಥರು ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿ ಹಾಡಿದರು ಅಂದಿನಿಂದಲೂ ಪೀಠಾಧಿಪತಿಗಳ ಪರಂಪರೆ ಅದ್ಭುತವಾದ ಹರಿದಾಸಸಾಹಿತ್ಯವನ್ನು ಕನ್ನಡದಲ್ಲಿ ಬೆಳೆಸುತ್ತ ಬಂದಿತು ಕನ್ನಡ ಪ್ರಾಕೃತ ಭಾಷೆ, ಅಪವಿತ್ರ ಎನ್ನುವ ಭಾವನೆ ಯಾರ-ಲ್ಲಿಯೂ ಇರಲಿಲ್ಲ ವ್ಯಾಸಕೂಟ, ದಾಸಕೂಟವೆಂಬ ಭೇದವೂ ಇರಲಿಲ್ಲ ವ್ಯಾಸಕೂಟದ ವಿದ್ವದ್ವಿಭೂತಿಗಳಾದ ಪೀಠಾಧಿಪತಿಗಳ ಆಶೀರ್ವಾದದ, ಪ್ರೋತ್ಸಾಹದ, ಅನುಗ್ರಹದ ಬಲದಿಂದಲೆ ಹರಿದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದ ಧೀಮಂತ ವಿಭೂತಿ ಪುರುಷರು ಪುರಂದರದಾಸರು, ಕನಕದಾಸರು, ವಿಜಯದಾಸರು, ಪ್ರಸನ್ನ ವೇಂಕಟದಾಸರು, ಗೋಪಾಲದಾಸರು, ಜಗನ್ನಾಥದಾಸರು, ಮುಂತಾದವರು

**ಶ್ರೀಜಗನ್ನಾಥದಾಸರು**

ಶ್ರೀಜಗನ್ನಾಥದಾಸರು ಮೊದಲಿಗೆ ಸಂಸ್ಕೃತದಲ್ಲಿ ಉದ್ದಾಮ ಪಂಡಿತರು ಮಾನ್ವಿ ತಾಲೂಕಿನ ಬ್ಯಾಗವಟ್ಟಿಯ ನರಸಿಂಹಾಚಾರ್ಯರು ತಿರುಪತಿಯ ಶ್ರೀನಿವಾಸನೊಲುಮೆ-

ಯಿಂದ ಪಡೆದ ಪುತ್ರರತ್ನ ಇವರು ಅದರಿಂದ ಶ್ರೀನಿವಾಸ ಎಂದೇ ನಾಮಕಾರಣವಾಗಿತ್ತು ತಂದೆ ಹರಿದಾಸದೀಕ್ಷೆ ಪಡೆದು ನರಸಿಂಹದಾಸರಾದರು ಜೊತೆಗೆ ವಿಜಯದಾಸರ, ಗೋಪಾಲದಾಸರ ಸತ್ಸಂಗಲಾಭವೂ ದೊರಕಿತು ಅದರ ಪರಿಣಾಮವಾಗಿ ಶ್ರೀನಿವಾಸ ಜಗನ್ನಾಥವಿಟ್ಠಲನ ದಾಸನಾಗಿ ಮೆರೆದುದು ನಾಡಿನ ಜನತೆಯ ಭಾಗ್ಯ, ಅಪಾರ ಪುಣ್ಯದ ಫಲ ಜಗನ್ನಾಥವಿಟ್ಠಲನ ಕರುಣೆ ದಾಸರ ಮುಖದಿಂದ ಹರಿದು ಮಡುಗಟ್ಟಿ ಹರಿಕಥಾ-ಮೃತಸಾರವಾಗಿ ಮೈತಳೆದು ನಿಂತಿತು

ಶ್ರೀದಾಸರ ಕಾಲ ಕ್ರಿ ಶ ೧೭೨೭-೧೮೦೯ ಭಾದ್ರಪದ ಶುದ್ಧ ನವಮೀದಿನ ಮಾನ್ವಿ-ಯಲ್ಲಿ ಈ ದಿವ್ಯ ಮಂಗಲ ಜ್ಯೋತಿ ಅನಂತದಲ್ಲಿ ಲೀನವಾಯಿತು ಮಾನ್ವಿಯ ಅವರ ಮನೆಯಲ್ಲಿ ಅವರು ಪೂಜಿಸಿದ ದೇವರುಗಳು, ಶ್ರೀರಾಘವೇಂದ್ರ ಸ್ವಾಮಿಗಳ ವೃಂದಾವನ ಇವೆ ಅವರು ಪಾರಪ್ರವಚನಕ್ಕೆ, ಕೃತಿರಚನೆಗೆ ಕುಳಿತುಕೊಳ್ಳುತ್ತಿದ್ದ ಕಂಬ, ಹಾಡಲು ಉಪಯೋಗಿಸುತ್ತಿದ್ದ ತಂಬೂರಿ ಮುಂತಾದುವನ್ನು ಅಲ್ಲಿ ಇಂದೂ ಕಾಣಬಹುದು ದಾಸರು ರಚಿಸಿದ ಪದಸುಳಾದಿಗಳು, ಮನೆಮನೆಗಳಲ್ಲಿ ಎಲ್ಲೆಡೆ ಕೇಳಿಬರುತ್ತಿವೆ

**ಹರಿಕಥಾಮೃತಸಾರ**

ಹರಿಕಥಾಮೃತಸಾರ ದಾಸರ ಮೇರುಕೃತಿ ಮೂವತ್ತೆರಡು ಸಂಧಿಗಳಲ್ಲಿ ಒಂಬೈ-ನೂರೆಂಬತ್ತೆಂಟು ಪದಗಳನ್ನೊಳಗೊಂಡ ಭಾಮಿನಿ ಷಟ್ಪದಿಯ ದೀರ್ಘ ಕೃತಿ ಮಧ್ವ-ಸಿದ್ಧಾಂತದ ಉತ್ತಮ ಕೈಪಿಡಿ ಗಂಭೀರ ತತ್ವನಿರೂಪಣೆಯೊಂದಿಗೆ ಪ್ರೌಢ ಚಿಂತನೆಯನ್ನು ಷಟ್ಪದಿ ಕಾವ್ಯದ ಸೊಗಡನ್ನೂ ಮೈಗೂಡಿಸಿಕೊಂಡು ಸಂಗ್ರಹವಾಗಿ, ಸಮಗ್ರವಾಗಿ, ತಿಳಿ-ಯಾಗಿ ತತ್ವಶಾಸ್ತ್ರಪ್ರಮೇಯನಿರೂಪಣೆ ಗೈವ ಇಂಥ ಕೃತಿ ಸಂಸ್ಕೃತದಲ್ಲಿಯೂ ವಿರಳ ತತ್ವಜ್ಞಾನಾಮೃತ ಉಣಲೆಂದು ಹಸಿವಿಂದ ಬಂದವರಿಗೆ ಮಣಿಖಚಿತ ಹರಿವಾಣದಲ್ಲಿ ನೀಡಿದ ಅಮೃತ ಭೋಜನ ಈ ಗ್ರಂಥ ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಶ್ರೀದವಿಟ್ಠ-ಲರು ಹೇಳುತ್ತಾರೆ ಸುಜನಸಮುದಾಯಕ್ಕೆ ದಾಸರು ಮಾಡಿದ ಮರೆಯದುಪಕಾರ ಈ ಹರಿಕಥಾಮೃತಸಾರ

ಕನ್ನಡ ಕೃತಿಯಾದ ಹರಿಕಥಾಮೃತಸಾರಕ್ಕೆ ಸಂಸ್ಕೃತದಲ್ಲಿ ಜಂಬುಖಂಡಿ ವಾದಿರಾಜಾ-ಚಾರ್ಯರು ಮುಂತಾದವರ ವ್ಯಾಖ್ಯಾನಗಳು ಬಂದಿರುವುದು ಒಂದು ದೊಡ್ಡ ದಾಖಲೆಯೆ ಸರಿ

ಇಲ್ಲಿ ಮೂವತ್ತೆರಡು ಸಂಧಿಗಳು ಹೀಗಿವೆ—ನಾಂದೀ ಸಂಧಿ, ಕರುಣಾ ಸಂಧಿ, ವ್ಯಾಪ್ತಿ ಸಂಧಿ, ಭೋಜನರಸವಿಭಾಗ ಸಂಧಿ, ವಿಭೂತಿ ಸಂಧಿ, ಪಂಚಮಹಾಯಜ್ಞ ಸಂಧಿ, ಪಂಚ-ತನ್ಮಾತ್ರಾ ಸಂಧಿ, ಮಾತೃಕಾ ಸಂಧಿ, ವರ್ಣಪ್ರಕ್ರಿಯಾ ಸಂಧಿ, ಸರ್ವಪ್ರತೀಕ ಸಂಧಿ,

ಧ್ಯಾನಪ್ರಕ್ರಿಯಾ ಸಂಧಿ, ನಾಡಿಪ್ರಕ್ರಿಯಾ ಸಂದಿ, ನಾಮಸ್ಮರಣ ಸಂಧಿ, ಸರ್ವಜೀವನಕಲ್ಪ ಸಂದಿ, ಶ್ವಾಸ ಸಂಧಿ, ಸ್ವಾತಂತ್ರ್ಯವಿಭಾಗ ಸಂಧಿ, ದತ್ತ ಸ್ವಾತಂತ್ರ್ಯ ಸಂದಿ, ಕ್ರೀಡಾವಿಲಾಸ ಸಂಧಿ, ಸ್ತೋತ್ರಪ್ರಕರಣ ಸಂಧಿ, ಗುಣತಾರತಮ್ಯ ಸಂಧಿ, ಆವೇಶಾವತಾರ ಬೃಹತ್ತಾರತಮ್ಯ ಸಂಧಿ, ಭಕ್ತಾಪರಾಧಸಹಿಷ್ಣು ಸಂಧಿ, ಕಲ್ಪಸಾದನ ಸಂದಿ, ಬಿಂಬೋಪಾಸನ ಸಂಧಿ, ಆರೋಹಣತಾರತಮ್ಯ ಸಂಧಿ, ಅವರೋಹಣತಾರತಮ್ಯ ಸಂಧಿ, ಅನುಕ್ರಮಣಿಕಾ ಸಂದಿ ವಿಶ್ವೇಶ್ವರಸ್ತೋತ್ರ ಸಂಧಿ, ಅಣುತಾರತಮ್ಯ ಸಂಧಿ, ದೈತ್ಯತಾರತಮ್ಯ ಸಂಧಿ, ಸ್ವವೇದ್ಯ-ಪ್ರಕರಣ ಸಂಧಿ, ಕಕ್ಷಾತಾರತಮ್ಯ ಸಂಧಿ

ಹರಿಕಥಾಮೃತಸಾರಕ್ಕೆ ವ್ಯಾಖ್ಯಾನಗಳು ಹಲವು ಅವುಗಳ ಆದಾರದಿಂದ ಇನ್ನೂ ವಿಸ್ತಾರವಾಗಿ ಅಧ್ಯಯನ ಮಾಡಿ ಸವಿಯುವ ಆಸೆ ನನ್ನದು ಅದರ ಅರ್ಥಗಾಂಭೀರ್ಯ-ವನ್ನು ಪ್ರೌಢ ಚಿಂತನೆಯನ್ನು ಭಗವಂತನ ಬಗ್ಗೆ ತುಂಬಿ ತುಳುಕುವ ಭಕ್ತಿಭಾವವನ್ನು ಪೂರ್ತಿ-ಯಾಗಿ ನನ್ನ ಅಧ್ಯಯನದಲ್ಲಿ ಸೆರೆಹಿಡಿದಿರುವೆನೆಂಬ ಭ್ರಮೆ ನನಗೆ ಸರ್ವಥಾ ಇಲ್ಲ ಈ ನಿಟ್ಟಿನಲ್ಲಿ ನನ್ನದು ಇದೊಂದು ಅಲ್ಪಪ್ರಯತ್ನವಷ್ಟೆ ಮೊದಲಿನ ನಾಲ್ಕು ಸಂಧಿಗಳ ವ್ಯಾಖ್ಯಾನ ತತ್ವವಾದ ಕನ್ನಡ ಮಾಸಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿದ್ದು ಇದೀಗ ಪುಸ್ತಕರೂಪದಲ್ಲಿ ವಾಚಕಸಹೃದಯರ ಕೈಗೆ ಲಭ್ಯವಾಗುತ್ತಿದೆ

ನನ್ನ ಈ ಅಧ್ಯಯನದ ಯಶಸ್ಸೆಲ್ಲವೂ ನನ್ನ ಪ್ರೀತಿಯ ಗುರುಗಳಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರಿಗೇ ಸಲ್ಲಬೇಕು—

ಹರಿಕಥಾಮೃತಸಾರ ಗುರುಗಳ<br>
ಕರುಣದಿಂದಾಪನಿತು ಸವಿವೆನು<br>
ಹಯವದನನಿದನಾದರದಿ ಸಹೃದಯರು ಹರಸುವುದು ॥

ಕೆ ಹಯವದನ ಪುರಾಣಿಕ

# ಪ್ರಕಾಶಕರ ನುಡಿ

ಅಖಿಲ ಭಾರತ ಮಾಧ್ವ ಮಹಾಮಂಡಲವು ಕ್ರಿ ಶ ೧೯೮೬ನೇ ವರ್ಷದಲ್ಲಿ ಸರ್ವ-ಮೂಲದ ಕನ್ನಡ ಅನುವಾದದ ಆವೃತ್ತಿಗಳನ್ನು ಹೊರತರುವ ನಿರ್ಧಾರವನ್ನು ಕೈಗೊಂಡಿತು ಈ ಹದಿನಾರು ವರ್ಷಗಳಲ್ಲಿ ಸುಮಾರು ೩೨ ಗ್ರಂಥಗಳ ಅನುವಾದ ಹನ್ನೊಂದು ಸಂಪುಟಗಳಲ್ಲಿ ಜಿಜ್ಞಾಸುಗಳ ಹಾಗೂ ಶಾಸ್ತ್ರಾಭ್ಯಾಸ ಮಾಡುವ ಸಕಲರಿಗೂ ಅನುಕೂಲ-ವಾಗುವಂತೆ ಹಂತ ಹಂತವಾಗಿ ಪ್ರಕಟಗೊಂಡಿರುತ್ತದೆ ಇದರ ಜೊತೆಗೆ ಅಖಿಲ ಭಾರತ ಮಾಧ್ವ ಮಹಾಮಂಡಲದ ಮುಖಪತ್ರಿಕೆಯಾದ 'ತತ್ವವಾದ'ದ ಮುಖಾಂತರ ಕಿರು ಹೊತ್ತಿಗೆಗಳಾದ 'ಉಪಾಯನ' ಪರ್ಯಾಯ ವಿಶೇಷಾಂಕ, ಶ್ರೀರಾಘವೇಂದ್ರ ಗುರು-ಸಾರ್ವಭೌಮರು ವೃಂದಾವನಪ್ರವೇಶ ಮಾಡಿದ ೩೦೦ನೇ ವರ್ಷದ ಸವಿನೆನಪಿಗಾಗಿ 'ತತ್ವಮಂಜರಿ', ಶ್ರೀವ್ಯಾಸರಾಜರ ಪಂಚಶತಾಬ್ದಿ ಸ್ಮರಣಾರ್ಥ 'ಚಂದ್ರಿಕಾ' ವಿಶೇಷಾಂಕ, ಪೂರ್ಣಪ್ರಜ್ಞಭಾರತೀ, ಶ್ರೀಹರೇ ವೇಂಕಟ, ಕರ್ಣಾಟಕ ವೈಷ್ಣವ ಅನುಭಾವಿ ಕವಯಿತ್ರಿ-ಯರು 'ಶ್ರೀಮತ್ ಪುರುಷಸೂಕ್ತಮ್', ಧರ್ಮಾಚರಣೆಯ ರಹಸ್ಯ, ಇವುಗಳು ಪ್ರಕಟಣೆ-ಗೊಂಡು ಇದರ ಉಪಯೋಗವನ್ನು ಸಕಲ ಮಾಧ್ವರೂ ಪಡೆದಿರುತ್ತಾರೆ ಇದಲ್ಲದೆ ಯುವಕರಿಗೆ ಸದ್ಧರ್ಮಾಚರಣೆ, ಧಾರ್ಮಿಕ ಕರ್ಮಾನುಷ್ಠಾನಗಳಿಗೆ ಅನುಕೂಲವಾಗು-ವಂತೆ ದೈನಂದಿನ ಜೀವನದ ಧಾರ್ಮಿಕ ಕೈಪಿಡಿಯ ರೂಪದಲ್ಲಿ 'ಸುಲಭ ನಿತ್ಯಾನುಷ್ಠಾನ ಪದ್ಧತಿ' ಹಾಗೂ 'ಸುಲಭಾನುಷ್ಠಾನ ಸಂಗ್ರಹ' ಎಂಬ ಹೊತ್ತಿಗೆಗಳು, 'ಸ್ತವನಾಂಜಲಿ' ನಿತ್ಯೋಪಯೋಗಿ ಸ್ತೋತ್ರಗಳ ಸಂಗ್ರಹಗಳ ಪ್ರಕಟಣೆಯಾಗಿವೆ

ಪ್ರಕೃತ ಮಹಾನುಭಾವರೂ, ಜ್ಞಾನಿವರೇಣ್ಯರೂ ಆದ ಶ್ರೀಜಗನ್ನಾಥದಾಸವರೇ-ಣ್ಯರು ರಚಿಸಿದ ಮೇರುಕೃತಿ, ಶಾಸ್ತ್ರಗಳ ಸಾರಸಂಗ್ರಹವಾದ 'ಶ್ರೀಹರಿಕಥಾಮೃತಸಾರ'ದ ವ್ಯಾಖ್ಯಾನವನ್ನು ಒಂದು ಅಧ್ಯಯನದ ರೀತಿಯಲ್ಲಿ ಪ್ರತಿ ತಿಂಗಳು ಪ್ರಕಟಣೆಯಾಗುತ್ತಿರುವ ನಮ್ಮ ಮಂಡಲದ ಮುಖಪತ್ರಿಕೆ 'ತತ್ವವಾದ'ದಲ್ಲಿ ಸುಮಾರು೯ ವರ್ಷಗಳಿಂದ ವಿದ್ವಾನ್ ಕಾವು ಹಯವದನ ಪುರಾಣಿಕರು ಬರೆಯುತ್ತಿದ್ದಾರೆ ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಂಶುಪಾಲರಾಗಿದ್ದ ಇವರು ವ್ಯಾಸ ಹಾಗೂ ದಾಸಸಾಹಿತ್ಯದಲ್ಲಿ ಉದ್ದಾಮ ಪಂಡಿತರು

ಈವರೆಗೆ ಸುಮಾರು ೪ ಸಂಧಿಗಳು ಪೂರ್ಣವಾಗಿದ್ದು ಇದನ್ನು ಒಟ್ಟಾಗಿ ಜಿಜ್ಞಾಸುಗಳಿಗೆ ಲಭ್ಯವಾಗುವಂತೆ ಒಂದು ಪುಸ್ತಕರೂಪದಲ್ಲಿ ತರಲು ತೀರ್ಮಾನಿಸಲಾಯ್ತು ಈ ಗ್ರಂಥವನ್ನು ಅಖಿಲ ಭಾರತ ಮಾಧ್ವ ಮಹಾಮಂಡಲದ ಸುವರ್ಣ ಮಹೋತ್ಸವಕಾಲದಲ್ಲಿ ಬಿಡುಗಡೆ

ಮಾಡುವ ಕಾರ್ಯ ಪ್ರಶಂಸನೀಯ. ವಿದ್ವಾನ್ ಹಯವದನ ಪುರಾಣಿಕರಿಗೆ ಮಂಡಲದ ಕೃತಜ್ಞತೆಗಳು.

ಈ ಸಂಪುಟದ ಅಕ್ಷರ ಜೋಡಣೆ ಕಾರ್ಯವನ್ನು ಮಾಡಿರುವ ಡಿ.ವಿ. ಪ್ರಹ್ಲಾದ ಹಾಗೂ ಪೂರ್ಣಪ್ರಜ್ಞ ಸಂಶೋಧನ ಮಂದಿರದ ಅಧಿಕಾರವರ್ಗ ಇವರಿಗೆ ಕೃತಜ್ಞತೆಗಳು. ಮುಖಪುಟವನ್ನು ಸುಂದರವಾಗಿ ವಿನ್ಯಾಸ ಮಾಡಿದ ಮಹೇಶ್ ಇವರಿಗೆ ಹಾಗೂ ಸಂಪುಟ-ವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ ಇವರಿಗೆ ಕೃತಜ್ಞತೆಗಳು.

**ಕೆ. ವಿಷ್ಣುಮೂರ್ತಿ ಎರ್ಕಾಡಿತ್ತಾಯ**
ಅಧ್ಯಕ್ಷರು
ಅಖಿಲ ಭಾರತ ಮಾಧ್ವ ಮಹಾಮಂಡಲ
ಬೆಂಗಳೂರು.

**|| ಶ್ರೀನೃಸಿಂಹಾಯ ನಮಃ ||**

**ಶ್ರೀಮತ್ಕವಿಕುಲತಿಲಕ ಶ್ರೀಮನ್ನೃಸಿಂಹಭಾಗವತಸುತ ಶ್ರೀಜಗನ್ನಾಥದಾಸ ವಿರಚಿತ**

# ಶ್ರೀಹರಿಕಥಾಮೃತಸಾರ

## ೧. ಮಂಗಳಾಚರಣ ಸಂಧಿ

**|| ಹರಿಃ ಓಂ ||**

**ಹರಿಕಥಾಮೃತಸಾರ ಗುರುಗಳ**
**ಕರುಣದಿಂದಾಪನಿತು ಪೇಳುವೆ**
**ಪರಮಭಗವದ್ಭಕ್ತರಿದನಾದರದಿ ಕೇಳುವುದು || ಪ ||**

ಹರಿಕಥಾಮೃತಸಾರವನ್ನು ಗುರುಗಳ ಕರುಣದಿಂದ ಶಕ್ಯವಿದ್ದಷ್ಟು ಹೇಳುತ್ತೇನೆ ಪರಮ ಭಗವದ್ಭಕ್ತರು ಇದನ್ನು ಆದರದಿಂದ ಕೇಳಬೇಕು

ಶ್ರೀಜಗನ್ನಾಥದಾಸರು ತಮ್ಮ ಈ ಮೇರುಕೃತಿಗೆ 'ಶ್ರೀಹರಿಕಥಾಮೃತಸಾರ' ಎಂದು ಸಾರ್ಥಕವಾದ ಹೆಸರಿಟ್ಟಿದ್ದಾರೆ ಇಲ್ಲಿ ಕಥ ಎಂದರ ಕತೆ ಹೇಳುವುವಲ್ಲ, ಆಖ್ಯಾನ ಉಪಾ-ಖ್ಯಾನಗಳಲ್ಲ ಶ್ರೀಮದಾಚಾರ್ಯರು ಕಥಾಲಕ್ಷಣಗ್ರಂಥದಲ್ಲಿ ಹೇಳಿದ ವಾದಕಥೆಯೆ ಕಥೆ ವಾದಕಥ ಎಂದರ ಕೇವಲ ವಾದಕ್ಕಾಗಿ ಅಲ್ಲ ತತ್ತ್ವನಿರ್ಣಯದ ಉದ್ದೇಶದಿಂದ ಗುರು-ಶಿಷ್ಯರೊಳಗೆ ಸೌಹಾರ್ದದಿಂದ ನಡಯುವ ಸಂಭಾಷಣ ಭಾಷ್ಯ-ಟೀಕಾದಿ ಗ್ರಂಥಗಳೆಲ್ಲ ಹೀಗ ಗುರುಶಿಷ್ಯಸಂಭಾಷಣಾರೂಪಗಳ ಆದ್ದರಿಂದ ಕದೆ ಎಂದರೆ ಶಾಸ್ತ್ರಗ್ರಂಥ

ಹರಿಯೆ ಹೇಳಿದ ಹರಿಯ ಕಥ 'ಹರಿಕಥ' ಹರಿ ಎಂದರ ಜೀವರ ಬಿಂಬರೂಪಿ ವಿಷ್ಣು ಮತ್ತು ಜೀವಾಭಿಮಾನಿ ವಾಯು ಇಬ್ಬರೂ ಆಗುತ್ತಾರ ಇವರಿಬ್ಬರೂ ಹೇಳಿದ ವೇದಾದಿ ಗ್ರಂಥಗಳೂ ಸರ್ವಮೂಲ ಗ್ರಂಥಗಳೂ ಹರಿಕದೆ ಎನಿಸುತ್ತವೆ ಅವು ಶ್ರವಣಕಾಲದಲ್ಲಿ ಪರಮಭಗವದ್ಭಕ್ತರಿಗ ಅಮೃತದಂತೆ ಆಪ್ಯಾಯಮಾನ ಕೊನೆಯಲ್ಲಿ ಅಮೃತಕ್ಕ ಅಂದರೆ ಮೋಕ್ಷಕ್ಕೆ ಕಾರಣವಾಗುತ್ತವ ಆದ್ದರಿಂದ ಹರಿಕಥಾಮೃತಗಳೆನಿಸುತ್ತವೆ ಅವುಗಳ ಸಾರ ಈ ಗ್ರಂಥ

'ಹರತಿ ಆಹರತಿ ಸ್ವಸ್ಮಿನ್ ಸರ್ವಗುಣಾನ್' ಎಂಬ ವ್ಯುತ್ಪತ್ತಿಯಿಂದ ಹರಿ ಎಂದರೆ ಸರ್ವಗುಣಪರಿಪೂರ್ಣ ಇದು 'ಬ್ರಹ್ಮ' ಶಬ್ದ ಸಮಾನಾರ್ಥಕ ಅದರಿಂದ 'ಸದ್ಬ್ರಹ್ಮ-ಸೂತ್ರಾಮೃತಮ್' ಎಂದು ಶ್ರೀಜಯತೀರ್ಥರು ಹೇಳುವ 'ಬ್ರಹ್ಮಸೂತ್ರಾಮೃತ'ವೆ ಹರಿ-ಕಥಾಮೃತ ಅದರ ಸಾರವೂ ಆಗಿದೆ ಈ ಗ್ರಂಥ

'ಹರಿಕಥಾಮೃತಸಾರ' ಶಬ್ದದಿಂದ ಈ ಗ್ರಂಥಕ್ಕೆ ವಿಷ್ಣುವಾಯುಗಳ ಮಹಿಮೆಯೆ ವಿಷಯ ಶ್ರವಣಕಾಲದಲ್ಲಿ ಶ್ರೋತೃಗಳಿಗಾಗುವ ಆನಂದವೂ ಕಡೆಯಲ್ಲಿ ಸಿಗುವ ಮೋಕ್ಷಾನಂದವೂ ಪ್ರಯೋಜನವೆಂದಂತಾಯಿತು ಅಧಿಕಾರಿಗಳು ಪರಮ ಭಗವದ್ಭಕ್ತರು ಅವರು ಇದನ್ನು ಆದರದಿಂದ ಕೇಳಲಿ ಎನ್ನುತ್ತಿದ್ದಾರೆ ಶ್ರೀದಾಸರು ಏಕೆಂದರೆ ಹಸಿದು ಬಂದವರಿಗೆ ಮಣಿಖಚಿತವಾದ ಚಿನ್ನದ ಹರಿವಾಣದಲ್ಲಿ ಸುಮಧುರ ಷಡ್ರಸಾನ್ನ ಬಡಿಸಿ ಕೃಷ್ಣಾರ್ಪಣವೆನ್ನುತ್ತ ನೀಡುವಂತೆ ತತ್ವಜ್ಞಾನದ ಹಸಿವಿನಿಂದ ಬಳಲಿ ಬಂದ ಪರಮಭಗವದ್ಭಕ್ತರಿಗಾಗಿಯೆ ದಾಸರು ತಮ್ಮ ಮುತ್ತಿನಂಥ ಮಾತುಗಳೆಂಬ ರತ್ನಗಳಿಂದ ಖಚಿತವಾದ ಸುಂದರ ಕನ್ನಡ ನುಡಿಯ ಚಿನ್ನದ ತಳಿಗೆಯಲ್ಲಿ ಈ ಹರಿಕಥಾಮೃತಸಾರದ ರಸಗವಳವನ್ನು ಬಡಿಸಿ ನೀಡುತ್ತಿದ್ದಾರೆ ಇದು ತನ್ನ ಸಾಮರ್ಥ್ಯವೆಂಬ ಹಮ್ಮು ದಾಸರಿಗಿಲ್ಲ ಕೇವಲ ಗುರುಗಳ ಕರುಣೆ ಎನ್ನುವ ವಿನಯವಿದೆ ಆದ್ದರಿಂದಲೆ 'ಆಪನಿತು' ನನ್ನ ಶಕ್ತಿ ಇದ್ದಷ್ಟು ಎನ್ನುತ್ತಿದ್ದಾರೆ ವಸ್ತುತಃ ಶಕ್ತಿ ಇದ್ದಷ್ಟು ಹೇಳಿಲ್ಲ ಹೇಳಿದ್ದರೆ ಗ್ರಂಥ ಬೆಟ್ಟದಷ್ಟಾಗುತ್ತಿತ್ತು ಆದ್ದರಿಂದ 'ಆಪನಿತು' ಅಲ್ಲ 'ಇನಿತು' ಹೇಳಿದ್ದಾರೆ ಅಥವಾ ಶ್ರೋತೃಗಳಿಗೆ 'ಆಪನಿತೇ' ಅಂದರೆ ಕೇಳಿ ಅರಗಿಸಿಕೊಳ್ಳುವಷ್ಟೇ ಹೇಳಿದ್ದಾರೆ

**ಶ್ರೀರಮಣೀಕರಕಮಲಪೂಜಿತ-**
**ಚಾರುಚರಣಸರೋಜ ಬ್ರಹ್ಮಸ-**
**ಮೀರವಾಣಿಫಣೀಂದ್ರವೀಂದ್ರಭವೇಂದ್ರಮುಖವಿನುತ ॥**
**ನೀರಜಭವಾಂಡೋದಯಸ್ಥಿತಿ-**
**ಕಾರಣನೆ ಕೈವಲ್ಯದಾಯಕ**
**ನಾರಸಿಂಹನೆ! ನಮಿಪೆ ಕರುಣಿಪುದೆಮಗೆ ಮಂಗಳವ ॥ ೧ ॥**

ಶ್ರೀದೇವಿಯ ಕರಕಮಲದಿಂದ ಪೂಜಿತವಾದ ಸುಂದರ ಪಾದಕಮಲ ಉಳ್ಳವನೆ, ಬ್ರಹ್ಮ, ವಾಯು, ಭಾರತಿ, ಶೇಷ, ಗರುಡ, ರುದ್ರ, ಇಂದ್ರ ಮುಂತಾದವರಿಂದ ಸ್ತುತಿಸಲ್ಪಡುವವನೆ, ಬ್ರಹ್ಮಾಂಡದ ಸೃಷ್ಟಿಸ್ಥಿತಿಕಾರಣನೆ, ಮೋಕ್ಷದಾಯಕನೆ, ನರಸಿಂಹನೆ, ನಮಗೆ ಮಂಗಳವನ್ನು ಕರುಣಿಸು

ಹಿಂದೆ ಪಲ್ಲವಿಯಲ್ಲಿ ಗ್ರಂಥರಚನೆಯ ಪ್ರತಿಜ್ಞೆ ಈಗ ಇಲ್ಲಿ ಮಂಗಳಾಚರಣೆ ಭಾಷ್ಯಟೀಕಾದಿಗಳ ಸಂಪ್ರದಾಯದಲ್ಲಿ ಮೊದಲಿಗೆ ಮಂಗಳಾಚರಣೆ, ಬಳಿಕ ಗ್ರಂಥರಚನಯ ಪ್ರತಿಜ್ಞೆ ಉದಾ

ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥

ಮಂಗಳಾಚರಣರೂಪದಿಂದ ಹರಿಗುರುಗಳಿಗೆ ನಮಿಸಿ ಅವರ ಅನುಜ್ಞೆ ಪಡೆದು ಮುಂದೆ ವಿಘ್ನ ಬರಲಾರದೆಂದೂ ಸರಿಯಾದ ಸ್ಫೂರ್ತಿ ಬಂದು ಗ್ರಂಥಪೂರ್ಣವಾದೀತೆಂದೂ ವಿಶ್ವಾಸ ತಂದುಕೊಂಡೇ ಗ್ರಂಥರಚನೆಯ ಪ್ರತಿಜ್ಞೆ ಮಾಡುವುದು ಸಂಭಾವನೀಯ ಶ್ರೀದಾಸರು ಮಾತ್ರ ಧೈರ್ಯದಿಂದ ಮೊದಲಿಗೇ ಪ್ರತಿಜ್ಞೆ ಮಾಡುತ್ತಾರೆ 'ಇದೇನು ಮೊಂಡು ಧೈರ್ಯ?' ಎನ್ನಬಾರದು ಗುರುಗಳ ಕರುಣದಿಂದ ಎಂದು ಗುರುಸ್ಮರಣ ಮಾಡಿ ಗುರುಗಳ ಮೇಲೆ ಎಲ್ಲ ಭಾರಹಾಕಿ ಗ್ರಂಥರಚನೆ ಪ್ರತಿಜ್ಞೆ ಮಾಡಿದ್ದಾರೆ ಅಷ್ಟು ವಿಶ್ವಾಸ ಗುರುಗಳಲ್ಲಿ!

ಹರೌ ರುಷ್ಟೇ ಗುರುಸ್ತ್ರಾತಾ ॥
ನಿಕ್ಷಿಪೇತ್ ಸರ್ವಭಾರಾಂಶ್ಚ ಗುರೋಃ ಶ್ರೀಪಾದಪಂಕಜೇ ॥

*ಶ್ರೀರಮಣಿಕರಕಮಲಪೂಜಿತ*

ಈ ಪದ್ಯದಲ್ಲಿ ಶ್ರೀದಾಸರು ಹೇಳುತ್ತಾರೆ—'ನಾರಸಿಂಹನೆ, ನಿನ್ನ ಚಾರು ಚರಣಕಮಲವನ್ನೆ ಶ್ರೀರಮಣಿ ತನ್ನ ಕರಕಮಲಗಳಿಂದ ಪೂಜಿಸುತ್ತಾಳೆ ನೀನು ವೇದಪುರುಷ ಆಕೆ ವೇದಮಾನಿನಿ

ಋಚಃ ಸಾಮಾನಿ ಯಜೂಂಷಿ ಸಾ ಹಿ ಶ್ರೀರಮೃತಾ ಸತಾಮ್ ॥

ಸಜ್ಜನರ ವ್ಯವಹಾರದಲ್ಲಿ 'ಶ್ರೀ' ಎಂದರೆ ಋಗಾದಿ ವೇದಮಾನಿನಿಯಾದ ರಮೆಯೆ ಅವಳು ವೇದಗಳ ಮೂಲಕ ಪ್ರೇಮದಿಂದ ನಿನ್ನನ್ನೆ ಕೊಂಡಾಡುತ್ತಾಳೆ ಹಾಡುತ್ತಾಳೆ ಎಲ್ಲ ಸಜ್ಜನರಿಂದಲೂ ಹಾಡಿಸುತ್ತಾಳೆ ವಿಶೇಷವಾಗಿ ಬ್ರಹ್ಮಪ್ರಳಯದ ಕೊನೆಯಲ್ಲಿ ತಾನೊಬ್ಬಳ ಶ್ರುತಿಗೀತೆಯ ಸುಪ್ರಭಾತ ಹಾಡಿ ಹೊಗಳಿ ನಿನ್ನನ್ನು ಎಬ್ಬಿಸುತ್ತಾಳೆ ಕರಕಮಲಗಳಿಂದ ನಿನ್ನ ಪಾದಕಮಲಗಳನ್ನು ಒತ್ತುತ್ತಾಳೆ

*ಬ್ರಹ್ಮಸಮೀರವಾಣಿಫಣೀಂದ್ರವೀಂದ್ರಭವೇಂದ್ರಮುಖವಿನುತ*

ಈ ಪೂಜೆಗೆ ಒಲಿದು ನೀನು ಅವಳ ಪ್ರಾರ್ಥನೆಯಂತೆ ಬ್ರಹ್ಮ, ಸಮೀರ, ವಾಣಿ, ಫಣೀಂದ್ರ, ವೀಂದ್ರ, ಭವ, ಇಂದ್ರ ಮುಂತಾದ ತತ್ತ್ವಾಭಿಮಾನಿಗಳನ್ನು ಆಯಾ ತತ್ತ್ವಗಳ ಸಹಿತವಾಗಿ ಸೃಜಿಸಿ ಅವರಿಗ ವೇದೋಪದೇಶ ನೀಡುವಿ ಅವರಿಂದ ವೇದಮಂತ್ರಗಳಿಂದ ವಿನುತನಾಗುವಿ 'ವಿ' ವಿಶೇಷವಾಗಿ, ಅಂದರೆ, ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಪದವಾಕ್ಯಸಮನ್ವಯಪೂರ್ವಕವಾಗಿ 'ನುತ' ನಾಗುವಿ 'ನಾವು ತತ್ತ್ವಾಭಿಮಾನಿಗಳೆಲ್ಲರೂ ಸೇರಿ ಯತ್ನಿಸಿದರೂ ಬ್ರಹ್ಮಾಂಡನಿರ್ಮಾಣ ನಮ್ಮಿಂದ ಸಾಧ್ಯವಾಗುತ್ತಿಲ್ಲ ನೀನ ನಮ್ಮನ್ನು ಒಂದುಗೂಡಿಸಿ ಶಕ್ತಿ ತುಂಬಿ ಬ್ರಹ್ಮಾಂಡವನ್ನು ನಿರ್ಮಿಸು' ಎಂದು ಪ್ರಾರ್ಥಿಸುತ್ತಾರೆ

*ನೀರಜಭವಾಂಡೋದಯಸ್ಥಿತಿಕಾರಣನೆ ಕೈವಲ್ಯದಾಯಕ*

ಆಗ ನೀನು 'ನೀರಜಭವಾಂಡ' ವನ್ನು ಬ್ರಹ್ಮಾಂಡವನ್ನು ನಿರ್ಮಿಸುವಿ ಸುವರ್ಣದ ಆ ಅಂಡ ಸೂರ್ಯನಂತೆ ಹೊಳೆಯುತ್ತ ಉದಿಸುತ್ತದೆ ಅದನ್ನು ಸುಸ್ಥಿತಿಯಲ್ಲಿ ಕಾಪಾಡುತ್ತ

ಸಜ್ಜನರಿಂದ ವೇದಾಧ್ಯಯನರೂಪ ಸಾಧನ ಮಾಡಿಸುತ್ತಿ ಆ ಸಾಧನೆಯ ಫಲವಾಗಿ ಕೈವಲ್ಯ ನೀಡುವಿ

**ನಾರಸಿಂಹನೆ**

ಹೀಗೆ ಹರಿಕದೆ ಎನಿಸಿದ ವೇದಾದಿ ಶಾಸ್ತ್ರಗಳಿಂದಲೆ ಮೋಕ್ಷಾನಂದವೆಂಬ ಅಮೃತದ ಲಾಭ ಅಮೃತ ನೀಡುವುದರಿಂದಲೆ ಅಮೃತವೆನಿಸುತ್ತದೆ ಹರಿಕದೆ ಅದರ ಸಾರವನ್ನು ತಿಳಿಸುವ ಮೋಕ್ಷಶಾಸ್ತ್ರ ನಾನು ರಚಿಸಲು ಹೊರಟಿರುವ ಈ ಹರಿಕಥಾಮೃತಸಾರ ಇದರ ರಚನೆಗೆ ಮುನ್ನ ನಾರಸಿಂಹನೆನಿಸಿದ ನಿನ್ನನ್ನು ನಮಿಸುತ್ತೇನೆ ಏಕೆಂದರೆ ಶ್ರೀಮದಾಚಾರ್ಯರು ಹೇಳುತ್ತಾರೆ—

ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ ॥

ಅಜ್ಞಾನಾದಿ ಕತ್ತಲೆ ಓಡಿಸುವ ಸೂರ್ಯ ನೀನು ಜ್ಞಾನಾನಂದಬಲಸಾಗರ ನೀನು ನನ್ನಲ್ಲಿ ಅಜ್ಞಾನ, ವಿಪರೀತ ಜ್ಞಾನಾದಿಗಳು ಬಾರದಂತೆ, ಒಳ್ಳೆಯ ಸ್ಫೂರ್ತಿ ಬರುವಂತೆ, ಗ್ರಂಥರಚನೆಯಲ್ಲಿ ಶ್ರಮವಾಗದಂತೆ ಮಾಡು ವಿಘ್ನಗಳನ್ನು ಕಳೆದು ನಾನು ನಿರಾತಂಕವಾಗಿ ಗ್ರಂಥ ಬರೆದು ಮುಗಿಸುವಂತೆ ಮಾಡು ಪರಮ ಭಗವದ್ಭಕ್ತರಾದ ಶ್ರೋತೃಗಳು ಇದನ್ನು ನಿರಂತರ ಶ್ರವಣ ಮಾಡಿ ಸಕಲ ಸನ್ಮಂಗಳಭಾಜನರಾಗುವಂತೆ ಅನುಗ್ರಹಿಸು

**ಕರುಣಿಪುದೆಮಗೆ ಮಂಗಳವ**

ನಿನ್ನ ರಮಣಿಯಾದ ಶ್ರೀರಮಣಿ ಸಕಲ ವಾಙ್ಮನಸ ದೇವತೆ ಬ್ರಹ್ಮಾದಿಗಳೂ ನಿನ್ನ ಆರಾಧಕರಾದ ತತ್ತ್ವಾಭಿಮಾನಿಗಳು ನಮಗೆ ಗುರುಗಳು ಅವರೆಲ್ಲರ ದಯೆಯಿಂದ ನನ್ನ ಮಂಗಳಕರವಾದ ಗ್ರಂಥರಚನೆಯ ಪ್ರಯತ್ನ ಯಶಸ್ವಿಯಾಗಲಿ

ಶ್ರೀರಮಣಿ 'ಶ್ರೀ' ಎನಿಸಿದುದು ಅಪಾರ ಸೌಂದರ್ಯರಾಶಿಸ್ವರೂಪಳಾದ್ದರಿಂದ, ಆ ಸೌಂದರ್ಯವೆಲ್ಲ ನಿನಗಾಗಿ, ನಿನ್ನ ಆರಾಧನೆಗಾಗಿ ಅದರಿಂದ ಅವಳು ಬಗಬಗಯಿಂದ ನಿನ್ನನ್ನು ರಮಿಸುತ್ತಾಳೆ ಮೂರ್ತಿಮತ್ತಾಗಿ ಸೌಂದರ್ಯರಾಶಿಯೇ ಬಂದು ಕರಕಮಲ-ಗಳಿಂದ ನಿನ್ನ ಪಾದಕಮಲವನ್ನು ಪೂಜಿಸುತ್ತಿದೆ ಎಂದರ ನಿನ್ನ ಆ ಪಾದಕಮಲ ಎಷ್ಟು 'ಚಾರು' ಸುಂದರವಿದ್ದೀತು! ಅದನ್ನು ನೆನೆದು ನಾನು ರಚಿಸುವ ಈ ಗ್ರಂಥವೂ ಕಮಲದಂತ 'ಚಾರು' ಸುಂದರವಾಗಿ ಮೂಡಿ ಬರಲಿ ಅಲಂಕಾರ-ಧ್ವನ್ಯಾದಿಗಳಿಂದ ಅರ್ಥಗಾಂಭೀ-ರ್ಯದಿಂದ ಅರಳಿ ಶೋಭಿಸುತ್ತ ಭಗವದ್ಭಕ್ತರಿಗೆ ನಿನ್ನ ಮಂಗಳಕರ ಗುಣಸೌರಭವನ್ನು ಪಸರಿಸಲಿ

ಬ್ರಹ್ಮ, ಸಮೀರ, ವಾಣಿ ಮುಂತಾದ ದೇವತೆಗಳಿಂದ ವಿನುತನಾದ ನಿನ್ನನ್ನು ನಾನೂ ನುತಿಸುತ್ತೇನೆ, ಪ್ರಶಂಸೆ ಮಾಡುತ್ತೇನೆ ಅವರಿಗೊಲಿದಂತೆ ನನಗೂ ಒಲಿದು ಮಂಗಳಕರ-ವಾದ ಈ ಗ್ರಂಥವನ್ನು ಎಲ್ಲರ ಪ್ರಶಂಸೆಗೆ ಪಾತ್ರವನ್ನಾಗಿಸು

ನೀನು ಬ್ರಹ್ಮಾಂಡವನ್ನೇ ಸೃಷ್ಟಿ ಮಾಡಿ ಅದನ್ನು ಕಾಪಾಡುವವ ನನ್ನ ಒಂದು ಸಣ್ಣ ಗ್ರಂಥವನ್ನು ಬೆಳಕಿಗೆ ತಂದು ಕಾಪಾಡಲಾರೆಯ? ಶಿಷ್ಯಪ್ರಶಿಷ್ಯಪರಂಪರೆಯಲ್ಲಿ ನಿರಂತರ ಜೀವಂತವಾಗಿ ಇರುವಂತೆ ಮಾಡಲಾರೆಯ?

ನೀನು ಕೈವಲ್ಯದಾಯಕ ನನ್ನ ಈ ಗ್ರಂಥವನ್ನು ಮೋಕ್ಷಶಾಸ್ತ್ರವನ್ನಾಗಿ ಮಾಡು

ನೀನು ನಾರಸಿಂಹ ನರನಂತೆಯೂ ಸಿಂಹದಂತೆಯೂ ಕಂಡರೂ, ವಸ್ತುತಃ ನರನೂ ಅಲ್ಲ ಸಿಂಹವೂ ಅಲ್ಲ ಲೋಕವಿಲಕ್ಷಣ, ಅದ್ಭುತ ನನ್ನ ಗ್ರಂಥವೂ ಹಾಗೇ ಪ್ರಾಕೃತ ಭಾಷೆಯಲ್ಲಿ ರಚಿತವಾದರೂ ಅಪ್ರಾಕೃತನಾದ ನಿನ್ನ ಗುಣಗಾನರೂಪವಾಗಿರುವುದರಿಂದ ಎಲ್ಲ ಪ್ರಾಕೃತ ಕಾವ್ಯಗಳಿಗಿಂತ ವಿಲಕ್ಷಣವೆನಿಸಲಿ

ಮಂಗಳದಾಯಕನಾದ ನಿನ್ನ ಒಲವಿನಿಂದ ನನ್ನ ಈ ಕಾವ್ಯವೂ ಮಂಗಳದಾಯಕವೆನಿಸಲಿ

ಬ್ರಹ್ಮಸೂತ್ರಾಮೃತಸಾರ ಹರಿಕದಾಮೃತಸಾರ

ದಾಸರು ಈ ಮಂಗಳ ಪದ್ಯದಲ್ಲಿಯೆ ಬ್ರಹ್ಮಸೂತ್ರಸಾರವನ್ನೂ ಹುದುಗಿಸಿ ಇಟ್ಟಂತಿದೆ ಶ್ರೀರಮಣಿ ವೇದಾಭಿಮಾನಿನಿ ಅವಳಿಂದ ಪೂಜಿತನಾದ ಹರಿಯನ್ನು ನಮಿಸಬೇಕೆಂದರ ಬ್ರಹ್ಮಜಿಜ್ಞಾಸೆ ಮಾಡಬೇಕು ಎಂದಂತಾಗುವುದು ಏಕೆಂದರೆ 'ಬ್ರಹ್ಮ' ಎಂದರೂ ವೇದ, ವೇದಾಭಿಮಾನಿನಿ ರಮೆ ಅವಳು ವರ್ಣಿಸುವ ಪರಬ್ರಹ್ಮನ ಮಹಿಮೆಯನ್ನು ಜಿಜ್ಞಾಸೆ ಮಾಡಬೇಕು, ಉಪಾಸನೆ ಮಾಡಬೇಕೆನ್ನುವುದೆ ಜಿಜ್ಞಾಸಾಧಿಕರಣದ ಸಾರ

ವೇದಾಭಿಮಾನಿನಿ ರಮೆಯೂ ಹರಿಯ 'ಚರಣಸರೋಜ'ವನ್ನೇ ಪೂಜಿಸುತ್ತಿದ್ದಾಳೆ ಪಾದದ ಕಿರುಬೆರಳಿನ ಉಗುರಿನ ಗುಣಗಳನ್ನೂ ಪೂರ್ತಿಯಾಗಿ ಎಣಿಸಿ ನೋಡುವುದು ಅವಳಿಗೆ ಇನ್ನೂ ಸಾಧ್ಯವಾಗಿಲ್ಲ ಎಂದರೆ ವೇದಗಳಿಗೂ ವರ್ಣನೆಗೆ ನಿಲುಕದ ಅನಂತಗುಣ ಉಳ್ಳವ ಶ್ರೀಹರಿ ಎಂದಂತಾಗುವುದು ಇದು ಸಮನ್ವಯಾಧ್ಯಾಯದ ಸಾರ

'ನೀರಜಭವಾಂಡೋದಯಸ್ಥಿತಿಕಾರಣ, ಕೈವಲ್ಯದಾಯಕ' ಎನ್ನುವುದು ಜನ್ಮಾದ್ಯಷ್ಟ-ಕರ್ತೃತ್ವವನ್ನೂ ಸೂಚಿಸುವುದರಿಂದ ಇದು ಸ್ಪಷ್ಟವಾಗಿ ಜನ್ಮಾಧಿಕರಣಸಾರ

ಬ್ರಹ್ಮಾದಿ'ವಿನುತ' ಅಂದರೆ ವಿಶೇಷವಾಗಿ ಉಪಕ್ರಮಾದಿ ಲಿಂಗಗಳಿಂದ ಸಮನ್ವಯ ಮಾಡಿ ಸ್ತುತಿಸುವುದು ಸಮನ್ವಯಾಧಿಕರಣದ ಸಾರ

'ನಾರಸಿಂಹ'—ನ ಅರ, ನಾರ, ದೋಷರಹಿತ ದೋಷರಹಿತರೆಂದು ಪ್ರಸಿದ್ಧ-ರಾದವರು ಲಕ್ಷ್ಮೀಬ್ರಹ್ಮಾದಿಗಳು ಅನೇಕರು ಆದರೂ ಅವರಲ್ಲಿಯೂ ಪಾರತಂತ್ರ್ಯಾದಿ ದೋಷಗಳಿವೆ ಸ್ವತಂತ್ರನಾದ ಹರಿಯೆ 'ನಾರ' ರಲ್ಲೆಲ್ಲ 'ಸಿಂಹ' ಅಂದರೆ ಶ್ರೇಷ್ಠ ಆದರಿಂದ ನಿರ್ದೋಷತ್ವವನ್ನು ಹೇಳುವ ಅವಿರೋಧಾಧ್ಯಾಯದ ಸಾರ ಉಕ್ತವಾದಂತಾಗಿದೆ

'ನಮಿಪೆ'—ಮನೋವಾಕ್ಕಾಯರೂಪ ತ್ರಿಕರಣಪೂರ್ವಕ ನಮಸ್ಕಾರವೆಂದರೆ ಅದೇ ಮೋಕ್ಷಸಾಧನೆ, ಸಾದನಾಧ್ಯಾಯದ ಸಾರ

'ಕರುಣಿಪುದೆಮಗೆ ಮಂಗಳವ' ಎಂಬ ಪ್ರಾರ್ಥನೆಯಲ್ಲಿ ಸಜ್ಜನರೆಲ್ಲರಿಗೂ ಪರಮ-ಮಂಗಳಸ್ವರೂಪವಾದ ಮೋಕ್ಷನೀಡುವವ ಹರಿ ಎಂಬ ಅಭಿಪ್ರಾಯವಿದೆ ಇದು ಫಲಾ-ಧ್ಯಾಯದ ಸಾರ

**ನಾರಸಿಂಹನ ಪ್ರತೀಕ ಹರಿಕಥಾಮೃತಸಾರ**

'ನಾರಸಿಂಹ' ಎಂಬ ಶಬ್ದದಲ್ಲಿ ಸಂಕ್ಷೇಪವಾಗಿ ಈ ಇಡೀ ಪದ್ಯದ ಸಾರವನ್ನು ಕಾಣ-ಬಹುದು 'ನಾರ' ಎಂದರೆ ನಿರ್ದುಷ್ಟವಾದ ವೇದ ಅಂದರೆ ವೇದಾಭಿಮಾನಿನಿ ರಮೆ ಅವಳಿಗೆ ಸಿಂಹ, ಅಂದರೆ ಪತಿ 'ಸಿಂಹೋಽಧೀಶಃ ಪತಿಃ ಪ್ರಭುಃ' ಎಂದು ಕೋಶ ಇದ-ರಿಂದ 'ಶ್ರೀರಮಣಿಕರಕಮಲಪೂಜಿತ' ಎಂದು ಹೇಳಿದಂತಾಯಿತು

'ನಾರ' ಎಂದು ಬ್ರಹ್ಮರುದ್ರಇಂದ್ರರಿಗೆ ಹೆಸರಿದೆ 'ನಾರೋ ಬ್ರಹ್ಮೇಂದ್ರರುದ್ರೇಷು ನಿರ್ದೋಷೇ ಜಲಧೌ ಜಲೇ' ಎಂದು ಕೋಶ ಅವರಿಗೆ ಪತಿ ಎಂದು 'ಬ್ರಹ್ಮಾದಿದಿವಿಜನುತತತ್ವ'-ವೆಂಬ ವಿಶೇಷಣ ಉಕ್ತಪ್ರಾಯ

'ನಾರ' ಎಂದರೆ ಸಕಲ ಜಗತ್ತು, ಅಂದರೆ ಬ್ರಹ್ಮಾಂಡ 'ಚರಾಚರಜಗತ್ ಕೃತ್ಸ್ನಂ ನಾರಮಿತ್ಯಭಿಧೀಯತೇ' ಎಂದು ಪಾದ್ಮವಚನ ಅದರಿಂದ ಬ್ರಹ್ಮಾಂಡಕ್ಕೆ ಪತಿ ಎಂದು 'ನೀರಜಭವಾಂಡೋದಯಸ್ಥಿತಿಕಾರಣ' ಎಂಬುದನ್ನು ಹೇಳಿದಂತಾಗಿದೆ

ನಾರರೆಂದರೆ ಲಿಂಗಭಂಗದಿಂದ ನಿರ್ದುಷ್ಟರಾದ ಮುಕ್ತರು ಅವರಿಗೆ ಸಿಂಹ—ಪತಿ ಅಥವಾ ನರರೆಂದರೆ ಜ್ಞಾನಶೂನ್ಯರಾದ ಸಂಸಾರಿಗಳು ಅವರ ಸಮೂಹ ನಾರ ಅವರಿಗೆ 'ಸಿಂಹ' 'ಸಿಂ' ಎಂದರೆ ಸಮುದ್ರ, ಸಂಸಾರ ಸಮುದ್ರ ಅದನ್ನು 'ಹ' ನಾಶ ಮಾಡುವವ ಅಂದರೆ ಮೋಕ್ಷ ಕೊಡುವವ ಹೀಗೆ 'ಕೈವಲ್ಯದಾಯಕ'ನೆನಿಸುತ್ತಾನೆ

ನಾರಸಿಂಹಶಬ್ದದಿಂದಲೇ ನೀರಜಭವಾಂಡೋದಯಸ್ಥಿತಿಕಾರಣನಾದ 'ಜಗನ್ನಾಥ'-ನನ್ನೂ ಕೈವಲ್ಯದಾಯಕನಾದ 'ವಿಟ್ಠಲ'ನನ್ನೂ ಸ್ಮರಿಸಿದಂತಾಗಿದೆ ಏಕೆಂದರೆ ವಿಟ್ಠಲ ಎಂದರೆ, 'ವಿದಾ ಜ್ಞಾನೇನ ಠಾನ್ ಶೂನ್ಯಾನ್ ಲಾತಿ ಗೃಹ್ಣಾತಿ ವಿಟ್ಠಲಃ'—ಜ್ಞಾನಶೂನ್ಯರಾದ ನರರನ್ನು ಸ್ವೀಕರಿಸುವವ, ಅಂದರೆ ಅವರಿಗೆ ಜ್ಞಾನವನ್ನು, ಮುಕ್ತಿಯನ್ನು ಕೊಡುವವ

ವಿರಜಾನದೀಸ್ನಾನದಿಂದ ತೋಯ್ದುದುಪ್ಪಟ್ಟು ಉಬ್ಬಿ ಮಿದುವಾಗುವ ಲಿಂಗಶರೀರ-ವನ್ನು ಖಡ್ಗದಿಂದ ಸೀಳಿ ತೆಗೆಯುವವ ನರಸಿಂಹಮೂರ್ತಿ ಅದರಿಂದಲೂ 'ಕೈವಲ್ಯ-ದಾಯಕ' ಎಂಬ ವಿಶೇಷಣ ಉಕ್ತಪ್ರಾಯವಾಗಿದೆ

'ನಾರಸಿಂಹ'ಶಬ್ದದಿಂದ ನರರಿಗೆಲ್ಲ ಸಿಂಹ ಅಂದರೆ ಪುರುಷೋತ್ತಮನಾದ ನಾರಾ-ಯಣ ಜೀವೋತ್ತಮನಾದ ವಾಯು ಇಬ್ಬರೂ ಉಕ್ತರಾಗುವುದರಿಂದ ಒಂದೇ ಶಬ್ದದಿಂದ

ಇಬ್ಬರನ್ನೂ ಹೇಳಿ ದಾಸರು ವಾಯ್ವಂತರ್ಗತ ನಾರಾಯಣನನ್ನೇ ಇಲ್ಲಿ ಬೇಡಿದ್ದಾರೆ ಎಂದು ಕಾಣುತ್ತದೆ

**ಜಗದುದರನತಿವಿಮಲ ಗುಣರೂ-**
**ಪಗಳನಾಲೋಚನದಿ ಭಾರತ**
**ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ ।**
**ಬಗೆಬಗೆಯ ನೂತನವ ಕಾಣುತ**
**ಮಿಗೆ ಹರುಷದಿಂ ಪೊಗಳಿ ಹಿಗ್ಗುವ**
**ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥ ೨ ॥**

ಜಗತ್ತನ್ನು ಉದರದಲ್ಲಿಟ್ಟುಕೊಳ್ಳುವ ಹರಿಯ ಅತಿನಿರ್ಮಲ ಗುಣರೂಪಗಳನ್ನೂ ಕ್ರಿಯಾವಿಶೇಷಗಳನ್ನೂ, ಭಾರತ, ಶ್ರುತಿಸಮೂಹಗಳಾಚೆಗೂ ಆಲೋಚನದಿಂದ ಬಗೆ-ಬಗೆಯ ನೂತನ ಗುಣಗಳನ್ನೆ ಪ್ರತ್ಯಕ್ಷ ಕಾಣುತ ಮಹಾಸಂತೋಷದಿಂದ ಹೊಗಳಿ ಹಿಗ್ಗುವ ತ್ರಿಗುಣಾಭಿಮಾನಿನಿ ಮಹಾಲಕ್ಷ್ಮಿ ನಮ್ಮನ್ನು ಸದಾ ಸಂತೈಸಲಿ

ಮೊದಲನೆ ಪದ್ಯದಲ್ಲಿ ಸರ್ವೇಶ್ವರನಾದ ಹರಿಗೆ ವಂದಿಸಿ ಈ ಪದ್ಯದಲ್ಲಿ ಸರ್ವವಿದ್ಯಾ-ಭಿಮಾನಿನಿಯಾದ ರಮಾದೇವಿಗೆ ವಂದನೆ ಸಲ್ಲಿಸುತ್ತಿದ್ದಾರೆ, ದಾಸರು

*ತ್ರಿಗುಣಮಾನಿನಿ ಮಹಾಲಕ್ಷ್ಮಿ*

ಸತ್ವ, ರಜಸ್, ತಮಸ್ ಎಂಬ ಮೂರು ಗುಣಗಳಿಗೆ ನಿಯಾಮಕಳು ಒಲಿದರೆ ಸ್ಥೂಲಸತ್ವರಜಸ್ತಮಸ್ಸುಗಳನ್ನು ಹತ್ತಿಕ್ಕಿ ಸೂಕ್ಷ್ಮ ಸತ್ವಪರಿಣಾಮ ಜ್ಞಾನಾನಂದಾದಿಗಳನ್ನು ಜೀವರ ಅಂತಃಕರಣದಲ್ಲಿ ಮೂಡಿಸುವವಳು ಅವಳೆ ಸೂಕ್ಷ್ಮರಜಸ್ತಮೋಗುಣಗಳಿಂದ ಮೋಕ್ಷಸಾಧನೆ ಮಾಡಿಸುವವಳೂ ಅವಳೆ ಮುನಿದರೆ ಸ್ಥೂಲಸತ್ವರಜಸ್ತಮೋಗುಣಪರಿ-ಣಾಮವಾದ ವಿಷಯಾಭಿಮಾನ, ಕಾಮ, ಕ್ರೋಧ, ಅಜ್ಞಾನ, ದುಃಖಾದಿಗಳನ್ನು ಹುಟ್ಟಿಸು-ವವಳೂ ಅವಳೆ

ದುರ್ಗೇ ಸ್ಮೃತಾ ಹರಸಿ ಭೀತಿಮಶೇಷಜಂತೋಃ
ಸ್ವಸ್ಥೈಃ ಸ್ಮೃತಾ ಮತಿಮತೀವ ಶುಭಾಂ ದದಾಸಿ ॥

'ದೇವಿ ದುರ್ಗೆ, ಭಯಪೀಡಿತರಾದವರು ನಿನ್ನನ್ನು ಸ್ಮರಿಸಿದರೆ ಅವರ ಭಯ ಪರಿಹರಿಸುವಿ ಸ್ವಸ್ಥರು ನಿನ್ನನ್ನು ಸ್ಮರಿಸಿದರೆ ಸನ್ಮತಿ ನೀಡುವಿ' ಎಂದು ಮಾರ್ಕಂಡೇಯ ಪುರಾಣ ಹೇಳುತ್ತದೆ ಅದರಿಂದ ಗ್ರಂಥಕರ್ತೃಗಳಾದ ತಮಗೂ, ಶ್ರೋತೃಗಳಾದ ಪರಮ ಭಗವದ್ಭಕ್ತರಿಗೂ ದೇವಿ ಅನುದಿನವೂ ಅಜ್ಞಾನಾಲಸ್ಯಾದಿಗಳನ್ನು ಪರಿಹರಿಸಿ ಜ್ಞಾನಾನಂದಾದಿಗಳನ್ನು ನೀಡಿ ಸಂತೈ-ಸಲಿ' ನನಗೆ ಗ್ರಂದರಚನಕಾಲದಲ್ಲಿ ರಜಸ್ತಮಪರಿಣಾಮವಾದ ಅಜ್ಞಾನ, ಮಿಥ್ಯಾಜ್ಞಾನ, ಪ್ರಮಾದ, ಆಲಸ್ಯ, ಶ್ರಮಾದಿಗಳನ್ನು ಕಳೆಯಲಿ ಸತ್ವಪರಿಣಾಮವಾದ ಜ್ಞಾನಸ್ಫೂರ್ತಿಗಳನ್ನು

ನೀಡಲಿ ಆ ಮೂಲಕ ಗ್ರಂಥ ನಿರ್ವಿಘ್ನವಾಗಿ ಸಮಾಪ್ತಿ ಹೊಂದಲಿ ಭಗವದ್ಭಕ್ತರೂ ನಿತ್ಯ ಅದನ್ನು ಪಠಿಸುತ್ತಿರಲಿ ಎಂದು ಬೇಡುತ್ತಿದ್ದಾರೆ ದಾಸರು ಏಕೆಂದರೆ ಮಂಗಳಾಚರಣೆಯ ಫಲ ನಿರ್ವಿಘ್ನಪರಿಸಮಾಪ್ತಿ, ಪ್ರಚಯಾದಿಗಳು ಎನ್ನುವುದು ಪ್ರಸಿದ್ಧ

ಇಡೀ ಪ್ರಪಂಚವನ್ನು ಸ್ವತಂತ್ರ ಅಸ್ವತಂತ್ರ ಎಂದು ಎರಡು ವಿಭಾಗ ಮಾಡಿದರೆ ಸ್ವತಂ-ತ್ರನಾದ ಹರಿಯಲ್ಲಿ ದೇವಿಗೆ ಪ್ರೀತಿ ಭಕ್ತಿ ಗೌರವಗಳು ಅಸ್ವತಂತ್ರರಾದ ತ್ರಿಗುಣಬದ್ಧರಾದ ಬ್ರಹ್ಮಾದಿ ಸಕಲ ಸಾತ್ವಿಕ ಚೇತನರಲ್ಲಿ ತ್ರಿಗುಣಮಾನಿನಿಯಾದ ದೇವಿಗೆ ಪುತ್ರವಾತ್ಸಲ್ಯ ದಯೆ ಅನುಕಂಪೆಗಳು ಹೀಗೆ ವಾತ್ಸಲ್ಯಪೂರ್ಣವಾದ ದೃಷ್ಟಿಯಿಂದ ಜಗತ್ತನ್ನು ಲಕ್ಷಿಸುವುದರಿಂದ ಲಕ್ಷ್ಮಿ ಎನಿಸುತ್ತಾಳೆ ಬ್ರಹ್ಮಾದಿಗಳೆಲ್ಲರಿಗಿಂತ ಹೆಚ್ಚಿನ ಮಹತ್ತ್ವ ಉಳ್ಳವಳಾದ್ದರಿಂದ ಮಹಾ-ಲಕ್ಷ್ಮಿ ಎನಿಸುತ್ತಾಳೆ

> ಲಕ್ಷ್ಯತೇ ದೃಶ್ಯತೇ ವಿಶ್ವಂ ಸ್ನಿಗ್ಧದೃಷ್ಟ್ಯಾ ಯಯಾಽನಿಶಮ್ ।
> ದೇವೇಷು ಯಾ ಚ ಮಹತೀ ಮಹಾಲಕ್ಷ್ಮೀಶ್ಚ ಸಾ ಸ್ಮೃತಾ ॥

ಎಂದು ಬ್ರಹ್ಮವೈವರ್ತಪುರಾಣ ಹೇಳುತ್ತದೆ ಅದರಿಂದ 'ತ್ರಿಗುಣಮಾನಿ ಮಹಾಲಕ್ಷ್ಮಿ' ಎಂದಿದ್ದಾರೆ ದಾಸರು

ವಿಶ್ವವನ್ನೇ ವಾತ್ಸಲ್ಯದಿಂದ ಕಾಣುವ ದೇವಿ ತನ್ನನ್ನೂ ತನ್ನ ಗ್ರಂಥವನ್ನೂ, ಅಧ್ಯಯನ ಮಾಡುವ ಶ್ರೋತೃಗಳನ್ನೂ ವಾತ್ಸಲ್ಯದಿಂದ ಕಂಡು ಸಂತೈಸಲಿ 'ಸಂತೈಸಲಿ' ಎಂಬ ಶಬ್ದದಲ್ಲಿ ಅಳುವ ಮಕ್ಕಳ ಕಣ್ಣೊರಸಿ ಸಂತೈಸುವ, ರಮಿಸುವ ಮಾತೃಹೃದಯ ತುಂಬಿದೆ

***ಮಿಗೆ ಹರುಷದಿಂ ಪೊಗಳಿ ಹಿಗ್ಗುವ***

ತ್ರಿಗುಣಮಾನಿನಿ ತ್ರಿಗುಣಬದ್ಧರನ್ನು ವಾತ್ಸಲ್ಯದಿಂದ ನೋಡುತ್ತಿದ್ದರೆ ತ್ರಿಗುಣಾತೀತ-ನಾದ ಹರಿಯನ್ನು ಯಾವ ದೃಷ್ಟಿಯಿಂದ ನೋಡುತ್ತಾಳೆ? 'ಮಿಗೆ ಹರುಷದಿಂ ಪೊಗಳಿ' ಹಿಗ್ಗುತ್ತ ಅಚ್ಚರಿಯಿಂದಲೆ ನೋಡುತ್ತಾಳೆ ಏಕೆ ಹಿಗ್ಗುತ್ತಾಳೆ? ತನ್ನ ಪತಿಯ ಗುಣಗಳು ಬ್ರಹ್ಮಾದಿಗಳ ಗುಣಗಳಂತಲ್ಲ 'ಅತಿವಿಮಲ' ಬ್ರಹ್ಮಾದಿಗಳಲ್ಲಿ ಬಹಳ ಗುಣಗಳಿದ್ದರೂ ಅಷ್ಟೇ ದೋಷಗಳೂ ಇವೆ ಹರಿಯಲ್ಲಿ ಗುಣಗಳು ಬೆಟ್ಟದಷ್ಟು ಇವೆ, ದೋಷ ಎಳ್ಳಷ್ಟೂ ಇಲ್ಲ! ಅಚ್ಚರಿ ಏಕೆ? ಪ್ರತಿಯೊಂದು ಗುಣವೂ ಅಪರಿಮಿತ ಅಂಥ ಗುಣಗಳೂ ಅಪರಿಮಿತ! ಅನಾದಿಕಾಲದಿಂದ ಅರೆಕ್ಷಣವೂ ಬಿಡದೆ ಹರಿಯ ಗುಣಗಳನ್ನು ಕಂಡು ಸವಿಯುವ ಜಗ-ನ್ಮಾತೆಗೆ ಇಂದಿಗೂ ಕೂಡ ಅವನ ಕಾಲ ಕಿರುಬೆರಳ ಉಗುರಿನ ಕೊನೆಯಲ್ಲಿಯೂ ಪ್ರತಿಕ್ಷಣ ಹೊಸ ಹೊಸ ಗುಣಗಳೆ ಕಂಡುಬರುತ್ತಿವೆ!

> ಯತ್ಪಾದಸ್ಯ ನಖಾಗ್ರೇಣ ಜಗತ್ಸೃಷ್ಟ್ಯಾದಿಕಾನ್ಯಪಿ ।
> ನೂತನಾನ್ಯೇವ ಸಾ ದೃಷ್ಟ್ವಾ ಗುಣಕಾರ್ಯಾಣಿ ಸರ್ವಶಃ ॥
> ತದಾನಂದಾಂಬುಧೌ ಮಗ್ನಾ ರಮಾ ಹರ್ಷಾಶ್ರುಲೋಚನಾ ॥

'ಹರಿಯ ಪಾದದ ಉಗುರಿನ ತುದಿಯೆ ಜಗತ್ತಿನ ಸೃಷ್ಟ್ಯಾದಿ ಕಾರ್ಯ ನಡಸುತ್ತದ ಇಂಥ ಗುಣ ಮತ್ತು ಕ್ರಿಯೆಗಳನ್ನು ಹೊಸಹೊಸದಾಗಿಯೆ ಕಾಣುತ್ತ ರಮೆ ಆನಂದಸಾಗರದಲ್ಲಿ ಮುಳುಗಿ ಆನಂದಬಾಷ್ಪ ಹರಿಸುತ್ತಾಳೆ' ಎಂದು ತತ್ತ್ವನಿರ್ಣಯ ಹೇಳುತ್ತಿದೆ

ಲಕ್ಷ್ಮೀರಕ್ಷೀಣದೀಕ್ಷಾ ಗಣಯಿತುಮನುವಕ್ರಾಂತಸಂವಿದ್ಗುಣಾನಾಂ
ಆನಂತ್ಯಾನಿ ಸ್ವಭರ್ತುಃ ಪದಕಮಲಕನಿಷ್ಠಾಂಗುಲೀಸನ್ನಖಸ್ಯ ।
ಪಶ್ಯಂತೀ ಸಂತತಂ ಸಾ ನವ ನವ ಸುವಿಶೇಷೋಪಲಂಭೇನ ತತ್ತತ್
ಕಾಲೇ ಕೌತೂಹಲಾಬ್ಧೌ ಸುಮಹತಿ ಗಹನೇ ಗಾಹಮಾನಾऽವತಾನ್ನಃ ॥

ಎನ್ನುತ್ತಾ ತ್ರಿವಿಕ್ರಮಪಂಡಿತಾಚಾರ್ಯರೂ ಹೀಗೇ ಹೇಳುತ್ತಿದ್ದಾರೆ

ದೇವತೆಗಳನ್ನು ಪ್ರಸನ್ನತೆಯಿಂದ ನಸುನಗುವ ರೂಪದಲ್ಲಿ ಉಪಾಸನೆ ಮಾಡಬೇಕು ಇಲ್ಲಿ ದಾಸರು ದೇವಿಯನ್ನು ಹರಿಯ ಅನಂತ ಗುಣರಾಶಿಯ ದರ್ಶನದಿಂದ ಆನಂದಾ-ಶ್ಚರ್ಯಸಮುದ್ರದಲ್ಲಿ ಮುಳುಗಿ ಆನಂದಾಶ್ರು ಸುರಿಸುವ ಅತಿಪ್ರಸನ್ನ ರೂಪದಲ್ಲಿಯೆ ವಂದಿಸುತ್ತಾರೆ ಇಂಥ ಉದಾತ್ತವಾದ ಲಕ್ಷ್ಮೀಸ್ತೋತ್ರ ದಾಸಸಾಹಿತ್ಯದಲ್ಲಿಯೆ ಅತಿ ವಿರಳ ಹರಿಗೆ ಲಕ್ಷ್ಮೀ ಎಷ್ಟು ಪ್ರಿಯಳೆನ್ನುವ ವರ್ಣನೆ ಎಲ್ಲೆಡೆ ಸಿಕ್ಕೀತು ಹರಿಯ ಉಪಾಸನೆಯಲ್ಲಿ ಎಷ್ಟು ಸುಖ ಕಾಣುತ್ತಾಳೆ ದೇವಿ ಎನ್ನುವ ವರ್ಣನೆ ದುರ್ಲಭ ಅದಕ್ಕಿಂತ ಇದು ದೇವಿಗೆ ಹೆಚ್ಚು ಮೆಚ್ಚು

ಹರಿಯಲ್ಲಿ ಪ್ರತಿಕ್ಷಣ ಹೊಸ ಹೊಸ ಸದ್ಗುಣಸೌಂದರ್ಯ ಕಂಡು ಹಿಗ್ಗುವ ರಮೆಯನ್ನು ಧ್ಯಾನಿಸುತ್ತ ದಾಸರು ತಮ್ಮ ಕೃತಿಯಲ್ಲಿಯೂ ಭಗವದ್ಭಕ್ತರು ಹೊಸ ಹೊಸ ಗುಣಸೌಂ-ದರ್ಯ ಕಾಣುತ್ತ ಹಿಗ್ಗಲಿ ದೇವಿ ಅವರ ಬಾಳ ಕಹಿಯನ್ನು ಕಳೆದು ಸಂತೈಸಲಿ ಎಂದು ಹಾರೈಸುತ್ತಾರೆ

*ಆಲೋಚನದಿ ಕಾಣುತ*

ದೇವಿ ಹರಿಯ ಗುಣರೂಪಗಳನ್ನು 'ಆಲೋಚನದಿ' ಕಾಣುತ್ತಾಳೆ ಎಂದರೆ ಎಲ್ಲರಂತೆ ಊಹೆಯಿಂದ ತಿಳಿಯುತ್ತಾಳೆ ಎಂದಲ್ಲ ಸಕಲ ವೇದಶಾಸ್ತ್ರಗಳ ಅಭಿಮಾನಿನಿಯಾದ ಅವಳಿಗ ವೇದಶಾಸ್ತ್ರೋಕ್ತ ಸಕಲ ಗುಣಗಳೂ ಸ್ಪಷ್ಟ ತಿಳಿದಿವೆ ನಿಗಮತತಿಗಳನ್ನು 'ಅತಿಕ್ರಮಿಸಿ' ಅದರಾಚೆ ತನ್ನ ಬುದ್ಧಿಯಿಂದ ಕಾಣುವ ಗುಣಗಳ ಬಗ್ಗೆಯೂ ಆಲೋಚನೆ, ಊಹೆ ಇಲ್ಲ ಸಾಕ್ಷಾತ್ಕಾರದ ಇದೆ ಅದರಿಂದ ಆಲೋಚನದಿ ಕಾಣುವದೆಂದರೆ ಏಕಾಗ್ರಮನಸ್ಸಿನಿಂದ ಪ್ರತ್ಯಕ್ಷ ಕಾಣುವುದು ಪ್ರಪಂಚದ ಬಗ್ಗ ಏಕಾಗ್ರ ಮನಸ್ಸೇ ಬೇಡ ಹರಿಯ ಗುಣಗಳನ್ನು ಮಾತ್ರ ಏಕಾಗ್ರ ಮನಸ್ಸಿನಿಂದಲೂ ಸಮಗ್ರವಾಗಿ ಕಾಣಲಾರಳು

*ಭಾರತನಿಗಮತತಿಗಳತಿಕ್ರಮಿಸಿ*

ಭಾರತನಿಗಮತತಿಗಳೊಳಗ ಉಕ್ತವಾದ ಹರಿಯ ಗುಣರೂಪಕ್ರಿಯೆಗಳನ್ನು ಬ್ರಹ್ಮ-ವಾಯುಗಳು ಪೂರ್ತಿ ಉಪಾಸನ ಮಾಡುತ್ತಾರೆ ಸರಸ್ವತಿಭಾರತಿಯರು ಕ್ರಿಯೆಗಳಲ್ಲಿ ಸ್ವಲ್ಪ

ಸಂಕೋಚ ಮಾಡುತ್ತಾರೆ ರುದ್ರದೇವರು ರೂಪಕ್ರಿಯೆಗಳೆರಡರಲ್ಲಿಯೂ ಸಂಕೋಚ ಮಾಡುತ್ತಾರೆ ಮಹಾಲಕ್ಷ್ಮಿ ಹಾಗಲ್ಲ ವೇದೋಕ್ತ ಗುಣರೂಪಕ್ರಿಯೆಗಳಲ್ಲಿ ಒಂದಿಷ್ಟೂ ಸಂಕೋಚ ಮಾಡದೆ ಅನುಕ್ತವಾದ ಹೊಸ ಹೊಸ ಗುಣಗಳನ್ನೂ ತಿಳಿದು ಉಪಾಸನೆ ಮಾಡುತ್ತಾಳೆ ಅದರಿಂದ ಅವಳು ಬ್ರಹ್ಮಾದಿಗಳಿಗಿಂತ ಕೋಟಿ ಪಾಲು ಮಿಗಿಲೆನ್ನುವ ತಾರತಮ್ಯ ಇಲ್ಲಿ ಸ್ಪಷ್ಟವಾಗಿದೆ ಇದು ಮೋಕ್ಷಸಾಧನ

*ಅತಿವಿಮಲಗುಣರೂಪಗಳ ಕ್ರಿಯಾವಿಶೇಷಗಳ*

ಹರಿಯ ಪ್ರತಿಯೊಂದು ಗುಣವೂ ಅಪಾರ, ಸುಂದರ, ನಿರ್ಮಲ, ಉದಾಹರಣೆಗೆ ಲಯಕರ್ತೃತ್ವ ಒಂದು ಬ್ರಹ್ಮಕಲ್ಪಕಾಲ ಎಲ್ಲ ಚೇತನರಿಗೆ ಜನನಮರಣಗಳ ಚಕ್ರದಲ್ಲಿಸುತ್ತಿ ಸುತ್ತಿ ಉಂಟಾದ ಬಳಲಿಕೆಯ ಪರಿಹಾರಕ್ಕಾಗಿ ಜಗದುದರನಾದ ಹರಿ ಎಲ್ಲರನ್ನೂ ತನ್ನ ಉದರದಲ್ಲಿಟ್ಟುಕೊಂಡು ಒಂದು ಬ್ರಹ್ಮಕಲ್ಪದಷ್ಟು ದೀರ್ಘದ ಪ್ರಳಯಕಾಲವಿಡೀ ನಿದ್ದೆ ಬರಿಸುತ್ತಾನೆ ವಾದಿರಾಜರು ಹೇಳುವಂತೆ ಹೊಟ್ಟೆಎಂಬ ಹೊನ್ನತೊಟ್ಟಿಲೊಳಗಿಟ್ಟುಎಟ್ಟಲ ಜೀವರ ನಿದ್ರೆಗೊಳಿಸುತ್ತಾನೆ ಅದರಿಂದ ಹರಿಯ ಮಾತೃವಾತ್ಸಲ್ಯಗುಣದ ಇನ್ನೊಂದು ಮುಖ ಆತನು ಮಾಡುವ ಪ್ರಪಂಚಲಯ

*ಜಗದುದರನ*

'ಜಗದುದರ' ಎಂಬ ಶಬ್ದದಿಂದಲೆ ಹರಿಯ ಈ ವಾತ್ಸಲ್ಯಗುಣವನ್ನು ಸೂಚಿಸಿದ್ದಾರೆ

ಆವೃತಾಸೋಽವತಾಸೋ ನ ಕರ್ತೃಭಿಃ
ತನೂಷು ತೇ ಕ್ರತವ ಇಂದ್ರಭೂರಯಃ ।

'ಧನಿಕರು ಬಂಗಾರವನ್ನು ನೆಲದಲ್ಲಿ ಹೂತಿಟ್ಟು ಕಾಪಾಡುವಂತೆ, ಹರಿ, ನೀನೂ ಅದಕ್ಕಿಂತ ಹೆಚ್ಚಾಗಿ, ಹೊಟ್ಟೆಯೊಳಗೇ ಜೀವರನ್ನು ಹುದುಗಿಸಿಟ್ಟುಕೊಂಡು ಕಾಪಾಡುವಿ' ಎಂದು ಋಗ್ವೇದದಲ್ಲಿ ಉಕ್ತವಾಗಿದೆ

ಆವೃತಾಃ ಸರ್ವಜೀವಾ ಹಿ ಯದ್ವೈವ ಕನಕಾವಟಾಃ ।
ಆಚ್ಛಾದ್ಯಂತೇ ವಿತ್ತವದ್ಭಿಃ ತಾಭ್ಯಾಮೇವಂ ಚ ಚೇತನಾಃ ॥

'ಸರ್ವಜೀವರನ್ನು ಹರಿವಾಯುಗಳು ತಮ್ಮ ಉದರದೊಳಗಿಟ್ಟು ಕಾಪಾಡುತ್ತಾರೆ ಬಂಗಾರವನ್ನು ನೆಲದೊಳಗೆ ಹುದುಗಿಸಿಟ್ಟು ದನಿಕರು ಕಾಪಾಡುವಂತೆ ಚೇತನರನ್ನು ಇವರು ಮಹದಾದಿ ತತ್ತ್ವಗಳೊಳಗೆ ಮುಚ್ಚಿಟ್ಟು ತಮ್ಮ ಶರೀರದೊಳಗೆ ಸುರಕ್ಷಿತವಾಗಿ ಕಾಪಾಡುತ್ತಿದ್ದಾರೆ' ಎಂದು ಐತರೇಯಭಾಷ್ಯದಲ್ಲಿಯೂ ಹೇಳಿದೆ ತಾಯಿ ತನ್ನ ಗರ್ಭದಲ್ಲಿ ಶಿಸುವನ್ನು ಕಾಪಾಡುವಂತೆಯೆ ಇದು, ಮಾತೃವಾತ್ಸಲ್ಯಗುಣ ಜಗನ್ಮಾತೆಯಾದ ಮಹಾಲಕ್ಷ್ಮಿಗೇ ಅಚ್ಚರಿಯುಂಟು ಮಾಡುವ ಮಾತೃವಾತ್ಸಲ್ಯಗುಣ ಆದ್ದರಿಂದಲೆ ಮಹಾಲಕ್ಷ್ಮಿಗ ಪೂಜ್ಯನೆನಿಸುತ್ತಾನೆ ಶ್ರೀಹರಿ ಎಂಬ ಅಭಿಪ್ರಾಯದಿಂದ ಹಿಂದಿನ ಪದ್ಯದಲ್ಲಿ 'ಶ್ರೀರಮಣಿಕರಕಮಲಪೂಜಿತ' ಎಂದಿದೆ

'ಪೂಜಿತ' ಎಂದಾಕ್ಷಣ ದೊಡ್ಡವನಾಗುವುದಿಲ್ಲ ನಣ್ಣವರನ್ನು ದೊಡ್ಡವರು ಪೂಜಿಸು-ವುದುಂಟು

ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।

ಮನೆಯಲ್ಲಿ ಪತಿ ಪತ್ನಿಯನ್ನು ಪೂಜಿಸಬೇಕೆಂದು ಮನು ಹೇಳುತ್ತಾನೆ

ಯುಗಾದಿ ಹಬ್ಬ ಬಂದರೆ,

ಶಿಶವೋಽಲಂಕಾರವಸ್ತ್ರಾದಿಭಿಃ ಸಂಪೂಜ್ಯಾಃ ।

ವಸ್ತ್ರಾಭರಣಾದಿಗಳಿಂದ ಮಕ್ಕಳನ್ನು ಪೂಜಿಸಬೇಕು

ತಾಂ ಚೈವ ಭಾರ್ಯಾಂ ದುಷ್ಯಂತಃ ಪೂಜಯಾಮಾಸ ದರ್ಮತಃ ।

ದುಷ್ಯಂತ ತನ್ನ ಪತ್ನಿಯಾದ ಶಕುಂತಲೆಯನ್ನು ಪೂಜಿಸುತ್ತಾನೆ ಮಹಾಭಾರತದಲ್ಲಿ

ಅಪೂಜಯತ್ ಕರ್ಮ ನ ಲಕ್ಷ್ಮಣಸ್ಯ ।

ಲಕ್ಷ್ಮಣನ ಯುದ್ಧಪರಾಕ್ರಮವನ್ನು ರಾಮ ಪೂಜಿಸುತ್ತಾನೆ ರಾಮಾಯಣದಲ್ಲಿ ಪ್ರಕೃತ ಮಹಾಲಕ್ಷ್ಮಿ ಆದಿಶಕ್ತಿಸ್ವರೂಪಳು ತ್ರಿಮೂರ್ತಿಗಳ ಜನನಿ ತಾಯಿ ಮಗುವನ್ನು ಪೂಜಿಸಿ-ದಂತೆ ಅವಳು ಹರಿಯನ್ನು ಪೂಜಿಸಬಾರದೇಕೆ? ಎಂಬ ಸಂಶಯವನ್ನು ಈ ಪದ್ಯದಲ್ಲಿ ಪರಿಹರಿಸಿದ್ದಾರೆ ದಾಸರು ಮಹಾಲಕ್ಷ್ಮಿಗಿಂತ ನರಸಿಂಹ ಶ್ರೇಷ್ಠ ಎಷ್ಟು ಶ್ರೇಷ್ಠ ಎಂದರೆ ಏನೂ ಆಲೋಚನೆ ಮಾಡದೆ ಪ್ರಪಂಚವನ್ನೆಲ್ಲ ಕಾಣುವ ಮಹಾಲಕ್ಷ್ಮಿ ಅನಾದಿಕಾಲದಿಂದ ಎಷ್ಟು ಆಲೋಚಿಸಿದರೂ ನರಸಿಂಹನ ಕಾಲ ಕಿರುಬೆರಳ ಉಗುರಿನ ತುದಿಯ ಎಲ್ಲ ಗುಣ-ಗಳನ್ನು ಇನ್ನೂ ಕಂಡಿಲ್ಲ! ಹೀಗೆ ಆಲೋಚಿಸಿದಾಗ ನರಸಿಂಹನ ವ್ಯಕ್ತಿತ್ವ 'ಜಗದುದರ' ಮಹಾಕಾಯವಾಗಿ ಅದ್ಭುತವಾಗಿ ಬೆಳೆದು ನಮ್ಮ ಕಣ್ಣ ಮುಂದೆ ನಿಲ್ಲುತ್ತದೆ

ದೇವಿ ತ್ರಿಮೂರ್ತಿಗಳಿಗೆ ಜನನಿ ಎನಿಸಿದುದು ಹರಿಯ ವಿಷಯದಲ್ಲಿ ಕೇವಲ ಅವತಾರಗಳಲ್ಲಿ ಮಾತ್ರ ಕೌಸಲ್ಯೆ ದೇವಕಿಯರಂತೆಯೆ ವಸ್ತುತಃ ಅವಳು ಚರಣದಾಸಿ ಈ ತಾರತಮ್ಯಜ್ಞಾನ ಮೋಕ್ಷಸಾಧನ

*ಸಂತೈಸಲನುದಿನವು*

ಮೊದಲ ಪದ್ಯದಲ್ಲಿ ನರಸಿಂಹನಿಗೆ ವಂದಿಸಿದ ಬಳಿಕ ಈ ಪದ್ಯದಲ್ಲಿ ಲಕ್ಷ್ಮಿಯನ್ನು ವಂದಿಸಲಾಗಿದೆ ಎನ್ನುವಾಗ ಒಂದು ಆಕ್ಷೇಪ ಬರಲು ಅವಕಾಶವಿದೆ ದೇವಿಯನ್ನು ಪ್ರತ್ಯೇಕ ವಂದಿಸಬಾರದೆಂದು ಭಗವದ್ಗೀತೆ ಹೇಳುತ್ತಿದೆ

ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।

'ಲಕ್ಷ್ಮಿಯ ಉಪಾಸನೆಯಲ್ಲಿ ಕ್ಲೇಶ ಅಧಿಕ'

ಪರಮಶ್ರುತಿ ಹೇಳುತ್ತದೆ—

ಅವಿಷ್ಣುಜ್ಞೈರತದ್ಭಕ್ತೈಸ್ತದುಪಾಸಾವಿವರ್ಜಿತೈಃ ।

ಶಪೇದುಪಾಸಿತಾಽಪ್ಯೇಷಾ ಶ್ರೀಃ ॥

'ಹರಿಯನ್ನು ತಿಳಿಯದೆ ಅವನನ್ನು ಭಕ್ತಿಯಿಂದ ಉಪಾಸನೆ ಮಾಡದೆ ಕೇವಲ ಲಕ್ಷ್ಮಿ-ಯನ್ನು ಉಪಾಸನೆ ಮಾಡಿದರೆ ಅವಳು ಮುನಿದು ಶಪಿಸುತ್ತಾಳೆ' ಹೀಗಿದ್ದರೂ ದಾಸರು ಮೊದಲ ಪದ್ಯದಲ್ಲಿ ಲಕ್ಷ್ಮೀನಾರಾಯಣರನ್ನು ಜೊತೆಗೆ ವಂದಿಸಿಯೂ ಈಗ ಪ್ರತ್ಯೇಕ ದೇವಿ-ಯನ್ನು ಏಕೆ ವಂದಿಸಿದರು? ಇಲ್ಲಿ ವಂದನೆಯನ್ನು ಮಾಡಲೆ ಇಲ್ಲ ಎನ್ನೋಣವೆ? 'ಸಂತೈಸ-ಲನುದಿನವು' ಎಂದು ಪ್ರಾರ್ಥನೆ ಮಾತ್ರ ಮಾಡಿದೆ ಎನ್ನೋಣವೆ? ವಂದನೆ ಕೇವಲ ನಮ-ಸ್ಕಾರವೆ ಅಲ್ಲ 'ವದಿ ಅಭಿವಾದನಸ್ತುತ್ಯೋಃ' ಸ್ತುತಿಯೂ ವಂದನೆಯೆ ಜಗದುದರನ ಗುಣಗಳನ್ನು ಹಾಡಿ ಹಿಗ್ಗುವವಳೆಂದು ಸ್ತುತಿಗೈಯುವುದರಿಂದ ಇಲ್ಲಿ ವಂದನ ಇದ

ಇದಕ್ಕೆ ಸಮಾಧಾನ–ಗೀತೆಯಲ್ಲಿ ಪ್ರತ್ಯೇಕ ದೇವಿಯ ಉಪಾಸನೆಯನ್ನು ನಿಷೇಧಿಸಿಲ್ಲ ಹರಿಯ ಉಪಾಸನೆಗೆ ಹೋಲಿಸಿದರೆ ಅಧಿಕ ಶ್ರಮವೆಂದು ಮಾತ್ರ ಹೇಳಿದೆ ದೇವಿಯ ಉಪಾಸನೆ ಮಾಡಿಯೂ ಬಳಿಕ ಹರಿಯ ಉಪಾಸನೆ ಮಾಡಲೇಬೇಕು ಅದರಿಂದಧಿಕ ಶ್ರಮ ಪರಮಶ್ರುತಿಯೂ ವಿಷ್ಣುಭಕ್ತಿ ಇಲ್ಲದವರು ದೇವಿಯ ಉಪಾಸನೆ ಮಾಡಕೂಡ-ದೆಂದು ಮಾತ್ರ ನಿಷೇಧಿಸಿದೆ ದಾಸರು ವಿಷ್ಣುಭಕ್ತಿ ಉಳ್ಳವರು ಭಕ್ತಿಯಿಂದ ಮೊದಲ ಪದ್ಯದಲ್ಲಿ ವಿಷ್ಣುವಿನ ಉಪಾಸನೆ ಮಾಡಿಯ ಈಗ ದೇವಿಯನ್ನು ಉಪಾಸನೆ ಮಾಡುತ್ತಿದ್ದಾರ

ವಸ್ತುತಃ ಈ ಪದ್ಯದಲ್ಲಿ ಪ್ರತ್ಯೇಕ ದೇವಿಯ ಉಪಾಸನೆ ಮಾಡಿಲ್ಲ ಶ್ರೀರಮಣಿಕರ-ಕಮಲಪೂಜಿತನೆಂದು ಲಕ್ಷ್ಮೀಸಹಿತನಾದ ಹರಿಯನ್ನು ಹಿಂದೆ ವಂದಿಸಿದಂತ ಹರಿಯ ಗುಣಗಳನ್ನು ಕಂಡು ಹಿಗ್ಗುವವಳೆಂದು ಹರಿಸಮೇತಳಾದ ಲಕ್ಷ್ಮಿಯನ್ನೇ ಇಲ್ಲಿ ವಂದಿಸು-ತ್ತಿದ್ದಾರೆ ದಾಸರು

ವಿಷ್ಣುನಾ ಸಹಿತಾ ಧ್ಯಾತಾ ಸಾ ಹಿ ತುಷ್ಟಿಂ ಪರಾಂ ವ್ರಜೇತ್ ॥

ವಿಷ್ಣುಸಹಿತಳಾದ ಲಕ್ಷ್ಮಿಯನ್ನು ಪೂಜಿಸಿದರೆ ಅವಳಿಗ ಹೆಚ್ಚು ಸಂತೋಷ ಅದರಿಂದ ಎರಡು ಪದ್ಯಗಳಲ್ಲಿಯೂ ವಿಷ್ಣುಸಹಿತಳಾಗಿಯೆ ದೇವಿ ಪೂಜಿತಳಾಗಿದ್ದಾಳೆ

*ನಿಗಮತತಿಗಳತಿಕ್ರಮಿಸಿ*

ಹರಿಕಥಾಮೃತಸಾರದ ಛಂದಸ್ಸು ಭಾಮಿನಿಷಟ್ಪದಿ ಇದರಲ್ಲಿ ೧,೨,೪,೫ನೇ ಪಾದ-ಗಳಲ್ಲಿ ೩,೪,೩,೪ ಮಾತ್ರೆಗಳ ನಾಲ್ಕು ಗಣಗಳು ೩,೬ನೇ ಪಾದಗಳಲ್ಲಿ ಅದೇ ರೀತಿಯ ಆರು ಗಣಗಳು ಮತ್ತು ಒಂದು ಗುರು ಬರಬೇಕು ಎಲ್ಲಿಯೂ ಒಂದು ಲಘುವಿನ ಬಳಿಕ ಗುರು ಬರಕೂಡದು ಪ್ರಕೃತ ಪದ್ಯದ 'ನಿಗಮತತಿಗಳತಿಕ್ರಮಿಸಿ ಕ್ರಿಯಾದಿಶೇಷಗಳ' ಎಂಬ ಪಾದದಲ್ಲಿ

ನಿಗಮ- ತತಿಗ- ಳತಿಕ್ರ- ಮಿಸಿಕ್ರಿ

ಎಂಬಲ್ಲಿ 'ಮಿಸಿಕ್ರಿ' ಎಂದು ಒಂದು ಲಘುವಿನ ಬಳಿಕ ಗುರು ಬಂದಿದೆ ಛಂದಸ್ಸಿನ ಅತಿ-ಕ್ರಮಣವಾಗಿದೆ ಆದರೆ ಶಿಥಿಲದ್ವಿತ್ವದಿಂದ 'ಸಿ' ಎಂಬುದು ಲಘು 'ಕ್ರೀ' ಎಂದು ಎಳೆದು ಹಾಡಬೇಕು ಆಗ ನಾಲ್ಕು ಮಾತ್ರೆಗಳ ನಿರ್ದಿಷ್ಟವಾದ ಗಣ ಲಭಿಸುತ್ತದೆ

ನಿರುಪಮಾನಂದಾತ್ಮಭವ ನಿ-
ರ್ಜರಸಭಾಸಂಸೇವ್ಯ ಋಜುಗಣ-
ದರಸೆ ಸತ್ತ್ವಪ್ರಚುರ ವಾಣೀಮುಖಸರೋಜೇನ ।
ಗರುಡಶೇಷಶಶಾಂಕದಳಶೇ-
ಖರರ ಜನಕ ಜಗದ್ಗುರುವೆ ತ್ವ-
ಚ್ಚರಣಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ ॥ ೩ ॥

'ಹೇ ಆತ್ಮಭವ, ಪರಮಾತ್ಮನ ಪುತ್ರನಾದ ಬ್ರಹ್ಮನೆ, ನಿರುಪಮ ಆನಂದ ಉಳ್ಳವನೆ, ದೇವತೆಗಳ ಸಭೆಗಳಲ್ಲೆಲ್ಲ ಚೆನ್ನಾಗಿ ಸೇವಿಸಲ್ಪಡುವವನೆ, ಋಜುಗಣದವರಲ್ಲೆಲ್ಲ ಉತ್ತಮನ, ಅಧಿಕಸತ್ವಗುಣಶಾಲಿಯೆ, ವಾಗ್ದೇವತೆಯ ಮುಖಕಮಲವನ್ನು ಅರಳಿಸುವ ಸೂರ್ಯನೆ, ಗರುಡಶೇಷರುದ್ರರಿಗೆ ಜನ್ಮಪಿತ್ತ್ತಂದೆಯೆ, ಜಗದ್ಗುರುವೆ, ನಿನ್ನ ಚರಣಗಳಿಗೆ ಅಭಿವಂದನೆ ಸಲ್ಲಿಸುತ್ತೇನೆ ಸದ್ಬುದ್ಧಿ ನೀಡು, ಕಾಪಾಡು

ಹಿಂದಿನ ಪದ್ಯದಲ್ಲಿ ದಾಸರು ಸಕಲ ವಿದ್ಯೆಗಳಿಗೂ ಮುಖ್ಯಾಭಿಮಾನಿನಿಯಾದ ಮಹಾ-ಲಕ್ಷ್ಮಿಯನ್ನು ವಂದಿಸಿ ಈಗ ಅವಾಂತರಾಭಿಮಾನಿಯಾದ ಚತುರ್ಮುಖ ಬ್ರಹ್ಮನನ್ನು ವಂದಿ-ಸುತ್ತಿದ್ದಾರೆ

*ಆತ್ಮಭವ*

'ಆತ್ಮಭವ' ಎಂಬುದು ಬ್ರಹ್ಮನ ಹೆಸರು ಏಕೆಂದರೆ ಆತ ಪರಮಾತ್ಮನ ಹಮ್ಮಿಯ ಹಿರಿಯ ಮಗ

*ನಿರುಪಮಾನಂದ*

ಅವನ ಆನಂದ ನಿರುಪಮ ರುದ್ರಾದಿ ದೇವತೆಗಳಲ್ಲಿ ಎಲ್ಲಿಯೂ ಅಂಥ ಆನಂದ ಕಾಣಲು ಸಿಗಲಾರದು ಅದರಿಂದಲೆ ಅವನಿಗೆ 'ಶತಾನಂದ' ಎಂದು ಹೆಸರಿದೆ ಇಲ್ಲಿ ಶತ ಎಂದರೆ ನೂರಲ್ಲ ಅಮಿತ ಎಂದರ್ಥ ಅಮಿತ ಆನಂದ ಉಳ್ಳವ ಬ್ರಹ್ಮ ಉಳಿದವರೆಲ್ಲರ ಆನಂದಕ್ಕೆ ಮಿತಿ ಇದೆ

*ನಿರ್ಜರಸಭಾಸಂಸೇವ್ಯ*

ದೇವತೆಗಳ ಎಲ್ಲ ಸಭೆಗಳಲ್ಲಿಯೂ ಅಗ್ರಮಾನ್ಯ ಬ್ರಹ್ಮ ಶ್ರೀಮಧ್ವಾಚಾರ್ಯರು ವಿದ್ವ-ತ್ಸಭೆಗಳಲ್ಲಿ ಮಾನ್ಯರಾಗುತ್ತಿದ್ದುದಕ್ಕೆ, ಬ್ರಹ್ಮ ದೇವತೆಗಳ ಸಭೆಗಳಲ್ಲಿ ಮಾನ್ಯನಾಗುವುದನ್ನು ಉದಾಹರಣೆಯಾಗಿ ಕೊಡುತ್ತಾರೆ ಸುಮಧ್ವವಿಜಯಕಾರರು—

ದೈವ್ಯಾಂ ಸಭಾಯಾಮಿವ ಪದ್ಮಯೋನಿಮ್

**ಋಜುಗಣದರಸ**

ಋಜುಗಣದ ಅರಸು ಬ್ರಹ್ಮ ಯದ್ಯಪಿ ಋಜುಗಣದವರೆಲ್ಲ ಪರಸ್ಪರ ಸಮಾನರು ಆದರೂ ಋಜುಗಳ ನೂರು ಕಲ್ಪ ಸಾಧನೆಯಲ್ಲಿ ಕೊನೆಯ ಮೆಟ್ಟಲೆನಿಸಿದ ಬ್ರಹ್ಮಪದವಿ-ಯನ್ನು ಏರಿದವ ಬ್ರಹ್ಮ ಈ ಪದವಿಯ ದೃಷ್ಟಿಯಿಂದ ಈತ ಉಳಿದೆಲ್ಲ ಋಜುಗಳಿಗಿಂತ ಮೇಲು ಅದವಾ ಋಜುಗಣಕ್ಕೆ ಸೇರಿದ ಅರಸು ಅಂದರೆ ಜಗದೊಡೆಯ ಬ್ರಹ್ಮ ಎಂದರ್ಥ

**ಸತ್ವಪ್ರಚುರ**

'ಸತ್ತ್ವಪ್ರಚುರ' ಎಂದರೇನು? ಪ್ರಕಾಶಪ್ರಚುರ, ಪ್ರಕಾಶಮಯ ಸೂರ್ಯ ಎನ್ನುವಂತೆ ಸತ್ತ್ವಪ್ರಚುರ ಸತ್ತ್ವಮಯ ಸತ್ತ್ವಸ್ವರೂಪ ಬ್ರಹ್ಮ ಎನ್ನಬಹುದೆ? ಆಗ ಎಲ್ಲ ಸಾತ್ವಿಕರೂ ಸತ್ವಸ್ವರೂಪರೆ ಆಗಿರುವುದರಿಂದ ಏನೂ ವಿಶೇಷ ಹೇಳಿದಂತಾಗದು ಆದರೂ ಬ್ರಹ್ಮನಿಗ ಪ್ರಕೃತಿಬಂಧ ಇದ್ದೂ ಇಲ್ಲದಂತೆ, ಅದು ಕಾರ್ಯಕಾರಿಯಲ್ಲ ಅದರಿಂದ ಸ್ವರೂಪದಲ್ಲಿರುವ ಸತ್ವಗುಣ ವ್ಯಕ್ತವಾಗಿಯೆ ಇರುವುದರಿಂದ ಸತ್ವಮಯನಾಗಿಯೆ ಬ್ರಹ್ಮ ಮೆರೆಯುತ್ತಾನ ಉಳಿದವರಂತಲ್ಲ

ಬ್ರಹ್ಮ ಬಾಹ್ಯ ಶರೀರದಲ್ಲಿಯೂ ಸತ್ವಪ್ರಚುರನ ಹಾಗೆಂದ ಮಾತಕ್ಕ ಬಾಹ್ಯಶರೀರ ಶುದ್ದ ಸತ್ವಮಯವೆಂದು ತಿಳಿಯಬಾರದು ಶುದ್ಧ ಸತ್ವಮಯಶರೀರ ಕೇವಲ ಮುಕ್ತರಿಗ ಮಾತ್ರ ಸಿಗುವಂಥಹುದು ಬ್ರಹ್ಮನ ಬಾಹ್ಯಶರೀರ ಶುದ್ದಸತ್ವಮಯವಲ್ಲ ಪ್ರಾಕೃತ, ಪಾಂಚ-ಭೌತಿಕ ಭಾಗವತತಾತ್ಪರ್ಯದಲ್ಲಿ ಹಾಗೆ ಹೇಳಿದೆ—

ಪಂಚಭೂತಸಮೂಹೇನ ಜಾತಃ ಪುರುಷ ಉಚ್ಯತೇ

ಪಂಚಭೂತಸಮುದಾಯದಿಂದ ಉಂಟಾದ ಶರೀರ ಪುರುಷನಾಮಕನಾದ ಬ್ರಹ್ಮನದು

ಗೀತಾತಾತ್ಪರ್ಯದಲ್ಲಿ ಹೀಗೆ ಹೇಳಿದೆ—

ಸತ್ವಸತ್ವಮಹಾಸತ್ವಸೂಕ್ಷ್ಮಸತ್ವಶ್ಚತುರ್ಮುಖಃ

ಈ ವಚನವೂ ಬ್ರಹ್ಮನಿಗೆ ಶುದ್ಧಸತ್ವಮಯಶರೀರ ಉಂಟೆನ್ನುವುದಿಲ್ಲ ಭಾಗವತ-ತಾತ್ಪರ್ಯದಲ್ಲಿ ಇದರ ವಿವರಣೆ ಉಕ್ತವಾಗಿದೆ—

ತತ್ರಾಪಿ ಸಾತ್ವಿಕಾಃ ಶೇಷಗರುತ್ಮದ್ರುದ್ರತತ್‌ಸ್ತ್ರಿಯಃ ।
ತತೋಽಪಿ ದೇವೀ ಬ್ರಹ್ಮಾಣೀ ಬ್ರಹ್ಮಾ ಚೈವ ತತಃ ಸ್ವಯಮ್ ॥

ಇದರ ಪ್ರಕಾರ ಗೀತಾತಾತ್ಪರ್ಯವಚನದಲ್ಲಿ ಸತ್ವವೆಂದರೆ ಸಾತ್ವಿಕರು ಇಂದ್ರಾದಿ ದೇವತೆಗಳು ಅವರಿಗಿಂತ ಸಾತ್ವಿಕರು ಶೇಷಗರುಡರುದ್ರರು ಮತ್ತು ಅವರ ಪತ್ನಿಯರು ಅವರಿಗಿಂತ ಮಹಾಸತ್ವರು ಭಾರತೀಸರಸ್ವತಿಯರು ಅವರಿಗಿಂತಲೂ ಸೂಕ್ಷ್ಮಸತ್ವರು ಬ್ರಹ್ಮವಾಯುಗಳು ಬ್ರಹ್ಮಾಂಡದೊಳಗೆ ಶ್ರೀಹರಿಯ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮನ ಶರೀರ ಪಾಂಚಭೌತಿಕವಾದರೂ ಹೊರಗೆ ವಾಸುದೇವ-ಮಾಯಾ ದಂಪತಿಗಳಲ್ಲಿ

ಜನಿಸಿದ ಬ್ರಹ್ಮನ ಶರೀರ ಹಾಗಲ್ಲ ಕೇವಲ ಮಹತ್ತತ್ತ್ವದಿಂದ ನಿರ್ಮಿತ ರುದ್ರಾದಿಗಳ ಶರೀರ ಅಹಂಕಾರನಿರ್ಮಿತ ಅಹಂಕಾರಕ್ಕಿಂತ ಮಹತ್ತತ್ತ್ವದಲ್ಲಿ ಸತ್ತ್ವ ಅಧಿಕ ಈ ವಿವಕ್ಷೆ-ಯಿಂದಲೂ ಬ್ರಹ್ಮನನ್ನು ಸತ್ತ್ವಪ್ರಚುರ ಎನ್ನಬಹುದು

*ವಾಣೀಮುಖಸರೋಜೇನ*

ತನ್ನ ಮುದ್ದಿನ ಮಡದಿಯಾದ ವಾಗ್ದೇವತೆಯ ಮುಖಕಮಲವನ್ನು ಅರಳಿಸುವ ಸೂರ್ಯ, ಬ್ರಹ್ಮ ಸಕಲವಿದ್ಯಾಧಿದೇವತೆಯಾದ ಸರಸ್ವತಿಯ ಮುಖಕಮಲವನ್ನು ಸಕಲ ವಿದ್ಯಾಭಿಮಾನಿ ಬ್ರಹ್ಮನಲ್ಲದೆ ಇನ್ನಾರು ಅರಳಿಸಬಲ್ಲರು?

*ಗರುಡಶೇಷಶಶಾಂಕದಳಶೇಖರರ ಜನಕ*

'ಗರುಡಶೇಷಶಶಾಂಕದಳಶೇಖರರ ಜನಕ' ಬ್ರಹ್ಮ ಭಾಗವತತಾತ್ಪರ್ಯದಲ್ಲಿ ಹೇಳಿದೆ

ಸುಪರ್ಣಶೇಷರುದ್ರಾದಿಪ್ರಸೂತಿಸ್ತು ಚತುರ್ಮುಖಃ

ಆದರೆ ಗರುಡ, ವಿನತಾ-ಕಶ್ಯಪ ದಂಪತಿಗಳಲ್ಲಿ ಜನಿಸಿದವ ಶೇಷ, ಕದ್ರೂ-ಕಶ್ಯಪ ದಂಪತಿಗಳಲ್ಲಿ ರುದ್ರ ಮಾತ್ರ ಬ್ರಹ್ಮನ ಹಣೆಯಲ್ಲಿ ಜನಿಸಿದವ 'ರುದ್ರಾದಿ' ಎಂದು ಇಂದ್ರ ಮುಂತಾದ ದೇವತೆಗಳನ್ನಿಟ್ಟುಕೊಂಡರೆ ಅವರೂ ಅದಿತಿ-ಕಶ್ಯಪ ದಂಪತಿಗಳಲ್ಲಿ ಜನಿಸಿ-ದವರು ಆದ್ದರಿಂದ ಬ್ರಹ್ಮಾಂಡದ ಹೊರಗೆ ತತ್ತ್ವದೇವತೆಗಳಾಗಿ ಇವರು ಹುಟ್ಟುವಾಗ, ಶ್ರೀಹರಿಯಿಂದ ಬ್ರಹ್ಮವಾಯುಸರಸ್ವತಿಭಾರತಿಯರೂ, ಅವರಿಂದ ರುದ್ರಶೇಷಗರುಡರೂ ಅವರಿಂದ ಇಂದ್ರಾದಿಗಳೂ ಹುಟ್ಟಿದರೆಂಬ ಅಭಿಪ್ರಾಯದಿಂದಲೆ 'ಗರುಡಶೇಷರುದ್ರರ ಜನಕ ಬ್ರಹ್ಮ' ಎನ್ನಲಾಗಿದೆ

ಮಹಾಭಾರತತಾತ್ಪರ್ಯನಿರ್ಣಯದ ಪ್ರಕಾರ ತತ್ತ್ವದೇವತೆಗಳಾಗಿಯೂ ಗರುಡ-ಶೇಷರುದ್ರರು ಬ್ರಹ್ಮನ ಮಕ್ಕಳಲ್ಲ ಮೊದಲಿಗೆ ಬ್ರಹ್ಮನಿಂದ ಶೇಷರುದ್ರರ ಜನನವಾಯಿತು ವಾಯುವಿನಿಂದ ಗರುಡನ ಜನನವಾಯಿತು ಪುನಃ ಅಹಂಕಾರಾಭಿಮಾನಿಗಳಾಗಿ ಗರುಡ-ಶೇಷರುದ್ರರು ವಾಯುವಿನಿಂದಲೆ ಹುಟ್ಟಿದರು ಬ್ರಹ್ಮನಿಂದ ಶಿವನೊಬ್ಬನೆ ಜನಿಸಿದ

ಯಾ ಮಾರುತಾದ್ ಗರ್ಭಮಧತ್ತ ಪೂರ್ವಂ
ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್ ।

ಎಂಬ ಬ್ರಹ್ಮಾಂಡವಚನವೂ ಗರುಡಶೇಷರುದ್ರಇಂದ್ರರ ಜನಕ ವಾಯುವೆಂದೇ ಹೇಳುತ್ತಿದೆ

ಆದರೂ ವಾಯುಪದವಿಯಲ್ಲಿದ್ದಾಗ ಗರುಡಶೇಷರುದ್ರರಿಗೆ ತಂದೆಯಾಗಿದ್ದವನೆ ಈಗ ಬ್ರಹ್ಮಪದವಿಯಲ್ಲಿ ಇರುವುದರಿಂದ ಹಾಗೆ ಹೇಳಿದೆ ಎಂದಿಟ್ಟುಕೊಳ್ಳಬಹುದು

*ಜಗದ್ಗುರುವೆ*

ಜಗದ್ಗುರು ಬ್ರಹ್ಮ ಜಗತ್ತಿನಲ್ಲಿರುವ ಸಾತ್ವಿಕ ಜೀವರೆಲ್ಲರಿಗೂ ಬ್ರಹ್ಮ ಮುಖ್ಯ ಗುರು ಮುಖ್ಯ ಗುರುವಿನ ಲಕ್ಷಣ ಮಹಾಬಾರತತಾತ್ಪರ್ಯನಿರ್ಣಯದಲ್ಲಿ ಹೀಗೆ ಹೇಳಿದೆ—

ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ ।
ಸಪ್ತಪಾದಶ್ಚತುರ್ಹಸ್ತೋ ದ್ವಾತ್ರಿಂಶಲ್ಲಕ್ಷಣೈರ್ಯುತಃ ॥
ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ ॥

'ತೊಂಬತ್ತಾರು ಅಂಗುಲ ಎತ್ತರ ನಲವತ್ತೆಂಟು ಅಂಗುಲ ಸುತ್ತಳತೆ ಉದರಭಾಗದಲ್ಲಿ ಈ ಸುತ್ತಳತೆಯ ಪ್ರಮಾಣ ಅವನ ಏಳು ಹೆಜ್ಜೆಯಷ್ಟು, ನಾಲ್ಕು ಮೊಳಗಳಷ್ಟಾಗಿರಬೇಕು ಶರೀರದಲ್ಲಿ ಮೂವತ್ತೆರಡು ಲಕ್ಷಣಗಳಿರಬೇಕು ತತ್ವವಿಷಯದಲ್ಲಿ ತನಗೆ ಸಂಶಯವಿರ-ಕೂಡದು ಜಿಜ್ಞಾಸುಗಳ ಎಲ್ಲ ಸಂಶಯ ಪರಿಹರಿಸಬಲ್ಲವನಾಗಿರಬೇಕು'

ಈ ಎಲ್ಲ ಲಕ್ಷಣಗಳನ್ನು ಪೂರ್ಣವಾಗಿ ಹೊಂದಿರುವ ಬ್ರಹ್ಮವಾಯುಗಳೆ ಮುಖ್ಯ ಜಗದ್ಗುರುಗಳು ಅದರಿಂದಲೆ ಅನುವ್ಯಾಖ್ಯಾನದಲ್ಲಿ ಹೇಳಿದೆ—

ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ

'ಎಲ್ಲರಿಗೂ ಮೋಕ್ಷಕಾರಣ ಬ್ರಹ್ಮನ ಉಪದೇಶ' ಅದರಿಂದ ಬ್ರಹ್ಮ ಜಗದ್ಗುರು ಎನ್ನು-ವುದು ಯುಕ್ತ ಅಥವಾ ಗುರು ಎಂದರೆ ಹಿರಿಯ ಲೋಕಕ್ಕೆಲ್ಲ ಹಿರಿಯ ಪಿತಾಮಹನೆನಿಸಿದ ಬ್ರಹ್ಮ ಶ್ರೀಹರಿಯ ಪ್ರಥಮ ಜ್ಯೇಷ್ಠ ಪುತ್ರ ಆತ ತೈತ್ತಿರೀಯೋಪನಿಷತ್ತಿನಲ್ಲಿ ಬ್ರಹ್ಮ ಹಾಗೇ ಹೇಳುತ್ತಾನೆ—

'ಅಹಮಸ್ಮಿ ಪ್ರಥಮಜಾ ಋತಸ್ಯ'

ವಾದಿರಾಜರು ಹೇಳಿದ್ದಾರೆ—

'ಬೊಮ್ಮ ಹೆಮ್ಮಗ, ರುದ್ರ ಮೊಮ್ಮಗ

**ಪಾಲಿಪುದು ಸನ್ಮತಿಯ**

ಇಂಥ ಬ್ರಹ್ಮನ ಚರಣಕಮಲಗಳಿಗೆ ಎರಗಿ ದಾಸರು ಸದ್ಬುದ್ಧಿಪ್ರಚೋದನೆಯನ್ನು ಬೇಡುತ್ತಿದ್ದಾರೆ. ಹಿಂದಿನ ಪದ್ಯದಲ್ಲಿ ಮಹಾಲಕ್ಷ್ಮಿ ಜಗತ್ತಿನ ತಾಯಿಯಾಗಿ ಮಕ್ಕಳಾದ ನಮ್ಮೆಲ್ಲರನ್ನು ಸಂತೈಸಲಿ ಎಂದು ಪ್ರಾರ್ಥಿಸಿದ ಬಳಿಕ ಈಗ ಈ ಪದ್ಯದಲ್ಲಿ ಬ್ರಹ್ಮ ನಮಗೆಲ್ಲ ಹಿರಿಯಣ್ಣನಾಗಿ ಅತ್ಯಂತ ಆಪ್ತನಾಗಿ ಸದ್ಬುದ್ಧಿ ನೀಡಿ ಕಾಪಾಡಲಿ ಎಂದು ಬೇಡುತ್ತಿದ್ದಾರೆ ಈ ಹರಿಕಥಾಮೃತಸಾರಗ್ರಂಥರಚನೆಯಲ್ಲಿ ತನಗೆ ಬುದ್ಧಿಪ್ರಚೋದನ ನೀಡಲಿ ವಾಣೀ-ಮುಖಕಮಲವನ್ನು ಅರಳಿಸುವಂತೆ ಈ ಗ್ರಂಥಕಮಲವನ್ನೂ ಅರಳಿಸಲಿ ಅದನ್ನು ಓದು-ವಂತೆ, ಓದಿ ಅರ್ಥ ಮಾಡಿಕೊಳ್ಳುವಂತೆ, ಎಲ್ಲ ಪರಮ ಭಗವದ್ಭಕ್ತರಿಗೆ ಆದರದ ಬುದ್ಧಿ-ಯನ್ನೂ ನೀಡಲಿ ಎಂದೂ ಪ್ರಾರ್ಥಿಸುತ್ತಿದ್ದಾರೆ

ಬ್ರಹ್ಮವಾಯುಗಳಿಬ್ಬರಲ್ಲಿ ಪದವಿಪ್ರಯುಕ್ತ ಸ್ವಲ್ಪ ತಾರತಮ್ಯವಿದ್ದರೂ ಸಕಲವಿದ್ಯಾ-ಪಾಂತರಾಭಿಮಾನಿತ್ವಾದಿ ದೃಷ್ಟಿಯಲ್ಲಿ ತಾರತಮ್ಯವಿಲ್ಲದುದರಿಂದ ಈ ಪದ್ಯದಲ್ಲಿಯೂ ಮುಂದಿನ ಪದ್ಯದಲ್ಲಿಯೂ ಬ್ರಹ್ಮವಾಯುಗಳಿಬ್ಬರನ್ನೂ ಜೊತೆಜೊತೆಯಾಗಿಯೆ ದಾಸರು

ನಮಿಸುವಂತೆ ಕಾಣುತ್ತದೆ ಏಕೆಂದರೆ ಈ ಪದ್ಯದಲ್ಲಿ ಬ್ರಹ್ಮನ ಬಗ್ಗೆ ಹೇಳಿದುದೆಲ್ಲ ವಾಯು-ವಿಗೂ ಚೆನ್ನಾಗಿ ಒಪ್ಪುತ್ತದೆ ಮುಂದಿನ ಪದ್ಯದಲ್ಲಿ ವಾಯುವಿನ ಬಗ್ಗೆ ಹೇಳುವುದೂ ಬ್ರಹ್ಮನಿಗೆ ಅಷ್ಟೇ ಚೆನ್ನಾಗಿ ಒಪ್ಪುತ್ತದೆ

**ನಿರುಪಮ ಆನಂದ** ಉಳ್ಳವರೆಂದು ಬ್ರಹ್ಮವಾಯುಗಳಿಬ್ಬರನ್ನೂ ನಮಿಸಬಹುದು ಇಬ್ಬರ ಆನಂದಗಳಲ್ಲಿ ಏನೂ ವ್ಯತ್ಯಾಸವಿಲ್ಲ ಬ್ರಹ್ಮನಿಗೆ ಶತಾನಂದ ಎಂಬ ಹೆಸರಿದ್ದರೆ ವಾಯುವಿಗೂ 'ಆನಂದ' ಎಂದು ಹೆಸರಿದೆ ನಿರುಪಮ ಆನಂದವಿರುವುದರಿಂದಲೆ ಅವನಿಗೆ ಆ ಹೆಸರು ಬಂದಿದೆ

**'ಆತ್ಮಭವ'** ಎಂಬ ಹೆಸರೂ ವಾಯುವಿಗೆ ಒಪ್ಪುತ್ತದೆ—

'ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ ಸ್ವಾಸೀನಂ

ಎಂದು ಪ್ರಾಣಮಂತ್ರಧ್ಯಾನದಲ್ಲಿ ಹೇಳುವಂತೆ ಹರಿಯ ತೊಡೆಯಲ್ಲಿ ಕುಳ್ಳಿರುವ ಹೆಮ್ಮೆಯ ಪ್ರೀತಿಯ ಪುತ್ರ ವಾಯುವೆ

**'ನಿರ್ಜರಸಭಾಸಂಸೇವ್ಯ'**ನೂ ವಾಯು ಎಂದಿದೆ ಶ್ರೀಹರಿವಾಯುಸ್ತುತಿ—

ಸುಚರಿತ ಚರಿತಂ ಭಾತಿ ಗಂಧರ್ವಗೀತಂ

ಪ್ರತ್ಯೇಕಂ ದೇವಸಂಸತ್ಸ್ವಪಿ ತವ ಭಗವನ್ ನರ್ತಿತದ್ಯೋವಧೂಷು

'ವಾಯುದೇವ, ಅಪ್ಸರೆಯರ ನಾಟ್ಯದಿಂದ ಶೋಭಿಸುವ ದೇವಸಭೆಗಳಲ್ಲೆಲ್ಲ ಗಂಧ-ರ್ವರು ನಿನ್ನ ಗುಣಗಾನ ಮಾಡುತ್ತಾರೆ'

**ಋಜುಗಣದ ಅರಸು** ವಾಯು ಎಂದು ಶ್ರೀಸುಮಧ್ವವಿಜಯದಲ್ಲಿದೆ—

'ಋಜುಪುಂಗವಸ್ಯ ಪರಿಜಾನತಃ ಸ್ವಯಂ '

**'ಋಜುಪುಂಗವ'** ಎಂದರೂ ಋಜುಗಣದರಸೆಂದರೂ ಒಂದೇ ಅಭಿಪ್ರಾಯ ಬ್ರಹ್ಮ-ಪದವಿಗೆ ಬರುವವ ಎಂದು

**ಸತ್ವಪ್ರಚುರರು** ಬ್ರಹ್ಮವಾಯುಗಳಿಬ್ಬರೂ ಆಗಿದ್ದಾರೆ ಇಬ್ಬರಿಗೂ ಪ್ರಕೃತಿಬಂಧ ಇದ್ದೂ ಇಲ್ಲದಂತಿದೆ ಮತ್ತು ಇಬ್ಬರೂ ಮಹತ್ತತ್ತ್ವಾಭಿಮಾನಿಗಳಾಗಿ ಬಾಹ್ಯದೇಹದಲ್ಲಿ ಸತ್ವಪ್ರಧಾನರ ಆಗಿದ್ದಾರೆ

'ಭೂತತ್ರಯವಪುಷ ಜವಿಷ್ಠವಿಘಾತ ಗತದೋಷ!'

ಎಂದು ದಾಸರೆ ಬೇರೆ ಕಡೆ ಹೇಳಿದ್ದರೆ ಅದು ಬ್ರಹ್ಮಾಂಡದೊಳಗಿನ ಪಾಂಚಭೌತಿಕಶರೀರ-ವಿವಕ್ಷೆಯಿಂದ ಆ ಶರೀರದಲ್ಲಿ ಪಂಚಭೂತಗಳೆಲ್ಲ ಇದ್ದರೂ ಪೃಥ್ವಿಭಾಗ ಕಡಿಮೆ, ತೇಜೋ ವಾಯು ಅಪ್ ಬಾಗಗಳ ಅಧಿಕ ಎಂಬುದು ಅಬಿಪ್ರಾಯ

**'ವಾಣೀಮುಖಸರೋಜೇನ'** ಇಲ್ಲಿ 'ವಾಣಿ' ಎಂದರೆ ಭಾರತಿಯೂ ಆಗಬಹುದು

ಬ್ರಾಹ್ಮೀ ತು ಭಾರತೀ ಭಾಷಾ ಗೀರ್ವಾಗ್ ವಾಣೀ ಸರಸ್ವತೀ

ಎಂದು ಕೋಶಾನುಸಾರ 'ವಾಣಿ' ಎಂದು ಭಾರತಿಸರಸ್ವತಿಯರಿಬ್ಬರಿಗೂ ಹೆಸರಿದೆ ಆದ್ದ-ರಿಂದ ಭಾರತಿಯ ಮುಖಕಮಲವನ್ನು ಅರಳಿಸುವ ಸೂರ್ಯ ವಾಯು ಎಂದು ಹೇಳಿದಂ-ತಾಯಿತು ಶ್ರೀಹರಿವಾಯುಸ್ತುತಿಯಲ್ಲಿ—

ವಾಚಾಂ ಯತ್ರ ಪ್ರಣೇತ್ರೀ ತ್ರಿಭುವನಮಹಿತಾ ಶಾರದಾ ಶಾರದೇಂದು-
ಜ್ಯೋತ್ಸ್ನಾ ಭದ್ರಸ್ಮಿತಶ್ರೀಧವಲಿತಕಕುಭಾ ಪ್ರೇಮಭಾರಂ ಬಭಾರ

ಎಂದು ಪಂಡಿತಾಚಾರ್ಯರು ಹೇಳುವಂತೆ ವಾಯುವಿನ ಚರಣಸೇವೆ ಮಾಡುವಾಗಲೆಲ್ಲ ಭಾರತಿಗೆ ಆನಂದದಿಂದ ಮುಖ ಅರಳುತ್ತದೆ ಧವಳಹಾಸಶ್ರೀ ಹೊರಹೊಮ್ಮಿ ದಿಕ್ಕುಗಳನ್ನು ಬೆಳಗಿಸುತ್ತದೆ

**'ಗರುಡಶೇಷಶಶಾಂಕದಳಶೇಖರರ ಜನಕ'**ನೂ ಹಿಂದೆ ಹೇಳಿದಂತೆ ಮುಖ್ಯವಾಗಿ ವಾಯುವೆ

**'ಜಗದ್ಗುರು'** ವಾಯುವೆಂದು ಶ್ರೀಹರಿವಾಯುಸ್ತುತಿಯಲ್ಲಿ ಮೊದಲ ಪದ್ಯದಲ್ಲಿಯೆ ಹೇಳಿದೆ—

ಶ್ರೀಮದಾನಂದತೀರ್ಥತ್ರೈಲೋಕ್ಯಾಚಾರ್ಯಪಾದೋ
ಜ್ಜ್ವಲಜಲಜಲಸತ್ಪಾಂಸವೋಽಸ್ಮಾನ್ ಪುನಂತು

'ಮೂಲೋಕದ ಗುರುವಾದ ಶ್ರೀಮದಾನಂದತೀರ್ಥರ ಪಾದಕಮಲಗಳ ಪರಾಗ ನಮ್ಮನ್ನು ಪವಿತ್ರಗೊಳಿಸಲಿ'

'ಜಗದ್ಗುರು'—ಜಗತ್ತಿಗೆಲ್ಲ ಹಿರಿಯನೆನ್ನುವುದು ವಾಯುವಿನ ವಿಷಯದಲ್ಲಿಯೂ ಸರಿಯೆ 'ಪರಮಾತ್ಮನ ಜ್ಯೇಷ್ಠಪುತ್ರ ಬ್ರಹ್ಮನೆಂದು ಕೆಲವೆಡೆ ಹೇಳಿದ್ದರೆ ಅದು ಪದವಿಪ್ರಯುಕ್ತ ಶ್ರೇಷ್ಠತ್ವವಿವಕ್ಷೆಯಿಂದ ವಸ್ತುತಃ ಬ್ರಹ್ಮವಾಯುಗಳಿಬ್ಬರೂ ಜೊತೆಗೇ ಜನಿಸಿದವರು' ಎಂದು ಬೃಹದಾರಣ್ಯಕಭಾಷ್ಯದಲ್ಲಿ ಶ್ರೀಮದಾಚಾರ್ಯರ ಹೇಳಿದ್ದಾರೆ

ವಾಯುರೇವ ಯತೋ ಬ್ರಹ್ಮಪದಂ ನಿಯಮತೋ ವ್ರಜೇತ್ ।
ನಹ್ಯೇವ ಜನನೇಽಪ್ಯಸ್ಮಾತ್ ಪೂರ್ವಂ ವಾಯೋರ್ಜನಿಂ ವದೇತ್ ॥
ಕ್ವಚಿತ್ತು ಬ್ರಹ್ಮಣಃ ಪೂರ್ವಂ ಪ್ರಾಧಾನ್ಯಾತ್ ತತ್ಪದಸ್ಯ ಚ ॥

ಇಂಥ ಗುರು ಪವಮಾನನನ್ನು ದಾಸರು ಈ ಪದ್ಯದಲ್ಲಿಯೂ ವಂದಿಸಿದ್ದಾರೆ ಸನ್ಮತಿ ನೀಡೆಂದು ಬೇಡಿದ್ದಾರೆ ಪಂಡಿತಾಚಾರ್ಯರೂ ಶ್ರೀಹರಿವಾಯುಸ್ತುತಿಯಲ್ಲಿ ಹಾಗೇ ಬೇಡಿದ್ದಾರೆ

ಅಯಮಿಹ ಸುಮತಿಂ ವಾಯುದೇವೋ ವಿದಧ್ಯಾತ್

ನಾರಾಯಣಪಂಡಿತಾಚಾರ್ಯರೂ ಶ್ರೀಸುಮಧ್ವವಿಜಯದಲ್ಲಿ ಹಾಗೇ ಬೇಡಿದ್ದಾರೆ

ನಮಸ್ತೇ ಪ್ರಾಣೇಶ ಪ್ರದಿಶ ಸುದೃಶಂ ನೋ ಜಯ ಜಯ

**ಆರು ಮೂರೆರಡೊಂದು ಸಾವಿರ**
**ಮೂರೆರಡು ಶತಶ್ವಾಸ ಜಪಗಳ**
**ಮೂರು ವಿಧ ಜೀವರೊಳಗಬ್ಜಜ ಕಲ್ಪ ಪರ್ಯಂತ ।**
**ತಾ ರಚಿಸಿ ಸಾತ್ವರಿಗೆ ಸುಖ ಸಂ-**
**ಸಾರ ಮಿಶ್ರರಿಗಧಮಜನರಿಗ-**
**ಪಾರ ದುಃಖಗಳೀವ ಗುರು ಪವಮಾನ ಸಲಹೆಮ್ಮ** ॥ ೪ ॥

'ಆರು ಮೂರು(೬×೩=೧೮) ಮತ್ತು ಎರಡೊಂದು(೨+೧=೩) ಒಟ್ಟು ೨೧ ಸಾವಿರ ಮತ್ತು ಮೂರೆರಡು(೩×೨=೬) ಶತ ಅಂದರೆ ಆರು ನೂರು, ೨೧,೬೦೦ ಶ್ವಾಸಜಪಗಳನ್ನು ಸಾತ್ವಿಕ, ಮಿಶ್ರ, ಅಧಮ ಎಂಬ ತ್ರಿವಿಧ ಜೀವರಲ್ಲಿ ಬ್ರಹ್ಮಕಲ್ಪಪರ್ಯಂತ ಪ್ರತಿದಿನ ತಾನು ಮಾಡಿ ಸಾತ್ವಿಕರಿಗೆ ನಿತ್ಯವಾದ ಮೋಕ್ಷಸುಖವನ್ನೂ, ರಾಜಸರಾದ ಮಿಶ್ರ ಜೀವರಿಗೆ ನಿತ್ಯ ಸಂಸಾರವನ್ನೂ, ತಾಮಸರಾದ ಅಧಮ ಜೀವರಿಗೆ ನಿತ್ಯವಾದ ಅಪಾರ ದುಃಖವನ್ನೂ ನೀಡುವ ಗುರು ಪವಮಾನನೆ, ನಮ್ಮನ್ನು ಸಲಹು'

ಬ್ರಹ್ಮವಾಯುಗಳು ಇಬ್ಬರೂ ಬೇರೆ ಎಲ್ಲ ವಿಧದಲ್ಲೂ ಸಮಾನರೇ ಇದ್ದರೂ ಪದವಿಯಲ್ಲಿ ಮಾತ್ರ ವಾಯು ಬ್ರಹ್ಮನಿಗಿಂತ ಸ್ವಲ್ಪ ಕಡಿಮೆಯವನಾದ್ದರಿಂದ ಹಿಂದಿನ ಪದ್ಯದಲ್ಲಿ ಬ್ರಹ್ಮನ ಜೊತೆ ವಾಯುವಿಗೆ ನಮಸ್ಕಾರ ಮಾಡಿ ಈ ಪದ್ಯದಲ್ಲಿ ವಾಯುವಿನ ಜೊತೆ ಬ್ರಹ್ಮನಿಗೆ ವಂದನೆ ಮಾಡಲಾಗಿದೆ 'ಬ್ರಹ್ಮನೆ ವಾಯು, ವಾಯುವೆ ಬ್ರಹ್ಮ ಅವರಲ್ಲಿ ಭೇದವಿಲ್ಲ ಆದರಿಂದ ಹಿಂದೆ ವಂದನೆ ಮಾಡಿದ ಮೇಲೆ ತಿರುಗಿ ಮಾಡಬೇಕಾಗಿಲ್ಲ, ಮಾಡಿಲ್ಲ' ಎಂದು ತಿಳಿಯಬಾರದು ಒಬ್ಬನಿಗೆ ಕ್ರಮವಾಗಿ ಎರಡೂ ಪದವಿಗಳು ಬರುತ್ತವೆಯಾದರೂ ಒಂದು ಕಾಲದಲ್ಲಿ ಪದವಿಗಳು ಬೇರೆ, ಆ ಪದವಿಗಳಲ್ಲಿರುವ ವ್ಯಕ್ತಿಗಳೂ ಬೇರೆ ಅದರಿಂದ ಬೇರೆ ಬೇರೆ ವಂದನೆಗಳನ್ನು ಮಾಡಬೇಕು, ಮಾಡಿದ್ದಾರೆ ಹಿಂದೆ ಚರಣವಂದನೆ ಮಾಡಿದಂತೆ ಇಲ್ಲಿ ಮಾಡಿಲ್ಲವಾದರೂ ಶ್ವಾಸಜಪ ಮಾಡುವವನೆಂದು ಸ್ತುತಿರೂಪ ವಂದನೆ ಮಾಡಲಾಗಿದೆ

*ಶ್ವಾಸಜಪಗಳ ತಾ ರಚಿಸಿ*

ಶ್ವಾಸಜಪವನ್ನು ವಾಯುಬ್ರಹ್ಮರು ಇಬ್ಬರೂ ಮಾಡುವುದರಿಂದ ಇಬ್ಬರಿಗೂ ಈ ವಂದನೆ ಸಲ್ಲುತ್ತದೆ ಸಾಧಕರಿಗೆ ಇಬ್ಬರೂ ಪರಮೋಪಕಾರಿಗಳೆಂಬ ಕೃತಜ್ಞತೆ ಸಲ್ಲುತ್ತದೆ ಏಕೆಂದರೆ—

ಪ್ರಾಣವಾಯೌ ಮುಖ್ಯಾಭಿಮಾನೀ ಬ್ರಹ್ಮಾ ವಾಯುಶ್ಚ
ಹಂಸರೂಪೇಣ ವರ್ತತೇ । ತಥಾ ಹರಿರ್ನಾರಾಯಣೋಽಪಿ ।

'ಶ್ವಾಸದಲ್ಲಿ ಬ್ರಹ್ಮ, ವಾಯು, ಹರಿ ಮೂವರೂ ಹಂಸರೂಪದಿಂದ ನಿಯಾಮಕರಾಗಿದ್ದಾರೆ'—ಎಂದು ಅಡವಿ ಆಚಾರ್ಯರ ಷೋಡಶಿ ಗ್ರಂಥದಲ್ಲಿ ಹೇಳಿದೆ ಅದರಿಂದ

ಮೂವರೂ ಶ್ವಾಸಜಪ ಮಾಡುತ್ತಾರೆ ಹರಿ ಜಪಿಸುವುದು ಬ್ರಹ್ಮವಾಯುಗಳಿಂದ ಮತ್ತು ಅವರ ದ್ವಾರಾ ಎಲ್ಲ ಜೀವರಿಂದ ಜಪ ಮಾಡಿಸುವುದಕ್ಕಾಗಿ ಬ್ರಹ್ಮ ಜಪಿಸುವುದರಿಂದ ಮೋಕ್ಷದಲ್ಲಿ ಆನಂದಾತಿಶಯ ವಾಯು ಜಪಿಸುವುದರಿಂದ ಬ್ರಹ್ಮಪದವಿಲಾಭ ವಾದಿ-ರಾಜರು ವೈಕುಂಠವರ್ಣನೆಯಲ್ಲಿ ಹೀಗೆ ಹೇಳಿದ್ದಾರೆ—

ಆರು ನೂರು ಕೂಡಿ ಇಪ್ಪತ್ತೊಂದು ಸಾವಿರ ಮಂತ್ರಶ್ವಾಸಜಪವ
ಮಾರುತಿ ಈರೇಳು ಲೋಕದ ಜೀವರೊಳೋರಂತೆ ಮಾಡಿ ಮೆಚ್ಚಿಸುವ
ಇಂಥ ಭಕ್ತನಿಗೆ ಬ್ರಹ್ಮಪಟ್ಟವನು ಶ್ರೀಕಾಂತ ಕಟ್ಟುವುದೊಂದಚ್ಚರಿಯೆ?

ಹೀಗೆ ಶ್ವಾಸಜಪ ವಾಯುವಿಗೆ ಬ್ರಹ್ಮಪದವಿಸಾಧನೆಯಾಗುವುದರಿಂದ ವಾಯುವೆ ಶ್ವಾಸಜಪ ಮಾಡುವವನೆಂದು ಪ್ರಸಿದ್ಧಿ ವಸ್ತುತಃ ಬ್ರಹ್ಮನೂ ಜಪಿಸುವುದರಿಂದ ಈ ವಂದನೆ ಅವನಿಗೂ ಸಲ್ಲುತ್ತದೆ

ನಾವು ದಿನ ಒಂದಕ್ಕೆ ಸಹಜವಾಗಿ ನಡೆಸುವ ಇಪ್ಪತ್ತೊಂದು ಸಾವಿರದಾರುನೂರು ಶ್ವಾಸಗಳೆ ವಾಯು ನಡೆಸುವ ಶ್ವಾಸಜಪಗಳು ಜಪಿಸುವ ಮಂತ್ರ ಹಂಸಮಂತ್ರ ಉಸಿರನ್ನು ಹೊರಗೆ ಬಿಡುವುದು, ಒಳಗೆ ತೆಗೆದುಕೊಳ್ಳುವುದು, ಈ ಎರಡರ ನಡುವಿನ ವಿರಾಮಕಾಲ ಎಂದು ಶ್ವಾಸಕಾಲದಲ್ಲಿ ಮೂರು ಭಾಗಗಳಿವೆ ಇವು ಕ್ರಮವಾಗಿ 'ಹಂಸಃ ಸೋಹಂ ಸ್ವಾಹಾ' ಎಂಬ ಮೂರು ಮಂತ್ರಗಳು ಸೇರಿ ಉಂಟಾದ ಒಂದು ಮೂಲಮಂತ್ರ ಇದಕ್ಕೆ ಋಷಿ ಬ್ರಹ್ಮ ದೇವತೆ ಹಂಸರೂಪಿ ನಾರಾಯಣ ಅವನನ್ನು ಹೀಗೆ ಧ್ಯಾನಿಸಬೇಕು

'ಮೇಲಿನ ಎರಡು ಕೈಗಳಲ್ಲಿ ಸೂರ್ಯಚಂದ್ರರನ್ನು ಹಿಡಿದಿದ್ದಾನೆ ಕೆಳಗಿನ ಎರಡು ಕೈಗಳಲ್ಲಿ ಶಂಖಚಕ್ರಗಳು ಸಾವಿರ ಚಂದ್ರರಂತೆ ಹೊಳೆವ ಶುಭ್ರ ಕಾಂತಿ ಮೈಗೆ ಚಂದ್ರ-ಮಂಡಲದಿಂದ ಸುರಿವ ಅಮೃತಧಾರೆಯ ಸೇಚನೆ ಹೀಗೆ ಚಂದ್ರಮಂಡಲದಲ್ಲಿ ರಮಾ-ಸಹಿತನಾಗಿ ಕುಳಿತಿದ್ದಾನೆ ಹಂಸರೂಪಿ ನಾರಾಯಣ

*ಸಾತ್ವರಿಗೆ ಸುಖ*

ತ್ರಿವಿಧ ಜೀವರಲ್ಲಿಯೂ ವಾಯು ಒಂದೇ ರೀತಿಯಾಗಿ ಈ ಶ್ವಾಸಜಪವನ್ನು ತಾನು ಮಾಡಿ ಅವರಿಂದಲೂ ಮಾಡಿಸುತ್ತಾನೆ ಆಗ ಸಾತ್ವಿಕರು 'ಹಂಸಃ=ಶ್ರೀಹರಿ ನಿರ್ದೋಷ-ಗುಣಸ್ವರೂಪನಾಗಿದ್ದಾನೆ ಸೋऽಹಂ=ನಾನು ಆವನ ಪ್ರತಿಬಿಂಬ, ಅವನು ಬಿಂಬ ಸ್ವಾಹಾ =ಅವನು ನಾನು ಭೋಗಿಸುವ ವಿಷಯಪದಾರ್ಥಗಳಲ್ಲಿರುವ ಸ್ವಾದ್ವರಸವನ್ನು ಸ್ವೀಕರಿಸು-ತ್ತಾನೆ' ಎಂದು ಚಿಂತಿಸುತ್ತಾರೆ ಆದರಿಂದ ಅವರಿಗೆ ಶಾಶ್ವತಸುಖ ನೀಡುತ್ತಾನೆ ವಾಯು ಅಧಮಜೀವರು 'ಸೋऽಹಂ' ಎಂದು ಅಬೇದವನ್ನೇ ಚಿಂತಿಸುವುದರಿಂದ ಅಪಾರ ನಿತ್ಯದುಃಖವನ್ನೇ ನೀಡುತ್ತಾನೆ ನಿತ್ಯ ಸಂಸಾರಯೋಗ್ಯರಾದ ಮಿಶ್ರಜೀವರು ಕೆಲವೊಮ್ಮೆ ಸಾತ್ವಿಕರಂತೆ ಕೆಲವೊಮ್ಮೆ ಅಧಮರಂತೆ ತಿಳಿದು ಭಗವತ್ಸ್ವರೂಪದ ಬಗ್ಗೆ ಸಂದೇಹಪಡು-

ವುದರಿಂದ ಅವರಿಗೆ ನಿತ್ಯಸಂಸಾರ ನೀಡುತ್ತಾನೆ ವಾಯು ಎಲ್ಲರಲ್ಲಿಯೂ 'ಸೋऽಹಂ' ಉಪಾಸನೆ ಮಾಡುತ್ತಿದ್ದರೂ ಅನುಸಂಧಾನ 'ಬಿಂಬೋऽಸಿ ಪ್ರತಿಬಿಂಬೋऽಸ್ಮಿ' ಎಂದೇ ಇರುತ್ತದೆ ಈ ಅಭಿಪ್ರಾಯದಿಂದ ದಾಸರು ಶ್ವಾಸಸಂಧಿಯಲ್ಲಿ ಹೀಗೆ ಹೇಳಿದ್ದಾರೆ—

ಸುರವಿರೋಧಿಗಳೊಳಗೆ ನೆಲೆಸಿ-
ದ್ದರ ವಿದೂರ ತಮೋಧಿಕಾರಿಗ-
ಳಿರವರಿತು ಸೋಹಮ್ಮುಪಾಸನೆ ಮಾಳ್ಪನವರಂತೆ ॥

ಗರುಡಪುರಾಣದಲ್ಲಿ ಈ ಶ್ವಾಸಮಂತ್ರವನ್ನು 'ಅಜಪಾ ಗಾಯತ್ರೀ' ಎಂದು ಕರೆಯಲಾಗಿದೆ

ಅಜಪಾ ನಾಮ ಗಾಯತ್ರೀ ಮುನೀನಾಂ ಮೋಕ್ಷದಾಯಿನೀ ।
ಅಸ್ಯಾಃ ಸಂಕಲ್ಪಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥

'ಉಚ್ಚಾರಣರೂಪವಾದ ಜಪವಿಲ್ಲದೆ, ಕೇವಲ ಶ್ವಾಸರೂಪವಾಗಿಯೆ ಜಪಿಸುವುದರಿಂದ 'ಅಜಪಾ' ಎಂದೂ, ಗಾಯತ್ರೀಛಂದಸ್ಸಿನಲ್ಲಿರುವುದರಿಂದ 'ಗಾಯತ್ರೀ' ಎಂದೂ ಎನಿಸುತ್ತದೆ, ಈ ಹಂಸಮಂತ್ರ ಉಚ್ಚಾರಣರೂಪ ಜಪ ಮಾಡದೆ ಕೇವಲ ಸ್ವಾಭಾವಿಕವಾಗಿ ನಡೆಯುವ ಶ್ವಾಸರೂಪ ಜಪವನ್ನು ಸಂಕಲ್ಪಿಸಿದ ಮಾತ್ರಕ್ಕೇ ಸಕಲ ಪಾಪಪರಿಹಾರವಾಗುತ್ತದೆ'

ಸಂಪ್ರದಾಯದಲ್ಲಿ ಹತ್ತು ಬಾರಿ ಹಂಸಮಂತ್ರವನ್ನು ಪ್ರತ್ಯೇಕ ಉಚ್ಚರಿಸಿ ಜಪಿಸುವುದುಂಟು ಶ್ವಾಸ ಕೇವಲ ಶ್ವಾಸವಲ್ಲ, ಅದು ತಿದಿಯಲ್ಲಿಯೂ ಉಂಟು ನಮ್ಮಲ್ಲಿ ಅದು ಪವಿತ್ರವಾದ ಹಂಸಮಂತ್ರಜಪರೂಪವಾದುದು ಎಂಬ ಅನುಸಂಧಾನ ತಂದುಕೊಳ್ಳುವುದಕ್ಕಾಗಿ ಈ ಜಪವಿರಬಹುದು

ಸಂಕಲ್ಪಮಾತ್ರದಿಂದಲೆ ಸಕಲಪಾಪಪರಿಹಾರವೆಂದರೆ ಕೃಷ್ಣಾರ್ಪಣ ಬೇಡವೆಂದಲ್ಲ ಅದಿಲ್ಲದೆ ಫಲವಿಲ್ಲ ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಹೇಳುತ್ತಾರೆ—

ಶ್ವಾಸರೂಪೋ ಜಪೋ ನಿತ್ಯಮುಭಯೋರ್ವಿದ್ವದಜ್ಞಯೋಃ ।
ಏಕವಿಂಶತ್ಸಹಸ್ರಾತ್ಮಾ ಸಷಟ್‌ಶತಮಹರ್ನಿಶಮ್ ॥
ಅರ್ಪಣೀಯೋ ಹರೌ ನಿತ್ಯಂ ಪ್ರಾತರ್ಯೋಗೋ ಮಹಾನಯಮ್ ॥

'ಜ್ಞಾನಿ ಅಜ್ಞಾನಿಗಳಿಬ್ಬರಲ್ಲಿಯೂ ಕೇವಲ ಶ್ವಾಸರೂಪವಾಗಿ ವಾಯು ಮಾಡಿ, ಮಾಡಿಸುವ ಈ ಹಂಸಮಂತ್ರಜಪ ಪ್ರತಿಯೊಬ್ಬನಲ್ಲಿ ಒಂದು ದಿನಕ್ಕೆ ಇಪ್ಪತ್ತೊಂದು ಸಾವಿರದ ಆರುನೂರು ಬಾರಿ ನಡೆಯುತ್ತದೆ ಪ್ರತಿದಿನ ಬೆಳಿಗ್ಗೆ ಹಿಂದಿನ ದಿನ ಮಾಡಿದ ಜಪವನ್ನು ಕೃಷ್ಣಾರ್ಪಣ ಮಾಡಬೇಕು, ಮುಂದಿನ ಜಪವನ್ನೂ ಸಂಕಲ್ಪಿಸಬೇಕು'

ಕೃಷ್ಣಾರ್ಪಣಕಾಲದಲ್ಲಿ ಹೀಗೆ ಹೇಳಬೇಕು—

ಮುಖ್ಯಪ್ರಾಣೇನ ಮದ್ದೇಹೇ ಮಂತ್ರತ್ರಯಜಪಃ ಸದಾ ।
ಅನುಗ್ರಹಾಯ ಮೇ ವಿಷ್ಣುಪ್ರೀತಯೇ ಕ್ರಿಯತೇ ಓಂ ಸಃ ॥

ಏಕವಿಂಶತ್‌ಸಹಸ್ರಾತ್ಮಾ ಸಷಟ್‌ಶತಮಹರ್ನಿಶಮ್ ।
ತತ್ ಸರ್ವಂ ವಿಷ್ಣುಪೂಜಾಸ್ತು ಪ್ರೀಯೇತಾಂ ಪ್ರಾಣಮಾಪತೀ ॥

'ಮುಖ್ಯಪ್ರಾಣನು ನನ್ನ ದೇಹದಲ್ಲಿ ಮಂತ್ರತ್ರಯಮಾಲಾರೂಪವಾದ ಹಂಸಮಂತ್ರವನ್ನು ನನ್ನ ಮೇಲೆ ಅನುಗ್ರಹ ಮಾಡುವುದಕ್ಕಾಗಿ ವಿಷ್ಣುಪ್ರೀತಿಗಾಗಿ ದಿನಕ್ಕೆ ೨೧,೬೦೦ ಬಾರಿ ಜಪಿಸುತ್ತಾನೆ ಅದೆಲ್ಲವೂ ವಿಷ್ಣುವಿನ ಆರಾಧನೆ ಎನಿಸಲಿ ಆ ಪ್ರಾಣನೂ ಹರಿಯೂ ಸುಪ್ರೀತರಾಗಲಿ'

ಸಂಕಲ್ಪಕಾಲದಲ್ಲಿ ಹೀಗೆ ಹೇಳಬೇಕು—

ಯತ್‌ಪ್ರಾಣ್ಯಾತ್ ಯದಪಾನ್ಯಾಚ್ಚ ತಾಭ್ಯಾಂ ಪರಮಪೂರುಷಮ್ ।
ಉಪಾಸೇ ಮುಖ್ಯಯೋಗೇನ ಸ ಹಂಸಃ ಪ್ರೀಯತಾಂ ಹರಿಃ ॥

'ಉಚ್ಛ್ವಾಸನಿಶ್ವಾಸರೂಪವಾದ ಶ್ವಾಸಜಪದಿಂದ ಹಂಸಮಹಾಮಂತ್ರದ ಮೂಲಕ ಪುರು-ಷೋತ್ತಮ ನಾರಾಯಣನನ್ನೂ ಜೀವೋತ್ತಮ ವಾಯುವನ್ನೂ ಆರಾಧಿಸುತ್ತೇನ ಹಂಸ-ರೂಪರಾದ ಆ ಹರಿವಾಯುಗಳು ಸುಪ್ರೀತರಾಗಲಿ' ಈ ಶ್ಲೋಕದಲ್ಲಿ ಹರಿಶಬ್ದ ಹರಿವಾಯು ಉಭಯಾರ್ಥಕ ಹಂಸಶಬ್ದ ಉತ್ತಮಾರ್ಥಕ ಪರಮಪುರುಷ ಶಬ್ದವೂ ಪುರುಷೋತ್ತಮ ಜೀವೋತ್ತಮ ಉಭಯಾರ್ಥಕ

ಕೃಷ್ಣಾರ್ಪಣದಲ್ಲಿ ಒಂದು ವಿಶೇಷವನ್ನು ಗರುಡಪುರಾಣ ಹೀಗೆ ಹೇಳುತ್ತದೆ—

ಗಣೇಶಂ ಚ ವಿಧಿಂ ವಿಷ್ಣುಂ ಶಿವಂ ಜೀವಂ ಗುರುಂ ತತಃ ।
ವ್ಯಾಪಕಂ ಚ ಪರಂ ಬ್ರಹ್ಮ ಕ್ರಮಾಚ್ಚಕ್ರೇಷು ಚಿಂತಯೇತ್ ॥
ಏತಾನ್ ಚಕ್ರಗತಾನ್ ಬ್ರಹ್ಮಮಯೂಖಾನ್ ಮುನಯೋಽಮರಾನ್ ।
ಸತ್ಸಂಪ್ರದಾಯವೇತ್ತಾರಶ್ಚಿಂತಯಂತ್ಯಾರುಣೋದಯಮ್ ॥

'ಸುಷುಮ್ನಾನಾಡಿಯಲ್ಲಿರುವ ಮೂಲಾಧಾರ ಸ್ವಾಧಿಷ್ಠಾನ ಮಣಿಪೂರ ಅನಾಹತ ವಿಶುದ್ಧ ಆಜ್ಞಾ ಸಹಸ್ರಾರ ಕಮಲಗಳಲ್ಲಿ ಕ್ರಮವಾಗಿ ಗಣೇಶ, ಬ್ರಹ್ಮ, ವಿಷ್ಣು, ಶಿವ, ಜೀವ, ಗುರು, ಪರಬ್ರಹ್ಮರನ್ನು ಚಿಂತಿಸಬೇಕು ಈ ಗಣೇಶ ಮುಂತಾದವರು ಪ್ರಸಿದ್ಧ ದೇವತೆಗಳಲ್ಲ ಅವೇ ಹೆಸರುಗಳುಳ್ಳ ಅವರ ಅಂತರ್ಗತವಾದ ಹಂಸರೂಪಿ ನಾರಾಯಣನ ಬೇರ ಬೇರ ರೂಪ-ಗಳು ಜ್ಯೋತಿಃಸ್ವರೂಪನಾದ ಅವನ ಬೇರೆ ಬೇರೆ ಕಿರಣಗಳು'

ಷಟ್‌ಶತಂ ಗಣನಾಥಾಯ ಷಟ್‌ಸಹಸ್ರಂ ತು ವೇಧಸೇ ।
ಷಟ್‌ಸಹಸ್ರಂ ಚ ಹರಯೇ ಷಟ್‌ಸಹಸ್ರಂ ಹರಾಯ ಚ ॥
ಜೀವಾತ್ಮನೇ ಸಹಸ್ರಂ ಚ ಸಹಸ್ರಂ ಗುರವೇ ತಥಾ ।
ಚಿದಾತ್ಮನೇ ಸಹಸ್ರಂ ಚ ಜಪಸಂಖ್ಯಾಂ ನಿವೇದಯೇತ್ ॥

'ಗಣೇಶನಿಗೆ ಆರು ನೂರು, ಬ್ರಹ್ಮನಿಗೆ ಆರು ಸಾವಿರ, ವಿಷ್ಣುವಿಗೆ ಆರು ಸಾವಿರ, ಶಿವನಿಗೆ ಆರು ಸಾವಿರ, ಜೀವನಿಗೆ ಒಂದು ಸಾವಿರ, ಗುರುವಿಗೆ ಒಂದು ಸಾವಿರ, ಪರಬ್ರಹ್ಮನಿಗೆ

ಒಂದು ಸಾವಿರ ಹೀಗೆ ೨೧,೬೦೦ ಶ್ವಾಸಜಪಗಳನ್ನು ಏಳು ವಿಭಾಗ ಮಾಡಿ ಏಳುರೂಪದ ಶ್ರೀಹರಿಗೆ ಸಮರ್ಪಿಸಬೇಕು

**ಆರು ಮೂರೆರಡೊಂದು ಸಾವಿರ**

ಇಲ್ಲಿ ಒಂದು ಸಮಸ್ಯೆ ಇದಿರಾಗುತ್ತದೆ ನಾಡೀಪ್ರಕರಣಸಂಧಿಯಲ್ಲಿ ಹೀಗೆ ಇದೆ—

ಈರೆರಡು ದೇಹಗಳೊಳಿದ್ದು ಸ-
ಮೀರದೇವನು ಶ್ವಾಸಜಪ ನಾ-
ನೂರಧಿಕವಾಗಿಪ್ಪ ಎಂಬತ್ತಾರು ಸಾಹಸ್ರ ।
ತಾ ರಚಿಸುವನು ದಿವಸ ಒಂದಕೆ
ಮೂರು ವಿಧ ಜೀವರೊಳಗಿದ್ದು ಖ-
ರಾರಿ ಕರುಣಾಬಲವಿದೆಂತುಟೊ ಪವನರಾಯನೊಳು ॥

'ಪವನರಾಯ ಜೀವನ ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲ ದೇಹಗಳೆಂಬ ನಾಲ್ಕು ದೇಹಗಳಲ್ಲಿ ಪ್ರತಿಯೊಂದರಲ್ಲಿ ದಿನಕ್ಕೆ ೨೧,೬೦೦ ರಂತೆ ಒಟ್ಟು ೮೬,೪೦೦ ಶ್ವಾಸಜಪವನ್ನು ತ್ರಿವಿಧ ಜೀವರೊಳಗಿದ್ದು ನಡೆಸುತ್ತಾನೆ ಇದು ಶ್ರೀಹರಿಯ ಅಪಾರವಾದ ಕರುಣೆಯ ಬಲ'

ಆದರೆ ನಾವು ೨೧,೬೦೦ ಶ್ವಾಸಜಪಗಳನ್ನೇ ಹರಿಗೆ ಅರ್ಪಿಸುತ್ತೇವೆ

ಇದಕ್ಕೆ ಕಾರಣ ಹೀಗಿರಬಹುದು ಸ್ವರೂಪಶರೀರ ಮುಂತಾದವು ಸಾಧನಶರೀರ-ಗಳಲ್ಲ, ಸ್ಥೂಲ ಶರೀರದಿಂದಲೆ ಮೋಕ್ಷಸಾಧನೆ ಸ್ಥೂಲಶರೀರಸಂಬಂಧವಾಗಿಯೆ ಎಲ್ಲ ಷೋಡಶ ಸಂಸ್ಕಾರಗಳು, ವರ್ಣಾಶ್ರಮಾಚಾರ ವಿಧಿನಿಯಮಗಳು, ವ್ರತೋಪವಾಸಾದಿ ಕರ್ಮಗಳು ಅದರಿಂದ ಸ್ಥೂಲ ಶರೀರದಲ್ಲಿ ಮಾಡುವ ಶ್ವಾಸಜಪವನ್ನೇ ಅರ್ಪಿಸುತ್ತೇವೆ ಸ್ವರೂಪಶರೀರ ಮುಂತಾದವುಗಳಲ್ಲಿಯೂ ಮುಖ್ಯಪ್ರಾಣ ಜಪ ಮಾಡಿಸುತ್ತಾನೆ ಎಂಬ ಮಹಿಮೆಯನ್ನು ಮರೆಯದೆ ಕೊಂಡಾಡುತ್ತೇವೆ

ಸ್ಥೂಲ ಶರೀರದಲ್ಲಿ ಶ್ವಾಸ ಬೇಕು ಅನಾದಿಯಾದ ಸ್ವರೂಪ, ಲಿಂಗ ಶರೀರಗಳಲ್ಲಿ ಏಕೆ? ಶ್ವಾಸ ನಡೆಯುವುದು ಶರೀರಧಾರಣೆಗಾಗಿ ತಾನೆ? ಎನ್ನುವ ಪ್ರಶ್ನೆ ಸಹಜ ಆದರೆ ಶರೀರ ಅನಾದಿಯಾದರೂ ಶರೀರಧಾರಣೆಗೆ ಶ್ವಾಸ ಬೇಕೇಬೇಕು ನಿತ್ಯವಾಗಿದ್ದಲ್ಲಿ ಬೇಡ-ವೆನ್ನಬಹುದಿತ್ತು ನಿತ್ಯವಲ್ಲ, ಲಿಂಗದೇಹ ಸ್ವರೂಪಶರೀರ ನಿತ್ಯ ಅದಕ್ಕೆ ಶ್ವಾಸ ಬೇಕಾಗಿಲ್ಲ ನಿಜ, ಆದರೆ ಸ್ಥೂಲಶರೀರದ ಎಲ್ಲ ಕಾರ್ಯವೂ ಸ್ವರೂಪಾದಿಮಿಶ್ರವಾದ ಸ್ಥೂಲಶರೀರ-ದಿಂದಲೇ ಆಗುತ್ತದೆ ಕೇವಲ ಸ್ಥೂಲಶರೀರದಿಂದಲ್ಲ

ಸ್ವರೂಪೇಂದ್ರಿಯಸಂಮಿಶ್ರೈರ್ಜಡೈರೇವೇಂದ್ರಿಯೈಃ ಸದಾ ।
ಆಮೋಕ್ಷಂ ತು ಪ್ರವರ್ತಂತೇ ಸಾಕ್ಷಿಣಾ ಚ ಕ್ವಚಿತ್ ಕ್ವಚಿತ್ ॥

'ಸ್ವರೂಪೇಂದ್ರಿಯಗಳಿಂದ ಮಿಶ್ರಿತವಾದ ಪ್ರಾಕೃತ ಇಂದ್ರಿಯಗಳಿಂದಲೆ ಜೀವರ ಪ್ರಾಯಃ ಎಲ್ಲಾ ಪ್ರವೃತ್ತಿ ಸಂಸಾರದಲ್ಲಿ ನಡೆಯುತ್ತದೆ ಸುಖಾನುಭವದಂಥ ಕೆಲವು ವಿಷಯಗಳಲ್ಲಿ ಮಾತ್ರ ಕೇವಲ ಸಾಕ್ಷೀಂದ್ರಿಯದಿಂದ ಪ್ರವೃತ್ತಿ ಉಂಟು' ಎಂದು ಸತತ್ವರತ್ನಮಾಲೆಯಲ್ಲಿ ಹೇಳುವಂತೆ ಶ್ವಾಸೋಚ್ಛ್ವಾಸಾದಿಗಳು ಸ್ವರೂಪ, ಲಿಂಗ, ಅನಿರುದ್ಧ ದೇಹಗಳಲ್ಲಿಯೂ ಉಂಟೆನ್ನಬೇಕು ವಾದಿರಾಜರು ವೈಕುಂಠವರ್ಣನೆಯಲ್ಲಿ ಜೀವರಿಗೆ ಅನಾದಿಲಿಂಗಶರೀ-ರದಲ್ಲಿ ಶ್ವಾಸಕ್ರಿಯೆ ನಡೆಯುತ್ತದೆ ಎಂದಿದ್ದಾರೆ—

> ಅಚ್ಯುತನುದರದಿ ಲಿಂಗದೇಹದ ಕಣ್ಣ ಮುಚ್ಚಿ ಜೀವರು ನಿದ್ರೈಗೈಯೆ
> ಎಚ್ಚತ್ತಿಹನು ಗಡ ಮುಖ್ಯಪ್ರಾಣನು ಒಬ್ಬ ಸ್ವಚ್ಛ ಚಿತ್ತದ ಮುಕ್ತರೊಳಗೆ ।
> ದೇಹಿ ನಿದ್ರಿತನಾಗೆ ಅವನ ದೇಹದೊಳಿಹ ದೇವರು ನಿದ್ರೆಗೈಯೆ
> ಹೋಹ ಬಾಹ ಶ್ವಾಸಗಳಾಗ ನಡೆಸುವನೀ ಹದ ಲಯದ ಕಾಲದಲಿ ॥

ಬ್ರಹ್ಮಪ್ರಳಯಕಾಲದಲ್ಲಿ ಅನಾದಿಲಿಂಗಶರೀರ ಹೊರತು ಸಾದಿಯಾದ ಯಾವ ಶರೀ-ರವೂ ಜೀವರಿಗೆ ಇಲ್ಲ ಆಗ ಲಿಂಗಶರೀರದಲ್ಲಿ ಕಣ್ಣುಮುಚ್ಚಿ ಜೀವರು ನಿದ್ರೆ ಮಾಡುವಾಗ ಬೇರೆ ತತ್ವದೇವತೆಗಳೂ ನಿದ್ರೆ ಮಾಡುತ್ತಿರುತ್ತಾರೆ ವಾಯು ಒಬ್ಬನೆ ಶ್ವಾಸಕಾರ್ಯ ನಡೆಸು-ತ್ತಾನೆ ಸೃಷ್ಟಿಕಾಲದಲ್ಲಿ ಸ್ಥೂಲಶರೀರದಲ್ಲಿ ಹೇಗೋ ಹಾಗೆ ಲಯಕಾಲದಲ್ಲ ಲಿಂಗ ದೇಹ-ದಲ್ಲಿ ಅದರಿಂದ ಲಿಂಗಶರೀರದಲ್ಲಿ ಶ್ವಾಸಕಾರ್ಯವಿಲ್ಲವೆನ್ನಲಾಗದು

'ಈರೆರಡು' ದೇಹಗಳೆಂದರೆ ಜೀವರ ಒಂದು ಸ್ಥೂಲ ಶರೀರ, ಅದರಲ್ಲಿ ಪ್ರೇರಕರಾದ ದೇವತೆಗಳ, ದೈತ್ಯರ ಮತ್ತು ನಿತ್ಯಸಂಸಾರಿಗಳ ಮೂರು ದೇಹಗಳು ಹೀಗೆ ನಾಲ್ಕು ಶರೀರ-ಗಳೆಂದಿಟ್ಟುಕೊಂಡರೆ, ದೇವ, ದೈತ್ಯ, ನಿತ್ಯ ಸಂಸಾರಿಗಳ ದೇಹಗಳು ಎಷ್ಟೋ ಇವೆ ಮೂರೆ ಅಲ್ಲ ಒಟ್ಟು ನಾಲ್ಕು ಶರೀರವೆಂದು ಪರಿಗಣಿಸುವುದಾಗಲಿ, ನಾಲ್ಕು ಶರೀರಗಳಲ್ಲಿ ಒಟ್ಟು ೮೬,೪೦೦ ಶ್ವಾಸಜಪಗಳೆಂದು ಎಣಿಸುವುದಾಗಲಿ ಶಕ್ಯವಾಗಲಾರದು

***ಅಬ್ಜಜಕಲ್ಪಪರ್ಯಂತ***

'ಅಬ್ಜಜಕಲ್ಪಪರ್ಯಂತ ತಾ ರಚಿಸಿ' ಎಂಬ ಮಾತಿಗೆ ಈಗ, 'ಒಂದು ಬ್ರಹ್ಮಕಲ್ಪ-ಪರ್ಯಂತ ಶ್ವಾಸಜಪ'ವೆಂದು ಅಭಿಪ್ರಾಯವಿಲ್ಲ ಸೃಷ್ಟಿಕಾಲದ ಒಂದು ಬ್ರಹ್ಮಕಲ್ಪ ಮಾತ್ರ-ವಲ್ಲದೆ ಪ್ರಳಯಕಾಲದ ಒಂದು ಬ್ರಹ್ಮಕಲ್ಪದಲ್ಲಿಯೂ ಶ್ವಾಸಜಪವಿದೆ

ವಸ್ತುತಃ ಶ್ವಾಸಜಪವನ್ನು ವಾಯುಮಾತ್ರವೆ ಅಲ್ಲ, ಬ್ರಹ್ಮನೂ ಮಾಡುವುದರಿಂದ ಒಬ್ಬ ಋಜುಯೋಗಿ ವಾಯುಪದವಿಯಲ್ಲಿ ಸೃಷ್ಟಿಲಯಕಾಲಗಳ ಎರಡು ಬ್ರಹ್ಮಕಲ್ಪಗಳಲ್ಲಿಯೂ, ಬ್ರಹ್ಮಪದವಿಯಲ್ಲಿ ಸೃಷ್ಟಿಲಯಕಾಲಗಳ ಎರಡು ಬ್ರಹ್ಮಕಲ್ಪಗಳಲ್ಲಿಯೂ ಒಟ್ಟು ನಾಲ್ಕು ಬ್ರಹ್ಮ ಕಲ್ಪಗಳಲ್ಲಿ ಶ್ವಾಸಜಪ ನಡೆಸುತ್ತಾನೆ 'ಅಬ್ಜಜಕಲ್ಪಪರ್ಯಂತ' ಎಂದು ಮಾತ್ರ ಹೇಳಿ ಎಷ್ಟು ಅಬ್ಜಜಕಲ್ಪ ಎಂದು ಹೇಳದಿರುವುದರಲ್ಲಿ ಈ ಸೂಚನೆ ಇದೆ

'ಗುರು ಪವಮಾನ' ಎಂಬಲ್ಲಿಯೂ ಪವಮಾನಪದವಿಯಲ್ಲಿ ಈಗ ಇರುವವನಿಗೂ, ಹಿಂದೆ ಇದ್ದವನಿಗೂ ಜೊತೆಗೇ ನಮನ ಸಲ್ಲುತ್ತದೆ

ಉಸಿರಾಟ ನಮಗೆ ಬದುಕಲು ಅತ್ಯಾವಶ್ಯಕ, ಸ್ವಾಭಾವಿಕ ಸ್ವಲ್ಪ ಕಾಲವೂ ಉಸಿರಾಡದಿರಲಾರೆವು ಎನ್ನುವಷ್ಟು ಸ್ವಾಭಾವಿಕ ಇಂಥ ಉಸಿರಾಟವನ್ನೇ ಮಹಾಮಂತ್ರಜಪವನ್ನಾಗಿಸಿ ಹರಿಗೆ ಸಮರ್ಪಿಸಿ, ಅದನ್ನು ನಾವು ತಿಳಿದ ಮಾತ್ರಕ್ಕೆ, ಅನಂತಫಲ ನೀಡುವ ಕರುಣಾಮಯರಾದ ಆ ಬ್ರಹ್ಮವಾಯುಗಳು ನನ್ನ ಈ ಗ್ರಂಥರಚನೆಯನ್ನು ಉಸಿರಾಟದಷ್ಟೇ ಸಹಜವಾಗಿ ಸುಲಭವಾಗಿ ಕೈಗೂಡಿಸಲಿ ಗ್ರಂಥವನ್ನು ಹರಿಗೆ ಸಮರ್ಪಿಸಿ ಗ್ರಂಥಕರ್ತನಾದ ನನಗೂ ಅಧ್ಯೇತೃಗಳಿಗೂ ಅನಂತಫಲ ನೀಡಿ ಕಾಪಾಡಲಿ ಎಂದು ದಾಸರು ಈ ಪದ್ಯದಲ್ಲಿ ಬೇಡುತ್ತಿದ್ದಾರೆ

**ವಾಯುವಿಗೆ ಜೀವಸ್ವರೂಪದಲ್ಲಿ ಪ್ರವೇಶ ಉಂಟೆ?**

'ಈರೆರಡು ದೇಹಗಳೊಳಿದ್ದು, ಅಂದರೆ, ಜೀವಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲಗಳೆಂಬ ನಾಲ್ಕು ಶರೀರಗಳಲ್ಲಿದ್ದು ಸಮೀರದೇವನು ಶ್ವಾಸಜಪ ನಾನೂರಧಿಕವಾಗಿಪ್ಪ ಎಂಬತ್ತಾರು ಸಾಹಸ್ರ ತಾ ರಚಿಸುವನು' ಎಂದು ಹರಿಕಥಾಮೃತಸಾರ(೧೨-೪೪)ದಲ್ಲಿ ಹೇಳಿರುವುದನ್ನು ಒಪ್ಪುವುದು ಸುಲಭವಲ್ಲ

ಜೀವಾಂತರ್ಗತತ್ವ ವಾಯುವಿಗೆ ಇಲ್ಲವೆಂದು ಒಂದು ಅಭಿಪ್ರಾಯವಿದೆ—

'ಜೀವಸ್ವರೂಪ ಅಣುವಾಗಿದೆ ಬತ್ತದ ಕಾಳಿಗೆ ಹೊಟ್ಟಿನಂತೆ ಅನಾದಿಯಾದ ಲಿಂಗಶರೀರ ಜೀವಸ್ವರೂಪಶರೀರಕ್ಕೆ ಹೊದ್ದಿಕೆಯಾಗಿದೆ ಈ ಲಿಂಗಶರೀರ ತ್ರಿಗುಣಾತ್ಮಕ ಅದರಲ್ಲಿ ಮೂರು ಗುಣಗಳ ಮೂರು ಪರಿಚ್ಛೇದಗಳು, ಅಂದರೆ ಮಡಿಕೆಗಳಿವೆ ಸಾತ್ವಿಕ ಜೀವರಿಗೆ ಮೊದಲಿನ ಹೊದ್ದಿಕೆ ಸತ್ವಪರಿಚ್ಛೇದ ರಾಜಸರಿಗೆ ರಜಃಪರಿಚ್ಛೇದ ತಾಮಸರಿಗೆ ತಮಃಪರಿಚ್ಛೇದ ಸತ್ವಪರಿಚ್ಛೇದದಲ್ಲಿ ಅವ್ಯಕ್ತ, ಮಹತ್, ಅಹಂಕಾರ, ಮನಸ್, ಅರಿಷಡ್ವರ್ಗ, ಅಹಂಮಮತೆ ಈ ಆರು ಸೇರಿರುತ್ತದೆ ರಜಃಪರಿಚ್ಛೇದದಲ್ಲಿ ಹತ್ತು ಇಂದ್ರಿಯಗಳು, ತಮಃಪರಿಚ್ಛೇದದಲ್ಲಿ ಪಂಚಭೂತಗಳು, ಪಂಚ ತನ್ಮಾತ್ರೆಗಳು, ಪಂಚಪರ್ವ ಅವಿದ್ಯೆ, ಕಾಮಕರ್ಮಗಳು ಇವು ಸೇರಿವೆ

ಷೋಡಶಕಲಾತ್ಮಕವಾದುದು ಲಿಂಗಶರೀರ ಸತ್ವಪರಿಚ್ಛೇದ ಇಡಿಯಾಗಿ ಮನಸ್ಸೆಂಬ ಒಂದು ಕಲೆ ಎನಿಸುತ್ತದೆ ರಜಃಪರಿಚ್ಛೇದರೂಪವಾದ ಹತ್ತು ಇಂದ್ರಿಯಗಳು ಹತ್ತು ಕಲೆಗಳು ತಮಃಪರಿಚ್ಛೇದ ಇಡಿಯಾಗಿ ಪಂಚಭೂತಗಳೆಂಬ ಐದು ಕಲೆಗಳೆಂದು ವ್ಯವಹಾರ

ಈ ಲಿಂಗಶರೀರಕ್ಕೆ ಉತ್ಪತ್ತಿಯಾಗಲಿ ನಾಶವಾಗಲಿ ಇಲ್ಲ ಅನಾದಿಯಾಗಿದ್ದು ಅನಾದಿಕಾಲದಿಂದಲೂ ಜೀವನಿಗೆ ಅಂಟಿಕೊಂಡು ಬಂದಿದೆ ಮುಂದೆ ಅಪರೋಕ್ಷವಾದಾಗ,

ಪ್ರಾರಬ್ಧಕರ್ಮವೂ ನವೆದಾಗ ವಿರಜಾನದೀಸ್ನಾನದಿಂದ ಅದು ದೂರಾಗುವುದು ಹೀಗೆ ಅದು ದೂರವಾಗುವುದೇ ಲಿಂಗಭಂಗ, ಹೊರತು ನಾಶವಲ್ಲ

ಈ ಅನಾದಿಲಿಂಗಶರೀರದ ಮೇಲೆ ಸಾದಿಯಾದ ಇನ್ನೊಂದು ಲಿಂಗಶರೀರವಿದೆ 'ಸೃಜ್ಯಸೃಷ್ಟಾವೀಕ್ಷಾ ಬಭೂವ' ಎಂಬಂತೆ ಈ ಕಲ್ಪದಲ್ಲಿ ಸೃಷ್ಟಿಗೆ ಬರುವ ಜೀವರ ಅನಾದಿ-ಲಿಂಗಶರೀರದ ಮೂರನೆ ಪರಿಚ್ಛೇದದ ಮೇಲೆ ಗುಣತ್ರಯವೈಷಮ್ಯ ಉಂಟು ಮಾಡಿ ಚತುರ್ವಿಂಶತಿತತ್ತ್ವಾತ್ಮಕವಾದ ವೈಷಯಿಕ ಲಿಂಗಶರೀರವನ್ನು ಹರಿ ನಿರ್ಮಿಸುತ್ತಾನೆ ಇದಕ್ಕೆ ಅಣುಲಿಂಗಶರೀರವೆಂದೂ ಹೆಸರಿದೆ ಇದರ ವಿವರ ಪ್ರಕಾಶಸಂಹಿತೆಯಲ್ಲಿ ಇದೆ

ಅಣುಲಿಂಗಶರೀರದ ಮೇಲೆ ಜೀವಾಚ್ಛಾದಿಕಾ, ಪರಮಾಚ್ಛಾದಿಕಾಗಳೂ, ಮಹ-ತ್ತತ್ತ್ವಶರೀರ, ಅಹಂಕಾರತತ್ತ್ವಶರೀರ, ಅನಿರುದ್ಧಶರೀರಗಳೂ ಇರುತ್ತವೆ ಇವೆಲ್ಲವೂ ಜೀವ-ಸ್ವರೂಪದ ಆಕಾರಕ್ಕೆ ಅನುಗುಣವಾಗಿಯೆ ಇರುತ್ತದೆ ಕಲ್ಪದ ಆದಿಯಲ್ಲಿ ಭಗವಂತ ಇದನ್ನು ನಿರ್ಮಿಸಿರುತ್ತಾನೆ

ಇವೆಲ್ಲಕ್ಕಿಂತ ಹೊರಗೆ ಕಣ್ಣಿಗೆ ಕಾಣಿಸುವ ಸ್ಥೂಲಶರೀರ ಬರುತ್ತದೆ ಇದು ಜೀವ-ಸ್ವರೂಪಕ್ಕೆ ಅನುಗುಣವಾಗಿರಬೇಕೆಂಬ ನಿಯಮವಿಲ್ಲ ಕರ್ಮಾನುಗುಣವಾಗಿ ಬೇರೆ ಬೇರೆ ಬಗೆಯ ಶರೀರಗಳು ಬರುತ್ತವೆ ಅನ್ನಮಯ, ಪ್ರಾಣಮಯಾದಿ ಪಂಚಕೋಶಗಳು ಇದ-ರಲ್ಲಿಯೆ ಸೇರಿರುತ್ತವೆ

ಜೀವಸ್ವರೂಪಶರೀರದ ಹೃದಯದಲ್ಲಿ ಅಂತರಾತ್ಮನಾಮಕನಾದ ಬಿಂಬರೂಪಿ ಹರಿ ನಿಯಾಮಕನಾಗಿ ನೆಲೆಸಿದ್ದಾನೆ ಗರುಡಾದಿ ನಾಮಗಳಿಂದ ಅವನೆ ಬಹುರೂಪಿಯಾಗಿ ಸ್ವರೂಪೇಂದ್ರಿಯ ಅಂತಃಕರಣಗಳನ್ನು ನಿಯಂತ್ರಿಸುತ್ತಾನೆ ರಮಾಬ್ರಹ್ಮಾದಿ ದೇವತೆಗಳು ಯಾರೂ ಇಲ್ಲಿ ನಿಯಾಮಕರಾಗಿ ಪ್ರವೇಶಿಸುವುದಿಲ್ಲ ರಮೆಯೊಬ್ಬಳು ಪ್ರವೇಶಮಾಡಿ-ದರೂ ಅದು ನಿಯಮನಕ್ಕಾಗಿ ಅಲ್ಲ, ನಿಯಮನ ಮಾಡುತ್ತಿರುವ ಹರಿಯ ಸೇವೆಗಾಗಿ ಅನಾದಿಲಿಂಗಶರೀರಕ್ಕೆ ಅವಳೇ ಮುಖ್ಯಾಭಿಮಾನಿನಿ ಬ್ರಹ್ಮವಾಯ್ವಾದಿಗಳಿಗೆ ಅಲ್ಲಿಯೂ ಪ್ರವೇಶವಿಲ್ಲ

ವೈಷಯಿಕ ಲಿಂಗಶರೀರದಲ್ಲಿ ಬ್ರಹ್ಮವಾಯುಗಳೂ ಅವರ ಪತ್ನಿಯರೂ ಅಮುಖ್ಯಾಬಿ-ಮಾನಿಗಳಾಗಿ ಪ್ರವೇಶಿಸುತ್ತಾರೆ ಮುಖ್ಯಾಭಿಮಾನಿನಿ ರಮೆಯೆ ಇಲ್ಲಿ ರುದ್ರಾದಿಗಳಿಗೆ ಪ್ರವೇಶವಿಲ್ಲ ಅವರ ನಾಮಗಳಿಂದ ಬ್ರಹ್ಮವಾಯ್ವಾದಿಗಳೇ ಇರುತ್ತಾರೆ ಅವರಿಗೂ ಪ್ರವೇಶ-ಮಾತ್ರವೇ ಹೊರತು ಮುಖ್ಯನಿಯಾಮಕತ್ವವಿಲ್ಲ

ಮಹತ್ತತ್ತ್ವಶರೀರವೆ ಬ್ರಹ್ಮವಾಯುಗಳಿಗೆ, ಅವರ ಪತ್ನಿಯರಿಗೆ ವಾಸಸ್ಥಾನ ಅವರು ಅದಕ್ಕೆ ಮುಖ್ಯಾಭಿಮಾನಿಗಳು ಅಹಂಕಾರತತ್ತ್ವಶರೀರ, ಅನಿರುದ್ಧಶರೀರದಲ್ಲಿಯೆ ಸೇರು-

ತ್ತದೆ ಅದು ರುದ್ರಾದಿ ದೇವತೆಗಳ ವಾಸಸ್ಥಾನ ಇದರಲ್ಲಿ ತತ್ವಾಭಿಮಾನಿ ಅಸುರರೂ ಇರುತ್ತಾರೆ ಇವರೆಲ್ಲರ ಕಾರ್ಯಗಳು ಕಂಡುಬರುವುದು ಸ್ಥೂಲದೇಹದಲ್ಲಿ

ಅನಿರುದ್ಧಶರೀರದಲ್ಲಿ ಪಿಶಾಚಾದಿಗಳಿಗೆ ಪ್ರವೇಶವಿಲ್ಲ ಸ್ಥೂಲಶರೀರದಲ್ಲಿ ಅವರಿಗೂ ಪ್ರವೇಶ ಉಂಟು

ಹೀಗೆ ಎಲ್ಲ ಶರೀರಗಳಿಗಿಂತ ಒಳಗಿನದಾದ ಸ್ವರೂಪಶರೀರದಲ್ಲಿ ಸರ್ವೋತ್ತಮನಾದ ಹರಿಯೊಬ್ಬನೇ ನಿಯಾಮಕ ಅದರ ಹೊರಗೆ ಲಿಂಗಶರೀರಾದಿಗಳಲ್ಲಿ ತಾರತಮ್ಯಾನು-ಗುಣವಾಗಿ ರಮಾಬ್ರಹ್ಮಾದಿಗಳು ನಿಯಾಮಕರೆಂದು ತಿಳಿಯಬೇಕು ಇದಕ್ಕೆ ವ್ಯತಿರಿಕ್ತವಾಗಿ ಸ್ವರೂಪಶರೀರದಲ್ಲಿಯೂ ವಾಯುವಿಗೆ ನಿಯಾಮಕತ್ವವನ್ನು ಒಪ್ಪಲು ಸ್ಪಷ್ಟವಾದ ನಿರವ-ಕಾಶವಾದ ಪ್ರಮಾಣಗಳಿಲ್ಲ ಹಾಗೆ ಒಪ್ಪುವುದು ಯುಕ್ತಿಯುಕ್ತವೂ ಅಲ್ಲ

ಎಲ್ಲ ಜೀವರ ಸ್ವರೂಪಶರೀರವೂ ಅಣುಪರಿಮಾಣದಲ್ಲಿಯೆ ಇರುತ್ತದೆ ರಮಾ-ನಾರಾಯಣರಂತೆ ಅಣೋರಣೀಯ ಮಹತೋಮಹೀಯವಾಗುವ ಸಾಮರ್ಥ್ಯ ಬ್ರಹ್ಮಾ-ದಿಗಳಿಗೆ ಯಾರಿಗೂ ಇಲ್ಲ ಎಲ್ಲರ ಅಣುಪರಿಮಾಣವೂ ಸಮಾನವಾಗಿರುತ್ತದೆ ಒಂದು ಹೆಚ್ಚು ಒಂದು ಕಡಿಮೆಯೂ ಇರುವುದಿಲ್ಲ ವಾಯುವಿನ ಸ್ವರೂಪಶರೀರ ಬೇರೆ ಜೀವರ ಸ್ವರೂಪಶರೀರಕ್ಕಿಂತ ಹೆಚ್ಚು ಸೂಕ್ಷ್ಮವಾಗಿರುತ್ತಿದ್ದರೆ ಅವನು ಬೇರೆ ಜೀವರ ಸ್ವರೂಪ-ಶರೀರದಲ್ಲಿ ಪ್ರವೇಶಿಸುವುದು ಸಂಭವನೀಯವೆನಿಸುತ್ತಿತ್ತು ಆದರೆ ಹಾಗಿಲ್ಲ ಹನುಮಂತ ಸಾಗರಲಂಘನಕಾಲದಲ್ಲಿ ಮಹತ್ತಾದ ರೂಪ ಧರಿಸಿದುದು, ಲಂಕಾಪ್ರವೇಶಕಾಲದಲ್ಲಿ ಅತಿಸೂಕ್ಷ್ಮರೂಪ ತಾಳಿದುದು, ರುದ್ರಾದಿಗಳಿಗಿಂತ ಬ್ರಹ್ಮವಾಯುಗಳು ಹೆಚ್ಚು ಅಣುವಾಗ-ಬಲ್ಲರೆಂದು ಪ್ರಮಾಣವಚನಗಳು ಅಲ್ಲಲ್ಲಿ ಹೇಳಿರುವುದು ಎಲ್ಲವೂ ಅವರ ಸ್ಥೂಲಶರೀರ-ವಿಚಾರ ಸ್ವರೂಪಶರೀರದ ವಿಚಾರವಲ್ಲ ಯೋಗಪ್ರಭಾವದಿಂದ ಸ್ಥೂಲಶರೀರದಲ್ಲಿ ಮಾತ್ರವೆ ಅಣಿಮಮಹಿಮಾದಿ ಅಷ್ಟಸಿದ್ಧಿಗಳು ಕಂಡುಬರುತ್ತವೆ

ರಮಾನಾರಾಯಣರು ಅಣೋರಣೀಯ ಮಹತೋಮಹೀಯರಾದುದರಿಂದ ಜೀವಾಂತರ್ಗತತ್ವ ಅವರಿಗೆ ಸ್ವಾಭಾವಿಕ, ಯುಕ್ತಿಯುಕ್ತ ಜೀವರಿಗೆ ಅಂಥ ಶಕ್ತಿ ಇಲ್ಲ ಮುಕ್ತಿಯಲ್ಲಿಯೂ ಅವರ ಸ್ವರೂಪದಲ್ಲಿ ವೃದ್ಧಿಹ್ರಾಸಗಳಿಲ್ಲ ಎನ್ನುತ್ತದೆ ಪ್ರಕಾಶಸಂಹಿತೆ—

> ಮುಕ್ತಸ್ಯ ತು ಸ್ವರೂಪೇಣ ಹ್ಯಣೋರ್ವೃದ್ಧಿರ್ನ ಯುಜ್ಯತೇ ।
> ನೋ ಹಾನಿಃ ಪುನರಾವೃತ್ತಿಃ ॥

ಮುಕ್ತಿಯಲ್ಲಿಯೂ ವೃದ್ಧಿಹ್ರಾಸಗಳಿಲ್ಲವೆಂದ ಮೇಲೆ ಸಂಸಾರದಲ್ಲಿ ಅವು ಅತ್ಯಂತ ಅಸಂಭಾವಿತ

ವಾಯುವಿಗೆ ಎಲ್ಲ ಜೀವರಂತೆಯೆ ಲಿಂಗಶರೀರವಿದೆ ಅವನಿನ್ನೂ ಮುಕ್ತನಲ್ಲ ಅದ-ರಿಂದ ಅವನು ಜೀವಸ್ವರೂಪದಲ್ಲಿ ಪ್ರವೇಶಿಸಬೇಕೆಂದರೆ ಲಿಂಗಶರೀರಸಹಿತವಾಗಿಯೆ

ಪ್ರವೇಶಿಸಬೇಕು ಜೀವಚೈತನ್ಯದೊಳಗೆ ಜಡವಾದ ಲಿಂಗಶರೀರ ಪ್ರವೇಶಿಸುವುದು ಅತ್ಯಂತ ಅಸಂಭಾವಿತ

ವಾಯುವಿಗೆ ಲಿಂಗದೇಹವಿದ್ದರೂ ಅದು ಅವನಿಗೆ ಬಂಧಕವಾಗಿಲ್ಲ ಸುಟ್ಟ ಬಟ್ಟೆ-ಯಂತೆ ಆಕಾರಮಾತ್ರವಿದೆ, ಕಾರ್ಯವಿಲ್ಲ ಆದ್ದರಿಂದ ಅದು ಇದ್ದೂ ಇಲ್ಲದಂತೆಯೆ ಎನ್ನು-ವುದು ನಿಜವೆ ಆದರೆ ಹಾಗೆಂದಮಾತ್ರಕ್ಕೆ ಅದು ಇಲ್ಲವಾಗುವುದಿಲ್ಲ ಇದೆ ಇದೆ ಎಂದ ಮೇಲೆ ಅದು ಜೀವರೊಳಗೆ ಪ್ರವೇಶಿಸುವುದು ಹೇಗೆ ಎನ್ನುವ ಪ್ರಶ್ನೆ ಬಂದೇಬರುತ್ತದೆ ರಮಾನಾರಾಯಣರಿಗೆ ಲಿಂಗಶರೀರವಿಲ್ಲದಿರುವುದರಿಂದ ಈ ಸಮಸ್ಯೆ ಇಲ್ಲ

ವಾಯುವಿಗೆ ಜೀವಸ್ವರೂಪದೊಳಗೆ ಪ್ರವೇಶನಿರ್ಗಮಕಾಲವೂ ಇಂಥಾದ್ದೆಂದು ಎಲ್ಲಿಯೂ ಹೇಳಿಲ್ಲ ಸೃಷ್ಟಿಕಾಲದಲ್ಲಿಪ್ರವೇಶ ಎಂದೊಪ್ಪಿದರೆ ಲಯಕಾಲದಲ್ಲಿನಿರ್ಗಮನ ಒಪ್ಪಬೇಕಾಗುತ್ತದೆ ಅಂಶಿಯಲ್ಲಿ ಅಂಶಲಯ ಎನ್ನಬೇಕಾಗುತ್ತದೆ ಯಾವುದಕ್ಕೂ ಪ್ರಮಾಣವಿಲ್ಲ

ಘರ್ಮಾ ಸಮಂತಾತ್ರಿವೃತಂ ವ್ಯಾಪತುಃ<br>
ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ

'ಆತ್ಮ, ಅಂತರಾತ್ಮ ಎಂಬ ಎರಡು ರೂಪಗಳಿಂದ ಹರಿ ಜೀವರ ಸ್ವರೂಪಶರೀರ, ಜಡಶರೀರಗಳಲ್ಲಿ ವ್ಯಾಪಿಸಿರುವುದರಿಂದ ಅವರ ಸೇವೆಗಾಗಿ ವಾಯು ಅಲ್ಲಪ್ರವೇಶಿಸಿದ್ದಾನೆ' ಎಂದು ಋಗ್ವೇದ ಹೇಳಿದೆ ಇಲ್ಲಿ ಸ್ವರೂಪಶರೀರದಲ್ಲಿರುವ ಅಂತರಾತ್ಮನ ಸೇವೆಗಾಗಿ ವಾಯು ಸ್ವರೂಪಶರೀರದಲ್ಲಿ ಪ್ರವೇಶಿಸುವುದು ಸ್ಪಷ್ಟವಾಗಿ ಉಕ್ತವಾಗಿದೆಯಲ್ಲವೆ?

ಈ ಪ್ರಶ್ನೆಗೆ ಸಮಾಧಾನ ಹೇಳಬೇಕೆಂದರೆ ಮೊದಲಿಗೆ ನಾರಾಯಣಾಷ್ಟಾಕ್ಷರದ ಧ್ಯಾನಶ್ಲೋಕದಲ್ಲಿ ಬರುವ ಒಂದು ಮಾತನ್ನು ಗಮನಿಸಬೇಕು

ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ ।<br>
ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ॥<br>
ಸೇವ್ಯಮಾನೋಽಧಿಕಂ ಭಕ್ತ್ಯಾ ॥

'ಉಪಾಸಕನ ಹೃದಯದಲ್ಲಿ ಹರಿ ಶ್ರೀಭೂದೇವಿಯರಿಂದ ಆಲಿಂಗಿತನಾಗಿ ತನ್ನದ ಆದ ಬೇರೆ ರೂಪಗಳಿಂದಲೂ ಪರಿವೃತನಾಗಿ ಇದ್ದು ಬ್ರಹ್ಮವಾಯುರುದ್ರಶೇಷಗರುಡ-ಇಂದ್ರಾದಿ ದೇವತೆಗಳಿಂದ ಭಕ್ತಿಪೂರ್ವಕ ಸೇವಿತನಾಗಿರುತ್ತಾನೆ' ಇಲ್ಲಿ 'ಜೀವನ ಹೃದಯ-ದಲ್ಲಿಹರಿ' ಎಂದರೆ ಸ್ವರೂಪದೇಹದ ಹೃದಯ, ಸ್ಥೂಲದೇಹದ ಹೃದಯ ಎಂಬ ಎರಡು ಹೃದಯಗಳಲ್ಲಿ ಇರುವ ಎರಡು ಭಗವದ್ರೂಪಗಳು ವಿವಕ್ಷಿತ ಸ್ಥೂಲ ಹೃದಯದಲ್ಲಿರುವ ಆತ್ಮರೂಪಿ ಹರಿಯನ್ನು ಸೇವಿಸಲು ಬ್ರಹ್ಮವಾಯುರುದ್ರಇಂದ್ರಾದಿ ಸಕಲ ದೇವತೆಗಳೂ ಪ್ರವೇಶಿಸುವುದು ಸಂಭಾವಿತ ಆದರೆ ಸ್ವರೂಪಹೃದಯದಲ್ಲಿ ರುದ್ರಾದಿ ದೇವತೆಗಳು

ಪ್ರವೇಶಿಸಲಾರರು ಅಲ್ಲಿರುವ ಅಂತರಾತ್ಮರೂಪಿ ಹರಿಯನ್ನು ಬ್ರಹ್ಮವಾಯುಭಾರತೀ-ಸರಸ್ವತಿಯರು ಮಾತ್ರವೆ ಅಲ್ಲಿ ಪ್ರವೇಶಿಸಿ ಸೇವಿಸುತ್ತಾರೆ, ಉಳಿದ ದೇವತೆಗಳು ಹೊರಗೆ ನಿಂತು, ಒಳಗಿರುವ ಹರಿಯನ್ನು ಸ್ತೋತ್ರಾದಿಗಳಿಂದ ಉಪಾಸನೆ ಮಾಡುತ್ತಾರೆ, ಎನ್ನಬೇಕು ಬೇರೆ ಉಪಾಯವಿಲ್ಲ ಹಾಗೆಯೆ ವಾಯುವಿಗೆ ಜೀವಾಂತರ್ಗತತ್ವ ಇಲ್ಲವೆನ್ನುವ ಪಕ್ಷದಲ್ಲಿ ಬ್ರಹ್ಮವಾಯುಸರಸ್ವತೀಭಾರತಿಯರೂ ಹಾಗೇ, ಹೊರಗೆ ನಿಂತೇ ಸ್ತೋತ್ರ ಮಾಡುತ್ತಾರೆ ಎನ್ನಬಹುದು ಹೊರಗೇ ನಿಂತು ಸ್ತೋತ್ರ ಮಾಡುವುದಾದರೆ ರುದ್ರಾದಿಗಳೂ ಹಾಗೇ ಮಾಡುತ್ತಾರೆ ವಾಯುವಿನಲ್ಲಿ ಏನು ವಿಶೇಷ? ಅವನೊಬ್ಬನನ್ನೇ ಶ್ರುತಿಯಲ್ಲಿ ಏಕೆ ಹೇಳಿದೆ? ಎಂದರೆ ಜೀವಾಂತರ್ಗತ ಭಗವದ್ರೂಪದರ್ಶನ ವಾಯುವಿಗೆ ಮಾತ್ರ, ಹೊರತು ರುದ್ರಾದಿಗಳಿಗೆ ಇಲ್ಲವೆಂದು ವೇದವ್ಯಾಸಕೃತ ತತ್ವಸಾರದಲ್ಲಿ ಹೇಳಿದೆ

ಈಗ 'ಘರ್ಮಾ ಸಮಂತಾತ್ತ್ರಿವೃತಂ ವ್ಯಾಪತುಃ' ಎಂಬ ಮಂತ್ರದಲ್ಲಿಯೂ ಸ್ವರೂಪ ಹೃದಯದಲ್ಲಿರುವ ಹರಿಯನ್ನು ವಾಯು ಹೊರಗೆ ಸ್ಥೂಲ ಹೃದಯದಲ್ಲಿ ನಿಂತೇ ಸೇವಿಸ-ಬಹುದು ಸ್ವರೂಪ ಹೃದಯದೊಳಗೆ ಪ್ರವೇಶಿಸಬೇಕಾಗಿಲ್ಲ

ಇನ್ನೊಂದು ರೀತಿಯಿಂದಲೂ ಸಮಾಧಾನ ನೀಡಬಹುದು 'ಸ್ವಮೂರ್ತಿಗಣ-ಮಧ್ಯಗಃ' ಎಂಬ ಶಬ್ದದಿಂದ ವಿಶ್ವಾದಿ ಮೂರ್ತಿಗಳನ್ನು ಹೇಗೋ ಹಾಗೆ ಬ್ರಹ್ಮವಾಯು-ರುದ್ರಾದಿನಾಮಕ ಭಗವದ್ರೂಪಗಳನ್ನೂ ಇಟ್ಟುಕೊಳ್ಳಬಹುದು ಸ್ಥೂಲ ಹೃದಯದಲ್ಲಿ ಬ್ರಹ್ಮವಾಯುಶಿವಾದಿಗಳೆಂದರೆ ಆ ಹೆಸರಿನ ಭಗವದ್ರೂಪಗಳ ಜೊತೆಗೆ ಅವೇ ಹೆಸರುಳ್ಳ ಪ್ರಸಿದ್ಧ ದೇವತೆಗಳನ್ನೂ ಗ್ರಹಿಸಬಹುದು ಸ್ವರೂಪ ಹೃದಯದಲ್ಲಿ ಭಗವದ್ರೂಪಗಳನ್ನೆ ಗ್ರಹಿಸಬೇಕು ಹರಿ ಲೀಲೆಯಿಂದ ಬೇರೆ ಬೇರೆ ರೂಪಗಳಿಂದ ನಿಂತು ತನ್ನನ್ನು ತಾನೇ ಸ್ತೋತ್ರ ಮಾಡಿಕೊಳ್ಳುವುದುಂಟು ಇದು ತಂತ್ರಸಾರಸಂಗ್ರಹದಲ್ಲಿ ಪೀಠಪೂಜಾ, ಆವ-ರಣಪೂಜಾಪ್ರಕರಣಗಳಲ್ಲಿಯೂ ವಿಜಯದಾಸರ ಕಂಕಣಾಕಾರ ಸುಳಾದಿಯಲ್ಲಿಯೂ ಸ್ಪಷ್ಟವಾಗಿದೆ

ಈಗ 'ಘರ್ಮಾ ಸಮಂತಾತ್ತ್ರಿವೃತಂ' ಎಂಬ ಶ್ರುತಿಯಲ್ಲಿಯೂ ಸ್ಥೂಲ ಹೃದಯದಲ್ಲಿ-ರುವ ಆತ್ಮರೂಪನಾದ ಹರಿಯನ್ನು ಸೇವಿಸಲು ಮಾತರಿಶ್ವನಾಮಕ ವಾಯುವಿನ ಜೊತೆಗೆ ಅದೇ ಹೆಸರಿನ ಬಗವದ್ರೂಪವೂ ಪ್ರವೇಶಿಸಿದೆ ಸ್ವರೂಪ ಹೃದಯದಲ್ಲಿ ಮಾತರಿಶ್ವನಾಮಕ ಭಗವದ್ರೂಪ ಮಾತ್ರ ಎಂದಿಟ್ಟುಕೊಳ್ಳಬೇಕು ಆದ್ದರಿಂದ ಈ ಶ್ರುತಿ ವಾಯುದೇವನಿಗೆ ಜೀವಾಂತರ್ಗತತ್ವವಿಷಯದಲ್ಲಿ ನಿರವಕಾಶಪ್ರಮಾಣವೆನ್ನಲಾಗದು

ನ್ಯಾಯವಿವರಣ ಉತ್ಕ್ರಾಂತಿವಾದದ ಈ ಶ್ರುತಿಯನ್ನು ನಿರವಕಾಶಪ್ರಮಾಣವೆಂದು ಉದಾಹರಿಸುವುದುಂಟು—

ಜೀವಸ್ಥಿತೇನ ರೂಪೇಣ ವೇದಯತ್ಯಪಿಮುತ್ಯಪಿ ।
ಪ್ರಾಣ ಏಕೋ ಪತೀ ನಿತ್ಯಂ ಬಾಹ್ಯಾಂತಃಕರಣೇಶ್ವರಃ ॥

'ಮುಖ್ಯಪ್ರಾಣನು ಜೀವಾಂತರ್ಗತವಾದ ತನ್ನ ರೂಪದಿಂದ ಜೀವನಿಗೆ 'ನಾನು' ಎನ್ನುವ ಅನುಭವ ಉಂಟುಮಾಡುತ್ತಾನೆ ಜೀವನ ಬಾಹ್ಯ, ಆಂತರ ಎಂಬ ಎರಡು ಬಗೆಯ ಇಂದ್ರಿಯಗಳಿಗೂ ಅವನು ಪ್ರೇರಕ'

ಆದರೆ ಇಲ್ಲಿ 'ಜೀವ'ನೆಂದರೆ ಶುದ್ಧ ಜೀವಸ್ವರೂಪವಲ್ಲ ಸ್ಥೂಲಶರೀರಯುಕ್ತನಾದ ಜೀವನೆಂದಿಟ್ಟುಕೊಳ್ಳಬಹುದು ಹಾಗೆ ವ್ಯವಹಾರಶಾಸ್ತ್ರಗಳಲ್ಲಿ ಬಹಳ ಕಂಡುಬರುತ್ತದೆ ಉದಾ 'ವಿಶ್ವನು ಜೀವನನ್ನು ತೈಜಸನ ಬಳಿಗೊಯ್ದು ಕೊಟ್ಟು ತಾನು ಅವನೊಡನೆ ಸೇರಿ ಒಂದಾಗುವನು' ಎನ್ನುವಾಗ ಜೀವನೆಂದರೆ ಅನಿರುದ್ಧಶರೀರಯುಕ್ತನಾದ ಜೀವ ವಿವಕ್ಷಿತ ಶುದ್ಧಜೀವಸ್ವರೂಪವಲ್ಲ

ಆದ್ದರಿಂದ ಇಲ್ಲಿ ಜೀವಾಂತರ್ಗತ ಪ್ರಾಣನೆಂದರೆ ಸ್ಥೂಲಶರೀರಯುಕ್ತನಾದ ಜೀವನಲ್ಲಿ ಅಂತರ್ಗತನಾದ ಪ್ರಾಣ, ಜೀವನಿಗೆ 'ನಾನು' ಎನ್ನುವ ಅನುಭವ ಉಂಟುಮಾಡುತ್ತಾನೆ ಸ್ವರೂಪಶರೀರದಲ್ಲಿ ಪ್ರಾಣನಾಮಕ ಹರಿಯೇ ಇದ್ದು ಆ ಕಾರ್ಯ ನಡೆಸುತ್ತಾನೆ ಎನ್ನಬೇಕು

ಅಥವಾ ಇಲ್ಲಿ ಜೀವ ಎಂದರೆ ಜೀವನ ಚೈತನ್ಯಪ್ರಕಾಶ ವಿವಕ್ಷಿತ ಏಕೆಂದರೆ ಜೀವ ಬೇರೆಯಲ್ಲ, ಅವನ ಪ್ರಕಾಶ ಬೇರೆಯಲ್ಲ ಸೂರ್ಯ ಮತ್ತು ಅವನ ಪ್ರಕಾಶ ಒಂದೇ ಆಗಿರುವಂತೆ ಇದು ವಿಶೇಷಶಕ್ತಿಯಿಂದ ಭೇದವ್ಯವಹಾರವಷ್ಟೆ, ಆದ್ದರಿಂದ ಮುಖ್ಯಪ್ರಾಣ ಜೀವಸ್ಥಿತನೆಂದರೆ ಜೀವಪ್ರಕಾಶದಲ್ಲಿ ಅಂತರ್ಗತನೆಂದರ್ಥ ಅಣುವಾದ ಜೀವಸ್ವರೂಪ-ಶರೀರದಲ್ಲಿ ಪ್ರವೇಶಿಸಿದ್ದಾನೆ ಎಂದಲ್ಲ ಅಲ್ಲಿ ಪ್ರವೇಶಿಸಬಲ್ಲವರು ರಮಾನಾರಾಯಣರು ಮಾತ್ರ ಮುಖ್ಯಪ್ರಾಣ ಸ್ಥೂಲಶರೀರದಲ್ಲಿ ವ್ಯಾಪ್ತವಾದ ಜೀವಪ್ರಕಾಶದಲ್ಲಿ ಇರುತ್ತಾನೆ

ಈಗ ರುದ್ರಾದಿಗಳಿಗೂ ಮುಖ್ಯಪ್ರಾಣನಿಗೂ ಏನು ವ್ಯತ್ಯಾಸ? ಎಲ್ಲರೂ ಸ್ಥೂಲಶರೀ-ರದಲ್ಲಿ ವ್ಯಾಪ್ತವಾದ ಜೀವಪ್ರಕಾಶದಲ್ಲಿಯೆ ಇರುತ್ತಾರೆ ತಾನೆ? ಎಂಬ ಪ್ರಶ್ನೆ ಬರಬಹುದು ಆದರೆ ಒಂದು ದೊಡ್ಡ ವ್ಯತ್ಯಾಸವಿದೆ ಮುಖ್ಯಪ್ರಾಣನೂ ಇತರ ದೇವತೆಗಳೂ ತಮ್ಮ ಪ್ರಕಾಶದಿಂದ ಜೀವಪ್ರಕಾಶದಲ್ಲಿ ಪ್ರವೇಶಿಸಿದ್ದರೂ ಮುಖ್ಯಪ್ರಾಣನ ಪ್ರಕಾಶಕ್ಕೆ ಜೀವ-ಪ್ರಕಾಶದಲ್ಲಿ ಬೆರೆತು ಒಂದಾಗುವಷ್ಟು ಗಾಢವಾದ ಸಂಬಂಧವಿರುತ್ತದೆ ಇತರ ದೇವತೆಗಳ ಪ್ರಕಾಶ ಹಾಗೆ ಬೆರೆತು ಸಮರಸವಾಗಿ ಒಂದಾಗುವಂತೆ ಸೇರುವುದಿಲ್ಲ ಒಂದು ದೀಪದ ಬೆಳಕು ಇನ್ನೊಂದು ದೀಪದ ಬೆಳಕಿನೊಡನೆ ಹೇಗೆ ಬೆರೆಯುವುದೋ ಹಾಗೆ ಬೆರೆಯು-ವುದಿಲ್ಲ ಬೆಳಕಿನಲ್ಲಿ ಪಾತ್ರೆಗಳು ಬಟ್ಟೆಬರೆಗಳು ಇರುವಂತೆ ಇರುತ್ತದೆ ಪ್ರಾಣನು ಮಾತ್ರ ಜೀವಾಂತರ್ಯಾಮಿಯಾದ್ದರಿಂದ ಜೀವಪ್ರಕಾಶದಲ್ಲಿ ಬೆರೆತು ಒಂದಾಗಿರುತ್ತಾನೆ ಅದ-ರಿಂದ 'ಪ್ರಾಣ ಏಕೋ ವಶೀ ನಿತ್ಯಂ' ಪ್ರಾಣನೊಬ್ಬನೆ ಜೀವರ ಅಂತರ್ಯಾಮಿಯಾಗಿದ್ದಾನೆ ಎನ್ನಲಾಗಿದೆ

ನಿರವಕಾಶಪ್ರಮಾಣವೆಂದು ಉದಾಹರಿಸಲಾಗುವ ಇನ್ನೊಂದು ವಚನ ಪವಮಾನ-ಸಂಹಿತೆಯದು—

ಪವಮಾನಾಭಿಧೋ ವಾಯುರುತ್ತಮಾನಾಂ ಶರೀರಗಃ ।
ಸ್ವರೂಪೇಂದ್ರಿಯದೇಹೇಷು ಮಾತರಿಶ್ವಾಭಿಧಾನತಃ ॥
ಧತ್ತೇ ಲಿಂಗಶರೀರಸ್ಥಃ ಸೂತ್ರನಾಮಾ ಮಹಾಪ್ರಭುಃ ।
ಸೂಕ್ಷ್ಮದೇಹಗತಃ ಸೋಽಪಿ ಪವಮಾನೇತಿ ಚೋಚ್ಯತೇ ॥
ಸ್ಥೂಲದೇಹಗತಃ ಸೋಽಪಿ ಮುಖ್ಯಪ್ರಾಣಾಭಿಧೋ ಹಿ ಚ ॥

'ಪವಮಾನನಾಮಕನಾದ ವಾಯು ಸಾತ್ವಿಕ ಜೀವರ ಶರೀರದಲ್ಲಿ ಇರುತ್ತಾನೆ ಜೀವ-ಸ್ವರೂಪಭೂತವಾದ ಇಂದ್ರಿಯಗಳಲ್ಲಿಯೂ ಶರೀರಗಳಲ್ಲಿಯೂ ಮಾತರಿಶ್ವನಾಮಕ-ನಾಗಿರುತ್ತಾನೆ ಲಿಂಗಶರೀರವನ್ನು ಸೂತ್ರನಾಮಕನಾಗಿದ್ದು ಕಾಪಾಡುತ್ತಾನೆ ಪವಮಾನ-ನಾಮದಿಂದಲೆ ಅನಿರುದ್ಧದೇಹದಲ್ಲಿರುತ್ತಾನೆ ಸ್ಥೂಲದೇಹದಲ್ಲಿ ಮುಖ್ಯಪ್ರಾಣನಾಮಕ-ನಾಗಿದ್ದಾನೆ'

ಆದರೆ ಈ ವಚನವೂ ನಿರವಕಾಶವಲ್ಲ ಸ್ವರೂಪಭೂತ ಇಂದ್ರಿಯ ಶರೀರಗಳೆಂದರೆ ಸ್ಥೂಲ ಇಂದ್ರಿಯ ಸ್ಥೂಲ ಶರೀರಗಳಲ್ಲಿ ವ್ಯಾಪ್ತವಾದ ಸ್ವರೂಪೇಂದ್ರಿಯ, ಸ್ವರೂಪಶರೀರಗಳ ಪ್ರಕಾಶಗಳೆಂದೇ ಗ್ರಹಿಸಲು ಶಕ್ಯವಿದೆ

ಮುಕ್ತಾನಾಮಪಿ ಸರ್ವೇಷಾಂ ವಿಷ್ಣುರೇವ ನಿಯಾಮಕಃ

'ಎಲ್ಲ ಮುಕ್ತರಿಗೂ ವಿಷ್ಣುವೇ ನಿಯಾಮಕ' ಎಂದು ಬೃಹದಾರಣ್ಯಕ ಉಷಸ್ತ ಬ್ರಾಹ್ಮಣದಲ್ಲಿ ಭಾಷ್ಯ ಹೇಳಿದೆ ಇಲ್ಲಿ ಎಲ್ಲ ಮುಕ್ತರಿಗೂ ವಿಷ್ಣುವೆ ನಿಯಾಮಕ, ಅಂದರೆ, ಅವರಲ್ಲಿ ಕೆಳಗಿ-ನವರು ಮೇಲಿನವರಿಗೆ ಎಂದೂ ನಿಯಾಮಕರೆನಿಸುವುದಿಲ್ಲ ಸಂಸಾರದಲ್ಲಿ ಇದು ವ್ಯತ್ಯಾಸ-ವಾಗುವುದುಂಟು ಎಂದು ಹೇಳಿದೆ ಇದರಿಂದ ಜೀವೋತ್ತಮನಾದ ವಾಯು ಸಂಸಾರದಲ್ಲಿ ಎಲ್ಲ ಜೀವರಿಗೂ ನಿಯಾಮಕನಾಗಿದ್ದಾನೆ ಎಂದು ಒಪ್ಪಿದರೂ ಕೆಳಗಿನವರಿಗೆ ಮೇಲಿನವರು ಹೊರಗೇ ರಾಜಾದಿಗಳಂತೆ ನಿಯಾಮಕರು, ಹೊರತು ಅಂತರ್ಯಾಮಿಗಳಾಗಿ ನಿಯಾ-ಮಕರೆನ್ನಲು ಆಧಾರ ಸಾಲದು ಆದ್ದರಿಂದ ಮುಕ್ತಿಯಲ್ಲಿ ಶುದ್ಧಚೈತನ್ಯಸ್ವರೂಪ ಶರೀರಕ್ಕೆ ವಾಯು ಅಂತರ್ಯಾಮಿಯಾಗಿದ್ದಾನೆ ಎಂಬಲ್ಲಿ ಪ್ರಮಾಣವಿರುತ್ತಿದ್ದರೆ ಸಂಸಾರದಲ್ಲಿ ಅವನಿಗೆ ಜೀವಾಂತರ್ಗತತ್ವ ಅಸಂದಿಗ್ಧವಾಗಿ ಸಿದ್ಧವಾಗುತ್ತಿತ್ತು ಅಂಥ ಪ್ರಮಾಣವಿಲ್ಲ

ವಾಯುವಿನ ಜೀವಾಂತರ್ಗತತ್ವದ ವಿಷಯದಲ್ಲಿ ನಿರವಕಾಶ ಪ್ರಮಾಣವಿಲ್ಲ, ಮಾತ್ರವಲ್ಲ, ವಚನವಿರೋಧವೂ ಬರುತ್ತದೆ ಎನ್ನುತ್ತಾರೆ ಉದಾ

ಈ ಶರೀರಚತುಷ್ಟಯಗಳೊಳು
ಕೋಶದಾತುಗ ಭಾರತೀ ಪ್ರಾ-
ಣೇಶನಿಪ್ಪತ್ತೊಂದು ಸಾವಿರದಾರು ನೂರೆನಿಪ ।

ಶ್ವಾಸರೂಪಕ ಹಂಸ ಭಾಸ್ಕರ-
ಭೇಶರೊಳಗಿದ್ದವರ ಕೈವಿಡಿ-
ದೀ ಸರೋಜಭವಾಂಡದೊಳು ಸರ್ವತ್ರ ತುಂಬಿಹನು ॥
(ಹರಿಕಥಾಮೃತಸಾರ ೭-೫)

'ಜೀವರ ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲಶರೀರಗಳೆಂಬ ನಾಲ್ಕು ಬಗೆಯ ಶರೀರಗಳಲ್ಲಿ ವಾಯುದೇವ ಹಂಸರೂಪನಾಗಿದ್ದು ಪ್ರತಿದಿನ ೨೧,೬೦೦ ಶ್ವಾಸಗಳಿಗೆ ನಿಯಾಮಕ-ನಾಗಿರುತ್ತಾನೆ. ಇಡಾ, ಪಿಂಗಳಾ ನಾಡಿಗಳಿಂದ ಬರುವ ಶ್ವಾಸಗಳಿಗೆ ನಿಯಾಮಕರಾದ ಸೂರ್ಯಚಂದ್ರರಲ್ಲಿ ಅಂತರ್ಗತನಾಗಿದ್ದು ಅವರ ಮೂಲಕವೂ ಶ್ವಾಸವನ್ನು ನಿಯಂತ್ರಿ-ಸುತ್ತಾನೆ'

ಜೀವಾಂತರ್ಗತನಾಗಿದ್ದು ಜೀವಸ್ವರೂಪಶರೀರದಲ್ಲಿಯೂ ವಾಯು ಹಂಸಮಂತ್ರ ಜಪಿಸುತ್ತಾನೆ ಎನ್ನಲು ಮೇಲಿನ ಪದ್ಯವನ್ನು ಉದಾಹರಿಸುವುದುಂಟು ಆದರೆ ಇಲ್ಲಿ ಸೂರ್ಯಚಂದ್ರರ ಉಲ್ಲೇಖ ಬಂದಿರುವುದು ಬಾಧಕವಾಗಿದೆ ಸೂರ್ಯಚಂದ್ರರಿರು-ವುದು ಸ್ಥೂಲದೇಹದ ಇಡಾ-ಪಿಂಗಳಾ ನಾಡಿಗಳಲ್ಲಿ, ಅವರ ಮೂಲಕ ಶ್ವಾಸನಿಯಂತ್ರಣ ಮಾಡುವುದೆಂದರೆ ಅದು ಸ್ಥೂಲ ದೇಹದಲ್ಲಿಯೆ ತಾನೆ? ಆದ್ದರಿಂದ ಮೇಲಿನ ಪದ್ಯಕ್ಕೆ 'ನಾಲ್ಕು ಬಗೆಯ ಶರೀರಗಳಲ್ಲಿ ಶ್ವಾಸಜಪ ಮಾಡುತ್ತಾನೆ' ಎಂದರ್ಥವಲ್ಲ ನಾಲ್ಕು ಬಗೆಯ ಶರೀರಗಳ ಪೈಕಿ ಕೋಶಧಾತುಗಳಿಂದ ಯುಕ್ತವಾದ ಸ್ಥೂಲಶರೀರದಲ್ಲಿ ಶ್ವಾಸಜಪ ನಡೆಸುತ್ತಾನೆ ಎಂದೇ ಅಭಿಪ್ರಾಯ ಹೇಳಬೇಕು

ಈಗ,

ಈರೆರಡು ದೇಹಗಳೊಳಿದ್ದು ಸ-
ಮೀರದೇವನು ಶ್ವಾಸಜಪ ನಾ-
ನೂರಧಿಕವಾಗಿಪ್ಪ ಎಂಬತ್ತಾರು ಸಾಹಸ್ರ ।
ತಾ ರಚಿಸುವನು ದಿವಸ ಒಂದಕೆ ॥ (ಹರಿಕಥಾಮೃತಸಾರ ೧೨-೪೪)

ಎಂದು ಹೇಳಿದ್ದನ್ನೂ ಆಯಾ ಜೀವನ ಒಂದು ಸ್ಥೂಲ ಶರೀರ, ಅದರಲ್ಲಿ ಪ್ರೇರಕರಾದ ದೇವ, ದಾನವ, ನಿತ್ಯಸಂಸಾರಿಗಳ ಮೂರು ಸ್ಥೂಲ ಶರೀರಗಳು ಎಂದು ಒಟ್ಟು ನಾಲ್ಕು ಶರೀರಗಳಲ್ಲಿ ಒಟ್ಟಿಗೆ ೮೬,೪೦೦ ಶ್ವಾಸಜಪವನ್ನು ಪ್ರತಿದಿನ ವಾಯು ಮಾಡಿಸುತ್ತಾನೆ ಎನ್ನುವ ಅಭಿಪ್ರಾಯದಲ್ಲಿಯೇ ಸ್ವೀಕರಿಸಬೇಕು

ವಾಯುವಿಗೆ ಜೀವಾಂತರ್ಗತತ್ವ ಉಂಟೆನ್ನಲು ಇನ್ನೊಂದು ಬಾಧಕವೂ ಉಂಟು ಲಿಂಗಶರೀರದಲ್ಲಿ ವಾಯುವಿಗೆ ಪ್ರವೇಶವನ್ನು ಹರಿಕಥಾಮೃತಸಾರದ ಹೀಗೆ ನಿಷೇಧಿಸಿದೆ—

ಜೀವನಕೆ ತುಷದಂತೆ ಲಿಂಗವು
ಸಾವಕಾಶದಿ ಪೊಂದಿ ಸುತ್ತಲು

ಪ್ರಾವರಣರೂಪದಲಿ ಇಪ್ಪದು ಭಗವದಿಚ್ಛೆಯಲಿ ।
ಕೇವಲ ಜಡಪ್ರಕೃತಿ ಇದಕಧಿ-
ದೇವತೆಯು ಮಹಲಕುಮಿ ಎನಿಪಳು
ಆ ವಿರಜೆಯ ಸ್ನಾನ ಪರಿಯಂತರದಿ ಹತ್ತಿಹುದು ॥

(ಹರಿಕಥಾಮೃತಸಾರ ೯-೧೩)

'ಲಿಂಗಶರೀರ ಕೇವಲ ಜಡಪ್ರಕೃತ್ಯಾತ್ಮಕವಾದುದು ಇದಕ್ಕೆ ಅಧಿದೇವತೆ ಮಹಾಲಕ್ಷ್ಮಿ' ಎಂದಿದೆ ಈ ಪದ್ಯ ಇದರಿಂದ ಲಿಂಗಶರೀರದಲ್ಲಿಮಹಾಲಕ್ಷ್ಮಿಯೆ ನಿಯಾಮಕಳು, ಬೇರೆ ತತ್ವಾಭಿಮಾನಿಗಳಿಗೆ ಅಲ್ಲಿ ಪ್ರವೇಶವಿಲ್ಲ ಎಂದಂತಾಗಿದೆ ಹೀಗೆ ಲಿಂಗಶರೀರದಲ್ಲಿಯೆ ವಾಯುವಿಗೆ ಪ್ರವೇಶವಿಲ್ಲವೆಂದ ಮೇಲೆ ಅದಕ್ಕಿಂತ ಒಳಗೆ ಜೀವನ ಸ್ವರೂಪಶರೀರದಲ್ಲಿ ಪ್ರವೇಶ ಅಸಂಭಾವಿತವೆ

ಲಿಂಗಶರೀರದಲ್ಲಿ ಮಹಾಲಕ್ಷ್ಮಿಯೊಬ್ಬಳೆ ಹೊರತು ಇತರ ದೇವತೆಗಳಿಲ್ಲ ಎಂದು ವಿಜಯದಾಸರು ಮೂರು ಸುಳಾದಿಗಳಲ್ಲಿ ಹೇಳಿದ್ದಾರೆ

೧ ಲಿಂಗಪರಿಚ್ಛೇದ ಸುಳಾದಿ—

ಅಲ್ಲಲ್ಲಿದ್ದ ಪರಿಚ್ಛೇದಕ್ಕೆ
ಕರ್ತಳಾಗಿಪ್ಪಳು ಶ್ರೀಭೂದುರ್ಗಾನಾಮದಿ
ಬಿತ್ತರಿಸುತಿಪ್ಪಳು ಶಿರದಲ್ಲಿ ।
ನೆತ್ತಿಯ ದ್ವಾರವನ್ನು ಪಾದದಲ್ಲಿ ಮುಚ್ಚಿ ।
ಪೂರ್ತಿಜ್ಞಾನ ಕೊಡುತ್ತಲಿಪ್ಪಳು ।
ತತ್ವೇಶರು ಲಿಂಗದೇಹದಲ್ಲಿ ಇಲ್ಲ ।
ಎತ್ತ ನೋಡಿದರತ್ತ ಶ್ರೀ ವ್ಯಾಪ್ತಳು ।
ಕರ್ತನು ಸರ್ವಜ್ಞ ವಿಜಯವಿಟ್ಠಲರೇಯ ।
ಅತ್ಯಂತಮಹಿಮನು ಸಕಲರಿಗೆ ಪ್ರೇರಕ ॥

೨ ಜೀವಾಖ್ಯ ಸುಳಾದಿ—

ಪರಮೇಷ್ಠಿ ರೂಪ ಲಿಂಗದ ಕೊನಿ ಸುತ್ತಿನಲ್ಲಿ
ಇರುತಿಪ್ಪುದು ಮುಂದಂತೆ ಸಂಚರಿಸುವ ।
ಸರಿಯನ್ನಿ ಜಡಕೆ ಚೇತನ ಎಲ್ಲೆಂಬಿಯ ।
ಹರಿ ಇಚ್ಛಾ ಇಂಥಾದ್ದೆ ಬಲು ವಿಚಿತ್ರ ।
ಕರುಣಾಸಾಗರ ನಮ್ಮ ವಿಜಯವಿಟ್ಠಲರೇಯ
ತರತಮಗುಣದಿಂದ ವ್ಯಕ್ತವ ಮಾಳ್ಪ ॥

೩ ಅನ್ನಮಯಾದಿಕೋಶ ಸುಳಾದಿ—

ಲಿಂಗದಲ್ಲಿ ಚತುರವಿಂಶತಿ ತತ್ವ ಕಾರಣರೂಪವಾಗಿ ।
ಪ್ರತಿ ಪ್ರತಿ ದಿವಸಕೆ ಕೊಡುತಿಪ್ಪ ಭ- ।
ರಿತವಾದ ಕಾಲಕ್ಕೂ ಹೆಚ್ಚು ಕುಂದುಗಳಿಲ್ಲ ।
ತತ್ವೇಶರಿಲ್ಲ ಮುಖ್ಯಾಭಿಮಾನಿ ಲಕುಮಿ ।
ಶತಾನಂದ ವಾಯು ಸರಸ್ವತಿ ಭಾರತಿಗಳುಂಟು ।
ತೃತೀಯ ಪರಿಚ್ಛೇದವಾಗಿದ್ದ ಲಿಂಗದ ಬಾಹ್ಯದಲ್ಲಿ ।
ಪತಿತಪಾವನ ನಮ್ಮ ವಿಜಯವಿಟ್ಠಲರೇಯ ಸ- ।
ದ್ಗತಿಯನು ಕೊಡುವನು ಇದನು ತಿಳಿದವಗೆ ॥

ಕೊನೆಯ ಸುಳಾದಿಯಲ್ಲಿ ಮಹಾಲಕ್ಷ್ಮಿಯೊಬ್ಬಳೆ ಲಿಂಗಶರೀರದಲ್ಲಿರುತ್ತಾಳೆ ಎನ್ನುತ್ತ ಶತಾನಂದ ವಾಯು ಸರಸ್ವತಿ ಭಾರತಿ ಈ ನಾಲ್ವರು ಲಿಂಗದ ಬಾಹ್ಯದಲ್ಲ ವೈಷಯಿಕ ಶರೀರದಲ್ಲಿರುತ್ತಾರೆ ಎಂದು ಹೇಳಲಾಗಿದೆ ಇದರಿಂದ ಹರಿಕಥಾಮೃತಸಾರದಲ್ಲಿ 'ಇದಕಭಿ ದೇವತೆಯು ಮಹಲಕುಮಿ ಎನಿಪಳು' ಎಂದು ಹೇಳಿದುದು, ಜೊತಗ,

ಸರಸಿಜಾಸನ ವಾಣಿ ಭಾರತಿ
ಭರತನಿಂದೊಡಗೂಡಿ ಲಿಂಗದಿ
ಇರುತಿಹರು ಮಿಕ್ಕಾದಿತೇಯರಿಗಿಲ್ಲವಾ ಸ್ಥಾನ ॥ (ಹರಿಕಥಾಮೃತಸಾರ ೯-೧೨)

ಎಂದು 'ಬ್ರಹ್ಮ ವಾಯು ಸರಸ್ವತಿ ಭಾರತಿಯರು ಲಿಂಗಶರೀರದಲ್ಲ ಇರುತ್ತಾರ' ಎಂದುದು ಹೇಗೆ? ಇದು ವಿರುದ್ಧವಲ್ಲವೆ? ಎಂಬ ಸಂದೇಹಕ್ಕೆ ಪರಿಹಾರ ಮೂರೆಯುತ್ತವೆ ಮಹಲಕುಮಿ ಅನಾದಿಲಿಂಗಶರೀರಕ್ಕೆ ಅಧಿದೇವತೆ ಅದರಲ್ಲಿ ಬ್ರಹ್ಮವಾಯ್ವಾದಿಗಳಿಲ್ಲ ಅವರಿರುವರೆನ್ನಲಾದ ಲಿಂಗಶರೀರ ಅನಾದಿಲಿಂಗಶರೀರದ ಬಾಹ್ಯದಲ್ಲಿರುವ ವೈಷಯಿಕ ಲಿಂಗಶರೀರ ಹೀಗೆ ವಿರೋಧಪರಿಹಾರ ಸುಲಭ ಆದ್ದರಿಂದ ವಾಯುವಿಗೆ ಜೀವಾಂತರ್ಗತತ್ವವನ್ನು ಒಪ್ಪುವುದು ಶಾಸ್ತ್ರಸಮ್ಮತವಲ್ಲ ಯುಕ್ತಿಯುಕ್ತವೂ ಅಲ್ಲ ಎಂದು ಸಂಕರ್ಷಣ ಒಡೆಯರು ಅಭಿಪ್ರಾಯ ಪಡುತ್ತಾರೆ

**ವಾಯುವಿಗೆ ಜೀವಸ್ವರೂಪದಲ್ಲಿ ಪ್ರವೇಶ ಉಂಟು**

ಆದರೆ ಈ ಮೇಲಿನ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ, ವಾಯುವಿಗ ಜೀವಾಂತರ್ಗತತ್ವ ಇದೆ ಎನ್ನುವುದೇ ಹೆಚ್ಚಿನವರ ಅಭಿಪ್ರಾಯವಾಗಿದೆ ಅದಕ್ಕೆ ವಿವರಣೆ ಹೀಗೆ ಕೊಡಬಹುದು—

೧ ಬೃಹದಾರಣ್ಯಕ ಗಾರ್ಗಿಬ್ರಾಹ್ಮಣಭಾಷ್ಯದಲ್ಲಿ

ಅನಿರುದ್ಧಸುಖಾನಾಂ ಚ ಮೌಕ್ತಾನಾಮಿಂದ್ರ ಆಶ್ರಯಃ ।
ಆನಂದಾನಾಂ ತಥೈಂದ್ರಾಣಾಂ ಮೌಕ್ತಾನಾಂ ದೇವ ಆಶ್ರಯಃ ।

ಇಂದ್ರಾಶ್ರಯಃ ಶಿವಸ್ಯಾಪಿ ಸುಖಾನಾಂ ಮುಕ್ತಿಗಾಮಿನಾಮ್ ॥

'ಮುಕ್ತಿಯಲ್ಲಿ ಮೇಲುಮೇಲಿನ ದೇವತೆಗಳು ಕೆಳಕೆಳಗಿನ ದೇವತೆಗಳ ಸ್ವರೂಪಸುಖಗಳ ಅಭಿವ್ಯಕ್ತಿಗೆ ಕಾರಣರು ಏಕೆಂದರೆ ಮೇಲುಮೇಲಿನವರು ಕೆಳಕೆಳಗಿನವರಿಗೆ ಬಿಂಬರಾಗಿದ್ದಾರೆ' ಎಂದು ಹೇಳಿದೆ ಇದರಿಂದ ಜೀವನ ಸ್ವರೂಪಶರೀರದ ಹೃದಯದಲ್ಲಿಯೆ ಅವರಿಗಿಂತ ಉತ್ತಮರಾದ ಬಿಂಬಭೂತರಾದ ಜೀವರು ಇರುತ್ತಾರೆ ಎಂದಂತಾಯಿತು ಏಕೆಂದರೆ ಮುಕ್ತಿಯಲ್ಲಿ ಸ್ವರೂಪಶರೀರ ಹೊರತು ಬೇರೆ ಶರೀರವಿಲ್ಲ ಹೀಗೆ ಬಿಂಬರಾದ ದೇವತೆಗಳು ಎಲ್ಲರೂ ಜೀವರ ಸ್ವರೂಪಹೃದಯದಲ್ಲಿ ಅಂತರ್ಗತರಾಗಿರುವರೆಂದ ಮೇಲೆ ಎಲ್ಲ ಜೀವರಿಗೂ ಬಿಂಬನಾದ ವಾಯು ಜೀವಸ್ವರೂಪದೇಹದಲ್ಲಿ ಅಂತರ್ಗತನಾಗಿಲ್ಲವೆನ್ನುವುದು ಅತ್ಯಂತ ಅಸಂಭಾವಿತ ಇದು ಮುಕ್ತಿಗೆ ಮಾತ್ರ ಸಂಬಂಧಿಸಿದುದಲ್ಲ ಸಂಸಾರದಲ್ಲಿಯೂ ಹೀಗೇ ಎಂದೂ ಇಲ್ಲಿ ಭಾಷ್ಯ ಸ್ಪಷ್ಟಪಡಿಸಿದೆ—

ಏವಮೇವ ಚ ಸಂಸಾರೇ ಬಿಂಬತ್ವಾದುತ್ತರೋತ್ತರಮ್

೨ ಬೃಹದಾರಣ್ಯಕ ಸಪ್ತಾನ್ನ ಬ್ರಾಹ್ಮಣದ ಭಾಷ್ಯದಲ್ಲಿ ಹೀಗೆ ಹೇಳಿದೆ

ಪೃಥಿವ್ಯಾದಿಸ್ಥಿತಾ ದೇವಾಃ ಸರಸ್ವತ್ಯಾದಿಕಾಸ್ತ್ರಯಃ ।
ಅಧಿಕಾವೇಶತೋ ದೇವೇಷ್ವತೋ ದೇವಾ ಇತಿ ಸ್ಮೃತಾಃ ॥

'ಮುಕ್ತ ಪೃಥಿವ್ಯಾದಿ ದೇವತೆಗಳಲ್ಲಿಯೂ ಸಪ್ತಾನ್ನೋಪಾಸಕರಾದ ದೇವತೆಗಳಲ್ಲಿಯೂ ಸರಸ್ವತಿಬ್ರಹ್ಮವಾಯುಗಳು ವಿಶೇಷಾವೇಶ ಹೊಂದಿರುತ್ತಾರೆ ಅದರಿಂದ ಸರಸ್ವತಿಯ ವಿಶೇಷಾವೇಶಪ್ರಯುಕ್ತವಾಗಿಯೆ ಮುಕ್ತನು ಹೇಳುವ ಮಾತು ಎಲ್ಲವೂ ಸತ್ಯವೆ ಆಗಿರುತ್ತದೆ ಬ್ರಹ್ಮನ ಆನಂದರೂಪದ ವಿಶೇಷಾವೇಶಪ್ರಯುಕ್ತವಾಗಿಯೆ ಮುಕ್ತನಲ್ಲಿ ನಿರ್ದುಃಖಾನಂದ ಅಭಿವ್ಯಕ್ತವಾಗುತ್ತದೆ ಬ್ರಹ್ಮನ ಪ್ರಾಣರೂಪದ, ಅಂದರೆ, ಬಲರೂಪದ ವಿಶೇಷಾವೇಶಪ್ರಯುಕ್ತವಾಗಿಯೆ ಮುಕ್ತನಲ್ಲಿ ಆಯಾಸರಹಿತವಾದ ಬಲದ ಅಭಿವ್ಯಕ್ತಿ ಈ ಮೂರು ದೇವತೆಗಳಿಂದ ಆವಿಷ್ಟನಾದ, ಸಪ್ತಾನ್ನೋಪಾಸಕನಾದ ಅಮುಕ್ತದೇವತೆಯೂ ಸಂಸಾರದಲ್ಲಿ ಸರ್ವಜೀವರಲ್ಲಿ ವ್ಯಾಪ್ತನಾಗಿರುತ್ತಾನೆ ಆದರೆ ಆ ಜೀವರು ಮಾಡುವ ಪಾಪಕ್ಕೆ ಆತ ಭಾಗಿಯಾಗುವುದಿಲ್ಲ ಈ ಭಾಷ್ಯವಾಕ್ಯದ ಪ್ರಕಾರ ದೇವತೆಗಳೇ ಸಪ್ತಾನ್ನೋಪಾಸಕರು ಅವರು ಎಲ್ಲ ಜೀವರಲ್ಲಿ ಅಂತರ್ಯಾಮಿಗಳಾಗಿದ್ದು ಪುಣ್ಯಪಾಪಪ್ರೇರಕರಾಗಿರುತ್ತಾರೆ ಆ ಪುಣ್ಯಪಾಪಗಳಲ್ಲಿ ಪುಣ್ಯಕ್ಕೆ ಮಾತ್ರ ಅವರು ಭಾಗಿಗಳು ಪಾಪ ಅವರಿಗೆ ಅಂಟುವುದಿಲ್ಲ ಹೀಗೆ ಎಲ್ಲ ತತ್ತ್ವದೇವತೆಗಳೂ ಜೀವಾಂತರ್ಗತರಾಗಿರುವರು ಅವರಿಗೂ ಅಂತರ್ಯಾಮಿಗಳು ವಾಯುಭಾರತಿಯರು ಇದು ಮುಕ್ತಿಯಲ್ಲಿ ಮಾತ್ರವಲ್ಲ, ಸಂಸಾರದಲ್ಲಿಯೂ ಸರಿಯೆ ಹೀಗಿರುವಾಗ ವಾಯುದೇವನಿಗೆ ಜೀವಾಂತರ್ಗತತ್ವವಿಲ್ಲವೆನ್ನುವುದು ಸಾಹಸವೇ ಸರಿ

೩ ಬೃಹದಾರಣ್ಯಕದ ಶಿಶುಬ್ರಾಹ್ಮಣದಲ್ಲಿ ಬರುವ ವಾಕ್ಯ

ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಃ

ಇದಕ್ಕೆ ಭಾಷ್ಯದೀಪಿಕೆಯಲ್ಲಿ ಹೀಗೆ ವಿವರಣೆ ಇದೆ—'ಸ್ಥೂಲದೇಹಾಖ್ಯವಿಸ್ತೃತ-ಪ್ರದೇಶಗತಲಿಂಗಶರೀರರೂಪಗೃಹೇ ವಿಷ್ಣುರೂಪಾಯಾಂ ಸ್ಥೂಲಾಯಾಂ ಅನ್ನಾಖ್ಯೇನ ಶ್ರೀರೂಪೇಣ ದಾಮ್ನಾ ಬದ್ಧೋ ಗೋವತ್ಸರೂಪೋ ವಾಯುರ್ಮಧ್ಯಮತ್ವೇನೋಚ್ಯತೇ' (೧-೩-೨೪)

'ಜೀವರ ಸ್ಥೂಲದೇಹವೆಂಬ ವಿಸ್ತಾರವಾದ ಪ್ರದೇಶದಲ್ಲಿ ಲಿಂಗಶರೀರವೆಂಬುದು ಸಣ್ಣಕೊಟ್ಟಿಗೆ ಅದರೊಳಗೆ ಜೀವಸ್ವರೂಪದಲ್ಲಿ ಬಿಂಬರೂಪಿಯಾಗಿ ನೆಲಸಿರುವ ಹರಿಯೆ ಗೂಟ ಅನ್ನಾಭಿಮಾನಿನಿ ಲಕ್ಷ್ಮೀದೇವಿ ಹಗ್ಗ ಕೊಟ್ಟಿಗೆಯಲ್ಲಿ ಗೂಟಕ್ಕೆ ಹಗ್ಗದಿಂದ ಕಟ್ಟಿರುವ ದನದ ಕರು ವಾಯು'

ಲಿಂಗಶರೀರದ ಹೊರಗೇ ವಾಯು ಇರುತ್ತಾನೆ ಎಂದೂ ಮಹತ್ತತ್ತ್ವರೂಪ ಅನಿರುದ್ಧ-ಶರೀರವೇ ಅವನ ವಾಸಸ್ಥಾನ ಎಂದೂ ಹೇಳುವುದು ಮೇಲಿನ ವಿವರಣೆಗೆ ಸರಿಹೊಂದು-ವುದಿಲ್ಲ ಜೀವಸ್ವರೂಪಶರೀರದಲ್ಲಿಯೆ ರಮಾನಾರಾಯಣರೊಂದಿಗೆ ವಾಯುವೂ ವಾಸ ಮಾಡುತ್ತಿದ್ದಾನೆ ಎಂದೇ ಹೇಳಬೇಕು

೪ ಬೃಹದಾರಣ್ಯಕದ ಶಾರೀರಬ್ರಾಹ್ಮಣಭಾಷ್ಯದಲ್ಲಿ ಹೇಳಿದೆ

ಅಲ್ಪಂ ತೇಜಸ್ತಥೈವಾಲ್ಪಂ ಜೀವರೂಪಂ ಹಿ ಸಂಸೃತೌ ।
ತದೈವ ಸುಮಹತ್ತೇಜಃ ಕರೋತಿ ಭಗವಾನ್ ಮಹತ್ ॥

'ಸಂಸಾರದಲ್ಲಿರುವಾಗ ಜೀವಸ್ವರೂಪ ಅಲ್ಪ ತೇಜಸ್ಸು ಉಳ್ಳದ್ದು ಮತ್ತು ಅಲ್ಪ ಪರಿಮಾಣ ಉಳ್ಳದ್ದು ಆದರೆ ಮೋಕ್ಷದಲ್ಲಿ ಅದನ್ನೇ ಮಹಾಕಾಂತಿಯುಕ್ತವನ್ನಾಗಿಯೂ ಮಹಾಪರಿ-ಮಾಣಯುಕ್ತವನ್ನಾಗಿಯೂ ಮಾಡುತ್ತಾನೆ ಭಗವಂತ' ಇದರಿಂದ ಜೀವಸ್ವರೂಪದ ಪರಿ-ಮಾಣದಲ್ಲಿ ವ್ಯತ್ಯಾಸವಾಗಬಹುದು 'ಮುಕ್ತಿಯಲ್ಲಿ ಜೀವಸ್ವರೂಪಕ್ಕೆ ವೃದ್ಧಿಹ್ರಾಸಗಳಿಲ್ಲ'-ವೆನ್ನುವುದೂ ಸರಿಯೆ ಎರಡರ ಒಟ್ಟು ಅಭಿಪ್ರಾಯ ಹೀಗೆ—ಜೀವಸ್ವರೂಪದಲ್ಲಿ ಅಂತ-ರ್ಗತವಲ್ಲದ ಜ್ಞಾನಾನಂದಾದಿ ಗುಣಗಳು ಹೊಸದಾಗಿ ಮುಕ್ತಿಯಲ್ಲಿ ಜೀವನಿಗೆ ಲಭಿಸಿದರೆ ಅದು ವೃದ್ಧಿ ಎನಿಸುತ್ತದೆ, ನಾಶ ಹೊಂದಿದರೆ ಹ್ರಾಸವೆನಿಸುತ್ತದೆ, ಇದು ಎರಡೂ ಮುಕ್ತಿಯಲ್ಲಿ ಇಲ್ಲ ಆದರೆ ಬೆಂಕಿ ಉರಿಯುವಾಗ ಒಲೆಯ ಮೇಲಿಟ್ಟ ಹಾಲು ಉಕ್ಕುವಂತೆ, ಬೆಂಕಿ ಆರಿ-ಸಿದಾಗ ಆ ಉಕ್ಕಿದ ಹಾಲು ಕುಗ್ಗುವಂತೆ, ಪರಿಮಾಣದಲ್ಲಿ ವೃದ್ಧಿಹ್ರಾಸರೂಪವಾದ ವ್ಯತ್ಯಾಸ ಜೀವಸ್ವರೂಪದಲ್ಲಿ ಆಗುವುದು ಶಕ್ಯವಿದೆ ಜ್ಞಾನೋತ್ತರ ಕರ್ಮಫಲವಾಗಿ ಭಗವಂತನ ಅಚಿಂತ್ಯಶಕ್ತಿಯಿಂದ ಇದು ಮುಕ್ತರ ವಿಷಯದಲ್ಲಿ ನಿಜವಾಗಿದೆ ಅದೇ ರೀತಿ ಸಂಸಾರದಲ್ಲಿ ಜೀವಾಂತರ್ಗತರಾದ ತತ್ತ್ವಾಭಿಮಾನಿ ದೇವತೆಗಳ ಸ್ವರೂಪಶರೀರ ಲಿಂಗಶರೀರಗಳೂ ಭಗವಂತನ ಅಚಿಂತ್ಯಶಕ್ತಿಯಿಂದ ಮಹತ್ತಾಗಿ ಬೆಳೆದು, ಮತ್ತು ನಾನಾ ಸೂಕ್ಷ್ಮ ಅಂಶಗಳಾಗಿ

ಒಡೆದು, ನಾನಾ ಜೀವರ ಸ್ವರೂಪಶರೀರಗಳಲ್ಲಿ ನೇರಿ ಹೋಗುವುದು ಅಸಂಭಾವಿತ-ವೇನಲ್ಲ ಜಡವಾದ ಲಿಂಗಶರೀರವು ಚೇತನಸ್ವರೂಪದಲ್ಲಿ ಹೇಗೆ ಪ್ರವೇಶಿಸಬಲ್ಲುದು ಎಂದರೆ ಕಾಲ, ಆಕಾಶ ಮುಂತಾದ ವ್ಯಾಪಕ ಜಡವಸ್ತುಗಳು ಒಂದರಲ್ಲಿ ಇನ್ನೊಂದು ನೇರಿ ಹೇಗೆ ಬೆರೆತಿರಬಲ್ಲುದು ಎಂದೂ ಕೇಳಬೇಕಾದೀತು ಎಲ್ಲಕ್ಕೂ ಭಗವಂತನ ಅಚಿಂತ್ಯಶಕ್ತಿ-ಯೊಂದೇ ಪರಿಹಾರ ಪ್ರಮಾಣದಿಂದ ಸಿದ್ಧವಾದ ಪ್ರಮೇಯಗಳಲ್ಲಿ ಯುಕ್ತಿವಿರೋಧ ಬಂದಾಗ ಅದನ್ನು ಅಚಿಂತ್ಯಶಕ್ತಿಯಿಂದ ತಾನೆ ಪರಿಹರಿಸಿಕೊಳ್ಳಬೇಕು?

ಈಗ 'ಘರ್ಮಾ ಸಮಂತಾತ್ತ್ರಿವೃತಂ ವ್ಯಾಪತುಃ' ಎಂಬ ಋಗ್ವೇದ ವಚನ, ಪವಮಾನ-ಸಂಹಿತಾವಚನ, ನ್ಯಾಯವಿವರಣವಾಕ್ಯ ಮುಂತಾದವುಗಳಿಗೆ ಸ್ವರಸವಾದ ಅರ್ಥ ಬಿಟ್ಟು ಬೇರೆ ಅರ್ಥ ಹೇಳಬೇಕಾಗಿಲ್ಲ 'ಈರೆರಡು ದೇಹಗಳೊಳಿದ್ದು ಸಮೀರದೇವನು' ಎಂಬ ಹರಿಕಥಾಮೃತಸಾರ ಪದ್ಯದಲ್ಲಿ ಪ್ರಾಣನು ಸ್ವರೂಪದೇಹದಲ್ಲಿ ಶ್ವಾಸಜಪ ಮಾಡುವುದನ್ನು ವರ್ಣಿಸಿರುವುದೂ ಯುಕ್ತವೆ

'ಈ ಶರೀರಚತುಷ್ಟಯಗಳೊಳು' ಎಂಬ ಹರಿಕಥಾಮೃತಸಾರ ಪದ್ಯ(೭-೫)ದಲ್ಲಿ ಸೂರ್ಯಚಂದ್ರರ ಮೂಲಕ ಪ್ರಾಣ ಶ್ವಾಸಕಾರ್ಯ ಮಾಡಿಸುತ್ತಾನೆ ಎಂದಿರುವುದೂ ಸ್ವರೂಪದೇಹವಿವಕ್ಷೆಯಲ್ಲಿ ಅಸಂಗತವಾಗುವುದಿಲ್ಲ ಏಕೆಂದರೆ ಸೂರ್ಯಚಂದ್ರರು ತತ್ತ್ವಾಭಿಮಾನಿಗಳಾಗಿರುವುದರಿಂದ ಸ್ವರೂಪದೇಹವೂ ನೇರಿದಂತೆ ನಾಲ್ಕು ಶರೀರಗಳಲ್ಲಿ ಅವರು ಇರುತ್ತಾರೆ

ಸ್ಥೂಲಶರೀರದಲ್ಲಿ ಮಾತ್ರ ಶ್ವಾಸಕಾರ್ಯ, ಲಿಂಗಶರೀರದಲ್ಲಿ ಇಲ್ಲ ಎಂದು ಆಗ್ರಹಿಸುವುದು ಶ್ರೀವಾದಿರಾಜರ ವೈಕುಂಠವರ್ಣನೆಯಲ್ಲಿ ಬರುವ—

> ಅಚ್ಯುತನುದರದಿ ಲಿಂಗದೇಹದ ಕಣ್ಣ
> ಮುಚ್ಚಿ ಜೀವರು ನಿದ್ರೆಗೈಯೆ
> ಎಚ್ಚತ್ತಿಹನು ಗಡ ಮುಖ್ಯಪ್ರಾಣನು ಒಬ್ಬ ।

ಎನ್ನುವ ಹೇಳಿಕೆಗೆ ವಿರುದ್ಧವಾಗುವುದು ಎಂದು ಹಿಂದೆಯೆ ನೋಡಿದ್ದೇವೆ

''ಜೀವನಕೆ ತುಷದಂತೆ ಲಿಂಗವು'' ಎಂಬ ಹರಿಕಥಾಮೃತಸಾರಪದ್ಯ(೯-೧೩) ಮತ್ತು ವಿಜಯದಾಸರ ಮೂರು ಸುಳಾದಿ ವಚನಗಳು ತತ್ತ್ವಾಭಿಮಾನಿ ದೇವತೆಗಳಿಗೆ ಲಿಂಗದೇಹದಲ್ಲಿ ಪ್ರವೇಶವನ್ನು ನಿರಾಕರಿಸುವಂತೆ ಕಂಡುಬಂದರೂ ವಸ್ತುತಃ ಹಾಗೆ ಮಾಡುತ್ತಿಲ್ಲ ಹರಿಕಥಾಮೃತಸಾರದಲ್ಲಿ 'ಇದಕ್ಕೆ ಅಧಿದೇವತೆಯು ಮಹಲಕುಮಿ' ಎಂದು ಹೇಳಿದ ಮಾತ್ರಕ್ಕೆ ಬ್ರಹ್ಮಾದಿಗಳು ಲಿಂಗದೇಹದಲ್ಲಿ ಇಲ್ಲ ಎಂದು ಹೇಳಿದಂತಾಗಿಲ್ಲ ಲಿಂಗ-ಭಂಗ ಮಾಡುವವಳು ಸಾತ್ವಿಕರಿಗೆ ವಿರಜಾನದೀರೂಪದಿಂದ ಮಹಾಲಕ್ಷ್ಮಿಯೇ ಆದರೂ ರಾಜಸ ತಾಮಸರಿಗೆ ಹುಂಕಾರ, ಗದಾಪ್ರಹಾರಗಳಿಂದ ಲಿಂಗಭಂಗ ಮಾಡುವವ ವಾಯು-

ದೇವ ಪ್ರಳಯಕಾಲದಲ್ಲಿ ತ್ರಿವಿಧ ಜೀವರಿಗೂ ಲಿಂಗಶರೀರದಲ್ಲಿ ಶ್ವಾಸಕಾರ್ಯ ಮಾಡು-ಸುವವನೂ ವಾಯುದೇವ

'ಪರಮೇಷ್ಠಿರೂಪ ಲಿಂಗದ ಕೊನೆ ಸುತ್ತಿನಲ್ಲಿಪುದು' ಎಂದು ವಿಜಯದಾಸರೆ ಹೇಳಿದ್ದ-ರಿಂದ 'ಬ್ರಹ್ಮವಾಯುಗಳನ್ನು ಹೊರತು ಉಳಿದ ತತ್ವೇಶರು ಮಾತ್ರ ಲಿಂಗದಲ್ಲಿ ಇಲ್ಲ' ಎಂದೇ ಸುಳಾದಿಗಳ ಅಭಿಪ್ರಾಯ ಗ್ರಹಿಸಬೇಕು ಜಗನ್ನಾಥದಾಸರೂ,

> ಸರಸಿಜಾಸನ ವಾಣಿ ಭಾರತಿ ಭರತನಿಂದೊಡಗೂಡಿ ಲಿಂಗದಿ
> ಇರುತಿಹರು, ಮಿಕ್ಕಾದಿತೇಯರಿಗಿಲ್ಲವಾ ಸ್ಥಾನ

ಎನ್ನುತ್ತ ಬ್ರಹ್ಮವಾಯುವ್ಯತಿರಿಕ್ತ ರುದ್ರಾದಿಗಳಿಗೆ ಮಾತ್ರ ಲಿಂಗದೇಹದಲ್ಲಿ ಪ್ರವೇಶವಿಲ್ಲ ಎಂದಿದ್ದಾರೆ ವಸ್ತುತಃ ರುದ್ರಾದಿಗಳೂ ಪುಣ್ಯಪಾಪಪ್ರೇರಕರಾದ್ದರಿಂದ ಜೀವಸ್ವರೂಪದಲ್ಲಿ ಅವರಿಗೆ ಪ್ರವೇಶವಿದ್ದೇ ಇದೆ ಆದರೆ ಅಷ್ಟರಿಂದಲೆ ಲಿಂಗದೇಹದಲ್ಲಿಯೂ ನಿಯಾಮಕತ್ವ-ವಿರಬೇಕೆಂದಿಲ್ಲ

ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲಶರೀರಗಳಲ್ಲಿ ದೇವತೆಗಳಿಗೆ ತಾರತಮ್ಯಾನು-ಗುಣವಾಗಿ ಪ್ರವೇಶವಿರುತ್ತದೆ ಎನ್ನುವಲ್ಲಿಯೆ ಏನೂ ಆಧಾರವಿಲ್ಲ ಆದ್ದರಿಂದ ವಿಷ್ಣುಲಕ್ಷ್ಮೀ-ವಾಯುರುದ್ರಾದಿಗಳು ಕ್ರಮವಾಗಿ ನಾಲ್ಕು ಶರೀರಗಳಲ್ಲಿ ನಿಯಾಮಕರು ಎನ್ನುವುದು ನಿರಾ-ಧಾರ ಲಿಂಗದೇಹದಲ್ಲಿ ನಿಯಾಮಕತ್ವ ಉಂಟು, ಇಲ್ಲ ಎನ್ನುವುದರಿಂದ ಸ್ವರೂಪದೇಹ-ದಲ್ಲಿ ಪ್ರವೇಶ ಉಂಟು ಇಲ್ಲವೆನ್ನುವುದನ್ನು ನಿರ್ಧರಿಸುವಂತಿಲ್ಲ

ಅಥವಾ ಲಿಂಗದೇಹದ ಮುಖ್ಯಕಾರ್ಯ ಬಂಧಕತ್ವ ಅದು ಮಹಾಲಕ್ಷ್ಮೀಯ ಅಧೀನ ಬ್ರಹ್ಮಾದಿಗಳ ಅಧೀನವಲ್ಲ ಆದ್ದರಿಂದ ಈ ಮುಖ್ಯಕಾರ್ಯದ ವಿಷಯದಲ್ಲಿ ಮಹಾಲಕ್ಷ್ಮೀಯೊಬ್ಬಳೆ ಲಿಂಗದೇಹದಲ್ಲಿದ್ದಾಳೆ ಬ್ರಹ್ಮಾದಿಗಳಿದ್ದರೂ ಇಲ್ಲದಂತ ಎಂಬುದು ಸುಳಾದಿಗಳ ಅಭಿಪ್ರಾಯವಿರಬಹುದು

ಷೋಡಶಿಯಲ್ಲಿ ಅಡವಿ ಆಚಾರ್ಯರು ಜೀವಸ್ವರೂಪದೇಹದಲ್ಲಿ ಬ್ರಹ್ಮಾಂಡ ಪುಷ್ಕ-ರಾಂತ ತತ್ವದೇವತೆಗಳೂ ರಮಾನಾರಾಯಣರೂ ಉರಿವ ಕೆಂಡದಲ್ಲಿ ಬೆಂಕಿಯಂತೆ ಪ್ರವೇಶಿಸಿ ಸರ್ವತ್ರ ವ್ಯಾಪಿಸಿರುವರು ಎಂದು ಸ್ಪಷ್ಟವಾಗಿ ಹೇಳುತ್ತ ವಾಯುವಿಗೆ ಜೀವ-ಸ್ವರೂಪದೇಹದಲ್ಲಿ ಪ್ರವೇಶವನ್ನು ಒಪ್ಪಿರುವರು

ಆದ್ದರಿಂದ ವಾಯುದೇವ ಜೀವರ ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲ ಎಂಬ ನಾಲ್ಕು ಶರೀರಗಳಲ್ಲಿ ಪ್ರತಿಯೊಂದರಲ್ಲಿ ದಿನ ಒಂದಕ್ಕೆ ೨೧,೬೦೦ ರಂತೆ ಒಟ್ಟು ೮೬,೪೦೦ ಶ್ವಾಸಜಪ ಮಾಡುತ್ತಾನೆ ಎನ್ನಲು ಬಾಧಕವಿಲ್ಲ

**ಚತುರವದನನ ರಾಣಿಯತಿರೋ-**
**ಹಿತವಿಮಲವಿಜ್ಞಾನಿ ನಿಗಮ-**
**ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ ।**
**ನುತಿಸಿ ಬೇಡುವೆ ಜನನಿ ಲಕ್ಷ್ಮೀ-**
**ಪತಿಯ ಗುಣಗಳ ತುತಿಪುದಕೆ ಸ-**
**ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನಸದನದಲಿ ॥ ೫ ॥**

ತಿರೋಧಾನವಿಲ್ಲದ ನಿರ್ಮಲ ಜ್ಞಾನ ಉಳ್ಳವಳು, ಸಮಸ್ತವೇದಾದಿಸಮೂಹಕ್ಕಭಿ-ಮಾನಿನಿ, ವೀಣಾಪಾಣಿ, ಬ್ರಹ್ಮನಿಯತಪತ್ನಿ, ಚತುರ್ಮುಖನ ರಾಣಿ, ಜಗನ್ಮಾತೆ, ಭಾರತಿ ಸರಸ್ವತಿ, ನಿನ್ನನ್ನು ಹೊಗಳಿ ಬೇಡುವೆ, ಶ್ರೀಹರಿಯ ಗುಣಗಾನಕ್ಕೆ ಸ್ಫೂರ್ತಿ ನೀಡಿ ನನ್ನ ನಾಲಿಗೆಯಲ್ಲಿ ನೆಲೆಸು

ಹಿಂದೆ ಮೂರನೆ ನಾಲ್ಕನೆ ಪದ್ಯಗಳಲ್ಲಿ ಬ್ರಹ್ಮವಾಯುಗಳನ್ನು ಜೊತೆಜೊತೆಯಾಗಿ ವಂದಿಸಿ ಈಗ ಐದನೆ ಆರನೆ ಪದ್ಯಗಳಲ್ಲಿ ಅದೇ ರೀತಿ ಸರಸ್ವತಿಭಾರತಿಯರನ್ನು ಜೊತೆ-ಜೊತೆಯಾಗಿಯೆ ವಂದಿಸುತ್ತಿದ್ದಾರೆ ದಾಸರು ಎಲ್ಲರ ಮಾತು ಮನಸ್ಸುಗಳಿಗೆ ಇಬ್ಬರೂ ಅಭಿಮಾನಿ ದೇವತೆಗಳು ಈ ಅಂಶದಲ್ಲಿ ತಾರತಮ್ಯವಿಲ್ಲ ಪದವಿಪ್ರಯುಕ್ತ ಸ್ವಲ್ಪ ತಾರತಮ್ಯ ಭಾರತೀ ಪದವಿಯಲ್ಲಿ ಒಂದು ಬ್ರಹ್ಮಕಲ್ಪ ಸಾಧನೆ ಮಾಡಿದ ಬಳಿಕ ಸರಸ್ವತೀಪದವಿ ಇದನ್ನು ಪರಿಗಣಿಸದೆಯೆ ಸರಸ್ವತಿ ಎನ್ನುವಲ್ಲಿ ಭಾರತಿ, ಭಾರತಿ ಎನ್ನುವಲ್ಲಿ ಸರಸ್ವತಿ ಎಂದು ವ್ಯತ್ಯಾಸವಿಲ್ಲದೆ ಶಾಸ್ತ್ರಗಳಲ್ಲಿ ವ್ಯವಹಾರ ಹಾಗೆಯೆ ದಾಸರೂ ಮಾಡಿದ್ದಾರೆ ಆದರೆ ಪದವಿ-ಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಮೊದಲಿಗೆ ಐದನೆ ಪದ್ಯದಲ್ಲಿ 'ಚತುರವದನನ ರಾಣಿ' ಯನ್ನು ಬಳಿಕ ಆರನೆ ಪದ್ಯದಲ್ಲಿ 'ಮಾರುತನ ನಿಜಪತ್ನಿ'ಯನ್ನು ಉಲ್ಲೇಖಿಸಿದ್ದಾರೆ ಸ್ತುತಿ ಮಾತ್ರ ಇಬ್ಬರಿಗೂ ಸಮನಾಗಿಯೆ ಸಲ್ಲುತ್ತದೆ

*ಚತುರವದನನ ರಾಣಿ*

ಬ್ರಹ್ಮ ಚತುರ್ವದನ, ನಾಲ್ಕು ಮುಖದವ ವಾಯುವೂ ಮುಂದಿನ ಕಲ್ಪದಲ್ಲಿ ಹಾಗೇ ಆಗುತ್ತಾನೆ ಚತುರ, ಚಾತುರ್ಯಯುಕ್ತವಾದ ವದನ, ಉಳ್ಳವನೆಂಬ ಅರ್ಥದಲ್ಲಿ ವಾಯು ಈಗಲೂ ಚತುರವದನನೆ ಅವರಿಬ್ಬರ ರಾಣಿಯರು ಭಾರತಿಸರಸ್ವತಿಯರು ಚತುರವಾದ ವದನ ಉಳ್ಳವರಾದುದರಿಂದ ಅನುರೂಪ ಪತ್ನಿಯರಾಗಿದ್ದು ರಾಣಿಯರೆನಿಸಿದ್ದಾರೆ

ಬಾಗವತ(೩-೮-೧೬) ದಲ್ಲಿ ಹೇಳುವಂತೆ ಬ್ರಹ್ಮ ನಾರಾಯಣನ ನಾಭಿಕಮಲದಲ್ಲಿ ಹುಟ್ಟಿದಾಗ ಒಂದೇ ಮುಖವಿತ್ತು 'ಎಲ್ಲಿ ನನಗೆ ಜನ್ಮವಿತ್ತ ತಂದೆ, ನಾರಾಯಣ?' ಎಂದು ಉತ್ಕಂಠೆಯಿಂದ ಎಲ್ಲೆಡೆ ಅರಸುವುದಕ್ಕಾಗಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮುಖಗಳನ್ನು ಮಾಡಿಕೊಂಡು ಚತುರ್ಮುಖನೆನಿಸಿದ ಹರಿಯನ್ನು ನೋಡಲು ಅದೆಷ್ಟು ಉತ್ಕಂಠೆ

ಆತನಿಗೆ! ಅದರ ಕೋಟ್ಯಂಶವಾದರೂ ತನಗೆ ಬರಲೆಂದು, ಕೊನಗೆ ಸದಾ ಹರಿಸ್ತುತಿ-ಗೈಯಲು ಸನ್ಮತಿಯಾದರೂ ಲಭಿಸಲೆಂದು ದಾಸರು ಉತ್ಕಂಠಿತರಾಗಿದ್ದಾರ

ಇಂಥ ನಾಲ್ಮೊಗನ 'ರಾಣಿ' ಮುದ್ದಿನ ಮಡದಿ ಸರಸ್ವತಿ ಎಷ್ಟು ಮುದ್ದು ಎಂದರೆ ಆತ ತನ್ನ ಶರೀರದಲ್ಲಿ ಅರ್ಧಭಾಗವನ್ನೆ ಅವಳಿಗೆ ಕೊಟ್ಟು ತನ್ನ ಅರ್ಧನಾರೀನರರೂಪ-ನಾಗಿದ್ದಾನೆ! 'ಅರ್ಧನಾರೀನರವಪುರ್ವಾಯುಃ' ಎಂದು ಬೃಹದ್ಭಾಷ್ಯ ಉದ್ಧೀವ ಬ್ರಾಹ್ಮಣ-ದಲ್ಲಿ ಹೇಳಿದೆ

**ಅತಿರೋಹಿತವಿಮಲವಿಜ್ಞಾನಿ**

ಬ್ರಹ್ಮ-ಸರಸ್ವತಿ, ವಾಯು-ಭಾರತಿ ಜೋಡಿಗಳು ಬಲು ಸುಂದರ, ಅನುರೂಪ ಬ್ರಹ್ಮವಾಯುಗಳು ಅತಿರೋಹಿತ ವಿಮಲ ವಿಜ್ಞಾನಿಗಳು ಬ್ರಹ್ಮ ಪ್ರಳಯದಲ್ಲಿ ಬ್ರಹ್ಮನ ನೂರು ವರ್ಷಗಳಷ್ಟು ದೀರ್ಘಕಾಲ ಬೇರೆ ಎಲ್ಲ ಜೀವರೂ ಗಾಢ ನಿದ್ರೆಯಲ್ಲಿ ಲೀನರಾಗಿ-ದ್ದರೂ ಬ್ರಹ್ಮವಾಯುಗಳು ಎಚ್ಚರದಿಂದಿದ್ದು ಹರಿಧ್ಯಾನ ಮಾಡುತ್ತಾರೆ ಹಾಗೇ ಅವರ ಮಡದಿಯರಾದ ಸರಸ್ವತೀಭಾರತಿಯರೂ ಎಚ್ಚತ್ತೇ ಇರುತ್ತಾರೆ ಅವರ ಜ್ಞಾನಕ್ಕೂ ತಿರೋ-ಧಾನವಿಲ್ಲ ಅತಿರೋಹಿತವಿಮಲವಿಜ್ಞಾನ ಅವರದು

ಜ್ಞಾನ ವಿಮಲ, ಅಂದರೆ ನಿರ್ಮಲ ಪರಶುಕ್ಲತ್ರಯರಲ್ಲಿ ಸೇರಿದವರು ಸರಸ್ವತಿ-ಭಾರತಿಯರು ಲಕ್ಷ್ಮಿ, ಬ್ರಹ್ಮವಾಯುಗಳು, ಸರಸ್ವತಿಭಾರತಿಯರು ಇವರ ಪರತತ್ವವಾದ ಹರಿಯ ವಿಷಯದಲ್ಲಿ ಸದಾ ಶುಕ್ಲರು, ಶುದ್ಧಬುದ್ಧಿ ಉಳ್ಳವರು ಎಂದೂ ಹರಿಯನ್ನು ವಿರೋಧಿಸುವವರಲ್ಲ

'ಮಧ್ವದುಗ್ಧಾಬ್ಧಯೇ ನಮಃ' 'ಶ್ರೀಮದಾನಂದತೀರ್ಥಕ್ಷೀರಾಂಭೋಧಿಃ' ಎನ್ನುವಂತೆ ಬ್ರಹ್ಮವಾಯುಗಳ ಹೃದಯ ನಿರ್ಮಲ ಕ್ಷೀರಸಾಗರದಂತೆ ಸದಾ ಹರಿಯ ಸನ್ನಿಧಾನಪಾತ್ರ-ವೆಂಬುದು ಪ್ರಸಿದ್ಧ. ಹಾಗೇ ಸರಸ್ವತೀಭಾರತಿಯರು ಅವರು, ಮಾಂಡೂಕಭಾಷ್ಯ ಹೇಳು-ವಂತೆ, ತಮ್ಮ ಅಂತರಂಗವನ್ನು ಹೀಗೆ ಬಿಚ್ಚಿ ತೋರಿದ್ದಾರೆ—

'ದೇವತೆಗಳೆ, ಹರಿಯ ಗುಣಗಾನ ಒಂದೇ ನನ್ನ ಗುರಿಯಾಗಿದೆ ಬೇರೆ ವಿಷಯವನ್ನೇ ನಾನು ಹೇಳುವುದಿಲ್ಲ ಹೇಳಿದಂತೆ ಏನಾದರೂ ಕಂಡು ಬಂದರೆ ಅದೂ ಕೊನೆಯಲ್ಲಿ ಅವನ ಪ್ರಶಂಸೆಯೆ ಮೇಲು ನೋಟಕ್ಕೆ ಹರಿಗೆ ವಿರುದ್ಧವೆಂದು ಕಾಣುವ ಯಾವುದೇ ಮಾತು ನನ್ನ ಅಂತರಂಗದ್ದಲ್ಲ ಅದನ್ನು ಸರ್ವಥಾ ಬಿಡಬೇಕು ಹರಿಸ್ತುತಿಗೆ ಸದಾ ಮುಂದೆ ಸರಿಯು-ವುದರಿಂದ, ಅವನಿಗೆ ವಿರುದ್ಧವಾದ ಯಾವ ಮಾತಿಗೂ ಹಿಂದೆ ಸರಿಯುವುದರಿಂದ ನಾನು ಸರಸ್ವತಿ ಎನಿಸುತ್ತೇನೆ'

'ಕ್ವಚಿದಜಯಾತ್ಮನಾನು ಚರತೋಽನು ಚರೇನ್ನಿಗಮಃ' ಎಂಬಲ್ಲಿ ಶ್ರುತಿಗೀತೆ ಹೇಳು-ತ್ತದೆ

'ಸೃಷ್ಟಿಕಾಲದಲ್ಲಿ ಜೀವರೆಲ್ಲರೂ ಎಚ್ಚರದಿಂದಿರುವುದರಿಂದ ವೇದ ಅವರಿಗೆ ವಿಧಿ ನಿಷೇಧಗಳನ್ನು ಮಾಡುತ್ತದೆ ಆದರೆ ಲಯಕಾಲದಲ್ಲಿ ಜೀವರು ನಿದ್ದೆ ಮಾಡುತ್ತಾರೆ ವಿಧಿ ನಿಷೇಧಗಳು ಆಗ ವ್ಯರ್ಥ ಅದರಿಂದ ಆಗ ಕೇವಲ ಹರಿಸ್ತುತಿಯನ್ನು ಮಾತ್ರವೆ ವೇದ ಮಾಡುತ್ತದೆ'

ಜಡವಾದ ವೇದ ಏನೂ ಸ್ತುತಿ ಮಾಡುವುದಿಲ್ಲ ಅಭಿಮಾನಿಗಳಾದ ಲಕ್ಷ್ಮಿ, ಬ್ರಹ್ಮ, ವಾಯು, ಸರಸ್ವತಿ, ಭಾರತಿಯರೆ ಜಡ ವೇದಮಂತ್ರಗಳಿಂದ ಸ್ತುತಿ ಮಾಡುತ್ತಾರೆ ಎನ್ನಬೇಕು ಆದ್ದರಿಂದ ಲಯಕಾಲದಲ್ಲಿಯೂ ಸರಸ್ವತಿಭಾರತಿಯರು ಹರಿಸ್ತುತಿ ಮಾಡುತ್ತಾರೆ, ಹರಿಸ್ತುತಿಯನ್ನೆ ಮಾಡುತ್ತಾರೆ ಎಂದಮೇಲೆ ಅವರ ಮನಸ್ಸು ಸದಾ ಪರಿಶುದ್ಧವೇ ಆಗಿರುತ್ತದೆ ಅದರಿಂದ ಲಯಕಾಲದಲ್ಲಿಯೂ ತಿರೋಧಾನವಿಲ್ಲದ ವಿಮಲ ವಿಜ್ಞಾನಿಗಳು ಅವರು

ಹೀಗೆ ಸ್ತುತಿಸುತ್ತ ದಾಸರು ತಮ್ಮ ಕವಿಪ್ರತಿಭೆಯೂ ನಿರ್ಮಲವಾಗಿರಲಿ, ತಿರೋಧಾನರಹಿತವಾಗಿರಲಿ ಎಂದು ಬೇಡುತ್ತಾರೆ

*ನಿಗಮಪ್ರತತಿಗಳಿಗಭಿಮಾನಿ ವೀಣಾಪಾಣಿ*

ವೇದಾದಿ ಸಕಲ ವಾಙ್ಮಯಕ್ಕೂ ಬ್ರಹ್ಮ-ವಾಯುಗಳು ಅಭಿಮಾನಿಗಳು ಅದರಿಂದ ಅವರ ಅರ್ಧಾಂಗಿನಿಯರೂ ಹಾಗಾಗಿರುವುದು ಸಹಜ ಸಾಹಿತ್ಯಕ್ಕೆ ಮಾತ್ರವಲ್ಲ, ಸಂಗೀತಕಲೆಗೂ ಅವರು ಅಭಿಮಾನಿಗಳು ವೀಣಾಪುಸ್ತಕಧಾರಿಣಿಯರೆಂದೆ ಅವರು ಪ್ರಸಿದ್ಧರಾಗಿದ್ದಾರೆ ಕಚ್ಛಪೀ ಎಂಬ ದಿವ್ಯ ವೀಣೆಯನ್ನು ನುಡಿಸುತ್ತ ನಾಮಗಾನದಿಂದ ಹರಿಯನ್ನು ಕೊಂಡಾಡುತ್ತಿದ್ದಾರೆ ವೀಣೆ ಸಂಗೀತಕ್ಕೆ, ಪುಸ್ತಕ ಸಾಹಿತ್ಯಕ್ಕೆ ಸಂಕೇತವಾಗಿದೆ

ಸಾಹಿತ್ಯಸಂಗೀತಕಲಾವಿಹೀನಃ
ಸಾಕ್ಷಾತ್ ಪಶುಃ ಪುಚ್ಛವಿಷಾಣಹೀನಃ ।
ತೃಣಂ ನ ಖಾದನ್ನಪಿ ಜೀವಮಾನಃ
ತದ್ ಭಾಗಧೇಯಂ ಪರಮಂ ಪಶೂನಾಮ್ ॥

'ಸಾಹಿತ್ಯ ಸಂಗೀತ ಕಲೆಗಳ ಗಂಧವೇ ಇಲ್ಲದ ಮಾನವ ಮಾನವನಲ್ಲ ಬಾಲಕೊಂಬುಗಳಿಲ್ಲದ ಪಶು ಈ ಪಶು ಹುಲ್ಲು ತಿನ್ನುವುದಿಲ್ಲ ಎಂಬುದೇ ಬೇರೆ ಪಶುಗಳ ಒಂದು ದೊಡ್ಡ ಭಾಗ್ಯ ಏಕೆಂದರೆ ಅದರಿಂದ ಅವುಗಳಿಗೆ ಹುಲ್ಲು ತಿನ್ನಲು ಸಿಗುತ್ತಿದೆ'—ಹೀಗೆನ್ನುತ್ತಿದೆ ಒಂದು ಸುಭಾಷಿತ ಹೀಗೆ ಮಾನವನನ್ನು ಮಾನವನನ್ನಾಗಿರಿಸುವ ಸಾಹಿತ್ಯಸಂಗೀತಗಳಿಗೆ ಅಭಿಮಾನಿನಿಯರು ಸರಸ್ವತೀಭಾರತಿಯರು

*ಬ್ರಹ್ಮಾಣಿ*

ಬ್ರಹ್ಮಾಣಿ, ಬ್ರಹ್ಮನ ನಿಯತ ಪತ್ನಿ, ಚತುರವದನನ ರಾಣಿ ಸರಸ್ವತಿಯೆ ಏಕೆ ಆಗಬೇಕು? ದ್ರೌಪದಿಯ ಶರೀರದಲ್ಲಿ ಭಾರತಿಯೊಂದಿಗೆ ಶಚೀ, ಶ್ಯಾಮಲಾ, ಉಷೆಯರೂ ಇದ್ದು

ಭೀಮ- ಸೇನನ ರಾಣಿಯರಾಗಿರಲಿಲ್ಲವೆ? ದೇವೇಂದ್ರನ ಅಮರಾವತಿಯ ಅಧಿದೇವತೆ ಹಿಡಿಂಬಿ- ಯಾಗಿ ಭೀಮನ ಅರ್ಧಾಂಗಿಯಾಗಿರಲಿಲ್ಲವೆ? ಹಾಗೆ ಸರಸ್ವತಿಯೂ ಒಬ್ಬಳು ಬ್ರಹ್ಮನ ಮಡದಿಯಾಗಿರಬಾರದೇಕೆ? ಈ ಪ್ರಶ್ನೆಗೆ 'ಬ್ರಹ್ಮಾಣಿ' ಎಂಬಲ್ಲಿ ಪರಿಹಾರವಿದೆ ಬ್ರಹ್ಮಾಣಿ ಎಂದರೆ ಬ್ರಹ್ಮನ ಪತ್ನಿ ನಿಯತ ಪತ್ನಿ, ಕಾರಣಾಂತರದಿಂದ ಪತ್ನಿಯರಾದವರೆಲ್ಲ ಬ್ರಹ್ಮಾಣಿ ಎನಿಸುವುದಿಲ್ಲ ಅವರಿಗೆ ಆ ಯೋಗ್ಯತೆ ಇಲ್ಲ

ಏನು ಆ ಯೋಗ್ಯತೆ? ಬ್ರಹ್ಮಾಣೀಶಬ್ದವೇ ಹೇಳುತ್ತದೆ—

ಬ್ರಹ್ಮ ಎಂದರೆ ವೇದ ವೇದಾಭಿಮಾನಿಯಾಗಿ ವೇದವನ್ನೆಲ್ಲ ಬಲ್ಲವಳು ಬ್ರಹ್ಮಾಣಿ( ಬ್ರಹ್ಮ ಅಣತಿ) ವೀಣೆಯೊಂದಿಗೆ ಸಾಮಗಾನ ಮಾಡುವುದರಿಂದ ಬ್ರಹ್ಮವನ್ನು ಅಂದರೆ ಸಾಮ- ವೇದವನ್ನು ಹಾಡುತ್ತಾಳೆ ಎಂಬ ಅರ್ಥದಲ್ಲಿಯೂ ಬ್ರಹ್ಮಾಣಿ( ಬ್ರಹ್ಮ ಅಣತಿ) ಬ್ರಹ್ಮ ಎಂದರೆ ಪರಬ್ರಹ್ಮ ನಾರಾಯಣ ಅವನನ್ನು ಅರಿತವಳು ಬ್ರಹ್ಮಾಣಿ(ಬ್ರಹ್ಮ ಅಣತಿ) ಬ್ರಹ್ಮವನ್ನು ಅಂದರೆ ವೇದವನ್ನೂ ಪರಬ್ರಹ್ಮ ನಾರಾಯಣನನ್ನೂ ಭಕ್ತಜನರ ಹೃದಯಕ್ಕ ತಂದುಕೊಡು- ವವಳೂ ಬ್ರಹ್ಮಾಣಿ ( ಬ್ರಹ್ಮ ಆನಯತಿ) ಬ್ರಹ್ಮವನ್ನು ಅಂದರ ತಪಸ್ಸನ್ನು ಸಾಧಕನಿಗ ಅನು- ಗ್ರಹಿಸುವುದರಿಂದಲೂ ಬ್ರಹ್ಮಾಣಿ ( ಬ್ರಹ್ಮ ಆನಯತಿ) ಇಂದ ಅನೇಕ ಉತ್ತಮ ಯೋಗ್ಯತಾ- ಸಂಪನ್ನಳಾದ್ದರಿಂದಲೆ ನಿಯತ ಪತ್ನಿಯಾಗಿ ಬ್ರಹ್ಮನನ್ನು ಸೇರಿರುವವಳು ಬ್ರಹ್ಮಾಣಿ ( ಬ್ರಹ್ಮಾಣಂ ಅಣತಿ)

ಬ್ರಹ್ಮಾಣಿ ಎಂಬ ಒಂದು ರೂಢವಾದ ನಾಮಕ್ಕೆ ಇಷ್ಟೆಲ್ಲ ಅರ್ಥ ಹೇಳುವುದು ಪಾಂಡಿತ್ಯದ ಕಸರತ್ತು, ದಾಸರಿಗೆ ಅಷ್ಟು ಅಭಿಪ್ರಾಯವಿರಲಿಕ್ಕಿಲ್ಲ ಎನ್ನಕೂಡದು ನ್ಯತಃ ಸುಧಾ ಓದಿದ ಮಹಾಪಂಡಿತರು ದಾಸರು

ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನುಧಾವತಿ

ಋಷಿತುಲ್ಯರಾದ ದಾಸರಾಯರ ಮಾತುಗಳಿಗೆ ಬಹು ಅರ್ಥಗಳು ನಾ ಮುಂದು ತಾ ಮುಂದೆಂದು ಏಕೆ ಬರಬಾರದು? ರಾಣಿ- ವಿಜ್ಞಾನಿ- ಅಭಿಮಾನಿ- ವಾಣಿ ಎಂದು, ಪ್ರಾಸಗಳನ್ನು ಬೆಳೆಸಿ ಕೊನೆಯಲ್ಲಿ ಅದನ್ನು ಕೈಬಿಡಲು ಮನಸ್ಸಾಗದೇ, ಪ್ರತಿಭೆಯೂ ಸಾಲದೆ, ಒಮ್ಮೆ 'ಚತುರವದನನ ರಾಣಿ' ಎಂದು ಸುಂದರವಾಗಿ ಹೇಳಿದ್ದನ್ನೆ ಸಪ್ಪೆಯಾಗಿ 'ಬ್ರಹ್ಮಾಣಿ' ಬ್ರಹ್ಮನ ಮಡದಿ ಎಂದು ಹೇಳಿ ಮುಗಿಸಿದರೆ ದಾಸರು? ಇಂಥ ವಿಮರ್ಶೆ ಕವಿಗೆ ನ್ಯಾಯ ದೊರಕಿಸಿ ಕೊಡಲಾರದು

**ಜನನಿ**

ಜನನಿ ಎಂದರೆ ತಾಯಿ ಎಂದರೆ ಜಗನ್ಮಾತೆ

ಬ್ರಹ್ಮನೆಂದರೆ ಲೋಕಕ್ಕೇ ಪಿತಾಮಹ 'ಬ್ರಹ್ಮಾತ್ಮಭೂಃ ಸುರಜ್ಯೇಷ್ಠಃ ಪರಮೇಷ್ಠೀ ಪಿತಾಮಹಃ' ಎಂದು ಅಮರಕೋಶ ಹೇಳುತ್ತದೆ ಪಿತಾಮಹನ ಮಡದಿ ಸರಸ್ವತಿ ಬರಿ

ತಾಯಿಯೆ? ಅಥವಾ ವಯಸ್ಸಾದ ಅಜ್ಜಿಯೆ? ವಸ್ತುತಃ ಆ ಪಿತಾಮಹನಿಗೂ ತಾಯಿ ಸರಸ್ವತಿ ಏಕೆಂದರೆ ಅವಳು ಪ್ರಕೃತಿಗೆ ಅಭಿಮಾನಿನಿ ಪ್ರಕೃತಿಯಿಂದ ಹುಟ್ಟಿದ ಮಹತ್ತತ್ತ್ವಕ್ಕೆ ಬ್ರಹ್ಮ ಅಭಿಮಾನಿ ಆದರಿಂದ ಪ್ರಕೃತಿಯ ಅಭಿಮಾನಿಯಾದ ಸರಸ್ವತಿ, ಮಹತ್ತತ್ತ್ವಾಭಿಮಾನಿಯಾದ ಬ್ರಹ್ಮನಿಗೆ ಜನ್ಮವಿತ್ತವಳು, ತಾಯಿ ಭಾಗವತತಾತ್ಪರ್ಯ ಹಾಗೇ (೧೧-೨೪-೨೬) ಹೇಳುತ್ತಿದೆ ಹೀಗೆ ನಮ್ಮ ಪಿತಾಮಹನಿಗೆ ತಾಯಿಯಾದವಳು ನಮಗೆ ತಾಯಿ ಹೇಗೆ?

ಇದಕ್ಕೆ ಉತ್ತರ ಸುಲಭ ದೇವತೆಗಳಿಗೆ ವಯಸ್ಸಾಗುವುದಿಲ್ಲ ಅವರು ನಿರ್ಜರರು ವಯಸ್ಸಿನಲ್ಲಿ ಅಜ್ಜಿ ಮುತ್ತಜ್ಜಿಯರಾಗಿದ್ದರೂ ಮೈಮಾಟದಲ್ಲಿ ಷೋಡಶಿಯರೆ ಆಗಿರುತ್ತಾರೆ ಆದರಿಂದ ಪ್ರಕೃತ್ಯಭಿಮಾನಿಯಾದ ಒಂದು ರೂಪದಲ್ಲಿ ಸರಸ್ವತಿ ಬ್ರಹ್ಮನಿಗೆ ಅವನ ಮಹತ್ತತ್ತ್ವಾಭಿಮಾನಿಯಾದ ಒಂದು ರೂಪಕ್ಕೆ ತಾಯಿಯಾದರೂ ಮೂಲ ರೂಪದಲ್ಲಿ ಪ್ರೇಯಸಿಯಾಗಿಯೆ ಇರುತ್ತಾಳೆ ಅವನಂತೆಯೆ ಮಹತ್ತತ್ತ್ವಾಭಿಮಾನಿನಿಯಾಗಿದ್ದು ಅವನ ಅರ್ಧಾಂಗಿನಿಯೆ ಆಗಿರುತ್ತಾಳೆ ಲೋಕಮಾತೆಯಾಗಿ ಎಲ್ಲರನ್ನೂ ಹೆತ್ತು ಹೊತ್ತು ಪೋಷಿಸುತ್ತಾಳೆ ಅವಳ ಎದೆ ಹಾಲಿಂದಲೇ ಲೋಕ ಉಳಿದಿದೆ ಅವಳ ಸ್ತನಗಳು ಎಂದೂ ಬತ್ತುವುದಿಲ್ಲ ವಾಙ್ಮಯಮೂರ್ತಿಯಾದ ಸರಸ್ವತಿಗೆ ಸಾಹಿತ್ಯ ಸಂಗೀತಗಳೆ ಎರಡು ಸ್ತನಗಳು

ಸಾಹಿತ್ಯಮಥ ಸಂಗೀತಂ ಸರಸ್ವತ್ಯಾಃ ಸ್ತನದ್ವಯಮ್

ಸಾರಸ್ವತಪ್ರಪಂಚದಲ್ಲಿರುವ ಎಲ್ಲ ಸರಸ್ವತೀಪುತ್ರರು ಆ ಸ್ತನಗಳಿಂದ ಸುರಿವ ಸಾಹಿತ್ಯಸಂಗೀತಸುಧಾರಸ ಉಂಡು ನಲಿಯುತ್ತಾರೆ

ದೇವತೆಗಳು ಸದಾ ಸರಸ್ವತೀಭಾರತಿಯರ ಸ್ತನ್ಯಪಾನ ಬಯಸುತ್ತಾರಂತೆ ಋಗ್ವೇದದಲ್ಲಿ ಒಂದು ಮಂತ್ರ—

ದಿವಸ್ಪಯೋ ದಿಧಿಷಾಣಾ ಅವೇಷನ್ ವಿದುರ್ದೇವಾಃ ಸಹಸಾ ಮಾನಮರ್ಕಮ್

'ದೇವತೆಗಳು ಹರಿವಾಯುಗಳ ಉಪಾಸನೆ ಮಾಡುತ್ತ ಭಾರತಿಯ ಸ್ತನಕ್ಷೀರ ಉಣಲು ಬಯಸುತ್ತಾರೆ'

ಇನ್ನೊಂದು ಮಂತ್ರ—

ಯಸ್ತೇ ಸ್ತನಃ ಶಶಯೋ ಯೋ ಮಯೋಭೂಃ
ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ ।
ಯೋ ರತ್ನಧಾ ವಸುವಿದ್ಯಃ ಸುದತ್ರಃ
ಸರಸ್ವತಿ ತಮಿಹ ಧಾತವೇಕಃ ॥

'ಸರಸ್ವತಿ, ನಿನ್ನ ಸ್ತನ ರತ್ನಹಾರ, ಚಿನ್ನದಾಭರಣಗಳಿಂದ ಭೂಷಿತವಾಗಿದ್ದು ಲೋಕಕ್ಕೆ ಸುಖ ನೀಡುವಂಥದ್ದು ಅದರಲ್ಲಿ ಸರ್ವೋತ್ತಮನಾದ ಹರಿಯ ಸನ್ನಿಧಾನವಿದೆ ನಮ್ಮನ್ನು ನೀನು, ಮಕ್ಕಳಂತೆ ನೋಡಿಕೊಳ್ಳುತ್ತಾ ಸ್ತನ್ಯಪಾನ ನೀಡಿ ಪೋಷಿಸುವಿ, ರಕ್ಷಿಸುವಿ'

**ನೆಲೆಸು ನೀ ಮದ್ವದನಸದನದಲಿ**

ಇಂಥ ಭಾರತಿಸರಸ್ವತಿಯರನ್ನು ವದನಸದನದಲ್ಲಿರುವಂತೆ ಬೇಡಿಕೊಳ್ಳುತ್ತಿದ್ದಾರೆ ದಾಸರು ತಾಯಿ ಮಗುವಿಗೆ ಮೊದಲ ಮಾತು ಕಲಿಸುತ್ತಾಳೆ ಏಕೆಂದರೆ ಎಲ್ಲರ ತಾಯಿ ಸರಸ್ವತಿ ಮಾತಿಗೆ ಅಭಿಮಾನಿನಿ ಅವಳು ಎಲ್ಲರ ವದನಸದನದಲ್ಲಿ ನಾಲಿಗೆಯ ಮೇಲೆ ಕುಳಿತು ಮಾತನ್ನಾಡಿಸುತ್ತಾಳೆ ಅವಳ ಅನುಗ್ರಹವಾಯಿತೆಂದರೆ ಹುಟ್ಟುಮೂಕನೂ ವಾಗ್ಮಿ ಎನಿಸಬಲ್ಲ ಟೀಕಾಕೃತ್ಪಾದರು ಹೇಳುತ್ತಾರೆ—

ಭವತಿ ಯದನುಭಾವಾದೇಡಮೂಕೋऽಪಿ ವಾಗ್ಮೀ

ಮಗುವಿನ ಮನಸ್ಸನ್ನು ತಾಯಿಯೆ ಬಲ್ಲಳು ಏಕೆಂದರೆ ಎಲ್ಲರ ತಾಯಿ ಸರಸ್ವತಿ ಮನೋಭಿಮಾನಿನಿ ಅವಳ ಅನುಗ್ರಹವಾಯಿತೆಂದರೆ ಮೂಢನೂ ಮಹಾಜ್ಞಾನಿ ಪಂಡಿತ-ನಾಗಬಹುದು—

ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ

ಇಂಥ ಭಾರತಿಯನ್ನೂ ಸರಸ್ವತಿಯನ್ನೂ ಸನ್ಮತಿ ನೀಡುತ್ತ ಮನಸ್ಸಿನಲ್ಲಿಯೂ, ಸ್ತುತಿಶಕ್ತಿ-ಯನ್ನು ಪ್ರಚೋದಿಸುತ್ತ ನಾಲಿಗೆಯಲ್ಲಿಯೂ ನೆಲೆಸಲು ಪ್ರಾರ್ಥಿಸುತ್ತಾರೆ, ದಾಸರು, ಟೀಕಾ-ಕೃತ್ಪಾದರಂತೆ. ಅವರೂ ಹೀಗ ಪ್ರಾರ್ಥಿಸಿದ್ದರು—

ಸಕಲವಚನಚೇತೋದೇವತಾ ಭಾರತೀ ಸಾ
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ

**ನುತಿಸಿ ಬೇಡುವೆ**

ನುತಿಸಿ ಸ್ತೋತ್ರ ಮಾಡಿ ಬೇಡುತ್ತೇನೆ ಎನ್ನುತ್ತಾರೆ ದಾಸರು 'ನತಿಸಿ ಬೇಡುವೆ' ಎಂದು ಕೆಲವೆಡೆ ಪಾಠ ಆಗ 'ನಮಿಸಿ' ಎನ್ನದೆ 'ನತಿಸಿ' ಎಂದುದು ತಕಾರಪ್ರಾಸಕ್ಕಾಗಿ ಇರಬಹುದು ಸಂಕರ್ಷಣ ಒಡೆಯರ ವ್ಯಾಖ್ಯಾನದಲ್ಲಿ 'ನತಿಸಿ=ವಂದನ ಮಾಡಿ, ಸ್ತೋತ್ರಮಾಡಿ' ಎಂದಿದೆ ಆದರೆ ವ್ಯಾಸದಾಸಸಿದ್ಧಾಂತಕೌಮುದಿಯಲ್ಲಿ 'ನುತಿಸಿ ಇತ್ಯನೇನಾನ್ವಯಃ' ಎಂದಿದೆ. ಗುರುಶ್ರೀಶವಿಟ್ಠಲರ ಶಿಷ್ಯರ ವ್ಯಾಖ್ಯಾನದಲ್ಲಿಯೂ ಸ್ಪಷ್ಟವಾಗಿ 'ನುತಿಸಿ ಬೇಡುವೆ=ಸ್ತೋತ್ರಮಾಡಿ ನಿನ್ನ ಬೇಡಿಕೊಳ್ಳುತ್ತೇನೆ' ಎಂದಿದೆ

'ನಾರಸಿಂಹನೆ ನಮಿಪೆ' 'ದಿವೌಕಸರಿಗಭಿನಮಿಪೆ' 'ದಾಸವರ್ಗಕೆ ನಮಿಪ' ಎಂದು ಮುಂತಾಗಿ 'ನಮಿಸುವ' ದಾಸರು ಕೇವಲ ಪ್ರಾಸಕ್ಕಾಗಿ 'ನತಿಸಿ' ರಲಾರರು

**ಕೃತಿರಮಣಪ್ರದ್ಯುಮ್ನನಂದನೆ**
**ಚತುರವಿಂಶತಿ ತತ್ವಪತಿ ದೇ-**
**ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ ।**
**ಸತತ ಹರಿಯಲಿ ಗುರುಗಳಲಿ ಸದ್-**

**ರತಿಯ ಪಾಲಿಸಿ ಭಾಗವತ ಭಾ-**
**ರತ ಪುರಾಣ ರಹಸ್ಯ ತತ್ವಗಳರುಪು ಕರುಣದಲಿ ॥ ೬ ॥**

'ಸರಸ್ವತಿ ಭಾರತಿಯರೆ, ನೀವು ಕೃತಿದೇವಿಯ ರಮಣನಾದ ಪ್ರದ್ಯುಮ್ನಮೂರ್ತಿ ಶ್ರೀಹರಿಯ ಮಕ್ಕಳು ಇಪ್ಪತ್ತನಾಲ್ಕು ತತ್ವಗಳಿಗೆ ಅಭಿಮಾನಿಗಳಾದ ದೇವತೆಗಳಿಗೆಲ್ಲ ಹಿರಿಯನಾದ, ಗುರುವಾದ ವಾಯುವಿಗೂ ಬ್ರಹ್ಮನಿಗೂ ನಿಯತ ಪತ್ನಿಯರಾಗಿರುವವರು ನೀವು ನನಗೆ ಸದಾ ಹರಿಗುರುಭಕ್ತಿಯನ್ನು ನೀಡಿ ಭಾಗವತಭಾರತಪುರಾಣರಹಸ್ಯಗಳನ್ನು ದಯೆಯಿಂದ ಅರುಹಬೇಕು'

ಹಿಂದಿನ ಪದ್ಯದಲ್ಲಿ ಭಾರತಿಸರಸ್ವತಿಯರನ್ನು ಜೊತೆಯಾಗಿ ವಂದಿಸಿ ಈ ಪದ್ಯದಲ್ಲಿಯೂ ಅದನ್ನೆ ಮುಂದುವರೆಸುತ್ತಿದ್ದಾರೆ ದಾಸರು

**ಕೃತಿರಮಣಪ್ರದ್ಯುಮ್ನನಂದನೆ**

ಪ್ರದ್ಯುಮ್ನನೆಂದರೆ ಮನ್ಮಥನೆಂದು ಪ್ರಸಿದ್ಧಿ 'ಮದನೋ ಮನ್ಮಥೋ ಮಾರಃ ಪ್ರದ್ಯುಮ್ನೋ ಮೀನಕೇತನಃ' ಎಂದು ಅಮರಕೋಶ ಹೇಳುವಂತೆ ಮದನ, ಮನ್ಮಥ, ಮಾರ, ಪ್ರದ್ಯುಮ್ನ, ಮೀನಕೇತನ ಮುಂತಾದವು ಒಬ್ಬನವೇ ಹೆಸರುಗಳೆಂದು ಪುರಾಣ, ಇತಿಹಾಸ, ಕಾವ್ಯ, ನಾಟಕಗಳಲ್ಲಿ ಎಲ್ಲೆಡೆ ಕಂಡುಬರುತ್ತದೆ ಈತ ರತಿರಮಣ ಪ್ರದ್ಯುಮ್ನ ಆದರೆ ಶ್ರೀಹರಿಯ ಚತುರ್ವ್ಯೂಹರೂಪಗಳಲ್ಲಿ ಒಂದಾದ ಪ್ರದ್ಯುಮ್ನ ಇಲ್ಲಿ ವಿವಕ್ಷಿತ ಈ ಪ್ರದ್ಯುಮ್ನ ಕೃತಿರಮಣ ಈತನ ಮಕ್ಕಳೇ ಸರಸ್ವತಿಭಾರತಿಯರು

ಬ್ರಹ್ಮಾಂಡಸೃಷ್ಟಿ ಮಾಡುವುದಕ್ಕೆ ಪೂರ್ವದಲ್ಲಿ ಶ್ರೀಹರಿ ತನ್ನನ್ನು ತಾನೇ ಸೃಷ್ಟಿ ಮಾಡಿಕೊಳ್ಳುತ್ತಾನೆ ಮಹಾಲಕ್ಷ್ಮೀದೇವಿಯನ್ನೂ ಸೃಷ್ಟಿಮಾಡುತ್ತಾನೆ ಅನಂತರ ತತ್ವಾಭಿಮಾನಿಗಳನ್ನೂ ತತ್ವಗಳನ್ನೂ ಸೃಷ್ಟಿಮಾಡುತ್ತಾನೆ ಬಳಿಕ ಬ್ರಹ್ಮಾಂಡಸೃಷ್ಟಿ ತನ್ನನ್ನು ತಾನು ಸೃಜಿಸುವುದು ಶುದ್ಧಸೃಷ್ಟಿ ಎನಿಸುತ್ತದೆ ಒಂದು ದೀಪದಿಂದ ಲಕ್ಷ ದೀಪಗಳು ಹೊರಬಂದರೂ ಆ ಎಲ್ಲ ದೀಪಗಳೂ ಒಂದೇ ರೀತಿ ಇರುತ್ತವೆ ವ್ಯತ್ಯಾಸವಿರುವುದಿಲ್ಲ ಹಾಗೆಯೇ ಒಂದು ಮೂಲರೂಪದಿಂದ ಚತುರ್ವ್ಯೂಹಗಳು, ದಶಾವತಾರಗಳು ಚತುರ್ವಿಂಶತಿ ರೂಪಗಳು ಮುಂತಾಗಿ ಅಸಂಖ್ಯ ರೂಪಗಳು ಸ್ವೇಚ್ಛೆಯಿಂದಲೆ ಹೊರಗೆ ಬರುತ್ತವೆ ಇದು ಕೇವಲ ಲೀಲೆ ಆ ರೂಪಗಳ ಶಕ್ತಿಸಾಮರ್ಥ್ಯಾದಿಗಳಲ್ಲಿ ಏನೊಂದೂ ವ್ಯತ್ಯಾಸವಿಲ್ಲ ಶುದ್ಧಸೃಷ್ಟಿಯಲ್ಲಿ ಹೊರಬಂದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಚತುರ್ವ್ಯೂಹದಲ್ಲಿ ಒಂದು ಈ ಪ್ರದ್ಯುಮ್ನರೂಪ ಪ್ರಪಂಚಸೃಷ್ಟಿ ಮಾಡುವಂಥಹುದು

ಮಹಾಲಕ್ಷ್ಮಿಗೆ ಹರಿಯಾಜ್ಞೆಯಂತೆ ತನ್ನ ಮೂಲರೂಪದಿಂದ ಅಸಂಖ್ಯ ರೂಪಗಳನ್ನು ಹೊರತರುವ ಬಯಕೆ ಉಂಟಾಗುತ್ತದೆ ಇದು ಹರಿಯ ಅಧೀನವಾದ್ದರಿಂದ ಪರಾಧೀನವಿಶೇಷವಾಪ್ತಿರೂಪವಾದ ಸೃಷ್ಟಿ ಎನಿಸುತ್ತದೆ ದೇವಿ ಹರಿಯ ವಾಸುದೇವರೂಪವನ್ನು

ತನ್ನ ಮಾಯಾರೂಪದಿಂದಲೂ, ಸಂಕರ್ಷಣರೂಪವನ್ನು ಜಯಾರೂಪದಿಂದಲೂ, ಪ್ರದ್ಯುಮ್ನರೂಪವನ್ನು ಕೃತಿರೂಪದಿಂದಲೂ, ಅನಿರುದ್ಧರೂಪವನ್ನು ಶಾಂತಿರೂಪದಿಂದಲೂ ಸೇರುತ್ತಾಳೆ. ಮಾಯಾ-ವಾಸುದೇವ ದಂಪತಿಗಳಲ್ಲಿ ಚತುರ್ಮುಖನೂ, ಜಯಾ-ಸಂಕರ್ಷಣ ದಂಪತಿಗಳಲ್ಲಿ ವಾಯುವೂ, ಕೃತಿ-ಪ್ರದ್ಯುಮ್ನ ದಂಪತಿಗಳಲ್ಲಿ ಸರಸ್ವತಿಭಾರತಿಯರೂ ಜನಿಸುತ್ತಾರೆ. ಸರಸ್ವತಿ ಚತುರ್ಮುಖನ ನಿಯತ ಪತ್ನಿ. ಭಾರತಿ ವಾಯುವಿನ ನಿಜಪತ್ನಿ.

ಚತುರ್ಮುಖ ತನ್ನ ಮಗಳನ್ನು ಮದುವೆಯಾದ ಎನ್ನುವುದು ಉಚಿತವಲ್ಲ. ಬ್ರಹ್ಮಾಂಡ-ಸೃಷ್ಟಿಯಾದ ಬಳಿಕ ಅದರೊಳಗೆ ಗರ್ಭೋದಕದಲ್ಲಿ ಮಲಗಿದ ಅನಂತಪದ್ಮನಾಭರೂಪಿ ನಾರಾಯಣನ ನಾಭಿಕಮಲದಲ್ಲಿ ಇನ್ನೊಮ್ಮೆ ಬ್ರಹ್ಮ ಜನಿಸಿದಾಗ ಸರಸ್ವತಿಯ ಜೊತೆಗೆ ಅರ್ಧನಾರೀನರರೂಪದಿಂದಲೇ ಬ್ರಹ್ಮ ಜನಿಸಿದ. ಆತ ತನ್ನ ಶರೀರದಿಂದ ಸರಸ್ವತಿಯನ್ನು ಬೇರ್ಪಡಿಸಿ ಅವಳನ್ನು ಮದುವೆಯಾದ. ಹೀಗೆ ಸರಸ್ವತಿ ಬ್ರಹ್ಮನ ಶರೀರದಿಂದ ಹೊರ ಬಂದರೂ ಅವಳು ಅವನ ಮಗಳಲ್ಲ, ಅರ್ಧಾಂಗಿನಿ, ಶರೀರದ ಅರ್ಧಭಾಗದಿಂದ ಹೊರ ಬಂದವಳು. ಸರಸ್ವತಿಭಾರತಿಯರು ಕೃತಿ-ಪ್ರದ್ಯುಮ್ನ ದಂಪತಿಗಳಲ್ಲಿ ಜನಿಸಿದ ವೃತ್ತಾಂತ ಗರುಡ ಪುರಾಣದಲ್ಲಿ ಇದೆ. ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಇದೆ.

ವರಾಹಪುರಾಣದಲ್ಲಿ ಇನ್ನೂ ಹೆಚ್ಚಿನ ವಿವರವಿದೆ. ಅದರ ಪ್ರಕಾರ ಕೃತಿದೇವಿಯಲ್ಲಿ ಗಾಯತ್ರಿ, ಸಾವಿತ್ರಿ, ಸರಸ್ವತಿ, ಭಾರತಿ ಎಂಬ ನಾಲ್ಕು ಮಂದಿ ಮಕ್ಕಳು ಹುಟ್ಟಿದರು. ಗಾಯತ್ರಿಸಾವಿತ್ರಿಯರು ಸರಸ್ವತಿಯವೇ ಬೇರೆ ಎರಡು ರೂಪಗಳು. ಬ್ರಹ್ಮನಿಗೂ ಮೂರು ರೂಪಗಳು. ವಾಸುದೇವಪುತ್ರನಾದ ಪುರುಷ, ಅನಿರುದ್ಧಪುತ್ರನಾದ ವಿರಿಂಚ, ಪದ್ಮನಾಭಪುತ್ರನಾದ ಚತುರ್ಮುಖ ಈ ಮೂರು ರೂಪಗಳಿಂದ ಬ್ರಹ್ಮನೇ ಗಾಯತ್ರಿ, ಸಾವಿತ್ರಿ, ಸರಸ್ವತಿಯನ್ನು ಮದುವೆಯಾದ. ಭಾರತಿಯನ್ನು ವಾಯು ಮದುವೆಯಾದ. ಹೀಗೆ ಕೃತಿ-ರಮಣಪ್ರದ್ಯುಮ್ನನಂದನೆಯರು, ಸರಸ್ವತಿಭಾರತಿಯರು.

***ಚತುರವಿಂಶತಿತತ್ವಪತಿದೇವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ***

ಚತುರ್ವಿಂಶತಿ ತತ್ವಗಳು—ಪ್ರಕೃತಿ, ಮಹತ್ತತ್ವ, ಅಹಂಕಾರ ತತ್ವ, ಮನಸ್ಸು, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚ ತನ್ಮಾತ್ರೆಗಳು, ಪಂಚ ಭೂತಗಳು. ಇವುಗಳಿಗೆ ಪತಿಗಳಾದ ದೇವತೆಗಳು:

ಪ್ರಕೃತಿ—ಮಹಾಲಕ್ಷ್ಮಿ, ಮಹತ್ತತ್ವ—ಬ್ರಹ್ಮವಾಯುಗಳು, ಅಹಂಕಾರತತ್ವ—ಗರುಡ-ಶೇಷರುದ್ರರು, ಮನಸ್ಸು—ಇಂದ್ರಕಾಮರು. ಶ್ರೋತ್ರ—ಚಂದ್ರ, ಇಂದ್ರ ಮುಂತಾದ ದಿಗಭಿಮಾನಿ ದೇವತೆಗಳು. ತ್ವಕ್—ಆಹಂಕಾರಿಕ ಪ್ರಾಣ, ಚಕ್ಷು—ಸೂರ್ಯ, ಜಿಹ್ವಾ—ವರುಣ, ಘ್ರಾಣ—ಅಶ್ವಿಗಳು. ವಾಕ್—ಅಗ್ನಿ, ಪಾಣಿ—ಶಚಿ, ರತಿ, ಅನಿರುದ್ಧ, ಸ್ವಾಯಂಭುವ ಮನು, ದಕ್ಷ, ಬೃಹಸ್ಪತಿ. ಪಾದ—ಜಯಂತ, ಪಾಯು—ಮಿತ್ರ, ಉಪಸ್ಥ—ವಿಶ್ವಾಮಿತ್ರ, ವಸಿಷ್ಠ, ಅತ್ರಿ,

ಮರೀಚಿ, ಪುಲಸ್ತ್ಯ ಪುಲಹ, ಕ್ರತು, ಅಂಗಿರ, ವೈವಸ್ವತ ಮನು, ಶಬ್ದ ತನ್ಮಾತ್ರೆ–ಬೃಹಸ್ಪತಿ, ಸ್ಪರ್ಶ–ಅಪಾನ ವಾಯು, ರೂಪ–ವ್ಯಾನ, ರಸ–ಉದಾನ, ಗಂಧ–ಸಮಾನ, ಆಕಾಶ–ಗಣಪತಿ ವಾಯು–ಮರೀಚಿ, ತೇಜಸ್–ಅಗ್ನಿ, ಅಪ್–ವರುಣ, ಪೃಥಿವಿ–ಧರಾದೇವಿ

ಈ ತತ್ತ್ವಾಭಿಮಾನಿ ದೇವತೆಗಳಲ್ಲಿ ಮಹಾಲಕ್ಷ್ಮಿ ಸೇರುತ್ತಾಳೆ ಅವಳಿಗೆ ಬ್ರಹ್ಮವಾಯುಗಳು ಗುರುಗಳಲ್ಲ ತಾವೂ ತತ್ತ್ವಾಭಿಮಾನಿಗಳು ತಮಗೆ ತಾವೇ ಗುರುಗಳೆನ್ನಲೂ ಬರುವುದಿಲ್ಲ ಆದರಿಂದ ಎಲ್ಲ ಚತುರವಿಂಶತಿ ತತ್ತ್ವಪತಿ ದೇವತೆಗಳಿಗೆ ಬ್ರಹ್ಮವಾಯುಗಳು ಗುರುವೆನಿಸು-ವುದು ಅಶಕ್ಯ ಇಪ್ಪತ್ತೆರಡು ತತ್ತ್ವದೇವತೆಗಳಿಗೆ ಮಾತ್ರ ಗುರುವೆನಿಸುತ್ತಾರೆ ಮಹತ್ತತ್ತ್ವಕ್ಕಿಂತ ಬೇರೆಯಾಗಿ ಬುದ್ಧಿತತ್ತ್ವವನ್ನೂ ಜೊತೆಗೆ ಸೇರಿಸಿದರೆ ಅದರ ಅಭಿಮಾನಿಗಳಾದ ಸರಸ್ವತಿಭಾರತಿಯರಿಗೆ ಬ್ರಹ್ಮವಾಯುಗಳು ಗುರುವೆನಿಸುತ್ತಾರೆ, ನಿಜ ಆದರೂ ಒಟ್ಟು ಇಪ್ಪತ್ತಮೂರು ತತ್ತ್ವದೇವತೆಗಳಿಗೆ ಮಾತ್ರ ಗುರುವೆನಿಸಬಹುದು ಇಪ್ಪತ್ತನಾಲ್ಕು ತತ್ತ್ವಗಳಿಗೆ ಅಲ್ಲ ಆದ್ದರಿಂದ 'ಚತುರವಿಂಶತಿ' ಎಂದುದು ಹೇಗೆ?

ಇದಕ್ಕೆ ಸಮಾಧಾನ ಎರಡು ರೀತಿಯಿಂದ ಕೊಡಬಹುದು ಚತುರವಿಂಶತಿ ತತ್ತ್ವಪತಿ-ಗಳಾದ ದೇವತೆಗಳಿಗೆ ಗುರು ಎಂದು ಅನ್ವಯವಿಟ್ಟುಕೊಳ್ಳದೆ ಚತುರವಿಂಶತಿ ತತ್ತ್ವಪತಿಯೂ, ದೇವತೆಗಳಿಗೆ ಗುರುವೂ ಆದ ಮಾರುತ ಎಂದು ಅನ್ವಯ ಮಾಡಿಕೊಳ್ಳಬೇಕು ಆಗ ಅವ್ಯಕ್ತವನ್ನು ಬಿಟ್ಟು ಬುದ್ಧಿತತ್ತ್ವ ಸೇರಿದಂತೆ ಇಪ್ಪತ್ತನಾಲ್ಕು ತತ್ತ್ವಗಳಿಗೆ ಪತಿ ಮಾರುತನೆ ಅಥವಾ ಪ್ರಕೃತಿತತ್ತ್ವಕ್ಕೆ ಮಹಾಲಕ್ಷ್ಮಿ ಮುಖ್ಯಾಭಿಮಾನಿನಿಯಾದರೂ ಜೊತೆಗೆ ಅಮುಖ್ಯಾಭಿಮಾನಿಗಳಾಗಿ ಸರಸ್ವತಿಭಾರತಿಯರೂ ಇದ್ದಾರೆ ಹಾಗೇ ಮಹತ್ತತ್ತ್ವಕ್ಕೂ ಮುಖ್ಯಾಭಿಮಾನಿಗಳಾದ ಬ್ರಹ್ಮವಾಯುಗಳ ಜೊತೆಗೆ ಸರಸ್ವತಿಭಾರತಿಯರೂ ಅಮುಖ್ಯಾ-ಭಿಮಾನಿಗಳಾಗಿದ್ದಾರೆ ಮೇಲಿನವರಿಗೆ ಕೆಳಗಿನವರ ತತ್ತ್ವಗಳಲ್ಲಿ ಹೆಚ್ಚು ಅಧಿಕಾರವಿರುವಂತೆ, ಕೆಳಗಿನವರಿಗೂ ಮೇಲಿನವರ ತತ್ತ್ವಗಳಲ್ಲಿ ಸ್ವಲ್ಪ ಅಧಿಕಾರವಿದ್ದೇ ಇದೆ ಮಕ್ಕಳ ಸೊತ್ತಿನಲ್ಲಿ ತಂದೆಗೆ ಅಧಿಕಾರ, ತಂದೆಯ ಸೊತ್ತಿನಲ್ಲಿ ಮಕ್ಕಳಿಗೆ ಅಧಿಕಾರ ಹೇಗೋ ಹಾಗೆ ಎಂದು ಗೀತಾತಾತ್ಪರ್ಯ(೩-೪೨) ಹೇಳಿದೆ

ಸರ್ವಾಭಿಮಾನಿನೋ ದೇವಾಃ ಸರ್ವೇऽಪಿ ಹ್ಯುತ್ತರೋತ್ತರಮ್ ।
ಆಧಿಕ್ಯಂ ವಕ್ತುಮೇವೈಷಾಂ ಪೃಥಕ್ ಸ್ಥಾನಮುದೀರ್ಯತೇ ॥
ಆಧಿಕ್ಯಕ್ರಮ ಏವಾತ್ರ ಶಾಸ್ತ್ರತಾತ್ಪರ್ಯಮಿಷ್ಯತೇ ।
ಸ್ಥಾನೇಷು ತ್ವವರೇಷಾಂ ಚ ಪರೇ ಸಂತಿ ನಚೇತರೇ ॥
ತಥಾಪಿ ಪಿತುರರ್ಥೋ ಯಃ ಪುತ್ರಸ್ಯಾಪ್ಯುಪಚರ್ಯತೇ ।
ಅವ್ಯಕ್ತಾದಿಪದಾರ್ಥಾನಾಂ ಸರ್ವೇ ತದಭಿಮಾನಿನಃ ॥

'ಎಲ್ಲ ದೇವತೆಗಳೂ ಎಲ್ಲ ತತ್ತ್ವಗಳಿಗೂ ಅಭಿಮಾನಿಗಳು ತಾರತಮ್ಯವನ್ನು ತಿಳಿಸುವ ಉದ್ದೇಶದಿಂದಲೇ ಅವರಿಗೆ ಬೇರೆ ಬೇರೆ ಸ್ಥಾನಗಳು ಉಕ್ತವಾಗಿವೆ ತಾರತಮ್ಯಕ್ರಮ-

ಮಾತ್ರವೆ ಶಾಸ್ತ್ರದಲ್ಲಿ ವಿವಕ್ಷಿತವಾಗಿರುತ್ತದೆ ಕೆಳಗಿನವರ ತತ್ತ್ವಗಳಲ್ಲಿ ಮೇಲಿನವರಿಗೆ ಅಧಿಕಾರವಿರುತ್ತದೆ ಹೊರತು ಮೇಲಿನವರ ತತ್ತ್ವಗಳಲ್ಲಿ ಕೆಳಗಿನವರಿಗೆ ಅಧಿಕಾರವಿಲ್ಲ ಆದರೂ ಕೆಲವು ಕಡೆ ಉಂಟೆಂದು ಹೇಳಿದೆ ಅದು ತಂದೆಯ ವಸ್ತು ಮಗನದೆಂದು ಹೇಳುವಂತೆ ಔಪಚಾರಿಕ ಹೀಗೆ ಪ್ರಕೃತ್ಯಾದಿ ನಕಲ ತತ್ತ್ವಗಳಿಗೂ ನಕಲ ದೇವತಗಳು ಅಭಿಮಾನಿಗಳು'

ಆದ್ದರಿಂದ ನರಸ್ವತೀಭಾರತಿಯರಿಂದ ತೊಡಗಿ ಎಲ್ಲ ತತ್ತ್ವದೇವತೆಗಳೂ ಪ್ರಕೃತಿತತ್ತ್ವವೂ ನೇರಿದಂತೆ ಚತುರ್ವಿಂಶತಿ ತತ್ತ್ವಪತಿಗಳೇ ಆಗಿರುವುದರಿಂದ ಅವರಿಗೆ ಗುರುಗಳು ಬ್ರಹ್ಮವಾಯುಗಳೆಂದು ಹೇಳಿರುವುದು ಯುಕ್ತವೆ

'ಚತುರವಿಂಶತಿ ತತ್ತ್ವದೇವತೆಗಳಿಗೆ' ಎಂದಿಷ್ಟೇ ಹೇಳದೆ 'ತತ್ತ್ವಪತಿ ದೇವತೆ' ಗಳೆಂದು ಪತಿಶಬ್ದವನ್ನು ಹಾಕಿರುವುದರಿಂದ ಆ ಪತಿಶಬ್ದವನ್ನು ದೇವತೆಗಳಿಗೆ ಹೇಗೋ ಹಾಗೆ ಮಾರುತನಿಗೂ ಅನ್ವಯಿಸಬಹುದು ಮಾರುತನ ನಿಜಪತ್ನಿಗೂ ಅನ್ವಯಿಸಬಹುದು ಅದರಿಂದ ಎರಡನೆ ನಮಾಧಾನ ಹೆಚ್ಚು ಸೂಕ್ತವೆನ್ನಬಹುದು

***ನತತ ಹರಿಯಲಿ ಗುರುಗಳಲಿ ಸದ್ರತಿಯ ಪಾಲಿಸಿ***

ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ

'ದೇವನಲ್ಲಿ ಹೆಚ್ಚಿನ ಭಕ್ತಿ ಗುರುವಿನಲ್ಲಿಯೂ ಯೋಗ್ಯತಾನುನಾರ ಭಕ್ತಿ ಇದ್ದರೆ ಮಾತ್ರ ಶಾಸ್ತ್ರದಿಂದ ಜ್ಞಾನಲಾಭ ಅದರಿಂದ ಶಾಸ್ತ್ರಜ್ಞಾನಕ್ಕಾಗಿ ಹರಿಗುರುಭಕ್ತಿಯನ್ನು ಬೇಡುತ್ತಿದ್ದಾರೆ ದಾನರಾಯರು

'ಭಾರತಿ ಭಕುತಿಯನು ಕೊಡುವುದು ಮಾರುತನತಿ ನೀನು' ಎಂಬಂತ ಭಕ್ತಿಯ ಅಭಿಮಾನಿಗಳಾದ ನರಸ್ವತಿಭಾರತಿಯರಲ್ಲಿ ಭಕ್ತಿಯನ್ನೇ ಬೇಡುತ್ತಿದ್ದಾರೆ

'ಹರಿಯಲ್ಲಿ ಗುರುಗಳಲ್ಲಿ ನದ್ರತಿ' ಕೃತಯುಗದ ಧರ್ಮ ಎಲ್ಲ ದೇವತೆಗಳಲ್ಲ ಭಕ್ತಿ ತ್ರೇತಾಯುಗ ಧರ್ಮ

ದೇವತಾತ್ವೇನ ಚೇಜ್ಯಃ ಸ ಬ್ರಹ್ಮಾದ್ಯಾ ಮನುನಾಮಕಾಃ ।
ವಕ್ತೃತ್ವೇನ ಪಿತೃತ್ವೇನ ಕಾರಿತ್ವೇನೈವ ಚಾದರಾತ್ ॥
ಇಜ್ಯಂತೇ ದೇವತಾಃ ಸರ್ವಾ ನತು ದೇವತಯಾ ಕ್ವಚಿತ್ ॥

ಕೃತಯುಗದಲ್ಲಿ ಜನರು ಹರಿಯನ್ನು ದೇವತೆ ಎಂದು ಆರಾಧಿಸಿದರು ಬ್ರಹ್ಮಾದಿಗಳನ್ನು ಕೇವಲ ಗುರುಗಳೆಂದೂ, ಜನಕರೆಂದೂ, ನತ್ಕರ್ಮಪ್ರೇರಕರೆಂದೂ ಆರಾಧಿಸಿದರು ಹೊರತು ದೇವತೆಗಳೆಂದಲ್ಲ' ಎಂದು ಆದರ್ವಣಭಾಷ್ಯದಲ್ಲಿ ಹೇಳಿದೆ

ಮುಖ್ಯೋ ಧರ್ಮಃ ಕಾರ್ತಯುಗೋ ವರ್ತಿತವ್ಯಃ ಕಲಾವಪಿ

ಶಕ್ತರಾದವರು ಕಲಿಯುಗದಲ್ಲಿಯೂ ಕೃತಯುಗದ ಈ ದರ್ಮವನ್ನೇ ಯದಾಶಕ್ತಿ ಆಚರಿಸಬೇಕೆಂದೂ ಅಲ್ಲಿ ಹೇಳಿದೆ ಅದರಿಂದ 'ಹರಿಯೆ ದೇವತೆ ಬ್ರಹ್ಮಾದಿಗಳು ಕೇವಲ ಗುರುಗಳು' ಎನ್ನುವ ನಿರ್ಮಲವಾದ ಹರಿಗುರುಭಕ್ತಿಯನ್ನೇ ಬೇಡುತ್ತಿದ್ದಾರೆ ದಾನರಾಯರು

ಹರಿಯನ್ನು ಮಾತ್ರವೆ ದೇವತೆಯೆಂದು ಪೂಜಿಸಬೇಕೆಂದಿದೆ ಹೊರತು ಹರಿಯನ್ನು ದೇವತೆ ಎಂದು ಮಾತ್ರವೆ ಪೂಜಿಸಬೇಕೆಂದಲ್ಲ ದೇವತೆ ಎಂದೂ ಗುರುವೆಂದೂ ಹರಿಯನ್ನು ಪೂಜಿಸಬೇಕು ಬ್ರಹ್ಮಾದಿಗಳನ್ನು ಮಾತ್ರ ಕೇವಲ ಗುರುಗಳೆಂದೇ ಪೂಜಿಸಬೇಕು ಆದ್ದರಿಂದಲೇ ತಂತ್ರಸಾರಸಂಗ್ರಹದಲ್ಲಿ ಹರಿಯನ್ನು ಗುರುವೆಂದೂ ಪೂಜಿಸಲು ವಿಧಿಸಲಾಗಿದೆ—

ಸ್ಮೃತ್ವಾ ಗುರುಂ ಪೂರ್ವಗುರುಮಾದಿಮೂಲಗುರೂ ತಥಾ ।
ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥

'ವಿದ್ಯಾರ್ಜನ ಮಾಡುವವನು ಗುರು, ಪೂರ್ವಗುರು, ಆದಿಗುರು, ಮೂಲಗುರು, ದೇವತಾ, ವಾಸುದೇವ ಇವರನ್ನು ಸ್ಮರಿಸಿ ವಿದ್ಯಾಭ್ಯಾಸ ಮಾಡಿದರೆ ಸಿದ್ಧಿ ಲಭಿಸುವುದು'

ಇಲ್ಲಿ ಗುರುಗಳೆಂದರೆ ತನಗೆ ವಿದ್ಯೋಪದೇಶ ಮಾಡುವವರು ಅವರ ಗುರುಗಳು ಪೂರ್ವಗುರುಗಳು ಜಗತ್ತಿಗೆ ಪ್ರಪ್ರಥಮ ಗುರುಗಳಾದ ಬ್ರಹ್ಮವಾಯುಗಳು ಆದಿಗುರುಗಳು. ಮೂಲಗುರುಗಳೆಂದರೆ ವೇದವ್ಯಾಸರು, ಭಾರತಿಸರಸ್ವತಿಯರು, ಬ್ರಹ್ಮವಾಯುಗಳು ಮತ್ತು ಲಕ್ಷ್ಮೀನಾರಾಯಣರು ಇಲ್ಲಿ ವೇದವ್ಯಾಸ ನಾರಾಯಣರೂಪಗಳಿಂದ ಹರಿಯೆ ಗುರುವೆಂದು ಪೂಜ್ಯನೆನಿಸಿದ್ದಾನೆ

*ಭಾಗವತ ಭಾರತ ಪುರಾಣ ರಹಸ್ಯತತ್ವಗಳರುಪು*

ಹರಿಭಕ್ತಿ ಇಲ್ಲದಿದ್ದರೆ ಭಾಗವತಾದಿ ಶಾಸ್ತ್ರರಹಸ್ಯ ಗೋಚರವಾಗದು ಉದಾ–'ಸಮಾಧಿನಾನುಸ್ಮರ' ಎಂಬಂತೆ ಸ್ಪಷ್ಟವಾಗಿ ಹರಿಗುರುಮಹಿಮೆಗಳನ್ನು ವರ್ಣಿಸಲೆಂದೇ ಹೊರಟ ಭಾಗವತದಲ್ಲಿ ಪ್ರಾರಂಭದಲ್ಲಿಯೆ ಪಾಂಡವರ ಶಿಬಿರದಲ್ಲಿ ನಡುರಾತ್ರಿ ಹೊಕ್ಕು ಹತ್ಯಾಕಾಂಡ ಮಾಡಿದ ಅಶ್ವತ್ಥಾಮನನ್ನು ಅರ್ಜುನ ನಿಗ್ರಹಿಸಿದನೆಂದಿದೆ ಭೀಮಸೇನ ನಿಗ್ರಹಿಸಿದನೆನ್ನಬೇಕಾಗಿತ್ತು ರಹಸ್ಯವೇನೆಂದರೆ ಹಿಂದಿನ ರಾತ್ರಿ ಸ್ವಪ್ನದಲ್ಲಿ, ಅಶ್ವತ್ಥಾಮನಿಗೆ ಅರ್ಜುನನೆ ಶಾಸ್ತಿ ಮಾಡಿದಂತೆ ಕಂಡಿತ್ತು! ಅದನ್ನೆ ಭಾಗವತ ವರ್ಣಿಸಿದೆ ಆದರ ಸ್ವಪ್ನವೆಂದು ಮಾತ್ರ ಹೇಳಿಲ್ಲ ಇಂಥ ಅನೇಕ ರಹಸ್ಯಗಳನ್ನು ತಿಳಿಯಲು ಶ್ರೀಮದಾಚಾರ್ಯರಲ್ಲಿ, ಸರ್ವಮೂಲ ಗ್ರಂಥಗಳಲ್ಲಿ ಭಕ್ತಿ ಬೇಕು

ರಹಸ್ಯ ತತ್ವಗಳನ್ನು ಅರುಹಬೇಕೆಂದು ಬ್ರಹ್ಮವಾಯುಗಳನ್ನು ಬೇಡಬೇಕಾಗಿತ್ತು ಅವರ ಪತ್ನಿಯರನ್ನಲ್ಲ ಆದರ ಮಹಾಭಾರತದಲ್ಲಿ ದ್ರೌಪದೀದೇವಿ ಅಲ್ಲಲ್ಲಿ ಹೇಳಿದ ಮಾತುಗಳು ಮತ್ತು ಕಲ್ಯಾಣೀದೇವಿಯ ರಚನೆಗಳು ಶಾಸ್ತ್ರರಹಸ್ಯೋಪದೇಶಗಳೇ ಆಗಿವೆ ತಾನೆ? ಅಥವಾ ತತ್ವಗಳರುಹುವುದೆಂದರೆ ಉಪದೇಶಿಸುವುದಲ್ಲ ಅರಿವುಂಟುಮಾಡುವುದು ಸರಸ್ವತಿ-ಬಾರತಿಯರು ಬುದ್ಧ್ಯಬಿಮಾನಿಗಳು ಅದರಿಂದ ಬುದ್ಧಿಯಲ್ಲಿರುವ ಅವಿದ್ಯೆಯನ್ನು ತೊಲಗಿಸಿ ಶಾಸ್ತ್ರವನ್ನರಿಯಲು ಸಾಮರ್ಥ್ಯ ನೀಡಬಲ್ಲರು ಗ್ರಂಥಾಬಿಮಾನಿಗಳೂ ಅವರೇ ಆದ್ದರಿಂದ ಗ್ರಂಥಗಳಲ್ಲಿ ಹುದುಗಿರುವ ರಹಸ್ಯಗಳನ್ನು ತೆರೆದು ಬುದ್ಧಿಗೆ ತೋರಿಸಲೂ ಬಲ್ಲರು ವಾಯುಸ್ತುತಿಯಲ್ಲಿ

ಅವಿದ್ಯಾನಿದ್ರಾಂ ವಿದ್ರಾವ್ಯ ಸದ್ಯೋಽರಚನ-
ಪಟುಮಥಾವಾದ್ಯ ವಿದ್ಯಾಸಮುದ್ರ

ಎಂದು ಇದನ್ನೇ ಹೇಳಿದೆ ಅದರಿಂದ ಸರಸ್ವತಿಭಾರತಿಯರು ನನ್ನಲ್ಲಿರುವ ಅವಿದ್ಯೆಯನ್ನು ತೊಲಗಿಸಿ ತತ್ತ್ವಜ್ಞಾನ ನೀಡಿ ನನ್ನಿಂದ ಈ ಗ್ರಂಥರಚನೆ ಮಾಡಿಸಲಿ ಹರಿಗುರುಭಕ್ತಿಪೂರ್ವಕ ಶಾಸ್ತ್ರಾಧ್ಯಯನ ಮಾಡಿ ರಚಿಸಿದ ಈ ಗ್ರಂಥ ಜಿಜ್ಞಾಸುಗಳಿಗೆ ಶಾಸ್ತ್ರತತ್ತ್ವರಹಸ್ಯವನ್ನೆಲ್ಲ ಅರುಹುವಂತಾಗಲಿ ಎಂದು ಆಶಿಸುತ್ತಿದ್ದಾರೆ ದಾಸರಾಯರು

**ವೇದಪೀಠ ವಿರಿಂಚಿಭವ ಶ-**
**ಕ್ರಾದಿಸುರವಿಜ್ಞಾನದಾಯಕ**
**ಮೋದಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ।**
**ಛೇದಭೇದವಿಷಾದಕುಟಿಲಾಂ-**
**ತಾದಿಮಧ್ಯವಿದೂರ ಆದಾ-**
**ನಾದಿಕಾರಣ ಬಾದರಾಯಣ ಪಾಹಿ ಸತ್ರಾಣ ॥ ೭ ॥**

ಹೇ ವೇದವ್ಯಾಸರೆ, ನೀವು ವೇದಗಳಿಗೆ ಆಶ್ರಯರು ಬ್ರಹ್ಮರುದ್ರೇಂದ್ರಾದಿ ದೇವತೆ-ಗಳಿಗೆ ಉತ್ತಮ ಜ್ಞಾನದಾಯಕರು ಆನಂದಜ್ಞಾನಮಯಶರೀರ ಉಳ್ಳವರು ಲೋಕದಲ್ಲೆಲ್ಲ ಅತ್ಯಂತ ಪವಿತ್ರರು ಮಂಗಳಚರಿತರು ಶರೀರದಲ್ಲಿ ಛೇದಭೇದಗಳಾಗಲಿ, ಮನಸ್ಸಿನಲ್ಲಿ ವಿಷಾದ ಕಪಟಬುದ್ಧಿಗಳಾಗಲಿ, ಶರೀರಮನಸ್ಸುಗಳೆರಡಕ್ಕೂ ಆದಿ, ಅಂತ್ಯ, ಮಧ್ಯ ಎಂಬ ಭಾಗಗಳಾಗಲಿ ಇಲ್ಲದವರು ವೇದವಿಭಾಗ, ಬ್ರಹ್ಮಸೂತ್ರರಚನಾದಿ ಮಹಾಕಾರ್ಯ ಮಾಡಿದವರು ಪ್ರಸಿದ್ಧವಾದ ಬಾದರಾಯಣ ಎಂಬ ನಾಮ ಉಳ್ಳವರು ಸಜ್ಜನರಕ್ಷಕರು ನೀವು ನಮ್ಮನ್ನು ಕಾಪಾಡಿ

ಇಷ್ಟರವರೆಗೆ ಒಂದರಿಂದ ಆರನೇ ನುಡಿಯವರೆಗೆ ನಾರಾಯಣ, ಲಕ್ಷ್ಮೀ, ಬ್ರಹ್ಮ, ವಾಯು, ಸರಸ್ವತಿ, ಭಾರತಿಯರನ್ನು ಕ್ರಮದಾಗಿ ಸ್ತೋತ್ರ ಮಾಡಿ ಅದೇ ಕ್ರಮದಿಂದ ಮುಂದೆ ರುದ್ರಇಂದ್ರಾದಿಗಳ ಸ್ತೋತ್ರ ಮಾಡಬೇಕಾಗಿದೆ ಆದರೆ ನಡುವೆ ವೇದವ್ಯಾಸ-ಮಧ್ವರ ಸ್ತೋತ್ರಗಳಿವೆ ಹರಿವಾಯುಗಳಿಗೆ ನಮನ ಮಾಡಿದ ಬಳಿಕ ಬೇರೆಯಾಗಿ ವ್ಯಾಸಮಧ್ವರನ್ನು ನಮಿಸಿದರೆ ಅವರು ಬೇರೆ, ಇವರು ಬೇರೆಯೇ? ಎಂಬ ಸಂಶಯವೂ ಬರಬಹುದು ವ್ಯಾಸರು ಯಾರೊ ಒಬ್ಬ ಸಾಮಾನ್ಯ ಋಷಿ ಎಂದು ತಾಮಸ ಪುರಾಣಗಳಲ್ಲಿ ವರ್ಣನೆಯೂ ಉಂಟು ದಾಸರು ಹೀಗೇಕೆ ಮಾಡಿದರು?

ವ್ಯಾಖ್ಯಾನಕಾರರ ಅಭಿಪ್ರಾಯ ಹೀಗಿದೆ—ಮಹಾಭಾರತದಲ್ಲಿ ಮೊದಲಿಗ ನಾರಾ-ಯಣ, ಶೇಷ, ವಾಯು, ಲಕ್ಷ್ಮಿ, ಸರಸ್ವತಿ, ವೇದವ್ಯಾಸರು ಈ ಕ್ರಮದಿಂದ ಒಂದು ಶ್ಲೋಕ-ದಲ್ಲಿ ನಮಸ್ಕರಿಸಲಾಗಿದ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥

ಇಲ್ಲಿ ನಾರಾಯಣನಿಗಿಂತ ಬೇರೆಯಾಗಿ ಕೊನೆಯಲ್ಲಿ ವ್ಯಾಸರನ್ನು ನಮಿಸಿದ್ದರಿಂದ ವ್ಯಾಸರು ಸಾಮಾನ್ಯ ಋಷಿ ಎಂಬ ಕಲ್ಪನೆಗೆ ಅವಕಾಶ ಇಲ್ಲವೆ ಎಂಬ ಸಂದೇಹವನ್ನು ಗರುಡ ಪುರಾಣದಲ್ಲಿ ಶೌನಕರು ಸೂತರಲ್ಲಿ ವ್ಯಕ್ತಪಡಿಸಿದಾಗ ಸೂತರು ಹೇಳುತ್ತಾರೆ, ವ್ಯಾಸರು ಒಬ್ಬ ಸಾಮಾನ್ಯ ಋಷಿ ಎಂದೇ ತಾಮಸ ಪುರಾಣಗಳಲ್ಲಿ ಹೇಳಿದೆ ಅದು ಭಾರತಕ್ಕೂ ಸಮ್ಮತವೆಂದು ಅಸುರಜನರು ತಿಳಿಯಲಿ ಎಂದೇ ಹಾಗೆ ವ್ಯಾಸರಿಗೆ ಪ್ರತ್ಯೇಕವಾಗಿ ಕೊನೆಗೆ ನಮನ ಮಾಡಲಾಗಿದೆ ಎಂದು, ಪ್ರಕೃತ ಹರಿಕಥಾಮೃತಸಾರಕ್ಕೂ ಅದೇ ಉದ್ದೇಶವಿದೆ

ವಸ್ತುತಃ ಹರಿಕಥಾಮೃತಸಾರ ಮಹಾಭಾರತದಂತಲ್ಲ ಮಹಾಭಾರತದಲ್ಲಿ ಒಂದು ಶ್ಲೋಕದಲ್ಲಿ ಎಲ್ಲರಿಗೂ ನಮನವಿದೆ ಶ್ಲೋಕವೆಂದ ಮೇಲೆ ಅದರಲ್ಲಿರುವ ಪದಗಳಿಗೆ ಅನ್ವಯವನ್ನು ಸರಿಯಾಗಿ ಮಾಡಿಕೊಂಡೆ ಅರ್ಥ ಗ್ರಹಿಸಬೇಕಾಗುತ್ತದೆ ಆಗ ನಾರಾಯಣ, ವ್ಯಾಸ, ಲಕ್ಷ್ಮಿ, ವಾಯು, ಸರಸ್ವತಿ, ಶೇಷ ಎಂಬ ಕ್ರಮದಿಂದಲೇ ಅನ್ವಯ ಮಾಡಿಕೊಳ್ಳಲು ಸಾಧ್ಯವಿದೆ ಆದರೆ ಹರಿಕದಾಮತಸಾರದಲ್ಲಿ ನುಡಿಗಳ ಕ್ರಮವನ್ನು ವ್ಯತ್ಯಾಸ ಮಾಡುವಂತಿಲ್ಲ ಅದರಿಂದ, ಸಜ್ಜನರ ಜ್ಞಾನಾರ್ಥ, ದುರ್ಜನರ ಮೋಹನಾರ್ಥ ಎಂದು ಎರಡು ಉದ್ದೇಶ ಭಾರತಕ್ಕೆ ಇರುವುದರಿಂದ ಅದು ಸರಿಯಾಗುತ್ತದೆ ಹರಿಕಥಾಮೃತಸಾರ ಪರಮ ಭಗವದ್ಭಕ್ತರಿಗಾಗಿಯೇ, ಅವರ ಜ್ಞಾನಾರ್ಥವಾಗಿಯೆ ಹೊರಟಿದೆ ಮೋಹನಾರ್ಥದ ಉದ್ದೇಶವಿಲ್ಲ ಅದು ನೆರವೇರುವುದೂ ಇಲ್ಲ ಬ್ರಹ್ಮರುದ್ರಾದಿಜ್ಞಾನದಾಯಕನೆಂದು ಮುಂತಾಗಿ ಹೊಗಳಿದರೆ ಯಾರೋ ಒಬ್ಬ ಸಾಮಾನ್ಯ ಋಷಿ ಎಂಬ ಭಾವನೆಯೆ ಬರಲಾರದು ಭಾರತೀನಮನದ ಅನಂತರ ಮಧ್ವರ ನಮನಕ್ಕೂ ಔಚಿತ್ಯ ಕಾಣಲಾರದು

ಈ ಸಮಸ್ಯೆಯನ್ನು ಹೀಗೆ ಪರಿಹರಿಸಬಹುದೆ?! 'ಮೊದಲಿಗೆ ಗುರುವಂದನೆ ಮಾಡಬೇಕು ಗುರುವಂದನೆಯಲ್ಲಿ ಪೂರ್ವಗುರು, ಆದಿಗುರು, ಮೂಲಗುರು ಇವರನ್ನು ಕ್ರಮವಾಗಿ ವಂದಿಸಬೇಕೆಂದು ತಂತ್ರಸಾರದಲ್ಲಿ ಹೇಳಿದೆ ಗುರುವೆಂದರೆ ತಸಗೆ ವಿದ್ಯೋಪದೇಶ ನೀಡಿದವರು ಅವರ ಗುರುಗಳು ಪೂರ್ವಗುರುಗಳು ಆದಿಗುರುಗಳೆಂದರೆ ಜಗದ್ಗುರು ಶ್ರೀಮದಾನಂದತೀರ್ಥರು ಮೂಲಗುರುಗಳು ವ್ಯಾಸ, ಭಾರತಿ, ವಾಣಿ, ವಿಧಿ, ವಾಯು, ರಮಾ, ನಾರಾಯಣ ಎಂದು ಕ್ರಮವಾಗಿ ಏಳು ಮಂದಿ ಎಂದು ಪಂಚರಾತ್ರದಲ್ಲಿ ಹೇಳಿದೆ

ವ್ಯಾಸಂ ಚ ಭಾರತೀಂ ವಾಣೀಂ ವಿಧಿಂ ವಾಯುಂ ರಮಾಂ ತಥಾ ।
ತಥಾ ನಾರಾಯಣಂ ಮೂಲಗುರೂನಾಹುರ್ವಿಪಶ್ಚಿತಃ ॥

ಹರಿಕಥಾಮೃತಸಾರದಲ್ಲಿ ವ್ಯುತ್ಕ್ರಮವಾಗಿ ನಾರಾಯಣನಿಂದಾರಂಭಿಸಿ ವ್ಯಾಸರವರೆಗೆ ಮೂಲಗುರುಗಳನ್ನೂ, ಅನಂತರ ಆದಿಗುರುಗಳಾದ ಮಧ್ವರನ್ನೂ ಬಳಿಕ ಪೂರ್ವಗುರುಗಳಾದ ರುದ್ರ, ಇಂದ್ರ ಮುಂತಾದವರನ್ನು ಗುರುಗಳಾದ ದಾಸವರ್ಗವನ್ನೂ ನಮಿಸಲಾಗಿದೆ

ಈ ಪರಿಹಾರದಲ್ಲಿಯೂ ಸ್ವಲ್ಪ ತೊಡಕಿದೆ. ತಂತ್ರಸಾರ ಒಂದು ಕ್ರಮವನ್ನು ಹೇಳಿರುವಾಗ ಇಲ್ಲಿ ವ್ಯುತ್ಕ್ರಮವೇಕೆ? ಅದೂ ತಂತ್ರಸಾರಕ್ಕೆ ಸಮ್ಮತವೆಂದಿಟ್ಟುಕೊಂಡರೂ, ವ್ಯುತ್ಕ್ರಮವೂ ಸರಿಯಾಗಿಲ್ಲ. ನಾರಾಯಣರಮೆಯರ ಅನಂತರ ವಾಯುವನ್ನೆ ನಮಿಸಬೇಕಾಗಿತ್ತು. ಬ್ರಹ್ಮನನ್ನಲ್ಲ.

ಆದ್ದರಿಂದ ಹೀಗೆ ಹೇಳಬೇಕು—ತಾರತಮ್ಯಾನುಸಾರ ನಾರಾಯಣ, ಲಕ್ಷ್ಮಿ, ಬ್ರಹ್ಮ, ವಾಯು, ಸರಸ್ವತಿ, ಭಾರತಿ, ರುದ್ರ, ಇಂದ್ರಾದಿಗಳೆಂಬುದೆ ಇಲ್ಲಿ ವಿವಕ್ಷಿತವಾದ ಕ್ರಮ. ಅವರೋಹಣಕ್ರಮ. ನಡುವೆ ವ್ಯಾಸಮಧ್ವರನ್ನು ವಂದಿಸುವುದು ಆದಿಮಧ್ಯ ಅಂತ್ಯಗಳಲ್ಲಿ ಹರಿವಾಯುವಂದನೆ ಮಾಡಬೇಕೆನ್ನುವ ಉದ್ದೇಶದಿಂದ. ಸಾಂದೀಸಂದಿಯ ಸೃಷ್ಟಿಸುವ ವ್ಯಾಸಮಧ್ವರನ್ನು ವಂದಿಸುವುದರಿಂದ ಅವರಿಗೆ ಸಮ್ಮತವಾದ ತತ್ತ್ವಗಳೆ ಈ ಗ್ರಂಥದಲ್ಲಿ ತುಂಬಿದೆ ಎನ್ನುವ ಸೂಚನೆ ಮೊದಲಿಗೇ ಸಿಗುತ್ತದೆ.

ಅತ್ತ ಪರಶುಕ್ಲತ್ರಯರ ವಂದನೆ, ಇತ್ತ ರುದ್ರಾದಿಗಳ ವಂದನೆ, ನಡುವೆ ಹರಿವಾಯುಗಳ ವಂದನೆ ಎನ್ನುವುದೂ ಉಚಿತವೆ. ಲಕ್ಷ್ಮೀಬ್ರಹ್ಮಾದಿಗಳು ರುದ್ರಾದಿಗಳಿಗಿಂತ ವಿಲಕ್ಷಣರೆಂ-ಬುದನ್ನು ಅದು ತೋರಿಸುತ್ತದೆ.

ಅಥವಾ ನಾರಾಯಣನಿಂದ ತೊಡಗಿ ಭಾರತಿಯವರೆಗೆ ದೇವತಾವಂದನ. ಬಳಿಕ ವ್ಯಾಸರಿಂದ ತೊಡಗಿ ರಮಾಕಳತ್ರನ ದಾಸವರ್ಗದವರೆಗೂ ಗುರುವಂದನ. ಬ್ರಹ್ಮವಾಯುಗಳಿಗೆ ಸಚ್ಛಾಸ್ತ್ರಗಳ ಅಭಿಮಾನಿಗಳೆಂಬ ದೃಷ್ಟಿಯಿಂದಲ್ಲ ಹಿಂದೆ ನಮಿಸಿದ್ದು; ಶಾಸ್ತ್ರೋಪದೇಶಕರೆಂದಲ್ಲ. 'ಜಗದ್ಗುರುವ, ಗುರು ಪವಮಾನ' ಎಂದು ಮುಂತಾಗಿ ಹೇಳಿ-ದ್ದರೂ, ಗುರುಶಬ್ದಕ್ಕೆ ಅಲ್ಲಿ ಪೂಜ್ಯ ಎಂದಿಷ್ಟೇ ಅರ್ಥವಿಟ್ಟುಕೊಳ್ಳಬಹುದು. ರಾಮಾಯಣ-ದಲ್ಲಿ ಅಯೋಧ್ಯೆಯ ಪ್ರಜೆಗಳು ದಶರಥನನ್ನು 'ದೊಡ್ಡ ಗುರು' ಎನ್ನುತ್ತಾರೆ.

ಗತೋ ದಶರಥಃ ಸ್ವರ್ಗಂ ಯೋ ನೋ ಗುರುತರೋ ಗುರುಃ।

ಗುರುಶಬ್ದಕ್ಕೆ ಇಲ್ಲಿ ಪೂಜ್ಯ ಎಂದೇ ಅರ್ಥ. ಅದರಿಂದಲೆ ಬ್ರಹ್ಮನನ್ನು ಗರುಡಶೇಷ-ಶಶಾಂಕದಳಶೇಖರರ ಜನಕನೆಂದೂ, ವಾಯುವನ್ನು ಶ್ವಾಸನಿಯಾಮಕನೆಂದೂ ವರ್ಣ-ಸಿದೆ. ಸರಸ್ವತಿಯನ್ನು ನಿಗಮತತಿಗಳಿಗಭಿಮಾನಿ ಎಂದು ಸ್ಪಷ್ಟವಾಗಿ ಹೇಳಿದೆ. ಗ್ರಂಥರಚನ ಉಪದೇಶಾದಿ ಕಾರ್ಯಗಳ ವರ್ಣನೆ ಇಲ್ಲ. ಮುಂದೆ ವ್ಯಾಸಮಧ್ವರನ್ನು ಜ್ಞಾನಕಾರ್ಯ-ಕಾರಿಗಳೆಂದೆ ವರ್ಣಿಸಿದೆ.

ಗುರುವಂದನೆಯಲ್ಲಿ ದೇವತಾವಂದನೆಯಂತೆಯೆ ಅವರೋಹಣಕ್ರಮ. ಮೊದಲಿಗೆ ಮೂಲಗುರು ವ್ಯಾಸರಿಗೇ ನಮನ. ಬಳಿಕ ಆದಿಗುರು ಮಧ್ವರಿಗೆ ನಮನ. ಬಳಿಕ ರುದ್ರಾದಿ ಪೂರ್ವಗುರುಗಳಿಗೂ ಗುರುಗಳಿಗೂ ನಮನ. ಈ ಕ್ರಮಕ್ಕೆ ವ್ಯತ್ಯಯ ಬಂದಿಲ್ಲ. ಆದ್ದರಿಂದ

ಇಲ್ಲಿ ವ್ಯಾಸರಿಗೆ ನಮನ ಗೈಯುವುದು ಸುಸಂಗತವೆ ಆಗಿದೆ ವೇದವ್ಯಾಸರ ವಂದನೆ ಎಂದ ಮೇಲೆ ವೇದಪೀಠರರೆಂದೇ ಮೊದಲಿಗೆ ಸ್ತುತಿಸಲಾಗಿದೆ

*ವೇದಪೀಠ*

ವೇದಗಳಿಗೆ ಆಶ್ರಯ ವೇದಗಳಿಗೆ ಪ್ರತಿಪಾದ್ಯನಾಗಿ, ಉದ್ಧಾರಕನಾಗಿ, ಉಪದೇಶಕನಾಗಿ ಮಾತ್ರವಲ್ಲದೆ, ವೇದವಿಭಾಗ ಮಾಡಿ ವೇದಾರ್ಥಗಳಿಗೆ ನಿದರ್ಶನಕ್ಕಾಗಿ ಪಂಚಮ ವೇದವೆನಿಸಿದ ಮಹಾಭಾರತವನ್ನೂ ಪುರಾಣಗಳನ್ನೂ ರಚಿಸಿ, ವೇದಾರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರವನ್ನೂ, ವೇದಾಧ್ಯಯನಕ್ಕೆ ಪೂರಕವಾಗಿ ಬ್ರಹ್ಮತರ್ಕ, ನಿರುಕ್ತ, ಛಂದಸ್ಸು ಮುಂತಾದವುಗಳನ್ನೂ ರಚಿಸಿ ಎಲ್ಲ ವಿಧದಿಂದಲೂ ವೇದಗಳಿಗೆ ಆಶ್ರಯರೆನಿಸಿದವರು ವೇದವ್ಯಾಸರು ವೇದಾಭಿಮಾನಿಗಳಾದ ರಮಾದೇವಿಯರಿಗೂ ಎದೆಯ ಶ್ರೀವತ್ಸದಲ್ಲಿ ಆಶ್ರಯ ನೀಡಿದವರು ವೇದಾಭಿಮಾನಿಗಳಾದ ಬ್ರಹ್ಮಾದಿಗಳಿಗೂ ತಮ್ಮ ಅಂಗೋಪಾಂಗಗಳಲ್ಲಿ ಆಶ್ರಯ ನೀಡಿದವರು ವೇದಾರ್ಥಗರ್ಭಿತವಾಗಿ ತಮ್ಮ ಗ್ರಂಥ ಮೂಡಿ ಬರಲೆಂದು ದಾಸರು ಇಲ್ಲಿ ವ್ಯಾಸರನ್ನು ಬೇಡುತ್ತಿದ್ದಾರೆ

*ವಿರಿಂಚಿಭವಶಕ್ರಾದಿಸುರವಿಜ್ಞಾನದಾಯಕ*

ದ್ವಾಪರದಲ್ಲಿ ಗೌತಮರ ಶಾಪದಿಂದ ಲೋಕದಲ್ಲಿ ಜ್ಞಾನಲೋಪವಾದಾಗ ತಿರುಗಿ ಜ್ಞಾನೋದಯ ಉಂಟುಮಾಡಲು ಬ್ರಹ್ಮಾದಿಗಳ ಪ್ರಾರ್ಥನೆಯಂತೆ ಪ್ರಕಟವಾದ ಅವತಾರವಾದುದರಿಂದ ಅವರಿಗೆ ತತ್ವಜ್ಞಾನದಾಯಕರಾಗಿದ್ದಾರೆ, ವೇದವ್ಯಾಸರು ಗ್ರಂಥರಚನಾಕಾಲದಲ್ಲಿ ಜ್ಞಾನಸ್ಫೂರ್ತಿ ಕುಂಠಿತವಾಗದಂತೆ ಅವರು ಅನುಗ್ರಹಿಸಲೆಂದು ದಾಸರು ಬೇಡುತ್ತಿದ್ದಾರೆ

*ಮೋದಚಿನ್ಮಯಗಾತ್ರ*

ಆನಂದ ಜ್ಞಾನಮಯ ಶರೀರ ಉಳ್ಳವರು ಪರಾಶರರಿಂದ ಸತ್ಯವತಿಯಲ್ಲಿ ಜನಿಸಿದ್ದರೂ ಅವರ ಶರೀರ ಎಲ್ಲರಂತೆ ಪ್ರಾಕೃತವಲ್ಲ ಅಪ್ರಾಕೃತಶರೀರದಿಂದಲ, ಕಂಬದಿಂದ ಒಡೆದು ಮೂಡಿದ ನರಸಿಂಹನಂತೆಯೆ, ತತ್ಕಾಲದಲ್ಲಿ ಕೃಷ್ಣಾಜಿನ, ಯಜ್ಞೋಪವೀತಸಮೇತರಾಗಿಯೆ ಆವಿರ್ಭವಿಸಿದವರು, ವೇದವ್ಯಾಸರು

*ಲೋಕಪವಿತ್ರ*

'ಪವಿತ್ರಾಣಾಂ ಪವಿತ್ರಂ' ಎಂಬಂತೆ ಲೋಕದಲ್ಲಿಯೆ ಅತ್ಯಂತ ಪವಿತ್ರರು ಲೋಕವನ್ನು ತನ್ನ ಮೋದಚಿನ್ಮಯಗಾತ್ರದಿಂದ ಪವಿತ್ರಗೊಳಿಸುವವರು ಶಾಸ್ತ್ರವೆಂಬ ಶಸ್ತ್ರದಿಂದ ಜನರ ಹೃದಯಗಳಲ್ಲಿ ಅಡಗಿರುವ ಕಲಿಯನ್ನು ನಾಶಮಾಡಿ, ಅಪವಿತ್ರವಾದ ಹೃದಯವನ್ನು ಪವಿತ್ರಗೊಳಿಸುವವರು ಇದು ವೇದವ್ಯಾಸರಿಂದ ಮಾತ್ರವೆ ಆಗುವ ಕಾರ್ಯ

**ಸುಚರಿತ್ರ**

ಪ್ರಾರಬ್ಧಕರ್ಮದಿಂದ ಕೀಟವಾಗಿ ಹುಟ್ಟಿದ್ದ ಒಬ್ಬ ಬ್ರಹ್ಮಜ್ಞಾನಿಗೆ ಅದೇ ಜನ್ಮದಲ್ಲಿ ರಾಜ್ಯಪಟ್ಟಾಭಿಷೇಕ ಮಾಡಿಸಿ ವೈಭವದಿಂದ ರಾಜ್ಯವಾಳಿಸಿದರು ಮುಂದೆ ಬ್ರಾಹ್ಮಣ ಜನ್ಮದಲ್ಲಿ ನೂರಾರು ಯಜ್ಞ ಮಾಡಿಸಿ ಮೋಕ್ಷವನ್ನಿತ್ತರು ವೇದವ್ಯಾಸರು ಸಾಕ್ಷಾತ್ ಶ್ರೀಹರಿಯ ಅವತಾರವೆಂಬುದನ್ನು ಹೀಗೆ ತೋರಿಸಿಕೊಟ್ಟರು

**ಭೇದಭೇದವಿದೂರ**

ವೇದವ್ಯಾಸರು ಶೇಷಧರ್ಮದ ಆಶ್ಚರ್ಯಪರ್ವದಲ್ಲಿ ಹೀಗೆ ಹೇಳಿದರು

ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್ ॥

'ವೇದಶಾಸ್ತ್ರಕ್ಕಿಂತ ಹೆಚ್ಚಿನ ಶಾಸ್ತ್ರವಿಲ್ಲ ಕೇಶವನಿಗಿಂತ ಹೆಚ್ಚಿನ ದೈವವಿಲ್ಲ ಇದು ಸತ್ಯ ಸತ್ಯವೆಂದು ಪುನಃಪುನಃ ಹೇಳುತ್ತೇನೆ ತೋಳೆತ್ತಿ ಹೇಳುತ್ತೇನ'

ಆದರಿಂದ ಎತ್ತಿದ ಆ ತೋಳುಗಳನ್ನು ವೀರಭದ್ರ ತುಂಡರಿಸಿದನೆಂದು ಒಂದು ಪ್ರಚಲಿತ ಕಥೆ ಇದೆ ಈ ಕಥೆ ಅಸಂಗತ ಕಾಮ್ಯಕವನದಲ್ಲ ಭೀಷ್ಮರು ದರ್ಮರಾಜನಿಗ ಹೇಳಿದ ಮಾತು ಇದು ವ್ಯಾಸರು ಅದನ್ನು ಗ್ರಂದದಲ್ಲಿ ಸೇರಿಸಿದ್ದರಷ್ಟೇ ಅದಕ್ಕ ಅವರ ತೋಳನ್ನೇ ಕಡಿಯುವುವೆ? ರಾವಣ ಸೀತೆಯನ್ನು ಕದ್ದೊಯ್ದನೆಂದು ಜಟಾಯು ಹೇಳಿದರ ರಾಮ ಅವನನ್ನೇ ಶಿಕ್ಷಿಸಿದನೆ? ಆದ್ದರಿಂದ ಈ ಕಥೆ ಕಲ್ಪಿತ ಹಾಗಲ್ಲಟದ್ದರ ಭೃಗುಮುನಿಯ ಶಾಪದಿಂದ ಶಿವನ ಬೇರೆ ಎಲ್ಲ ಅಂಗೋಪಾಂಗಗಳೂ ಕಡಿದು ಬಿದ್ದು ಲಿಂಗಮಾತ್ರ ಉಳಿ-ಯಿತೆನ್ನಬೇಕಾದೀತು ಎಂದು ವಾದಿರಾಜರು ಹೇಳಿದ್ದಾರೆ 'ವಾದಿರಾಜರ ಕೋಶಕೂಪ್ಯವ ಹರಿಕಥಾಮೃತ' ವ್ಯಾಸರನ್ನು ಭೇದಭೇದವಿದೂರನೆನ್ನುವುದು ಸಹಜವೆ

**ವಿಷಾದವಿದೂರ**

ಭಾರತಾದಿನಿರ್ಮಾಣದಿಂದಲೂ ವ್ಯಾಸರಿಗೆ ತೃಪ್ತಿಯಾಗಲಿಲ್ಲವಂತೆ ಭಾಗವತದಲ್ಲಿ ನಾರದರು ಹೇಳುತ್ತಾರೆ

ತಥಾಪಿ ಶೋಚಸ್ಯಾತ್ಮಾನಮಕೃತಾರ್ಥ ಇವ ಪ್ರಭೋ

'ವ್ಯಾಸರೆ, ತಾವು ಇನ್ನೂ ಕೃತಕೃತ್ಯರಾಗಿಲ್ಲವೆಂದು ಶೋಕಿಸುತ್ತಿರುವಿರಿ'

ಇಲ್ಲಿ ನಿರ್ಣಯದಲ್ಲಿ ಶ್ರೀಮದಾಚಾರ್ಯರು ಹೇಳುತ್ತಾರೆ 'ಶೋಚಸಿ' ಎಂದರೆ ಶೋಕಿಸುವುದಲ್ಲ 'ಕೃತಕೃತ್ಯರಲ್ಲದವರಂತೆ ತೋರಿಸಿಕೊಳ್ಳುತ್ತಿರುವಿರಿ, ನಟಿಸುತ್ತಿರುವಿರಿ' ಎಂದೇ ಅರ್ಥ 'ನಾಪೃಷ್ಟಃ ಕಸ್ಯಚಿದ್ ಬ್ರೂಯಾತ್' ಸಜ್ಜನರು ಪ್ರಾರ್ಥಿಸಿದಾಗಲೆ ತತ್ತ್ವ-ವನ್ನು ಹೇಳಬೇಕು, ಹೊರತು ಯಾವಾಗಲೂ ಅಲ್ಲ ನಾರದರು ಪ್ರಾರ್ಥಿಸಬೇಕು ಆಗ ತಾನು ಭಾಗವತ ರಚಿಸಿ ಹೇಳಬೇಕು ಎಂಬ ಅಭಿಪ್ರಾಯದಿಂದ ವ್ಯಾಸರು ಅತೃಪ್ತರಾಗಿ

ಸುಮ್ಮನೆ ಕುಳಿತಂತೆ ತೋರಿಕೊಂಡರು ವಸ್ತುತಃ ವಿಷಣ್ಣರಾಗಿ ಅಲ್ಲ, ವಿಷಾದದೂರರು ಅವರು

***ಕಪಟವಿದೂರ***

'ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ' ಎಂಬಂತೆ ಹದಿನೆಂಟು ಪುರಾಣ ಬರೆದು ಹದಿನೆಂಟು ರೀತಿಯಿಂದ ತತ್ತ್ವೋಪದೇಶ ನೀಡುವುದು ಅದರಲ್ಲಿಯೂ ಸಾತ್ವಿಕ ಪುರಾಣಗಳಲ್ಲಿ ಹೇಳುವುದಕ್ಕೆ ತೀರ ವಿರುದ್ಧವಾಗಿ ತಾಮಸ ಪುರಾಣಗಳಲ್ಲಿ ಹೇಳುವುದು ಕಪಟವಲ್ಲವೆ? ಅಲ್ಲ ಭಾಷಾತ್ರಯ, ರೀತಿಸಪ್ತಕ ಮುಂತಾದುವನ್ನು ತಿಳಿಯದವರಿಗೆ ಪುರಾಣಗಳು ಗೊಂದಲಮಯವಾಗಿ ಕಂಡರೂ ತಿಳಿದವರಿಗೆ ಸುಸಂಗತವಾಗಿಯೆ ಇವೆ ಕಪಟವಿದೂರರು ವ್ಯಾಸರು

***ಅಂತಾದಿಮಧ್ಯವಿದೂರ***

ಪ್ರತಿ ದ್ವಾಪರಯುಗಗಳಲ್ಲಿಯೂ ವ್ಯಾಸರಿದ್ದಾರೆ ಅವರು ಎಲ್ಲರೂ ಹರಿಯ ಅವ-ತಾರಗಳೆಂದು ನಿಯಮವಿಲ್ಲ ಮೂರು, ಏಳು, ಹದಿನಾರು, ಇಪ್ಪತ್ತೈದು ಮತ್ತು ಇಪ್ಪತ್ತೆಂಟನೆ ದ್ವಾಪರಗಳಲ್ಲಿ ಮಾತ್ರ ಹರಿಯೆ ವ್ಯಾಸನಾಗಿ ಅವತರಿಸುತ್ತಾನೆ ಈ ಅವತಾರಗಳು ಆಯಾ ಕಾಲದಲ್ಲಿ ಕಾಣಿಸಿಕೊಂಡು ಸ್ವಲ್ಪ ಕಾಲವಿದ್ದು ಬಳಿಕ ಸಮಾಪ್ತಿ ಹೊಂದುತ್ತವೆ ಎಂದ ಮೇಲೆ ಆದಿಮಧ್ಯಅಂತ್ಯಗಳಿವೆಯಲ್ಲವೆ? ಇದಕ್ಕೆ ನಿರ್ಣಯದಲ್ಲಿ ಹೀಗೆ ಹೇಳಿದೆ ಪರಾ- ಶರರಿಂದ ಸತ್ಯವತಿಯಲ್ಲಿ ವ್ಯಾಸ ಹುಟ್ಟಿದನೆನ್ನುವುದೆ ಒಂದು ನಟನೆ ವ್ಯಾಸರೂಪ ಅನಾದಿ- ನಿತ್ಯ ಆಯಾ ಕಾಲದಲ್ಲಿ ವ್ಯಕ್ತವಾಗಿ ಸ್ವಲ್ಪ ಕಾಲ ದೃಷ್ಟಿಗೋಚರವಾಗಿದ್ದು ಬಳಿಕ ಮರೆಯಾ-ಗುತ್ತದೆ ಅದರಿಂದ ಅಂತ್ಯಆದಿಮಧ್ಯವಿದೂರರು ಬಾದರಾಯಣರು

***ಆದಾನಾದಿಕಾರಣ***

ವೇದವ್ಯಾಸರು ಅವತರಿಸಿದುದು ವೇದವಿಭಾಗಕ್ಕಾಗಿ ವಿಭಾಗವೆಂದರೆ ಅನಂತವಾದ ಮೂಲ ವೇದರಾಶಿಯಿಂದ ಕೆಲವಂಶವನ್ನು ಅಶಕ್ತರಿಗಾಗಿ ಎತ್ತಿ ಸಂಗ್ರಹಿಸಿ ಕೊಡುವುದು ಇದೇ 'ಆದಾನ' 'ಆದಿ' ಎಂದರೆ ಅಶಕ್ತರಲ್ಲಿ ಶಾಖಾಬೇದ ವ್ಯವಸ್ಥೆ ಮಾಡಿ, ಅರ್ಥನಿರ್ಣ-ಯಕ್ಕಾಗಿ ಬ್ರಹ್ಮಸೂತ್ರಾದಿ ನಿರ್ಮಾಣವನ್ನೂ ಮಾಡಿ ವೇದಾಧ್ಯಯನಪರಂಪರೆಯನ್ನು ಉಳಿಸುವುದು, ಹೊರತು ಒಂದೇ ವೇದವನ್ನು ಋಗ್ವೇದ, ಯಜುರ್ವೇದ ಎಂದು ಮುಂತಾಗಿ ವಿಭಾಗಿಸುವುದು ವೇದವಿಭಾಗವಲ್ಲ

***ಬಾದರಾಯಣ***

'ಬದರ' ಬೋರೆಯ ತೋಪಿನಲ್ಲಿ 'ಅಯನ' ಆಶ್ರಯ ಪಡೆದ ಸಾಮಾನ್ಯ ಋಷಿ-ಯೊಬ್ಬ ಈ ವೇದವ್ಯಾಸರೆಂದು ಸಾಮಾನ್ಯರ ಗ್ರಹಿಕೆ ವಸ್ತುತಃ 'ವಾದ' ದಲ್ಲಿ ಅಂದರೆ 'ವದಿ ಅಭಿವಾದನಸ್ತುತ್ಯೋಃ' ಎಂಬಂತೆ ಹರಿಸ್ತುತಿಯಲ್ಲಿ 'ರ' ರತವಾದ, ನಿರತವಾದ ವೇದಗಳಿಗೆ 'ಅಯನ' ಪೀಠನೆನಿಸಿದುದರಿಂದ ವೇದಪೀಠನೆ ಬಾದರಾಯಣ 'ವಾದ'- ದಲ್ಲಿ

ಹರಿಸ್ತುತಿರೂಪವಾದ ವೇದದಲ್ಲಿ 'ರತ'ರಾದ ಎಂಚಭವರಕಾದಿಸುರರಿಗ 'ಅಯನ' ಜ್ಞಾನ ನೀಡುವವನೂ ಬಾದರಾಯಣ 'ವ' ಅಂದರ ಜ್ಞಾನಬಲಾದಿಸ್ವರೂಪ- ರಾಗಿದ್ದು 'ಅದರಾಯಣ' ದರ ಅಂದರೆ ಜಯ, ಭೇದ, ಬೇದ, ವಾದ, ಕುಟಿಲ, ಅಂತ, ಆದಿ, ಮದ್ಯ ಮುಂತಾದ ಭಯಕ್ಕ ಅಯನರು ಆಶ್ರಯರಲ್ಲದವರು ಬಾದರಾ- ಯಣರು

ಸತ್ತ್ರಾಣ

'ಸತ್' ಸಜ್ಜನರಿಗೆ 'ತ್ರಾಣ' ರಕ್ಷಣ ನೀಡುವವರು ಹೇಗಂದರೆ, ಬಾದರಾ- ಯಣ ಮೂಲರೂಪದಲ್ಲಿ ಆದಾನಾದಿಕಾರಣನಾದ ನಾರಾಯಣ ಜೇಡರ ಹುಳು ತನ್ನ ಉದರ- ದಿಂದ ದಾರದಂತೆ ಎಳೆಯಾದ ಒಂದು ಬಗೆಯ ವಸ್ತುವನು ಹೂರಹಾಕಿ ಹಾಗೇ ಒಳಗೆ ತೆಗೆದುಕೊಳ್ಳುತ್ತದೆ ಹಾಗೆ ಹರಿಯೂ ತನ್ನುದರದೊಳಗಿಂದ ಇಪ್ಪತ್ತನಾಲ್ಕು ತತ್ತ್ವಗಳನ್ನು ಸೃಷ್ಟಿಕಾಲದಲ್ಲಿ ಹೊರಹಾಕಿ ಲಯಕಾಲದಲ್ಲಿ ಒಳಗೆ ತೆಗೆದುಕೊಳ್ಳುತ್ತಾನೆ ಎನ್ನುತ್ತದೆ ಅಥ- ರ್ವಣೋಪನಿಷತ್ತು ತೆಗೆದುಕೊಳ್ಳುವುದೆ ಆದಾನ ಹೊರಹಾಕುವುದ ಎಸರ್ಗ ಇವನ್ನು ಕಾಲಕಾಲಕ್ಕೆ ಮಾಡುವ ಸರ್ವರಕ್ಷನಾರಾಯಣನ ಸಾಮಾನ್ಯ ಋಷಿಯಂತ ಬೋರೆ ಮರದ ಕೆಳಗೆ ಕುಳಿತಿದ್ದಾನೆ ತಪಸ್ಸೆಂದರ ಹೀಗೆ ಇರಬೇಕೆಂದು ಸಜ್ಜನರಿಗ ತೋರಿ ಅನು- ಗ್ರಹಿಸುತ್ತಿ- ದ್ದಾನೆ ಉಳಿದವರಿಗೆ ಸಾಮಾನ್ಯ ಋಷಿಯೆಂದೆ ಭಾವನ ಉಂಟುಮಾಡುತ್ತಾನ ಮೋಹಾ- ರೋಪಗಳಿಗೂ ಪ್ರಚೋದನ ನೀಡುತ್ತಾನ ಉಪಾ–ವರಾಶರರು ಮದುವ ಇಲ್ಲದೆಯೆ ವ್ಯಾಸರಿಗೆ ಜನ್ಮವಿತ್ತರು ವ್ಯಾಸರೂ ಮದುವಯಿಲ್ಲದೆಯೆ ಶುಕರಿಗ ಜನ್ಮವಿತ್ತರು ಎನ್ನುತ್ತದ ಈ ಮಾತು—

ಪುರಾಣಕರ್ತಾ ವ್ಯಭಿಚಾರಜಾತಃ ತಸ್ಯಾಪಿ ಪುತ್ರೋ ವ್ಯಭಿಚಾರಜಾತಃ

ವಸ್ತುತಃ ಸತ್ಯವತಿಗೆ ಜನ್ಮವಿತ್ತ ತಂದಯಾದ ವಸು ಚಕ್ರವರ್ತಿಯೆ ವಸಿಷ್ಠಯಾಜ್ಞ- ವಲ್ಕ್ಯಾದಿ ಮುನಿಗಳ ಸಮ್ಮುಖದಲ್ಲಿ ಪರಾಶರರಿಗೆ ಕನ್ಯಾದಾನ ಮಾಡಿದನೆಂದು ಕಲವು ಪ್ರಾಮಾಣಿಕ ಪ್ರತಿಗಳಲ್ಲಿ ಬಾರತ ಹೇಳಿದೆ ವ್ಯಾಸರು ಮದುವಯಾಗದ ಶುಕರಿಗೆ ಜನ್ಮವಿತ್ತ- ರೆನ್ನುವುದೇನೋ ಸರಿಯೇ ಆದರೆ ಗಿಳಿಯ ರೂಪದಿಂದ ಬಂದು ವ್ಯಾಸರ ಶರೀರ- ಸೌಂದರ್ಯವನ್ನು ಕಂಡು ನಲಿಯುತ್ತಿದ್ದ ಘೃತಾಚಿಯಲ್ಲಿ ವ್ಯಾಸರಿಗೆ ಅನುಗ್ರಹಬುದ್ಧಿ ಉಂಟಾಯಿತು ಹೊರತು ಮೋಹವಲ್ಲ ಒಂದು ಹೆಣ್ಣುಗಿಳಿಯನ್ನು ನೋಡಿದಾಗ ಮಾನ- ವನಿಗೆ ಮೋಹ ಉಂಟಾಗುವುದು ಎಲ್ಲೂ ಕಂಡಿಲ್ಲ ಘೃತಾಚಿಯ ಕೋರಿಕಯಂತೆ ಅಚಿಂತ್ಯ ಶಕ್ತಿಯಿಂದ ತತ್ಕಾಲದಲ್ಲಿ ಅರಣಿಕಾಷ್ಠದಲ್ಲಿ ಶುಕರಿಗೆ ಜನ್ಮವಿತ್ತರು ವ್ಯಾಸರು ವೀರ್ಯಪಾತ- ವಾದಂತೆ ತೋರಿಕೊಂಡುದುದು ಕೇವಲ ಅಸುರಮೋಹನಾರ್ಥ

ನಮ್ಮ ಶ್ರೀಕೃಷ್ಣನು ಮಕ್ಕಳ ಸೃಜಿಸುವ ಮಹಿಮ್ಮೆ ಬಲ್ಲವರಿಗ ಸಲಹಲಿಕೆ

ಎಂದು ಲಕ್ಷ್ಮೀಶೋಭನ ಪದದಲ್ಲಿ ವಾದಿರಾಜರು ಹೇಳಿದ್ದಾರೆ ಇಲ್ಲಿ ಶ್ರೀಕೃಷ್ಣನೆಂದರ ಪಾರಾಶರ್ಯಕೃಷ್ಣರಾದ ವೇದವ್ಯಾಸರೂ ಆಗಬಹುದು ವ್ಯಾಸರು ಮುಂದೆ ದೃತರಾಷ್ಟ್ರಪಾಂಡು-

ವಿದುರರಿಗೂ ಕೇವಲ ದೃಷ್ಟಿಯಿಂದಲೇ ಜನ್ಮ ನೀಡುತ್ತಾರೆ ಮಕ್ಕಳನ್ನು ಸೃಜಿಸುವ ಈ ಮಹಿಮೆ ಅದರ ರಹಸ್ಯವನ್ನು ಬಲ್ಲವರಿಗೆ ರಕ್ಷಣೆ ನೀಡುತ್ತದೆ ಅದರಿಂದ ಸತ್ತ್ರಾಣರು ಸಜ್ಜನರಕ್ಷಕರು ಬಾದರಾಯಣರು ಅಂಥ ಬಾದರಾಯಣರೆ, ನೀವು ನಮ್ಮನ್ನು 'ಪಾಹಿ' ಸಲಹುತ್ತಿರಿ

**ಕ್ಷಿತಿಯೊಳಗೆ ಮಣಿಮಂತ ಮೊದಲಾ-**
**ದತಿದುರಾತ್ಮರು ಒಂದಧಿಕವಿಂ-**
**ಶತಿ ಕುಭಾಷ್ಯವ ರಚಿಸೆ ನಡುಮನೆ ಎಂಬ ಬ್ರಾಹ್ಮಣನ ।**
**ಸತಿಯ ಜಠರದೊಳವತರಿಸಿ ಭಾ-**
**ರತಿರಮಣ ಮಧ್ವಾಭಿಧಾನದಿ**
**ಚತುರದಶಲೋಕದಲಿ ಮೆರೆದಪ್ರತಿಮಗೊಂದಿಸುವೆ ॥ ೮ ॥**

ಈ ಭೂಮಿಯಲ್ಲಿ ಮಣಿಮಂತ ಮೊದಲಾದ ಅತಿದುರಾತ್ಮರು ಇಪ್ಪತ್ತೊಂದು ದು-ರ್ಭಾಷ್ಯಗಳನ್ನು ರಚಿಸಿದಾಗ ಭಾರತೀರಮಣ ಮುಖ್ಯಪ್ರಾಣ ಮಧ್ಯಗೇಹರೆಂಬ ಬ್ರಾಹ್ಮ-ಣೋತ್ತಮನ ಸತಿಯ ಉದರದಲ್ಲಿ ಅವತರಿಸಿ ಮಧ್ವನಾಮದಿಂದ ಹದಿನಾಲ್ಕು ಲೋಕದಲ್ಲಿ ಮೆರೆದ ಅಪ್ರತಿಮನಾದ ಇಂಥ ಗುರುವಿಗೆ ವಂದಿಸುತ್ತೇನೆ

ಮಧ್ವರ ಅವತಾರದ ಹಿನ್ನೆಲೆಯನ್ನು ಹೇಳುತ್ತ ದಾಸರು ಕ್ಷಿತಿಯೊಳಗೆ ಮಣಿಮಂತ ಮೊದಲಾದ ಅತಿ ದುರಾತ್ಮರು ಇಪ್ಪತ್ತೊಂದು ದುರ್ಭಾಷ್ಯಗಳನ್ನು ರಚಿಸಿದರು ಎಂದಿದ್ದಾರೆ

**ಮಣಿಮಂತ**

ಕಶ್ಯಪರಿಂದ ಕ್ರೋಧಾದೇವಿಯಲ್ಲಿ ಕ್ರೋಧವಶರೆಂಬ ಮುನ್ನೂರು ಕೋಟಿ ರಾಕ್ಷಸರು ಜನಿಸಿದರು ಅವರೆಲ್ಲರೂ ಪರಮಾತ್ಮದ್ವೇಷಿಗಳು

ಈಶ್ವರೋऽಹಮಹಂ ಭೋಗೀ

ಎಂದು ಮುಂತಾಗಿ ಗೀತೆಯು ಹೇಳುವ ಅಸುರಭಾವನೆಯನ್ನೆ ತಳೆದ ಅತಿ ದುರಾತ್ಮರು ಶಿವವರಬಲದಿಂದ ಅವಧ್ಯರಾಗಿದ್ದರೂ ದೇವತೆಗಳ ಭಯದಿಂದ ಕುಬೇರನೊಡನೆ ಮೈತ್ರಿ ಬೆಳಿಸಿ ಅವನ ಸರೋವರಗಳನ್ನು ಕಾಪಾಡುವ ಕಾರ್ಯ ಮಾಡುತ್ತಿದ್ದರು ಇವರಿಗೆಲ್ಲ ಅಧಿಪತಿ ಮಣಿಮಂತ ಸುಮ್ಮನೆ ತಪಸ್ಸು ಮಾಡುತ್ತ ಕುಳಿತಿದ್ದ ವಿಷ್ಣುಭಕ್ತನಾದ ಅಗಸ್ತ್ಯ ಮುನಿಯ ತಲೆ ಮೇಲೆ ಉಗುಳಿದ್ದ ಅತಿದುರಾತ್ಮನೀತ

ಒಂದು ಸರೋವರದಲ್ಲಿ ಬಂಗಾರದ ಕಮಲಗಳು ಇದು ಗಂಧಮಾದನ ಪರ್ವತದ ತುದಿಯಲ್ಲಿ ಇನ್ನೊಂದು ಸರೋವರದಲ್ಲಿ ಪಂಚವರ್ಣದ ಕಮಲಗಳು ಇದು ಮೇರು-ಪರ್ವತದ ತುದಿಯಲ್ಲಿ ಪಾಂಡವರು ವನವಾಸದಲ್ಲಿದ್ದಾಗ ಭೀಮಸೇನ ದ್ರೌಪದಿಯ ಕೋರಿಕೆಯಂತೆ ಗಂಧಮಾದನ ಪರ್ವತದ ಬಂಗಾರದ ಕಮಲವನ್ನು ತಂದಿತ್ತ ಆಗ ಅಲ್ಲಿ ಕಾಯುತ್ತಿದ್ದ ಒಂದು ಲಕ್ಷ ಮಂದಿ ಕ್ರೋಧವಶರು ಭೀಮನಿಂದ ಹತರಾದರು ಬಳಿಕ

ಮೇರುಪರ್ವತದ ಪಂಚವರ್ಣ ಕಮಲವನ್ನೂ ತರುವ ನೆಪದಿಂದ ಭೀಮಸೇನ ಅಲ್ಲಿಗೆ ಹೋಗಿ ಮಣಿಮಂತನನ್ನೂ ಉಳಿದ ಎಲ್ಲ ಕ್ರೋಧವಶರನ್ನೂ ಗದೆಯಿಂದ ಕುಟ್ಟಿಪುಡಿಗೈದ ಆಗ ಶಸ್ತ್ರಯುದ್ಧಕ್ಕೆ ಮೊದಲು ಶಾಸ್ತ್ರಯುದ್ಧವು ನಡೆದಿತ್ತು ಮಣಿಮಂತ ಮೊದಲಾದವರು ನಾಸ್ತಿಕ್ಯವನ್ನು ಹಿಡಿದು ವಾದಿಸಿದಾಗ ಬೀಮಸೇನ ಅವರನ್ನು ವಾದದಲ್ಲಿ ಸೋಲಿಸಿ ಸೌಗಂಧಿಕ ಪುಷ್ಪದೊಂದಿಗ ಜ್ಞಾನಪುಷ್ಪವನ್ನೂ ತಂದಿದ್ದ ಹೀಗ ಇಪ್ಪತ್ತೊಂದು ಕುಭಾಷ್ಯಗಳನ್ನು ಆಗಲೆ, ಅವು ಗ್ರಂಥಸ್ಥವಾಗುವುದಕ್ಕಿಂತ ಮೊದಲೇ, ಒಮ್ಮೆ ಖಂಡಿಸಿದ್ದ ಬೀಮ ಇದೀಗ ಕಲಿಯುಗದಲ್ಲಿ ಆ ಭಾಷ್ಯಗಳು ಗ್ರಂದಸ್ಥವಾದಾಗ ತಿರುಗಿ ಆ ಬೀಮನೆ ಮಧ್ವಾವತಾರ ಮಾಡಿ ಬಂದು ಅವುಗಳನ್ನು ಖಂಡಿಸಬೇಕಾಯಿತು ತತ್ವಜ್ಞಾನದ ಸೌಗಂಧಿಕ ಪುಷ್ಪವನ್ನು ಆಸ್ತಿಕ ಜನತೆಗೆ ತಂದುಕೊಡಬೇಕಾಯಿತು

***ಒಂದಧಿಕವಿಂಶತಿ ಕುಭಾಷ್ಯಗಳು***

ಬ್ರಹ್ಮಸೂತ್ರಕ್ಕೆ ಇಪ್ಪತ್ತೊಂದು ಭಾಷ್ಯ ಗ್ರಂದಗಳನ್ನು ರಚಿಸಿದವರ ಹೆಸರುಗಳನ್ನು ಸುಮಧ್ವವಿಜಯಕಾರರಾದ ನಾರಾಯಣಪಂಡಿತರು ಅವಕ್ಕೆ ತಾವೇ ರಚಿಸಿದ ಬಾವಪ್ರಕಾಶಿಕಾ ಟೀಕಯಲ್ಲಿ ಹೀಗೆ ಉಲ್ಲೇಖಿಸಿದ್ದಾರೆ

| | | |
|---|---|---|
| ೧ ಬಾರತೀವಿಜಯ | ೨ ಸಂವಿದಾನಂದ | ೩ ಬ್ರಹ್ಮಘೋಷ |
| ೪ ಶತಾನಂದ | ೫ ಉದ್ವರ್ತ | ೬ ವಿಜಯ |
| ೭ ರುದ್ರಬಟ್ಟ | ೮ ವಾಮನ | ೯ ಯಾದವಪ್ರಕಾಶ |
| ೧೦ ರಾಮಾನುಜ | ೧೧ ಭರ್ತೃಪ್ರಪಂಚ | ೧೨ ದ್ರವಿಡ |
| ೧೩ ಬ್ರಹ್ಮದತ್ತ | ೧೪ ಭಾಸ್ಕರ | ೧೫ ಪಿಶಾಚ |
| ೧೬ ವೃತ್ತಿಕಾರ | ೧೭ ವಿಜಯಭಟ್ಟ | ೧೮ ವಿಷ್ಣುಕ್ರಾಂತ |
| ೧೯ ವಾದೀಂದ್ರ | ೨೦ ಮಾಧವದಾಸ | ೨೧ ಶಂಕರ |

ಇಲ್ಲಿ 'ರಾಮಾನುಜ ಭಾಸ್ಕರ ಶಂಕರ' ಎಂಬ ಕ್ರಮ ವಿವಕ್ಷಿತವಲ್ಲವೆಂಬಟ್ಟುಕೊಳ್ಳಬೇಕು ವೃತ್ತಿಕಾರರನ್ನು ಉಪವರ್ಷಬೋಧಾಯನ ಎಂಬ ಹಸರುಗಳಿಂದ ಶಂಕರಭಾಸ್ಕರರೂ ಕುಮಾರಿಲರೂ ಉಲ್ಲೇಖಿಸಿದ್ದಾರೆ ಟಂಕ, ದ್ರಮಿಡ, ಗುಹದೇವ, ಕಪರ್ದಿ, ಭಾರುಚಿ ಎಂದು ಇನ್ನೂ ಐದು ಮಂದಿ ಭಾಷ್ಯಕಾರರ ಉಲ್ಲೇಖವೂ ರಾಮಾನುಜರಲ್ಲಿ ಸಿಗುತ್ತದೆ ಪ್ರಾಯಃ ಅವರೆಲ್ಲ ಈ ಇಪ್ಪತ್ತೊಂದರಲ್ಲಿಯೆ ಸೇರಿದ್ದು ನಾಮಾಂತರದಿಂದ ಪ್ರಸಿದ್ಧರಾದವರು

ಇಪ್ಪತ್ತೊಂದು ಭಾಷ್ಯಗಳಲ್ಲಿ ಶಂಕರ-ಭಾಸ್ಕರ-ರಾಮಾನುಜ ಈ ಮೂರೆ ಇಂದು ಉಳಿದಿವೆ ಬೇರೆಲ್ಲ ಕಣ್ಮರೆಯಾಗಿವೆ ಏಕೆಂದರೆ ಶಂಕರರದು ಬ್ರಹ್ಮವಿವರ್ತವಾದ ಪರಬ್ರಹ್ಮನನ್ನೆ ಪ್ರಪಂಚವಾಗಿ ಎಲ್ಲರೂ ಭ್ರಮಿಸುತ್ತಿದ್ದಾರೆ, ಹಗ್ಗವನ್ನೆ ಹಾವೆಂದು ಭ್ರಮಿಸುವಂತೆ, ಎನ್ನುವ ವಾದ ಭಾಸ್ಕರರದು ಬ್ರಹ್ಮಪರಿಣಾಮವಾದ, ಪರಬ್ರಹ್ಮನೆ ಪ್ರಪಂಚವಾಗಿ ಪರಿಣಮಿಸಿದ್ದಾನೆ, ಎನ್ನುತ್ತಾರೆ ರಾಮಾನುಜರದು ಅಭಿನ್ನನಿಮಿತ್ತೋಪಾದಾನವಾದ ಭಗವಂತ

ಚೇತನಾಚೇತನಾತ್ಮಕ ಪ್ರಪಂಚಕ್ಕೆ ಸೃಷ್ಟಿಕರ್ತನಾಗಿದ್ದರೂ ಪ್ರಪಂಚ ಅವನಿಗೆ ಶರೀರವಾಗಿದೆ ಸೂಕ್ಷ್ಮಪ್ರಪಂಚಶರೀರನಾಗಿ ಸ್ಥೂಲಪ್ರಪಂಚಶರೀರನಾದ ತನಗೇ ತಾನು ಉಪಾದಾನ-ಕಾರಣವೂ ಆಗುತ್ತಾನೆ, ಎನ್ನುತ್ತಾರೆ ಈ ಮೂರು ವಾದಗಳಲ್ಲಿ ಯಾವುದಾದರೊಂದನ್ನೆ ಉಳಿದ ಭಾಷ್ಯಗಳೂ ಪ್ರತಿಪಾದಿಸುವುದರಿಂದ ಅವೆಲ್ಲ ಮೂಲೆಗೆ ಸೇರಿಹೋಗಿವೆ ಮೇಲೆ ಹೇಳಿದ ಮೂರು ವಾದಗಳೂ ವಿಷ್ಣುದ್ವೇಷದಲ್ಲಿಯೆ ಪರ್ಯವಸಾನ ಹೊಂದುತ್ತವೆ ಏಕೆಂದರೆ ವಿಷ್ಣುದ್ವೇಷ ಒಂಬತ್ತು ಬಗೆಯಾಗಿವೆ

> ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ ।
> ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥
> ಪ್ರಾದುರ್ಭಾವವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ ।
> ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥

ಈಶನಲ್ಲಿ ಜೀವೈಕ್ಯವನ್ನು ತಿಳಿಯುವುದು, ನಿರ್ಗುಣ, ನಿರಾಕಾರನೆನ್ನುವುದು, ಅವನ ಗುಣ-ಗಳಲ್ಲಿ ನ್ಯೂನತೆ ಕಾಣುವುದು, ಅವನಿಗೆ ಸಮರು ಬೇರೆ ಇದ್ದಾರೆ ಎನ್ನುವುದು ಉತ್ತಮರೂ ಬೇರೆ ಇದ್ದಾರೆ ಎನ್ನುವುದು, ಅವನ ಶರೀರ-ಗುಣ-ಕರ್ಮ-ಅವತಾರರೂಪಗಳಲ್ಲಿ ಭೇದವೆಣಿಸುವುದು, ಅವತಾರಗಳ ಬಗ್ಗೆ ತಪ್ಪು ಕಲ್ಪನೆ, ವಿಷ್ಣುಭಕ್ತರನ್ನು ದ್ವೇಷಿಸುವುದು, ಅವನನ್ನು ವರ್ಣಿಸುವ ಶಾಸ್ತ್ರಗಳನ್ನು ಹಳಿಯುವುದು ಇವೆಲ್ಲವೂ ವಿಷ್ಣುದ್ವೇಷಗಳು ವಿಷ್ಣು-ದ್ವೇಷಗಳಿಗೆ ಪ್ರಚೋದಕವಾದ ಈ ಮೂರು ವಾದಗಳನ್ನು ಪುರಸ್ಕರಿಸುವ ಇಪ್ಪತ್ತೊಂದು ಭಾಷ್ಯಗಳನ್ನು ಕುಭಾಷ್ಯಗಳೆಂದು ದಾಸರು ಕರೆದಿದ್ದಾರೆ

**ಮಣಿಮಂತ ಮೊದಲಾದ ಅತಿದುರಾತ್ಮರು**

'ಮಣಿಮಾನ್ ದುಷ್ಕೃತೀ ನಿಷ್ಕ್ರಿಯಾರ್ಥಂ' 'ಮಣಿಮಂತನು ಭೀಮಸೇನನ ಮೇಲೆ ಸೇಡು ತೀರಿಸುವ ಉದ್ದೇಶದಿಂದಲೆ ಸಜ್ಜನರ ಮನಸ್ಸಿಗೆ ನೋವುಂಟು ಮಾಡುವ ದುಷ್ಟ ಶಾಸ್ತ್ರ ರಚಿಸಿದ' ಎಂದು ಮಣಿಮಂತನೊಬ್ಬನನ್ನೇ ವಾಯುಸ್ತುತಿ ಉಲ್ಲೇಖಿಸಿದರೂ ಜೊತೆಗೆ ಅವನ ಕಡೆಯವರೂ ವಿವಕ್ಷಿತರೆ ಏಕೆಂದರೆ,

> ಏತತ್ಪ್ರತೀಪಂ ಕಿಲ ಕರ್ತುಕಾಮಾ ನಷ್ಟೌಜಸಃ ಸಂಕಟಮೇವಮಾಪ್ಯ

'ಭೀಮನ ಮುಂದೆ ಶರೀರಬಲಪ್ರದರ್ಶನ ಮಾಡಿ ಸೋತ ದೈತ್ಯರು ಭೂಮಿಯಲ್ಲಿ ಹುಟ್ಟಿ ಬುದ್ಧಿಬಲದಿಂದ ದುಷ್ಟಶಾಸ್ತ್ರ ರಚಿಸಿದರು' ಎಂದು ಸುಮಧ್ವವಿಜಯದಲ್ಲಿ ಹೇಳಿದೆ

> ನ ಸೇಹಿರೇ ಕ್ರೋಧವಶಾದಿದೈತ್ಯಾಃ

'ಸಜ್ಜನರು ಬೌದ್ಧಶಾಸ್ತ್ರವನ್ನು ಸ್ವೀಕರಿಸದಿದ್ದುದನ್ನು ಕಂಡು ಸಹನೆಯಾಗದೆ ಕ್ರೋಧವಶರು ಭೂಮಿಯಲ್ಲಿ ಹುಟ್ಟಿ ದುಷ್ಟ ಶಾಸ್ತ್ರಗಳನ್ನು ರಚಿಸಿದರು' ಎನ್ನುವ ನಿರ್ಣಯವಚನ ಇದಕ್ಕೆ ಆಧಾರ ನಿರ್ಣಯಕ್ಕೂ ಮೂಲ ಕೂರ್ಮ ಮತ್ತು ಸ್ಕಾಂದ ಪುರಾಣಗಳು

ಕೂರ್ಮಪುರಾಣದಲ್ಲಿ,

ನಿಹತಾ ಭೀಮಸೇನೇನ ದ್ವಾಪರಾಂತೇ ನರೋತ್ತಮ ।
ಜನಿಷ್ಯಂತಿ ಬ್ರಹ್ಮಯೋನೌ ॥

'ದ್ವಾಪರದ ಕೊನೆಯಲ್ಲಿ ಭೀಮನಿಂದ ಹತರಾದವರೆ ಕಲಿಯುಗದಲ್ಲ ಬ್ರಾಹ್ಮಣರಾಗಿ ಹುಟ್ಟಿ ದುಷ್ಟ ಶಾಸ್ತ್ರ ರಚಿಸುವರು' ಎಂದು ಹೇಳಿದೆ

ಸ್ಕಾಂದಪುರಾಣದಲ್ಲಿ,

ಮಣಿಮತ್ಪೂರ್ವಕಾ ದೈತ್ಯಾ ದುಷ್ಟಾ ಆಸನ್ ಕಲೌ ಯುಗೇ ।
ತೇ ಕುಶಾಸ್ತ್ರಪ್ರವೃತ್ತ್ಯರ್ಥಂ ಹರಿವಾಯುವಿರೋಧಿನಃ ॥

'ಮಣಿಮಂತ ಮೊದಲಾದ ದೈತ್ಯರು ದುಃಶಾಸ್ತ್ರಪ್ರಸಾರಕ್ಕಾಗಿ ಕಲಿಯುಗದಲ್ಲ ಹುಟ್ಟಿದರು ಹರಿವಾಯುಗಳನ್ನು ವಿರೋಧಿಸಿದರು' ಎಂದಿದೆ ಹೀಗೆ ಒಂದಟಿಕಪಿಂಶತಿ ಕುಭಾಷ್ಯಗಳ ರಚನೆಯಾಯಿತು

ಇಪ್ಪತ್ತು ಕುಬಾಷ್ಯರಚನೆಯೆ ಅತಿಯಾಯಿತು ಸಾಲದ್ದಕ್ಕೆ ಇನ್ನೂ ಒಂದಧಿಕ ಎಂದ ಮೇಲೆ ಅದನ್ನು ಸಜ್ಜನರಿಗೆ ಸಹಿಸುವುದಾಗಲಿಲ್ಲ ಸಂಕಟಪಟ್ಟರು ಅವರ ಸಮಾಧಾನಕ್ಕಾಗಿ ಮಧ್ವಾವತಾರವಾಯಿತು

ನಡುಮನೆ ಎಂಬ ಬ್ರಾಹ್ಮಣ

ಶ್ರೀಮದಾಚಾರ್ಯರ ತಂದೆಯ ಹೆಸರು ಇತಿಹಾಸದ ಗರ್ಭದಲ್ಲ ಲೀನವಾಗಿ ಹೋಗಿದೆ ಸುಮಧ್ವವಿಜಯದಲ್ಲಿ ಹೇಳಿಲ್ಲ ಪುರಾಣಗಳಲ್ಲಿಯೂ ಹೇಳಿಲ್ಲ 'ನಡುಮನೆ' ಎಂಬ ಅಡ್ಡಹೆಸರೆ ಉಳಿದಿದೆ ಶಿವಳ್ಳಿ ಗ್ರಾಮದ ಬ್ರಾಹ್ಮಣರಲ್ಲಿ ಮೂಡುಮನೆ, ಪಡುಮನೆ, ತೆಂಕುಮನೆ, ಬಡಗುಮನೆ, ನಡುಮನೆ ಕುಲದವರಿದ್ದಾರೆ ತುಳು ಭಾಷೆಯಲ್ಲ ಮೂಡಿಲ್ಲಾಯ, ಪಡಿಲ್ಲಾಯ, ಬಡಕಿಲ್ಲಾಯ, ತೆಂಕಿಲ್ಲಾಯ, ನಡಿಲ್ಲಾಯ ಎಂದು ಇವರನ್ನು ಕರೆಯುತ್ತಾರೆ ಶ್ರೀಮದಾಚಾರ್ಯರ ತಂದೆ ನಡಿಲ್ಲಾಯರು ಸಂಸ್ಕೃತದಲ್ಲ ಮಧ್ಯಗೇಹರು ಮಧ್ಯದ 'ಗೇಹ' ಅಂದರೆ ಮನೆಯವರು, ಅವರು 'ಮಧ್ಯಗ-ಈಹ'ರೂ ಹೌದು

ನಾರಾಯಣಂ ಕುಲಪತಿಂ ಶರಣಂ ವ್ರಜೇಮ

ಸತ್ಪುತ್ರಪ್ರಾಪ್ತಿಗಾಗಿ ನಮ್ಮ ಕುಲದೈವನಾದ ನಾರಾಯಣನನ್ನ ಮೊರ ಹೋಗುತ್ತೇನೆ' ಎನ್ನುತ್ತ ಅವರ ಊರಲ್ಲಿ 'ಮಧ್ಯಗ' ನೆನಿಸಿದ, ಅಂದರೆ ಊರ ನಡುವೆ ವಿರಾಜಿಸುವ ಅನಂತೇಶ್ವರ ದೇವಾಲಯದಲ್ಲಿ ನೆಲೆಸಿದ ಅನಂತಶಯನನಾದ ನಾರಾಯಣನನ್ನು ಆರಾಧಿಸಿ ಅವನಲ್ಲಿ 'ಈಹಾ' ಅಂದರೆ ಪ್ರಾರ್ಥನೆಯನ್ನು ನಿವೇದಿಸಿಕೊಂಡವರು

ಪೂರ್ವಜನ್ಮದಲ್ಲಿ ಇವರು ಭರದ್ವಾಜ ಮುನಿಗಳು ಆಗಲೂ ಮಧ್ಯಗೇಹರೇ ಆಗಿದ್ದರು 'ಮಧ್ಯಗ' ನಲ್ಲಿ ಅಂದರೆ ಎಲ್ಲರ ಶರೀರಮಧ್ಯದ ಹೃದಯವಾಸಿಯಾಗಿರುವ ಸಕಲಪ್ರಾಣಿ-

ನಿಯಾಮಕನಾದ ಮುಖ್ಯಪ್ರಾಣನಲ್ಲಿ 'ನೀ ನನ್ನ ಮಗನಾಗೆಂದು' 'ಈಹಾ' ಅಂದರೆ ವರವನ್ನು ಬೇಡಿ ಪಡೆದಿದ್ದರು

ವಾಯುಪುರಾಣ ಸ್ಪಷ್ಟವಾಗಿ ಹೇಳಿದೆ—

ಭರದ್ವಾಜೇತಿ ಯಃ ಪೂರ್ವೋ ಮಧ್ಯಗೇಹೋऽಭವತ್ ಕಿಲ ।
ಜಗತ್ಪ್ರಾಣೋ ಮಮ ಸುತೋ ಭವೇದಿತಿ ನ ತಪ್ತವಾನ್ ॥
ಆತ್ಮಾನಂ ದತ್ತವಾನ್ ಪೂರ್ವಂ ಮದಾಜ್ಞಾಪೂರ್ವಕಂ ಮರುತ್ ।
ಆವಿಶ್ಯ ಪಿತರಂ ಪೂರ್ವಂ ಸ್ವರೂಪೇಣೈವ ಮಾತರಮ್ ॥
ಪ್ರಭಂಜನಸ್ತಸ್ಯ ಪತ್ನ್ಯಾಂ ಜಾತವತ್ ಸ ವ್ಯರೋಚಯತ್ ।
ಪ್ರಾಪ್ತೇ ತು ಪಂಚಮೇ ವರ್ಷೇ ಬ್ರಾಹ್ಮಣಂ ಕೃತವಾನ್ ಪಿತಾ ॥
ಸಪ್ತಸಂವತ್ಸರಾದೂರ್ಧ್ವಂ ಗಚ್ಛನ್ ಬದರಿಕಾಶ್ರಮಮ್ ॥

'ಮಧ್ಯಗೇಹರು ಹಿಂದೆ ಭರದ್ವಾಜರಾಗಿದ್ದರು ಆಗಲೂ ಅವರು ಮಧ್ಯಗೇಹರೇ ಆಗಿದ್ದರು ಹೇಗೆಂದರೆ ಮುಖ್ಯಪ್ರಾಣ ತನ್ನ ಮಗನಾಗಬೇಕೆಂದು ಅವರು ತಪಗೈದರು ಭಗವಂತನಾಜ್ಞೆಯಂತೆ ಮುಖ್ಯಪ್ರಾಣ ಆ ವರವನ್ನು ನೀಡಿದ ಅದರಿಂದ ಮಧ್ಯಗೇಹರ ಶರೀರವನ್ನು ಪ್ರಾಣ ತನ್ನ ನಿಜರೂಪದಿಂದಲೆ ಪ್ರವೇಶಿಸಿ ಬಳಿಕ ಅವರ ಮೂಲಕ ಅವರ ಪತ್ನಿಯ ಗರ್ಭದಲ್ಲಿಯೂ ಪ್ರವೇಶಿಸಿ ಜನಿಸಿದಂತೆ ತೋರಿಕೊಂಡ ಐದನೆ ವಯಸ್ಸಿನಲ್ಲಿ ತಂದೆ ಅವನಿಗೆ ಉಪನಯನ ಮಾಡಿದರು ಏಳು ವಯಸ್ಸಾದಾಗ ಆತ ಬದರಿಕಾಶ್ರಮಕ್ಕೆ ಹೋಗಿ ವೇದವ್ಯಾಸರಲ್ಲಿ ಅಧ್ಯಯನ ನಡೆಸಿದ'

ಹೀಗೆ ಹೆಸರಿಗಿಂತಲೂ ಅಡ್ಡಹೆಸರೆ ಹೆಚ್ಚು ಅರ್ಥಪೂರ್ಣವಾಗಿರುವುದರಿಂದ ಅದೇ ಉಳಿಯಿತೇನೊ!

*ಸತಿಯ ಜಠರದೊಳವತರಿಸಿದ*

ವಾಯುಪುರಾಣವಚನದ ಪ್ರಕಾರ ಮುಖ್ಯಪ್ರಾಣ ತಂದೆಯನ್ನು ಪ್ರವೇಶಿಸಿ ಅಲ್ಲಿಂದ ತಾಯಿಯ ಗರ್ಭಕ್ಕೆ ಬಂದೇ ಜನಿಸಿದ ಆದರೂ 'ಸ್ವರೂಪೇಣೈವ' ನಿಜರೂಪದಿಂದಲೆ ಗರ್ಭವನ್ನು ಪ್ರವೇಶಿಸಿದ ಹೊರತು ವೀರ್ಯದ ಮೂಲಕವಲ್ಲ ವೀರ್ಯದ ಮೂಲಕ ಪ್ರವೇಶಿಸಿ ಗರ್ಭವಾಸ ದುಃಖ ಅನುಭವಿಸಿದ ಜೀವ ಬೇರೆಯೆ ಇದ್ದ ಗರ್ಭಶರೀರ ಪೂರ್ಣಪ್ರಮಾಣದಲ್ಲಿ ಬೆಳಯುವವರೆಗೂ ಅದರಲ್ಲಿ ಆತನಿದ್ದ ಇನ್ನೇನು ಒಂದೆರಡು ತಿಂಗಳಲ್ಲಿ ಪ್ರಸವವಾಗಬೇಕನ್ನುವಷ್ಟರಲ್ಲಿ ಮುಖ್ಯಪ್ರಾಣ ಆತನನ್ನು ಹೊರಗೆ ಕಳಿಸಿ ತಾನು ಪ್ರವೇಶಿಸಿದ ಮಾತೃಗರ್ಭದಲ್ಲಿಯ ಜನಿಸಿದಂತೆ ತೋರಿಕೊಂಡ 'ಸಂಪೂರ್ಣಲಕ್ಷಣಚಣಂ' ಎಂದು ಸುಮಧ್ವವಿಜಯ ಹೇಳಿದೆ ಗರ್ಭಶರೀರ ಆರು ತಿಂಗಳಲ್ಲಿ ಸಂಪೂರ್ಣಲಕ್ಷಣಭರಿತವಾಗುತ್ತದೆ ಆಗ ವಾಯುದೇವನ ಪ್ರವೇಶ

ಒಂದೆರಡು ತಿಂಗಳು ಮಾತ್ರವಾದರೂ ವಾಯುದೇವ ಗರ್ಭವಾಸ ಮಾಡಿದನೆಂದು ಒಪ್ಪಬೇಕು ಬಳಿತ್ಥಾಸೂಕ್ತದಲ್ಲಿ ಹಾಗೆ ಹೇಳಿದೆ

ಆದಿಸ್ಮಾತ್ರುರಾವಿಶದ್ ಯಾಸ್ವಾ ಶುಚಿರ-
ಹಿಂಸ್ಯಮಾನ ಉರ್ವಿಯಾ ವಿ ವಾವೃದೇ ।

ಇದಕ್ಕೆ ವಾದಿರಾಜರ ವ್ಯಾಖ್ಯಾನ—

ಯಾಸು ಮಾತೃಷು ದುಷ್ಕರ್ಮಣಾ ಉದರಸ್ಥಜಂತ್ವಾದಿನಾ
ವಾ ಅಹಿಂಸ್ಯಮಾನಃ ಸನ್ ವವೃದೇ ಆಪ್ರಸವಂ ವವೃಧೇ

'ಅಂಜನೆ-ಕುಂತಿ-ಮಧ್ಯಗೇಹಪತ್ನಿಯರಲ್ಲಿ ಜನಿಸುವಾಗ ವಾಯುದೇವ ಗರ್ಭದಲ್ಲಿ ದುಷ್ಕರ್ಮಪ್ರಯುಕ್ತವಾಗಿ ಆಗಲಿ ಗರ್ಭದಲ್ಲಿರುವ ಜಂತು ಮುಂತಾದವುಗಳಿಂದಾಗಲಿ ಪೀಡೆಯನ್ನು ಅನುಭವಿಸದೆಯೆ ಪ್ರಸವದವರೆಗೂ ಬೆಳೆದ' ಇದು ಸ್ವಶಕ್ತಿಯಿಂದ ಶರೀರಾಭಿಮಾನವನ್ನು ತೊಡೆದುಕೊಂಡಿರುವುದರಿಂದ ಎಂದು ತಿಳಿಯಬೇಕು 'ಉರ್ವಿಯಾ' ಮಹತ್ತಾದ ಸ್ವಶಕ್ತಿಯಿಂದ ಎಂದು ಮಂತ್ರವ ಇದನ್ನೂ ಹೇಳುತ್ತದ

ಶರೀರದಿಂದ ಇನ್ನೊಬ್ಬ ಜೀವನನ್ನು ಹೊರಗೆ ಕಳಿಸುದುದು ಆತನಿಗ ಆ ಶರೀರದಲ್ಲಿ ಸ್ವಲ್ಪ ಕಾಲವೇ ಅಂದರೆ ಆರೇಳು ತಿಂಗಳು ಗರ್ಭವಾಸ ದುಃಖ ಅನುಭವಿಸುವ ಪಾಪಕರ್ಮವಿತ್ತು ಅದು ಕಳೆದ ಬಳಿಕ ಅವನು ಅಲ್ಲಿ ಇರಲಾಗದು ಎಂದೇ ಹೊರತು ವಾಯುವಿಗ ಗರ್ಭವಾಸವಿಲ್ಲದಿರುವುದರಿಂದ ಎನ್ನಲಾಗದು ಗರ್ಭವಾಸವಿದ, ಗರ್ಭವಾಸದ ದುಃಖ ಮಾತ್ರ ಇಲ್ಲ ಅವನ ಶರೀರವೂ ಕೇವಲ ಚಿನ್ಮಯವಲ್ಲ ಪಾಂಚಭೌತಿಕವ ಆದರ ಅದರಲ್ಲಿ ಅವನಿಗೆ ಅಭಿಮಾನವಿಲ್ಲ ಅದರಿಂದಲೆ ಆತ 'ಅಪ್ರತಿಮ' ಅಶರೀರ ಪ್ರತಿಮಾ, ವಿಗ್ರಹ, ಶರೀರ ಎಂಬುದೆಲ್ಲ ಪರ್ಯಾಯಶಬ್ದಗಳು

**ಭಾರತಿರಮಣ ಮಧ್ವಾಭಿಧಾನದಿ ಮೆರೆದ**

ಎಲ್ಲರ ಬುದ್ಧಿಗೆ ನಿಯಾಮಕಳೂ ವಾಗ್ದೇವತೆಯೂ ಆದ ಭಾರತಿಗೆ ರಮಣನಾದ ವಾಯುದೇವನ ಅವತಾರ ಮಧ್ವರು ವಾಯುದೇವನ ಅವತಾರವೆಂದರೆ ಇತರ ದೇವತೆಗಳ ಅವತಾರದಂತಲ್ಲ ಅವನ ಮೂಲ ರೂಪಕ್ಕೂ ಅವತಾರರೂಪಕ್ಕೂ ಜ್ಞಾನಾನಂದಬಲಾದಿಗಳಲ್ಲಿ ವ್ಯತ್ಯಾಸವಿರುವುದಿಲ್ಲ ಹೆಸರು ಮಾತ್ರವ ಬೇರ ಆದ್ದರಿಂದ ಮಧ್ವರು ಜಗದ್ಗುರುಗಳಾಗಿ ಹದಿನಾಲ್ಕು ಲೋಕಗಳಲ್ಲಿ ಮೆರೆದರೆಂದರ ಅತಿಶಯೋಕ್ತಿಯಲ್ಲ

**ಚತುರದಶಲೋಕದಲಿ ಮೆರೆದ, ಅಪ್ರತಿಮ**

ಸುಮಧ್ವವಿಜಯವು ಹೇಳುವಂತೆ ಮಧ್ವರ ಉಪದೇಶವನ್ನು ಕೇಳಲು ಸನಕಾದಿ ಮುನಿಗಳ ಸಮೇತನಾಗಿ ಸಾಕ್ಷಾತ್ ಶೇಷದೇವ ಬರುತ್ತಿದ್ದನಂತೆ ಸತ್ಯಲೋಕದ ಸನಕಾದಿ ಮುನಿಗಳಿಂದ ತೊಡಗಿ ಪಾತಾಳದ ಶೇಷನವರೆಗೂ ಎಲ್ಲ ಹದಿನಾಲ್ಕು ಲೋಕಗಳ

ಸಜ್ಜನರೂ ಶ್ರೀಮದಾಚಾರ್ಯರ ಶಿಷ್ಯರೆಂದ ಮೇಲೆ ಅವರು ಅಪ್ರತಿಮ ಅಸದೃಶರೆ ಸರಿ ಅವರು ವಾಯುದೇವನ ಅವತಾರವೆನ್ನಲು ವೇದೋಕ್ತ ಮಧ್ವಾಭಿಧಾನವೆ ಸಾಕ್ಷಿ

ಯದೀಮನು ಪ್ರದಿವೋ ಮಧ್ವ ಆಧವೇ ಗುಹಾ ಸಂತಂ ಮಾತರಿಶ್ವಾ ಮಥಾಯತಿ 'ಮಧ್ವರು ಮಾತರಿಶ್ವನ ಅವತಾರ ಹರಿಸರ್ವೋತ್ತಮತ್ವಸಿದ್ಧಾಂತವನ್ನು ಸ್ಥಾಪಿಸಲು ಮಾಡಿದ ಅವತಾರ' ಎನ್ನುತ್ತಿದ ಬಳಿತ್ಥಾಸೂಕ್ತ

ಇಂತು ಸುಪ್ರಸಿದ್ಧ ಶ್ರುತಿ ತುತಿಸಿದ ಮಧ್ವಮುನಿ
ಎಂಥ ಗುರುವರನು ನೀವೆ ನೋಡಿರೊ ।
ಈ ಮತವನು ಪಿಡಿಯಿರೊ
ಮುಕುತಿಯನು ಬೇಡಿರೋ ॥

ಎಂದು ವಾದಿರಾಜರು ವೈಕುಂಠ ವರ್ಣನೆಯಲ್ಲಿ ಹಾಡಿದ್ದಾರೆ ಅದರಿಂದಲೂ ಅಪ್ರತಿಮರು ಶ್ರೀಮದಾಚಾರ್ಯರು

'ವಾಕ್ಯೈನೈಕೇನಾಕ್ಷಿಪದ್ವರ್ಷತೀರ್ದಃ' ಎಂದು ಸುಮಧ್ವವಿಜಯ ಹೇಳುವಂತ ಒಂದು ವಾಕ್ಯದಿಂದಲೆ ಇಪ್ಪತ್ತೊಂದು ಭಾಷ್ಯಗಳನ್ನು ಖಂಡಿಸುವ, ಅನ್ಯರಿಂದ ಖಂಡಿಸಲಾಗದ ಅಪ್ರತಿಮರಾದ ಮಧ್ವರಿಗೆ ವಂದನೆ ಸಲ್ಲಿಸುತ್ತ ದಾಸರು ತನ್ನ ಈ ಗ್ರಂಥವೂ ನಿರ್ವಿಘ್ನವಾಗಿ ಪರಿಸಮಾಪ್ತಿ ಹೊಂದಿ ಅಪ್ರತಿಮವಾಗಿ ಮೆರೆಯಲಿ ಎಂದು ಬೇಡಿಕೊಳ್ಳುತ್ತಿದ್ದಾರೆ

**ಪಂಚಭೇದಾತ್ಮಕ ಪ್ರಪಂಚಕೆ**
**ಪಂಚರೂಪಾತ್ಮಕನೆ ದೈವಕ**
**ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ ।**
**ಪಂಚವಿಂಶತಿ ತತ್ವ ತರತಮ-**
**ಪಂಚಿಕೆಗಳನು ಪೇಳ್ದ ಭಾವಿ ವಿ-**
**ರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವು ॥ ೯ ॥**

'ಪಂಚಭೇದಸ್ವರೂಪವಾದ ಈ ಪ್ರಪಂಚಕ್ಕೆ ಪಂಚರೂಪಿಯಾದ ಶ್ರೀಹರಿಯೆ ಪರ-ದೇವತೆ ರುದ್ರ ಇಂದ್ರ ಮುಂತಾದವರೆಲ್ಲ ಅವನಿಗೆ ಕಿಂಕರರು ಇಪ್ಪತ್ತೈದು ತತ್ವಗಳಿವೆ ತಾರತಮ್ಯವಿದೆ ಈ ಎಲ್ಲ ವಿವರಗಳನ್ನು ಉಪದೇಶಿಸಿದ ಭಾವಿ ಬ್ರಹ್ಮರೆನಿಸಿದ ಆನಂದ-ತೀರ್ಥರನ್ನು ಅನುದಿನವೂ ನೆನೆಯುವನು'

ಹಿಂದಿನ ಪದ್ಯದಲ್ಲಿ ವಾಯುದೇವರು ನಡುಮನೆಯೆಂಬ ಬ್ರಾಹ್ಮಣನ ಮನೆಯಲ್ಲಿ ಜನಿಸಿ ಮಧ್ವಾಭಿಧಾನದಿಂದ ಮೆರೆದರು ಎಂದಿದೆ. ಈ ಮದ್ವಾಬಿಧಾನವನ್ನು ಶ್ರೀಮದಾಚಾ-ರ್ಯರಿಗೆ ಯಾರು ಕೊಟ್ಟರು? ಹುಟ್ಟಿದಾಗ ಅವರು ವಾಸುದೇವ ಎನಿಸಿದರು ಯತ್ಯಾಶ್ರಮ ಸ್ವೀಕರಿಸಿದಾಗ ಪೂರ್ಣಪ್ರಜ್ಞರೆನಿಸಿದರು ವೇದಾಂತಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾದಾಗ

ಆನಂದತೀರ್ಥರೆನಿಸಿದರು ಮಧ್ವರೆನಿಸಿದುದು ಯಾವಾಗ? ಹೇಗೆ? ಈ ಪ್ರಶ್ನೆಗೆ ಸಮಾಧಾನ ನೀಡುತ್ತದೆ ಈ ಪದ್ಯ ಆನಂದತೀರ್ಥ ಎನ್ನುವುದಕ್ಕೇ ಪರ್ಯಾಯ ಮಧ್ವನಾಮ ಎರಡಕ್ಕೂ ಅರ್ಥ ಒಂದೇ, ಆನಂದದಾಯಕವಾದ ಶಾಸ್ತ್ರ ರಚಿಸಿದವರು ಎಂದು ವೇದೋಕ್ತವಾದ ಹೆಸರು ಮಧ್ವ ಎಂದು ಇದರ ಅರಿವಿಲ್ಲದೆಯೇ ದೈವ ಪ್ರೇರಣೆಯಿಂದ ಅಚ್ಯುತಪ್ರಜ್ಞರು ಇಟ್ಟ ಅದೇ ಅರ್ಥದ ಹೆಸರು ಆನಂದತೀರ್ಥ ಎಂದು

ಶ್ರೀಮದಾಚಾರ್ಯರ ಶಾಸ್ತ್ರ ಆನಂದದಾಯಕ ಹೇಗೆ ಎಂದರೆ ಅದು ಮೋಕ್ಷಶಾಸ್ತ್ರವಾಗಿದ್ದು ಮೋಕ್ಷಾನಂದಕ್ಕೆ ಕಾರಣವಾಗಿರುವುದು ಮಾತ್ರವಲ್ಲ ಉಳಿದ ಶಾಸ್ತ್ರಗಳು ಅಸಮಗ್ರವಾಗಿ ಅಸಮರ್ಥಕವಾಗಿ ವಿಚಾರಮಾಡಿ ಕೈಬಿಟ್ಟಿರುವ ಪ್ರಮೇಯಗಳನ್ನು ಶ್ರೀಮದಾಚಾರ್ಯರು ಸಮರ್ಥಕವಾಗಿ ಸುಂದರವಾಗಿ ಹೇಳಿ ಜಿಜ್ಞಾಸುಗಳಿಗೆ ಆನಂದ ಉಂಟುಮಾಡಿದರು ಆ ಪ್ರಮೇಯಗಳಲ್ಲಿ ಅತಿಮುಖ್ಯವಾಗಿರುವ ಕೆಲವನ್ನು ಮಾತ್ರ ದಾಸರು ಈ ಪದ್ಯದಲ್ಲಿ ಹೇಳುತ್ತಾರೆ

*ಪಂಚಭೇದ*

> ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ ।
> ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ ॥
> ಮಿಥಶ್ಚ ಜಡಭೇದೋ ಯಃ ಪ್ರಪಂಚೋ ಭೇದಪಂಚಕಃ ।
> ಸೋಽಯಂ ಸತ್ಯೋ ಹ್ಯನಾದಿಶ್ಚ ॥

'ಜೀವ-ಪರಮಾತ್ಮರೊಳಗಿನ ಭೇದ, ಜಡ-ಪರಮಾತ್ಮರೊಳಗಿನ ಭೇದ, ಜೀವರೊಳಗ ಪರಸ್ಪರ ಇರುವ ಭೇದ, ಜಡ-ಜೀವರೊಳಗಿನ ಭೇದ, ಜಡಗಳೊಳಗೆ ಪರಸ್ಪರ ಇರುವ ಭೇದ ಈ ಐದು ಭೇದಗಳು ಸತ್ಯ ಮತ್ತು ಅನಾದಿ' ಹೀಗೆ ಹೇಳುತ್ತಿದ ಪರಮಶ್ರುತಿ

ಪಂಚಭೇದ ಸತ್ಯ, ಅನಾದಿ, ಏಕೆ? ಪಂಚರೂಪಾತ್ಮಕನಾದ ಹರಿ ಇದಕ್ಕೆ ದೈವಕ, ಅಂದರೆ ಅಧಿದೇವತೆ ಅವನು ಕಾಪಾಡುತ್ತಿರುವುದರಿಂದ ಅದು ಸತ್ಯವಾಗಿ ಅನಾದಿಕಾಲದಿಂದ ಇದೆ

ಪಂಚಭೇದ ಸತ್ಯವೆನ್ನುವುದು ಭಾರತೀಯ ತತ್ವಶಾಸ್ತ್ರ ಪ್ರಪಂಚಕ್ಕ ಶ್ರೀಮಧ್ವಾಚಾರ್ಯರು ನೀಡಿದ ಅಸಾಧಾರಣ ಕೊಡುಗೆ ಅದರಿಂದಲೇ ಅವರ ಸಿದ್ಧಾಂತ ದ್ವೈತಸಿದ್ಧಾಂತವೆನಿಸಿದೆ

ಪಂಚಭೇದವನ್ನು ಶಂಕರರು ಮಿಥ್ಯೆ ಎಂದಿದ್ದರೂ ರಾಮಾನುಜರು ಸತ್ಯವೆಂದೆ ಒಪ್ಪಿದ್ದಾರೆ ತಾರ್ಕಿಕರೂ ಭೇದವಾದಿಗಳು ಶ್ರೀಮದಾಚಾರ್ಯರೂ ಅದನ್ನೇ ಹೇಳಿದ್ದಾರ ತಾರತಮ್ಯವನ್ನು ಮಾತ್ರ ಬೇರೆ ಯಾರೂ ಹೇಳಿಲ್ಲ ಅದನ್ನೇ ಅಸಾಧಾರಣವಾದ ಕೊಡುಗೆ ಎಂದು ಮೊದಲಿಗೆ ಅದನ್ನು ನಿರ್ದೇಶಿಸಬೇಕಾಗಿತ್ತು ದಾಸರು ಅದನ್ನು ತರತಮಪಂಚಿಕಗಳೆಂದು ಕೊನೆಯಲ್ಲಿ ಹೇಳಿದ್ದಾರೆ ಏಕೆ?

ಹರಿಸರ್ವೋತ್ತಮತ್ವ, ಜೀವತ್ರೈವಿಧ್ಯ, ತಾರತಮ್ಯ ಮುಂತಾದ ಎಲ್ಲಮುಖ್ಯ ಸಿದ್ಧಾಂತಗಳಿಗೂ ಮೂಲಭೂತವಾದುದು ಪಂಚಭೇದ ಅದರಿಂದ ಮೊದಲಿಗೆ ನಿರ್ದೇಶಿಸಲಾಗಿದೆ

ವಸ್ತುತಃ ರಾಮಾನುಜರು ಮತ್ತು ತಾರ್ಕಿಕರು ಪಂಚಭೇದಗಳನ್ನು ಒಪ್ಪಿದರೂ ಭೇದ-ಗಳು ಪಂಚವಿಧವೆ ಎನ್ನುವ ನಿಯಮವನ್ನು ಒಪ್ಪಿಲ್ಲ ಧರ್ಮಭೂತಜ್ಞಾನವನ್ನು ಒಪ್ಪಿದ್ದರಿಂದ ಆರನೆ ಭೇದವೂ ಅವರಲ್ಲಿ ಉಂಟು ಚೇತನರಿಗೆ ಅವರದೆ ಆದ ಜ್ಞಾನ ಆನಂದಾದಿ ಗುಣಗಳಿಂದ ಭೇದ ಪರಮಾತ್ಮನಿಗೂ ಅವನ ಗುಣಗಳಿಗೂ ಭೇದ ಈ ಭೇದ ನಿರಾಧಾರ ಮಾತ್ರವಲ್ಲ ಶ್ರುತಿಸ್ಮೃತಿಗಳಿಗೆ ದೂರ ಪರಮಾತ್ಮನ ನಿರ್ದೋಷಗುಣಪೂರ್ಣತ್ವಗಳಿಗೆ ಬಾಧಕ, ನರಕಾದ್ಯನರ್ಥಕಾರಕ

ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।
ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು ವಿಧಾವತಿ ॥

ಪರ್ವತದ ತುದಿಯಲ್ಲಿ ಬಿದ್ದ ಮಳೆನೀರು ಕೆಳಗೆ ವೇಗವಾಗಿ ಹರಿಯುವಂತೆ ಪರಮಾ-ತ್ಮನಿಂದ ಅವನ ಗುಣಗಳಿಗೆ ಭೇದವನ್ನು ತಿಳಿಯುವವನು ವೇಗದಿಂದ ನರಕಕ್ಕೆ ಬೀಳುತ್ತಾನೆ

ಅದರಿಂದ ಶ್ರುತಿಸಮ್ಮತವಾದ ಶುದ್ಧವಾದ ಪಂಚಭೇದನಿಯಮವನ್ನು ದಾರ್ಶನಿಕ ಪ್ರಪಂಚಕ್ಕೆ ನೀಡಿದವರು ಶ್ರೀಮದಾಚಾರ್ಯರು

ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ತಮ್ಮ ಮೂರು ಅಂಶಗಳ ಸತ್ಸಿದ್ಧಾಂ-ತವನ್ನು ಹೀಗೆ ಹೇಳಿದ್ದಾರೆ

ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ ।
ವಿಷ್ಣೋರನ್ಯಚ್ಚ ತತ್ತಂತ್ರಂ ಇತಿ ಸಮ್ಯಗ್ ವಿನಿರ್ಣಯಃ ॥

'ಶ್ರೀಹರಿ ಸಕಲಗುಣಪರಿಪೂರ್ಣ ಅವನು ಸರ್ವದೋಷದೂರ ಚೇತನಾಚೇತನಾ-ತ್ಮಕವಾದ ಪ್ರಪಂಚವೆಲ್ಲ ಅವನ ಅಧೀನ ಇವೆ ಸತ್ಸಿದ್ಧಾಂತಗಳು' ಪಂಚಭೇದನಿಯಮದ ಭದ್ರವಾದ ತಳಹದಿಯ ಮೇಲೆಯೆ ಈ ಸಿದ್ಧಾಂತಗಳು ನಿಂತಿವೆ

*ಪಂಚಭೇದಾತ್ಮಕ ಪ್ರಪಂಚ*

'ಪಂಚಬೇದಯುಕ್ತವಾದ ಪ್ರಪಂಚಕ್ಕೆ' ಎಂದು ಹೇಳದೆ 'ಪಂಚಭೇದಾತ್ಮಕವಾದ ಪ್ರಪಂಚಕ್ಕೆ' ಎಂದಿರುವುದು ಅರ್ಥಪೂರ್ಣವಾಗಿದೆ ಪಂಚಭೇದ ಮಿಥ್ಯೆ ಎನ್ನುವ ವಾದ-ವನ್ನು ಯುಕ್ತಿಯುಕ್ತವಾಗಿ ತಳ್ಳಿಹಾಕಿದೆ ಆ ವಾದದವರು ಮಾಡುವ ಆಕ್ಷೇಪ ಇದು 'ಭೇದ ಸತ್ಯವಾಗಿಯೇ ಇರುವುದಾದರೆ ಅದು ಅನುಭವಗೋಚರವಾಗಬೇಕು ಅನುಭವ ಹೇಗೆ ಸಾಧ್ಯ? ಎರಡು ವಸ್ತುಗಳನ್ನು ಮೊದಲಿಗೆ ಬೇರೆಬೇರೆಯಾಗಿ ತಿಳಿದಾಗಲೇ ಒಂದರ ಭೇದ ಇನ್ನೊಂದರಲ್ಲಿ ಇದೆ ಎಂದು ತಿಳಿಯಲು ಸಾಧ್ಯ ಭೇದವನ್ನು ತಿಳಿದರೆ ಮಾತ್ರ ಅವುಗಳನ್ನು ಬೇರೆಬೇರೆಯಾಗಿ ತಿಳಿಯಬಲ್ಲೆವು ಇದು 'ಮದುವೆಯಾಗದೆ ಹುಚ್ಚು ಬಿಡದು, ಹುಚ್ಚು

ಬಿಡದೆ ಮದುವೆಯಾಗದು' ಎನ್ನುವಂತೆ ಅನ್ಯೋನ್ಯಾಶ್ರಯ ಎಂಬ ದೋಷ ಆದರಿಂದ ಅನುಭವಕ್ಕೆ ನಿಲುಕದ ಈ ಭೇದ ವಾಸ್ತವವಲ್ಲ ಬರಿಯ ಕಲ್ಪನ, ಮಿಥ್ಯ' ಈ ಆಕ್ಷೇಪಕ್ಕೆ ಶ್ರೀಮದಾಚಾರ್ಯರು ನೀಡುವ ಪರಿಹಾರ 'ವಸ್ತುಗಳು ಬೇರೆಯಲ್ಲ, ಅವುಗಳಲ್ಲಿರುವ ಭೇದ ಬೇರೆಯಲ್ಲ ವಸ್ತುಗಳನ್ನು ತಿಳಿವಾಗಲೆ ಅವುಗಳನ್ನು ಬೇರೆಬೇರೆಯಾಗಿಯೇ ತಿಳಿದಿರುತ್ತೇವೆ ಭೇದವಿದೆ ಎಂದೇ ತಿಳಿದಿರುತ್ತೇವೆ ಆದರಿಂದ ಭೇದಪ್ರಪಂಚ ಎಲ್ಲರಿಗೂ ಅನುಭವಸಿದ್ಧ'

ರಾಮಾನುಜರು ಭೇದಸತ್ಯತೆಯನ್ನು ಒಪ್ಪಿದ್ದರೂ ಅದನ್ನು ಸಮರ್ಥಿಸುವಲ್ಲಿ ವಿಫಲರಾಗಿದ್ದಾರೆ ಸಮರ್ಥನೆಗೆ ಅತ್ಯಾವಶ್ಯಕವಾದ ಭೇದದ ವಸ್ತುಸ್ವರೂಪತ್ವವನ್ನೆ ಅವರು ಗಮನಿಸಿಲ್ಲ ತಾರ್ಕಿಕರಿಗೂ ಈ ದೋಷವಿದ್ದೇ ಇದೆ ಆದರಿಂದ ಬೇರೆ ದಾರ್ಶನಿಕರು ಭೇದ ಒಪ್ಪಿದ್ದರೂ ಒಪ್ಪದಿದ್ದಂತೆಯೇ ಶ್ರೀಮದಾಚಾರ್ಯರದೆ ಅಸಾಧಾರಣವಾದ ಕೊಡುಗೆ ಈ ಭೇದಸಿದ್ಧಾಂತ

***ಪಂಚರೂಪಾತ್ಮಕ***

ಇಲ್ಲಿಯೂ 'ಪಂಚರೂಪಯುಕ್ತ'ನೆನ್ನದೆ 'ಪಂಚರೂಪಾತ್ಮಕ' ಎಂಬರುವುದು ಪರಮಾತ್ಮನಿಗೂ ಅವನ ರೂಪಗಳಿಗೂ ಭೇದವಿಲ್ಲವೆನ್ನುವ ಅಭಿಪ್ರಾಯದಿಂದ ಮೂಲರೂಪಿ ನಾರಾಯಣನಿಂದ ಸೃಷ್ಟಿಯ ಆದಿಯಲ್ಲಿ ಮೋಕ್ಷದಾಯಕವಾದ ವಾಸುದೇವರೂಪ ಆವಿರ್ಭವಿಸಿತು ಅದರಿಂದ ಲಯಕಾರಕ ಸಂಕರ್ಷಣರೂಪ ಆದರಿಂದ ಸೃಷ್ಟಿಕಾರಕ ಪ್ರದ್ಯುಮ್ನರೂಪ ಅದರಿಂದ ಸ್ಥಿತಿಕಾರಕ ಅನಿರುದ್ಧರೂಪ ಈ ಐದು ರೂಪಗಳಲ್ಲಿ ಭೇದವಿಲ್ಲ, ವ್ಯತ್ಯಾಸವಿಲ್ಲ ಒಂದು ದೀಪದಿಂದ ಹಲವಾರು ದೀಪ ಹೊರಟುಬರುವಂತೆ ಈ ಸಿದ್ಧಾಂತವನ್ನು ಬೇರೆ ಯಾರೂ ಹೇಳಿಲ್ಲ

***ಪಂಚರೂಪಾತ್ಮಕನೆ ದೈವಕ***

'ಮಾಯಾಮಾತ್ರಮಿದಂ ದ್ವೈತಂ' ವಿಷ್ಣುವಿನ ಮಾಯೆಯಿಂದ, ಅಂದರ ಇಚ್ಛೆಯಿಂದ, ಈ ದ್ವೈತ, ಅಂದರೆ ಭೇದಪ್ರಪಂಚ, 'ಮಾ' ನಿರ್ಮಿತವಾಗಿದ 'ತ್ರ' ರಕ್ಷಿತವಾಗಿದೆ ಆದರಿಂದ 'ಮಾಯಾಮಾತ್ರ'ವೆನಿಸಿದೆ ಈ ಅಭಿಪ್ರಾಯದಿಂದ 'ಪಂಚಭೇದಾತ್ಮಕ ಪ್ರಪಂಚಕೆ ಪಂಚರೂಪಾತ್ಮಕನೆ ದೈವಕ' ಎನ್ನಲಾಗಿದೆ 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಎಂದು ತೈತ್ತಿರೀಯೋಪನಿಷತ್ತು ಹೇಳುವಂತೆ ಹರಿ ಪ್ರಪಂಚದ ಎಲ್ಲ ವಸ್ತುಗಳೊಳಗೂ ಪ್ರವೇಶಿಸಿ ರಕ್ಷಿಸುತ್ತಾನೆ ಅವನೆ ಎಲ್ಲವನ್ನೂ ರಕ್ಷಿಸುವ ದೈವಕ

ಪಂಚಭೇದಗಳಿಗೆ ಕ್ರಮವಾಗಿ ಪಂಚರೂಪಗಳಿಂದಲೇ ಶ್ರೀಹರಿ ನಿಯಾಮಕನೆಂದು ಹೇಳಿದಂತೆ ಕಾಣುತ್ತದೆ ಮೇಲು ನೋಟಕ್ಕೆ ಆದರೆ ಅದು ವಿವಕ್ಷಿತವಲ್ಲ

ಅಥವಾ ಪಂಚಭೇದವೆಂದರೆ ಪಂಚವಿಧ ಐದು ವಿಧದ ಪ್ರಪಂಚಕ್ಕೆ ಕ್ರಮವಾಗಿ ಐದು ರೂಪಗಳಿಂದಲೇ ಹರಿ ನಿಯಾಮಕವಾಗಿರುವನೆಂದು ತೈತ್ತಿರೀಯೋಪನಿಷತ್ತು ಹೇಳಿದೆ

ಪಾಂಕ್ತಂ ವಾ ಇದಂ ಸರ್ವಂ ಪಾಂಕ್ತೇನೈವ ಪಾಂಕ್ತಂ ಸ್ಪೃಣೋತಿ

ಪ್ರಪಂಚವು ಪಂಚವಿಧವಾಗಿದೆ ಪೃಥಿವಿ, ಅಂತರಿಕ್ಷ, ದ್ಯು, ದಿಕ್, ಅವಾಂತರ ದಿಕ್–ಎಂಬ ಪಂಚಕ ಅಗ್ನಿ, ವಾಯು, ಆದಿತ್ಯ, ಚಂದ್ರ, ನಕ್ಷತ್ರ ಎಂಬ ಪಂಚಕ ಅಪ್, ಓಷಧಿ, ವನಸ್ಪತಿ, ಆಕಾಶ, ಅಹಂಕಾರತತ್ವ ಎಂಬ ಪಂಚಕ ಈ ಮೂರು ಪಂಚಕಗಳಿಂದಾದುದು ಅಧಿಭೂತ ಪ್ರಪಂಚ ಪ್ರಾಣ, ವ್ಯಾನ, ಅಪಾನ, ಉದಾನ ಸಮಾನ ಎಂಬ ಪಂಚಕ ಚಕ್ಷು, ಶ್ರೋತ್ರಂ, ಮನ, ವಾಕ್, ತ್ವಕ್ ಎಂಬ ಪಂಚಕ ಚರ್ಮ, ಮಾಂಸ, ಸ್ನಾವ, ಅಸ್ಥಿ ಮಜ್ಜಾ ಎಂಬ ಪಂಚಕ ಈ ಮೂರು ಪಂಚಕಗಳಿಂದಾದುದು ಅಧ್ಯಾತ್ಮಪ್ರಪಂಚ ಎಲ್ಲ ಪಂಚಕಗಳಲ್ಲಿಯೂ ಐದು ವಸ್ತುಗಳಲ್ಲಿ ಕ್ರಮವಾಗಿ ನಾರಾಯಣಾದಿ ಪಂಚರೂಪಗಳಿಂದ ನಿಯಾಮಕನಾಗಿ ನೆಲೆಸಿದವ ಶ್ರೀಹರಿ ಅವನೇ ದೈವಕ

ದೈವಕವೇ? ದೈವವೇ?

'ದೈವ' ಎಂದಿದ್ದರೆ ಸಾಕಾಗಿತ್ತು 'ದೈವಕ' ಎಂದೇಕೆ ಹೇಳಬೇಕು? ಮಾಣವ ಎಂದರೆ ಮಾನವ ಕಕಾರ ಸೇರಿಸಿ 'ಮಾಣವಕ' ಎಂದರೆ ಸಣ್ಣ ಮಾನವ, ಅಂದರೆ ಹುಡುಗ ಎಂದಾಗುತ್ತದೆ ಹಾಗೇ ಇಲ್ಲಿ ದೈವಕ ಎಂದರೆ ಸಣ್ಣದೈವ ಎಂದಾದರೆ ಅಸಂಗತ ದೈವಗಳಿಗೆ ದೈವ, ಹೆದ್ದೈವ, ಶ್ರೀಹರಿ ಸಣ್ಣ ದೈವವಲ್ಲ ಮಾಲೆ-ಮಾಲಿಕೆ, ಬಾಲೆ-ಬಾಲಿಕೆ ಎಂಬಂತೆ ಏನೂ ಅರ್ಥವಿಶೇಷವಿಟ್ಟುಕೊಳ್ಳದೆ, ಕಕಾರ ಸೇರಿಸಿ ಹೇಳಿದರೆ ವ್ಯರ್ಥ 'ಪಂಚ ಭೇದಾತ್ಮಕ' 'ಪಂಚರೂಪಾತ್ಮಕ' ಎಂಬಲ್ಲಿ ಕಕಾರಗಳು ಸಮಾಸದ ಕೊನೆಯಲ್ಲಿ ಬರುವ ಪ್ರತ್ಯಯಗಳು ದೈವಕ ಎಂಬಲ್ಲಿ ಹಾಗೆ ಹೇಳಲು ಬರುವುದಿಲ್ಲ ಇನ್ನು ಮುಂದೆ 'ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ' ಎಂದಿದೆ ಪಂಚಮುಖನೆಂದರೆ ರುದ್ರ ರುದ್ರ ಇಂದ್ರಾ- ದಿಗಳು ಕಿಂಕರರು ಬ್ರಹ್ಮವಾಯುಗಳು ಕಿಂಕರರಲ್ಲವೇನು? ಅವರನ್ನು ಹೇಳದಿರುವುದ- ರಿಂದ ನ್ಯೂನತೆಯೂ ಬರುತ್ತದೆ

ಇದಕ್ಕೆ ತಟ್ಟನೆ ಹೊಳೆಯುವ ಸಮಾಧಾನ ಹೀಗೆ—'ದೈವ' ಎಂದು ಕಕಾರವಿಲ್ಲದೆ ಹೇಳಿ ಬಳಿಕ 'ಕಪಂಚಮುಖ ಶಕ್ರಾದಿಗಳು' ಎಂದು ಓದಿಕೊಳ್ಳಬೇಕು ಕ ಎಂದರೆ ಬ್ರಹ್ಮ ವಾಯುವೂ ಕ ಎನಿಸುತ್ತಾನೆ ಬ್ರಹ್ಮವಾಯುರುದ್ರಇಂದ್ರ ಮುಂತಾದವರು ಶ್ರೀಹರಿಗೆ ಕಿಂಕರರು ಎಂದಾಗುತ್ತದೆ ಈಗ ವ್ಯರ್ಥತೆಯಾಗಲಿ ನ್ಯೂನತೆಯಾಗಲಿ ಇಲ್ಲ

ಆದರೆ 'ಕಿಂಕರ' ಶಬ್ದದ ಒಳಗೆ ಹೊಕ್ಕು ನೋಡಿದರೆ 'ಕಿಂಚಿತ್ ಕರೋತಿ' ಒಡೆಯನು ಹೇಳುವ ಸ್ವಲ್ಪ ಕಾರ್ಯವನ್ನು ಮಾಡುವವನು ಕಿಂಕರ ಹರಿಯ ಆಜ್ಞೆಯಂತೆ ಏನೋ ಸ್ವಲ್ಪ ಕಾರ್ಯಗಳನ್ನು ಮಾಡುವವರು ರುದ್ರಾದಿಗಳು 'ಕಿಂ' ಎಂದರೆ ಕೆಟ್ಟದು ಕೆಲವೊಮ್ಮೆ

ಅಸುರಾವೇಶದಿಂದ ಹರಿಗೆ ವಿರೋಧವಾಗಿ ಕೆಲವು ಕೆಟ್ಟ ಕಾರ್ಯಗಳನ್ನೂ ಅವರು ಮಾಡುತ್ತಾರೆ ಉದಾ–ಅಶ್ವತ್ಥಾಮ ಉತ್ತರೆಯ ಗರ್ಭಕ್ಕೆ ಬ್ರಹ್ಮಾಸ್ತ್ರ ಪ್ರಯೋಗ ಮಾಡುತ್ತಾನೆ ಬ್ರಹ್ಮವಾಯುಗಳು ಹಾಗಲ್ಲ ಹರಿಯ ಮತವೇ ಹನುಮನ ಮತ ಅವರಲ್ಲಿ ಮತಭೇದ-ವಿಲ್ಲ ಹರಿಪ್ರೀತಿಯಾಗುವಂತೆ ಎಲ್ಲ ಉತ್ತಮ ಕಾರ್ಯಗಳನ್ನೂ ಮಾಡುತ್ತಾರೆ ಜೀವರಿಗೆ ಮೋಕ್ಷವನ್ನು ನೀಡುತ್ತಾರೆ ಅವರನ್ನು ಕಿಂಕರರೆನ್ನುವುದು ಆ ಶಬ್ದದ ಮುಖ್ಯ ಅರ್ಥದಲ್ಲಿ ಅನುಚಿತವಾಗುವುದು ಆದರಿಂದ ಕಿಂಕರರೆನ್ನದೆ ಹರಿಗೆ ಪ್ರತೀಕರನ್ನುವ ಅಭಿಪ್ರಾಯ ದಾಸರಿಗಿದೆ

ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ

ಎಂಬ ಶಾಂತಿಮಂತ್ರದಂತೆ ಪ್ರಾಣಾಪಾನಾದಿ ಪಂಚರೂಪಾತ್ಮಕನಾದ, 'ಕ' ಎಂದರೆ ವಾಯು-ವೇ ದೈವಕ ಹೆದ್ದೈವನಾದ ಹರಿಗೆ ಹೋಲಿಸಿದಾಗ ಸಣ್ಣ ದೈವ ಎಂಬ ಅಭಿಪ್ರಾಯ-ದಿಂದಲೂ ಕಕಾರವಿಟ್ಟುಕೊಳ್ಳಬಹುದು

ಹರಿಯನ್ನು ಹೇಳುವಾಗ 'ದೈವಕ' ಎಂಬಲ್ಲಿ 'ಕ' ಎಂದರ ಆನಂದ ಆನಂದ- ಸ್ವರೂ-ಪನಾದ ದೈವವೇ ಹರಿ ದ್ವಾದಶಸ್ತೋತ್ರದಲ್ಲಿ—

ಮತ್ಸ್ಯಕರೂಪ ಲಯೋದವಿಹಾರಿನ್

ಎಂಬಲ್ಲಿ 'ಮತ್ಸ್ಯಕ' ಎಂದರೆ ಆನಂದರೂಪನಾದ ಮತ್ಸ್ಯ ಬೇರೆ ಮತ್ಸ್ಯಗಳಂತ ಪ್ರಾಕೃತ ದುರ್ಗಂಧಮಯ ಮತ್ಸ್ಯನಲ್ಲ ಹಾಗೇ ಪ್ರಕೃತನಲ್ಲ

'ಹರಿ ಪಂಚಭೇದಾತ್ಮಕ ಪ್ರಪಂಚವನ್ನು ಏಕ ನಿರ್ಮಿಸುತ್ತಾನೆ? ಅವನಿಗ ಏನೋ ಪ್ರಯೋಜನವಿರಲೇಬೇಕು ಆದರಿಂದ ಆತ ಅಪೂರ್ಣ' ಎಂಬ ಶಂಕೆಗ ಈಗ ಪರಿಹಾರ ಸಿಗುತ್ತದೆ ಆನಂದಮಯನಾದ್ದರಿಂದ ಹರಿ ಪ್ರಪಂಚಸೃಷ್ಟಿ ಮಾಡುತ್ತಾನ ಪ್ರಯೋಜನದ ಇಚ್ಛೆಯಿಂದಲ್ಲ ಆನಂದೋದ್ರೇಕದಿಂದ

ತೈತ್ತಿರೀಯೋಪನಿಷತ್ತು ಹಾಗೇ ಹೇಳಿದ—

ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್

ಆನಂದೋದ್ರೇಕದಿಂದ ನಗುವಾಗ, ಕುಣಿವಾಗ ಪ್ರಯೋಜನದ ಪ್ರಶ್ನೆ ಬರುವುದಿಲ್ಲ

*ಪಂಚಮುಖಶಕ್ರಾದಿಗಳು ಕಿಂಕರರು*

'ಕಿಂಕರ' ಎಂದರೆ 'ಕಿಂ' ಅನಿರ್ವಚನೀಯ ಸುಂದರವಾದ ಮಹಾಸೇವಾಕಾರ್ಯ ಮಾಡುವವರೆಂದು ಅರ್ಥವಿಟ್ಟುಕೊಂಡರೆ 'ಕ ಪಂಚಮುಖಶಕ್ರಾದಿಗಳು' ಎಂದು ಓದಿ-ದರೂ ಸರಿಯೇ ಬ್ರಹ್ಮ, ರುದ್ರ, ಇಂದ್ರ, ಮೊದಲಾದ ದೇವತೆಗಳೆಲ್ಲರೂ ಹರಿಗ ಮಹಾ-ಸೇವಾಕಾರ್ಯ ಮಾಡುವ ವೈಷ್ಣವಾಗ್ರಣಿಗಳು

'ಕ' ಶಬ್ದವನ್ನು ಹಿಂದಕ್ಕೆ ತೆಗೆದುಕೊಳ್ಳುವ ಪಕ್ಷದಲ್ಲಿ 'ಪಂಚಮುಖಿ' ಶಬ್ದದಿಂದಲೇ ಬ್ರಹ್ಮವಾಯುಗಳನ್ನು ಇಟ್ಟುಕೊಳ್ಳಲು ಶಕ್ಯವಿದೆ ಬ್ರಹ್ಮನಿಗೆ ಮೊದಲಿಗೆ ಹುಟ್ಟುವಾಗ ಐದು ಮುಖಗಳಿದ್ದವು ವಾಯುವೂ ಹನುಮಂತನಾದಾಗ ಪಂಚಮುಖಿ ಪ್ರಾಣನೆನಿಸಿದವನೆ ಆ ವಾಯುವೇ ಬ್ರಹ್ಮನಾಗುವುದರಿಂದಲೂ ಬ್ರಹ್ಮ ಪಂಚಮುಖಿ ಅಥವಾ ಪ್ರಾಣಾಪಾನಾದಿ ಪಂಚರೂಪಿಯಾದ್ದರಿಂದ ವಾಯು ಪಂಚಮುಖಿ ಏಕಂದರೆ ಪಂಚ ರೂಪಗಳೇ ಪಂಚ-ಮುಖಗಳಾಗಬಹುದು ಶಿವನಿಗೆ ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಎಂಬ ಐದು ಮುಖಗಳೇ ಐದು ರೂಪಗಳು ಆಗಿವೆ ಎಂದು ಪಂಡಿತಾ-ಚಾರ್ಯರು ಶಿವಸ್ತುತಿಯಲ್ಲಿ ಹೇಳಿದ್ದಾರೆ

ಪಂಚರೂಪೋಽಂಚಿತಃ
ಪ್ರಪಂಚಯ ಚ ಪಂಚವೃನ್ಮಮ ಮನಸ್ತಮಸ್ತಾಡಯ ॥

ಒಂದು 'ಪಂಚಮುಖಿ' ಶಬ್ದದಿಂದಲೇ ವಾಯುರುದ್ರರನ್ನು ಜೊತೆಯಾಗಿ ಹೇಳುವು-ದರಲ್ಲಿ ಔಚಿತ್ಯವಿದೆ ರುದ್ರನ ಉಪಾಸನೆ ಮಾಡುವಾಗ ಅವನ ಅಂತರ್ಗತನಾದ ವಾಯು-ವಿನ ವಿವಕ್ಷೆಯಿಂದಲೆ ಉಪಾಸನೆ ಮಾಡಬೇಕು ಎಂದು

ಗುಹಾಶಯಾಯೈವ ನ ದೇಹಮಾನಿನೇ

ಎಂದು ಭಾಗವತದಲ್ಲಿ ರುದ್ರನೆ ಹಾಗೆ ಹೇಳಿದ್ದಾನೆ

ಪಂಚಮುಖನ ಅನಂತರ ಶಕ್ರಾದಿಗಳನ್ನು ನಿರ್ದೇಶಿಸಿದ್ದರಿಂದ ತಾರತಮ್ಯವೂ ಸೂಚಿ-ತವಾಗಿದೆ ತಾರತಮ್ಯಜ್ಞಾನಪೂರ್ವಕ ರುದ್ರಾದಿಗಳ ಉಪಾಸನೆಯೇ ಫಲಪ್ರದ ಮೋಕ್ಷ-ದಲ್ಲಿಯೂ ರುದ್ರಾದಿಗಳು ತಾರತಮ್ಯದಿಂದಲೇ ಹರಿಸೇವೆ ಮಾಡುತ್ತಾರೆ ಎಂದು ತಿಳಿಯ-ಬೇಕು ಇದರಿಂದ, 'ರಾಮಾನುಜಮತದಲ್ಲಿಯೂ ರುದ್ರಾದಿಗಳು ಹರಿಯ ಕಿಂಕರರು, ಶ್ರೀಮದಾಚಾರ್ಯರು ಹೊಸತೇನು ಹೇಳುತ್ತಿದ್ದಾರೆ?' ಎನ್ನುವ ಶಂಕೆಗೆ ಅವಕಾಶವಿಲ್ಲ ಮೋಕ್ಷದಲ್ಲಿ ರುದ್ರಾದಿಗಳು ಮಾಡುವ ಕೈಂಕರ್ಯದಲ್ಲಿ ತಾರತಮ್ಯ ರಾಮಾನುಜಮತದಲ್ಲಿ ಶಕ್ಯವಿಲ್ಲ ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ವಾಯುವೆ ಆ ಕೈಂಕರ್ಯ ಮಾಡಿಸುತ್ತಾನೆ ಎನ್ನುವುದೂ ಮಧ್ವಮತದ ಒಂದು ವಿಶಿಷ್ಟ ಪ್ರಮೇಯ 'ಪಂಚಮುಖಿ' ಶಬ್ದದಿಂದಲೇ ಇದೂ ಸೂಚಿತವಾಗಿದೆ

'ಹರಿ' ಶಬ್ದಕ್ಕೆ ವಾಯು ಎಂದೂ ಅರ್ಥವಿದೆ 'ಶ್ರೀ' ಶಬ್ದಕ್ಕೆ ಭಾರತಿ ಎಂದೂ ಅರ್ಥ-ವಿದೆ ಆದರಿಂದ 'ಶ್ರೀಹರಿಗೆ' ಎಂದರೆ ಭಾರತೀರಮಣನಾದ ವಾಯುವಿಗೆ ಪಂಚಮುಖಿ-ನಾದ ರುದ್ರ ಮತ್ತು ಇಂದ್ರ ಮುಂತಾದವರು ಕಿಂಕರರು ಎಂದೂ ಅರ್ಥ ಗ್ರಹಿಸಬಹುದು ಈ ಅಬಿಪ್ರಾಯದಿಂದಲೆ ಬ್ರಹ್ಮವಾಯುಗಳನ್ನು ಸ್ಪಷ್ಟವಾಗಿ ಬೇರೆ ಶಬ್ದದಿಂದ ಹೇಳಿಲ್ಲ ಹಿಂದೆ ಹೇಳಿದಂತೆ ಪಂಚರೂಪಾತ್ಮಕನೂ ವಾಯುವೇ ಹೀಗೆ ಈ ಪದ್ಯದ ಪೂರ್ವಾರ್ಧವು ಹರಿವಾಯು ಉಭಯಪರವಾಗಿದ್ದು ಹರಿವಾಯುಸ್ತುತಿಯಾಗಬಹುದು

**ಪಂಚವಿಂಶತಿ ತತ್ವ**

ಪುರುಷೋಽವ್ಯಕ್ತಂ ಚ ಮಹಾನ್ ಅಹಂಕಾರೋ ಮನಸ್ತಥಾ ।
ದಶೇಂದ್ರಿಯಾಣಿ ಶಬ್ದಾದ್ಯಾ ಭೂತೇತಾಃ ಪಂಚವಿಂಶತಿಃ ॥

ಪುರುಷ, ಅವ್ಯಕ್ತ ಮಹತತ್ತ್ವ, ಅಹಂಕಾರ, ಮನಸ್, ದಶೇಂದ್ರಿಯಗಳು, ಪಂಚ ತನ್ಮಾತ್ರೆಗಳು, ಪಂಚಭೂತಗಳು ಇವು ಇಪ್ಪತ್ತೈದು ತತ್ವಗಳು ಪುರುಷನೆಂದರ ಜೀವತತ್ವ ಅವ್ಯಕ್ತ ಮುಂತಾದ ಉಳಿದ ಇಪ್ಪತ್ತನಾಲ್ಕು ತತ್ವಗಳನ್ನು ಹಿಂದೆಯೇ ೬ನೇ ಪದ್ಯದಲ್ಲಿ ಹೇಳಿವೆ ಪೃಥ್ವೀತತ್ವದಿಂದಾರಂಭಿಸಿ ಗಣನೆ ಮಾಡಿದಾಗ ಇಪ್ಪತ್ತನಾಲ್ಕನೆಯ ತತ್ವ ಪ್ರಕೃತಿ ಇಪ್ಪತ್ತೈದನೆಯದು ಜೀವ ರಮಾನಾರಾಯಣರನ್ನು ಇಪ್ಪತ್ತಾರನೇ ತತ್ವವೆಂದು ಪರಿಗಣಿಸಬೇಕು ಮಹಾಭಾರತ ಮೋಕ್ಷಧರ್ಮಪರ್ವದಲ್ಲಿ ಹೇಳಿದೆ

ನಚಾಸಾವಪಿ ಬುಧ್ಯತೇ ।
ಷಡ್ವಿಂಶಂ ವಿಮಲಂ ಬುದ್ಧಂ ಅಪ್ರಮೇಯಂ ಸನಾತನಮ್ ॥
ಸ ತು ತಂ ಪಂಚವಿಂಶಂ ಚ ಚತುರ್ವಿಂಶಂ ಚ ಬುಧ್ಯತೇ ॥

'ಸರ್ವಜ್ಞ', ಅಪ್ರಮೇಯ, ಸನಾತನ, ನಿರ್ಮಲವಾದ ಇಪ್ಪತ್ತಾರನೆಯ ತತ್ವ ಇಪ್ಪತ್ತೈದನ್ನೂ ಇಪ್ಪತ್ತನಾಲ್ಕನ್ನೂ ತಿಳಿದಿದೆ ಇಪ್ಪತ್ತೈದು ಆ ಇಪ್ಪತ್ತಾರನ್ನು ತಿಳಿಯದು

ಈ ಇಪ್ಪತ್ತೈದು ತತ್ವಗಳ ವಿವರವನ್ನು ಶ್ರೀಮದಾಚಾರ್ಯರು ಅವುಗಳ ಅಭಿಮಾನಿ ದೇವತೆಗಳ ಸಹಿತವಾಗಿ ತಂತ್ರಸಾರದಲ್ಲಿ ಉಪದೇಶಿಸಿದ್ದಾರೆ

ಸಾಂಖ್ಯರು ಹಿಂದೆಯೇ ತತ್ವಗಳನ್ನು ಹೇಳಿದ್ದುಂಟು ಆದರೆ ನಿರೀಶ್ವರವಾದಿಗಳಾದ್ದರಿಂದ ಇಪ್ಪತ್ತಾರನೇ ತತ್ವ ಅವರಲ್ಲಿ ಇಲ್ಲ ಇಪ್ಪತ್ತೈದನ್ನು ಅವರು ಸರಿಯಾಗಿ ತಿಳಿದಿಲ್ಲ ಅವರ ಸಿದ್ಧಾಂತದಲ್ಲಿ ಪ್ರಕೃತಿ-ಪುರುಷ ಈ ಎರಡು ತತ್ವಗಳು ಮಾತ್ರ ಅನಾದಿಸಿದ್ಧ ಮಹದಾದಿ ತತ್ವಗಳು ಪ್ರಕೃತಿಯ ವಿಕಾರಗಳು ಸೃಷ್ಟಿಕಾಲದಲ್ಲಿ ಇವರಿಗೆ ಪ್ರಾದುರ್ಭಾವ ಲಯಕಾಲದಲ್ಲಿ ಲಯ ಶ್ರೀಮದಾಚಾರ್ಯರ ಸಿದ್ಧಾಂತದಲ್ಲಿ ಮಹದಾದಿಗಳೂ ಸೂಕ್ಷ್ಮರೂಪದಲ್ಲಿ ಅನಾದಿನಿತ್ಯಗಳೇ ಅವುಗಳಿಗೆ ಪ್ರಕೃತಿಯ ಅಂಶಗಳಿಂದ ವೃದ್ಧಿಯೇ ಉತ್ಪತ್ತಿ ಸೂಕ್ಷ್ಮರೂಪಕ್ಕೆ ಹಿಂದಿರುಗುವುದೇ ಲಯ

ಸಾಂಖ್ಯಮತದಲ್ಲಿ ಪ್ರಕೃತಿ ತಾನೆ ಮಹದಾದಿರೂಪದಿಂದ ಪರಿಣಮಿಸುತ್ತದೆ ಹಾಲು ಮೊಸರಾಗುವಂತೆ ಅದಕ್ಕೆ ಸೃಷ್ಟಿಕರ್ತನೊಬ್ಬ ಬೇಡ ಅಭಿಮಾನಿ ದೇವತೆಗಳೂ ಬೇಡ ಶ್ರೀಮದಾಚಾರ್ಯರ ಸಿದ್ಧಾಂತದಲ್ಲಿ ಹರಿಯೇ ಸೃಷ್ಟಿಕರ್ತ ಅವನು ತತ್ವಗಳನ್ನೂ, ಅವುಗಳ ಅಭಿಮಾನಿಗಳನ್ನೂ, ಅವರ ಶರೀರಗಳ ಸಹಿತವಾಗಿ ಸೃಜಿಸುತ್ತಾನೆ ಅಂತರ್ನಿಯಾಮಕವಾದ ತನ್ನ ರೂಪಗಳನ್ನು ಸೃಜಿಸಿಕೊಳ್ಳುತ್ತಾನೆ ಜಡವಾದ ಪ್ರಕೃತಿ ತಾನೆ ಏನೂ ಮಾಡಲಾರದು

ಸಾಂಖ್ಯರಲ್ಲಿ ಪ್ರಕೃತಿ ಎಂಬುದು ಸರ್ವವ್ಯಾಪ್ತವಾದ ಒಂದೇ ವಸ್ತು ಶ್ರೀಮದಾಚಾರ್ಯರ ಪ್ರಕಾರ ಅದು ಒಂದಲ್ಲ, ಅನೇಕ, ಅನಂತ, ಪರಮಾಣುರೂಪ ಹೀಗೆ ಶ್ರೀಮದಾಚಾರ್ಯರ ತತ್ವನಿರೂಪಣೆ ಹೊಸದು, ವೈಶಿಷ್ಟ್ಯಪೂರ್ಣವಾದುದು

***ತರತಮಪಂಚಿಕೆಗಳು***

ತಾರತಮ್ಯದ ವಿವರ ತತ್ವಶಾಸ್ತ್ರಪ್ರಪಂಚಕ್ಕೆ ಶ್ರೀಮದಾಚಾರ್ಯರ ಅಪೂರ್ವ ಕೊಡುಗೆ ಇಪ್ಪತ್ತೈದನೆಯ ಜೀವತತ್ವದಲ್ಲಿ ಬ್ರಹ್ಮಾದಿ ಸಕಲ ಜೀವರು ಸೇರಿದ್ದಾರೆ ಅವರಲ್ಲಿ ತ್ರೈವಿಧ್ಯ ತಾರತಮ್ಯಗಳಿವೆ ಇಪ್ಪತ್ತಾರನೇ ತತ್ವವಾದ ಈಶಕೋಟಿಯಲ್ಲಿ ರಮಾನಾರಾಯಣರು ನಾರಾಯಣ ಸರ್ವೋತ್ತಮ ವಾಯು ಜೀವೋತ್ತಮ, ಜೀವಾಭಿಮಾನಿ ಎಂದು ಮುಂತಾದ ವಿವರಗಳನ್ನು ಸರ್ವಮೂಲಗ್ರಂಥಗಳಲ್ಲಿ ಶ್ರೀಮದಾಚಾರ್ಯರು ಉಪದೇಶಿಸಿದ್ದಾರೆ

ತಾರತಮ್ಯ ಎಲ್ಲ ದಾರ್ಶನಿಕರಿಗೂ ಸಂಸಾರದಲ್ಲಿ ಸಮ್ಮತವೆ ಮುಕ್ತಿಯಲ್ಲಿ ವಿವಾದ ಶಾಂಕರಮತದಲ್ಲಿ ಮುಕ್ತಿಯಲ್ಲಿ ಜೀವರಿಲ್ಲ ಈಶ್ವರನೂ ಇಲ್ಲ ಭೇದವೇ ಇಲ್ಲದಿರುವುದರಿಂದ ತಾರತಮ್ಯದ ಪ್ರಶ್ನೆಯೇ ಬರುವುದಿಲ್ಲ ಸಾಂಖ್ಯರಲ್ಲಿಯೂ ಈಶ್ವರನಿಲ್ಲ ಜೀವರಿದ್ದಾರೆ, ಭೇದವಿದೆ, ತಾರತಮ್ಯವಿಲ್ಲ ರಾಮಾನುಜರಲ್ಲಿ ಜೀವೇಶ್ವರರಿದ್ದಾರೆ, ಭೇದವಿದೆ, ಆದರೆ ತಾರತಮ್ಯವಿಲ್ಲ ತಾರ್ಕಿಕರಲ್ಲಿ ಜೀವೇಶ್ವರಭೇದವಿದೆ ಜೀವರಿಗೆ ಜ್ಞಾನವಿಲ್ಲದಿರುವುದರಿಂದ ಸರ್ವಜ್ಞನಾದ ಈಶ್ವರ ಸರ್ವೋತ್ತಮನೆ ಆದರೆ ಜೀವರಲ್ಲಿ ತಾರತಮ್ಯವಿಲ್ಲ ಶ್ರೀಮದಾಚಾರ್ಯರ ಸಿದ್ಧಾಂತದಲ್ಲಿ ಜೀವರಲ್ಲಿ ಜ್ಞಾನಾದಿಗುಣಗಳಿವೆ ಆ ಗುಣಗಳಲ್ಲಿ ತಾರತಮ್ಯವಿದೆ

ಹೀಗೆ ಈ ೯ನೇ ಪದ್ಯದಲ್ಲಿ ದಾಸರು—

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂ ಗತಾಃ ।

ಎಂಬ ಐದು ಪ್ರಮೇಯರತ್ನಗಳನ್ನು ಸಂಗ್ರಹವಾಗಿ ಹೇಳಿದ್ದಾರೆ ಹೇಳದ ನಾಲ್ಕನ್ನು ಉಪಲಕ್ಷಣವಾಗಿಟ್ಟುಕೊಳ್ಳಬೇಕು ಇವೆಲ್ಲವು ತತ್ವಜ್ಞಾನಪ್ರಪಂಚಕ್ಕೆ ಶ್ರೀಮದಾಚಾರ್ಯರ ಅಸಾಧಾರಣವಾದ ಕೊಡುಗೆಯೇ ಆಗಿವೆ ಬೇರೆ ದಾರ್ಶನಿಕರು ಹೇಳಿಲ್ಲ ಹೇಳಿದ್ದರೂ ಅದನ್ನು ಸಮರ್ಥಿಸಿಕೊಳ್ಳಲಿಲ್ಲ ಸಮರ್ಥಿಸಿಕೊಳ್ಳುವುದರಲ್ಲಿ ವಿಫಲರಾಗಿದ್ದಾರೆ

***ಭಾವಿವಿರಿಂಚಿಯೆನಿಪಾನಂದತೀರ್ಥರು***

ಒ[illegible]ದಲ್ಲಿ ಮಧ್ವರು ವಾಯುದೇವನ ಅವತಾರವೆಂದು ಉಕ್ತವಾಗಿದೆ ವಾಯುದೇವನೇ ಭಾವಿ ಬ್ರಹ್ಮನೆಂದು ಶ್ರುತಿಸ್ಮೃತಿಗಳು ಸಾರುತ್ತಿವೆ 'ಪವಮಾನಃ ಪ್ರಜಾಪತಿಃ' ಎಂದು ಋಗ್ವೇದವಚನ 'ವಾಯುರೇವ ಯತೋ ಬ್ರಹ್ಮಪದಂ ನಿಯಮತೋ ವ್ರಜೇತ್' ಎಂದು ಬ್ರಹ್ಮತರ್ಕವಚನ ವಾಲ್ಮೀಕಿ ರಾಮಾಯಣ ಉತ್ತರಕಾಂಡದಲ್ಲಿ ಅಗಸ್ತ್ಯರು ಶ್ರೀರಾಮನ ಮುಂದೆ ಹೀಗೆ ಹೇಳುತ್ತಾರೆ—

ಸಸೂತ್ರವೃತ್ತ್ಯರ್ಥಪದಂ ಮಹಾರ್ಥಂ
ಸಸಂಗ್ರಹಂ ಸಿಧ್ಯತಿ ವೈ ಕಪೀಂದ್ರಃ ।
ಸೋಽಯಂ ನವವ್ಯಾಕರಣಾರ್ಥವೇತ್ತಾ
ಬ್ರಹ್ಮಾ ಭವಿಷ್ಯತ್ಯಪಿ ತೇ ಪ್ರಸಾದಾತ್ ॥

'ಶ್ರೀರಾಮ, ಈ ಹನುಮಂತನು ಮುಂದೆ ಮಧ್ವಾವತಾರದಲ್ಲಿ ಬ್ರಹ್ಮಸೂತ್ರಗಳಲ್ಲಿ ಗರ್ಭಿತ-ವಾದ ಅರ್ಥಗಳನ್ನು ತಿಳಿಸುವಂಥ ಬಹ್ವರ್ಥಗರ್ಭಿತವಾದ ಭಾಷ್ಯ ಬರೆಯುತ್ತಾನೆ ನವ ವ್ಯಾಕರಣಪಂಡಿತನಾದ ಈತನೇ ಮುಂದಿನ ಕಲ್ಪದಲ್ಲಿ ನಿನ್ನ ಅನುಗ್ರಹದಿಂದ ಬ್ರಹ್ಮಪದವಿ-ಯನ್ನು ಪಡೆಯುತ್ತಾನೆ'

ಇಲ್ಲಿ ಹನುಮಂತನು ಆನಂದಕರವಾದ ಸೂತ್ರಭಾಷ್ಯಾದಿಗಳನ್ನು ರಚಿಸುತ್ತ ಆನಂದ-ತೀರ್ಥರೆನಿಸಿ ಭಾವಿಬ್ರಹ್ಮನೆನಿಸಿದ ಅಂಶ ಸುಸ್ಪಷ್ಟವಿದೆ ಅದರಿಂದ ದಾಸರು ಭಾವಿಬ್ರಹ್ಮರಾದ ಶ್ರೀಮದಾನಂದತೀರ್ಥರನ್ನು ಅನುದಿನ ನೆನೆಯುತ್ತಾರೆ ಅವರು ಉಪದೇಶಿಸಿದ ಪ್ರಮೇಯರತ್ನಗಳು ತನ್ನ ಗ್ರಂಥದಲ್ಲಿ ತುಂಬಿದ್ದು ಜಿಜ್ಞಾಸುಗಳಿಗೆ ಆನಂದಕರವೆನಿಸಲಿ ಗ್ರಂಥವು ದಾಸಸಾಹಿತ್ಯಕ್ಷೇತ್ರದಲ್ಲಿ ಉತ್ತಮ ಸ್ಥಾನಗಳಿಸಿ ಮೆರೆಯಲಿ ಎಂದು ಪ್ರಾರ್ಥಿಸುತ್ತಾರೆ

ವಾಮದೇವ ವಿರಿಂಚಿತನಯ ಉ-
ಮಾಮನೋಹರ ಉಗ್ರ ಧೂರ್ಜಟಿ
ಸಾಮಜಾಜಿನವಸನಭೂಷಣ ಸುಮನಸೋತ್ತಂಸ ।
ಕಾಮಹರ ಕೈಲಾಸಮಂದಿರ
ಸೋಮಸೂರ್ಯಾನಲವಿಲೋಚನ
ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಲವ ॥ ೧೦ ॥

ಹೇ ವಾಮದೇವ, ವಿರಿಂಚಿತನಯ, ಉಮಾಮನೋಹರ, ಉಗ್ರ, ಧೂರ್ಜಟಿ, ಸಾಮಜಾಜಿನವಸನಭೂಷಣ, ಸುಮನಸೋತ್ತಂಸ, ಕಾಮಹರ, ಕೈಲಾಸಮಂದಿರ, ಸೋಮಸೂರ್ಯಾನಲವಿಲೋಚನ, ಕಾಮಿತಪ್ರದ, ನಮಗೆ ಸದಾ ಸುಮಂಗಲವನ್ನು ಕರುಣಿಸು

ಹಿಂದಿನ ಪದ್ಯದಲ್ಲಿ 'ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ' ಎಂದಿದೆ ಶ್ರೀಹರಿಯ ಕಿಂಕರರಲ್ಲಿ ಮೊದಲಿಗನಾದ ಈ ಪಂಚಮುಖ ಶಿವನನ್ನು ಈಗ ದಾಸರಾಯರು ಸ್ತುತಿಸುತ್ತ ಮಂಗಲಪ್ರಾರ್ಥನೆಯ ಮಂಗಲಾಚರಣೆ ಮಾಡುತ್ತಿದ್ದಾರೆ ಏಕಾದಶರುದ್ರ-ರೂಪನಾದ ಶಿವನನ್ನು ಏಕಾದಶ ವಿಶೇಷಣಗಳಿಂದಲೆ ಸ್ತುತಿಸುತ್ತಿದ್ದಾರೆ ಶ್ರೀನಾರಾಯಣ-ಪಂಡಿತಾಚಾರ್ಯರೂ ಹನ್ನೊಂದು ಪದ್ಯಗಳಿಂದಲೆ ಶಿವಸ್ತುತಿ ಗೈದು ಒಂದು ಪದ್ಯದಿಂದ ನಮನ ಮಾಡಿರುವುದನ್ನು ಇಲ್ಲಿ ಸ್ಮರಿಸಬಹುದು

**ವಾಮದೇವ**

ಇದು ಮೊದಲನೆ ವಿಶೇಷಣ ಹರಿಯ ಕಿಂಕರರಲ್ಲಿ ಮೊದಲಿಗನೆನ್ನಲು ಇದೊಂದು ನಾಕು ವಾಮ ಎಂದರೆ ಸುಂದರ, ವಿಪರೀತವೆಂದು ಎರಡು ಅರ್ಥಗಳಿವೆ ಸ್ವತಃ ಸುಂದರ ಜಗನ್ಮೋಹಕವಾದ ಮಂಗಲಕರಶರೀರ ಉಳ್ಳವ ಆದರೆ ಅದಕ್ಕೆ ವಿಪರೀತವಾದ ಅಮಂಗಲವೇಷ ಧರಿಸುತ್ತಾನೆ, ದೇವನಾಗಿದ್ದಾನೆ ಅದರಿಂದ ವಾಮದೇವ ಅಮಂಗಲವೇಷ ಏಕೆ ಎಂದರೆ ಪರಮವೈರಾಗ್ಯಮೂರ್ತಿ, ವೈರಾಗ್ಯಾಧಿಪತಿ, ಹರಿಯನ್ನಲ್ಲದೆ ಬೇರೇನನ್ನೂ ಆತನೊಲ್ಲ 'ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ' ಎನ್ನುತ್ತಿದೆ ಶ್ರುತಿ

ಶಿವನಿಗೆ ವಾಮದೇವನೆಂಬ ಹೆಸರು ಬರಲು ಇನ್ನೊಂದು ಕಾರಣವೂ ಇದೆ ಎನ್ನುತ್ತದೆ, ಗರುಡಪುರಾಣ ಬ್ರಹ್ಮಕಾಂಡ

ಐಶಾನ್ಯಕೋಣೇ ಸಂಸ್ಥಿತೋ ಯಸ್ತು ರುದ್ರೋ
ಹ್ಯವಾಪ ದೇವೋ ವಾಮದೇವೇತಿ ಸಂಜ್ಞಾಮ್ ।
ಸ್ವವಾಮಭಾಗೇ ಸಂಸ್ಥಿತೋ ವಾಸುದೇವಃ
ಸ್ವಯೋಗ್ಯಭಕ್ತ್ಯಾ ಪೂಜ್ಯತೇ ಸರ್ವದೈವ ॥
ಅತೋ ರುದ್ರೋ ವಾಮದೇವೇತಿ ಸಂಜ್ಞಾಂ
ಅವಾಪೇತ್ಯುದೀರ್ಯಂ ನತು ಸುಂದರತ್ವಾತ್ ।

ಶಿವ ಐಶಾನ್ಯದಿಕ್ಕಿಗೆ ಅಧಿಪತಿ ಈಶಾನನ ದಿಕ್ಕು ಐಶಾನ್ಯ ಅಲ್ಲಿ ಶಿವ ಏಕೆ ನಿಂತಿದ್ದಾನೆ ಎಂದರೆ ಪೂರ್ವದಿಕ್ಕಿನಲ್ಲಿ ಅದರ ಅಧಿಪತಿಯಾದ ಇಂದ್ರನ ಜೊತೆಗೆ ಉಪೇಂದ್ರನೂ ಇದ್ದಾನೆ ಪೂರ್ವದಿಕ್ಕಿನಲ್ಲಿ ಪಶ್ಚಿಮಾಭಿಮುಖನಾಗಿ ಕುಳಿತ ಆ ಉಪೇಂದ್ರನನ್ನು ಐಶಾನ್ಯ ದಿಕ್ಕಿನಲ್ಲಿ ಕುಳಿತ ಶಿವ ಆರಾಧಿಸುತ್ತಾನೆ

ಐಶಾನ್ಯದಲ್ಲಿ ಅಂದರೆ ದೇವರಿಗೆ ಬಲಭಾಗದಲ್ಲಿ ಪೂಜಕನು ಕುಳಿತುಕೊಳ್ಳಬೇಕು

ದೇವಸ್ಯ ದಕ್ಷಿಣೇ ಭಾಗೇ ಪೂಜಕಶ್ಚ ಸ್ಥಿತೋ ಭವೇತ್

ದೇವರಿಗೆ ಅತಿಸಮೀಪದಲ್ಲಿಯಾಗಲಿ, ಗರ್ಭಗೃಹದಲ್ಲಾಗಲಿ, ದೇವರ ಹಿಂದ ಮುಂದೆ ಮತ್ತು ಎಡಭಾಗಗಳಲ್ಲಾಗಲಿ ಜಪ- ಹೋಮ- ನಮಸ್ಕಾರ ಮಾಡುವುದು ನಿಷಿದ್ಧ ಏಕೆಂದರೆ ಹಿಂದೆ ಮಾಡಿದರ ಸ್ಮರಣಶಕ್ತಿಹ್ರಾಸ, ಮುಂದ ಸಂಸಾರದುಃಖ ಅಪರಿಹಾರ ಎಡಭಾಗದಲ್ಲಿ ಅಭೀಷ್ಟನಾಶ, ಬಲಬಾಗದಲ್ಲಿ ಸರ್ವಾಭೀಷ್ಟಸಿದ್ಧಿ ಎಂದು ಸ್ಕಂದಪುರಾಣ ಹೇಳುತ್ತದೆ ಆದ್ದರಿಂದಲ ರಾಮನ ಬಲಬಾಗದಲ್ಲಿ ಹನುಮಂತನನ್ನು ಚಿತ್ರಿಸಲಾಗುತ್ತದೆ ಹೋಮಗಳಲ್ಲಿಯೂ ಅಗ್ನಿ ಉಪಸ್ಥಾನವನ್ನು ಐಶಾನ್ಯದಲ್ಲಿ ನಿಂತು ಮಾಡಬೇಕಂದು ವಿಧಿ ಇದೆ

ಮೇಲಿನ ಗಾರುಡವಚನದಲ್ಲಿ ಹೇಳಿದ ವಾಸುದೇವ ಉಪೇಂದ್ರಮೂರ್ತಿಯೆ ಅವನೆ ವಾಮನ

ವಸು ಸ್ವಾರ್ಹ್ಮಮುತ ಜೇತೋತ ದಾತಾ

'ವಸು'ವನ್ನು ಅಂದರೆ ತ್ರೈಲೋಕ್ಯಸಾಮ್ರಾಜಸಂಪತ್ತನ್ನು ಬಲಿಯಿಂದ ಗೆದ್ದು ಇಂದ್ರನಿಗೆ ಕೊಟ್ಟವನಾದ್ದರಿಂದ ವಾಮನನೆ ವಾಸುದೇವ ಅವನ ಬಲಭಾಗದಲ್ಲಿ ಅಂದರೆ ಐಶಾನ್ಯ ದಿಕ್ಕಿನಲ್ಲಿ ಶಿವನಿದ್ದಾನೆ ಹೀಗೆ ಶಿವನಿಗೆ ವಾಮಭಾಗದಲ್ಲಿ ವಾಮನದೇವನಿರುವುದರಿಂದ ಶಿವ ವಾಮದೇವನೆನಿಸಿದ

ಎಲ್ಲ ಪೂಜಕರೂ ಹೀಗೆ ವಾಮದೇವರೆ ಆಗಿರಬೇಕು ಆದರೂ ಪೂಜಕರಿಗೆಲ್ಲ ಅಗ್ರೇಸರರಸಾದ್ದರಿಂದ ಶಿವನಿಗೇ ಹಾಗೆ ಪ್ರಸಿದ್ಧಿ

*ವಿರಿಂಚಿತನಯ*

'ಬ್ರಹ್ಮವಿಷ್ಣುಮಹೇಶ್ವರರು ತ್ರಿಮೂರ್ತಿಗಳು ಮೂವರೂ ಸಮಾನರು ಹರಿ ಹೆಚ್ಚೋ, ಹರ ಹೆಚ್ಚೋ ಎಂದು ಜಗಳ ಮಾಡುವುದು ಸಲ್ಲದೆ'ಂದು ಕೆಲವರು ಹೇಳುವುದುಂಟು.

ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಮ್

ಎಂಬ ಭಾಗವತವಾಕ್ಯಕ್ಕೆ ಹಾಗೇ ಅರ್ಥ ಗ್ರಹಿಸುವುದುಂಟು ವಸ್ತುಸ್ಥಿತಿ ಹಾಗಲ್ಲ ಮಹೇಶ್ವರ ವಿಷ್ಣುವನ್ನು ಆರಾಧಿಸುವುದರಿಂದಲೆ ವಾಮದೇವನೆನಿಸಿದ್ದಾನೆ ಜೊತೆಗೆ ಬ್ರಹ್ಮನನ್ನೂ ಪಿತ-ನೆಂದು ಗುರುವೆಂದು ಆರಾಧಿಸುತ್ತಾನೆ ಏಕೆಂದರೆ ಆತ ವಿರಿಂಚಿತನಯ ಶಿವಸರ್ವೋ-ತ್ತಮತ್ವವನ್ನು ಹೇಳುವವರೂ ಕೂಡ ತ್ರಿಮೂರ್ತಿಗಳಿಗೆ ಜನಕನಾದ ಪರಶಿವನೊಬ್ಬನನ್ನು ಕಲ್ಪಿಸಿಕೊಂಡು ಅವನನ್ನೇ ಸರ್ವೋತ್ತಮನೆನ್ನುತ್ತಾರೆ ಹೊರತು ಕೈಲಾಸವಾಸಿ ಶಿವನನ್ನಲ್ಲ ಆತ ಬ್ರಹ್ಮಪುತ್ರನೆಂದೆ ಒಪ್ಪುತ್ತಾರೆ

ಶಿವ ಮೊದಲಿಗೆ ಸಾಕ್ಷಾತ್ ಹರಿಯಿಂದಲೆ ಜನಿಸಿದ

ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ

ಬಳಿಕ ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಬಗೆಯ ಅಹಂಕಾರತತ್ವಕ್ಕೆ ಅಭಿ-ಮಾನಿಯಾಗಿ ಬ್ರಹ್ಮವಾಯುಶೇಷರಿಂದ ಮೂರು ಬಾರಿ ಜನಿಸುತ್ತಾನೆ ಇವರೆಲ್ಲರ ಅನು-ಗ್ರಹದಿಂದಲೆ ಶಿವ ತನ್ನ ವಾಮಭಾಗದಲ್ಲಿರುವ ಹರಿಯನ್ನು ಚೆನ್ನಾಗಿ ಭಜಿಸಿ ವಾಮದೇವ-ನೆನಿಸಿದ 'ವಿರಿಂಚಿತನಯ' ಎನ್ನುವುದು ಉಪಲಕ್ಷಣ ವಿಷ್ಣು, ಬ್ರಹ್ಮ, ವಾಯು, ಶೇಷ ಈ ನಾಲ್ವರಿಗೂ ತನಯ ಶಿವ

ಪಂಚಮುಖನಾದ ಶಿವನಿಗೆ ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ, ಈಶಾನ ಎಂದು ಐದು ಮುಖಗಳು ಮಾತ್ರವಲ್ಲದೆ ಅವೇ ಹೆಸರುಗಳ ಐದು ರೂಪಗಳೂ ಇವೆ ವರ್ಣಗಳಲ್ಲಿ ವ್ಯತ್ಯಾಸ ಮತ್ತು ಆಯುಧಗಳಲ್ಲಿ ವ್ಯತ್ಯಾಸ ಮೊದಲಿನ ನಾಲ್ಕು ರೂಪ-ಗಳೂ ಚತುರ್ಮುಖಗಳೆ ಕೊನೆಯದು ಪಂಚಮುಖ ಎಲ್ಲವೂ ತ್ರಿನೇತ್ರಗಳೆ ಆಗಿವೆ ವಾಮದೇವರೂಪವನ್ನು ಸ್ಕಂದಪುರಾಣ ಹೀಗೆ ವರ್ಣಿಸಿದೆ

ವರಾಕ್ಷಮಾಲಾಭಯಟಂಕಹಸ್ತಃ
ಸರೋಜಕಿಂಜಲ್ಕಸಮಾನವರ್ಣಃ ।
ತ್ರಿಲೋಚನಶ್ಚಾರುಚತುರ್ಮುಖೋ ಮಾಂ
ಪಾಯಾದುದೀಚ್ಯಾಂ ದಿಶಿ ವಾಮದೇವಃ ॥

ಪಂಚಮುಖನೆಂದು ಪ್ರಸಿದ್ಧನಾದ ಶಿವ ನಾಲ್ಕು ರೂಪಗಳಲ್ಲಿ ಚತುರ್ಮುಖನೆನಿಸಲು ಆತ ಚತುರ್ಮುಖನ ತನಯನಾಗಿರುವುದೇ ಕಾರಣವಾಗಿರಬಹುದು!

**ಉಮಾಮನೋಹರ**

ಉಮೆಗೆ ಮನೋಹರ ಶಿವ ಏಕೆಂದರೆ ಶಿವನಿಗೆ ಉಮೆ ಮನೋಹರಳಾಗಿ ಕಾಣುತ್ತಾಳೆ 'ಉಮಾ' ಎಂಬ ಶಬ್ದದಲ್ಲಿಯೆ ಇದರ ಸೂಚನೆ 'ಉ' ಎಂದರೆ ಶಿವ 'ಮಾ' ಎಂದರೆ ಲಕ್ಷ್ಮಿ, ಸಂಪತ್ತು ಪಾರ್ವತಿ ಶಿವನಿಗೆ ಪ್ರಣಯದ ಸರ್ವಸ್ವವೆನಿಸಿ ಸಂಪತ್ತೇ ಆಗಿದ್ದಾಳೆ ಅದರಿಂದ ಉಮೆಯೆನಿಸಿದ್ದಾಳೆ ಅವಳಿಗೂ ಶಿವ ಮನೋಹರ ಇದರ ಸೂಚನೆಯೂ ಉಮಾಶಬ್ದದಲ್ಲಿ ಅಡಗಿದೆ 'ಉ' ಎಲೆ ಮಗಳೆ, 'ಮಾ' ಬೇಡ, ತೀವ್ರವಾದ ತಪಸ್ಸು ಮಾಡಬೇಡ ನಿನ್ನ ಕೋಮಲವಾದ ಶರೀರಕ್ಕೆ ಅದು ತಕ್ಕುದಲ್ಲ ಎಂದು ತಾಯಿ ಮೇನಕೆ ಪಾರ್ವತಿಯನ್ನು ತಡೆಯುತ್ತಾಳೆ ಪಾರ್ವತಿ ಅದನ್ನು ಲೆಕ್ಕಿಸದೆ ಋಷಿಮುನಿಗಳೂ ನಾಚುವಂಥ ತೀವ್ರವಾದ ಪಂಚಾಗ್ನಿತಪಸ್ಸಿನಿಂದ ಶಿವನನ್ನು ಒಲಿಸಿಕೊಂಡು ಸತಿಯಾಗಿ ಅವನ ಶರೀರದಲ್ಲಿಯೆ ಸೇರಿ ಅರ್ಧಾಂಗಿನಿ ಎನಿಸುತ್ತಾಳೆ ಶಿವ ಅರ್ಧನಾರೀಶ್ವರನಾಗುತ್ತಾನೆ ಬಲಭಾಗದಲ್ಲಿ ಕರ್ಪೂರದಂತೆ ಅಚ್ಚಬಿಳಿ ಬಣ್ಣ, ಎಡಭಾಗದಲ್ಲಿ ಸಿಂಧೂರದಂತೆ ಕೆಂಬಣ್ಣದವನಾಗಿ ವಿಚಿತ್ರ ಸೌಂದರ್ಯಮೂರ್ತಿಯಾಗುತ್ತಾನೆ

ಅರ್ಧೇ ಕರ್ಪೂರಧವಲಂ ಅರ್ಧೇ ಸಿಂಧೂರಪಾಟಲಮ್ ।
ತದ್ ವಿಚಿತ್ರಮಭೂದಂಗಂ ಶಿವಯೋರೇಕತಾಂ ಗತಮ್ ॥

ಎಂದು ಸ್ಕಂದಪುರಾಣ

**ಉಗ್ರ**

'ನಮ್ಮಚ್ಯುತಗಲ್ಲದ ಅಸುರರ ಬಡಿವ' ಎಂದು ವಾದಿರಾಜರು ಹೇಳುವಂತೆ ಶಿವನು ವಿಷ್ಣುದ್ವೇಷಿಗಳಿಗೆ, ಅಪರಾಧಿಗಳಿಗೆ ಉಗ್ರರೂಪನಾಗುತ್ತಾ ವೀರಭದ್ರನಾಗುತ್ತಾನೆ, ಲಯಕಾಲದಲ್ಲಿ ಉಗ್ರಲಯಮೂರ್ತಿಯಾಗುತ್ತಾನೆ 'ಉ' ಎಂದರೆ ಸಂಸಾರ

'ಉ ಮೃತ್ಯುರಿತಿ ಸಂಪ್ರೋಕ್ತೋ ಮೃತ್ಯುಃ ಸಂಸಾರ ಈರಿತಃ'

ಎಂದು ಏಕಾಕ್ಷರಕೋಶ 'ಗ್ರ' ಎಂದರೆ ಗ್ರಾಸಮಾಡುವವ, ಅಂದರೆ ಸಂಸಾರ ನಾಶಮಾಡಿ ಮುಕ್ತಿ ತಂದುಕೊಡುವವ 'ಮೋಕ್ಷಮಿಚ್ಛೇಜ್ಜನಾರ್ದನಾತ್' ಮೋಕ್ಷ ನೀಡುವವ ಹರಿ ಎನ್ನುವ ವಚನವೆ 'ಜ್ಞಾನಂ ಮಹೇಶ್ವರಾದಿಚ್ಛೇತ್' ಮೋಕ್ಷಸಾಧನವಾದ ತತ್ವಜ್ಞಾನ ನೀಡುವವ ಶಿವ ಎನ್ನುತ್ತದ ದಕ್ಷಿಣಾಮೂರ್ತಿ ಮುಂತಾದ ರೂಪಗಳಿಂದ ಇಂದ್ರಾದಿ ದೇವತೆಗಳಿಗೆ

ಜ್ಞಾನೋಪದೇಶ ಮಾಡುತ್ತಾನೆ ಶಿವ ಮನೋಭಿಮಾನಿಯಾಗಿ ಮನಸ್ಸಿನಲ್ಲಿ ಜ್ಞಾನಭಕ್ತಿ-ವೈರಾಗ್ಯ ಉಂಟುಮಾಡುತ್ತಾನೆ ಕಾಶೀನಿವಾಸಿಯಾಗಿ ಕಾಶಿಯಲ್ಲಿ ಮರಣ ಹೊಂದುವ ಜೀವನ್ಮುಕ್ತರಿಗೆ ಅಂತ್ಯಕಾಲದಲ್ಲಿ ಕಿವಿಯಲ್ಲಿ ತಾರಕ ರಾಮಮಂತ್ರ ಉಸುರಿ ಆ ಮೂಲಕ ಮುಕ್ತಿ ತಂದುಕೊಡುತ್ತಾನೆ ಅದರಿಂದಲೆ 'ಕಾಶೀಮರಣಾನ್ಮುಕ್ತಿಃ' ಎನ್ನುತ್ತಾರೆ

ರಾಮಮಂತ್ರ ಶಿವನಿಗೆ ಅತಿಪ್ರಿಯ

ತವ ಶ್ರಿಯೇ ಮರುತೋ ಮರ್ಜಯಂತ
ರುದ್ರ ಯತ್ತೇ ಜನಿಮ ಚಾರುಚಿತ್ರಮ್ ।
ಪದಂ ಯದ್ ವಿಷ್ಣೋರುಪಮಂ ನಿಧಾಯಿ
ತೇನ ಪಾಸಿ ಗುಹ್ಯಂ ನಾಮ ಗೋನಾಮ್ ॥

'ಶಿವನೆ, ಬ್ರಹ್ಮದೇವರು ನಿನ್ನ ಹಿತಕ್ಕಾಗಿ ಲಕ್ಷ್ಮೀಕರಾರ್ಚಿತವಾದ ಸುಂದರವಾದ ವಿಷ್ಣುಪಾದ-ವನ್ನು ತೊಳೆದು ಆ ಪಾದೋದಕವನ್ನು ನಿನ್ನ ತಲೆ ಮೇಲಿಟ್ಟರು ಹೀಗ ನೀನು ತಲೆಯಲ್ಲಿ ಆ ಗಂಗಾಜಲವನ್ನೂ, ಹೃದಯದಲ್ಲಿ ಆ ವಿಷ್ಣುಪಾದವನ್ನೂ, ನಾಲಗೆಯಲ್ಲಿ ರಾಮನಾಮ-ವನ್ನೂ ಇಟ್ಟುಕೊಂಡು ಜತನದಿಂದ ಕಾಪಾಡುತ್ತಿರುವ' ಎಂದು ಋಗ್ವೇದ ಹೇಳಿದೆ 'ಉಗ್ರ' ಎಂಬ ಶಬ್ದ ಇದನ್ನೂ ಹೇಳುತ್ತದ 'ಉ' ಎಂದರೆ ಉತ್ತಮ, ಸರ್ವೋತ್ತಮನಾದ ರಾಮ ಅವನನ್ನು 'ಗ್ರ' ಗ್ರಾಸ ಮಾಡುವವ, ಅಂದರೆ ತನ್ನೊಳಗ ಇಟ್ಟುಕೊಂಡು ಅವನನ್ನ ಅವಲಂ-ಬಿಸಿ ಬದುಕುವವ

ಶ್ರೀವಿಷ್ಣುವಿನ ಪಾದ ಹೃದಯದೊಳಿಟ್ಟ ಜಟಾಜೂಟ ಬಲು ದಿಟ್ಟ ಎನ್ನುತ್ತಾರೆ ವಿಜಯದಾಸರು

***ಧೂರ್ಜಟಿ***

ರಾಮಮಂತ್ರ ಜಪಿಸುವವ ಮೊದಲಿಗೆ ಗಂಗಾಸ್ನಾನ ಮಾಡಬೇಕು ಮತ್ತು ರಾಮನ ಪಾದಕ್ಕೆ ಮಣಿಯಬೇಕು ಶಿವನೂ ಹಾಗೇ ಮಾಡುತ್ತಾನ ಎನ್ನುತ್ತದೆ 'ಧೂರ್ಜಟಿ' ಎಂಬ ಶಬ್ದ 'ದೂರ್' ಎಂದರೆ ಆಕಾಶ ಆಕಾಶ ವಿಷ್ಣುಪದವನಿಸುತ್ತದ ವಿಷ್ಣುಪದದಲ್ಲಿ ಜಟೆಯನ್ನು ಹೊಂದಿದವ, ಅಂದರೆ ವಿಷ್ಣುಪಾದಕ್ಕೆ ತಲಬಾಗಿ ನಮಿಸುವವ ಶಿವ ಇದರಿಂದ ರಾಮನ ಪಾದಕ್ಕೆ ಮಣಿಯುವುದನ್ನೂ ಹೇಳಿದಂತಾಯಿತು ಈ ಎರಡರ ಬಲದಿಂದ ರಾಮಮಂತ್ರ ಶಿವನಿಗೆ ಸಿದ್ಧಿಸಿದೆ ಆ ಸಿದ್ಧಿಯ ಬಲದಿಂದ ಭೂಲೋಕದ ಸಜ್ಜನರಿಗೆಲ್ಲರಿಗೂ ಮೋಕ್ಷ ತಂದುಕೊಡುವ ಗುರುತರವಾದ ಭಾರವನ್ನು ಜಟಯಲ್ಲಿ ಅಂದರ ತಲಯಲ್ಲಿ ದರಿಸಿದ್ದರಿಂದಲೂ ದೂರ್ಜಟಿ ಎನಿಸಿದ್ದಾನೆ ಶಿವ 'ಪುರಹರಗರಗದ ನರಸಿಗ ನರಕವು ಸ್ಥಿರ'ವೆಂದು ವಿಜಯದಾಸರು ಹೇಳಿದ್ದಾರೆ

ಹೀಗೆ ಶಿವ ಆದರ್ಶ ಗೃಹಸ್ಥ ಗೃಹಸ್ಥಾಶ್ರಮದಲ್ಲಿರುವವ ಮನೆಯಲ್ಲ ದೇವತಾ-ರಾಧನೆಯ ಜೊತಗೆ ತಂದೆತಾಯಿಗಳ ಸೇವೆಯನ್ನೂ ಮಾಡಬೇಕು ಮಡದಿಗ ಸೌಖ್ಯವನ್ನೂ

ನೀಡಬೇಕು ಮಕ್ಕಳನ್ನೂ ಕಾಪಾಡಬೇಕು ಶಿವ ಪರದೇವತೆಯಾದ ವಿಷ್ಣುವನ್ನು ಆರಾಧಿಸುತ್ತ 'ವಾಮದೇವ'ನೆನಿಸುತ್ತಾನೆ ತಂದೆ ತಾಯಿಗಳಾದ ಬ್ರಹ್ಮವಾಣಿಯರನ್ನು ಸೇವಿಸಿ 'ವಿರಿಂಚಿತನಯ'ನೆನಿಸುತ್ತಾನೆ ಮಡದಿ ಉಮೆಗೆ ಆನಂದ ನೀಡಿ 'ಉಮಾಮನೋಹರ'ನೆನಿಸುತ್ತಾನೆ ಮಕ್ಕಳಾದ ಇಂದ್ರಾದಿ ದೇವತೆಗಳಿಗೆ ತತ್ವಜ್ಞಾನ ನೀಡುತ್ತ ಕಾಪಾಡಿ 'ಉಗ್ರ'ನೆನಿಸುತ್ತಾನೆ ಈ ಎಲ್ಲ ಗೃಹಸ್ಥಧರ್ಮವನ್ನು ರಾಮನ ಪಾದಕ್ಕೆ ಅರ್ಪಿಸಿ ಮಣಿಯುತ್ತ 'ಧೂರ್ಜಟಿ' ಎನಿಸುತ್ತಾನೆ

***ಸಾಮಜಾಜಿನವಸನಭೂಷಣ***

ಗಜಚರ್ಮಾಂಬರದಿಂದ ಅಲಂಕೃತನಾದವ ಶಿವ ಸಾಮಜ- ಆನೆ, ಅಜಿನ- ತೊವಲು ಶಿವ ಆನೆಯ ತೊಗಲನ್ನೆ ಉಡುತ್ತಾನೆ ಎಂದು ನಿಯಮವಿಲ್ಲ 'ವ್ಯಾಘ್ರಚರ್ಮಪರೀಧಾನಂ' 'ಗಜಶಾರ್ದೂಲಚರ್ಮಧರ' ಹುಲಿದೊಗಲನ್ನೂ ಉಡುತ್ತಾನೆ ದಿಗಂಬರನೂ ಆಗುತ್ತಾನೆ! ಆದರೆ ಇಲ್ಲಿ ವಿಶೇಷವಾಗಿ ಗಜಚರ್ಮಾಂಬರಧಾರಿಯನ್ನು ಪ್ರಸ್ತಾಪಿಸಿದುದರಲ್ಲಿ ಔಚಿತ್ಯವಿದೆ ಗಜಚರ್ಮವೆಂದರೆ ಸಾಮಾನ್ಯ ಆನೆಯ ಚರ್ಮವೂ ಆಗಬಹುದು ಪಾರ್ವತೀಪರಿಣಯಕಾಲದಲ್ಲಿ ಮದುಮಗನನ್ನು ಸಿಂಗರಿಸಲು ಎಲ್ಲ ದೇವತೆಗಳೂ ಬಂದರು ಆಗ ಇಂದ್ರ ಗಜಚರ್ಮ ಉಡಿಸಿದನೆಂದು ಸ್ಕಂದಪುರಾಣ ಹೇಳುತ್ತದೆ

ಶಕ್ರೋ ಗಜಾಜಿನಂ ಗೃಹ್ಯ ಸ್ವಯಮಗ್ರೇ ವ್ಯವಸ್ಥಿತಃ

ಆದರೂ ಇಲ್ಲಿ ಗಜಾಸುರನ ಚರ್ಮ ವಿವಕ್ಷಿತ ಗಜಾಸುರನನ್ನು ಕೊಂದು ಅವನಿಗೆ ಮುಕ್ತಿ ನೀಡಿದುದು ಶಿವ ಎಲ್ಲ ಸಾತ್ವಿಕರಿಗೂ ಮುಕ್ತಿ ಕೊಡುತ್ತಾನೆ ಎಂದು ಹಿಂದೆ ಹೇಳಿದುದಕ್ಕೆ ಒಂದು ಒಳ್ಳೆಯ ಉದಾಹರಣೆ ಗಜಾಸುರ ಮಹಿಷಾಸುರನ ಮಗ ಜಾತಿಯಲ್ಲಿ ಅಸುರನಾದರೂ ಸ್ವಭಾವದಲ್ಲಿ ಸಾತ್ವಿಕನೆ ಆಗಿದ್ದ ಶಿವನ ಶೂಲಕ್ಕೆ ಸಿಕ್ಕಾಗ ಭಕ್ತಿಯಿಂದ ಬೇಡಿದ್ದ 'ದೇವ, ನೀನು ನನ್ನ ಮೈದೊವಲನ್ನುಟ್ಟು ನಿನ್ನನ್ನು ನೀನು ಸಿಂಗರಿಸಿಕೊಳ್ಳಬೇಕು' ಶಿವ ಹಾಗೇ ಮಾಡಿದ ಅವನಿಗೆ ತನ್ನ ಸಾಯುಜ್ಯವನ್ನಿತ್ತ

***ಸುಮನಸೋತ್ತಂಸ***

ಸುಮನಸರೆಂದರೆ ಒಳ್ಳೆಯ ಮನಸ್ಸುಳ್ಳವರು, ಜ್ಞಾನಿಗಳು, ದೇವತೆಗಳು ಇವರಲ್ಲಿ ಶ್ರೇಷ್ಠನಾದವ ಶಿವ ಶ್ರೇಷ್ಠನೆನಿಸಲು ಬಲ ಮುಖ್ಯವಲ್ಲ ಜ್ಞಾನಭಕ್ತಿವೈರಾಗ್ಯಗಳು ಮುಖ್ಯ ಅವುಗಳಿಂದಲೆ ಬೇರೆ ಎಲ್ಲ ಗುಣಗಳಿಗೂ ಬೆಲೆ, ಸಾರ್ಥಕ್ಯ ಅದರಿಂದ ವಿಷ್ಣುಭಕ್ತಾಗ್ರೇಸರನಾದ ಶಿವ ದೇವೋತ್ತಮನೆನಿಸಿದುದು ನ್ಯಾಯವೆ ವಿಷ್ಣುಭಕ್ತಿಯಿಂದ ವೈರಾಗ್ಯದಿಂದ ಪ್ರೇರಿತನಾಗಿಯೆ ಆತ ಗಜಚರ್ಮ ಉಡುತ್ತಾನೆ, ಅಥವಾ ದಿಗಂಬರನಾಗುತ್ತಾನೆ ಪದ್ಮಪುರಾಣದಲ್ಲಿ ಪಾರ್ವತಿ ಶಿವನಿಗೆ ಹೇಳುತ್ತಾಳೆ

ಯಮುದ್ದಿಶ್ಯ ಜಗನ್ನಾಥಂ ಮಹೇಶೋಽಪಿ ದಿಗಂಬರಃ ।
ಜಟೀ ಭಸ್ಮಾನುಲಿಪ್ತಾಂಗಸ್ತಪಸ್ವೀ ವೀಕ್ಷಿತೋ ಜನೈಃ ॥

ತತೋऽಧಿಕೋऽಸ್ತಿ ಕೋ ದೇವೋ ಲಕ್ಷ್ಮೀಕಾಂತಾನ್ಮದುದ್ವಿಷಃ ॥

'ಶಿವನೆ, ನೀನು ಜಗದೀಶ್ವರನಾಗಿದ್ದರೂ ಹರಿಪ್ರೀತಿಗಾಗಿ ದಿಗಂಬರನಾಗಿ ಜಟಾಭಸ್ಮಧಾರಿಯಾಗಿ ತಪಸ್ಸು ಮಾಡುತ್ತಿರುವುದನ್ನು ಲೋಕವೆಲ್ಲ ನೋಡುತ್ತಿದೆ ಅಂದ ಹರಿಗಿಂತ ಹೆಚ್ಚಿನ ದೈವವಿನ್ನಾರುಂಟು?' ನಾವೂ ಕೇಳಬೇಕಾಗುತ್ತದೆ, ಇಂದ ಶಿವನಿಗಿಂತ ಅಧಿಕ ವಿಷ್ಣುಭಕ್ತನಿನ್ನಾರುಂಟು, ಪರಶುಕ್ಲತ್ರಯವನ್ನು ಬಿಟ್ಟರೆ ಎಂದು ಆದ್ದರಿಂದ ಶಿವ ಸುಮನಸೋತ್ತಂಸ

**ಕಾಮಹರ**

ಶಿವ ಇಂದ್ರಾದಿಗಳಿಗಿಂತ ಉತ್ತಮನೆಂದು ಹೇಳಿದ್ದಕ್ಕೆ ಒಂದು ಉದಾಹರಣೆ ಕಾಮನನ್ನು ಸುಟ್ಟಿದ್ದು ಕಾಮ ಸಾಮಾನ್ಯ ದೇವತೆಯಲ್ಲ ಇಂದ್ರನಿಗೆ ಸಮಾನ ಹರಿಯ ಮನಸ್ಸಿನಿಂದ ಹುಟ್ಟಿ ಮನಸಿಜನೆಂದೆ ಪ್ರಸಿದ್ಧನಾದವ, ಮನೋಭಿಮಾನಿ ಪ್ರದ್ಯುಮ್ನರೂಪಿ ಹರಿಯ ವಿಶೇಷ ಆವೇಶಪ್ರಯುಕ್ತ 'ಪ್ರದ್ಯುಮ್ನ' ಅಸಾಧಾರಣಬಲಪರಾಕ್ರಮಸಂಪತ್ತುಳ್ಳವನೆಂದೆ ಬಿರುದು ಯಮನಿಗೂ ಯಮ ಈತ

ಯಮಃ ಕಾಲೋ ಮನುಷ್ಯಾಣಾಂ ತಸ್ಯ ಕಾಲಃ ಸುದರ್ಶನಃ

ಮಾನವರಿಗೆ ಯಮ ಮೃತ್ಯುವೆನಿಸಿದರೆ ಆ ಯಮನಿಗೂ ಮೃತ್ಯು ಸುದರ್ಶನಚಕ್ರಾಭಿಮಾನಿ ಮನ್ಮಥ ಎಂದು ಭಾಗವತತಾತ್ಪರ್ಯದಲ್ಲಿ ಹೇಳಿದೆ ಇಂದ್ರನ ವಜ್ರಾಯುಧವೂ ತಪಸ್ವಿಗಳ ಹುಂಕಾರಕ್ಕೆ ಸ್ತಂಭಿತವಾದೀತು ಕಾಮನ ಹೂಬಾಣಕ್ಕೆ ತಪಸ್ವಿಗಳು ತಾವ ಸ್ತಂಭಿತರಾಗುತ್ತಾರೆ ಇಂಥ ಕಾಮನನ್ನು ಶಿವ ತನ್ನ ನೇತ್ರಾಗ್ನಿಕಣದಿಂದಲೆ ಸುಟ್ಟನಂದರ ಆತ ಇಂದ್ರಾದಿ ಸಮಸ್ತ ದೇವತೆಗಳಿಗಿಂತ ಹೆಚ್ಚಿನವನೆನ್ನಬೇಕು

**ಕೈಲಾಸಮಂದಿರ**

ಶಿವ ಅಷ್ಟಮೂರ್ತಿಯಾಗಿ ಬ್ರಹ್ಮಾಂಡದಲ್ಲೆ ವ್ಯಾಪಿಸಿದ್ದರೂ ಕೈಲಾಸವಾಸಿ ಎಂದು ಪ್ರಸಿದ್ಧ ಕೈಲಾಸವೂ ಅನೇಕ ಕಡೆ ಇದೆ.

ಕಾಮಹರ ಕೈಲಾಸ ಹೇಮಗಿರಿಯ ವಾಸ

ಎಂದು ಜಗನ್ನಾಥದಾಸರೆ ಇನ್ನೊಂದೆಡೆ ಹೇಳುವಂತೆ ಮೇರುಪರ್ವತದಲ್ಲಿ ಒಂದು ಕೈಲಾಸವಿದೆ ಸ್ಕಾಂದಪುರಾಣ ಹೇಳುವಂತೆ ಗಂಧಮಾದನ ಪರ್ವತದಲ್ಲಿಯೂ ಇನ್ನೊಂದು ಕೈಲಾಸವಿದೆ ಮಹಾಭಾರತದ ಪ್ರಕಾರ ಹೇಮಕೂಟದಲ್ಲಿಯೂ ಒಂದು ಕೈಲಾಸವಿದೆ ಎಲ್ಲರೂ ನೋಡುವಂತೆ ಹಿಮಾಲಯದಲ್ಲಿಯೂ ಕೈಲಾಸವಿದೆ ಎಲ್ಲ ಕೈಲಾಸಗಳಲ್ಲಿಯೂ ಕೈಲಾಸನಗರವಿದೆ ಅದನ್ನು ಶಿವ ಆಳುತ್ತಾನೆ ಭವ್ಯವಾದ ಅರಮನೆಯೊಳಗ ರತ್ನಸಿಂಹಾಸನವೇರಿ ಸರ್ವಾಲಂಕಾರಭೂಷಿತನಾಗಿ ಮಡದಿ ಉಮೆಯನ್ನು ತೊಡೆಯ ಮೇಲಿರಿಸಿಕೊಂಡು ಶಿರೋಭೂಷಣವಾದ ಚಂದ್ರಮಂಡಲದಿಂದ ಸುರಿವ ಅಮೃತಧಾರಯಲ್ಲಿ

ಮೀಯುತ್ತ ಇಂದ್ರಾದಿ ದೇವತೆಗಳಿಂದ ಓಲೈಸಲ್ಪಡುವ, ವಿಶ್ವವನ್ನೆ ಮೈಮರೆಸುವಂದ ಸೌಂದರ್ಯಮೂರ್ತಿ ಶಿವ

ಕೋಟೀರೇಂದುಗಲತ್ಸುಧಾಪ್ಲುತತನುಂ ಹಾರಾದಿಭೂಷೋಜ್ಜ್ವಲಂ
ಕಾಂತ್ಯಾ ವಿಶ್ವವಿಮೋಹನಂ ಪಶುಪತಿಂ ಮೃತ್ಯುಂಜಯಂ ಭಾವಯೇ

ತನ್ನ ಮಿತ್ರನಾದ ಕುಬೇರನಿಗೆ ಕೈಲಾಸದಲ್ಲಿಯೇ ಪ್ರತ್ಯೇಕವಾಗಿ ಅಲಕಾನಗರಿಯನ್ನೂ ವಿಶ್ವಕರ್ಮನಿಂದ ಮಾಡಿಸಿಕೊಟ್ಟ ಶಿವ ಹೀಗೆ ಶ್ರೀಮಂತ ಗೃಹಸ್ಥನಾದ ಶಿವ ರಾಜಭೋಗ ಅನುಭವಿಸುತ್ತ ಶ್ರೀಮಂತ ಕುಬೇರನ ಮಿತ್ರನಾಗಿದ್ದವ, ಮನ್ಮಥನನ್ನು ಸುಟ್ಟ! ಸ್ಮಶಾನವಾಸಿ ಶಿವನಾದರೋ ವಿರಕ್ತನಾದ ಬೈರಾಗಿ, ದಿಗಂಬರ ಮೈಗೆ ಸ್ಮಶಾನದ ಬೂದಿ ಬಳಿದುಕೊಂಡು ರುಂಡಮಾಲೆ ತೊಟ್ಟು ಜಟಾಧಾರಿಯಾಗಿ ತಿರುಗುವವ ಆದರೆ ಈ ವೇಷ ಅಮಂಗಲ, ಪಾಪಕರ ಆ ಪಾಪಪರಿಹಾರಕ್ಕಾಗಿಯೆ ತಲೆಯಲ್ಲಿ ವಿಷ್ಣುಪಾದೋದಕವಾದ ಗಂಗೆಯನ್ನು ಧರಿಸಿದನೆಂದು ಬಾಗವತ ಹೇಳಿದೆ ಆದ್ದರಿಂದ ಈ ವಿರಕ್ತವೇಷ ಶಿವನಿಗೆ ಇಷ್ಟವೇನಲ್ಲ ಬೇರೆ ರೂಪಗಳಲ್ಲಿ ಆತ ದ್ವಾದಶ ಊರ್ಧ್ವಪುಂಡ್ರ ಚಕ್ರಶಂಖಚಿಹ್ನೆಗಳನ್ನೂ ಪದ್ಮಾಕ್ಷ-ತುಲಸೀಮಾಲೆಗಳನ್ನೂ ದರಿಸಿರುತ್ತಾನೆ ವಿರಕ್ತವೇಷವನ್ನಲ್ಲ ಆದರೂ ಕಾಮನನ್ನು ಸುಟ್ಟ ಕಾಮಹರ, ಕೈಲಾಸಮಂದಿರ! ಏಕೆ?

ವಸ್ತುತಃ ಶಿವ ಅಂತಃಕರಣದಲ್ಲಿ ಪರಮವೈರಾಗ್ಯಮೂರ್ತಿಯಾದುದರಿಂದ ಕಾಮ-ನನ್ನು ಸುಟ್ಟ, ಕಾರುಣ್ಯಮೂರ್ತಿಯೂ ಆದ್ದರಿಂದ ಒಂದು ತಲೆಯ ಕಾಮಶರೀರವನ್ನು ಸುಟ್ಟು ಆರು ತಲೆಯ ಷಣ್ಮುಖ ಶರೀರವನ್ನು ನೀಡಿ ಮಗನೆಂದು ಲಾಲಿಸಿದ

*ಸೋಮಸೂರ್ಯಾನಲವಿಲೋಚನ*

ಶಿವನಿಗೆ ಮೂರು ಕಣ್ಣುಗಳು ಎಡಗಣ್ಣಿನಲ್ಲಿ ಚಂದ್ರ, ಬಲಗಣ್ಣಿನಲ್ಲಿ ಸೂರ್ಯ, ಹಣೆಗಣ್ಣಿನಲ್ಲಿ ಅಗ್ನಿ ಇದ್ದಾರೆ ಹಣೆಗಣ್ಣಿನ ಕಿಡಿಯಿಂದ ಕಾಮನನ್ನು ಸುಟ್ಟಿದ್ದ ಶಿವ ಬಲಗಣ್ಣು ಹರಿಧ್ಯಾನದಲ್ಲಿ ಸದಾ ಅರ್ಧಮುಚ್ಚಿಕೊಂಡಿರುತ್ತದೆ ಎಡಗಣ್ಣು ಮಡದಿ ಉಮೆಯ ಕಡೆಗೆ ಪ್ರಣಯಕಟಾಕ್ಷ ಹರಿಸುತ್ತದೆ ಹಣೆಗಣ್ಣು ವೈರಾಗ್ಯಭಾವದಿಂದ ವಿಷಯಭೋಗದ ಪ್ರಪಂ-ಚವನ್ನು ನೋಡೆನೆಂದು ಪೂರ್ತಿ ಮುಚ್ಚಿರುತ್ತದೆ ಎಂದು ಸ್ಕಂದಪುರಾಣ ಹೇಳಿದೆ

ಬಾಸ್ವಾನ್ ಮೇ ಬಾಸಯೇತ್ತತ್ತ್ವಂ ಚಂದ್ರಶ್ಚಾಹ್ಲಾದಕೃದ್ ಭವೇತ್

ಎಂದು ವಾದಿರಾಜರು ಹೇಳುವಂತೆ ಬಲಗಣ್ಣ ಸೂರ್ಯ ಜ್ಞಾನಕಾರ್ಯ ಮಾಡುವವ ಅದರಿಂದ ಬಲಗಣ್ಣು ಭಕ್ತಿಭಾವದಿಂದ ಅರ್ದಮುಚ್ಚಿದೆ ಎಡಗಣ್ಣ ಚಂದ್ರ ಆಹ್ಲಾದಕಾರಿ ಶೃಂಗಾರೋದ್ದೀಪಕ ಅದರಿಂದ ಎಡಗಣ್ಣು ಪ್ರಣಯಕಟಾಕ್ಷ ಬೀರುತ್ತಿದೆ ಹಣೆಗಣ್ಣಿನ ಅಗ್ನಿ ಕಾಮನನ್ನು ಸುಟ್ಟಿದ್ದರಿಂದ ವೈರಾಗ್ಯಭಾವದಿಂದ ಮುಚ್ಚಿದೆ, ಹಣೆಗಣ್ಣು ವ್ಯಾಸರಾಜರು ಶಿವನ ಮೂರು ಕಣ್ಣುಗಳೂ ಹರಿಯ ಆರಾಧನೆ ಮಾಡುವ ವೈಖರಿಯನ್ನು ಹೀಗೆ ವರ್ಣಿಸಿದ್ದಾರೆ

ಶಿರದ ಗಂಗೆಯೆ ವರ ಅಗ್ಗಣಿಯಾಗಿರೆ
ಸರಸಿಜಬಾಂಧವ ಚಂದಿರ ದೀಪ ।
ಉರಿಗಣ್ಣಿನ ಹೊಗೆ ಧೂಪವನೇರಿಸಿ
ಕರಣವೆ ನೈವೇದ್ಯ ರಾಮರಾಮ ಎಂಬ ॥
ರಾಮನಾಮಾಮೃತ ಸವಿಯನೆಲ್ಲ
ಸೋಮಶೇಖರ ತಾನೆ ಬಲ್ಲ ॥

ತಲೆಯ ಮೇಲಿನ ಗಂಗೆಯೆ ಅರ್ಘ್ಯೋದಕ ಕಣ್ಣುಗಳಲ್ಲಿರುವ ಸೂರ್ಯಚಂದ್ರರೆ ದೀಪ-ಗಳು ಹಣೆಗಣ್ಣು ಹೊಗೆಯಾಡುತ್ತದೆ ಆ ಹೊಗೆಯೆ ಧೂಪ. ಕರಣತ್ರಯವನ್ನೆ ನೈವೇದ್ಯ-ವನ್ನಾಗಿ ಸಮರ್ಪಿಸಿ ಅರ್ಘ್ಯಧೂಪದೀಪನೈವೇದ್ಯಗಳ ಸಮಾರಾಧನೆಯನ್ನು ಸದಾ ಮಾಡು-ತ್ತಾನೆ ಶಿವ! ಅಮೃತದಂದ ರಾಮನಾಮವೆ ಮಂತ್ರ! ರಾಮ ಒಲಿಯದಿರುತ್ತಾನೆಯೆ? ಅದರಿಂದ ಕಾಮಿತಪ್ರದ, ಶಿವ

**ಕಾಮಿತಪ್ರದ**

ಶಿವ ಆಶುತೋಷ, ಬೇಗನೆ ಒಲಿವವನೆಂದು ಪ್ರಸಿದ್ಧ ಬಾಗವತ ಹೇಳುತ್ತದ

ದೇವಾಸುರಮನುಷ್ಯೇಷು ಯೇ ಭಜಂತ್ಯಶಿವಂ ಶಿವಮ್ ।
ಪ್ರಾಯಸ್ತೇ ಧನಿನೋ ಭೋಜಾ ನತು ಲಕ್ಷ್ಮೀಪತಿಂ ಹಲಮ್ ॥

ಶಿವಪೂಜೆಯ ಪಲವನ್ನು ಶಿವಪುರಾಣ ಹೀಗೆ ಹೇಳಿದೆ

ಯದ್ ವಾರಿ ಮತ್ತಮಾತಂಗಾ ವಾಯುವೇಗಾಸ್ತುರಂಗಮಾಃ ।
ಪೂರ್ಣೇಂದುವದನಾ ನಾರ್ಯಃ ಶಿವಪೂಜಾವಿಧೇಃ ಪಲಮ್ ॥

'ಮನೆಬಾಗಿಲಲ್ಲಿ ಮದಿಸಿದ ಆನೆಗಳು, ವಾಯುವೇಗದ ಕುದುರೆಗಳು, ಹುಣ್ಣಿಮ ಚಂದಿರ-ನಂಥ ಮೊಗದ ಚೆಲುವೆಯರು ಇದ್ದರೆ ಅದು ಶಿವಪೂಜಯ ಫಲವೆನ್ನಬೇಕು'

ದಾಸರು ಇಂಥ ಐಹಿಕ ಭೋಗಭಾಗ್ಯವೇನೂ ಬಯಸುವವರಲ್ಲ 'ಕರುಣಿಸೆಮಗೆ ಸದಾ ಸುಮಂಗಲವ' ಎನ್ನುತ್ತಾರೆ ಐಹಿಕ ಸುಮಂಗಲವಲ್ಲ ಜ್ಞಾನಭಕ್ತಿವೈರಾಗ್ಯಗಳು ಸುಮಂಗಲ. ಈ ಗ್ರಂಥದ ನಿರ್ವಿಘ್ನಪರಿಸಮಾಪ್ತಿ ಸುಮಂಗಲ ಗ್ರಂಥದ ಅಧ್ಯೇತೃಗಳಿಗೆ ತತ್ವಜ್ಞಾನಲಾಭ ಸುಮಂಗಲ ಇವುಗಳನ್ನು ನೀಡುವವ ಶಿವ

ಪ್ರಾರ್ಥಿನಾಂ ಭವಾನ್ ಸುರತರುರ್ದೃಶಂ ದಿಶ ಶಿವಾಂ ಶಿವಾವಲ್ಲಭ

ಎಂದು ಪಂಡಿತಾಚಾರ್ಯರು ಹೇಳುವಂತೆ, ಹೇ ಉಮಾವಲ್ಲಭ, ನೀನು ಬೇಡಿದವರಿಗೆ ಕಲ್ಪವೃಕ್ಷದಂತೆ ಎಲ್ಲವನ್ನೂ ಕೊಡುವವ ನಾನು ಮಂಗಳಕರವಾದ ಜ್ಞಾನವನ್ನು ಬೇಡುತ್ತೇನೆ ಅದನ್ನೆ ನೀಡು ಎಂದು ಬೇಡುತ್ತಾರೆ

ಕೃತ್ತಿವಾಸನೆ ಹಿಂದೆ ನೀ ನಾ-
ಲ್ವತ್ತು ಕಲ್ಪ ಸಮೀರನಲಿ ಶಿ-
ಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯಲಿ ।
ಹತ್ತು ಕಲ್ಪದಿ ತಪವ ಗೈದಾ-
ದಿತ್ಯರೊಳಗುತ್ತಮನೆನಿಸಿ ಪುರು-
ಷೋತ್ತಮನ ಪರ್ಯಂಕ ಪದವೈದಿದೆಯೊ ಮಹದೇವ ॥ ೧೧ ॥

'ಚರ್ಮಾಂಬರಧಾರಿಯಾದ ಮಹಾದೇವನೆ, ಹಿಂದೆ ನೀನು ವಾಯುದೇವನಲ್ಲಿ ಶಿಷ್ಯತ್ವ ವಹಿಸಿ ನಾಲ್ವತ್ತು ಕಲ್ಪ ಕಾಲ ಸಕಲ ಆಗಮಾರ್ಥಗಳನ್ನು ತಿಳಿದು ಸಮುದ್ರದಲ್ಲಿ ಹತ್ತು ಕಲ್ಪ ಕಾಲ ತಪಸ್ಸನ್ನೂ ಮಾಡಿ ದೇವೋತ್ತಮನೆನಿಸಿ ವಿಷ್ಣುಪರ್ಯಂಕಭೂತನಾದ ಶೇಷನ ಪದವಿ ಹೊಂದಿರುವೆ'

ಈ ಪದ್ಯದಲ್ಲಿ 'ಪದವೈದಿದೆಯೊ' ಎಂದು ಭೂತಕಾಲಪ್ರಯೋಗ ಮಾಡಿದುದು 'ಪದವಿಪ್ರಾಪ್ತಿಗೆ ಅರ್ಹತೆ ಪಡೆದಿರುವೆ' ಎಂಬ ಅಭಿಪ್ರಾಯದಿಂದ ಅಥವಾ,

ಏಷ್ಯತ್ತು ನಿಶ್ಚಿತಂ ಯತ್ ತದತೀತತ್ವೇನ ಭಣ್ಯತೇ

ಮುಂದೆ ಆಗಲಿರುವುದು ನಿಶ್ಚಿತವಾಗಿಯೆ ಆಗುತ್ತಿದ್ದರೆ ಆ ಅಭಿಪ್ರಾಯದಿಂದ 'ಆಗಿಯೇ ಹೋಯಿತೆಂದು' ಭೂತಕಾಲಪ್ರಯೋಗ ಮಾಡುವುದುಂಟು ಹಾಗೇ ಶೇಷಪದವಿ ಮುಂದೆ ಸಿಗುವುದು ನಿಶ್ಚಿತವೆಂಬ ಅಭಿಪ್ರಾಯದಿಂದ 'ಪದವೈದಿದೆಯೊ' ಎಂದು ಹೇಳಿದೆ

**ರುದ್ರದೇವನ ಸಾಧನೆ**

ದಾಸರಾಯರು ಇಲ್ಲಿ ಮಹಾರುದ್ರನ ಸಾಧನೆಯನ್ನು ತಿಳಿಸಿದ್ದಾರೆ ಮೇಲುನೋಟಕ್ಕೆ ಇಲ್ಲಿ ಅನೇಕ ಬಗೆಯ ಸಂಶಯಗಳಿಗೆ ಆಸ್ಪದ ಉಂಟು

ಮಹಾರುದ್ರ ರುದ್ರಪದವಿಯನ್ನಾಳುವ ಕಾಲ ಕೇವಲ ಒಂದು ಕಲ್ಪ ಮುಂದಿನ ಕಲ್ಪದ-ಲ್ಲಿಯೆ ಆತ ಶೇಷಪದವಿಗೆ ಬಂದು ಮುಕ್ತನಾಗುತ್ತಾನೆ ಐವತ್ತು ಕಲ್ಪ ಸಾಧನೆ ಮಾಡಿ ಶೇಷ-ಪದವಿಗೆ ಬರುವುದು ಅಸಂಭಾವಿತ

ವಾಯುದೇವನೂ ವಾಯುಪದವಿಯನ್ನಾಳುವುದು ಒಂದು ಕಲ್ಪಕಾಲ ಮಾತ್ರ ನಲ್ವತ್ತು ಕಲ್ಪಕಾಲ ಆ ಪದವಿಯಲ್ಲಿ ಆತ ಇರುವುದಿಲ್ಲ ಮುಂದಿನ ಕಲ್ಪದಲ್ಲಿಯೆ ಬ್ರಹ್ಮಪದವಿಗೆ ಬಂದು ಮುಕ್ತನಾಗುತ್ತಾನೆ ನಲವತ್ತು ಕಲ್ಪಕಾಲ ಅವನಲ್ಲಿ ರುದ್ರ ಅಧ್ಯಯನ ಮಾಡುವುದು ಅಸಂಭವ

ರುದ್ರನ ನಲ್ವತ್ತು ಕಲ್ಪ ಸಾಧನೆ 'ಪುರುಷೋತ್ತಮನ ಪರ್ಯಂಕಪದ'ಕ್ಕಾಗಿ ಅಲ್ಲ ರುದ್ರಪದಪ್ರಾಪ್ತಿಗಾಗಿ ಎಂದು ಭಾಗವತತಾತ್ಪರ್ಯದಲ್ಲಿ ಹೇಳಿದೆ

ತದ್ವೈವ ಚತ್ವಾರಿಂಶದ್ಭಿಃ ಪದಂ ಶೈವಂ ಚ ಜನ್ಮಭಿಃ
ನಲವತ್ತು ಜನ್ಮಗಳ ಸಾಧನೆಯಿಂದ ರುದ್ರನಿಗೆ ರುದ್ರಪದವಿಲಾಭ'

'ಹಿಂದೆ ನೀ ನಾಲ್ವತ್ತು ಕಲ್ಪ' ಎಂದುದು ಬ್ರಹ್ಮನ ದಿನ ಕಲ್ಪವೆಂದು ಗ್ರಹಿಸಿದರೆ ಸಮಸ್ಯೆ ಸ್ವಲ್ಪ ಪರಿಹಾರವಾಗಬಹುದು ಬ್ರಹ್ಮನ ನೂರುವರ್ಷ ಒಂದು ಮಹಾಕಲ್ಪವೆನಿಸುತ್ತದೆ ಬ್ರಹ್ಮನ ಒಂದು ದಿನ ದಿನಕಲ್ಪವೆನಿಸುತ್ತದೆ ರುದ್ರ ರುದ್ರಪದವಿಯಲ್ಲಿ ಒಂದು ಮಹಾಕಲ್ಪ-ಕಾಲವಿರುವುದರಿಂದ ಅದರೊಳಗೆ ನಲವತ್ತು ದಿನಕಲ್ಪಕಾಲ ಸಾಧನೆ ಮಾಡುವುದು ಶಕ್ಯವಿದೆ ಹಾಗೇ ಸಂಕರ್ಷಣ ಒಡೆಯರ ವ್ಯಾಖ್ಯಾನವಿದೆ ಆದರ ರುದ್ರಪದವಿಯಲ್ಲಿ ಇರುವವನು ರುದ್ರಪದವಿಗಾಗಿ ಸಾಧನೆ ಮಾಡುವುದು ಅಸಂಗತ 'ನಲವತ್ತು ಜನ್ಮಗಳ ಸಾಧನೆ' ಎಂದು ಭಾಗವತತಾತ್ಪರ್ಯ ಹೇಳುತ್ತಿರುವಾಗ ನಲವತ್ತು ದಿನಕಲ್ಪ ಸಾಧನೆ ಎಂದು ಹೇಳುವುದೂ ಅಸಂಗತ ಆದ್ದರಿಂದ ನಲವತ್ತು ಮಹಾಕಲ್ಪವೆಂದೇ ಹೇಳಬೇಕು

ರುದ್ರನೆಂದರೆ ರುದ್ರಪದವಿಗೆ ಯೋಗ್ಯನಾದ ಉಗ್ರತಪನೆಂಬ ಯೋಗಿ ಅವನು ನಲವತ್ತು ಮಹಾಕಲ್ಪಕಾಲ ಸಾಧನೆ ಮಾಡಿ ದೇವೋತ್ತಮನೆನಿಸಿದ್ದಾನೆ ಅಂದರ ರುದ್ರಪದವಿ ಪಡೆದಿದ್ದಾನ, ಬಳಿಕ ಶೇಷಪದವಿ ಹೊಂದುದ್ದಾನೆ, ಎನ್ನಬೇಕು ಗರುಡಪುರಾಣ ಇದನ್ನು ಸ್ಪಷ್ಟವಾಗಿ ಹೇಳುತ್ತಿದೆ ವಾಯುದೇವನೂ ಇಲ್ಲಿ ವಾಯುಪದವಿಗ ಯೋಗ್ಯನಾದ ಒಬ್ಬ ಋಜು ಯೋಗಿ ಅವನೆ ಲಾತವ್ಯ ಅವನ ಶಿಷ್ಯತ್ವ ವಹಿಸಿ ಉಗ್ರತಪ ನಲವತ್ತು ಮಹಾಕಲ್ಪ-ಕಾಲ ಶಾಸ್ತ್ರಾಧ್ಯಯನ ಮಾಡಿ ಸಕಲಾಗಮಾರ್ಥಗಳನ್ನು ತಿಳಿದ ಇದೇ ಬಾಗವತತಾತ್ಪರ್ಯ ಹೇಳುವ ಸಾಧನೆ

ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ ।
ತದ್ಧಿ ತಪಸ್ತದ್ಧಿ ತಪಃ ॥

ಎಂದು ಶಾಸ್ತ್ರಶ್ರವಣವೆ ಮುಖ್ಯವಾಗಿ ತಪಸ್ಸು ಸಾಧನೆ ಎನ್ನುತ್ತಿದೆ ತೈತ್ತಿರೀಯೋಪನಿಷತ್ತು

ಬ್ರಹ್ಮನ ಎಪ್ಪತ್ತೈದು ವರ್ಷಕಾಲ ಉಗ್ರತಪನು ಲಾತವ್ಯನಲ್ಲಿ ಶ್ರವಣ ಮಾಡಿದ್ದೂ ಉಂಟು ಅದನ್ನೂ ದಾಸರಾಯರು ಮುಂದೆ ಕಲ್ಪಸಾಧನಸಂಧಿಯಲ್ಲಿ ಹೇಳಲಿದ್ದಾರೆ ನಲವತ್ತು ಮಹಾಕಲ್ಪಸಾಧನೆ ಎಂದು ಒಪ್ಪಿದರೂ ಮುಂದೆ ಕಲ್ಪಸಾಧನಸಂಧಿಯಲ್ಲಿಯೆ 'ಐವಲೆಯ-ಗೈವತ್ತು' 'ಪಂಚಮುಖನಾದ ರುದ್ರನಿಗೆ ಐವತ್ತು ಮಹಾಕಲ್ಪಸಾಧನೆ ಇದೆ' ಎಂದು ಹೇಳುವುದರಿಂದ ವಿರೋಧ ಈ ಐವತ್ತಕ್ಕೆ ಪ್ರಮಾಣವೂ ಇಲ್ಲದಿಲ್ಲ ಅನುವ್ಯಾ- ಖ್ಯಾನದಲ್ಲಿ

ಪಂಚಾಶದ್ ಬ್ರಹ್ಮಣಸ್ತಥಾ ರುದ್ರಸ್ಯ

ಎಂದು ಸ್ಪಷ್ಟವಾಗಿಯೆ ಹೇಳಿದೆ ಈಗ ದಾಸರಾಯರು ನಾಂದೀಸಂಧಿಯಲ್ಲಿ ಭಾಗವತ-ತಾತ್ಪರ್ಯದಂತೆ, ಕಲ್ಪಸಾಧನಸಂಧಿಯಲ್ಲಿ ಅನುವ್ಯಾಖ್ಯಾನದಂತೆ ಹೇಳಿರುವುದರಿಂದ ದೋಷವಿಲ್ಲ, ಅಪ್ರಾಮಾಣಿಕವಾಗುವುದಿಲ್ಲ ಎನ್ನಬಹುದು ಆದರೆ ಶ್ರೀಮದಾಚಾರ್ಯರ ವಾಕ್ಯಗಳಿಗೆ ಪರಸ್ಪರ ವಿರೋಧ ಕಾಣುವಾಗ ವಿರೋಧ ಬಾರದಂತೆ ಸಮಂಜಸವಾಗಿ

ಯೋಜನ ಮಾಡಿಯೆ ದಾಸರಾಯರು ಹೇಳಬೇಕಾಗಿತ್ತು ಹಾಗೆ ಮಾಡದೆ ಯಥಾವತ್ತಾಗಿ ಹೇಳಿ ಅಜ್ಞರಾದ ಓದುಗರನ್ನು ಗೊಂದಲದಲ್ಲಿ ಬೀಳಿಸುವುದು ಉಚಿತವಾಗಲಾರದು

ಇದರಿಂದ ದಾಸಸಾಹಿತ್ಯದ ಓದುಗರೂ ಮೂಲ ವ್ಯಾಸಸಾಹಿತ್ಯವನ್ನು ಅಧ್ಯಯನ ಮಾಡಲೇಬೇಕು ಆಗಲೆ ದಾಸಸಾಹಿತ್ಯದ ಸರಿಯಾದ ಜ್ಞಾನ ಸಾಧ್ಯವೆಂದು ತಿಳಿಸುವ ಅಭಿಪ್ರಾಯ ದಾಸರಿಗಿದೆ ಎಂದು ಊಹಿಸಿದರೆ ತಪ್ಪಾಗಲಾರದು

ಹರಿಕಥಾಮೃತಸಾರದಲ್ಲಿಯೆ ಮೇಲಿನ ವಿರೋಧಕ್ಕೆ ಪರಿಹಾರ ಸಿಗಬಹುದೇ? ಏಕೆಂದರೆ ನಾಂದೀಪದ್ಯದಲ್ಲಿ ನಲವತ್ತು ಕಲ್ಪಗಳ ಶಾಸ್ತ್ರಶ್ರವಣದ ಜೊತೆಗೆ ಹತ್ತು ಕಲ್ಪಗಳ ತಪಸ್ಸನ್ನೂ ಹೇಳಿರುವುದರಿಂದ ಒಟ್ಟು ಸೇರಿಸಿದರೆ ಐವತ್ತು ಕಲ್ಪವೆ ಆಗುತ್ತದೆ ಈಗ ವಿರೋದಕ್ಕೆ ಅವಕಾಶವಿಲ್ಲ ತಾನೆ? ಹೀಗೇ ಪದ್ಮನಾಭದಾಸರ ವ್ಯಾಖ್ಯಾನವೂ ಇದೆ ಆದರೆ ಹೀಗೆ ವಿರೋಧಪರಿಹಾರ ಮಾಡಲು ಹೊರಟರೆ ಸುಧಾವಿರೋಧ ಬರುತ್ತದೆ ಹತ್ತು ಕಲ್ಪಗಳ ತಪಸ್ಸನ್ನು ಹೇಳುವ ಮೂಲ ಪ್ರಮಾಣ—

ದಶಕಲ್ಪಂ ತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ

ಎಂಬ ಅನುವ್ಯಾಖ್ಯಾನವಚನ ಇಲ್ಲಿ ಕಲ್ಪವೆಂದರೆ ದಿನಕಲ್ಪ ಎನ್ನುತ್ತದೆ ಸುಧೆ ಸುಧಾವಾಕ್ಯ ಹೀಗಿದೆ—

ಕಲ್ಪೋ ಬ್ರಹ್ಮಣೋ ದಿವಸಃ

ಆದ್ದರಿಂದ ವಿರೋಧಪರಿಹಾರಕ್ರಮ ವ್ಯಾಸಸಾಹಿತ್ಯದಲ್ಲಿ ಹೀಗಿದೆ

೧ ಶೇಷವಾಕ್ಯಾರ್ಥಚಂದ್ರಿಕೆ ಮತ್ತು ಯಾದುಪತ್ಯಪ್ರಕಾರ ಐವತ್ತು ಕಲ್ಪ ಸಾಧನೆಯನ್ನು ಹೇಳುವ ಅನುವ್ಯಾಖ್ಯಾನಕ್ಕೆ ಭಾಗವತತಾತ್ಪರ್ಯಾನುಗುಣವಾಗಿ ನಲವತ್ತು ಕಲ್ಪವಿವಕ್ಷೆಯನ್ನೆ ಇಟ್ಟುಕೊಳ್ಳಬೇಕು ಕಮಲಾಪತಿದಾಸರು ಈ ಪಕ್ಷವನ್ನು ಸ್ವೀಕರಿಸಿದ್ದಾರೆ

೨ ಭಾಗವತತಾತ್ಪರ್ಯಪ್ರಬೋಧಿನಿಯ ಪ್ರಕಾರ ಭಾಗವತತಾತ್ಪರ್ಯಕ್ಕೇ ಅನುವ್ಯಾಖ್ಯಾನಾನುಸಾರ ಸುಲಭವಾಗಿ ಅರ್ಥ ಹೇಳಲು ಬರುತ್ತದೆ ಅನುವ್ಯಾಖ್ಯಾನದಲ್ಲಿ ಹೇಳಿದುದು ರುದ್ರನಿಗೆ ಐವತ್ತು ಕಲ್ಪ ಪ್ರಾರಬ್ಧಭೋಗವೆಂದು ಬಾಗವತತಾತ್ಪರ್ಯದಲ್ಲಿ ಹೇಳಿದುದು ನಲವತ್ತು ಕಲ್ಪ ರುದ್ರಪದವಿಗಾಗಿ ಸಾಧನೆ ಎಂದು ಎರಡರೊಳಗೆ ವಿರೋ- ಧವೆ ಇಲ್ಲ ಐವತ್ತು ಕಲ್ಪದ ಪ್ರಾರಬ್ಧಭೋಗಕಾಲದಲ್ಲಿಯೆ ನಲವತ್ತು ಕಲ್ಪ ರುದ್ರಪದವಿ- ಸಾಧನೆ ಮಾಡಬಹುದು ಇನ್ನು ಉಳಿದ ಹತ್ತು ಕಲ್ಪದಲ್ಲಿ ರುದ್ರ ಏನು ಮಾಡಿದನೆಂದರೆ ಪ್ರಾರಬ್ಧ ಅನುಭವಿಸಿದ್ದಾನೆ ಅಥವಾ ರುದ್ರ-ಶೇಷಪದವಿಭೋಗಗಳಿಗಾಗಿ ಎರಡು ಕಲ್ಪಗಳು, ಉಳಿದ ಎಂಟು ಕಲ್ಪ ಮೋಕ್ಷದಲ್ಲಿ ಆನಂದಾತಿಶಯಕ್ಕಾಗಿ ವಿಶೇಷ ತಪಸ್ಸಿಗೆ ವಿನಿಯೋಗವಾಗುತ್ತವೆ ಎಂದಿಟ್ಟುಕೊಳ್ಳಬೇಕು

ದಾಸರಾಯರು ಮೇಲೆ ಹೇಳಿದ ಎರಡು ರೀತಿಯ ವಿರೋಧಪರಿಹಾರವನ್ನೂ ಇಟ್ಟುಕೊಂಡಂತಿಲ್ಲ ಅವರು ನಲವತ್ತು ಕಲ್ಪ ಸಾಧನೆ ಮಾತ್ರ ಹೇಳಿದ್ದರೆ ಸರಿಯಾಗುತ್ತಿತ್ತು

ಆದರೆ ನಲವತ್ತರ ಜೊತೆಗೆ ಹತ್ತನ್ನೂ ಹೇಳಿದ್ದಾರೆ ಎರಡೂ ಮಹಾಕಲ್ಪವೆಂದು ಭ್ರಮೆ ಬರುವಂತೆ ವ್ಯತ್ಯಾಸವಿಲ್ಲದೆ ಹೇಳಿದ್ದಾರೆ ಇದೇಕೆ?

ಪ್ರಾಯಃ ಹೀಗೆ ಅಭಿಪ್ರಾಯ ಇರಬಹುದು ಭಾಗವತತಾತ್ಪರ್ಯಪ್ರಬೋಧಿನಿಯಲ್ಲಿ ಇನ್ನೊಂದು ರೀತಿಯಿಂದಲೂ ವಿರೋಧಪರಿಹಾರ ಉಕ್ತವಾಗಿದೆ ಅನುವ್ಯಾಖ್ಯಾನಕ್ಕೆ ಅನುಗುಣವಾಗಿಯೆ ಭಾಗವತತಾತ್ಪರ್ಯವನ್ನು ಕೂಡಿಸಬೇಕು ತಾತ್ಪರ್ಯವಚನ ಹೀಗಿದೆ

ತದ್ವೈವ ಚತ್ವಾರಿಂಶದ್ಭಿಃ ಪದಂ ಶೈವಂ ಚ ಜನ್ಮಭಿಃ ।
ವಿಂಶದ್ಭಿರ್ಯೈಂದ್ರಂ ದಶಭಿರನ್ಯೇಷಾಮಪ್ಯುದೀರಿತಮ್ ॥

'ಶಿವನಿಗೆ ನಲವತ್ತು ಜನ್ಮಗಳ ಸಾಧನೆ ಇಂದ್ರನಿಗೆ ಇಪ್ಪತ್ತು ಬೇರೆ ದೇವತೆಗಳಿಗೆ ಹತ್ತು'

ಇಲ್ಲಿ 'ಶೈವಂ ಚ' ಎಂದು ಚಕಾರವಿದೆ ಅದರ ಬಲದಿಂದ ನಲವತ್ತಕ್ಕೆ ಹತ್ತು ಸೇರಿಸಿ-ಕೊಳ್ಳಬೇಕು ಆಗ ಐವತ್ತು ಕಲ್ಪಸಾಧನೆಯನ್ನು ಹೇಳಿದಂತಾಗುತ್ತದೆ ಅನುವ್ಯಾಖ್ಯಾನಕ್ಕೆ ಸರಿಹೋಗುತ್ತದೆ

ದಾಸರಾಯರಿಗೆ ಇದು ಸ್ವಲ್ಪ ಕ್ಲಿಷ್ಟ ಕಲ್ಪನೆಯೆನಿಸಿರಬೇಕು ಏಕೆಂದರೆ ಭಾಗವತ-ತಾತ್ಪರ್ಯದಲ್ಲಿ ಐವತ್ತು ಎನ್ನದೆ ನಲವತ್ತೆಂದು ಏಕೆ ಹೇಳಿದರು? 'ನಲವತ್ತು' 'ಇಪ್ಪತ್ತು' 'ಹತ್ತು' ಈ ಕ್ರಮದಿಂದ ಕಲ್ಪಸಾಧನೆಗಳನ್ನು ಹೇಳಿದ್ದಾರೆ ನಲವತ್ತರೊಡನೆ ಸೇರಿಸು-ವುದಾದರೆ ಇಪ್ಪತ್ತನ್ನು ಸೇರಿಸಬೇಕಿತ್ತು ಅದನ್ನು ಬಿಟ್ಟು ದೂರದ ಹತ್ತನ್ನು ಸೇರಿಸುವುದು ಕ್ಲಿಷ್ಟವೆನಿಸುತ್ತದೆ

ದಾಸರಾಯರು ಬೇರೆಯೆ ಒಂದು ಸುಲಭವಾದ ಮಾರ್ಗವನ್ನು ನಮಗೆ ತೋರಿಸು-ತ್ತಿದ್ದಾರೆ—

ದಶಕಲ್ಪಂ ತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ

ಎಂಬ ಅನುವ್ಯಾಖ್ಯಾನವಚನವನ್ನು ರುದ್ರಪದಪ್ರಾಪ್ತ್ಯನಂತರದ ತಪಸ್ಸನ್ನುವ ವಿವಕ್ಷೆಯಲ್ಲಿ ದಿನಕಲ್ಪಪರವಾಗಿ ಸುಧಾಗ್ರಂಥ ವ್ಯಾಖ್ಯಾನಿಸಿರುವುದು ಸರಿಯೆ ರುದ್ರಪದಪ್ರಾಪ್ತಿಗೆ ಪೂರ್ವದ ತಪಸ್ಸೆನ್ನುವ ವಿವಕ್ಷೆಯಲ್ಲಿ ಮಹಾಕಲ್ಪವೆಂದೂ ಗ್ರಹಿಸಬಹುದು ಭಾಗವತ-ತಾತ್ಪರ್ಯವಚನದ ಚಕಾರದಿಂದ ಈ ಹತ್ತು ಮಹಾಕಲ್ಪವನ್ನು ನಲವತ್ತು ಮಹಾಕಲ್ಪ-ದೊಂದಿಗೆ ಸೇರಿಸಿ ಐವತ್ತು ಮಹಾಕಲ್ಪಸಾಧನ ಇಟ್ಟುಕೊಳ್ಳಬಹುದು ಈ ಪಕ್ಷದಲ್ಲಿ ನಲವತ್ತು ಕಲ್ಪಶ್ರವಣಾದಿ, ಹತ್ತು ಕಾಯಕ್ಲೇಶರೂಪವಾದ ತಪಸ್ಸೆಂದು ಎರಡನ್ನು ಬೇರೆಯಾಗಿ ಹೇಳಿದೆ ಈ ಅಭಿಪ್ರಾಯದಿಂದಲೆ 'ಕೃತ್ತಿವಾಸನೆ ಹಿಂದೆ ನೀ' ಎನ್ನುವ ಪದ್ಯದಲ್ಲಿ ನಲವತ್ತು ಕಲ್ಪದ ಜೊತೆಗೆ ಹತ್ತು ಕಲ್ಪವನ್ನೂ ಏನೂ ವ್ಯತ್ಯಾಸವಿಲ್ಲದೆ ದಾಸರಾಯರು ಹೇಳಿದ್ದಾರೆ

ಈ ಹತ್ತು ಕಲ್ಪಗಳಲ್ಲಿ ಎಂಟು ಕಲ್ಪ ಮಾತ್ರ ಅಪರೋಕ್ಷಾನಂತರದ ತಪಸ್ಸು ಎರಡು ಕಲ್ಪ ಅಪರೋಕ್ಷಕ್ಕಿಂತ ಪೂರ್ವದಲ್ಲಿ ರುದ್ರಪದವಿಗಾಗಿ ಮಾಡಿದ ಸಾಧನೆ ಎಂದು ಗ್ರಹಿಸಿದರೆ ರುದ್ರ-ಶೇಷ ಪದವಿಗಳ ಭೋಗಕ್ಕೆ ಎರಡು ಕಲ್ಪ ಕಾಲಾವಕಾಶ ಸಿಗುತ್ತದೆ

ಇದು ಒಂದು ಹೊಸ ವಿರೋಧಪರಿಹಾರಮಾರ್ಗ ಸುಧಾ ಓದಿದವರೂ ಪದ ಓದಬೇಕು

ರುದ್ರಪದವಿಪ್ರಾಪ್ತಿಗೆ ಮೊದಲೇ, ಅವರೋಕ್ಷಕ್ಕಿಂತ ಪೂರ್ವದಲ್ಲಿಯೆ ಉಗ್ರತವನು ಸಾಧನ ಮಾಡಿದ್ದರ ವಿವರ ಕಲ್ಪಸಾಧನಸಂಧಿಯಲ್ಲಿ ಹೀಗೆ ಉಕ್ತವಾಗಿದೆ

ಪಾದನ್ಯೂನ ಶತಾಬ್ದ ಪರ್ಯಂ-
ತೋದಿ ಉಗ್ರತಪಾಹ್ವಯದಿ ಲವ-
ಣೋದಧಿಯೊಳಗೆ ಕಲ್ಪದಶ ತಪವಿದ್ದನಂತರದಿ ।
ಸಾಧಿಸಿದ ಮಹದೇವ ಪದವಾ-
ರೈದು ನವ ಕಲ್ಪಾವಸಾನಕೆ
ಐದುವನು ತಾ ಶೇಷಪದವನು ಪಾರ್ವತೀಸಹಿತ ॥ ೪೨ ॥

ಇಲ್ಲಿ 'ಪಾದನ್ಯೂನಶತಾಬ್ದ' ಎಂದರೆ ಎಪ್ಪತ್ತೈದು ಬ್ರಹ್ಮವರ್ಷಗಳು ಅಷ್ಟುಕಾಲ ಉಗ್ರತಪ ಶಾಸ್ತ್ರಶ್ರವಣ ಮಾಡಿದ್ದಾನೆ ಲವಣಸಮುದ್ರದಲ್ಲಿ ಹತ್ತು ಕಲ್ಪಕಾಲ ತಪಸ್ಸು ಮಾಡಿದ್ದಾನೆ 'ಆರೈದು ನವ' ಅಂದರೆ ತೊಂಬತ್ತೊಂಬತ್ತು ಕಲ್ಪದ ಕೊನೆಯಲ್ಲಿ ಶೇಷಪದವಿ ಹೊಂದು-ತ್ತಾನೆ

ಇಲ್ಲಿ ಹೇಳಿದ ಹತ್ತುಕಲ್ಪ ಹಿಂದಿನಂತೆ ಮಹಾಕಲ್ಪವಲ್ಲ ದಿನಕಲ್ಪ ವಿವಕ್ಷಿತ ಇಲ್ಲದಿದ್ದರೆ ಪುನರುಕ್ತಿಯಾದೀತು ಎರಡು ಬಾರಿ ಹತ್ತು ಕಲ್ಪವನ್ನು ಹೇಳಿದ್ದರಿಂದಲೆ ಎರಡು ಬೇರೆ ಬೇರೆ ಅರ್ಥಗಳು ವಿವಕ್ಷಿತವೆಂದು ಊಹಿಸಬಹುದು

ಹತ್ತು ದಿನಕಲ್ಪದ ತಪಸ್ಸು ರುದ್ರಪದವಿ ಪಡೆದ ಮೇಲೆ ಮಾಡಿದ್ದೆಂದು ಸುಧಾಟಿಪ್ಪಣಿ-ಗಳು ಹೇಳುತ್ತಿವೆ ದಾಸರು ಇದಕ್ಕೆ ವ್ಯತಿರಿಕ್ತವಾಗಿ 'ಕಲ್ಪದಶ ತಪವಿದ್ದನಂತರದಿ ಸಾಧಿಸಿದ ಮಹದೇವ ಪದವ' ಎಂದಿದ್ದಾರೆ ಇದು ಸರಿಯಲ್ಲ ಪದಪ್ರಾಪ್ತಿಗಿಂತ ಹಿಂದಿನ ತಪಸ್ಸಾಗಿ-ದ್ದರೆ ಹತ್ತು ಕಲ್ಪವನ್ನು ಮಹಾಕಲ್ಪವೆಂದೆ ಸ್ವೀಕರಿಸಬಹುದಾಗಿತ್ತು ದಿನಕಲ್ಪವೆನ್ನಬೇಕಾಗಿರ-ಲಿಲ್ಲ ರುದ್ರಪದವಿ ಬಂದ ಮೇಲೆ ಹತ್ತು ಮಹಾಕಲ್ಪಕಾಲ ರುದ್ರನಿರುವುದಿಲ್ಲವಾದ್ದರಿಂದ ಸುಧಾಕಾರರು ದಿನಕಲ್ಪವೆಂದು ಸ್ವೀಕರಿಸಿದ್ದಾರೆ ತಾನೆ?

ಈ ಸಮಸ್ಯೆಯ ಪರಿಹಾರಕ್ಕೆ 'ಮಹದೇವಪದವ' ಎಂಬಲ್ಲಿ 'ಮಹದೇವ' 'ಪದವ' ಎಂದು ಬಿಡಿಸಿ ಓದಬೇಕು 'ಮಹದೇವ ಉಗ್ರತಪಾಹ್ವಯದಿ ಪಾದನ್ಯೂನಶತಾಬ್ದ ಪರ್ಯಂತೋದಿ, ರುದ್ರಪದವಿಯಲ್ಲಿ ಲವಣೋದಧಿಯೊಳಗೆ ಕಲ್ಪದಶ ತಪವಿದ್ದು ಅನಂತರದಿ ಪದವ ಸಾಧಿಸಿದ ಯಾವ ಪದವ? ಆರೈದುನವ ಕಲ್ಪಾವಸಾನಕೆ ಐದುವ ತಾ ಶೇಷಪದವ' ಎಂದು ಅನ್ವಯಿಸಿಕೊಳ್ಳಬೇಕು

'ಆರೈದು ನವ' ಎಂದರ ಆರು ಮತ್ತು ಐದು ಸೇರಿ ಹನ್ನೊಂದು ಅವು ಒಂಬತ್ತು ಬಾರಿ ಅಂದರೆ ತೊಂಬತ್ತೊಂಬತ್ತುಕಲ್ಪಗಳು ಕಳದೊಡನೆ ಒಂದು ಕಲ್ಪದಲ್ಲಿಶೇಷಪದವಿ ಒಟ್ಟು ನೂರು ಕಲ್ಪಸಾಧನೆ ಪ್ರಕಾಶಸಂಹಿತೆ ಹೇಳುತ್ತದೆ—

ದ್ವಿಪಂಚಾಶತ್‌ಕಲ್ಪಮಿತಾಃ ಶೇಷಾದ್ಯಾಸ್ತು ಸಭಾರ್ಯಕಾಃ

'ದ್ವಿಪಂಚಾಶತ್' ಎರಡು ಐವತ್ತು ಅಂದರೆ ನೂರು ಕಲ್ಪ ಶೇಷಗರುಡರ ಮತ್ತು ಅವರ ಪತ್ನಿಯರ ಸಾಧನೆ ಈ ನೂರರಲ್ಲಿ ಐವತ್ತು ಅಪರೋಕ್ಷಜ್ಞಾನಲಾಭಕ್ಕಾಗಿ ಉಳಿದ ಐವತ್ತು ಪ್ರಾರಬ್ಧಭೋಗಕ್ಕಾಗಿ ಅಪರೋಕ್ಷಸಾಧನೆಯ ಕಲ್ಪಗಳಲ್ಲಿ ಮೊದಲನೆಯ ಕಲ್ಪದ ನೂರು ವರ್ಷಗಳಲ್ಲಿ ಪ್ರಾರಂಭದಿಂದ ಎಪ್ಪತ್ತೈದು ವರ್ಷ ಶ್ರವಣಕಾಲ ಮುಂದಿನ ಇಪ್ಪತ್ತೈದು ವರ್ಷ ಮನನ ನಿದಿಧ್ಯಾಸನ ಕಾಲವೆಂದು ಇಟ್ಟುಕೊಳ್ಳಬೇಕು ಹಾಗೇ ಅನುವ್ಯಾಖ್ಯಾನ ಹೇಳುತ್ತಿದೆ—

ತತ್ತ್ರಿಭಾಗಮುಪಾಸಾಂ ಚ ಚಕ್ರೇ ಸಂಭೃತಮಾನಸಃ

ಇದನ್ನು ಹರಿಕಥಾಮೃತಸಾರ 'ಆರೈದು ನವ ಕಲ್ಪಾವಸಾನಕೆ' ಎಂಬ ಮಾತಿನಲ್ಲಿ ಅನು-ವ್ಯಾಖ್ಯಾನ ಸುಧೆಗಳ ಮೇಲೆ ಬರಬಹುದಾದ ಒಂದು ಸಂದೇಹಕ್ಕೆ ಪರಿಹಾರ ಸಿಗುತ್ತದೆ ಅನುವ್ಯಾಖ್ಯಾನ ಹೀಗೆ ಹೇಳುತ್ತದೆ—

ಲಿಂಗಾಲ್ಲಾತವ್ಯತಃ ಪೂರ್ವಂ ಋಜೋಃ ಬ್ರಹ್ಮತ್ವತಃ ಶತಾತ್ ।
ಶುಶ್ರಾವೋಗ್ರತಪಾ ನಾಮ ಯೋಗ್ಯೋ ರುದ್ರಪದಸ್ಯ ಯಃ ॥
ಸಾರ್ಧಂ ಪರಾರ್ಧಂ ವಿಷ್ಣೋಸ್ತು ಗುಣಾನ್ ಭಕ್ತ್ಯಾ ಸದೋದ್ಯತಃ ।
ತತ್ತ್ರಿಭಾಗಮುಪಾಸಾಂ ಚ ಚಕ್ರೇ ಸಂಭೃತಮಾನಸಃ ॥

ಇಲ್ಲಿ ಹೇಳುವಂತ 'ತೊಂಬತ್ತೊಂಬತ್ತು ಮಹಾಕಲ್ಪಗಳಾದ ಬಳಿಕ ಬ್ರಹ್ಮಪದವಿಗೆ ಬರುವ ಋಜುಯೋಗಿ ಲಾತವ್ಯ ಅವನಲ್ಲಿ ಉಗ್ರತಪನೆಂಬ ರುದ್ರಪದಯೋಗ್ಯನಾದ ಯೋಗಿ ತೊಂಬತ್ತೊಂಬತ್ತು ಮಹಾಕಲ್ಪಗಳಿಗಿಂತ ಹಿಂದಿನ ಒಂದು ಕಲ್ಪದಲ್ಲಿ ಪ್ರಾರಂಭದಿಂದ ಎಪ್ಪತ್ತೈದು ಬ್ರಹ್ಮವರ್ಷಗಳ ಕಾಲ ಶಾಸ್ತ್ರಶ್ರವಣ ಮಾಡಿದ ಅನಂತರದ ಇಪ್ಪತ್ತೈದು ಬ್ರಹ್ಮ-ವರ್ಷಕಾಲ ಮನನನಿದಿಧ್ಯಾಸನ ಮಾಡಿ ಸಾಕ್ಷಾತ್ಕಾರ ಪಡೆದ

ಮುಂದೆ ಪ್ರಾರಬ್ಧಕಾಲ ಐವತ್ತು ಮಹಾಕಲ್ಪವೆಂದೂ ಅನುವ್ಯಾಖ್ಯಾನವೆ ಹೇಳುತ್ತದೆ

ಹಾಗಾದರೆ ಜ್ಞಾನಾರ್ಥ ಮತ್ತು ಜ್ಞಾನೋತ್ತರ ಸಾದನೆಗಳು ಒಟ್ಟು ಐವತ್ತೊಂದು ಮಹಾಕಲ್ಪಗಳು ಬಳಿಕ ರುದ್ರ ಮುಕ್ತನಾಗಿ ಹೋದನೆಂದರೆ ಈಗಿನ ಕಲ್ಪದಲ್ಲಿ ರುದ್ರನೂ ಶೇಷನೂ ಯಾರು?

ತೊಂಬತ್ತೊಂಬತ್ತನೆ ಮತ್ತು ನೂರನೆ ಮಹಾಕಲ್ಪದವರೆಗೂ ಉಗ್ರತಪ ಕಾಯುವನೆ? ಏಕೆ ಕಾಯುತ್ತಾನೆ?

ಈ ಪ್ರಶ್ನೆಯನ್ನು ಸುಧೆಯಲ್ಲಾಗಲಿ ಅದರ ಟಿಪ್ಪಣಿಗಳಲ್ಲಾಗಲಿ ಎತ್ತಿಕೊಂಡೇ ಇಲ್ಲ

ವಸ್ತುತಃ ಹರಿಕಥಾಮೃತಸಾರ ಹೇಳುವಂತೆ 'ಆರೈದು ನವ' ತೊಂಬತ್ತೊಂಬತ್ತು ಕಲ್ಪದ ಕೊನೆಯಲ್ಲಿ ರುದ್ರನಿಗೆ ಶೇಷಪದವಿ ಅದರಿಂದ ಶೇಷನಿಗೆ ಒಟ್ಟು ನೂರು ಕಲ್ಪ ಸಾಧನೆ ಎಂದಂತಾಯಿತು ಐವತ್ತು ಕಲ್ಪ ಜ್ಞಾನೋತ್ತರ ಎಂದಮೇಲೆ ಐವತ್ತು ಕಲ್ಪ ಜ್ಞಾನಾರ್ಥ ಎಂದು ಬೇರೆ ಹೇಳಬೇಕಾಗಿಲ್ಲ ಪ್ರಕಾಶಸಂಹಿತೆ ಒಂದು ನಿಯಮವನ್ನು ಹೇಳುತ್ತದೆ

> ಪ್ರೋಕ್ತೈಃ ಕಲ್ಪೈರ್ವಿಮುಚ್ಯಂತೇ ತಾವತ್ಕಲ್ಪೈಸ್ತು ಸಾಧನಮ್ ।
> ತತ್ಪೂರ್ವಮಪರೋಕ್ಷಸ್ಯ ಕರ್ತವ್ಯಮಿತಿ ನಿಶ್ಚಯಃ ॥

'ಜ್ಞಾನೋತ್ತರ ಪ್ರಾರಬ್ಧ ಎಷ್ಟು ಕಾಲ ಇರುವುದೋ ಅಷ್ಟೇ ಕಾಲ ಜ್ಞಾನಾರ್ಥ ಸಾಧನೆಯನ್ನು ಮಾಡಬೇಕು'

ಆದ್ದರಿಂದ ತೊಂಬತ್ತೊಂಬತ್ತು ಕಲ್ಪಗಳಿಗಿಂತ ಹಿಂದಿನ ಕಲ್ಪದಲ್ಲಿ ಶ್ರವಣ ಪ್ರಾರಂಭಿಸಿದರೂ ಐವತ್ತು ಕಲ್ಪ ಜ್ಞಾನಾರ್ಥ ಸಾಧನೆ ಮಾಡಿದ ಬಳಿಕವೆ ಅಪರೋಕ್ಷವಾಗಿದೆ ಮುಂದೆ ಐವತ್ತು ಕಲ್ಪ ಪ್ರಾರಬ್ಧವಿರುವುದರಿಂದ ಯಾವ ಸಮಸ್ಯೆಯೂ ಇಲ್ಲ ನೂರನೆ ಕಲ್ಪದ ತನಕವೂ ಕಾಯಲೇಬೇಕು ಅನಂತರವೇ ಮುಕ್ತಿ ಕೆಲವು ವ್ಯಾಖ್ಯಾನಕಾರರು ನಲವತ್ತು ಜ್ಞಾನಾರ್ಥ ತಪಸ್ಸು ನಲವತ್ತು ಜ್ಞಾನೋತ್ತರ ಹೀಗೆ ಒಟ್ಟು ಎಂಬತ್ತು ಕಲ್ಪಸಾಧನೆ ಎಂದಿದ್ದಾರೆ ಇದು ಸಮರ್ಥನೀಯವಾಗಲಾರದು

ಹರಿಕಥಾಮೃತಸಾರದಲ್ಲಿ ವಾಮನಪುರಾಣದ ಆಧಾರದಿಂದ ಲಾತವ್ಯನೆಂದರ ಮುಂದಿನ ಕಲ್ಪದಲ್ಲಿಯೆ ನೇರವಾಗಿ ವಾಯುಪದವಿಗೆ ಬರುವ ತೊಂಬತ್ತೆಂಟನೆಯ ಋಜುಯೋಗಿ ಎನ್ನಲಾಗಿದೆ ಅನುವ್ಯಾಖ್ಯಾನದಲ್ಲಿ ಹಿಂದೆ ಹೇಳಿದಂತೆ ಈ ಕಲ್ಪಕ್ಕಿಂತ ಹಿಂದಿನ ನೂರನೇ ಕಲ್ಪದಲ್ಲಿರುವ ಮೊದಲನೆಯ ಋಜುವೆ ಲಾತವ್ಯ ಎಂದಿದೆ ಈ ವಿರೋಧಕ್ಕೆ ಪರಿಹಾರ ಹೇಗೆ? ಈ ಶಂಕೆಯನ್ನೂ ಯಾವ ಸುಧಾವ್ಯಾಖ್ಯಾನಕಾರರಾಗಲಿ ಹರಿಕಥಾಮೃತಸಾರವ್ಯಾಖ್ಯಾನಕಾರರಾಗಲಿ ಎತ್ತಿಕೊಂಡಿಲ್ಲ

ಇದಕ್ಕೆ ಸಮಾಧಾನ—ಅನುವ್ಯಾಖ್ಯಾನದಲ್ಲಿ 'ಲಾತವ್ಯನೆಂಬ ಋಜು' ಎಂದರೆ ಲಾತವ್ಯಪದವಿಗೆ ಬರಲಿರುವ ಋಜು, ಈಗಿನ ವಾಯುದೇವ ಆತ ತೊಂಬತ್ತೊಂಬತ್ತು ಕಲ್ಪಗಳಿಗಿಂತ ಹಿಂದಿನ ಕಲ್ಪದಲ್ಲಿ 'ಕಲ್ಕಿ' ಎನಿಸಿದ್ದಾಗಲೂ ಲಾತವ್ಯಪದಾರ್ಹನಾಗಿದ್ದು ಲಾತವ್ಯನೆಂದು ಕರೆಸಿಕೊಳ್ಳುತ್ತಿದ್ದ ಅವನ ಬಳಿ ಉಗ್ರತಪ ಶ್ರವಣ ಮಾಡಿದ ಇದನ್ನು ದಾಸರಾಯರು 'ಸಮೀರನಲಿ ಶಿಷ್ಯತ್ವವಹಿಸಿ' ಎಂಬಲ್ಲಿ ಸೂಚಿಸಿದ್ದಾರೆ ಏಕೆಂದರೆ 'ಸಮೀರ' ಎಂದರೆ ಸಮೀರಪದಾರ್ಹನಾದ ಋಜುವೆಂದೇ ಅರ್ಥ ಸಮೀರನೆ ನಲವತ್ತು ಕಲ್ಪ ಇರುವುದಿಲ್ಲ ತಾನೆ? ಹಾಗೇ ಲಾತವ್ಯನೆಂದರೂ ಲಾತವ್ಯಪದಾರ್ಹನಾದ ಕಲ್ಕಿ ಎಂಬ ಋಜುಯೋಗಿ ಎಂದು ಅಭಿಪ್ರಾಯ

ಇದಕ್ಕಿಂತಲೂ ಸುಲಭವಾದ ಇನ್ನೊಂದು ಸಮಾಧಾನ — ಒಂದರಿಂದ ತೊಂಬ-ತ್ತೆಂಟನೆ ಋಜುಯೋಗಿಯವರೆಗೆ ಎಲ್ಲರಿಗೂ ಅವರವರ ವಿಶೇಷನಾಮಗಳ ಜೊತೆಗೆ ಸಾಮಾನ್ಯವಾಗಿ 'ಲಾತವ್ಯ' ಎಂದೂ ಒಂದು ಹೆಸರುಂಟು ಅನುವ್ಯಾಖ್ಯಾನಕ್ಕೆ ಇದು ಸಂಮತ

ಲಿಂಗಾಲ್ಲಾತವ್ಯತಃ ಪೂರ್ವಂ

ಎಂಬಲ್ಲಿ 'ಲಿಂಗದಿಂದ ಲಾತವ್ಯ' ಎನ್ನುತ್ತ 'ಲಾತವ್ಯ'ನಾಮ ಕೇವಲ ರೂಢನಾಮವಲ್ಲ ಅನ್ವರ್ಥಕವಾದ ನಾಮ ಎಂದು ಸೂಚಿಸುತ್ತಿದೆ ಸುಧೆಯಲ್ಲಿಯೂ 'ಲಾತವ್ಯ' ಎಂದರೆ ಗುರುಗಳೆಂದು ಸ್ವೀಕಾರಾರ್ಹ, ಉಪಾಸನೆಗೆ ಯೋಗ್ಯ ಎಂದು ಅರ್ಥ ಸ್ಪಷ್ಟ ಹೇಳಿದೆ 'ಲಿಂಗಾತ್' ಎಂಬ ಶಬ್ದಕ್ಕೆ ವ್ಯಾಖ್ಯಾನ ಮಾಡಿಲ್ಲ ಟಿಪ್ಪಣಿಗಳೂ ಏನೂ ಹೇಳುವುದಿಲ್ಲ ಶ್ರೀವಾದಿರಾಜರು ತಮ್ಮ ಗುರ್ವರ್ಥದೀಪಿಕೆಯಲ್ಲಿ 'ಲಿಂಗದಿಂದ ಎಂದರೆ ವಿಶೇಷಾಪ-ರೋಕ್ಷಪಡೆದು ವಿಶೇಷ ತತ್ತ್ವಜ್ಞಾನಿಗಳಾಗಿರುವ ಕಾರಣದಿಂದ ಗುರುಗಳೆಂದು ಉಪಾಸನೆಗೆ ಯೋಗ್ಯ' ಎಂದು ವ್ಯಾಖ್ಯಾನಿಸಿದ್ದಾರೆ ಒಂದರಿಂದ ತೊಂಬತ್ತೆಂಟರವರೆಗಿನ ಎಲ್ಲ ಋಜು-ಗಳೂ ವಿಶೇಷ ತತ್ತ್ವಜ್ಞಾನಿಗಳಾದ್ದರಿಂದ ಲಾತವ್ಯರೆನಿಸಿದ್ದಾರೆ ಎಂದರ್ಥ ವಾಯುಬ್ರಹ್ಮರೂ ಈ ಅರ್ಥದಲ್ಲಿ ಲಾತವ್ಯರೆ ಆದರೆ ವಿಶೇಷವಾಗಿ ಅವರು ವಾಯುಬ್ರಹ್ಮನಾಮಗಳಿಂದಲೇ ಪ್ರಸಿದ್ಧರಾಗಿದ್ದಾರೆ ತೊಂಬತ್ತೆಂಟನೆಯವರು ಕೇವಲ ಲಾತವ್ಯನಾಮದಿಂದಲೇ ಪ್ರಸಿದ್ಧರು ಈ ಅಭಿಪ್ರಾಯದಿಂದ ಉಗ್ರತಪನಿಗೆ ಬಿಂಬೋಪದೇಶ ಮಾಡಿದ ಮೊದಲನಯ ಋಜು-ವಾದ ಕಲ್ಕಿಯನ್ನು ಅನುವ್ಯಾಖ್ಯಾನ ಲಾತವ್ಯ ಎಂಬ ಹೆಸರಿಂದ ಕರೆದಿದೆ ಹರಿಕಥಾಮೃತ-ಸಾರ ತೊಂಬತ್ತೆಂಟನೆಯ ಋಜುಯೋಗಿಯನ್ನು ಲಾತವ್ಯನೆಂದು ಕರೆದಿದೆ ಪರಸ್ಪರ ವಿರೋಧವೆ ಇಲ್ಲ ಎಂದಿಟ್ಟುಕೊಳ್ಳಬೇಕು

ಹೀಗೆ ಲಾತವ್ಯರೆಂದರೆ ಮೊದಲನೆಯ ಋಜುವೇ? ತೊಂಬತ್ತೆಂಟನೆಯವರ? ಎನ್ನುವ ಬಗ್ಗೆ ವಿವಾದ ಬಾರದಂತೆ ವಾದಿರಾಜರು ನೀಡಿದ ವಿವರಣೆಯನ್ನು ಗಮನದಲ್ಲಿ-ಟ್ಟುಕೊಂಡು 'ವಾದಿರಾಜರ ಕೋಶಕೊಪ್ಪುವ' ಹರಿಕಥಾಮೃತಸಾರ ವಾಮನಪುರಾಣೋಕ್ತ ಋಜುನಾಮಗಳನ್ನು ಕ್ರಮವಾಗಿ ಸಮರ್ಪಕವಾಗಿ ಸುಂದರವಾಗಿ ಸಂಗ್ರಹಿಸಿಕೊಟ್ಟಿದೆ ವಿಜಯದಾಸರಿಗೂ ಇದು ಸಮ್ಮತ ಅವರ ಸುಳಾದಿ ಹೇಳುತ್ತದೆ—

'ತೊಂಬತ್ತೆಂಟು ಮಂದಿ ಲಾತವ್ಯರು ಕಾಣೋ'
'ಪದುಮಜಾಂಡಾವರಣ ಪುಟ್ಟಿದ ಪೂರ್ವದಲ್ಲಿ
ಸದಮಲವಾಗಿದ್ದ ಲಾತವ್ಯ ಜನರಲ್ಲ
ಉದುಭವಿಸಿದರಂದು ಸೂಕ್ಷ್ಮಶರೀರದಲಿ'

ಹೀಗೆ ಅನುವ್ಯಾಖ್ಯಾನಸುಧೆಗಳ ಮೇಲಿನ ಪ್ರೌಢವಿಮರ್ಶೆಮಾರ್ಗದರ್ಶನಗಳೂ ವಿದ್ವಾಂಸರಿಗೆ ದಾಸರಾಯರ ಕೃತಿಯಲ್ಲಿ ಕಂಡುಬರುತ್ತಿರುವುದು ಗಮನಾರ್ಹ

**ಪಾಕಶಾಸನಮುಖ್ಯ ಸಕಲ ದಿ-**
**ವೌಕಸರಿಗಭಿನಮಿಪೆ ಋಷಿಗಳಿ-**
**ಗೇಕಚಿತ್ತದಿ ಪಿತೃಗಳಿಗೆ ಗಂಧರ್ವಕ್ಷಿತಿಪರಿಗೆ ।**
**ಆ ಕಮಲನಾಭಾದಿ ಯತಿಗಳ-**
**ನೀಕಕಾನಮಿಸುವೆನು ಬಿಡದೆ ರ-**
**ಮಾಕಳತ್ರನ ದಾಸವರ್ಗಕೆ ನಮಿಪೆನನವರತ** ॥ ೧೨ ॥

ಇಂದ್ರಾದಿ ಸಕಲ ದೇವತೆಗಳಿಗೆ ಋಷಿಗಳಿಗೆ ಪಿತೃಗಳಿಗೆ ಗಂಧರ್ವರಿಗೆ ಚಕ್ರವರ್ತಿ-ಗಳಿಗೆ ಏಕಚಿತ್ತದಿಂದ ನಮಿಸುತ್ತೇನೆ ಆ ಪದ್ಮನಾಭಾದಿ ಯತಿಗಳ ಪರಂಪರೆಗೂ ನಮಿಸು-ವೆನು ರಮಾರಮಣನ ದಾಸಸಮೂಹಕ್ಕೆ ಬಿಡದೆ ಸದಾ ನಮಿಸುವೆನು

ತಾರತಮ್ಯಾನುಗುಣವಾಗಿ ರುದ್ರದೇವರ ಪರ್ಯಂತ ದೇವತೆಗಳಿಗೆ ನಮಿಸಿದ ಬಳಿಕ ಈ ಪದ್ಯದಲ್ಲಿ ಇಂದ್ರಾದಿ ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ, ಗಂಧರ್ವರಿಗೂ, ಚಕ್ರವರ್ತಿಗಳಿಗೂ ಕ್ರಮವಾಗಿ ನಮಿಸುತ್ತಾರೆ ದಾಸರು

***ಪಾಕಶಾಸನಮುಖ್ಯ ಸಕಲ ದಿವೌಕಸರಿಗೆ***

ಪಾಕಶಾಸನ ಎಂದರೆ ಪಾಕಾಸುರನನ್ನು ಕೊಂದ ದೇವೇಂದ್ರ ಮಲಯಪರ್ವತದಲ್ಲಿ ಸುಖಭೋಗದಲ್ಲಿ ಮೈಮರೆತು ಮತ್ತರಾಗಿ ದೇವತೆಗಳನ್ನು ದ್ವೇಷಿಸುತ್ತಿದ್ದ ಅನೇಕ ಅಸುರರಲ್ಲಿ ಒಬ್ಬ ಪಾಕ ಅವನನ್ನು ದೇವೇಂದ್ರ ತೀಕ್ಷ್ಣವಾದ ಬಾಣಗಳಿಂದ ಕೊಂದು ಪಾಕಶಾಸನನೆನಿಸಿದನೆಂದು ವಾಮನ ಪುರಾಣ ಹೇಳುತ್ತದೆ ಹೀಗೆ ದೇವದ್ವೇಷಿ ಆಸುರೀ-ಶಕ್ತಿಗಳನ್ನು ನಿಗ್ರಹಿಸುವ ದೇವೇಂದ್ರ ದಿವ್ಯವಾದ ಈ ಗ್ರಂಥರಚನೆಯಲ್ಲಿ ವಿಘ್ನ ತರುವ ದುಷ್ಟಶಕ್ತಿಗಳನ್ನು ಮಣಿಸಲೆಂದು ನಮಿಸುತ್ತಾರೆ ದೇವೇಂದ್ರ ಎಲ್ಲ ದಿವೌಕಸರಿಗೆ ಅಂದರೆ ದೇವತೆಗಳಿಗೆ ಮುಖ್ಯ ದೇವರಾಜ ತಾನೆ ಆತ? ಆದ್ದರಿಂದ ಎಲ್ಲಾ ದೇವತೆಗಳೂ ಅವನಂತೆ ದುಷ್ಟ ಶಕ್ತಿಗಳನ್ನು ನಿಗ್ರಹಿಸುವವರೆ ಅವರಿಗೂ ವಂದಿಸಿ ದಾಸರು ವಿಘ್ನನಿವಾರಣೆಯನ್ನು ಬೇಡುತ್ತಿದ್ದಾರೆ ದೇವತೆಗಳಿಗೆ ವಂದಿಸುತ್ತ ತಮ್ಮ ಕೃತಿ ದಿವ್ಯಕೃತಿ ಎನಿಸಲೆಂದು ಬಯಸುತ್ತಾರೆ

ಇಂದ್ರಾದಿ ಸಕಲ ದೇವತೆಗಳೆಂದರೆ ಅವರಲ್ಲಿ ಇಂದ್ರಾದಿ ತತ್ವ ದೇವತೆಗಳು, ಪರ್ಜ-ನ್ಯಾದಿ ಕಲಾದೇವತೆಗಳು, ಪ್ರಹ್ಲಾದಾದಿ ಕರ್ಮಜ ದೇವತೆಗಳು, ಪಿತೃಗಂದರ್ವಯಕ್ಷರಾಕ್ಷಸಾದಿ ಎಂಟು ಬಗೆಯ ಆಜಾನಜ ದೇವತೆಗಳು ಎಲ್ಲರೂ ಬರುತ್ತಾರೆ ಅವರಲ್ಲಿ ಇಂದ್ರಕಾಮರು ಎಂಟನೆ ಕಕ್ಷೆಯವರು ಮುಂದೆ ಕುಬೇರ, ಗಣಪತಿ, ಅಶ್ವಿನೀದೇವತೆಗಳ ಹದಿನೆಂಟನೆ ಕಕ್ಷೆಯವರಿಗೂ ತತ್ವದೇವತೆಗಳು ಮತ್ತು ಕಲಾದೇವತೆಗಳಿದ್ದಾರೆ ನಾರದಾದಿ ಋಷಿಗಳೂ ಸೋಮಾದಿ ಪಿತೃಗಳೂ ಇದ್ದಾರೆ ಹತ್ತೊಂಬತ್ತನೆ ಕಕ್ಷೆ ಕರ್ಮಜ ದೇವತೆಗಳದು ಇದರಲ್ಲಿಯೆ ವ್ಯಾಪ್ತದರ್ಶಿಗಳಾದ ಸನಕಾದಿ ಎಂಬತ್ತು ಋಷಿಗಳು, ಏಳುಮಂದಿ ಪಿತೃಗಳು, ತುಂಬುರು-ಧೃತರಾಷ್ಟ್ರಾದಿ ಎಂಟು ಮಂದಿ ಗಂಧರ್ವರು, ಕಾರ್ತವೀರ್ಯ ಮುಂತಾದ ನೂರು

ಚಕ್ರವರ್ತಿಗಳೂ ಬರುತ್ತಾರ ಮುಂದೆ ಇಪ್ಪತ್ತೇಳನೆ ಕಕ್ಷೆಯಲ್ಲಿ ಆಜಾನಜ ದೇವತೆ- ಗಳು ಇವರನ್ನು ಅಸಾಖ್ಯಾತ ದೇವತಗಳೆಂದೂ ಉಪದೇವತೆಗಳೆಂದೂ ಕರೆಯುತ್ತಾರೆ ಪಿತೃಗಳು, ಅಸುರರು, ಗಂದರ್ವರು, ಅಪ್ಸರೆಯರು, ಯಕ್ಷರು, ರಾಕ್ಷಸರು, ಚಾರಣರು, ಸಿದ್ಧರು ಎಂದು ಎಂಟು ಬಗೆಯವರು ಈ ದೇವತೆಗಳು ನೂರು ಮಂಟ ಪಿತೃಗಳು, ಮೂ- ವತ್ತು ಅಸುರರು, ನೂರು ಗಂದರ್ವರು ಎಂದು ಮುಂತಾಗಿ ಇಲ್ಲಿ ಸಂಖ್ಯಾನಿಯಮವಿದೆ

ಎಂಟನೇ ಕಕ್ಷೆಯಿಂದ ಈ ಇಪ್ಪತ್ತೇಳನೆ ಕಕ್ಷಯವರೆಗೂ ಎಲ್ಲರೂ ವ್ಯಾಪ್ತೋಪಾಸಕರು ಇವರೆಲ್ಲರಿಗೂ ದೇವತಗಳೆಂದೇ ನಮನ ಸಲ್ಲುತ್ತದೆ

*ಋಷಿಗಳಿಗೆ ಪಿತೃಗಳಿಗೆ ಗಂಧರ್ವಕ್ಷಿತಿಪರಿಗೆ*

ಬಳಿಕ, ನೂರು ಕೋಟಿ ಅಂತರ್ದರ್ಶಿ ಋಷಿಗಳದು ಇಪ್ಪತ್ತೆಂಟನೆ ಕಕ್ಷೆ ಇವರಿಗೆ ನಮನ. ವ್ಯಾಪ್ತೋಪಾಸಕರಾದ ನಾರದ ಸನಕಾದಿ ಋಷಿಗಳಿಗೆ ದೇವತೆಗಳೆಂದು ನಮನ ಸಂದಿರುತ್ತದೆ

ಬಳಿಕ ಇಪ್ಪತ್ತೊಂಬತ್ತನೆ ಕಕ್ಷೆ ಪಿತೃಗಳದು ಓಂದೆ ಹದಿನೆಂಟನ ಕಕ್ಷಯಲ್ಲಿ ಮೂರು ಮಂದಿ, ಹತ್ತೊಂಬತ್ತರಲ್ಲಿ ಏಳು ಮಂದಿ, ಇಪ್ಪತ್ತೇಳರಲ್ಲಿ ನೂರು ಮಂಟ ಪಿತೃಗಳು ಆಗಿ ಹೋಗಿದ್ದಾರೆ. ಉಳಿದ ಪಿತೃಗಳಿಗ ಈಗ ನಮನ

ಗಂಧರ್ವರು ಎರಡು ಬಗೆಯವರು ನೇರವಾಗಿ ದೇವತೆಗಳಿಗ ಅನುಚರರು ದೇವ- ಗಂಧರ್ವರು ಈ ದೇವಗಂದರ್ವರ ಮೂಲಕ ದೇವತೆಗಳಿಂದ ಆಜ್ಞೆ ಪಡಯುವವರು ಮನುಷ್ಯ ಗಂಧರ್ವರು ದೇವಗಂಧರ್ವರಲ್ಲಿ ತುಂಬುರು ಮುಂತಾದ ಎಂಟು ಮಂದಿ ಹತ್ತೊಂಬತ್ತನೆ ಕಕ್ಷಯವರು ನೂರು ಮಂದಿ ಇಪ್ಪತ್ತೇಳನೆ ಕಕ್ಷೆಯವರು ಉಳಿದ ಎಲ್ಲಾ ದೇವಗಂದರ್ವರು ಮೂವತ್ತನೆ ಕಕ್ಷೆಯವರು ಎಲ್ಲಾ ಮನುಷ್ಯಗಂಧರ್ವರೂ ಮೂವ- ತ್ತೊಂದನೆ ಕಕ್ಷೆಯವರು ಈ ಎರಡು ಕಕ್ಷೆಯ ಗಂಧರ್ವರಿಗೆ ಈಗ ನಮನ

ಕ್ಷಿತಿಪರೆಂದರೆ ಚಕ್ರವರ್ತಿಗಳು ವ್ಯಾಪ್ತೋಪಾಸಕರಾದ ನೂರು ಮಂಟ ಕಾರ್ತ- ವೀರ್ಯಾದಿ ರಾಜರನ್ನು ಹೊರತು ಎಲ್ಲ ರಾಜರೂ ಮೂವತ್ತೆರಡನ ಕಕ್ಷಯವರು ಇವರಿಗೆ ಕ್ಷಿತಿಪರೆಂದು ನಮನ ಹೀಗ ಈ ಪದ್ಯದಲ್ಲಿ ಎಂಟನೆ ಕಕ್ಷೆಯಿಂದ ತೊಡಗಿ ಮೂವತ್ತೆರಡನೆ ಕಕ್ಷೆವರೆಗೆ ಎಲ್ಲಾ ವಿಷ್ಣುಭಕ್ತರಿಗೂ ನಮನ ಸಲ್ಲುತ್ತಿದೆ

*ಆಕಮಲನಾಭಾದಿ ಯತಿಗಳನೀಕಕೆ*

ಮೂಲರೂಪದಲ್ಲಿ ಎಲ್ಲಾ ವಿಷ್ಣುಭಕ್ತರಿಗೂ ನಮಿಸಿದ್ದಾಯಿತು ಮುಂದೆ ಅವತಾರ- ರೂಪದಲ್ಲಿಯೂ ನಮನ ಶ್ರೀಮದಾಚಾರ್ಯರ ಸೇವೆಗಾಗಿ ಇವರೆಲ್ಲರೂ ಭೂಮಿಯಲ್ಲಿ ಅವತರಿಸಿ ಯತಿಗಳಾಗಿಯೋ ಹರಿದಾಸರಾಗಿಯೋ ಸೇವೆ ಸಲ್ಲಿಸಿದ್ದಾರೆ ವ್ಯಾಸಸಾಹಿತ್ಯ ದಾಸಸಾಹಿತ್ಯಗಳನ್ನು ಬೆಳೆಸಿ ಪೋಷಿಸಿದ್ದಾರೆ

ಯತಿಗಳೆಂದರೆ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ಆ ಕಮಲನಾಭರು, ಅಂದರೆ ಪದ್ಮನಾಭತೀರ್ಥರು, ಮತ್ತು ಅವರ ಪರಂಪರೆಯಲ್ಲಿ ಬಂದ ಜಯತೀರ್ಥ, ವ್ಯಾಸತೀರ್ಥ ಮುಂತಾದವರು

ಆದರೆ ಇಲ್ಲಿ 'ಆ' ಕಮಲನಾಭರೆಂದುದು ಏಕೆ? 'ಈ' ಕಮಲನಾಭರೆಂದು ಬೇರೆ ಇರುವರೆ? ಕನ್ನಡದ 'ಆ' ಸಂಸ್ಕೃತದ 'ತತ್' ಅಗಬಹುದು 'ತತ್' ಎಂದರೆ ಪ್ರಸಿದ್ಧ ಎಂದು ಅರ್ಥವಿದೆ ಕನ್ನಡದಲ್ಲಿ ಇದು ಕಷ್ಟ, ಆದ್ದರಿಂದ ಇಲ್ಲಿ 'ಆ' ಎಂಬುದು 'ತತ್' ಅಲ್ಲ 'ಆಸೇತುಹಿಮಾಚಲ' ಎಂಬಂತೆ 'ಆ' ಎಂಬುದು ಸಂಸ್ಕೃತದ ಅವ್ಯಯ 'ವರೆಗೆ' ಎಂದ-ರ್ಥ ಕಮಲನಾಭರವರೆಗಿನವರು ಸಾಕ್ಷಾತ್ ಶಿಷ್ಯರು. ಅವರು ಒಂಬತ್ತು ಮಂದಿ ಹೃಷೀ-ಕೇಶತೀರ್ಥರ ಸಂಪ್ರದಾಯಪದ್ಧತಿಯಲ್ಲಿ ಶ್ರೀಮದಾಚಾರ್ಯರು ಶಿಷ್ಯರಿಗೆ ತಮ್ಮ ಕರಾ-ರ್ಚಿತ ವಿಗ್ರಹಗಳನ್ನು ನೀಡುವಲ್ಲಿ ಹೀಗೆ ಒಂದು ಕ್ರಮ ಕಾಣುತ್ತದೆ—

'ಹೃಷೀಕೇಶತೀರ್ಥನೃಸಿಂಹತೀರ್ಥರಿಗೆ ಕ್ರಮವಾಗಿ ಸೀತಾಲಕ್ಷ್ಮಣಸಹಿತ ರಾಮ ಚತುರ್ಭುಜಕಾಲಿಯಮರ್ದನರನ್ನೂ, ಜನಾರ್ದನ ಉಪೇಂದ್ರರಿಗೆ ದ್ವಿಭುಜಕಾಲಿಯ-ಮರ್ದನವಿಟ್ಠಲರನ್ನೂ, ವಾಮನತೀರ್ಥರಿಗೆ ಇನ್ನೊಂದು ವಿಟ್ಠಲಮೂರ್ತಿಯನ್ನೂ, ವಿಷ್ಣು-ತೀರ್ಥರಿಗೆ ವರಾಹನನ್ನೂ, ರಾಮತೀರ್ಥರಿಗೆ ನೃಸಿಂಹನನ್ನೂ ಅಧೋಕ್ಷಜರಿಗೆ ಪುನಃ ವಿಟ್ಠಲನನ್ನೂ ಪದ್ಮನಾಭರಿಗೆ ರಾಮನನ್ನೂ ಶ್ರೀಮದಾಚಾರ್ಯರು ಅನುಗ್ರಹಿಸಿದರು

ಚಕ್ರೇ ಶಿಷ್ಯಾನ್ ನವಾನ್ ನವ

'ಒಂಬತ್ತು ಮಂದಿ ನೂತನ ಶಿಷ್ಯರನ್ನು ಶ್ರೀಮದಾಚಾರ್ಯರು ಸ್ವೀಕರಿಸಿದರು' ಎಂದು ವಾದಿರಾಜರು ಸರಸಭಾರತಿಯಲ್ಲಿ ಹೇಳಿದ್ದಾರೆ

ಆದ್ದರಿಂದ ಹೃಷೀಕೇಶರಿಂದಾರಂಭಿಸಿ ಪದ್ಮನಾಭರವರೆಗಿನವರು ಆಕಮಲನಾಭರು ಅವರಿಗೂ ಅವರ ಪರಂಪರೆಯ ಎಲ್ಲ ಯತಿಗಳ ಅನೀಕಕ್ಕೂ ದಾಸರು ನಮಿಸುತ್ತಾರೆ

ಅಥವಾ

ವಂಶಸ್ಯಾದೀನ್ ಸನಕಾದೀನುಪಾಸೇ  
ದುರ್ವಾಸಸಂ ಪರತೀರ್ಥಾಖ್ಯಭಿಕ್ಷುಮ್ ।  
ಸತ್ಯಪ್ರಜ್ಞಂ ಪ್ರಾಜ್ಞತೀರ್ಥಂ ಮುನೀಂದ್ರಂ  
ಪಶ್ಚಾಚ್ಛಿಷ್ಯಾವಚ್ಯುತಪ್ರೇಕ್ಷಮಧ್ವೌ ॥

ಸನಕಾದಿ ಮುನಿಗಳು, ದುರ್ವಾಸರು, ಪರತೀರ್ಥರು, ಸತ್ಯಪ್ರಜ್ಞರು, ಪ್ರಾಜ್ಞತೀರ್ಥರು, ಅಚ್ಯುತಪ್ರೇಕ್ಷರು, ಮಧ್ವರು, ಸತ್ಯತೀರ್ಥರು, ಜ್ಯೇಷ್ಠಯತಿಗಳು ಅಷ್ಟಮಠಗಳ ಮೂಲ ಪುರುಷರು ಇವರೆಲ್ಲರೂ ಸೇರಿದಂತೆ ಹಂಸನಾಮಕನಾದ ಆ ಕಮಲನಾಭವರಮಾತ್ಮನ ಪರಂಪರೆಯಲ್ಲಿ ಬಂದ ಈ ಕಮಲನಾಭರ ಅಂದರ ಪದ್ಮನಾಭತೀರ್ಥರವರೆಗಿನ ಎಲ್ಲಾ

ಪರಮಹಂಸ ಸಂನ್ಯಾಸಿಗಳನ್ನೂ 'ಆಕಮಲನಾಭ' ರೆಂದು ನಿರ್ದೇಶಿಸಲಾಗಿದೆ ಅವರಿಗಿಂತ ಮುಂದಿನ ಮಧ್ವಮತದ ಎಲ್ಲಾ ಯತಿಗಳನ್ನೂ ಆದಿಪದದಿಂದ ಗ್ರಹಿಸಬೇಕು ಈಗ ಪದ್ಮನಾಭತೀರ್ಥರಿಗಿಂತ ಹಿಂದಿನ ಎಲ್ಲಾ ಯತಿಗಳಿಗೂ 'ಆ' ಶಬ್ದದಿಂದ, ಮುಂದಿನ ಎಲ್ಲಾ ಯತಿಗಳಿಗೂ 'ಆದಿ' ಶಬ್ದದಿಂದ ನಮನ ಸಲ್ಲುತ್ತದೆ

***ರಮಾಕಳತ್ರನ ದಾಸವರ್ಗಕೆ***

ಇಲ್ಲಿ ಯತಿಗಳ ಅನೀಕಕ್ಕೆ ನಮನ ದಾಸರ ವರ್ಗಕ್ಕೆ ನಮನ ಎಂದು ಹೇಳುವಾಗ ಯತಿಗಳು ಯಾರೆಂದರೆ ಆಕಮಲನಾಭಾದಿಗಳು ಎಂದಿದ್ದಾರೆ ದಾಸರು ಯಾರೆಂದು ಹೇಳಿಲ್ಲ ಪುರಂದರಾದಿ ದಾಸರೆನ್ನಬಹುದಿತ್ತು ಆದರೆ ಹಾಗೆ ಹೇಳಿದ್ದರೆ ವ್ಯಾಸಕೂಟ-ದಾಸಕೂಟವೆಂಬ ಭೇದಭಾವನೆಯ ಶಂಕೆಗೆ ಅವಕಾಶವಿರುತ್ತಿತ್ತು ಅದಕ್ಕೆ ದಾಸರು ಉದ್ದೇಶಪೂರ್ವಕವಾಗಿಯೆ ಮೌನ ತಳೆದಿರಬಹುದು

ಅಥವಾ 'ಆಕಮಲನಾಭಾದಿ' ಎಂಬುದು ಯತಿಗಳ ಅನೀಕಕ್ಕೆ ಹೇಗೋ ಹಾಗೆ ದಾಸವರ್ಗಕ್ಕೂ ಅನ್ವಯಿಸುತ್ತದೆ ಆಕಮಲನಾಭಾದಿ ಯತಿಗಳ ಅನೀಕಕಾನಮಿಸುವೆನು ಆಕಮಲನಾಭಾದಿ ರಮಾಕಳತ್ರನ ದಾಸವರ್ಗಕ್ಕೂ ನಮಿಪೆನು ಎಂದು ಎರಡೂ ಕಡೆ ಅನ್ವಯಿಸುವಂತೆ ಮೊದಲಿಗೇ ಹೇಳಿದ್ದಾರೆ ಈಗ 'ಆ ಕಮಲನಾಭಾದಿ' ಎಂಬಲ್ಲಿ ಆದಿ-ಪದದಿಂದ ಯತಿಗಳನ್ನು ಮಾತ್ರವಲ್ಲದೆ ಹರಿದಾಸರನ್ನೂ ಗ್ರಹಿಸಬೇಕು ನರಹರಿತೀರ್ಥರು, ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು ಮುಂತಾದ ಯತಿಗಳೂ ಪುರಂದರಾದಿ ದಾಸರೂ ಎಲ್ಲರೂ ದಾಸವರ್ಗಕ್ಕೇ ಸೇರುತ್ತಾರೆ ಎಲ್ಲರೂ ದಾಸಸಾಹಿತ್ಯಜನಕರು ಅದರಿಂದ ವ್ಯಾಸಕೂಟ-ದಾಸಕೂಟವೆಂಬ ಭೇದಭಾವನೆಗೆ ಅವಕಾಶವಿಲ್ಲ

ಇಲ್ಲಿ ಯತಿಗಳ ಸಮೂಹವನ್ನು 'ಅನೀಕ' ವೆಂದೂ ದಾಸರ ಸಮೂಹವನ್ನು 'ವರ್ಗ' ವೆಂದೂ ಹೇಳುತ್ತ ವಿಲಕ್ಷಣಪದಪ್ರಯೋಗ ಮಾಡಿದುದರಲ್ಲಿ ಒಂದು ವೈಚಿತ್ರ್ಯವಿದೆ ಅನೀಕವೆಂದರೂ ವರ್ಗವೆಂದರೂ ಮೇಲುನೋಟಕ್ಕೆ ಸಮೂಹವೆಂದೇ ಅರ್ಥ ವಸ್ತುತಃ 'ಅನೀಕ' ವೆಂದರೆ ಬರಿ ಸಮೂಹವಲ್ಲ ಶಿಸ್ತಿನ ಯೋಧರ ಸೈನ್ಯ, ಪರವಾದಿಗಳೆಂಬ ಶತ್ರುಗಳನ್ನು ವಾದಯುದ್ಧದಲ್ಲಿ ನಿಗ್ರಹಿಸಿ ಶ್ರವಣಮನನಾದಿ ಸಾಧನೆಯಲ್ಲಿ ನೇತೃತ್ವ ವಹಿಸುವ ಆಧ್ಯಾತ್ಮಿಕ ಪಡೆಯೇ ಯತಿಗಳ ಪರಂಪರೆ ಅವರ ವ್ಯಾಸಸಾಹಿತ್ಯ ವಿಶೇಷವಾಗಿ ಪರವಾದಿನಿಗ್ರಹ ಮಾಡಿ ಸತ್ಸಿದ್ಧಾಂತವನ್ನು ಸುರಕ್ಷಿತವಾಗಿಡುತ್ತದೆ ಶ್ರವಣಮನನಾದಿ ಸಾಧನೆಯನ್ನು ಉಪದೇಶಿಸುತ್ತದೆ 'ವರ್ಗ' ವೆಂದರೂ ಬರಿ ಸಮೂಹವಲ್ಲ ಸಜಾತೀಯ ವಸ್ತುಗಳ ಅಥವಾ ವ್ಯಕ್ತಿಗಳ ಸಮೂಹ 'ಬಾಂದವಾ ವಿಷ್ಣುಭಕ್ತಾಶ್ಚ' ಎಂಬಂತೆ ವಿಷ್ಣುಭಕ್ತರೆಲ್ಲ ಪರಸ್ಪರ ಬಂಧುತ್ವದ ಭಾವನೆಯಿಂದ ಒಂದಾಗಿ ಪುರಂದರ, ಕನಕ, ಗಿರಿಯಮ್ಮ ಮುಂತಾದವರಂತೆ ಜಾತಿ, ಲಿಂಗ, ವೈಷಮ್ಯಗಳನ್ನು ಮರೆತು ವಿಷ್ಣುಭಕ್ತಿಯ ಪ್ರಸಾರಕಾರ್ಯ ಮಾಡುವ, ದಾಸಸಾಹಿತ್ಯವನ್ನು ಬೆಳೆಸಿ ಪೋಷಿಸುವ ಹರಿದಾಸರ ಗುಂಪು ದಾಸವರ್ಗ-

ವೆನಿಸಿದೆ ಶ್ರವಣಮನನಾದಿ ಎಲ್ಲಾ ಸಾಧನೆಗಳಿಗೂ ಮೂಲಭೂತವಾದ ಭಕ್ತಿಯ ಪ್ರಚಾರ ಮಾಡುವ ಈ ದಾಸವರ್ಗಕ್ಕೆ ಅನವರತ ನಮಿಸುತ್ತೇನೆ ಎನ್ನುತ್ತಾರೆ ದಾಸರು

ಅಥವಾ ಯತಿಗಳೆಂದರೆ ಮಠಾಧೀಶರು, ಸನ್ಯಾಸಾಶ್ರಮಿಗಳೆಂಬ ವಿವಕ್ಷೆ ಇಲ್ಲ ಗೀತೆಯು ಉಪದೇಶಿಸುವ ಕಾಮ್ಯಕರ್ಮತ್ಯಾಗರೂಪ ಸಂನ್ಯಾಸವನ್ನು ಕೈಗೊಂಡ ಗೃಹಸ್ಥರೂ ಯತಿಗಳೆನಿಸಬಹುದು ಆದ್ದರಿಂದ ಶ್ರೀಮದಾಚಾರ್ಯರ ಶಿಷ್ಯಪರಂಪರೆಯಲ್ಲಿ ಗ್ರಂಥಕಾರರು ಯತಿಗಳಿರಲಿ, ಗೃಹಸ್ಥರೇ ಇರಲಿ, ಗ್ರಂಥವೂ ವ್ಯಾಸಸಾಹಿತ್ಯವಿರಲಿ, ದಾಸ-ಸಾಹಿತ್ಯವೆ ಇರಲಿ, ಎಲ್ಲರಿಗೂ 'ಆಕಮಲನಾಭಾದಿ ಯತಿಗಳಿಗೆ' ಎಂದು ವಂದನೆ ಸಲ್ಲುತ್ತದೆ 'ರಮಾಕಳತ್ರನ ದಾಸವರ್ಗಕೆ' ಎಂದುದು ಈ ವಂದನೆ ಅಂತರ್ಗತವಾದ ಹರಿಗೇ ಎಂಬ ಅಭಿಪ್ರಾಯದಿಂದ 'ಗುಹಾಶಯಾಯ್ಯೆವ ನ ದೇಹಮಾನಿನೇ' ಎಂದು ಭಾಗವತದಲ್ಲಿ ರುದ್ರದೇವರು ಹೇಳುವಂತೆ ಕೇವಲ ಭಕ್ತರಿಗೇ ನಮಸ್ಕಾರ ಮಾಡದೆ ಅಂತರ್ಗತನಾದ ಭಗವಂತನಿಗೆ ಮುಖ್ಯವಾಗಿ ನಮಸ್ಕಾರ ಮಾಡಬೇಕು ಸ್ವೋತ್ತಮನಾಗಿದ್ದಲ್ಲಿ ಭಕ್ತನಿಗೂ ನಮಸ್ಕರಿಸಬೇಕು ಸಮನೋ ಕಡಿಮೆಯವನೋ ಆಗಿದ್ದಲ್ಲಿ ಆ ಭಕ್ತನಿಗೆ ನಮಸ್ಕಾರವಿಲ್ಲ ಅಂತರ್ಗತನಿಗೇ ನಮಸ್ಕಾರ ಈ ಅಂಶವನ್ನು ತಿಳಿಸುವುದಕ್ಕಾಗಿ 'ರಮಾಕಳತ್ರನ ದಾಸ' ರಿಗೆ ನಮನ ಮಾಡಿದ್ದಾರೆ, ದಾಸನೊಳಗೆ ಈಶನಿದ್ದೇ ಇರುತ್ತಾನೆ ಎಂಬ ಅಭಿಪ್ರಾಯದಿಂದ

*ನಮಿಪೆನನವರತ*

'ಅನವರತ ನಮಿಸುತ್ತೇನೆ' ಗ್ರಂಥದ ಆದಿಯಲ್ಲಿ ಮಾತ್ರವಲ್ಲ, ಮಧ್ಯದಲ್ಲಿ, ಕೊನೆಯಲ್ಲಿ ಎಲ್ಲೆಡೆ ನಮಿಸುತ್ತೇನೆ ಎನ್ನುತ್ತಾರೆ

'ಮಂಗಲಾದೀನಿ, ಮಂಗಲಮಧ್ಯಾನಿ, ಮಂಗಳಾಂತಾನಿ ಶಾಸ್ತ್ರಾಣಿ ಪ್ರಥಂತೇ' ಆದಿ, ಮಧ್ಯ, ಅಂತ್ಯಗಳಲ್ಲಿ ಎಲ್ಲೆಡೆ ಮಂಗಳಾಚರಣೆ ಮಾಡಿದರೆ ಗ್ರಂಥ ಚಿರಕಾಲ ಉಳಿಯುತ್ತದೆ ದಾಸರು ಎಲ್ಲೆಡೆ ಗುರುದೇವತಾನಮನರೂಪ ಮಂಗಳಾಚರಣೆ ಮಾಡಿದ್ದಾರೆ ಆದರೆ ಎಲ್ಲೆಡೆ ಗ್ರಂಥದಲ್ಲಿ ಬರೆದಿಡುವುದು ಅಶಕ್ಯವೆಂದು ಆದಿಯಲ್ಲಿ ಬರೆಯುತ್ತಾರೆ ಆದಿಯ-ಲ್ಲಿಯೆ ಬರೆಯಬೇಕೆಂಬ ನಿಯಮವಿಲ್ಲ ಆದ್ದರಿಂದಲೆ ವಿಘ್ನೇಶ್ವರಸ್ತೋತ್ರವನ್ನು ಇಪ್ಪತ್ತೆಂಟನೆ ಸಂಧಿಯಲ್ಲಿ ಮಾಡಿದ್ದಾರೆ 'ಮೊದಲೊಂದಿಪೆ ನಿನಗೆ ಗಣನಾಥ' ಎಂದು ಪುರಂದರ-ದಾಸರು ಹಾಡಿದರೂ ಜಗನ್ನಾಥದಾಸರು ಕೊನೆಗೆ ವಂದಿಸಿದುದೇಕೆ ಎನ್ನಬಾರದು 'ಮೊದಲೊಂದಿಪೆ' ಎಂದರೆ ಅವಶ್ಯ ವಂದಿಸುವೆನೆಂದಿಷ್ಟೇ ಅರ್ಥ ಎಲ್ಲ ಕಾರ್ಯಗಳಿಗೂ ಆದಿ ಮಧ್ಯ ಅಂತ್ಯಗಳಲ್ಲೆಲ್ಲ ಮರೆಯದೆ ನಿನಗೆ ವಂದಿಸುವೆನೆನ್ನುತ್ತಾರೆ ದಾಸರು ಹೀಗೆ ಎಲ್ಲಡೆ ಮಾಡುವ ದೇವತಾವಂದನೆಯನ್ನು ತಿಳಿಸಲೆಂದೆ ಕೊನೆಯಲ್ಲಿ ಗಣೇಶವಂದನೆ ಸೇರಿಸಿದ್ದಾರೆ ಇನ್ನೂ ಕೊನೆಯಲ್ಲಿ ಮೂವತ್ತೆರಡನೆ ಸಂಧಿಯಲ್ಲಿ ಗರುಡನ ಸ್ತೋತ್ರ ಸೇರಿಸಿದ್ದಾರೆ

ಜಗದುದರನ ಸುರೋತ್ತಮನ ನಿಜ
ಪಗಲೂಳಾಂತು ಕರಾಬ್ಜದೊಳ್ ಪದ-
ಯುಗ ಧರಿಸಿ ಸಖಿಪಂಕ್ತಿಯೊಳು ರಮಣೀಯತರವಾದ ।
ನಗಧರನ ಪ್ರತಿಬಿಂಬ ಕಾಣುತ
ಮಿಗ ಹರುಷದಿಂ ಪೊಗಳಿ ಹಿಗ್ಗುವ
ಖಗಕುಲಾಧಿಪ ಕೂಡಲಿ ಮಂಗಳ ಸಕಲ ಸುಜನರಿಗೆ ॥

ಇದರಿಂದ ಮಂಗಳಾಚರಣ ಸಂಧಿಯಲ್ಲಿ ಗರುಡಸ್ತೋತ್ರವಿಲ್ಲವೆಂದು ನ್ಯೂನತೆ ತಿಳಿಯಬಾರದು

ಅಥವಾ 'ಕೃತ್ತಿವಾಸನೆ ಹಿಂದ ನೀ ನಾಲ್ವತ್ತುಕಲ್ಪ' ಎಂದು ರುದ್ರದೇವರ ಸಾಧನೆಯನ್ನು ಹೇಳುವ ಪದ್ಯದಲ್ಲಿಯೇ ಗರುಡನ ಸ್ತೋತ್ರವೂ ಆಗಿಹೋಗಿದೆ ಎನ್ನಬೇಕು ಏಕೆಂದರೆ ಗರುಡರುದ್ರರು ಸಮಾನರು ಅವರ ಸಾಧನೆಯೂ ಸಮಾನ ಆದರಿಂದಲ ಗರುಡನ ಸಾಧನೆ, ಪ್ರಾರಬ್ಧಕರ್ಮಗಳ ಬಗ್ಗೆ ಬೇರೆ ವಿವರ ಎಲ್ಲಿಯೂ ಉಕ್ತವಾಗಿಲ್ಲ 'ಕೃತ್ತಿವಾಸ' ಚರ್ಮಾಂಬರಧಾರಿ ಗರುಡನೂ ಆಗಿರುತ್ತಾನೆ ಸಾದನೆಯ ಕಾಲದಲ್ಲ 'ಪುರುಷೋ-ತ್ತಮನ ಪರ್ಯಂಕ ಪದವೈದು'ವವ ಶೇಷನು ಹೇಗೋ ಹಾಗೇ ಗರುಡನೂ ಆಗಿರುತ್ತಾನೆ ಪರ್ಯಂಕವೆಂದರೆ ಹಾಸಿಗೆ ಎಂಬ ಅರ್ಥವಿಟ್ಟುಕೊಂಡಾಗ ಶೇಷನಂದೂ, ಸುಖಾಸನ-ವೆಂದು ಅರ್ದವಿಟ್ಟುಕೂಂಡಾಗ ಗರುಡನೆಂದೂ ಇಟ್ಟುಕೊಳ್ಳಬಹುದು 'ಪರ್ಯಂಕ'-ಶಬ್ದಕ್ಕೆ ಸುಖಾಸನ ಎಂಬ ಅರ್ಥದಲ್ಲಿ ಮಹಾಭಾರತದಲ್ಲಿ ಪ್ರಯೋಗವಿದ

ಪರ್ಯಂಕೇ ಪೃಥಿವೀಪಾಲ ದಿವ್ಯಾಸ್ತರಣಸಂಸ್ಕೃತೇ ।
ಉಪವಿಷ್ಟಂ ಮಹಾರಾಜ ಬಾಲಂ ಪಶ್ಯಾಮಿ ಭಾರತ ॥

ಮಾರ್ಕಂಡೇಯರು ಪ್ರಳಯಸಮುದ್ರದಲ್ಲಿ ಆಲದ ಮರದ ಕೊಂಬಯಲ್ಲಿ ಒಂದು ಸುಖಾಸನದ ಮೇಲೆ ಕುಳಿತಿದ್ದ ಬಾಲಕನನ್ನು ಕಂಡೆನೆನ್ನುತ್ತಾರೆ ಇಲ್ಲಿ ಪರ್ಯಂಕವಂದರೆ ಸುಖಾಸನ ಗರುಡನ ಹೆಗಲು ಪುರುಷೋತ್ತಮನಿಗೆ ಸುಖಾಸನವಾದ್ದರಿಂದ 'ಪರ್ಯಂಕ' ಎನಿಸಬಹುದು

**ಪರಿಮಳವು ಸುಮನದೊಳನಲನು**
**ಅರಣಿಯೊಳಗಿಪ್ಪಂತೆ ದಾಮೋ-**
**ದರನು ಬ್ರಹ್ಮಾದಿಗಳ ಮನದಲಿ ತೋರಿ ತೋರದಲೆ ।**
**ಇರುತಿಹ ಜಗನ್ನಾಥ ವಿಠಲನ**
**ಕರುಣೆ ಪಡೆವ ಮುಮುಕ್ಷು ಜೀವರು**
**ಪರಮ ಭಾಗವತರನು ಕೊಂಡಾಡುವುದು ಪ್ರತಿದಿನವು ॥ ೧೩ ॥**

ಪರಿಮಳವು ಹೂವಿನಲ್ಲಿರುವಂತೆ, ಬೆಂಕಿ ಅರಣಿಕಾಷ್ಠಗಳೊಳಗ ಇರುವಂತೆ, ದಾಮೋದರನು ಬ್ರಹ್ಮಾದಿಗಳ ಮನಸ್ಸಿನಲ್ಲಿ ತೋರಿಯೂ ತೋರದಂತೆ ಇರುತ್ತಾನೆ ಜಗನ್ನಾಥ ವಿಠಲನ ಕರುಣೆ ಪಡೆಯುವ ಮುಮುಕ್ಷು ಜೀವರು ಪ್ರತಿದಿನವೂ ಪರಮ ಭಾಗವತರಾದ ಆ ಬ್ರಹ್ಮಾದಿಗಳನ್ನೂ ಕೊಂಡಾಡಬೇಕು

**ಬ್ರಹ್ಮಾದಿಗಳ ಮನದಲಿ**

ಶ್ರೀಹರಿ ಪರದೈವ ಬ್ರಹ್ಮಾದಿಗಳೆಲ್ಲ ಗುರುಗಳು ಗುರುಕರುಣೆ ಪಡೆಯದವನಿಗೆ ಹರಿಕರುಣೆ ಇಲ್ಲ ಮೋಕ್ಷವನ್ನು ಬಯಸುವ ಸುಜೀವರು ಹರಿಕರುಣೆಗಾಗಿ ಗುರುಗಳಾದ ಬ್ರಹ್ಮಾದಿಗಳನ್ನು ಪ್ರತಿದಿನವೂ ಕೊಂಡಾಡಬೇಕು ಅವರು ಪರಮ ಭಾಗವತರು ಅವರ ಹೃದಯದಲ್ಲಿ ಭಗವಂತ ಸದಾ ನೆಲೆಸಿರುತ್ತಾನೆ ತೋರಿ ತೋರದಲೆ ನೆಲೆಸಿರುತ್ತಾನೆ

**ತೋರಿ ತೋರದಲೆ**

'ತೋರಿ ತೋರದಲೆ' ಎನ್ನುವಾಗ ಯಾರಿಗೆ ಎಂಬ ಪ್ರಶ್ನೆ ಸಹಜ ಬ್ರಹ್ಮಾದಿಗಳಿಗೆಯೆ? ಅವರಿಗೆ ಮನದಲ್ಲಿ ಇದ್ದಾನೆ ಎಂದರೆ ತೋರುತ್ತಾನೆ ಎಂದು ತಾನೆ ಅರ್ಥ? ಮನಸ್ಸಿನಲ್ಲಿ ಯಾವುದೇ ವಿಷಯ ಇದೆ ಎಂದರೆ ತೋರುತ್ತಿದೆ ಎಂದೇ ಅರ್ಥ ತೋರದಲೆ ಮನದಲ್ಲಿ ಇದ್ದಾನೆ ಎನ್ನುವುದು ವಿರುದ್ಧವಲ್ಲವೆ?

ಭಗವಂತ ಎಲ್ಲೆಡೆ ಇರುವಂತೆ ಮನದಲ್ಲಿಯೂ ಇದ್ದಾನೆ ಎನ್ನುವುದಾದರೆ ಬ್ರಹ್ಮಾದಿಗಳ ಮನದಲ್ಲಿ ಏನು ವಿಶೇಷ? ನಮ್ಮ ಮನದಲ್ಲಿಯೂ ಇದ್ದಾನೆ ವ್ಯಕ್ತನಾಗಿ ಅಲ್ಲ ನಾವು ಅವನನ್ನು ಒಂದು ಕ್ಷಣವೂ ನೆನೆಯುವುದಿಲ್ಲ ಪುರಂದರದಾಸರು ಹೇಳುತ್ತಾರೆ.

'ಆವಿನ ಕೊಂಬಿನ ತುದಿಯಲ್ಲಿ ಸಾಸಿವೆ ಕಾಳಿದ್ದಷ್ಟೊತ್ತಾಗಲಿ
ನಿನ್ನ ನೆನೆದವ ಜೀವನ್ಮುಕ್ತನಲ್ಲವೇನು?'

ಬ್ರಹ್ಮಾದಿಗಳು ಒಂದು ಕ್ಷಣವೂ ಮರೆಯುವುದಿಲ್ಲ ಬ್ರಹ್ಮ ಹೇಳುತ್ತಾನೆ

ಯಸ್ಮೇ ಹೃದೌತ್ಕಂರ್ಯವತಾ ಧೃತೋ ಹರಿಃ

ಹಾಗಾದರೆ ಬ್ರಹ್ಮನಿಗೆ ತೋರಿ, ಬೇರೆ ದೇವತೆಗಳಿಗೆ ತೋರದಲೆ ಇದ್ದಾನೆ ಎನ್ನಲೆ?

ವಿದ್ಯುದ್ವನ್ಮಾನುಷಾ ವಿದ್ಯುಃ ಸೂರ್ಯಮಂಡಲವತ್ ಸುರಾಃ

'ಮನುಷ್ಯರು ಮಿಂಚಿನಂತೆ ಹೊಳೆವ ಹರಿಯನ್ನು ಕ್ಷಣಕಾಲ ನೋಡುತ್ತಾರೆ ದೇವತೆಗಳು ಸೂರ್ಯಮಂಡಲದಂತೆ ಬೆಳಗುವ ಹರಿಯನ್ನು ಬಹುಕಾಲ ನೋಡುತ್ತಾರೆ' ಎನ್ನುತ್ತಿದೆ ತೈತ್ತಿರೀಯಭಾಷ್ಯ

ಆಹೂತ ಇವ ಮೇ ಶೀಘ್ರಂ ದರ್ಶನಂ ಯಾತಿ ಚೇತಸಿ

'ಕೂಗಿ ಕರೆದಂತೆ ನೆನೆದಾಗೆಲ್ಲ ಬೇಗನೆ ದರ್ಶನ ಕೊಡುತ್ತಾನೆ ಹರಿ' ಎನ್ನುತ್ತಾರೆ ನಾರದರು ಭಾಗವತದಲ್ಲಿ

ಅದರಿಂದ ಎಲ್ಲಾ ದೇವತೆಗಳಿಗೂ ಹರಿ ನೆನೆದಾಗೆಲ್ಲ ಮೈದೋರುತ್ತಾನೆ 'ತೋರಿ ತೋರದಲೆ ಬ್ರಹ್ಮಾದಿಗಳ ಮನದಲ್ಲಿ ದಾಮೋದರನಿರುತ್ತಾನೆ' ಎನ್ನುವುದು ಹೇಗೆ?

ಈ ಪ್ರಶ್ನೆಗೆ ಸುಲಭವಾಗಿ ಉತ್ತರಿಸಬೇಕೆಂದರೆ, ಅದು ಹೀಗೆ—ದಾಮೋದರನನ್ನು ಪೂರ್ತಿ ಯಾರೂ ತಿಳಿಯಲಾರರು ಅಲ್ಪಸ್ವಲ್ಪ ಎಲ್ಲರೂ ತಿಳಿಯಬಲ್ಲರು ಅದರಿಂದ ಸಮಸ್ಯೆ ಇಲ್ಲ ಅಥವಾ ದಾಮೋದರ ಬ್ರಹ್ಮಾದಿಗಳ ಮನದಲ್ಲಿ ಕೆಲವೊಮ್ಮೆ ವ್ಯಕ್ತನಾಗುತ್ತಾನೆ, ಕೆಲವೊಮ್ಮೆ ಮರೆಯಾಗುತ್ತಾನೆ ವ್ಯಕ್ತನಾದಾಗ ಅವರು ಕಂಡು ಉದ್ಗರಿಸುತ್ತಾರೆ,

ಕಂಡೆ ನಾ ಗೋವಿಂದನಾ।

ಮರೆಯಾದಾಗ ಕಾಣದೆ ಹಂಬಲಿಸುತ್ತಾರೆ

ನೋಡಲಿಲ್ಲವೋ ನಿನ್ನ! ಪಾಡಲಿಲ್ಲವೊ ಮಹಿಮೆ।

ಮನಸ್ಸೆಂದರೆ ಇಲ್ಲಿ ಅಂತಃಕರಣವಲ್ಲ, ಹೃದಯವೆಂದಿಟ್ಟುಕೊಳ್ಳಬೇಕು ಹೃದಯದಲ್ಲಿ ಭಗವಂತ ಲೀಲೆಯಿಂದ ಒಮ್ಮೆ ತೋರುತ್ತಾನೆ, ಇನ್ನೊಮ್ಮೆ ಮರೆಯಾಗುತ್ತಾನೆ

*ಪರಿಮಳವು ಸುಮನದೊಳು ಅನಲನು ಅರಣಿಯೊಳಗಿಪ್ಪಂತೆ*

ಅಥವಾ ಇಲ್ಲಿ ಕೊಟ್ಟಿರುವ ಎರಡು ದೃಷ್ಟಾಂತಗಳನ್ನು ಪರಿಶೀಲಿಸಿದರ, ಹೀಗೂ ಹೇಳಬಹುದು ದೇವತೆಗಳ ಮನದಲ್ಲಿ ಕೆಲವೊಮ್ಮೆ ಅಸುರಾವೇಶ ಬರುವುದುಂಟು ಹರಿ-ವಾಯುಗಳಾವೇಶ ಕಡಿಮೆಯಾಗುವುದೂ ಉಂಟು ಆಗ ಅರಣಿಕಾಷ್ಠದೊಳಗ ಗೂಢ-ವಾಗಿ ಇರುವ ಬೆಂಕಿಯಂತೆ ಅವರ ಹೃದಯದಲ್ಲಿ ಹರಿ ಅವ್ಯಕ್ತನಾಗಿ ಇರುತ್ತಾನ ತೋರದಲೆ ಇರುತ್ತಾನೆ ಬೇರೆ ಸಮಯದಲ್ಲಿ ಅವರ ಪರಿಶುದ್ಧವಾದ ಹೃದಯದಲ್ಲಿ ವ್ಯಕ್ತನಾಗಿ ಮೈದೋರುತ್ತಾನೆ, ಹೂವಿನಲ್ಲಿ ಪರಿಮಳ ದೂರದಿಂದಲೂ ಮೂಗಿಂದ ಅನುಭವ-ಗೋಚರವಾಗುವಂತೆ

ದದಿಸ್ಥಘೃತವತ್ ಕಾಷ್ಠೇ ವಹ್ನಿವಚ್ಚ ಜನಾರ್ದನಃ ।
ದೇಹೇಂದ್ರಿಯಾಸುಜೀವೇಭ್ಯೋ ವಿವಿಚ್ಯ ಜ್ಞಾಯತೇ ನತು ॥

'ಮೊಸರಿನಲ್ಲಿ ತುಪ್ಪದಂತೆ, ಅರಣಿಕಾಷ್ಠದಲ್ಲಿ ಬೆಂಕಿಯಂತೆ, ದೇಹ ಇಂದ್ರಿಯ ಪ್ರಾಣ ಜೀವ-ರಲ್ಲಿ ಜನಾರ್ದನ ಗೂಢವಾಗಿರುತ್ತಾನೆ ಬೇರೆಯಾಗಿ ಕಾಣಿಸುವುದಿಲ್ಲ' ಎಂದು ಭಾಗವತ-ತಾತ್ಪರ್ಯದಲ್ಲಿ ಹೇಳಿದೆ ಇದು ಅಸುರಾವೇಶಕಾಲದಲ್ಲಿ ಅದಿಲ್ಲದಿದ್ದಾಗ

ಚತುರ್ಮುಖಸ್ಥಿತೋ ವಿಷ್ಣುಃ ಸ್ವಯಮೇವ ಪ್ರಕಾಶತೇ ।
ಯಥಾ ಪುಷ್ಪಸ್ಥಿತಾಮೋದಃ ॥

'ಎಂದೂ ಅಸುರಾವೇಶವಿಲ್ಲದ ಬ್ರಹ್ಮನಲ್ಲಿ ವಿಷ್ಣು ಏನೂ ವಿಳಂಬವಿಲ್ಲದೆ ಸ್ವತಃ ಪ್ರಕಟನಾಗು-ತ್ತಾನೆ ಹೂವಿನಲ್ಲಿ ಪರಿಮಳ ಹೇಗೋ ಹಾಗೆ' ಎಂದು ತತ್ತ್ವನಿರ್ಣಯವಚನ

ವಾದಿರಾಜರೂ ಹಯವದನಮೂರ್ತಿಯನ್ನು ಕಂಡು ಆಶ್ಚರ್ಯದಿಂದ ಉದ್ಗರಿಸಿ-ದರು

ಆವ ಕಡೆಯಿಂದ ಬಂದೆ, ವಾಜಿವದನನೆ!

ಹೀಗೆ ಅಸುರಾವೇಶರಹಿತರಾದಾಗ ಎಲ್ಲಾ ದೇವತೆಗಳಿಗೂ ಮೈದೋರುತ್ತಾನೆ, ಹರಿ ಆದ್ದರಿಂದ 'ತೋರಿ ತೋರದಲೆ' ಎನ್ನಲಾಗಿದೆ

ಆದರೆ 'ಹೂವಿನಲ್ಲಿ ಪರಿಮಳದಂತೆ ಬ್ರಹ್ಮಾದಿಗಳಲ್ಲಿ ಹರಿ' ಎನ್ನುವಾಗ,

ಗಂಧಗಂಧವತೋರ್ಯಸ್ಮಾನ್ನ ಭೇದಃ ಕ್ವಚನೇಷ್ಯತೇ

'ಪರಿಮಳಕ್ಕೂ ಹೂವಿಗೂ ಭೇದವಿಲ್ಲ' ಎನ್ನುವ ಬ್ರಹ್ಮತರ್ಕವಚನ ನೆನಪಿಗೆ ಬರುತ್ತದೆ ಬ್ರಹ್ಮಾದಿಗಳಿಗೂ ಹರಿಗೂ ಭೇದವಿಲ್ಲವೆ ಎನ್ನುವ ಶಂಕೆಯೂ ಬರುತ್ತದೆ 'ಅನಲನು ಅರಣಿಯೊಳಗಿಪ್ಪಂತೆ' ಎನ್ನುವ ಉದಾಹರಣೆಯಲ್ಲಿ ಈ ಶಂಕೆಗೆ ಅವಕಾಶವಿಲ್ಲ

ಯಥಾನಲೋ ದಾರುಷು ಭಿನ್ನ ಈಯತೇ

'ಕಾಷ್ಠಗಳಲ್ಲಿ ಅಗ್ನಿ ಭಿನ್ನನಾಗಿರುವಂತೆ ಹರಿ ಪ್ರಪಂಚದಲ್ಲಿ ಭಿನ್ನನಾಗೇ ಇರುತ್ತಾನೆ' ಎನ್ನುತ್ತದೆ ಭಾಗವತ ಅದರಿಂದ ಹೂ-ಪರಿಮಳ ದೃಷ್ಟಾಂತ ಎಷ್ಟು ಉಚಿತ?

ವಸ್ತುತಃ 'ನಹಿ ದೃಷ್ಟಾಂತೇ ಸರ್ವಸಾಮ್ಯಂ' ವಿವಕ್ಷಿತವಾದ ಸಾಮ್ಯವಿದ್ದರೆ ಸಾಕು ಪ್ರಕೃತ ಹೂವಿನಲ್ಲಿ ಪರಿಮಳ ಹೇಗೆ ಸಾರವೋ ಹಾಗೇ ಪ್ರಪಂಚದಲ್ಲಿ ಹರಿ ಸಾರ 'ಸಾರಾತ್ ಸಾರತರೋ ಹರಿಃ' ಹೀಗೆ ಸಾರಭೂತನಾದ ಹರಿಯೆ ಬ್ರಹ್ಮಾದಿಗಳ ಮನದಲ್ಲಿ ನಲಿಯುವು-ದರಿಂದ ಅವರು ಧನ್ಯರು, ಕೃತಕೃತ್ಯರು ಹೂಪರಿಮಳಗಳ ಅಭೇದ ಎಲ್ಲ ಕಡೆ ವಿವಕ್ಷಿತ-ವಾಗಬೇಕೆಂದಿಲ್ಲ ನಾರಾಯಣೋಪನಿಷತ್ತಿನಲ್ಲಿ ಪುಣ್ಯಕಾರ್ಯಗಳಿಂದ ಬರುವ ಕೀರ್ತಿ-ಯನ್ನು ಹೂವಿನ ಪರಿಮಳಕ್ಕೆ ಹೋಲಿಸಲಾಗಿದೆ

ಯಥಾ ವೃಕ್ಷಸ್ಯ ಸಂಪುಷ್ಪಿತಸ್ಯ ದೂರಾದ್ ಗಂಧೋ ವಾತಿ
ಏವಂ ಪುಣ್ಯಸ್ಯ ಕರ್ಮಣೋ ದೂರಾದ್ ಗಂಧೋ ವಾತಿ ॥

'ಮರ ಹೂಬಿಟ್ಟರೆ ಪರಿಮಳ ದೂರಕ್ಕೆ ಹರಡುವಂತೆ ಪುಣ್ಯಕರ್ಮ ಮಾಡಿದರೆ ಕೀರ್ತಿಯೂ ದೂರಕ್ಕೆ ಹರಡುತ್ತದೆ'

ಆದರೂ ಶಂಕೆಗೆ ಅವಕಾಶವೆ ಇಲ್ಲದಿರಲೆಂದು ಅರಣಿ-ಅಗ್ನಿ ದೃಷ್ಟಾಂತವನ್ನೂ ಕೊಟ್ಟಿದ್ದಾರೆ ದಾಸರಾಯರು

ಅಥವಾ 'ಬ್ರಹ್ಮಾದಿಗಳಿಗೆ ತೋರಿ ತೋರದಲೆ' ಎನ್ನುತ್ತಿಲ್ಲ ನಮಗೇ ಬ್ರಹ್ಮಾದಿಗಳಲ್ಲಿ ತೋರಿ ತೋರದಲೆ ಹರಿ ಇರುತ್ತಾನೆ ಹೂವಿನಲ್ಲಿ ಪರಿಮಳ ಕಣ್ಣಿಗೆ ತೋರದು ಮೂಗಿಗೆ ಗೋಚರವಾಗುವುದು ಹೂ ಕಂಡರೂ ಪರಿಮಳ ಕಾಣದು ಅರಣಿ ಕಂಡರೂ ಘರ್ಷಣೆ

ಮಾಡದೆ ಬೆಂಕಿ ಕಾಣದು ಹಾಗೇ ಬ್ರಹ್ಮಾದಿಗಳು ಕಂಡರೂ ಅವರೊಳಗಿರುವ ಹರಿ ಕಾಣಲು ಸಿಗಲಾರ ಬ್ರಹ್ಮಾದಿದರ್ಶನವೆ ಹರಿಯ ದರ್ಶನ

ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ

ವಾಯುವಿನ ದರ್ಶನವೆ ಹರಿಯ ದರ್ಶನ ಏಕೆಂದರೆ ವಾಯು ಹರಿಯ ಪ್ರತೀಕ ಹೀಗೆ ಬ್ರಹ್ಮವಾಯು ಮುಂತಾದ ಪರಮಭಾಗವತರು ಪ್ರತ್ಯಕ್ಷಬ್ರಹ್ಮರು, ಭಗವಂತನ ಪ್ರತೀಕಗಳು ಅವರಲ್ಲಿ ಅವ್ಯಕ್ತನಾದ ಹರಿಯ ಆರಾಧನ ನಡೆಸಬೇಕು

ಹರಿಯ ಪ್ರತೀಕರನಿಸಿದ ಭಾಗವತೋತ್ತಮರಲ್ಲಿ ಹರಿಯ ಆವೇಶವಿರುತ್ತದ ಅದು ಕೆಲವೊಮ್ಮೆ ಅಧಿಕವಾಗಿದ್ದೀತು ಆಗ ಹೂವಿನಲ್ಲಿ ಪರಿಮಳದಂತೆ ಅವರಲ್ಲಿ ಹರಿಯ ಸನ್ನಿ-ಧಾನ ಬೇಗನೆ ಅನುಭವಕ್ಕೆ ಬರುತ್ತದೆ ಆವೇಶ ಕಡಿಮೆಯಾದಾಗ ಸ್ವಲ್ಪ ಪರೀಕ್ಷಿಸಿ ನೋಡ-ಬೇಕಾಗುತ್ತದೆ ಅರಣಿಕಾಷ್ಠದಲ್ಲಿ ಬೆಂಕಿಯಂತೆ ನಿಧಾನವಾಗಿ ಅನುಭವಕ್ಕೆ ಬರುತ್ತದ ಬಲರಾಮನಲ್ಲಿ ದಾಮೋದರ ಹೀಗಯೇ ಶುಕ್ಲಕೇಶಾವೇಶ ಅಧಿಕವಾದಾಗ ಪರಾಕ್ರಮ ಅಧಿಕ ಕಡಿಮೆಯಾದಾಗ ಕಡಿಮ

ಹರಿಯ ಪ್ರತೀಕರೆಂದ ಮೇಲ ಆ ಭಾಗವತರನ್ನು ಮುಮುಕ್ಷುಗಳು ಆರಾಧಿಸಲೇ-ಬೇಕು ಆಗ ಹರಿಯ ದರ್ಶನವಾಗುತ್ತದ ಅವರನ್ನು ಅವಮಾನಿಸಬಾರದು ಹೂವನ್ನು ಕೈಯಿಂದ ಹಿಸುಕದೆ ಹಾಗೇ ಮೂಸಿ ನೋಡಬೇಕು ಹಿಸುಕಿದರೆ ಪರಿಮಳದ ಮಧುರವಾದ ಅನುಭವವಿಲ್ಲದಾಗುತ್ತದ ಅರಣಿಯನ್ನು ತಿಕ್ಕಿದರ ಬೆಂಕಿ ಎದ್ದು ಸುಡುವಂತ ಭಾಗವತರನ್ನು ಅವಮಾನಿಸಿದರೆ ಹರಿ ಪ್ರಕಟನಾಗಿ ಬೆಂಕಿಯಂತಾಗುತ್ತಾನ

**ದಾಮೋದರನು**

ದಾಮೋದರ ಎಂಬ ಹೆಸರೂ ಹರಿಯ ಈ ಸ್ವಭಾವವನ್ನು ಸೂಚಿಸುತ್ತದ ಯಶೋದ ಕೃಷ್ಣನನ್ನು ಹಗ್ಗದಿಂದ ಕಟ್ಟಿಹಾಕಿದಾಗ 'ದಾಮ' ಅಂದರೆ ಹಗ್ಗವನ್ನು 'ಉದರ' ಹೊಟ್ಟೆಯಲ್ಲಿ ಧರಿಸಿದ್ದರಿಂದ 'ದಾಮೋದರ'ನೆನಿಸಿದನಂಬುದು ಪ್ರಸಿದ್ಧ 'ದಾಮ' 'ಉದ' 'ರ' ಎಂದು ಮೂರು ಶಬ್ದಗಳಿಟ್ಟುಕೊಂಡಾಗ 'ದಮ' ಎಂದರೆ ಅಸುರಾವೇಶವನ್ನು ನಿಗ್ರಹಿಸಿಕೊಳ್ಳು-ವುದು, ಅಂಥ ದಮ ಉಳ್ಳವರು 'ದಾಮರು' 'ಉದ' ಎಂದರ ಜೀವರು 'ದಾಮ'ರಾದ 'ಉದ'ರಲ್ಲಿ ಹೂವಿನಲ್ಲಿ ಪರಿಮಳದಂತ ಅನುಭವಗೋಚರನಾಗಿ 'ರ' ಸುಖನೀಡು-ವುದರಿಂದ ಹರಿ 'ದಾಮೋದರ'ನೆನಿಸುತ್ತಾನೆ

'ದಾಮ' ಎಂದರೆ ಅಸುರರಿಂದಲೆ ದಮನಕ್ಕೊಳಗಾದವರು ಅಂಥ 'ಉದ'ರಲ್ಲಿ ಸಾತ್ವಿಕ ಜೀವರಲ್ಲಿ 'ರ' ಬೆಂಕಿಯಂತೆ, ಅಂದರೆ ಅರಣಿಯೊಳಗೆ ಗೂಢವಾಗಿರುವ ಬೆಂಕಿ-ಯಂತೆ ಇರುವುದರಿಂದಲೂ 'ದಾಮೋದರ'ನೆನಿಸುತ್ತಾನೆ

ಮಂಗಳಾಚರಣ ಸಂಧಿ 99

ಅಸುರಾವೇಶದಿಂದಾಗಲಿ, ಅದನ್ನು ದಮನ ಮಾಡಿದ್ದರಿಂದಾಗಲಿ 'ದಾಮ' ರೆನಿಸುವ 'ಉದ' ರಾದ ದೇವತೆಗಳಲ್ಲಿ ಹರಿ ಇದ್ದು ಆ ದೇವತೆಗಳ ಆರಾಧನೆಯನ್ನು ಮಾಡಿದಾಗ ಹೂವಿನಲ್ಲಿ ಪರಿಮಳದಂತೆ ವ್ಯಕ್ತನಾಗಿ 'ರ' ಕ್ರೀಡಿಸುತ್ತಾನೆ ಅವರಲ್ಲಿ ಅಪಚಾರಗೈದಾಗ ಕಾಷ್ಠದಿಂದ ಎದ್ದ ಬೆಂಕಿಯಂತೆ 'ರ' ಉರಿದು ಸುಡುತ್ತಾನೆ

ಇದಕ್ಕೆ ಉದಾಹರಣೆ 'ದಾಮೋದರ' ನೆನಿಸಿದ ಕೃಷ್ಣ ಕೃಷ್ಣನನ್ನು ಪ್ರೀತಿಯಿಂದ ಲಾಲಿಸಿದ ಯಶೋದೆ ಕರುಕಟ್ಟುವ ಹಗ್ಗದಿಂದಲೆ ಕೃಷ್ಣನನ್ನು ಕಟ್ಟಿಹಾಕಿದಳು ಕೃಷ್ಣ ಆ ಬಂಧನವನ್ನು ಪ್ರೀತಿಯಿಂದ ಸ್ವೀಕರಿಸಿದ ದುರ್ಯೋಧನ ಕಟ್ಟಲು ಬಂದರೆ ಮುನಿದು ವಿಶ್ವರೂಪ ತಳೆದು ನಿಂತ ಭಕ್ತರ ವಿಷಯದಲ್ಲಿಯೂ ಹೀಗೆ ಮಾಡುತ್ತಾನೆ ಆತ ಭಕ್ತ ಅಂಬರೀಷನನ್ನು ಕೆಣಕಲು ಹೋಗಿ ದುರ್ವಾಸ ಮುನಿ ಪಟ್ಟಪಾಡು ಅಷ್ಟಿಷ್ಟಲ್ಲ ತಾರತಮ್ಯ-ದಲ್ಲಿ ಮೂವತ್ತೆರಡನೆಯವರಾದ ಚಕ್ರವರ್ತಿಗಳ ಕಕ್ಷೆಯಲ್ಲಿ ಬರುವ ಅಂಬರೀಷನೆಲ್ಲಿ? ಐದನೆ ಕಕ್ಷೆಯಲ್ಲಿಯೆ ಬರುವ ಜಗದೀಶ್ವರನಾದ ರುದ್ರನ ಅಂಶಸಂಭೂತರಾದ ದುರ್ವಾಸ ಮುನಿ ಎಲ್ಲಿ? ಅರಣಿಯಲ್ಲಿರುವ ಅಗ್ನಿಯಂತ ಅಂಬರೀಷನೊಳಗಿದ್ದ ದಾಮೋದರ ಮುನಿದು ದೂರ್ವಾಸ ಮುನಿಯನ್ನು ಶಿಕ್ಷಿಸಿದ ಉಗ್ರನರಸಿಂಹನ ಕೋಪ ಆರದಿದ್ದಾಗ ಶಿಶು ಪ್ರಹ್ಲಾದನನ್ನು ಬ್ರಹ್ಮಾದಿಗಳು ಮುಂದೆ ಕಳಿಸಿ ಕೋಪ ಶಾಂತಗೊಳಿಸಿದರು ಪರಮ-ಭಾಗವತ ಪ್ರಹ್ಲಾದನೆಂಬುದೇ ಅವನ ಈ ಯಶಸ್ಸಿನ ಗುಟ್ಟು

***ಪರಮಭಾಗವತರನು ಕೊಂಡಾಡುವುದು***

ಪರಮಭಾಗವತರು ಸಣ್ಣವರಾಗಿದ್ದರೂ ಅವರೊಳಗಿರುವ ಭಗವಂತ ದೊಡ್ಡವನೆ ಅದರಿಂದ ಸಣ್ಣವರನ್ನೂ ಪ್ರತಿದಿನ ಕೊಂಡಾಡಬೇಕು ಎಂದಮೇಲೆ ಲಕ್ಷ್ಮೀಬ್ರಹ್ಮಾದಿ ದೇವತೆಗಳ ಬಗ್ಗೆ ಇನ್ನೇನು ಹೇಳಬೇಕು? ಅವರನ್ನು ಪ್ರತಿದಿನ ಕೊಂಡಾಡುವ ಮುಮುಕ್ಷು ಜೀವರು ಜಗನ್ನಾಥವಿಠಲನ ಕರುಣ ಪಡೆದು ಸುಖಿಗಳಾಗುತ್ತಾರೆ ಎನ್ನುತ್ತಾ ದಾಸರಾಯರು ಹರಿಕಥಾಮೃತಸಾರದ ಈ ನಾಂದೀಸಂಧಿಯನ್ನು ಜಗನ್ನಾಥವಿಠಲನಿಗೆ ಸಮರ್ಪಿಸುತ್ತಿದ್ದಾರೆ, ತನ್ನ ಈ ಗ್ರಂಥವೂ ಕೂಡ ಆದರದಿ ಕೇಳುವ ಪರಮ ಭಗವದ್ಭಕ್ತರಿಗೆ ಹೂವಿನ ಪರಿಮಳದಂತೆ ಮನಸ್ಸಿಗೆ ಸುಖಶಾಂತಿ ನೀಡಲಿ, ಅವಮಾನಿಸುವವರಿಗೆ ಅರಣಿ-ಯೊಳಗಿನ ಬೆಂಕಿಯಂತೆ ಮನಸ್ಸಿಗೆ ತಾಪ ಉಂಟುಮಾಡಲಿ ಎಂದು ಬೇಡಿಕೊಳ್ಳುತ್ತಿದ್ದಾರೆ

॥ ಶ್ರೀಕೃಷ್ಣಾರ್ಪಣಮಸ್ತು ॥

# ಕರುಣಾ ಸಂಧಿ

॥ ಹರಿಃ ಓಂ ॥

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥

ಶ್ರವಣ ಮನಕಾನಂದವೀವುದು
ಭವಜನಿತ ದುಃಖಗಳ ಕಳೆವುದು
ವಿವಿಧ ಭೋಗಗಳಿಹಪರಂಗಳಲಿತ್ತು ಸಲಹುವುದು ।
ಭುವನಪಾವನನೆನಿಪ ಲಕುಮೀ-
ಧವನ ಮಂಗಳಕಥೆಯ ಪರಮೋ-
ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ ॥ ೧ ॥

ಭುವನಪಾವನನೆನಿಸುವ ಲಕ್ಷ್ಮೀರಮಣನ ಮಂಗಳಕಥೆ ಶ್ರವಣಮನಕೆ ಆನಂದ ನೀಡುವುದು ಭವದಲ್ಲಿ ಉಂಟಾಗುವ ದುಃಖಗಳನ್ನು ಕಳೆಯುವುದು ವಿವಿಧ ಭೋಗಗಳನ್ನು ಇಹಪರಗಳಲ್ಲಿ ನೀಡಿ ಸಲಹುವುದು ಆದರಿಂದ ಬ್ರಾಹ್ಮಣರು ಅದನ್ನು ದಿನದಿನವೂ ಪರಮಾನಂದದಿಂದ ಕಿವಿಗೊಟ್ಟು ಕೇಳಬೇಕು

*ಲಕುಮೀಧವನ ಮಂಗಳಕಥೆ*

'ಮಂಗಲದೇವತೆ'ಯೆನಿಸಿದ ಲಕ್ಷ್ಮಿಯ ರಮಣನ ಕಥೆ, 'ಮಂಗಲಾನಾಂ ಚ ಮಂಗಲಂ' ಎನಿಸಿದ, ಮಂಗಲ ವಸ್ತುಗಳಿಗಲ್ಲ ಮಂಗಲತ್ವ ನೀಡುವ ಶ್ರೀಹರಿಯ ಕಥೆ ಎಂದಮೇಲೆ ಅದು ಮಂಗಳಕಥೆಯೆ

ಇಲ್ಲಿ 'ಕಥೆ' ಎಂದರೆ ಬರಿ ಉಪಾಖ್ಯಾನವಲ್ಲ 'ಕಥ ವಾಕ್ಯಪ್ರಬಂಧೇ' ಶ್ರೀಹರಿಯ ಗುಣನಾಮಕೀರ್ತನಪರವಾದ ವೇದೋಪನಿಷತ್ತುಗಳು, ಇತಿಹಾಸಪುರಾಣಗಳು, ವೇದಾಂತತರ್ಕಗ್ರಂಥಗಳು, ಮಂತ್ರತಂತ್ರಗಳು, ಕಾವ್ಯಾಲಂಕಾರನಾಟಕಾದಿಗಳು ಎಲ್ಲವೂ ಮಂಗಳ ಕಥೆಗಳು ಬೆಳಗ್ಗೆ ಎದ್ದು ಎಲ್ಲರೂ ಮಂಗಳಾಷ್ಟಕದಲ್ಲಿ ನಿತ್ಯ ನೆನೆಸಿಕೊಳ್ಳುವಂಥ-ವುಗಳು ಅಮಂಗಲಪರಿಹಾರಕಗಳು ಅವುಗಳ ಶ್ರವಣಮಾತ್ರದಿಂದ ಕಿವಿಗಳ ಮೂಲಕ ಹೃದಯಕ್ಕೆ ಬಂದು ನೆಲೆಸುತ್ತಾನೆ, ಕೃಷ್ಣ ಹೃದಯದೊಳಗಿನ ಕಶ್ಮಲಗಳನ್ನು ತೊಡೆಯುತ್ತಾನೆ

ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ ।
ಹೃದ್ಯಂತಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ॥

—ಭಾಗವತ

**ಭುವನಪಾವನ ಲಕುಮೀಧವನ ಮಂಗಳಕಥೆ**

ಕುಂದೆಳ್ಳಷ್ಟಿಲ್ಲದ ಮುಕುಂದನ ಚರಿತ್ರೆಯಲ್ಲಿ ಕುಂದು ಎಳ್ಳಷ್ಟೂ ಶಕ್ಯವಿಲ್ಲ. ಕುಂದು ಕಂಡುಬಂದರೆ ಅದು ಲೀಲೆ. ಲೀಲೆ ಅಸುರಮೋಹನಕ್ಕಾಗಿ. ಭೂಸುರರು ಮೋಸ-ಹೋಗಬಾರದು.

ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಲನಮೇವ ವಾ ।
ವೈಕುಂಠನಾಮಗ್ರಹಣಮಶೇಷಾಘಹರಂ ವಿದುಃ ॥

ಅರ್ಥಾನುಸಂಧಾನವಿಲ್ಲದೆ ಹರಿನಾಮ ಉಸುರಿದರೂ ಪಾಪಪರಿಹಾರವೆಂದ ಮೇಲೆ ಕಥಾಶ್ರವಣವೆಷ್ಟು ಪಾವನವಿರಬಹುದು?

ಪಾವನ 'ಪಾವನ'ವಾಗಬೇಕಾದರೆ ಪವನಸಂಬಂಧಿಯಾಗಬೇಕು. ಮಧ್ವಶಾಸ್ತ್ರದ ಬೆಳಕಿನಲ್ಲಿ ವೇದಾದಿಗಳನ್ನು ಕಾಣಬೇಕು.

**ಶ್ರವಣ ಮನಕಾನಂದವೀವುದು**

ಶ್ರವಣೇಂದ್ರಿಯಕ್ಕೂ ಮನಸ್ಸಿಗೂ ಆನಂದ ನೀಡುವುದು ಹರಿಕಥೆ.

ನಿವೃತ್ತತರ್ಷೈರುಪಗೀಯಮಾನಾತ್
ಭವೌಷಧಾತ್ ಶ್ರೋತ್ರಮನೋಭಿರಾಮಾತ್ ।
ಕ ಉತ್ತಮಶ್ಲೋಕಗುಣಾನುವಾದಾತ್
ಪುಮಾನ್ ವಿರಜ್ಯೇತ ವಿನಾ ಪಶುಘ್ನಾತ್ ॥ —ಭಾಗವತ ॥

ಶ್ರೋತ್ರಕ್ಕೂ ಮನಸ್ಸಿಗೂ ಅಭಿರಾಮ, ಆಹ್ಲಾದಕ, ಉತ್ತಮಶ್ಲೋಕನಾದ ಹರಿಯ ಗುಣಕಥನ.

ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ ॥

ಎಂಬಂತೆ ವೇದದ ಅಕ್ಷರಗಳೆಲ್ಲವೂ ಹರಿನಾಮಗಳು. ಮಧುರವಾದ ಹರಿನಾಮಗಳಿಂದ ತುಂಬಿರ ಹರಿಕಥೆ ಶ್ರವಣೇಂದ್ರಿಯಕ್ಕೆ ಬೀಳುವಾಗಲೆ ಅಮೃತದಂತೆ ಆಹ್ಲಾದಕರವಾಗು-ವುದು. ಅರ್ಥಜ್ಞಾನ ಉಂಟಾದಾಗ 'ಶುಕಮುಖಾದಮೃತದ್ರವಸಂಯುತಂ' ಎಂಬಂತೆ ಮನಸ್ಸಿಗೆ ಅನಿರ್ವಚನೀಯ ಆನಂದ ನೀಡುವುದು.

ಯಚ್ಛೃಣ್ವತಾಂ ರಸಜ್ಞಾನಾಂ ಸ್ವಾದು ಸ್ವಾದು ಪದೇ ಪದೇ ।

ಅಥವಾ

ತದೇವ ಶಶ್ವನ್ಮನಸೋ ಮಹೋತ್ಸವಂ
ಯದುತ್ತಮಶ್ಲೋಕಯಶೋಽನುಗೀಯತೇ

ಎಂದು ಭಾಗವತ ಹೇಳುವಂತೆ ಶ್ರವಣವು ಮನಗೆ ಆನಂದವೀವುದು ಎಂದು ಅನ್ವಯಿಸಿ-ಕೊಳ್ಳಬೇಕು ಶ್ರವಣವೇ ಮನಕೆ ಆನಂದ ನೀಡುವುದಾದರೆ ಧ್ಯಾನವಿನ್ನೆಷ್ಟು ಆನಂದ ನೀಡದು? ಎಂದು ಧ್ವನಿತವಾಗುತ್ತದೆ

ಶ್ರವಣದ ಧ್ಯಾನದ ಆನಂದ ಮೋಕ್ಷಾನಂದಕ್ಕೂ ಮಿಗಿಲು ಎನ್ನುತ್ತದೆ ಬಾಗವತ

ಯಾ ನಿರ್ವೃತಿಸ್ತನುಭೃತಾಂ ತವ ಪಾದಪದ್ಮ-
ಧ್ಯಾನಾತ್ ಭವಜ್ಜನಕಥಾಶ್ರವಣೇನ ವಾ ಸ್ಯಾತ್ ।
ಸಾ ಬ್ರಹ್ಮಣಿ ಸ್ವಮಹಿಮನ್ಯಪಿ ನಾಥ ಮಾ ಭೂತ್
ಕಿಂ ತ್ವಂತಕಾಸಿ ಲುಲಿತಾತ್ ಪತತಾಂ ವಿಮಾನಾತ್ ॥ (೪-೧೦-೧೦)

ಮನಕೆ ಆನಂದ ನೀಡುವುದು ಹರಿಕಥೆಯೊಂದೇ

ಲೋಕದ ಕಥೆ ಮನಸ್ಸನ್ನು ಕೆರಳಿಸೀತು ಕೆರಳಿದ, ಕಲುಷಗೊಂಡು ರಾಡಿಯಾದ ಮನಸ್ಸನ್ನು ತಿಳಿಯಾಗಿಸುವಂಥಹುದು ಹರಿಕಥೆಯೆ ಭಾಗವತ ಹೇಳುತ್ತದೆ—

ಜ್ಞಾನಂ ಯದಾ ಪ್ರತಿನಿವೃತ್ತಗುಣೋರ್ಮಿಚಕ್ರಂ
ಆತ್ಮಪ್ರಸಾದ ಉಭಯತ್ರ ಗುಣೇಷ್ವಸಂಗಃ ॥ (೨-೩-೧೨)

***ಭವಜನಿತ ದುಃಖಗಳ ಕಳೆವುದು***

ಹರಿಕಥಾಶ್ರವಣದಿಂದ ಸಂಸಾರದಲ್ಲಿ ಬರುವ ತಾಪತ್ರಯಗಳು ದೂರವಾಗುವುವು ದುಃಖಗಳು ಪರಿಹಾರವಾಗುವುವು

ದುಃಖ ವಿಷಯಪದಾರ್ಥದಲ್ಲಿ ಇರುವುದಿಲ್ಲ ಅದನ್ನು ನೋಡುವ ಕಣ್ಣಿನಲ್ಲಿರುತ್ತದೆ ಆಲೋಚಿಸುವ ಮನಸ್ಸಿನಲ್ಲಿರುತ್ತದೆ ಯಾವಾಗ ಮನಸ್ಸು ಹರಿಕಥಾಶ್ರವಣದಿಂದ ನಿರ್ಮ-ಲವಾಗಿ ಅಂತರ್ಮುಖವಾಗುವುದೋ, ಯಾವಾಗ ಕಣ್ಣು ವಿಷಯಪದಾರ್ಥವನ್ನು ಬೇರೆ-ಯೆ ದೃಷ್ಟಿಯಿಂದ ಕಾಣಲು ತೊಡಗುವುದೋ, ಆಗ ಭಗವಂತನ ವಿಚಿತ್ರ ಸೃಷ್ಟಿಯಲ್ಲಿ ಎಲ್ಲೆಲ್ಲೂ ಸಂತೋಷ ಉಲ್ಲಾಸಗಳೆ ಕಾಣುವುವು ದುಃಖಗಳು ಮರಯಾಗುವುವು ಭಾಗವತ ಹೇಳುತ್ತದೆ—

ತದೇವ ಶೋಕಾರ್ಣವಶೋಷಣಂ ನೃಣಾಂ
ಯದುತ್ತಮಶ್ಲೋಕಯಶೋಽನುಗೀಯತೇ ।

ಶ್ರೀಹರಿಯ ಯಶೋಗಾನ ಶೋಕಾರ್ಣವಶೋಷಣ!

***ವಿವಿಧ ಬೋಗಗಳಿಹಪರಂಗಳಲಿತ್ತು ಸಲಹುವುದು***

ಯದ್ಯದಿಷ್ಟತಮಂ ಲೋಕೇ ತತ್ತತ್ ಪ್ರಾಪ್ನೋತ್ಯಸಂಶಯಮ್ ।
ಐಶ್ವರ್ಯಂ ರಾಜಸನ್ಮಾನಂ ಭುಕ್ತಿಮುಕ್ತಿಫಲಪ್ರದಮ್ ।

'ಬಯಸಿದ ಅತ್ಯುತ್ತಮ ಪದಾರ್ಥಗಳೆಲ್ಲ ನಿಃಸಂಶಯವಾಗಿ ಲಭಿಸುವುವು ಐಶ್ವರ್ಯ-ರಾಜಸನ್ಮಾನಗಳು ಲಭಿಸುವುವು ಭುಕ್ತಿಮುಕ್ತಿಗಳೆರಡೂ ಲಭ್ಯವಾಗುವುವು' ಎಂದುಮುಂ-ತಾಗಿ ಹರಿನಾಮಸಂಕೀರ್ತನಕ್ಕೆ ಫಲಶ್ರುತಿ ಹೇಳಿದುದುಂಟು ಆದರೆ ಐಹಿಕಪಾರತ್ರಿಕ-ಸುಖಭೋಗ ಶ್ರವಣಾದಿಗಳ ಫಲವೆನಿಸಲಾರದು ಕೃಷಿಗೆ ಧಾನ್ಯದ ಕಾಳುಗಳು ಹೊರತು ಹುಲ್ಲು ಫಲವಾಗಲಾರದು ದಾಸರಾಯರು ವಿವಿಧಭೋಗಲಾಭದ ಫಲವನ್ನು ಆಮಿಷ-ವಾಗಿ ಏಕೆ ತೋರಿಸುತ್ತಿದ್ದಾರೆ? ಜ್ಞಾನಭಕ್ತಿವೈರಾಗ್ಯಫಲವನ್ನೆ ಹೇಳಬೇಕಾಗಿತ್ತಲ್ಲವೆ?

ಆದರೆ 'ರೋಚನಾರ್ಥಂ ಫಲಶ್ರುತಿಃ' ಪಾಮರರಿಗೆ ಶ್ರವಣಾದಿಗಳಲ್ಲಿ ಆಕರ್ಷಣೆ ಉಂಟಾಗುವುದಕ್ಕಾಗಿ ಲೌಕಿಕ ಫಲವನ್ನು ಹೇಳುವುದರಲ್ಲಿ ತಪ್ಪಿಲ್ಲ

ಹಾಗಾದರೆ ಫಲ ಹೇಳುವುದು ಸುಳ್ಳೆ? ಸುಳ್ಳಲ್ಲ 'ಭುಕ್ತಿಮುಕ್ತಿಫಲಪ್ರದಂ' ಎನ್ನುವಂತೆ ಸಂಸಾರದಲ್ಲಿ ಭೋಗವೂ ಸಿಗುತ್ತದೆ, ಕೊನೆಯಲ್ಲಿ ಮೋಕ್ಷವೂ ಲಭಿಸುತ್ತದೆ

ಸಂಸಾರದಲ್ಲಿ ತಾಪತ್ರಯವೇ ಅಧಿಕ ಭಾಗವತ ಹೇಳುತ್ತದೆ—

ಕ್ಷುತ್ತೃಟ್ತ್ರಿಧಾತುಭಿರಿಮಾ ಮುಹುರರ್ದ್ಯಮಾನಾಃ
ಶೀತೋಷ್ಣವಾತವರ್ಷೈರಿತರೇತರಾಚ್ಚ ।
ಕಾಮಾಗ್ನಿನಾಚ್ಯುತರುಷಾ ಚ ಸುದುರ್ಭರೇಣ
ಸಂಪಶ್ಯತೋ ಮನ ಉರುಕ್ರಮ ಸೀದತೇ ಮೇ ॥ (೩-೧೦-೮)

'ಹಸಿವು ನೀರಡಿಕೆ ವಾತಪಿತ್ತಕಫಗಳ ಉಪದ್ರವಗಳು ಶೀತ ಉಷ್ಣ ಗಾಳಿ ಮಳೆಗಳು ಕಾಮಕ್ರೋಧಾದಿಗಳು ಮುಂತಾದವುಗಳಿಂದ ಬಾಧೆ ಪಡುತ್ತಿದ್ದಾರೆ ಜೀವರು ಇದನ್ನು ನೋಡಿ ನನ್ನ ಮನ ನೋಯುತ್ತಿದೆ'

ಈ ತಾಪತ್ರಯಗಳ ಪರಿಹಾರಕ್ಕೆ ಮಾಡುವ ಪ್ರಯತ್ನಗಳೆಲ್ಲ ಇನ್ನೂ ಹೆಚ್ಚಿನ ತಾಪತ್ರಯ ತರುತ್ತಿರುವುದು ಒಂದು ದೊಡ್ಡ ವಿಪರ್ಯಾಸ ಭಾಗವತ ಇದನ್ನೂ ಹೇಳುತ್ತದೆ

ಯನ್ಮೈಥುನಾದಿ ಗೃಹಮೇಧಿಸುಖಂ ಹಿ ತುಚ್ಛಂ
ಕಂಡೂಯನೇನ ಕರಯೋರಿವ ದುಃಖದುಃಖಮ್

ಎರಡೂ ಕೈಗಳಿಂದ ಬಲವಾಗಿ ಕಜ್ಜಿ ತುರಿಸಿಕೊಂಡರೆ ಒಂದು ಕ್ಷಣ ಹಾಯೆನಿಸಿದರೂ ಮುಂದೆ ಇನ್ನೂ ಹೆಚ್ಚಿನ ದುಃಖವೆ ಉಂಟಾಗುವುದು

ಧ್ಯಾನಪ್ರಾರ್ಥನೆಗಳಿಂದ ದುಃಖ ಮರೆಯಬಹುದೆಂದು ಪಾಶ್ಚಿಮಾತ್ಯರೂ ಅರಿತಿದ್ದಾರೆ ಭಾರತದ ಕಡೆಗೇ ಅವರು ಬರುತ್ತಿದ್ದಾರೆ ನಾವು ಮಾತ್ರ ಪಶ್ಚಿಮದ ಕಡೆಗೆ ಆಸೆಯಿಂದ ನೋಡುತ್ತಿರುವುದು ಒಂದು ವಿಪರ್ಯಾಸವೆ ಸರಿ

ಹರಿಕಥಾಶ್ರವಣ ಮಾಡುತ್ತಿದ್ದರೆ ನಮ್ಮ ಕರ್ಮವೆಲ್ಲವೂ ಧರ್ಮವೆನಿಸುತ್ತದೆ

ಧರ್ಮೋ ಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ ।

ಎಂದು ಶ್ರೀಮದಾಚಾರ್ಯರು ಸದಾಚಾರಸ್ಮೃತಿಯಲ್ಲಿ ಹೇಳಿದ್ದಾರೆ ಅದರ್ಮ ಧರ್ಮ-ವಾಗುವಂತೆ ಧರ್ಮವೂ ಪರಮಧರ್ಮವಾಗುವುದು

ದಾನಂ ವ್ರತಂ ತಪಸ್ತೀರ್ಥಂ ಯತ್ಕೃತಂ ತ್ವಿಹ ಜನ್ಮನಿ ।
ಜಪತಾಂ ಶೃಣ್ವತಾಮೇತತ್ ಕೋಟಿಕೋಟಿಫಲಂ ಭವೇತ್ ॥

ದಾನ, ವ್ರತ, ತಪಸ್ಸು, ತೀರ್ಥಯಾತ್ರೆ ಮುಂತಾದುವೆಲ್ಲವೂ ಹರಿನಾಮಜಪಶ್ರವಣಗಳಿಂದ ಹೆಚ್ಚು ಹೆಚ್ಚು ಸಾಮರ್ಥ್ಯ ಹೊಂದಿ ಕೋಟಿ ಕೋಟಿ ಅಧಿಕ ಫಲ ನೀಡುವುವು

ಈ ಫಲಗಳನ್ನು ಆಮಿಷವೆಂದು ತಿಳಿಯಬಾರದು. ಜ್ಞಾನಭಕ್ತಿವೈರಾಗ್ಯಗಳೆ ಪರಮ-ಪುರುಷಾರ್ಥಗಳಲ್ಲ ಅವುಗಳ ಸಹಾಯದಿಂದ ಭಗವಂತನನ್ನು ಸತ್ಕರ್ಮಗಳಿಂದ ಆರಾ-ಧಿಸಿ ಒಲಿಸಿಕೊಳ್ಳಬೇಕು ಅದಕ್ಕೆ ಶರೀರ, ಇಂದ್ರಿಯ, ಅಂತಃಕರಣಗಳ ಪಾಟವ ಬೇಕು ಅದಕ್ಕೆ ಇಹಪರಗಳಲ್ಲಿ ಭೋಗ ಬೇಕು ಅದರಿಂದ ಹರಿಕಥಾಶ್ರವಣ ಇಹಪರಗಳಲ್ಲಿ ವಿವಿಧ ಭೋಗಗಳನ್ನು ನೀಡಿ ಸಲಹುತ್ತದೆ ಎನ್ನುತ್ತಾರೆ ದಾಸರಾಯರು

**ಭೂಸುರರು ಆಲಿಪುದು**

ಹರಿಕಥೆಯನ್ನು ಬ್ರಾಹ್ಮಣರು ಮಾತ್ರ ಆಲಿಸಬೇಕೆಂದು ಅಭಿಪ್ರಾಯವಲ್ಲ ಬ್ರಾಹ್ಮಣರು ಆಲಿಸಲೇಬೇಕು. ಅದನ್ನು ಬಿಟ್ಟು ಬೇರೆ ಕರ್ಮ ಅವರಿಗೆ ವಿಹಿತವಾಗಿಲ್ಲ ಇತರರಿಗೆ ಬೇರೆ ಕರ್ಮಗಳಿವೆ ಜೊತೆಗೆ ಶ್ರವಣವನ್ನೂ ಮಾಡಿದರೆ ಅಧಿಕ ಫಲ [illegible]ಮ-ಸ್ತೋತ್ರದ ಫಲಶ್ರುತಿ ಹೇಳುತ್ತದೆ—

ವೇದಾಂತಗೋ ಬ್ರಾಹ್ಮಣಃ ಸ್ಯಾತ್ ಕ್ಷತ್ರಿಯೋ ವಿಜಯೀ ಭವೇತ್ ।
ವೈಶ್ಯೋ ಧನಸಮೃದ್ಧಃ ಸ್ಯಾತ್ ಶೂದ್ರಃ ಸುಖಮವಾಪ್ನುಯಾತ್ ॥

ಬ್ರಾಹ್ಮಣನಿಗೆ ವೇದಾಂತಜ್ಞಾನ, ಕ್ಷತ್ರಿಯನಿಗೆ ವಿಜಯ, ವೈಶ್ಯನಿಗೆ ಧನಸಮೃದ್ಧಿ ಶೂದ್ರನಿಗೆ ಸುಖ ಇವು ಶ್ರವಣದಿಂದ ಲಭಿಸುವುವು

**ದಿನದಿನದಿ ಆಲಿಪುದು**

ಶಾಸ್ತ್ರಾಭ್ಯಾಸವನ್ನು ಹೆಚ್ಚಿನವರು ಎಂದೂ ಮಾಡುವುದೆ ಇಲ್ಲ ಕೆಲವರು ವೃದ್ಧಾಪ್ಯದಲ್ಲಿ ಸ್ವಲ್ಪ ಮಾಡುತ್ತಾರೆ ಕೆಲವರು ಬಾಲ್ಯದಲ್ಲಿ ಸ್ವಲ್ಪ ಮಾಡುತ್ತಾರೆ ಅನುವ್ಯಾಖ್ಯಾನ ಹೇಳು-ತ್ತದೆ—

ಸಚ್ಛಾಸ್ತ್ರಮಭ್ಯಸೇನ್ನಿತ್ಯಮ್

ಸಚ್ಛಾಸ್ತ್ರಾಧ್ಯಯನವನ್ನು ನಿರಂತರ ನಡೆಸಬೇಕು

ನಿರಂತರವೆಂದರೆ ಹೀಗೆ—

ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ ।
ಅಶಕ್ಯೇ ತು ನಿದ್ರಾದೌ ಪುನರೇವ ಸಮಾಚರೇತ್ ॥

ಶ್ರವಣಾದಿ ಇಲ್ಲದೆ ಕ್ಷಣವೂ ಇರಕೂಡದು ನಿದ್ರಾದಿಗಳಿಂದ ಅದು ಅತ್ಯಂತ ಅಶಕ್ಯವೆನಿಸಿದಾಗ ಸ್ವಲ್ಪ ವಿರಾಮವಿತ್ತು ತಿರುಗಿ ಆರಂಭಿಸಬೇಕು ಎಂದು ಅನುವ್ಯಾಖ್ಯಾನ ಹೇಳಿದೆ

**ಕಿವಿಗೊಟ್ಟಾಲಿಪುದು**

ಭಕ್ತಿಶ್ರದ್ಧೆಗಳಿಂದ ಮನಸ್ಸಿನ ಏಕಾಗ್ರತೆಯಿಂದ ಕಿವಿಗೊಟ್ಟು ಹರಿಕಥೆ ಆಲಿಸಬೇಕು ಆಗ ಮಾತ್ರ ಅದರ ರಹಸ್ಯಾರ್ಥ ತಿಳಿದುಬಂದೀತು

ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥

**ಪರಮೋತ್ಸವದಿ ಕಿವಿಗೊಟ್ಟಾಲಿಪುದು**

ಕಿವಿಗೊಟ್ಟಾಲಿಸುತ್ತ ಪರಮಾನಂದವನ್ನು ಅನುಭವಿಸುವಂಥ ಸಹೃದಯತೆ ಬೇಕು. ಅದಿಲ್ಲದಿದ್ದರೆ ಹರಿಕಥೆ 'ಬರಿ ಹರಿಕಥೆ' ಯಾದೀತು ವೇದಾಂತ 'ಒಣವೇದಾಂತ' ವಾದೀತು

ಈ ಸಹೃದಯತೆ ಸಾತ್ವಿಕ ಜನರಲ್ಲಿ ಸ್ವಾಭಾವಿಕ.

ಸ್ತನ್ಯಪಾನದ ಸವಿಯ ಚಿಣ್ಣರರಿಯುವಂತೆ
ಮಣ್ಣು ಬೊಂಬೆಯು ಬಲ್ಲುದೆ?

ಎಂದು ಮುಂತಾಗಿ ಅನೇಕ ಉದಾಹರಣೆಗಳಿಂದ ಪುರಂದರದಾಸರು ಇದನ್ನು ಸಮರ್ಥಿಸಿದ್ದಾರೆ

**ಉಪಮಾಧ್ವನಿ**

ಲಕುಮೀಧವನ ಮಂಗಳಕದೆಗೆ ಹೇಳಿದ ಲಕ್ಷಣಗಳಿಗೆ ಹರಿಕಥಾಮೃತಸಾರದ ಈ ಪದ್ಯವೆ ಲಕ್ಷ್ಯವಾಗಬಲ್ಲುದು ಈ ಪದ್ಯ ಸುಂದರವಾದ ಭಾಮಿನಿಷಟ್ಪದಿ ಛಂದಸ್ಸಿನಿಂದ ಪ್ರಾಸಾನುಪ್ರಾಸ ತಾಳ ಲಯಗಳಿಂದ ಮಧುರವಾಗಿ ಹಾಡಲು ಯೋಗ್ಯವಾಗಿದ್ದು ಶ್ರವಣೇಂದ್ರಿಯಕ್ಕೆ ಮಧುರಸುಖಾನುಭವ ನೀಡಬಲ್ಲುದು ಮಾತ್ರವಲ್ಲದೆ, ಅರ್ಥಾನುಸಂಧಾನ ಮಾಡಿದಾಗ ಸುಂದರವಾದ ಉಪಮಾಲಂಕಾರದ ಧ್ವನಿಯನ್ನೂ ಹೊರಡಿಸಿ ಮನಸ್ಸಿಗೂ ಆನಂದ ನೀಡಬಲ್ಲುದು

ಉಪಮಾಲಂಕಾರ ಹೀಗೆ–ಜನ್ಮದಾತೆಯಾದ ತಾಯಿ ಮಗನಿಗೆ ಎಂದಿಗೂ ಭುವನಪಾವನಳು, ಮಂಗಲಕರಳು ಅವಳು ಜೋಗುಳ ಹಾಡಿ ಶ್ರವಣೇಂದ್ರಿಯಕ್ಕೂ ನಲ್ನುಡಿಯಾಡಿ ಮನಸ್ಸಿಗೂ ಆನಂದ ನೀಡುವಳು ಮೊಲೆಯೂಡಿಸಿ ವಿವಿಧ ತಿನಿಸುಗಳನ್ನು ತಿನ್ನಿಸಿ ಸುಖ ನೀಡುವಳು ಒಲವಿಂದ ಎತ್ತಿ ಸಲಹುವಳು ಹಾಗೇ ಸಚ್ಛಾಸ್ತ್ರರೂಪವಾದ ಹರಿಕಥೆಯೂ 'ಕಥಾ' ಎಂಬುದು ಸಂಸ್ಕೃತದಲ್ಲಿ ಸ್ತ್ರೀಲಿಂಗಶಬ್ದವಾಗಿರುವುದರಿಂದ ಮಾತೆ-

ಯಾಗಿ ಶ್ರವಣಮನಕಾನಂದವನ್ನೂ ಸಾಂಸಾರಿಕದುಃಖಪರಿಹಾರವನ್ನೂ ಇಹಪರ ಭೋಗಗಳನ್ನೂ ನೀಡಿ ಸಾತ್ವಿಕರು ಪತನ ಹೊಂದದಂತೆ ಉದ್ಧಾರ ಮಾಡಿ ಸಲಹುತ್ತದೆ

ವಸ್ತುತಃ ಇದು ಉಪಮೆಯಲ್ಲ ಅದಕ್ಕಿಂತ ಮಿಗಿಲಾದ ವ್ಯತಿರೇಕಾಲಂಕಾರ ಎನ್ನಬೇಕು ಏಕೆಂದರೆ ಮಾತೆ ಇಹದಲ್ಲಿ ಮಗುವಿಗೆ ಸುಖ ನೀಡುವಳು ಹರಿಕಥೆ ಪರದಲ್ಲಿಯೂ ಅದರಿಂದ ಮಾತೆಗಿಂತ ಹೆಚ್ಚು ಹರಿಕಥೆ

ಇದು ಆಲಂಕಾರಿಕರ ಸರಣಿ ವಸ್ತುತಃ ಹರಿಕಥೆಗೆ ಅಭಿಮಾನಿನಿ ಮಹಾಲಕ್ಷ್ಮಿ ಅವಳು ಇಹಪರಗಳೆರಡರಲ್ಲಿಯೂ ಮಾತೆ ಎನಿಸಿದ ಲೋಕಮಾತೆ

ಅದುಃಖಮಿತರತ್ ಸರ್ವಂ ಜೀವಾ ಏವ ತು ದುಃಖಿನಃ ।
ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥

ಸಂಸಾರಿ ಜೀವರ ದುಃಖ ಕಳೆಯಲೆಂದು ಮಮತೆ ತುಂಬಿದ ತಾಯಾಗಿ ವೇದಾಭಿಮಾನಿನಿ ರಮೆ ಹರಿಯ ಗುಣಗಾನ ಮಾಡುತ್ತಾಳೆ ಕಿವಿಗೊಟ್ಟು ಆಲಿಸಬೇಕು ಮಕ್ಕಳಾದ ನಾವು

**ಕಿವಿಗೊಟ್ಟು ಆಲಿಸಬೇಕು ಗುಟ್ಟು**

ವೇದಮಾತೆ ಪ್ರೀತಿಯಿಂದ ಮಕ್ಕಳಿಗೊಂದು ಗುಟ್ಟು ಹೇಳುತ್ತಿದ್ದಾಳೆ ಏನದು ಗುಟ್ಟು? 'ಭವತಾರಕ ಒಂದೇ ಒಂದು ಹರಿಕರುಣೆಯ ಲಾಭ ಭಕ್ತರಿಗೆ ಅದು ಸುಲಭ'

ನಾಯಮಾತ್ಮಾ ಪ್ರವಚನೇನ ಲಭ್ಯಃ
ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥

ಸ್ವಭಾವತಃ ಅವ್ಯಕ್ತನಾದ ಹರಿ ವ್ಯಕ್ತನಾಗಬೇಕಾದರೆ ಆತ ಕರುಣೆದೋರಬೇಕು ಹೀಗೆ ಹರಿಕರುಣೆಯ ಮಹತ್ವವನ್ನು ಹೇಳುತ್ತ ಕರುಣಾಸಂಧಿಯ ಸಾರವನ್ನೂ ಪರ್ಯಾಯವಾಗಿ ಸೂಚಿಸುವ ಈ ಪದ್ಯವನ್ನು ಕೆಲವು ವ್ಯಾಖ್ಯಾನದಲ್ಲಿ 'ಸಂಧಿಸೂಚನೆ' ಎಂದು ಕರೆದುದೂ ಉಚಿತವೆನ್ನಬಹುದು

ಮಳೆಯ ನೀರೋಣಿಯಲಿ ಪರಿಯಲು
ಬಳಸರೂರೊಳಗಿದ್ದ ಜನರಾ
ಜಲವು ಹೆದ್ದೊರೆಗೂಡೆ ಮಜ್ಜನಪಾನ ಗೈದಪರು ।
ಕಲುಷವಚನಗಳಾದರಿವು ಬಾಂ-
ಬೊಳೆಯ ಪೆತ್ತನ ಪಾದ ಮಹಿಮಾ-
ಜಲಧಿ ಪೊಕ್ಕುದರಿಂದೆ ಮಾಣ್ದಪರೇ ಮಹೀಸುರರು ॥ ೨ ॥

'ಮಳೆ ನೀರು ಬೀದಿಯಲ್ಲಿ ಹರಿಯುತ್ತಿದ್ದರೆ ಅದನ್ನು ಊರೊಳಗಿರುವ ಜನರು ಸ್ನಾನಪಾನಗಳಿಗೆ ಬಳಸುವುದಿಲ್ಲ ಅಪವಿತ್ರವೆಂದು ಬಿಡುತ್ತಾರೆ ಆದರೆ ಅದೇ ನೀರು ದೊಡ್ಡ ನದಿಯನ್ನು ಸೇರಿದರೆ ಅದರಲ್ಲಿ ಸ್ನಾನಪಾನ ಮಾಡುತ್ತಾರೆ ಹಾಗೆಯೆ ನನ್ನ ಮಾತು ಸ್ವತಃ ಅಪವಿತ್ರವಾದರೂ ಗಂಗಾಜನಕನಾದ ಹರಿಯ ಪಾದಮಹಿಮೆಯ ಸಾಗರವನ್ನು ಸೇರುತ್ತಿದೆ ಹರಿಕಥಾಮೃತಸಾರ ಗ್ರಂಥರೂಪದಿಂದ ಪ್ರವಹಿಸುತ್ತದೆ ಅದರಿಂದ ವಿಪ್ರರು ಅದನ್ನು ಅಪವಿತ್ರವೆಂದು ಪರಿತ್ಯಜಿಸುವರೆ?'

***ಬಾಂಬೊಳೆಯ ಪೆತ್ತನ ಪಾದಮಹಿಮಾಜಲಧಿ***

ಹರಿಕಥಾಮೃತಸಾರ ಸತ್ಕಾವ್ಯ ಕವಿವಾಣಿ ಲೌಕಿಕವಿಷಯದಲ್ಲಿ ಪ್ರವೃತ್ತವಾದರೆ ಅದು ಓಣಿಯಲ್ಲಿ ಹರಿವ ಮಳೆ ನೀರಿನಂತೆ ಅಗ್ರಾಹ್ಯವಾಗುವುದು ಅದರಿಂದಲೆ 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂದು ಶಾಸ್ತ್ರನಿಷೇಧವಿದೆ ಭಗವಂತನ ವಿಷಯದಲ್ಲಿ ಹೊರಟರೆ ಅದೇ ಕವಿವಾಣಿ ಹೆದ್ದೊರೆಗೂಡುವ ಮಳೆನೀರಿನಂತೆ ಗ್ರಾಹ್ಯವಾಗುವುದು 'ಕಾವ್ಯಶಾಸ್ತ್ರವಿನೋದೇನ ಕಾಲೋ ಗಚ್ಛತಿ ಧೀಮತಾಮ್' ಎಂದು ವಿಧಿ ಹರಿಕಥಾಮೃತಸಾರ ಹರಿಕಥೆಯಾದ್ದರಿಂದ ಅತ್ಯಂತ ಪ್ರಶಸ್ತ ಎನ್ನುತ್ತಿದ್ದಾರೆ ದಾಸರಾಯರು

ವಸ್ತುತಃ ಇಲ್ಲಿ ದಾಸರಾಯರು ಶ್ರೀಹರಿಯ ಕರುಣೆಯನ್ನೇ ಭಂಗ್ಯಂತರದಿಂದ ಬಣ್ಣಿಸುತ್ತಿದ್ದಾರೆ ನನ್ನ ಮಾತುಗಳು ಓಣಿನೀರಿನಂತೆ ಸ್ವತಃ ಅಪವಿತ್ರವೆ ಆದರೂ ಕರುಣಾಳುವಾದ ಹರಿ ಆ ಮಾತುಗಳಿಂದಲೇ ತನ್ನನ್ನು ಹೊಗಳಿಸಿಕೊಳ್ಳುತ್ತಾನೆ! ಅದರಿಂದ ಅವನಿಗೇನಾಗಬೇಕಾಗಿದೆ? ಆತ ಸಮುದ್ರ ಸಮುದ್ರಕ್ಕೆ ಮಹಾನದಿಗಳೇ ಎಷ್ಟು ಬಂದರೂ ಅದು ಉಕ್ಕುವುದಿಲ್ಲ ಇನ್ನು ಓಣಿನೀರಿನ ಬಗ್ಗೆ ಏನು ಹೇಳಬೇಕು? ಹಾಗೇ ಸ್ವತಃ ಪೂರ್ಣನಾದ ಹರಿ ನಾನು ಮಾಡುವ ಈ ಅಲ್ಪಸ್ತುತಿಯನ್ನಾಲಿಸುತ್ತಾನೆ ಪರಮಪವಿತ್ರಳಾದ ಗಂಗೆಗೂ ಜನಕನಾದ, ಪವಿತ್ರಗಳಿಗೆ ಪವಿತ್ರನಾದ ಆತ ಅಪವಿತ್ರವಾದ ನನ್ನ ಮಾತನ್ನು ತನ್ನ ಪಾದಸಂಗದಿಂದ ಪವಿತ್ರಗೊಳಿಸುತ್ತಾನೆ ನನ್ನ ಈ ಗ್ರಂಥವನ್ನು ವಿದ್ವಾಂಸರಿಗೂ ಮಾನ್ಯವಾಗುವಂತೆ ಮಾಡಿ ಅನುಗ್ರಹಿಸುತ್ತಾನೆ

***ಕಲುಷವಚನಗಳಾದರೂ***

ಯಾವುದೇ ಪವಿತ್ರ ವಸ್ತುವೂ ಸ್ವತಃ ಪವಿತ್ರವಾಗಿರುವುದಿಲ್ಲ ಅದರೊಳಗೆ ಪವಿತ್ರನಾದ ಹರಿ ಇರುವುದರಿಂದ ಅದು ಪವಿತ್ರ ಗಂಗೆಯ ದೃಷ್ಟಾಂತ ಕೊಟ್ಟಿದ್ದಾರೆ ದಾಸರಾಯರು ಗಂಗೆ ಎಲ್ಲ ನದಿಗಳಿಗಿಂತಲೂ, ತನ್ನ ಪತಿಯಾದ ಸಮುದ್ರಕ್ಕಿಂತಲೂ ಹೆಚ್ಚು ಪವಿತ್ರವೇಕೆ? 'ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ' 'ಗಂಗೆ ಎಂದರೆ ದ್ರವರೂಪದಿಂದ ಹರಿವ ಹರಿಯೇ' ಎನ್ನುವಷ್ಟು ಹರಿಯ ಅಧಿಕ ಸನ್ನಿಧಾನವಿರುವುದೆ ಅದಕ್ಕೆ ಕಾರಣ ಹಾಗೆಯೆ ಹರಿಕಥಾಮೃತಸಾರ ಹರಿಸ್ತುತಿರೂಪವಾಗಿದ್ದು ಹರಿಯ ಮಹಾಸನ್ನಿಧಾನದಿಂದ ಪವಿತ್ರವೆನಿಸಿದೆ

ಅಥವಾ ಹೆದ್ದೊರೆಯ ದೃಷ್ಟಾಂತದಿಂದ ಹೀಗೂ ಹೇಳಬಹುದು ಮಳೆನೀರು ಗಂಗೆಯನ್ನು ನೇರುವುದಕ್ಕೆ ಮೊದಲು ಓಣಿಯಲ್ಲಿ ಹರಿಯುತ್ತಿರುವಾಗಲೂ ಗಂಗಾಜಲವೆ ಆಗಿತ್ತು ವಾಯುದೇವ ಸಮುದ್ರದಿಂದ ಉದಿಸುವ ಮೋಡಗಳನ್ನು ಸರಿಯಾಗಿ ಗುರುತಿಸಿ ಆಯಾ ನದೀಜಲಯುಕ್ತವಾದ ಮೋಡಗಳನ್ನು ಆಯಾ ನದೀಪ್ರದೇಶಕ್ಕೇ ಒಯ್ದು ಮಳೆ ಸುರಿಸುತ್ತಾನೆ ಇದರಿಂದಾಗಿ ಗಂಗಾಜಲವೆಂದೂ ಕಾವೇರಿಯನ್ನು ನೇರುವುದಿಲ್ಲ ಕಾವೇರಿಜಲವೆಂದೂ ಗಂಗೆಯನ್ನು ನೇರುವುದಿಲ್ಲ ಅದರಿಂದ ಗಂಗೆಗೆ ಸೇರುವ ನೀರು ಮೊದಲಿಗೆ ಬೀದಿಯಲ್ಲಿ ಹರಿವಾಗಲೂ ಗಂಗಾಜಲವೇ ಆಗಿರುತ್ತದೆ ಆದರೂ ಅಪವಿತ್ರವಾದ ಬೀದಿಯಲ್ಲಿ ಹರಿಯುವುದರಿಂದಲೆ ಅಗ್ರಾಹ್ಯವೆನಿಸುತ್ತದೆ ಗಂಗೆಯನ್ನು ನೇರಿದಾಗ ಗ್ರಾಹ್ಯವೆನಿಸುತ್ತದೆ ವೇದಾದಿ ಶಾಸ್ತ್ರಗಳು ಹರಿಪರವಾದಾಗ ಪರವಿದ್ಯೆ ಎನಿಸುತ್ತವೆ ಅನ್ಯಪರವಾದಾಗ ಅಪರವಿದ್ಯೆ ಎನಿಸುತ್ತದೆ ಕರ್ಮಫಲಾಪೇಕ್ಷೆ ಇಲ್ಲದೆ ಮಾಡಿದರೆ ಮೋಚಕ ಫಲಾಪೇಕ್ಷೆಯಿಂದ ಮಾಡಿದರೆ ಬಂಧಕ ನಮ್ಮ ಮಾತೂ ಹರಿಯನ್ನು ಮರೆತು ವಿಷಯಾಸಕ್ತಿಯಿಂದ ನುಡಿದರೆ ಕಲುಷವಚನವೆನಿಸುತ್ತದೆ ಹರಿಯನ್ನು ಸ್ಮರಿಸುತ್ತಲ ಲೋಕವ್ಯವಹಾರ ಮಾಡುತ್ತಿದ್ದರೆ ಪವಿತ್ರವಚನವಾಗುತ್ತದೆ

ನಡೆದದ್ದು ಎಲ್ಲವೂ ಲಕ್ಷ ಪ್ರದಕ್ಷಿಣೆ
ನುಡಿದದ್ದು ಎಲ್ಲವೂ ಗಾಯತ್ರೀಮಂತ್ರ! —ಪುರಂದರದಾಸರು

ಆದ್ದರಿಂದ ಅನ್ಯರ ವ್ಯವಹಾರದಲ್ಲಿ ಕಲುಷವಚನಗಳೆನಿಸಿದ ಮಾತುಗಳೇ ಹರಿದಾಸರ ವ್ಯವಹಾರದಲ್ಲಿ ಪವಿತ್ರ ವಚನಗಳಾಗುತ್ತವೆ ಹರಿಕಥಾಮೃತಸಾರ ಹೀಗೆ ಪವಿತ್ರವೆನಿಸಿದೆ

ಅಥವಾ 'ಮಳೆಯ ನೀರೋಣಿಯಲಿ ಪರಿಯಲು' ಎಂಬ ಮಾತಿನಿಂದ ದಾಸ-ರಾಯರು ಸ್ವಾಹಂಕಾರಖಂಡನೆ ಮಾಡುತ್ತ ವಿನಯೋಕ್ತಿಯನ್ನಾಡುತ್ತಿದ್ದಾರೆ ಶ್ರೀಜಯ-ತೀರ್ಥರು ಶ್ರೀಮನ್ನ್ಯಾಯಸುಧೆಯ ಪ್ರಾರಂಭದಲ್ಲಿ 'ನ ಶಬ್ದಾಬ್ಧೌ ಗಾಢಾಃ' ಎಂದು ಮುಂತಾಗಿ ತನಗೆ ತರ್ಕವ್ಯಾಕರಣ ಒಂದೂ ತಿಳಿಯದು ಆದರೂ ಶ್ರೀಮದಾಚಾರ್ಯರ ದಯೆಯಿಂದ ನಾನು ವಿದ್ವಾಂಸನೆಂದು ಮಾನ್ಯತೆ ಪಡೆದೆನೆನ್ನುತ್ತಾರೆ ತತ್ವಪ್ರಕಾಶಿಕೆಯ ಆರಂಭದಲ್ಲಿ ಬೀದಿನೀರು ಗಂಗೆಯನ್ನು ನೇರಿ ಪವಿತ್ರವೆನಿಸುವಂತೆ ನನ್ನ ಮಾತು ಶ್ರೀಮದಾಚಾರ್ಯರ ಗ್ರಂಥಕ್ಕೆ ವ್ಯಾಖ್ಯಾನಮಾಡಿ ಪವಿತ್ರವೆನಿಸುತ್ತಿದೆ ಎನ್ನುತ್ತಾರ ದಾಸರಾಯರೂ ಹಾಗೇ ಮುಂದೆ 'ವೇದಶಾಸ್ತ್ರ ನಯುಕ್ತಿಗ್ರಂಥಗಳೋದಿ ಕೇಳ್ದವನಲ್ಲ' 'ಬುದ್ಧಿವಿದ್ಯಾಬಲದಿ ಪೇಳಿದ ಶುದ್ಧಕಾವ್ಯವಿದಲ್ಲ ತತ್ವಸುಪದ್ಧತಿಗಳನು ತಿಳಿದ ಮಾನವನಲ್ಲ' ಎಂದು ಮುಂತಾಗಿ ಹೇಳುತ್ತಾರೆ ಇಲ್ಲಿ ಕಲುಷವಚನಗಳಾದರೂ ಎನ್ನುತ್ತಾರೆ ಎರಡೂ ಸ್ವಾಹಂಕಾರಖಂಡನೆಯೆ ಹಾಗೇ ಮುಂದೆ 'ಲೋಕವಾರ್ತೆ ಇದಲ್ಲ ಪರಲೋಕೈಕಸಾಧನ ವಾರ್ತೆ' ಎನ್ನುತ್ತಾರೆ ಇಲ್ಲಿಯೂ 'ಪಾದಮಹಿಮಾಜಲಧಿಯನೆ ಪೊಕ್ಕುದರಿಂದ' ಎನ್ನುತ್ತಾರೆ

ಗೂಢವಾಗಿ ಹೀಗೂ ಹೇಳುತ್ತಾರ ನನ್ನ ಮಾತುಗಳು ಕಲುಷವಚನಗಳಲ್ಲ ಒಂದು ವೇಳೆ ಕಲುಷವಚನಗಳೆಂದೇ ಒಪ್ಪಿದರೂ ಹರಿವಾದಸಂಗವಾಗಿದೆ ಎಂದ ಮೇಲೆ ಹೇಗೆ ಅಗ್ರಾಹ್ಯವಾದೀತು?

ಬ್ರಹ್ಮದೇವ ತನ್ನ ಕಮಂಡಲು ಜಲವನ್ನು ತ್ರಿವಿಕ್ರಮನ ವಾದಗಳಿಗೆ ಎರೆದೊಡನೆ ಆ ನೀರು ಪವಿತ್ರ ಗಂಗಾಪ್ರವಾಹವಾಗಿ ಹರಿಯಿತು ಹಾಗೇ ನಾನೂ ನನ್ನ ಜ್ಞಾನಧಾರೆಯನ್ನು ಹರಿವಾದಕ್ಕೆ ಅರ್ಪಿಸಿದಾಗ ಈ ಗ್ರಂಥರೂಪದಿಂದ ಕಾವ್ಯಗಂಗೆ ಪ್ರವಹಿಸಿತು ೩೨ ಸಂಧಿಗಳ ಪವಿತ್ರ ಮಹಾಪ್ರವಾಹ ಅಸಂಖ್ಯ ತಾತ್ವಿಕ ಜನರು ಯಥೇಚ್ಛ ವಾನ ಮಾಡಿ ಸಂಸಾರ-ತಾಪವನ್ನು ವರಿಹರಿಸಿಕೊಳ್ಳಲಿ ಸಂಕೋಚವೆ ಬೇಡ ತನಗೆ ಶಕ್ತಿ ಉಂಟೆ ಇಲ್ಲವೆ ಎಂದು ಆಲೋಚಿಸುತ್ತ ವಿಳಂಬ ಮಾಡುವುದೂ ಬೇಡ

ವಸ್ತ್ರೇಣಾಪಿ ಗ್ರಹಃ ಪ್ರೋಕ್ತೋ ರಾಜಮಂದಿರಸರ್ಪಿಷಃ ।

'ವಾತ್ರೆ ಇಲ್ಲವೆಂದು ನಿಧಾನಿಸಬೇಡಿ, ಧೋತ್ರದ ಅಂಚಿನಲ್ಲಿಯಾದರೂ ರಾಜನ ಅರ-ಮನೆಯ ತುಪ್ಪವನ್ನು ಕಟ್ಟಿಕೊಳ್ಳಿ, ಬಿಡಬೇಡಿ' ಎಂದು ಶ್ರೀವಾದಿರಾಜರು ಹೇಳುವಂತೆ ವಾದಿರಾಜರ ಕೋಶಕೊಪ್ಪುವ ಈ ಗ್ರಂಥವನ್ನು ಸಜ್ಜನರೆಲ್ಲ ತಮ್ಮ ಹೃದಯದಲ್ಲಿ ತುಂಬಿಕೊಳ್ಳಲಿ ಎನ್ನುತ್ತಿದ್ದಾರೆ ದಾಸರಾಯರು

ಭಾಷೆ ಯಾವುದಾದರೇನು? ಸಂಸ್ಕೃತದ ಸಡಗರವೇನು?

'ಅನಾದಿಯಾಗಿ ಸರ್ವದೇಶಭಾಷೆಗಳಿವೆ ಅಲ್ಲಿ ಹರಿಯ ಭಕ್ತರೂ ಇರುವರು ಅವರವರ ಭಾಷೆಗೆ ಹರಿ ಒಲಿಯುತ್ತಾನೆ ಭಾಷೆ ಯಾವುದಾದರೇನು?

ಹರಿಯ ಜ್ಞಾನ ಮುಖ್ಯ ಭಾಷೆ ಮುಖ್ಯವಲ್ಲ ಸಂಸ್ಕೃತ ವಂಡಿತರಿಗೆ ಬಹಿರ್ಘಟವಟಾ-ದಿಜ್ಞಾನ ಉಳ್ಳವರಿಗೆ ಪರಮಾತ್ಮನ ಮಹಿಮೆ ಗೊತ್ತಾಗುವುದೆ? ಸಂಸ್ಕೃತವೆ ತಾರಕವೆ? ಜ್ಞಾನ ತಾರಕವೆ? ಹೇಳಿ

ಎಲ್ಲಾ ಭಾಷೆಗಳಲ್ಲಿ ದೇಶಗಳಲ್ಲಿ ವರ್ಣಾಭಿಮಾನಿ ದೇವತೆಗಳೇ ಇದ್ದು ಜ್ಞಾನ ಕೊಡುವರು ತಾನೆ?

ದೇಶ ಕಾಲ ಕರ್ಮ ಗುಣ ವಿಚಾರಾಚಾರ
ಬಾಷೆರೂಪ ಕ್ರಿಯಾಭೇದವಾದರೇನು?
ದೋಷದೂರರೆ ನೀವು ತತ್ತತ್ ಸ್ಥಾನದಲಿ
ವಾಸವಾಗಿದ್ದು ನಂಬಿದ ಜನರ ಮನೋ-
ಪಾಸನೆ ಪ್ರಕಾರದಲೀಸುತಿರಲಿಕ್ಕೆ
ಏನು ಬಗೆಯಿಂದ ಚಿಂತಿಸೆ ಸಲ್ಲದು ॥ —ವಿಜಯದಾಸರು

ಆದರ್ಶವಗತಾಕ್ಷ ಭಾಷಾ-
ಭೇದದಿಂದಲಿ ಕರೆಯಲದನು ನಿ-
ಷೇಧ ಗೈಸವಲೋಕಿಸದೆ ಬಿಡುವರೆ ವಿವೇಕಿಗಳು? —ಜಗನ್ನಾಥದಾಸರು
ಸಂಸ್ಕೃತದ ನಡಗರವೇನು ಸುಗುಣರಿಗೆ? —ಕರ್ಜಗಿ ದಾಸಪ್ಪನವರು

**ಸಂಸ್ಕೃತ ದೇವಭಾಷೆ**

ಹೀಗೆ ಕೇಳುವವರಿಗೆ ಪ್ರತಿಯಾಗಿ ಸಂಸ್ಕೃತ ಪಂಡಿತರು ತಿರುಗಿ ಪ್ರಶ್ನೆ ಮಾಡಬ-ಹುದು—

'ಎಲ್ಲಾ ದೇಶಗಳಲ್ಲಿ ಎಲ್ಲಾ ಅನ್ನಗಳಲ್ಲಿ ವಾಸುದೇವನ ಇದ್ದು ತೃಪ್ತಿ ಕೊಡುತ್ತಾನೆ ತಾನೆ? ಅನ್ನ ಯಾವುದಾದರೇನಂತೆ? ಊಟ ಮುಖ್ಯ!'

—ಇಂಥ ಒಣ ಚರ್ಚೆಗಳಿಂದ ಏನೂ ಸಾಧಿಸಲಾಗುವುದಿಲ್ಲ 'ಎಲ್ಲರೂ ಉಣ್ಣು-ವುದು ಒಂದೇ ಅನ್ನವನ್ನು, ಉಸಿರಾಡುವುದು ಒಂದೇ ಗಾಳಿಯನ್ನು, ಜಾತಿಮತಭೇದ-ವೇಕೆ?' ಎನ್ನುವಂತೆ ಇದು ಯಾವುದು ಧರ್ಮ? ಯಾವುದು ನೀತಿ? ಯಾವುದು ಮಡಿ? ಯಾವುದು ಮೈಲಿಗೆ? ಇಂದ ವಿಷಯಗಳಿಗೆಲ್ಲ ಶಾಸ್ತ್ರ ಒಂದೇ ಆಧಾರ, ಯುಕ್ತಿಯಲ್ಲ

ಶಾಸ್ತ್ರ ಭಾಷೆಯ ಬಗ್ಗೆ ಬಹಳ ವಿಚಾರ ಮಾಡಿದೆ. ಕೊನೆಗೆ, ಸಂಸ್ಕೃತ ಭಾಷ ಒಂದೇ ಪವಿತ್ರ ದೇವಭಾಷೆ ಎಂದು ತೀರ್ಮಾನಿಸಿದೆ ಸಂಸ್ಕೃತ ಬಾರದವನಿಗೆ ಯಜ್ಞ ಮಾಡಲು ಅಧಿ-ಕಾರ ವಿಲ್ಲ! ಯಜ್ಞದಲ್ಲಿ ನಡುವೆ ಬೇರೆ ಭಾಷ ಆಡಿದರೆ ಯಜ್ಞ ಕೆಡುತ್ತದ ಅದಕ್ಕ ಪ್ರಾಯ-ಶ್ಚಿತ್ತವಾಗಿ 'ಸಾರಸ್ವತೇಷ್ಟಿ' ಎಂಬ ಇನ್ನೊಂದು ಯಜ್ಞ ಮಾಡಬೇಕಾಗುತ್ತದೆ ಆದ್ದರಿಂದ ಯಜ್ಞದಲ್ಲಿ ವಿಹಿತವಾದ ಹವಿಸ್ಸಿನಂತೆ ಪವಿತ್ರವಾದುದು ಸಂಸ್ಕೃತ ಭಾಷ ಅದನ್ನು ಬೇರೆ ಭಾಷೆಗೆ ಹೋಲಿಸಬಾರದು

ಬೇರೆ ಭಾಷೆ ದೇವತೆಗಳಿಗೆ ತಿಳಿಯದೆಂದಲ್ಲ ದೇವಕಾರ್ಯದಲ್ಲಿ ವಿಹಿತವಾದ ಭಾಷ ಎಂದು ಸಂಸ್ಕೃತ ದೇವಭಾಷೆ ಎನಿಸಿದೆ

ಆದರ್ಶವನ್ನು ಅಂದರೆ ಕನ್ನಡಿಯನ್ನು ಅಗತಾಕ್ಷನೊಬ್ಬ, ಅಂದರೆ ಕಣ್ಣಿರುವ ಒಬ್ಬ 'ಕನ್ನಡಿ' ಎಂದೋ 'ಆಈನಾ' ಎಂದೋ ಬೇರೆ ಬೇರ ಭಾಷೆಗಳಲ್ಲಿ ಬೇರೆ ಬೇರೆ ಶಬ್ದದಿಂದ ಕರೆದರೆ ಕನ್ನಡಿ ಕನ್ನಡಿಯಲ್ಲವೆಂದಾಗುವುದೆ? ಎಂದು ದಾಸರು ಕೇಳುತ್ತಿದ್ದಾರೆ, ನಿಜ ಆದರೆ 'ಕನ್ನಡಿ' ಮುಂತಾದ ಪ್ರಾಕೃತ ಶಬ್ದಗಳು ಕನ್ನಡಿ ಎಂಬ ಒಂದು ವಸ್ತುವನ್ನು ಮಾತ್ರ ಸ್ಥೂಲವಾಗಿ ಪರಿಚಯಿಸಬಲ್ಲವು 'ಆದರ್ಶ' ಎಂಬ ಸಂಸ್ಕೃತಶಬ್ದ ಕನ್ನಡಿಯೆಂಬ ಒಂದು ವಸ್ತುವಿನ ಅನೇಕ ಮುಖಗಳ ವಿಶ್ವರೂಪವನ್ನೇ ತೋರಿಸಬಲ್ಲುದು ಉದಾ—'ಆದರ್ಶ' ಎಂಬಲ್ಲಿ 'ಆ' ಎಂದರೆ ಚೆನ್ನಾಗಿ, ಸ್ವಲ್ಪ ಎಂದು ಎರಡೂ ಅರ್ಥವಿದೆ ಕನ್ನಡಿ ನಿರ್ಮಲವಾಗಿದ್ದರೆ ಚೆನ್ನಾಗಿ ಮುಖವನ್ನು ತೋರಿಸೀತು ಮಲಿನವಾದರೆ ಸ್ವಲ್ಪಮಾತ್ರ 'ದರ್ಶ' ತೋರಿಸೀತು

ಮಂಗಳವಸ್ತುವಾದ್ದರಿಂದ ಬೆಳಿಗ್ಗೆ ಎದ್ದೊಡನೆ ಎಲ್ಲರೂ ಚೆನ್ನಾಗಿ ನೋಡಬೇಕಾದುದೂ ಆದರ್ಶ ಕನ್ನಡಿ ಚೆನ್ನಾಗಿ ದಿನವಿಡೀ ಹೆಣ್ಣುಮಕ್ಕಳು ಮುಖನೋಡಿಕೊಳ್ಳುವ ವಸ್ತು ಆದರ್ಶ ಕನ್ನಡಿ ಇತ್ಯಾದಿ ಹೀಗೆ ಸಂಸ್ಕೃತ ಶಬ್ದಗಳಲ್ಲಿ ವಿಶಾಲವಾದ ಅರ್ದಪ್ರಪಂಚವೇ ಅಡಗಿದೆ ಈ ಸಾಮರ್ಥ್ಯ ಬೇರೆ ಭಾಷೆಯಲ್ಲಿ ಇಲ್ಲ 'ಸಂಸ್ಕೃತದ ಬಡಗೇನು? ಸಂಸ್ಕೃತದಲಿನ್ನೇನು?' ಎನ್ನಲಾಗದು

ಸಂಸ್ಕೃತದಲ್ಲಿರುವುದನ್ನೆಲ್ಲ ಕನ್ನಡಕ್ಕೆ ಭಾಷಾಂತರಿಸಿದ್ದೇವೆ ಸಂಸ್ಕೃತದಲ್ಲಿ ಇನ್ನೇನೂ ಉಳಿದಿಲ್ಲ ಬರಡೆಮ್ಮೆಯನ್ನು ಏಕೆ ಸಾಕಬೇಕು? ಎಂದೂ ಕೆಲವರು ಕೇಳುತ್ತಾರೆ ಆದರೆ ಸಂಸ್ಕೃತ ಭಾಷಾಂತರಿಸಲಾಗದ ಭಾಷೆ ಯಾವುದೇ ಭಾಷೆ ಇನ್ನೊಂದು ಭಾಷೆಗೆ ಸಮರ್ಪ-ಕವಾಗಿ ತರ್ಜುಮೆಯಾಗದು ಸಂಸ್ಕೃತವಂತೂ ಎಷ್ಟುಮಾತ್ರಕ್ಕೂ ಭಾಷಾಂತರಕ್ಕೆ ಎಟುಕದ ಭಾಷೆ ಎನ್ನಬೇಕು ಉದಾ—ವಿಷ್ಣುಸಹಸ್ರನಾಮದ ಒಂದೊಂದು ನಾಮಕ್ಕೇ ನೂರು ಅರ್ಥಗಳಿವೆ ಹೇಗೆ ಅನುವಾದಿಸಲು ಸಾಧ್ಯ?

ದಾಸರಾಯರಿಗೆ ಸಂಸ್ಕೃತವನ್ನು ತೆಗಳುವ ಅಭಿಪ್ರಾಯವಿಲ್ಲ 'ಯಾವ ಭಾಷೆಯಲ್ಲಿ ಒಂದು ವಿಷಯವನ್ನು ಹೇಳಿದರೂ ಆ ವಿಷಯ ಅಗ್ರಾಹ್ಯವಾಗುವುದಿಲ್ಲ ಮೈಲಿಗೆಯಾದ ಭಾಷೆಯಲ್ಲಿ ಹೇಳಿದ ಮಾತ್ರಕ್ಕೆ ವಸ್ತು ಮೈಲಿಯಾಗುವುದಿಲ್ಲ' ಎನ್ನುತ್ತಿದ್ದಾರೆ ಆದರೆ ವಸ್ತು ಮೈಲಿಗೆಯಾಗುವುದಿಲ್ಲವಾದರೂ ನುಡಿವ ನಾಲಿಗೆ ಮೈಲಿಗೆಯಾಗುತ್ತದೆ! ಅದರಿಂದಲೆ ಪ್ರಾಕೃತ ಭಾಷೆ ಯಜ್ಞಕಾಲದಲ್ಲಿ ನಿಷಿದ್ಧ! ಮ್ಲೇಚ್ಛ ಭಾಷೆ ಯಾವ ಕಾಲಕ್ಕೂ ನಿಷಿದ್ಧ!

> ಯಸ್ತು ಪ್ರಯುಂಕ್ತೇ ಕುಶಲೋ ವಿಶೇಷೇ
> ಶಬ್ದಾನ್ ಯಥಾವದ್ ವ್ಯವಹಾರಕಾಲೇ ।
> ಸೋಽನಂತಮಾಪ್ನೋತಿ ಫಲಂ ಪರತ್ರ
> ವಾಗ್ಯೋಗವಿದ್ ದುಷ್ಯತಿ ಚಾಪಶಬ್ದೈಃ ॥

'ವ್ಯಾಕರಣಶಾಸ್ತ್ರದಲ್ಲಿ ಕುಶಲನಾಗಿದ್ದು ವ್ಯವಹಾರಕಾಲದಲ್ಲಿ ಶಬ್ದಗಳನ್ನು ಸರಿಯಾಗಿ ಪ್ರಯೋಗಿಸುವವನಿಗೆ ಪರಲೋಕದಲ್ಲಿ ಅನಂತ ಫಲವಿದೆ ತಪ್ಪಾಗಿ ಪ್ರಯೋಗಿಸುವವನು ಪಾಪಭಾಗಿಯಾಗುತ್ತಾನೆ'

> ತಸ್ಮಾದ್ ಬ್ರಾಹ್ಮಣೇನ ನ ಮ್ಲೇಚ್ಛಿತವೈ ನಾಪಭಾಷಿತವೈ
> ಆಹಿತಾಗ್ನಿರಪಶಬ್ದಂ ಪ್ರಯುಜ್ಯ ಸಾರಸ್ವತೀಮಿಷ್ಟಿಂ ನಿರ್ವಪೇತ್ ॥

'ಬ್ರಾಹ್ಮಣನು ಮ್ಲೇಚ್ಛ ಅಪಭ್ರಷ್ಟ ಭಾಷೆಗಳನ್ನಾಡಕೂಡದು ಆಡಿದರೆ ಪ್ರಾಯಶ್ಚಿತ್ತವಾಗಿ ಸಾರಸ್ವತೀಷ್ಟಿ ಮಾಡಬೇಕಾಗುವುದು' ಎನ್ನುತ್ತದೆ ಶತಪಥ ಬ್ರಾಹ್ಮಣ ವಚನ

ವ್ಯಾಕರಣಶುದ್ಧವಾಗಿ ಪವಿತ್ರವಾಗಿ ಸಂಸ್ಕೃತಭಾಷೆಯಲ್ಲಿಯೆ ಬರೆದ ಗ್ರಂಥವಾದರೂ ಹರಿಸ್ತುತಿ ಮಾಡದಿದ್ದರೆ ಅದು ಕಾಗ ಮುಳುಗುವ ಕೊಚ್ಚೆ ನೀರಿನ ಹಳ್ಳವಾದೀತು, ಹಂಸ ವಿಹರಿಸುವ ಮಾನಸಸರೋವರವಾಗಲಾರದು—

ತದ್ ಧ್ವಾಂಕ್ಷತೀರ್ಥಂ ನತು ಹಂಸಸೇವಿತಮ್

ಎಂದು ಭಾಗವತ ಹೇಳುವುದು ವಿಷಯದೃಷ್ಟಿಯಿಂದ ಅದು ಹೇಯ ಎನ್ನುವ ಅಭಿಪ್ರಾಯ-ದಿಂದ, ಹೊರತು ಭಾಷಾದೃಷ್ಟಿಯಿಂದಲ್ಲ. ಆದರೆ ಪ್ರಾಕೃತ ಭಾಷೆಯಲ್ಲಿ ಒಂದು ಸಚ್ಛಾಸ್ತ್ರವೆ ಇದ್ದರೂ ಅದು ಗ್ರಾಹ್ಯವಲ್ಲ ಎನ್ನುತ್ತಿದೆ ಶೇಷಧರ್ಮವಚನ

ಭಾಷಯಾ ರಚಿತಂ ಶಾಸ್ತ್ರಮಿಹ ಲೋಕೇ ಸುಖಪ್ರದಮ್ ।
ಪರಲೋಕೇ ಭಯಕರಂ ತಸ್ಮಾತ್ ತತ್ ಪರಿವರ್ಜಯೇತ್ ॥

'ಶಾಸ್ತ್ರವನ್ನೇ ಆದರೂ ಪ್ರಾಕೃತ ಭಾಷೆಯಲ್ಲಿ ರಚಿಸಿದ್ದರೆ ಅದು ಈ ಲೋಕದಲ್ಲಿ ಪಾಂಡಿತ್ಯ, ಧನ, ಕೀರ್ತಿ, ಪ್ರತಿಷ್ಠೆಮುಂತಾದ ಫಲ ನೀಡಿದರೂ ಪರಲೋಕದಲ್ಲಿ ಭಯವನ್ನೇ ನೀಡು-ವುದು. ಅದರಿಂದ ಅದನ್ನು ವರ್ಜಿಸಬೇಕು'

ಅದರಿಂದ ಪ್ರಾಕೃತ ಭಾಷೆಯಲ್ಲಿರುವ ಈ ಹರಿಕಥಾಮೃತಸಾರವನ್ನು ಹೇಗೆ ಸ್ವೀಕರಿಸ-ಲಾದೀತು? ಎನ್ನುವ ಆಕ್ಷೇಪ ಕೇವಲ ಸಂಸ್ಕೃತ ಪಂಡಿತರ ಆಗ್ರಹಮಾತ್ರವೇನಲ್ಲ. ಗಟ್ಟಿ-ಯಾದ ಆಕ್ಷೇಪವಿದು

ಹರಿಕಥಾಮೃತಸಾರದ ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ ಇನ್ನೊಂದು ಬಗೆಯಿಂದ ಆಕ್ಷೇಪಿಸಲಾಗಿದೆ

ಭಾಗವತ ಏಕಾದಶಸ್ಕಂಧತಾತ್ಪರ್ಯದಲ್ಲಿ

'ಗರ್ದಭಯಾನಮಸಂಸ್ಕೃತವಾಣೀತ್ಯಾದೇ'

ಎಂದು ಪಸ್ತುವಿನ ಬುದ್ಧಿ ಅರುದ್ಧಗಳನ್ನು ಹೇಳುವ ಸಂದರ್ಭದಲ್ಲಿ ಅಸಂಸ್ಕೃತವಾಣಿಯನ್ನು ಕತ್ತೆಯ ವಾಹನಕ್ಕೆ ಸಮ ಮಾಡಿರುತ್ತಾರೆ'

ಆದರೆ ಈ ಆಕ್ಷೇಪ ಸರಿಯಲ್ಲ. ಏಕೆಂದರೆ ಭಾಗವತತಾತ್ಪರ್ಯದಲ್ಲಿ ಹಾಗೆ ಎಲ್ಲಿಯೂ ಹೇಳಿಲ್ಲ. ವಸ್ತುತಃ ಅದೊಂದು ಲೌಕಿಕ ಸುಭಾಷಿತ ಒಂದರ ತುಣುಕು. ಇಡಿ ಪದ್ಯ ಹೀಗಿದೆ—

ಬಾಲಸಖಿತ್ವಮಕಾರಣಹಾಸ್ಯಂ ಸ್ತ್ರೀಷು ವಿವಾದಮಸಜ್ಜನಸೇವಾ ।
ಗರ್ದಭಯಾನಮಸಂಸ್ಕೃತವಾಣೀ ಷಟ್ಸು ನರೋ ಲಘುತಾಮುಪಯಾತಿ ಲಘುತ್ವಮ್ ॥

'ಸಣ್ಣ ಮಕ್ಕಳೊಡನೆ ಆಟವಾಡುವುದು, ನಿಷ್ಕಾರಣ ನಗು, ಸ್ತ್ರೀಯರೊಡನೆ ಜಗಳ, ದುರ್ಜನರೊಡನಾಟ, ಕತ್ತೆ ಸವಾರಿ, ಸಂಸ್ಕಾರವಿಲ್ಲದ ಗ್ರಾಮ್ಯ ನುಡಿ, ಈ ಆರು ವ್ಯಕ್ತಿಯ ಗೌರವವನ್ನು ಕಡಿಮೆ ಮಾಡುವುದು' ಇಲ್ಲಿ ಪ್ರಾಕೃತ ಭಾಷೆಯನ್ನು ಮೈಲಿಗೆ ಎನ್ನಲಿಲ್ಲ. ಅಗೌರವ ತರುವುದು ಎಂದಿದೆ

ಆದರೂ ಶೇಷಧರ್ಮವಚನದ ವಿರೋಧವನ್ನು ಪರಿಹರಿಸಲೇಬೇಕು. ಹೇಗೆ?

**ಮಾಣ್ದವರೆ ಮಹೀಸುರರು**

ಕನ್ನಡದ ಪದವೂ ಹರಿಗೆ ಸಮ್ಮತವೆಂದು ದಾಸರಾಯರು ಹೀಗೆ ಹೇಳುತ್ತಿದ್ದಾರೆ ಪ್ರಾಕೃತ ಭಾಷೆ ಯಜ್ಞಕಾಲದಲ್ಲಿ ನಿಷಿದ್ಧವಾದರೂ ವ್ಯವಹಾರಕಾಲದಲ್ಲಿ ನಿಷಿದ್ಧವಲ್ಲ 'ಯಾಜ್ಞೇ ಕರ್ಮಣಿ ನಿಯಮೋಽನ್ಯತ್ರಾನಿಯಮಃ' ಎಂದು ವ್ಯಾಕರಣ ಮಹಾಭಾಷ್ಯದಲ್ಲಿ ಹೇಳಿದೆ ಮಾತ್ರವಲ್ಲ, ಹರಿಸ್ತುತಿಯಲ್ಲಿ ಅದು ವಿಹಿತವೇ ಆಗಿದೆ ಭಾಗವತ ಹೀಗೆ ವಿಧಿಸಿದೆ—

ಸ್ತವೈರುಚ್ಚಾವಚೈಃ ಶ್ರೌತೈಃ ಪೌರಾಣೈಃ ಪ್ರಾಕೃತೈರಪಿ ।
ಸ್ತುತ್ವಾ ಪ್ರಸೀದ ಭಗವನ್ ಇತಿ ವಂದೇತ ದಂಡವತ್ ॥

'ವೇದೋಕ್ತ, ಪುರಾಣೋಕ್ತ ಮತ್ತು ಪ್ರಾಕೃತ ಭಾಷೆಯಲ್ಲಿ ರಚಿತವಾದ ಸಣ್ಣ ಅಥವಾ ದೊಡ್ಡ ಸ್ತೋತ್ರಗಳಿಂದ ಹರಿಯನ್ನು ಹೊಗಳಿ 'ಪ್ರಭು, ಪ್ರಸನ್ನನಾಗು' ಎಂದು ಬೇಡುತ್ತ ದಂಡಪ್ರಣಾಮ ಮಾಡಬೇಕು'

ಯತಿಗಳ ದಾಸರ ದೀರ್ಘ ಪರಂಪರೆಯಲ್ಲಿಯೂ ಕನ್ನಡ ಪದಗಳಿವೆ ಆದ್ದರಿಂದ ಶೇಷಧರ್ಮವಚನ ಪ್ರಾಕೃತ ಭಾಷೆಯ ಹರಿಸ್ತುತಿಯನ್ನು ನಿಷೇಧಿಸುತ್ತಿಲ್ಲ ಅದರ ಅಭಿಪ್ರಾಯ ಬೇರೆಯೆ ಇದೆ ಅದನ್ನು ಅದೇ ಹೀಗೆ ಸ್ಪಷ್ಟೀಕರಿಸುತ್ತಿದೆ

ಪುರಾಣಧರ್ಮಶಾಸ್ತ್ರೇಷು ಭಕ್ತಿಹೀನಾಶ್ಚ ಯೇ ತಥಾ ।
ಭಾಷಾಶಾಸ್ತ್ರೇಷು ನಿರತಾಸ್ತೇ ವೈ ನಿರಯಭಾಗಿನಃ ॥

'ಪುರಾಣ, ಧರ್ಮಶಾಸ್ತ್ರ ಮುಂತಾದ ಸಂಸ್ಕೃತ ಗ್ರಂಥಗಳಲ್ಲಿ ಅನಾದರದಿಂದ ಕೇವಲ ಪ್ರಾಕೃತಭಾಷಾಗ್ರಂಥಗಳಲ್ಲಿಯೇ ಅವೇ ಮೋಕ್ಷದಾಯಕವೆಂದು ಯಾರು ಆಸಕ್ತರಾಗಿರುವರೋ ಅವರು ನರಕಭಾಗಿಗಳು'

ಸುಲಿದ ಬಾಳೆಯ ಹಣ್ಣಿನಂದದಿ
ಕಳೆದ ಸಿಗುರಿನ ಕಬ್ಬಿನಂದದದಿ
ಅಳಿತ ಉಷ್ಣದ ಹಾಲಿನಂದದಿ ಸುಲಭವಾಗಿರುವ ।
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನಲಿ ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೇ? ಸಂಸ್ಕೃತದಲಿನ್ನೇನು?

ಎಂದು ಮುಂತಾಗಿ ಹೇಳುವವರನ್ನು ಶೇಷದರ್ಮವಚನ ಎಚ್ಚರಿಸುತ್ತಿದೆ, ಹೊರತು ವೇದೋಪನಿಷತ್ತುಗಳಲ್ಲಿ ಸರ್ವಮೂಲ ಟೀಕಾಟಿಪ್ಪಣಿಗ್ರಂಥಗಳಲ್ಲಿ ಪರಮಭಕ್ತಿ ಇಟ್ಟುಕೊಂಡೇ ಕೇವಲ ಅಶಕ್ತಿಯಿಂದ ಪ್ರಾಕೃತ ಗ್ರಂಥವನ್ನು ಅಧ್ಯಯನ ಮಾಡುವ ಸಜ್ಜನರನ್ನಲ್ಲ ದಾಸರಾಯರೂ ಕರುಣೆಯಿಂದಲೆ ಅಶಕ್ತರಿಗಾಗಿ ಪ್ರಾಕೃತ ಭಾಷೆಯಲ್ಲಿ ಗ್ರಂಥರಚನೆ ಮಾಡಿ

'ಸಂಸ್ಕೃತದ ಸಡಗರವೇನು ಸುಗುಣರಿಗೆ' ಎಂದುಮುಂತಾಗಿ ಪ್ರಾಕೃತ ಬಾಷೆಯನ್ನು ಹೊಗಳಿದ್ದಾರೆ ಸಂಸ್ಕೃತವನ್ನು ತೆಗಳಲಿಲ್ಲ ಆದರ ಸಡಗರವನ್ನು ಯಾರೂ ಪ್ರಶ್ನಿಸುವಂತಿಲ್ಲ ಪ್ರಾಕೃತದಲ್ಲಿಯೆ ದೇವರ ಪೂಜೆಯ ಮಂತ್ರಗಳನ್ನು ಹೇಳುವೆವು ಎಂದರೆ ಅದು ಶಾಸ್ತ್ರ ವಿರುದ್ಧ ದೇವರ ಪೂಜೆಯ ಕೊನೆಯಲ್ಲಿ ಮಾತ್ರ ಸ್ತೋತ್ರಕ್ಕೆ ಪ್ರಾಕೃತ ಬಾಷೆ ಅಂಗೀಕಾರಾರ್ಹವಾಗಿದೆ

ಆದ್ದರಿಂದ 'ಕಲುಷ ವಚನಗಳಾದರೂ' ಎಂದರೆ ಪ್ರಾಕೃತ ಭಾಷೆ ಪವಿತ್ರವಾದ ದೇವಪೂಜೆ ಯಜ್ಞಕಾರ್ಯಗಳಲ್ಲಿ ನಿಷಿದ್ಧವಾಗಿದ್ದು ಅಪವಿತ್ರವೆನಿಸಿದರೂ ಹರಿಸ್ತುತಿಯಲ್ಲಿ ವಿಹಿತವೆ ಆದ್ದರಿಂದ 'ಪಾದಮಹಿಮಾಜಲದಿ' ಯನ್ನು ಹೊಕ್ಕಿರುವ ನನ್ನ ಈ ಪ್ರಾಕೃತಭಾಷಾನಿಬದ್ಧವಾದ ಹರಿಕಥಾಮೃತಸಾರ ಹರಿಗೆ ಪ್ರಿಯವಾಗುತ್ತದೆ ಪ್ರೌಢಪ್ರಬುದ್ಧರ ಭಾಷಯಾದ ಪವಿತ್ರ ದೇವವಾಣಿಯಾದ ಸಂಸ್ಕೃತವನ್ನು ಹೇಗೋ ಹಾಗೆ,

ಬಾಲಕನ ಕಲಭಾಷೆ ಜನನಿಯು ಕೇಳಿ ಸುಖಪಡುವಂತೆ

ಕಲುಷವಾದ ಪ್ರಾಕೃತ ಭಾಷಯನ್ನೂ ಹರಿ ಪ್ರೀತಿಯಿಂದ ಆಲಿಸುತ್ತಾನೆ ಮೆಚ್ಚುತ್ತಾನೆ ಹೀಗೆ ಹರಿಗೆ ಒಪ್ಪುವ ಭಾಷೆಯಲ್ಲಿ ಹರಿಯ ಗುಣಗಾನ ಮಾಡಿದಾಗ ಹರಿಭಕ್ತರು ಅದನ್ನು ಸ್ವೀಕರಿಸಲಾರರೆ? ಎಂಥ ಮಡಿವಂತ ಬ್ರಾಹ್ಮಣರಿಗೂ ಅದು ಗ್ರಾಹ್ಯವೇ ಆಗಬೇಕಲ್ಲವ? ಎನ್ನುತ್ತಿದ್ದಾರೆ ದಾಸರಾಯರು

ಹೀಗೆ ಅಪವಿತ್ರವಾದ ಪ್ರಾಕೃತ ಭಾಷೆಯಿಂದಲೂ ತನ್ನನ್ನು ಹೊಗಳಲು ಅನುಮತಿ ನೀಡಿ ಸಂಸ್ಕೃತವರಿಯದ ಪಾಮರರ ಮೇಲೆ ಎಂಥ ಕರುಣೆದೋರುತ್ತಿದ್ದಾನ, ಶ್ರೀಹರಿ! ಎಂದು ಹರಿಯ ಕರುಣೆಯನ್ನು ಪ್ರಶಂಸಿಸುವ ಅಭಿಪ್ರಾಯ ದಾಸರಾಯರದು ಹೊರತು, ಸಂಸ್ಕೃತ ಪಂಡಿತರು ಕನ್ನಡವನ್ನು ಮೈಲಿಗೆಯೆಂದು ತಿಳಿದಿದ್ದ ಕಾಲ ಒಂದಿತ್ತೆಂದೂ, ಅವರಿಗೆ ದಾಸರಾಯರು ಉತ್ತರಿಸಿದ್ದಾರೆ ಎಂದೂ ಗ್ರಹಿಸುವುದು ಕೇವಲ ಭ್ರಮೆಯೆ ಸರಿ ಭಾಗವತದಲ್ಲಿ ಪ್ರಾಕೃತಸ್ತೋತ್ರವನ್ನು ವಿಧಿಸಿರುವಾಗ ಶ್ರೀಮದಾಚಾರ್ಯರ, ನರಹರಿತೀರ್ಥರ ಕಾಲದಿಂದಲೇ ಸಂಸ್ಕೃತ ವಿದ್ವಾಂಸರಾದ ಯತಿಗಳೂ ಕನ್ನಡ ಪದ ಹಾಡುತ್ತಿರುವಾಗ, ಅದನ್ನು ಮೈಲಿಗೆ ಎಂದು ಅವರೇ ತಿಳಿದಿದ್ದರೆನ್ನುವುದು ಸಾಹಸವಾದೀತು 'ಮಹೀಸುರರು' ಎಂದು ಸಂಸ್ಕೃತ ಪಂಡಿತರನ್ನು ಗೌರವದಿಂದ ದಾಸರಾಯರು ಕರೆಯುವುದನ್ನು ಗಮನಿಸಬೇಕು

**ಶ್ರುತಿತತಿಗಳಭಿಮಾನಿಲಕುಮೀ-**
**ಸ್ತುತಿಗಳಿಗೆ ಗೋಚರಿಸದಪ್ರತಿ-**
**ಹತ ಮಹೈಶ್ವರ್ಯಾದ್ಯಖಿಳಸದ್ಗುಣಗಣಾಂಬೋಧಿ ।**
**ಪ್ರತಿದಿವಸ ತನ್ನಂಘ್ರಿಸೇವಾ-**

**ರತ ಮಹಾತ್ಮರು ಮಾಡುತಿಹ ಸಂ-**
**ಸ್ತುತಿಗೆ ವಶನಾಗುವನಿವನ ಕಾರುಣ್ಯಕೇನೆಂಬೆ** ॥ ೩ ॥

'ವೇದಸಮೂಹಗಳಿಗೆ ಅಭಿಮಾನಿನಿಯಾದ ಮಹಾಲಕ್ಷ್ಮಿಯ ಸ್ತುತಿಗಳಿಗೂ ಗೋಚರಿಸದ ಅಪ್ರತಿಹತ ಮಹಾ ಐಶ್ವರ್ಯಾದಿ ಸದ್ಗುಣಗಳಿಗೆ ಸಮುದ್ರದಂತಿರುವವ ಶ್ರೀಹರಿ ತನ್ನ ಪಾದಸೇವಾನಿರತರಾದ ಮಹಾತ್ಮರು ಪ್ರತಿದಿವಸ ಮಾಡುತ್ತಿರುವ ಉತ್ತಮ ಸ್ತುತಿಗೆ ವಶನಾಗುವನು ಇವನ ಕಾರುಣ್ಯದ ಬಗ್ಗೆ ನಾನು ಏನೆಂದು ಬಣ್ಣಿಸಲಿ?

**ಶ್ರುತಿತತಿಗಳಭಿಮಾನಿ**

ಈ ಪದ್ಯದಲ್ಲಿ 'ಶ್ರುತಿತತಿಗಳಿಗಭಿಮಾನಿ' ಎಂದು ಕೆಲವೆಡೆ ಮುದ್ರಿತವಾಗಿದೆ ಛಂದೋಭಂಗವಾಗುವುದರಿಂದ ಈ ಪಾಠ ಅಶುದ್ಧ 'ಶ್ರುತಿತತಿಗಳಭಿಮಾನಿ' ಎಂಬ ಪಾಠದಲ್ಲಿಯೂ ಅರ್ಥಗ್ರಹಿಸುವಲ್ಲಿ ಮೇಲುನೋಟಕ್ಕೆ ತೊಡಕುಗಳಿವೆ

ಲಕ್ಷ್ಮಿ ವೇದಾಭಿಮಾನಿನಿ ಎನ್ನುವುದು ಸರಿಯೆ ಆದರೆ ಐಶ್ವರ್ಯಾಭಿಮಾನಿನಿ ಎಂದು ಪ್ರಸಿದ್ಧಳು ಆದರಿಂದ 'ಐಶ್ವರ್ಯಾಭಿಮಾನಿನಿ ಲಕುಮೀಸ್ತುತಿಗಳಿಗೆ ಗೋಚರಿಸದ ಅಪ್ರತಿಹತ ಮಹೈಶ್ವರ್ಯ ಉಳ್ಳವನೆಂದು ನಾರಾಯಣನನ್ನು ನಿರ್ದೇಶಿಬೇಕಾಗಿತ್ತು 'ಶ್ರುತಿತತಿಗಳಭಿಮಾನಿನಿ ಎಂದುದು ಪ್ರಕೃತಕ್ಕೆ ಅನುಗುಣವಾಗುವುದಿಲ್ಲ

ಮಹಾ ಐಶ್ವರ್ಯ ಉಳ್ಳ ಶ್ರೀಮಂತರೇ ಸ್ತುತಿಗಳಿಗೆ ವಶರಾಗುವುದು ಕಂಡಿದೆ ತಮ್ಮನ್ನು ಸ್ತುತಿಸಿಕೊಳ್ಳಲು ಪ್ರತ್ಯೇಕ ಹೊಗಳುಭಟರನ್ನೇ ನೇಮಕ ಮಾಡಿಕೊಳ್ಳುವುದು ಕಂಡಿದೆ ಎಲ್ಲಾ ದೇವತೆಗಳೂ ಸ್ತುತಿಗೆ ವಶರಾಗುತ್ತಾರೆ ಹರಿಯೂ ಒಬ್ಬ ದೇವತೆಯೇ!

'ಸ್ತೋತ್ರಪ್ರಿಯ, ಸ್ತೋತ್ರಸೇವಾಮವಧಾರಯ' ಎಂದು ಅಷ್ಟಾವಧಾನಸೇವೆಯಿಂದ ಶ್ರೀಹರಿಯನ್ನು ಭಕ್ತರು ಸೇವಿಸುವುದು ಪ್ರಸಿದ್ಧ ಆದರಿಂದ ಹರಿ ಸಂಸ್ತುತಿಗೆ ವಶನಾಗುವನೆಂದರೆ ಅಚ್ಚರಿ ಏನಿಲ್ಲ 'ಸ್ತುತಿಗೆ ವಶನಾಗುವುದಿಲ್ಲ' ಎಂದರೇನೆ ಅಚ್ಚರಿ ಉಂಟಾದೀತು!

ಸ್ತುತಿಗೆ ವಶನಾಗುವುದೊಂದು ದೌರ್ಬಲ್ಯ ಕಾರುಣ್ಯವೆಂದು ಹೊಗಳಬಹುದೆ?

ಸ್ತುತಿಗೆ ವಶನಾಗುವ, ಸ್ತೋತ್ರಪ್ರಿಯನೆನಿಸಿದ ಹರಿ ವೇದಾಭಿಮಾನಿಯಾದ ಲಕ್ಷ್ಮಿಯ ವೇದರೂಪದ ಸ್ತುತಿಗೆ ಗೋಚರಿಸುವುದೆ ಇಲ್ಲ ಎಂದರೆ ಅದನ್ನು ನಾವು ನಂಬಬೇಕೆ?

ವೇದಗಳಿಗೆ 'ವೇದ' ಎಂಬ ಹೆಸರು ಬಂದಿರುವುದೇ ಅವು ಹರಿಯನ್ನು ತಿಳಿಸುವುದರಿಂದ ಪಂಚೇಂದ್ರಿಯಗಳಿಗೆ ಗೋಚರಿಸದ ಊಹೆಗೂ ನಿಲುಕದ ಹರಿಯನ್ನು ವೇದಗಳೇ ವರ್ಣಿಸಬೇಕಂತೆ—

ನೇಂದ್ರಿಯಾಣಿ, ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ ।
ತಸ್ಮಾದಾಹುರ್ವೇದಾ ಇತಿ ॥

ಹೀಗೆ ಹರಿಯನ್ನು ತಿಳಿಸುವ ಏಕೈಕ ಪ್ರಮಾಣವಾದ ವೇದಕ್ಕೇ ನಿಲುಕದವನೆಂದು ಬೇರೆ ಪ್ರಮಾಣಗಳಿಗೆ ಮೊದಲೆ ಅಗೋಚರನಾದ ಆ ಭಗವಂತ ಕೇವಲ ಭಕ್ತರ ಕಲ್ಪನೆ ಎಂದಾ- ದೀತು ಇನ್ನು ಕಾರುಣ್ಯ ಉಂಟೆ ಇಲ್ಲವೆ ಎನ್ನುವ ವಿಚಾರವೇಕೆ?

ಕೆಲವು ವ್ಯಾಖ್ಯಾನಗಳ ಪ್ರಕಾರ 'ವೇದಕ್ಕೆ ಗೋಚರಿಸದವ'ನೆಂದರೆ ಅವನ ಅನಂತ ಗುಣಗಳನ್ನು ಪೂರ್ತಿ ತಿಳಿಸಲು ವೇದಕ್ಕೆ ಸಾಮರ್ಥ್ಯವಿಲ್ಲವೆಂದು ಅಭಿಪ್ರಾಯ ಈ ಅಭಿ- ಪ್ರಾಯ ಸರಿಯೆ ಆದರೆ, ವೇದಕ್ಕೆ ಪೂರ್ತಿಯಾಗಿ ಗೋಚರಿಸದವ ಮಹಾತ್ಮರ ಸ್ತುತಿಗೆ ಮಾತ್ರ ಪೂರ್ತಿ ಗೋಚರಿಸುವನೆ? ಸ್ತುತಿಗೆ ಗೋಚರನಾಗುವುದು ಮಾತ್ರವಲ್ಲ, ವಶನೆ ಆಗಿ ಹೋಗುತ್ತಾನೆ ಎಂದಿದೆ ತಾನೆ? ವೇದಗಳಿಗಿಂತಲೂ ಮಹಾತ್ಮರು ಮಾಡುವ ಸ್ತುತಿ- ಗಳು, ಹರಿದಾಸರ ಕೃತಿಗಳು ಶ್ರೇಷ್ಠವೆಂದು ಅಭಿಪ್ರಾಯವೆ?

ವೇದಗಳಿಗೆ ಪೂರ್ತಿ ಗೋಚರಿಸದ ಹರಿ ಹರಿದಾಸರ ಕೃತಿಗಳಿಗೂ ಅಲ್ಪವೆ ಗೋಚರಿ- ಸುತ್ತಾನೆ ಎಂದರೆ ಕಾರುಣ್ಯಕ್ಕೆ ಎಲ್ಲಿ ಅವಕಾಶವಿದೆ?

'ಲಕುಮೀಸ್ತುತಿಗೆ ಗೋಚರಿಸದ' ಎಂಬಲ್ಲಿ ಜಂಬುಖಂಡಿ ಆಚಾರ್ಯರ ವ್ಯಾಖ್ಯಾನ ಹೀಗೆ ಹೇಳುತ್ತದೆ ಬ್ರಹ್ಮಸೂತ್ರದ ಅವ್ಯಕ್ತಾಧಿಕರಣ ಸಿದ್ಧಾಂತದ ಪ್ರಕಾರ ಸದಾ ಅವ್ಯಕ್ತ- ನಾಗಿರುವುದು ಹರಿಯ ಸ್ವಭಾವ ಯಾವ ಸ್ತುತಿಯಿಂದಲೂ ಅವನನ್ನು ವ್ಯಕ್ತನನ್ನಾಗಿ ಮಾಡಲು ಸಾಧ್ಯವಿಲ್ಲ ಯಾವ ಪ್ರಯತ್ನದಿಂದಲೂ ಮಂಗ ಮಾನವನಾಗಲಾರ ಮಾನವ ಮಂಗನಾಗಲಾರ ಯಕ್ಷಪಿಶಾಚಾದಿಗಳು ಅವ್ಯಕ್ತವಾಗಿದ್ದರೂ ವಿಶೇಷ ಶಕ್ತಿಯಿಂದ ಅವ್ಯಕ್ತವಾಗಿವೆ, ಸ್ವಭಾವದಿಂದಲ್ಲ ಅದರಿಂದ ವಿಶೇಷ ಆರಾಧನೆಯಿಂದ ಅವನ್ನು ವ್ಯಕ್ತ- ಗೊಳಿಸಲು ಸಾಧ್ಯ ಹರಿ ಹಾಗಲ್ಲ ಲಕ್ಷ್ಮಿಯ ಸ್ತುತಿಗೂ ಗೋಚರಿಸುವವನಲ್ಲ

ಈ ವ್ಯಾಖ್ಯಾನದ ಅಭಿಪ್ರಾಯ ತಿಳಿಯುವುದಿಲ್ಲ ಲಕ್ಷ್ಮಿಗೂ ಹರಿ ಕಣ್ಣಿಗೆ ಕಾಣುವುದಿಲ್ಲ ಎಂದರೆ ಅದನ್ನು ನಂಬಲಾದೀತೆ? ಆತ ಲಕ್ಷ್ಮೀರಮಣ ಹೇಗಾದಾನು? ಪಾದಸೇವೆ ಮಾಡುವ ಮಹಾತ್ಮರಿಗೆ ವಶನಾಗಿ ಕಾಣಿಸಿಕೊಳ್ಳುತ್ತಾನೆ, ಲಕ್ಷ್ಮಿಗೆ ಕಾಣಿಸಿಕೊಳ್ಳುವುದಿಲ್ಲ ಎಂದರೆ ಲಕ್ಷ್ಮಿ ಏನು ಅಪರಾಧ ಮಾಡಿದಳು? ಅವಳು ಪಾದಸೇವೆ ಮಾಡುತ್ತಿಲ್ಲವೆ? ಲಕ್ಷ್ಮಿಗಿಂತಲೂ ಹರಿದಾಸರಲ್ಲಿ ಹರಿಗೆ ಹೆಚ್ಚು ಕಾರುಣ್ಯವೆ?

ಹರಿ ಲಕ್ಷ್ಮಿಗೆ ಸಿಗದೆ ಮಹಾತ್ಮರಿಗೆ ಸಿಗುವನೆಂದಿದ್ದಾರೆ ಕಮಲಾಪತಿದಾಸರು ತಾಮ್ರ- ಪರ್ಣಿ ಆಚಾರ್ಯರೂ 'ಲಕ್ಷ್ಮಿಗಿಂತ ಭಕ್ತರಲ್ಲಿ ಭಗವಂತನಿಗೆ ಕಾರುಣ್ಯ ಹೆಚ್ಚೆ'ಂದು ಹೇಳಿ- ದ್ದಾರೆ

> ಲಕ್ಷ್ಮ್ಯಪೇಕ್ಷಯಾ ಭಕ್ತೇಷು ಭಗವತಃ ಕೃಪಾಧಿಕ್ಯಮಸ್ತೀತ್ಯಭಿಪ್ರಾಯೇಣ
> ಇವರ ಕಾರುಣ್ಯಕೇನೆಂಬೆ ಇತ್ಯುಕ್ತಮ್

ಲಕ್ಷ್ಮಿ 'ಸ್ತುತಿ' ಮಾಡಿದರೆ ಮಹಾತ್ಮರು 'ಸಂಸ್ತುತಿ' ಮಾಡುತ್ತಾರೆ! ಇದೇ ಈ ವೈಷಮ್ಯಕ್ಕೆ ಕಾರಣವಿರಬಹುದೆ? ಈ ವೈಷಮ್ಯವನ್ನು ನಂಬಬಹುದೆ?

ಹರಿಯನ್ನು ಮಹಾ ಐಶ್ವರ್ಯಾದಿ ಗುಣವುಳ್ಳವನೆಂದು ಹೊಗಳುವುದರ ತಾತ್ಪರ್ಯ ವೇನೆಂದೂ ತಿಳಿಯುವುದಿಲ್ಲ ಹಾಗೆ ಹೊಗಳುವುದು ಸಂಪ್ರದಾಯವೂ ಅಲ್ಲ ಆನಂದಾದಿ ಗುಣ ಉಳ್ಳವನೆಂದು ಹೊಗಳಬೇಕು ಜಯತೀರ್ಥರು ತತ್ತ್ವಪ್ರಕಾಶಿಕಾ ಮಂಗಳ ಪದ್ಯದಲ್ಲಿ ಹೇಳುತ್ತಾರೆ

ಶುದ್ಧಾನಂದೋರುಸಂವಿದ್‌ದ್ಯುತಿಬಲ-
ಬಹುಲೌದಾರ್ಯವೀರ್ಯಾದಿದೇಹಮ್ ।

ತಾಮ್ರಪರ್ಣಿ ಆಚಾರ್ಯರು 'ಮಹೈಶ್ವರ್ಯಾದಿ' ಎಂದರೆ ಹೇಳುತ್ತಾರೆ

'ಶುದ್ಧಾನಂದೋರುಸಂವಿದ್‌ದ್ಯುತಿಬಲಬಹುಲೌದಾರ್ಯ
ವೀರ್ಯಾದ್ಯನಂತಗುಣಪೂರ್ಣ ಇತಿ'

ಸಂಕರ್ಷಣ ಒಡೆಯರೂ ಐಶ್ವರ್ಯವೆಂದರೆ 'ಸ್ವರಮಣಾಖ್ಯ ಐಶ್ವರ್ಯ' ಎನ್ನುತ್ತಾರೆ ಆನಂದವೆಂಬ ಐಶ್ವರ್ಯ ಉಳ್ಳವನೆಂದೇ ಅರ್ಥೈಸಿದ್ದಾರೆ

ಹಾಗಾದರೆ ಐಶ್ವರ್ಯಾದಿ ಎನ್ನದೆ 'ಆನಂದಾದಿ ಗುಣಗಣಾಂಬೋಧಿ' ಎಂದೇ ದಾಸರಾಯರು ಹೇಳಬಹುದಾಗಿತ್ತು ಏಕೆ ಹೇಳಲಿಲ್ಲ?

ಇಂಥ ಅನೇಕ ಕುಚೋದ್ಯಗಳಿಗೆ ಆಹ್ವಾನ ನೀಡುತ್ತಿರುವುದು ಇಲ್ಲಿಯ 'ಮಹೈಶ್ವರ್ಯ' ಎಂಬ ಪದ ಅವೆಲ್ಲವುಗಳಿಗೆ ಸಮಾಧಾನವೂ ಅದೇ ಪದದಲ್ಲಿ ಇದೆ

***ಮಹೈಶ್ವರ್ಯಾದ್ಯಖಿಳ ಸದ್ಗುಣಗಣಾಂಬೋಧಿ***

ಐಶ್ವರ್ಯವೆಂದರೆ ಇಲ್ಲಿ ಧನಕನಕಾದಿ ಸಂಪತ್ತಲ್ಲ ಈಶ್ವರನಾಗಿರುವುದೆ ಐಶ್ವರ್ಯ ಈಶ್ವರ ಎಂದರೆ ನಿಯಾಮಕ, ಸ್ವತಂತ್ರನಾದ ವ್ಯಕ್ತಿ ಮಹಾಸಾಮರ್ಥ್ಯಶಾಲಿ ಪ್ರಳಯಾಗ್ನಿ-ಯಲ್ಲಿ ಬ್ರಹ್ಮಾಂಡವೇ ಉರಿದು ಬೂದಿಯಾದರೂ ಅದರೊಳಗಿರುವ ಹರಿ ಏಕೆ ಸುಟ್ಟು-ಹೋಗುವುದಿಲ್ಲ ಎಂದರೆ ಆತ ಈಶ್ವರನಾಗಿರುವುದೇ ಅದಕ್ಕೆ ಕಾರಣ ಎನ್ನುತ್ತದೆ ಭಗವ-ದ್ಗೀತೆ—

ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ

ಈಶ್ವರರಿಗೂ ಈಶ್ವರ, ಮಹೇಶ್ವರ ಮಹೇಶ್ವರನಾಗಿರುವುದೆ ಮಹೈಶ್ವರ್ಯ, ಸರ್ವ-ಸ್ವಾತಂತ್ರ್ಯ ಇದು ಕೇವಲ ವಿಷ್ಣುವೊಬ್ಬನಿಗೇ ಎಂದು ಶ್ರೀಮದಾಚಾರ್ಯರು ಹೇಳಿದ್ದಾರೆ

ಸ್ವತಂತ್ರೋ ಭಗವಾನ್ ವಿಷ್ಣುಃ

ಈ ಮಹೈಶ್ವರ್ಯ ವಿಷ್ಣುವಿನಲ್ಲಿ ಅಪ್ರತಿಹತವಾಗಿದೆ ಯಾವ ಕಾಲಕ್ಕೂ ಅದಕ್ಕೆ ಚ್ಯುತಿ ಇಲ್ಲ ಮಿತಿಯೂ ಇಲ್ಲ, ಅನಂತ ಎಷ್ಟು ಅನಂತವೆಂದರೆ ಕಲ್ಪನಾತೀತವಾಗಿ ಅನಂತ

ಅನಂತ ಜೀವರಾಶಿಗಳನ್ನು ನಿಯಂತ್ರಿಸುವ ಶಕ್ತಿ ಅನಂತವೆ ಆಗಿರಬೇಕು ತಾನೆ? ಸಕಲ-ಜೀವನಿಯಾಮಕರಾದ ತತ್ವದೇವತೆಗಳನ್ನೂ, ಅವರಿಗ ನಿಯಾಮಕರಾದ ಬ್ರಹ್ಮವಾಯು-ಗಳನ್ನೂ ಅವನೆ ನಿಯಂತ್ರಿಸಬೇಕು ಒಬ್ಬ ತತ್ವದೇವತೆಯೂ ಅನಂತ ಜೀವರಿಗೆ ನಿಯಾ-ಮಕನಾಗಿದ್ದಾನೆ ಎಂದ ಮೇಲೆ ಶ್ರೀಹರಿ ನಡೆಸುವ ನಿಯಮನಕಾರ್ಯ ಊಹೆಗೆ ನಿಲುಕ-ದಷ್ಟು ಅನಂತವಾಗಿ ಬೆಳೆಯುತ್ತದೆ ಅದನ್ನು ಅನಂತ ವೇದವೂ ತಿಳಿಸಲಾರದು ಅನಾದಿ-ಕಾಲದಿಂದಲೂ ಅನಂತವೇದವಚನಗಳಿಂದ ಲಕ್ಷ್ಮಿ ಅದನ್ನು ಸ್ತುತಿಸುತ್ತಲೆ ಇದ್ದಾಳೆ ಅದಕ್ಕೆ ಕೊನೆ ಇಲ್ಲ ಅದು ಪೂರ್ತಿ ಗೋಚರವಾಗುವುದಿಲ್ಲ ಇಂಥ ಸರ್ವೇಶ್ವರ, ಸರ್ವನಿಯಾ-ಮಕನಾದ ಹರಿ ಭಕ್ತನಿಗೆ ವಶನಾಗುವನಂತೆ!

ಈ ಭಕ್ತಪರಾಧೀನತೆಯೂ ಅನಂತ ಏಕೆಂದರೆ ಅನಾದಿ, ಅನಂತ ಕಾಲಗಳಲ್ಲಿ ಅನಂತ ಭಕ್ತ ಜೀವರಿಗೆ ಈತ ಅಧೀನ! ಎಷ್ಟು ಅಧೀನ ಎಂದರೆ ಭಕ್ತರಿಗೆ ಒಂದಿಷ್ಟು ಹಾನಿಯಾ-ಗದಂತೆ ನೋಡಿಕೊಳ್ಳುತ್ತ ಅವರ ಅಭೀಷ್ಟಗಳನ್ನೆಲ್ಲಾ ನಡೆಸಿಕೊಡುತ್ತಾನೆ ಪಾಂಡವರ ಮನೆಯೊಳಗೆ ಕುದುರೆಗಳ ಕಾಲುತೊಳೆಯುತ್ತಾನೆ ತೊಂಡರಿಗೆ ತೊಂಡನಾಗುತ್ತಾನೆ

ಪುರಂದರದಾಸರು ಒಂದು ಬೆಳಗಿನ ಜಾವ ಬೇಗನೆ ಎದ್ದು ಇನ್ನೂ ಮಲಗಿದ್ದ ಅಪ್ಪಣ್ಣ ಭಾಗವತನೆಂಬ ಶಿಷ್ಯನನ್ನು ಎಬ್ಬಿಸಿ ಮೃತ್ತಿಕಾಶೌಚಕ್ಕೆ ನೀರು ತಂದುಕೊಡಲು ಹೇಳಿ ಹೋದರು ಶಿಷ್ಯ ನಿದ್ದೆಗಣ್ಣಿನಲ್ಲಿ 'ಹೂಂ' ಎಂದು ಮತ್ತೆ ನಿದ್ದೆ ಮಾಡಿದ ಇತ್ತ ದಾಸರು ನೀರಿಗಾಗಿ ಕಾದರು ಪಾಂಡುರಂಗನೆ ಭಾಗವತನ ರೂಪದಿಂದ ಧಾವಿಸಿ ಬಂದ ನೀರ ತಂಬಿಗೆಯನ್ನು ದಾಸರ ಮುಂದಿಟ್ಟ, 'ಇಷ್ಟೇಕೆ ತಡಮಾಡಿದೆ? ಎಂದು ಕೋಪದಿಂದ ದಾಸರು ಆ ತಂಬಿಗೆಯಿಂದಲೆ ಪಾಂಡುರಂಗನ ತಲೆಗೆ ಘಟ್ಟಿಸಿದರು 'ಗುರುಗಳೆ, ತಪ್ಪಾ-ಯಿತು!' ಎಂದ ಪಾಂಡುರಂಗ ಅಲ್ಲಿಂದ ಹೊರಟು ಮಾಯವಾಗಿ ಹೋದ, ಶೌಚ ಮುಗಿಸಿ ಬಂದ ದಾಸರು ಶಿಷ್ಯನಿನ್ನೂ ಮಲಗಿಯೆ ಇದ್ದುದನ್ನು ಕಂಡು ಅಚ್ಚರಿಯಿಂದ ಪುಲಕಿತರಾದರು 'ಪಾಂಡುರಂಗ, ತಲೆಗೆ ಘಟ್ಟಿಸಿಕೊಂಡೆಯಲ್ಲೋ!' ಎಂದು ಉದ್ಗರಿಸಿ-ದರು ಬಹಿರ್ದೇಶಕ್ಕೆ ಹೋದ ದಾಸರು ನೀರಿಗಾಗಿ ಕಾಯುವ ಪರಿಸ್ಥಿತಿಯೂ ಬರಬಾರ-ದೆನ್ನುವ, ತಾನು ತಲೆಗೆ ಘಟ್ಟಿಸಿಕೊಂಡರೂ ಚಿಂತಿಲ್ಲ ಎನ್ನುವ ಪಾಂಡುರಂಗನ ಕಾರುಣ್ಯಕೇ-ನೆಂಬೆ! ಎಂದು ದಾಸರಾಯರು ಇಲ್ಲಿ ಉದ್ಗರಿಸುತ್ತಿದ್ದಾರೆ

ಇಂಥ ಅಪಾರವಾದ ಅನಂತ ಮಹೈಶ್ವರ್ಯ ಉಳ್ಳವ ಅಷ್ಟೇ ಅಪಾರವಾದ ಪರಾ-ಧೀನತೆಯನ್ನೂ ಸ್ವಾಗತಿಸುವುದು ಕಾರುಣ್ಯದ ಪರಾಕಾಷ್ಠೆ

*ಸಂಸ್ತುತಿಗೆ ವಶನಾಗುವನು*

ಈ ಮಹೈಶ್ವರ್ಯವೆಂಬ ಒಂದು ಗುಣವನ್ನೆ ವೇದಗಳು ಹೊಗಳಿ ಪಾರಗಾಣಲಾರವು ಇಂಥ ಗುಣಗಳೆ ಆನಂದಜ್ಞಾನಬಲಔದಾರ್ಯವೀರ್ಯ ಎಂದು ಮುಂತಾಗಿ ಅನಂತ

ಇವೆ ಅವುಗಳನ್ನು ಅಂಘ್ರಿಸೇವಾನಿರತರಾದ ಮಹಾತ್ಮರು ಹೊಗಳುತ್ತಾರೆ! ಸೂರ್ಯನನ್ನು ಸಣ್ಣ ದೀಪದಿಂದ ತೋರುವಂತೆ ಇದು ಆದರೂ ಹರಿ ಹೊಗಳಿಸಿಕೊಳ್ಳುತ್ತಾನೆ! ಆನಂದಾದಿಪೂರ್ಣನಾಗಿದ್ದು ಸಮುದ್ರದಂತೆ ಇರುವವನಿಗೆ ಅದರಿಂದೇನಾಗಬೇಕಾಗಿದೆ? ಕೇವಲ ಕಾರುಣ್ಯವಿದು

ಈ ಹೊಗಳಿಕೆ ಬರಿ ಸ್ತುತಿಯಲ್ಲ 'ಮುಖಸ್ತುತಿ' ಯಲ್ಲ ಸಂಸ್ತುತಿ! ಭಕ್ತಿ ತುಂಬಿದ ಅಂತರಂಗದಿಂದ ಹರಿದು ಬಂದ ಉತ್ತಮ ಸ್ತುತಿ ಇಂಥ ಸ್ತುತಿಗೆ ವಶನಾಗುವುದು ದೋಷವಲ್ಲ ದೌರ್ಬಲ್ಯವಲ್ಲ

ಸಂಸ್ತುತಿ ಮಾಡುವ ಮಹಾತ್ಮರಲ್ಲೆಲ್ಲ ಮೊದಲಿಗಳು ಮಹಾಲಕ್ಷ್ಮಿ ಬಳಿಕ ಬ್ರಹ್ಮಾದಿಗಳು, ಎಲ್ಲ ಹರಿದಾಸರುಗಳು ಅದರಿಂದ ಲಕ್ಷ್ಮಿಯನ್ನು ಬೇರೆ ಹರಿದಾಸರಿಗೆ ಹೋಲಿಸುವ ಪ್ರಶ್ನೆಯೆ ಬರುವುದಿಲ್ಲ ಹಿಂದೆ ಹೇಳಿದ ಯಾವ ಕುಚೋದ್ಯಗಳಿಗೂ ಅವಕಾಶವಿಲ್ಲ

ಶ್ರೀಹರಿ ಲಕ್ಷ್ಮಿಗೆ ವಶನಾಗುವಷ್ಟು ಇನ್ನಾರಿಗೂ ವಶನಾಗುವುದಿಲ್ಲ ಆತ ಅವಳನ್ನು ಎಂದೂ ಬಿಟ್ಟಿರುವುದಿಲ್ಲ ಅವನ ಶರೀರದ ಎಡ ಭಾಗವನ್ನೆಲ್ಲ ಅವಳ ಆಕ್ರಮಿಸಿ ಅವನನ್ನು 'ಅರ್ಧನಾರಾಯಣ' ನನ್ನಾಗಿ ಮಾಡಿದ್ದಾಳೆ! ಅಭ್ಯಂಜನಸ್ನಾನಭೋಜನಾದಿಗಳಲ್ಲಿಯೂ ಅವನಿಗೆ ಅವಳು ಜೊತೆಯಲ್ಲಿ ಇರಲೇಬೇಕು ಕೃಷ್ಣನಾಗಿ ಆತ ಪರನಾರಿಯರನ್ನು ಆಲಿಂಗಿಸಿದುದು ಏಕೆಂದರೆ ಅವರಲ್ಲಿ ರಮಾವೇಶವಿತ್ತು ಗೋಪಿಯರು ಆಜ್ಞೆ ಮಾಡಿದರೆ ಅವರ ಪಾದರಕ್ಷೆಗಳನ್ನು ಕೃಷ್ಣ ಹೊರುತ್ತಿದ್ದನಂತೆ ಏಕೆ? ಅವರಲ್ಲಿ ರಮಾವೇಶವಿತ್ತು!

> ವಿಷ್ಣೋಃ ಪ್ರಿಯತ್ವೇ ತದ್ಭಕ್ತೌ ತದ್‌ಜ್ಞಾನೇ ಚ ಶ್ರಿಯಸ್ತು ತೇ ।
> ಮುಕ್ತಾ ಅಪ್ಯವರಾ ನಿತ್ಯಂ ಸರ್ವೇ ಕೋಟಿಗುಣೇನ ಚ ॥ —ಬೃಹದ್ಭಾಷ್ಯ

'ವಿಷ್ಣುವಿಗೆ ಲಕ್ಷ್ಮಿ ಎಷ್ಟು ಪ್ರೀತಿಪಾತ್ರಳೆಂದರೆ ಅವಳಿಗಿಂತ ಕೋಟ್ಯಂಶ ಕಡಿಮೆಯವರು ಈ ವಿಷಯದಲ್ಲಿ ಬ್ರಹ್ಮಾದಿ ದೇವತೆಗಳು' ಅದರಿಂದ ಲಕ್ಷ್ಮಿಯನ್ನು ವಿಷ್ಣುಭಕ್ತರಿಗೆ ಹೋಲಿಸುವ ಯತ್ನ ಹಾಸ್ಯಾಸ್ಪದವಾಗುವುದು ಅದರಿಂದ ವೇದಾಭಿಮಾನಿನಿ ಲಕ್ಷ್ಮಿಯು ವೇದಮಂತ್ರಗಳಿಂದ, ಸಾಮಗಾನದಿಂದ ಎಷ್ಟು ಹೊಗಳಿದರೂ ಪಾರಗಾಣಲಾಗದ ಮಹೈಶ್ವರ್ಯಾದಿ ಅಪಾರ ಗುಣವುಳ್ಳವ ಶ್ರೀಹರಿ ಅಂಥವನೂ ಲಕ್ಷ್ಮೀಬ್ರಹ್ಮಾದಿ ಮಹಾತ್ಮರಿಂದ ಪ್ರತಿದಿನ ಸ್ತೋತ್ರ ಮಾಡಿಸಿಕೊಳ್ಳುತ್ತಾನೆ ಪ್ರೀತಿಯಿಂದ ಆಲಿಸುತ್ತಾನ, ಒಲಿದು ವಶನಾಗುತ್ತಾನೆ ಎಂದರೆ ಇದು ಕಾರುಣ್ಯವಲ್ಲದೆ ಇನ್ನೇನು? ಎನ್ನುವುದು ಪದ್ಯದ ಅಭಿಪ್ರಾಯ

ಈಗ 'ಆನಂದಾದಿಗುಣಗಣಾಂಬೋಧಿ' ಎನ್ನದೆ 'ಮಹೈಶ್ವರ್ಯಾದಿಗುಣಗಣಾಂಬೋಧಿ' ಎಂದುದು ಏಕೆಂಬುದು ಸ್ಪಷ್ಟವಾಗುತ್ತದೆ ಐಶ್ವರ್ಯಗುಣವುಳ್ಳವ ಇನ್ನೊಬ್ಬರಿಗೆ ವಶನಾಗುವುದು ವಿರುದ್ಧ ಆದರೂ ಭಕ್ತರ ಮೇಲಿನ ಕರುಣೆಯಿಂದ ತನ್ನ ಅಚಿಂತ್ಯಶಕ್ತಿಯಿಂದ ಈ ಎರಡು ಗುಣಗಳಿಗೆ ತನ್ನಲ್ಲಿ ವಿರೋಧವಿಲ್ಲದಂತೆ ಮಾಡಿಕೊಂಡಿದ್ದಾನೆ ಶ್ರೀಹರಿ

ಪೂರ್ಣಾನಂದನಾಗಿ ನಿತ್ಯತೃಪ್ತನಾಗಿದ್ದೂ ಭಕ್ತರು ನೀಡುವ ಹಣ್ಣು-ನೀರುಗಳನ್ನು ಹಸಿವಿನಿಂದ ಕಂಗಾಲಾಗಿರುವವನಂತೆ ಬಾಯಾರಿ ಬಳಲಿದವನಂತೆ ಉಂಡು ಅನುಗ್ರಹಿಸುವುದಿಲ್ಲವೆ? ಹಾಗೆ

ಮಹೈಶ್ವರ್ಯವೆಂದರೆ ಯೋಗಿಗಳಿಗೆ ಲಭಿಸುವ ಅಷ್ಟೈಶ್ವರ್ಯವೂ ಆಗಬಹುದು 'ಯತ್ರ ಯೋಗೇಶ್ವರಃ ಕೃಷ್ಣಃ' ಎಂದು ಭಗವದ್ಗೀತೆ ಹೇಳುವಂತೆ ಕೃಷ್ಣ ಯೋಗೇಶ್ವರ ಯೋಗಸಿದ್ಧರಿಗೆ ಎಂಟು ಬಗೆಯ ಐಶ್ವರ್ಯಗಳು ಲಭಿಸುತ್ತವೆ

ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।
ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಸಿದ್ಧಯಃ ॥

ಇವು ಬೇರೆ ದೇವತೆಗಳಿಗೆ ಯೋಗದಿಂದ ಲಭ್ಯ ಶ್ರೀಹರಿಗೆ ಅನಾದಿಸಿದ್ಧ ಅಪಾರವಾಗಿದ್ದು ಲಕ್ಷ್ಮಿಯ ಸ್ತುತಿಗೂ ಪೂರ್ತಿ ಗೋಚರವಾಗದವುಗಳು

ಯೋಗೈಶ್ವರ್ಯ ಉಳ್ಳವರು ಯಾರಿಗೂ ವಶರಾಗುವುದಿಲ್ಲ ಶ್ರೀಮದಾಚಾರ್ಯರನ್ನು ಒಬ್ಬ ರಾಜ ಗೃಹಬಂಧನದಲ್ಲಿರಿಸಲು ಯತ್ನಿಸಿದಾಗ ಅವರು ಅದೃಶ್ಯರಾಗಿ ಹೊರಟುಹೋದರಂತೆ!

ಇಂಥ ಮಹೈಶ್ವರ್ಯಶಾಲಿಯಾದ ಶ್ರೀಹರಿ ಮಹಾತ್ಮರ ಸ್ತೋತ್ರರೂಪದ ಮಾತುಗಳಿಗೇ ವಶನಾಗುತ್ತಾನೆ! ಇದು ಕಾರುಣ್ಯವಲ್ಲದೆ ಇನ್ನೇನು?

ಅದವಾ ಐಶ್ವರ್ಯವೆಂದರೆ ಧನಸಂಪತ್ತೆಂದರೂ ಸರಿಯೆ ಶ್ರೀಹರಿ ಸಾಕ್ಷಾತ್ ಲಕ್ಷ್ಮೀಪತಿ ಎಂದ ಮೇಲೆ ಅವನ ಧನಸಂಪತ್ತಿಗೆ ಮೇರೆ ಇರಬಹುದೆ?

ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಬ್ರಹ್ಮಾಂಡವೆ ಅವನ ಮನೆ ದೇವತೆಗಳೆಲ್ಲ ಅವನಿಗೆ ಪರಿಚಾರಕರು!

ಲಕ್ಷ್ಮಿಯ ಸ್ತುತಿಗೇ ನಿಲುಕದಷ್ಟು ಅಪಾರವಾದುದು ಈ ಮಹೈಶ್ವರ್ಯ ಆದರೂ ಭಕ್ತರು ಹೇಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ! ಎನ್ನುತ್ತಲೆ ಅವನನ್ನು ಅರ್ಚಿಸುತ್ತಾರೆ ತಮ್ಮ ಸರ್ವಸ್ವವನ್ನೂ ಅರ್ಪಿಸುತ್ತಾರೆ ಮನೆ ಮಠ ಮುಂತಾದುವನ್ನೂ, ಹಂಡತಿ ಮಕ್ಕಳನ್ನೂ ಕೊನೆಯಲ್ಲಿ ತಮ್ಮ ಪ್ರಾಣವನ್ನೂ ಅರ್ಪಿಸುತ್ತಾ ಷೋಡಶೋಪಚಾರ ಪೂಜೆ ಮಾಡಿದ ಬಳಿಕ

ಸ್ತವೈರುಚ್ಚಾವಚೈಃ ಶ್ರೌತೈಃ ಪೌರಾಣೈಃ ಪ್ರಾಕೃತೈರಪಿ ।
ಸ್ತುತ್ವಾ ಪ್ರಸೀದ ಭಗವನ್ನಿತಿ ವಂದೇತ ದಂಡವತ್ ॥

ಎಂಬಂತೆ ಸ್ತೋತ್ರಮಾಲಿಕೆಯನ್ನು ಪುಷ್ಪಮಾಲಿಕೆಯಂತೆ ಅರ್ಪಿಸುತ್ತಾರೆ

ಜಯತೀರ್ಥರು ವಾಙ್ಮಯಸೇವೆಯನ್ನು ಹಾಗೇ ಸಮರ್ಪಿಸಿದ್ದಾರೆ

ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।
ಧ್ರಿಯತಾಂ ಹೃದಯೇ ಸದಯೇ ಕಮಲಾಮಹಿಲೇನ ಪೂರುಷೇಣ ॥

ಹೀಗೆ ಮಹಾತ್ಮರು ಪ್ರತಿದಿನ ಪೂಜೆಯ ಕೊನೆಯಲ್ಲಿ ಮಾಡುವ ಸ್ತುತಿಗೆ ವಶ-ನಾಗುತ್ತಾನೆ

ಇಲ್ಲಿ ಲಕ್ಷ್ಮಿಗೂ ಇತರ ಮಹಾತ್ಮರಿಗೂ ಹೋಲಿಸಲಾಗಿದೆ, ನಿಜ ಆದರೆ ಲಕ್ಷ್ಮಿಯ ಸ್ತುತಿಗೆ 'ಗೋಚರಿಸದ' ಅಂದರೆ ಪೂರ್ತಿ ಗೋಚರಿಸದೆ ತನ್ನ ಅನಂತಗುಣಸಮುದ್ರದ ವಿರಾಡ್ರೂಪವನ್ನು ದೇವಿಗೆ ತೋರಿಸಿ ತಲ್ಲಣದ ಹಬ್ಬ ಉಂಟುಮಾಡುತ್ತ ಮೈರೋಮಾಂ-ಚಗೊಳಿಸುತ್ತಾನೆ ವಶನಾಗುವ ಪ್ರಶ್ನೆ ಇಲ್ಲ ಅನಾದಿಕಾಲದಿಂದ ವಶನಾಗೇ ಇದ್ದಾನೆ ಮಹಾತ್ಮರಿಗೆ ಮಾತ್ರ ಹಾಗಲ್ಲ, ಹಿಂದೆ ಸಿಗದಿದ್ದವ ಈಗ ಸಂಸ್ತುತಿಗೆ ಕರುಣೆಯಿಂದ ವಶ-ನಾಗುತ್ತಾನೆ

**ಮನವಚನಕತಿದೂರ ನೆನೆವರ**
**ನನುಸರಿಸಿ ತಿರುಗುವನು ಜಾಹ್ನವಿ-**
**ಜನಕ ಜನರೊಳಗಿದ್ದು ಜನಿಸುವ ಜಗದುದರ ತಾನು ।**
**ಘನಮಹಿಮ ಗಾಂಗೇಯನುತ ಗಾ-**
**ಯನವ ಕೇಳುತ ಗಗನಚರವಾ-**
**ಹನ ದಿವೌಕಸರೊಡನೆ ಚರಿಸುವ ಮನೆಮನೆಗಳಲ್ಲಿ ॥ ೪ ॥**

ಗಂಗಾಜನಕನಾದ ಶ್ರೀಹರಿ ನಮ್ಮ ಮನಸ್ಸಿಗೂ ಮಾತಿಗೂ ನಿಲುಕದಷ್ಟು ಅತಿದೂರ-ದಲ್ಲಿರುವವ ಆದರೆ ನೆನೆವ ಭಕ್ತರನ್ನು ಕರುಣೆಯಿಂದ ಅನುಸರಿಸುತ್ತ ಅವರ ಹಿಂದೆ ಹಿಂದೆ ತಿರುಗುವನು ಜಗತ್ತನ್ನು ತನ್ನುದರದಲ್ಲಿಟ್ಟು ಕಾಪಾಡುವ ಪ್ರಭು ಜನರೊಳಗೆ ಅಂತ-ರ್ಯಾಮಿಯಾಗಿದ್ದು ಅವರು ಜನಿಸುವಾಗ ಜೊತೆಗೆ ತಾನೂ ಜನಿಸುವನು ಮಹಾ-ಮಹಿಮನಾಗಿದ್ದೂ ಗಂಗಾಪುತ್ರನಾದ ಭೀಷ್ಮ ಮಾಡಿ ಸ್ತುತಿಯನ್ನು ಆಲಿಸಿದನು ಗರುಡ-ವಾಹನನಾಗಿ ಗಗನದಲ್ಲಿ ತರತರದಿ ಸ್ತುತಿಸುವ ದೇವತೆಗಳ ದಿವ್ಯಗಾನ ಕೇಳುತ್ತ ಸಂಚರಿಸುವ ಗಾನಲೋಲ ನಮ್ಮ ಗಾಯನವನ್ನು ಕೇಳುತ್ತ ದೇವತೆಗಳೊಂದಿಗೆ ನಮ್ಮ ಮನೆಮನೆಗಳಲ್ಲಿ ಸಂಚರಿಸುತ್ತಾನೆ ಇವನ ಕಾರುಣ್ಯವನ್ನು ಏನೆನ್ನಲಿ?

ಈ ಪದ್ಯದಲ್ಲಿ 'ದಿವೌಕಸರೊಡನೆ ತಿರುಗುವನು' ಎಂದು ಒಂದು ಮುದ್ರಿತಪಾಠವೂ ಇದೆ ಸಂಕರ್ಷಣ ಒಡೆಯರ ವ್ಯಾಖ್ಯಾನದಲ್ಲಿ ಈ ಪಾಠವನ್ನು ಸ್ವೀಕರಿಸಲಾಗಿದೆ ಅರ್ಥದಲ್ಲಿ ವ್ಯತ್ಯಾಸವಿಲ್ಲದಿದ್ದರೂ ಅಕ್ಷರ ಅಧಿಕವಾಗುವುದರಿಂದ ಛಂದೋಭಂಗವಾಗುತ್ತದ

'ಜಾಹ್ನವಿಜನಕ ಜಗದೊಳಗಿದ್ದು ಜನಿಸುವ' ಎಂದೂ ಒಂದು ಮುದ್ರಿತ ಪಾಠವಿದೆ 'ಜಗದುದರ ಜಗದೊಳಗಿದ್ದು' ಎನ್ನುವುದು ಉಚಿತವೆ ಛಂದೋಭಂಗವೂ ಆಗುವುದಿಲ್ಲ

ಆದರೆ 'ಜನರೊಳಗಿದ್ದು ಜನಿಸುವ'ನೆಂದರೆ ಇನ್ನೂ ಹೆಚ್ಚು ಉಚಿತವೆನಿಸುತ್ತದೆ ಜನಿಸುವುದರಿಂದಲೆ ಜನರು 'ಜನ' ರೆನಿಸುತ್ತಾರೆ ಅವರು ಜನಿಸುವಾಗ ಹರಿ ತಾನೂ ಅವರಲ್ಲಿದ್ದು ಜನಿಸುತ್ತಾನೆ ಎನ್ನುವುದೇ ಸರಿ ಮತ್ತು 'ಜಗದೊಳಗಿದ್ದು' ಎಂಬ ಪಾಠವನ್ನು ವ್ಯಾಖ್ಯಾನಕಾರರು ಯಾರೂ ಗ್ರಹಿಸಿದ್ದು ಕಾಣುವುದಿಲ್ಲ

**ಜಾಹ್ನವಿಜನಕ**

ಜಹ್ನುಮುನಿಯ ಮಗಳಾಗಿ ಹುಟ್ಟಿದ್ದರಿಂದ ಗಂಗೆ ಜಾಹ್ನವಿ ಎನಿಸಿದ್ದಾಳೆ

ಗಂಗಾ ಗಂಗೇತಿ ಯೋ ಬ್ರೂಯಾದ್ ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥

ನೂರು ಯೋಜನ ದೂರದಿಂದಲಾದರೂ 'ಗಂಗೇ' ಎಂದರೆ ಸಾಕು ಗಂಗೆ ಬಂದು ಪಾಪ ಪರಿಹರಿಸಿ ನಮ್ಮನ್ನು ವಿಷ್ಣುಲೋಕಕ್ಕೊಯ್ಯುತ್ತಾಳೆ ಅವಳ ಜನಕ ಶ್ರೀಹರಿ ಎಂದ ಮೇಲೆ ಅವನೆಷ್ಟು ಕರುಣಿ ಎಂಬುದನ್ನು ಊಹಿಸಬಹುದು

**ಮನವಚನಕತಿದೂರ**

ಹಿಂದಿನ ಪದ್ಯದಲ್ಲಿ 'ಶ್ರುತಿತತಿಗಳಿಗಭಿಮಾನಿ ಲಕುಮೀಸ್ತುತಿಗಳಿಗೆ ಗೋಚರಿಸದ' ಎಂದು ಹೇಳಿದಂತೆ ಲಕ್ಷ್ಮೀದೇವಿಯ ಮನಸ್ಸಿಗೂ ಮಾತಿಗೂ ನಿಲುಕದವನೆಂದ ಮೇಲೆ ನಮ್ಮಂಥವರ ಮನವಚನಗಳಿಗೆ ನಿಲುಕಿಯಾನೆಂದು ಆಲೋಚಿಸುವುದೂ ತಕ್ಕವಿಲ್ಲ

ಲಕ್ಷ್ಮಿಯ ಮನವಚನಗಳಿಗೆ ನಿಲುಕದವ ನಮ್ಮ ಮನೋಭಿಮಾನಿ ರುದ್ರನಿಗೂ ವಾಗಭಿಮಾನಿನಿ ಉಮೆಗೂ ನಿಲುಕಿಯಾನೆಂದು ಆಲೋಚಿಸುವುದು ಅಶಕ್ಯ

ಅಪಾರನಾದ್ದರಿಂದ ಪೂರ್ತಿ ನಿಲುಕುವುದಿಲ್ಲವೆಂದೋ ಅವ್ಯಕ್ತನಾದ್ದರಿಂದ ಅವನು ಇಚ್ಛಿಸದಿದ್ದರೆ ಸ್ವಲ್ಪವೂ ನಿಲುಕುವುದಿಲ್ಲವೆಂದೋ ಅಭಿಪ್ರಾಯ ಗ್ರಹಿಸಬೇಕು

**ನೆನೆವರನನುಸರಿಸಿ ತಿರುಗುವನು**

ತದೇಜತಿ ತನ್ನೇಜತಿ ತದ್ದೂರೇ ತದ್ವಂತಿಕೇ ॥ —ಈಶೋಪನಿಷತ್

ಅವ್ಯಕ್ತನಾದ್ದರಿಂದ ಮನವಚನಗಳಿಗೇ ಅತಿದೂರನೆಂದ ಮೇಲೆ ಕಣ್ಣ ನೋಟಕ್ಕೆ ಕರಸ್ಪರ್ಶಕ್ಕೆ ಎಷ್ಟು ದೂರನಿರಬಹುದು? ಆದರೂ ಕರುಣೆಯಿಂದ ನೆನೆವರ ಬಳಿಯಲ್ಲೇ ಇರುತ್ತಾನೆ

ಅಗ್ರತಃ ಪೃಷ್ಠತಶ್ಚೈವ ಪಾರ್ಶ್ವಯೋಶ್ಚ ಮಹಾಬಲೌ ।
ಆಕರ್ಣಪೂರ್ಣಧನ್ವಾನೌ ರಕ್ಷೇತಾಂ ರಾಮಲಕ್ಷ್ಮಣೌ ॥

'ಹಿಂದೆ ಮುಂದೆ ಪಾರ್ಶ್ವಗಳಲ್ಲಿ ಎಲ್ಲೆಡೆ ಧನುರ್ಬಾಣಧಾರಿಗಳಾದ ರಾಮಲಕ್ಷ್ಮಣರು ನಮ್ಮನ್ನು ರಕ್ಷಿಸುತ್ತಿರಲಿ' ಎಂದು ಬೇಡುತ್ತ ನೆನೆವ ಭಕ್ತರನ್ನು ಅನುಸರಿಸಿ ಎಲ್ಲೆಡೆ ಅವರನ್ನು ರಕ್ಷಿಸುತ್ತ ತಿರುಗುತ್ತಾನೆ ಲಕ್ಷ್ಮಣಸಮೇತನಾದ ಶ್ರೀರಾಮಚಂದ್ರ 'ಲಕ್ಷ್ಮಣ' ಎನ್ನುವುದು

ಉಪಲಕ್ಷಣ ಎಲ್ಲದೇವತೆಗಳಿಂದೊಡಗೂಡಿ ಭಕ್ತನ ಬಳಿ ತಿರುಗುತ್ತಾನೆ 'ದಿವೌಕಸರೊಡನೆ' ಎಂದು ಮುಂದೆ ಹೇಳುವುದನ್ನು ಇಲ್ಲಿಗೂ ತಂದು ನೇರಿಸಬೇಕು

'ಭಗವಂತ ರಕ್ಷಿಸು!' ಎಂದು ಭಕ್ತ ಬೇಡಬೇಕಾಗಿಲ್ಲ ಬೇಡುತ್ತಾನೆ ಎಂಬ ನಿಯಮವೂ ಇಲ್ಲ ಬೇಡದಿದ್ದರೂ ವಾತ್ಸಲ್ಯದಿಂದ ಕರುಣೆಯಿಂದ ಭಗವಂತ ತಾನೇ ಭಕ್ತನನ್ನು ಅನುನರಿಸಿ ಅವನು ಹೋದಲ್ಲೆಲ್ಲ ಅವನ ಹಿಂದೆ ಹಿಂದೆ ತಿರುಗುವುದುಂಟು ಶ್ರೀವಾದಿರಾಜರ ಹಿಂದೆ ಹಿಂದೆ ಹೆಜ್ಜೆ ಹಾಕುತ್ತಾ ಕಿವಿನಿಮಿರಿಸಿ ಬಾಲವೆತ್ತಿ ಕುಣಿದುಕೊಂಡು ಚೆಲುವ ಕುದುರೆಯಾಗಿ ಹಯಗ್ರೀವಮೂರ್ತಿ ಬಂದಂತೆ.

***ಜಗದುದರ ಜನರೊಳಗಿದ್ದು ಜನಿಸುವ***

ಹರಿ ಜಗತ್ತನ್ನು ಉದರದಲ್ಲಿಟ್ಟುಕೊಂಡು ಕರುಣೆಯಿಂದ ಕಾವಾಡುತ್ತಿದ್ದರೂ ಜನರೊಳಗೆ ಅಂತರ್ಯಾಮಿಯಾಗಿಯೂ ಇದ್ದಾನೆ ಜೊತೆಗೆ ದೇವತೆಗಳೂ ಹಾಗೇ ಜಗದುದರರಾಗಿ ಅಂತರ್ಯಾಮಿಗಳೂ ಆಗಿ ರಕ್ಷಿಸುತ್ತಿದ್ದಾರೆ 'ದಿವೌಕಸರೊಡನೆ' ಎಂಬುದು ಇಲ್ಲಿಗೂ ನಂಬಂಧಿಸಿದೆ ದೇವತೆಗಳಿಂದಲೂ ರಕ್ಷಣೆ ಕೊಡಿಸುತ್ತಾನೆ ಕರುಣೆಯಿಂದ ಜನರು ಹುಟ್ಟುವಾಗ ತಾನೂ ಜೊತೆಗೆ ಹುಟ್ಟುತ್ತಾನೆ ದೇವತೆಗಳನ್ನು ಜೊತೆಗೆ ಹುಟ್ಟಿಸುತ್ತಾನೆ

ಐತರೇಯೋಪನಿಷತ್ತಿನಲ್ಲಿ ಭಗವಂತನ ಹುಟ್ಟಿನ ಬಗ್ಗೆ ಹೇಳಿದೆ ಮೊದಲಿಗೆ ಹರಿ ಅನ್ನದಲ್ಲಿದ್ದು ಅನ್ನದೊಂದಿಗೆ ಪುರುಷಶರೀರವನ್ನು ಪ್ರವೇಶಿಸಿ ಆ ಅನ್ನ ರೇತಸ್ಸಾಗಿ ಪರಿಣಾಮಿಸಿದಾಗ ಅದರಲ್ಲಿದ್ದು ಸ್ತ್ರೀಯನ್ನು ಪ್ರವೇಶಿಸುತ್ತಾನೆ ಇದು ಹರಿಗೆ ಪ್ರಥಮ ಜನ್ಮ ಸ್ತ್ರೀಯಿಂದ ಮಗುವಾಗಿ ಜನಿಸುವುದು ದ್ವಿತೀಯ ಜನ್ಮ ಹೀಗೆ ಪುತ್ರನಿಗೆ ಜನ್ಮವಿತ್ತು ಕೃತಕೃತ್ಯನಾಗಿ ಪಿತನಲ್ಲಿರುವ ಹರಿ ಈ ಲೋಕದಿಂದ ಹೊರಟು ಇನ್ನೊಂದೆಡೆ ಹುಟ್ಟುತ್ತಾನೆ ಇದು ಮೂರನೆ ಜನ್ಮ ಹೀಗೆ ಜೀವನು ಹುಟ್ಟುವಾಗಲೆಲ್ಲ ಹರಿಯೂ ಹುಟ್ಟುತ್ತಾನೆ ಜೊತೆಗೆ ದೇವತೆಗಳೂ ಹೀಗೇ ಹುಟ್ಟುತ್ತಾರೆ ಹರಿಯ ಮತ್ತು ದೇವತೆಗಳ ಹುಟ್ಟಿನ ರಹಸ್ಯ ತಿಳಿದವರಿಗೆ ಹುಟ್ಟಿಲ್ಲದಂತೆ ಮಾಡುತ್ತಾನೆ, ಇದೇ ಕರುಣೆ ಇದಕ್ಕೆ ಗರ್ಭದಲ್ಲಿದ್ದು ಪ್ರತ್ಯಕ್ಷ ಕಂಡು ಹೇಳಿದ ವಾಮದೇವ ಮುನಿಯ ಮಾತೇ ನಾಕ್ಷಿ ಅವನು ಹೇಳುತ್ತಾನೆ—

'ಗರ್ಭದಲ್ಲಿದ್ದೇ ನಾನು ಎಲ್ಲ ದೇವತೆಗಳ ಎಲ್ಲ ಬಗೆಯ ಜನ್ಮಗಳನ್ನೂ ಕಂಡಿದ್ದೇನೆ ನಾನು ಕರ್ಮವಶದಿಂದ ಶರೀರ ಹೊಂದಿ ಹುಟ್ಟುತ್ತೇನೆ ಭಗವಂತ ಶರೀರನಿಯಾಮಕನಾಗಿ ಹುಟ್ಟುತ್ತಾನೆ ದೇವತೆಗಳು ಶರೀರೇಂದ್ರಿಯಾದಿಗಳಲ್ಲಿ ತತ್ವಾಭಿಮಾನಿಗಳಾಗಿ ಹುಟ್ಟುತ್ತಾರೆ, ಹುಟ್ಟುವಾಗ ನನಗೆ ದುಃಖಾದಿಪೀಡೆ ಇದೆ ದೇವತೆಗಳಿಗೆ ದುಃಖಾದಿಗಳಿಲ್ಲದಿದ್ದರೂ ಅಸ್ವಾತಂತ್ರ್ಯವಿದೆ ಹರಿಗೆ ದುಃಖಾದಿಪೀಡೆಯೂ ಇಲ್ಲ ಅಸ್ವಾತಂತ್ರ್ಯವೂ ಇಲ್ಲ ನನ್ನ ರಕ್ಷಣೆಗಾಗಿಯೇ ಹರಿಯೂ ದೇವತೆಗಳೂ ನನ್ನ ಜೊತೆಗೆ ಹುಟ್ಟುತ್ತಾರೆ ನಾನು ಈ ರೀತಿ ಹರಿಯ ಮತ್ತು ದೇವತಗಳ, ಜನ್ಮರಹಸ್ಯವನ್ನು ತಿಳಿದುದರಿಂದ ಗರ್ಭವಾಸದುಃಖದಿಂದ ವಿಮುಕ್ತನಾಗುತ್ತಿದ್ದೇನೆ'

*ಘನಮಹಿಮ ಗಾಂಗೇಯನುತ*

ಹಿಂದಿನ ಪದ್ಯದಲ್ಲಿ ಹೇಳಿದಂತೆ ಹರಿಯ ಪಟ್ಟದ ರಾಣಿ ಮಹಾಲಕ್ಷ್ಮಿ ಅನಂತವೇದ-ಗಳಿಂದ ಪ್ರೀತಿಯಿಂದ ಸ್ತುತಿಸುವ ಘನಮಹಿಮೆಯುಳ್ಳವ ಹರಿ ಅಂಥ ಹರಿಯನ್ನು ಭೀಷ್ಮ ಸ್ತುತಿಸುತ್ತಾನಂತೆ! ಹರಿ ಕೇಳುತ್ತಾನಂತೆ!

ಆಯುಧ ಹಿಡಿಯೆನೆಂದು ಪ್ರತಿಜ್ಞೆ ಮಾಡಿದ್ದ ಕೃಷ್ಣನ ಕೈಯಿಂದ ಬಲಾತ್ಕಾರವಾಗಿ ಆಯುಧ ಹಿಡಿಸಲು ಯತ್ನಿಸಿದವ ಭೀಷ್ಮ ಗುರುವಾದ ಪರಶುರಾಮನ ಆಜ್ಞೆಯನ್ನು ಧಿಕ್ಕರಿಸಿ ಅವನೊಡನೆ ಯುದ್ಧ ಮಾಡಿದವ ಭೀಷ್ಮ ಹೀಗೆ ಅಪರಾಧಿಯಾಗಿದ್ದರೂ ಭೀಷ್ಮ ಸ್ತೋತ್ರ ಮಾಡಿದಾಗ ಕೃಷ್ಣ ಕೈಕಟ್ಟಿ ನಿಂತು ಚೆನ್ನಾಗಿ ಆಲಿಸಿದುದು ಕರುಣೆಯೆ ಸರಿ ಶರಮಂಚದಲ್ಲಿಮಲಗಿ ಎಂಟು ಗರ್ಭವಾಸಗಳ ದುಃಖವನ್ನು ಏಕಕಾಲದಲ್ಲಿ ಅನುಭವಿಸುತ್ತ ಸ್ತೋತ್ರಮಾಡಲು ಅಶಕ್ತನಾಗಿದ್ದ ಭೀಷ್ಮನ ಬಳಿಗೆ ಕೃಷ್ಣ ತಾನೇ ಬಂದು ಅಮೃತಹಸ್ತದಿಂದ ಅವನ ಮೈದಡವಿ ದುಃಖ ಮರೆಸಿ ಅವನ ನಾಲಿಗೆಯಲ್ಲಿ ತಾನೆ ನಿಂತು ಸ್ತೋತ್ರ ಮಾಡಿಸಿ-ಕೊಂಡುದುದೂ ಅದನ್ನು ತಾನೇ ಪ್ರೀತಿಯಿಂದ ಆಲಿಸಿದುದೂ ಕರುಣೆಯ ಪರಾಕಾಷ್ಠಯೆ ಸರಿ

*ಗಗನಚರವಾಹನ*

ಆಕಾಶದಲ್ಲಿ ಹಾರುವ ಗರುಡನನ್ನು ವಾಹನವನ್ನಾಗಿ ಮಾಡಿಕೊಂಡ ಹರಿ ಗಗನಚರ-ವಾಹನನೆನಿಸಿದ್ದಾನೆ ಗರುಡ ವೇದಾಭಿಮಾನಿ ಅವನು ಹಾರುವಾಗ ರೆಕ್ಕೆಗಳಿಂದ ಸಾಮ-ಗಾನ ಹೊರಡುತ್ತದೆ ಅವನ ಸಾಮಗಾನಸೇವೆಯನ್ನು ಸ್ವೀಕರಿಸುತ್ತ ಅನುಗ್ರಹಿಸಲು ಕರುಣೆ-ಯಿಂದಲೇ ಅವನನ್ನು ವಾಹನವಾಗಿ ಮಾಡಿಕೊಂಡವ ಶ್ರೀಹರಿ ಭಾಗವತ ಹಾಗೆ ಹೇಳು-ತ್ತದೆ—

ಆಕರ್ಣಯನ್ ಪತ್ರರಥೇಂದ್ರಪಕ್ಷೈರುಚ್ಚಾರಿತಂ ಸ್ತೋಮಮುದೀರ್ಣಸಾಮ ।

ವೇದೈಕವೇದ್ಯನಾದ ಹರಿಯನ್ನು ಸಾಧಕನ ಹೃದಯಾಕಾಶಕ್ಕೆ ಹೊತ್ತುತರುವ ವೇದವೂ ಗಗನಚರವೆ ಗಗನದಲ್ಲಿ ಹೃದಯಾಕಾಶದಲ್ಲಿ ಸಂಚರಿಸುತ್ತದೆ ಅದು ವೇದೋಚ್ಚಾರಣ-ಪೂರ್ವಕವಾಗೇ ಧ್ಯಾನ ಮಾಡಬೇಕೆನ್ನುತ್ತದೆ ಅದರ್ವಣೋಪನಿಷತ್ತು

ಪ್ರಣವೋ ಧನುಃ ಶರೋ ಹ್ಯಾತ್ಮಾ

ಪ್ರಣವಾದಿ ವೇದಮಂತ್ರವೆಂಬ ಬಿಲ್ಲಿಗೆ ಮನಸ್ಸೆಂಬ ಬಾಣ ಹೂಡಿ ಎಸೆದರೆ ಮನಸ್ಸು ವೇಗವಾಗಿ ನೇರವಾಗಿ ಪರಬ್ರಹ್ಮನ ಕಡೆ ಸಾಗುತ್ತದೆ ಧ್ಯಾನ ಕೈಗೂಡುತ್ತದೆ ವೇದವನ್ನೂ ವೇದಾಭಿಮಾನಿ ಗರುಡನನ್ನೂ ಏರಿ ಹರಿ ಸಾಧಕನ ಹೃದಯದೊಳಕ್ಕೆ ಹಾರಿ ಬರುತ್ತಾನೆ, ಕರುಣೆಯಿಂದ ಹೀಗೆ ಸಾಧಕನ ಮೇಲೆ ಧ್ಯಾನಗೋಚರನಾಗಿ ಕಣ್ಣಿಗೆ ಕಾಣಿಸುವ ಶ್ರೀರಂಗ-ವಿಟ್ಠಲನ ಕರುಣೆ ಅಪಾರ

***ಗಾಯನವ ಕೇಳುತ ದಿವೌಕಸರೊಡನೆ ಚರಿಸುವ ಮನೆಮನೆಗಳಲ್ಲಿ***

ನಾಹಂ ವಸಾಮಿ ವೈಕುಂಠೇ ನ ಯೋಗಿಹೃದಯೇ ರವೌ ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥

'ನಾನು ವೈಕುಂಠದಲ್ಲಿರುವುದಿಲ್ಲ, ಯೋಗಿಗಳ ಹೃದಯದಲ್ಲಿಯೂ ಇರುವುದಿಲ್ಲ ಸೂರ್ಯಮಂಡಲದಲ್ಲಿಯೂ ಇಲ್ಲ ನನ್ನ ಭಕ್ತರು ನನ್ನ ಗುಣಕೀರ್ತನ ಮಾಡುವಲ್ಲಿ ನಾನಿರುತ್ತೇನೆ, ನಾರದ!' ಎನ್ನುತ್ತಾನೆ ಭಗವಂತ

ಇದು ಹರಿನಾಮಸಂಕೀರ್ತನದ ಪ್ರಶಂಸೆ ಮಾಡುವ ಮಾತೇ ಹೊರತು ವೈಕುಂಠ ಮುಂತಾದವುಗಳ ಮಹಿಮೆಯನ್ನು ಅಲ್ಲಗಳೆಯುವ ಅಭಿಪ್ರಾಯದ್ದಲ್ಲ ಗಾನಪ್ರಿಯ ಹರಿ ಎನ್ನುವುದೆ ಅಭಿಪ್ರಾಯ ವಸ್ತುತಃ ಗರುಡವಾಹನನಾದ ಹರಿ ಆಕಾಶದಲ್ಲಿ ದಿವೌಕಸರೊಡನೆ ಸಂಚರಿಸುವವ ಗರುಡನ ರೆಕ್ಕೆಗಳಿಂದ ಹೊರಡುವ ಸಾಮಗಾನ ಪಾಲಿಸಿ ತೃಪ್ತನಾಗುವವ ಗಂಧರ್ವರ ಕಿಂನರರ ಕಂಠದಿಂದ ಹೊರಹೊಮ್ಮುವ ದಿವ್ಯಗಾನವನ್ನು ಆಲಿಸಿ ಸಂತೋಷಪಡುವವ ನಮ್ಮಂಥವರು ಪ್ರಾಕೃತಸಾಹಿತ್ಯವನ್ನು ತಪ್ಪುತಪ್ಪಾಗಿ ಅರ್ಥಾನುಸಂಧಾನವೂ ಇಲ್ಲದೆ ಕೆಟ್ಟರಾಗಗಳಿಂದ ಹಾಡುವುದು ಗರುಡನು ಮಾಡುವ ದಿವ್ಯ ಸಾಮಗಾನದ ಮುಂದೆ ಏನೂ ಅಲ್ಲ ದೇವ ಯೋಗ್ಯವಾದ ಉಜ್ವಲವಾದ ಗಾಂಧಾರಗ್ರಾಮದ ಸಂಗೀತದ ಮುಂದೆಯೂ ಏನೂ ಅಲ್ಲ ಗಾನ ಚೆನ್ನಾಗಿರದಿದ್ದರೆ ಅದರಷ್ಟು ಕಿವಿಗೆ ಹಿಂಸೆ ಕೊಡುವಂಥದ್ದು ಇನ್ನೊಂದಿಲ್ಲ ಆದರೂ ನಮ್ಮ ಗಾನವನ್ನು ಹರಿ ಕರುಣೆಯಿಂದ ಕೇಳುತ್ತಾನಲ್ಲ! ನಾನು ವೈಕುಂಠದಲ್ಲೂ ಇರಲೊಲ್ಲೆ ಎಂದು ಮುಂತಾಗಿ ಹೇಳುತ್ತಾನಲ್ಲ! ಇದು ಕರುಣೆಯ ಪರಾಕಾಷ್ಠೆ

ಜನರೊಳಗಿದ್ದು ಜನಿಸುತ್ತಾನೆ ಶ್ರೀಹರಿ ಎಂದಿದೆ ಹಾಗೆ ಮಗುವಾಗಿ ಹುಟ್ಟಿದ ಶ್ರೀಹರಿಗೆ ತಂದೆ, ತಾಯಿ, ಬಂಧು, ಬಳಗದವರೆಲ್ಲ ಜೋಗುಳದಿಂದಾರಂಭಿಸಿ ಅನ್ನಪ್ರಾಶನ, ಚೌಲ, ಉಪನಯನ, ವಿವಾಹ, ಪುತ್ರೋತ್ಸವಾದಿ ಶುಭ ಕಾರ್ಯಗಳಲ್ಲೆಲ್ಲ ಹಾಡುತ್ತಾರೆ ಹಾಡಿ ಹರಸುತ್ತಾರೆ ಆ ಗಾಯನವನ್ನು ಮಗುವಾಗಿ ಮಗುವಿನೊಳಗಿರುವ ಹರಿ ಕೇಳುತ್ತಾನೆ, ನಲಿಯುತ್ತಾನೆ ಮನೆಯನ್ನು ನಂದಗೋಕುಲವಾಗಿ ಮಾಡುತ್ತಾನೆ ಹೀಗೆ ನಾವು ಹಾಡುವುದೆಲ್ಲ ಹರಿಯ ಗುಣಗಾನವೆಂಬ ಎಚ್ಚರ ನಮಗಿರಬೇಕು ಹಾಡಿನಲ್ಲಿ ನಡುವೆ ಕೋಪ, ಜಗಳ, ಮನಸ್ತಾಪಗಳ ಅಪಸ್ವರ ಕೇಳಬಾರದಂತೆ ಎಚ್ಚರವಹಿಸಬೇಕು ಆಗ ಮನೆಯಲ್ಲಿ ನಿತ್ಯೋತ್ಸವ ನಿತ್ಯೋತ್ಸವದ ಮನೆಗಳಲ್ಲಿ ನಾರಾಯಣನ ಜೊತೆಗೆ ಲಕ್ಷ್ಮಿ ವಾಸ ಮಾಡುತ್ತಾಳಂತೆ ಅವಳೇ ಹೇಳುತ್ತಾಳೆ

ವಸಾಮಿ ನಿತ್ಯೋತ್ಸವಮಂದಿರೇಷು

ಲಕ್ಷ್ಮೀನಾರಾಯಣರು ಮನೆಯಲ್ಲಿದ್ದರೆಂದರೆ ಬೇರೆ ದೇವತೆಗಳೂ ಇರುವರೆಂದು ಬೇರೆ ಹೇಳಬೇಕಾಗಿಲ್ಲ ದಿವೌಕಸರೊಡನೆ ಮನೆಮನೆಗಳಲ್ಲಿ ಹರಿ ಚರಿಸುತ್ತಾನೆ ಕರುಣಾರಸವನ್ನು ಹರಿಸುತ್ತಾನೆ ಮನೆಮಠಗಳನ್ನು ತೊರೆದ ವಿರಕ್ತರಿಗೂ ಹರಿ ಅವರ ಮನಮಂದಿರಗಳಲ್ಲಿಯೆ ದಿವೌಕಸರೊಡನೆ ನೆಲಸುತ್ತಾನೆ ಇದಲ್ಲವೆ ಕರುಣೆ?

**ಮಲಗಿ ಪರಮಾದರದಿ ಪಾಡಲು**
**ಕುಳಿತು ಕೇಳುವ ಕುಳಿತು ಪಾಡಲು**
**ನಿಲುವ ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬ ।**
**ಸುಲಭನೋ ಹರಿ ತನ್ನವರನರ-**
**ಗಳಿಗೆ ಬಿಟ್ಟಗಲನು ರಮಾಧವ-**
**ನೊಲಿಸಲರಿಯದೆ ಬಳಲುವರು ಪಾಮರರು ಭವದೊಳಗೆ ॥ ೫ ॥**

೧ ಮಹಾಕರುಣಿಯಾದ ಹರಿ ಭಕ್ತರಿಗೆಂದೂ ಸುಲಭನಯ್ಯ! ಏಕಾದಶಿ ರಾತ್ರಿ ಜಾಗ-ರಣಕಾಲದಲ್ಲಿ ಹರಿಯು ಮುಡಿದ ಹೂವು ಹರಿವಾಣದಲ್ಲಿ ಹೊತ್ತು ಕುಣಿದು ಸಂಕೀರ್ತನ ಮಾಡಿದರೆ ಸಾಕು, ಹರಿ 'ಒಲಿವೆ ನಿಮಗೆ'ನ್ನುತ್ತಾನೆ ಕುಣಿಯಲು ಶಕ್ತಿ ಇಲ್ಲದವ ನಿಂತೇ ಹಾಡಲಿ, ನಿಂತು ಕೇಳುತ್ತಾನೆ ಕುಳ್ಳಿರಲೂ ಶಕ್ತಿ ಇಲ್ಲವಾದರೆ ಮಲಗಿಯೇ ಹಾಡಲಿ, ಕುಳಿತು ಕೇಳುತ್ತಾನೆ ಬೇರೆ ದೇವತೆಗಳು ಇಷ್ಟು ಸುಲಭರಲ್ಲ ಹರಿ ಬೇರೆ ದೇವತೆಗಳಂತಲ್ಲ

ಪ್ರಾರಂಬಮಾತ್ರಮಿಚ್ಛಾ ವಾ [illegible] ನ ನಿಷ್ಫಲಾ ।

ವಿಷ್ಣುಧರ್ಮ ಪ್ರಾರಂಭಿಸಿದರೂ ಸಂಕಲ್ಪಿಸಿದರೂ ಫಲವಿದ್ದೇ ಇದೆ ನಿಷ್ಫಲವೆಂದೂ ಆಗು-ವುದಿಲ್ಲ ಅದರಿಂದ ಹರಿ ತನ್ನವರನ್ನು ಅರಗಳಿಗೆಯೂ ಬಿಟ್ಟು ಅಗಲನು ಅವನನ್ನು ಒಲಿಸಲು ಅರಿಯದೆ ಪಾಮರರು ಸಂಸಾರದಲ್ಲಿಯೆ ಇದ್ದು ಬಳಲುತ್ತಾರೆ

ಬೃಹನ್ನಾರದೀಯಪುರಾಣದಲ್ಲಿ ಏಕಾದಶೀಮಾಹಾತ್ಮ್ಯಪ್ರಕರಣದಲ್ಲಿ ಹೀಗೇ ಹೇಳಿದೆ

ಯಃ ಸ್ವಪಿತ್ವಾ ತು ಶಯನೇ ಹರಿಂ ಸಂಚಿಂತಯೇನ್ನರಃ ।
ಸ ಹರಿಃ ಕೀರ್ತನಂ ತಸ್ಯ ತಿಷ್ಠನ್ ಸಂಶೃಣುತೇ ಸದಾ ॥
ಯಸ್ತಿಷ್ಠನ್ ಕೀರ್ತಯೇದ್ ವಿಷ್ಣುಂ ಭಕ್ತ್ಯಾ ಯುಕ್ತೋ ನರೋತ್ತಮಃ ।
ಸ್ವಯಮುತ್ಥಾಯ ದೇವೇಶೋ ಭಕ್ತಸ್ಯ ಶೃಣುತೇ ಸ್ತವಮ್ ॥
ಯಃ ಸಮುತ್ಥಾಯ ಮತಿಮಾನ್ ಜಗದಾಧಾರಮೀಶ್ವರಮ್ ।
ಕೀರ್ತಯೇದ್ ವಿವಶೋ ಗಾನೈರ್ಮಹಾಭಕ್ತಿಸಮನ್ವಿತಃ ॥
ಸ ಹರಿಃ ಶೃಣುತೇ ತತ್ರ ನೃತ್ಯಮಾನೋಽತಿಹರ್ಷಿತಃ ।
ಯಃ ಪುಮಾನ್ ನೃತ್ಯಮಾನಃ ಸನ್ ವಿಲಜ್ಜೋ ಗಾಯತೇ ಯದಿ ॥
ಸ ಹರಿಃ ಪರಮಪ್ರೀತಃ ಪ್ರತ್ಯಕ್ಷೋ ಭವತಿ ಧ್ರುವಮ್ ॥

೨ ನಾರದಪುರಾಣವಚನ ಏಕಾದಶೀಜಾಗರಣ ಸಂದರ್ಭದಲ್ಲಿ ಬಂದಿದ್ದರೂ ವಸ್ತು-ತಃ ಅದು ವೈಷ್ಣವರ ನಿತ್ಯಜೀವನಕ್ಕೂ ಅನ್ವಯಿಸುವಂತಹುದು ವಯೋದೋಷದಿಂ-ದಲೋ, ಅನಾರೋಗ್ಯದಿಂದಲೋ, ಕುಣಿಯಲು ಅಶಕ್ತನಾದವನು ನಿಂತೋ, ಕುಳಿತೋ, ಕೊನೆಗೆ ಮಲಗಿಯೋ ಹರಿಯನ್ನು ಹಾಡಿ ಹೊಗಳಬಹುದು ಹರಿ ಒಲಿಯುತ್ತಾನೆ

ನಾರದಪುರಾಣಕ್ಕೂ ಹರಿಕಥಾಮೃತಸಾರಕ್ಕೂ ಸ್ವಲ್ಪ ವ್ಯತ್ಯಾಸ ನಾರದಪುರಾಣದಲ್ಲಿ 'ಪ್ರತ್ಯಕ್ಷೋ ಭವತಿ ಧ್ರುವಮ್' 'ಕುಣಿದು ಹಾಡಿದರೆ ಹರಿ ಪ್ರತ್ಯಕ್ಷನೇ ಆಗುವನು' ಎಂದಿದೆ ಆದರೆ ಹರಿ ಅಷ್ಟೇನೂ ಸುಲಭನಲ್ಲ 'ಪರಮಾದರದಿ' ಕುಣಿದು ಹಾಡಿದರೆ ಪ್ರತ್ಯಕ್ಷನಾಗೇ ಆಗುತ್ತಾನೆ ಹೀಗಾಗಿ ಪರಮಾದರವಿದ್ದರೆ ಕುಣಿಯಬೇಕಾಗಿಲ್ಲ ಪರಮಾದರವಿಲ್ಲದಿದ್ದರೆ ಕುಣಿದರೂ ಪ್ರಯೋಜನವಿಲ್ಲ ಮತ್ತೇಕೆ ಮಲಗಿ, ಕುಳಿತು, ನಿಂತು, ಕುಣಿದು ಎನ್ನುವ ತಾರತಮ್ಯಕ್ರಮ? ಅದರಿಂದ ದಾಸರಾಯರು 'ಪ್ರತ್ಯಕ್ಷನಾಗುತ್ತಾನೆ' ಎನ್ನದೆ 'ಒಲಿವೆ ನಿಮಗೆಂಬ' ಎಂದಿದ್ದಾರೆ ಮಲಗಿ ಹಾಡಿದರೆ ಕುಳಿತು, ಕುಳಿತು ಹಾಡಿದರೆ ನಿಂತು ಎಂದು ಮುಂತಾಗಿ ಹೇಳುವುದೆಲ್ಲ ಆತನೊಲುಮೆಯ ಚಿಹ್ನೆಗಳು ಸಾಧಕನ ಭಕ್ತಿತಾರತಮ್ಯಕ್ಕನುಗುಣ ಭಗವಂತನ ಅನುಗ್ರಹತಾರತಮ್ಯ ಅದರಿಂದ 'ನಲಿದರೆ ಒಲಿವೆ' ಎಂದರೆ, ಮಲಗಿ ಹಾಡಿದರೂ ಒಲಿಯುತ್ತಾನೆ, ನಲಿದು ಹಾಡಿದರೆ ಹೆಚ್ಚು ಒಲಿಯುತ್ತೇನೆ ಎನ್ನುತ್ತಾನೆ ಹರಿ

೩ ಅಥವಾ ಜನನಮರಣಚಕ್ರದಲ್ಲಿ ಸುತ್ತುವ ಜೀವ ತಾಯ ಗರ್ಭದಲ್ಲಿ ಮಲಗುತ್ತಾನೆ ತೊಟ್ಟಿಲಲ್ಲಿ ಮಲಗುತ್ತಾನೆ ಮಗುವಾಗಿ ಎದ್ದು ಕುಳಿತುಕೊಳ್ಳುತ್ತಾನೆ, ಬೆಳೆದು ನಿಲ್ಲುತ್ತಾನೆ, ಯೌವನ ಬಂದಾಗ ಕುಣಿಯುತ್ತಾನೆ, ತಿರುಗಿ ವಯಸ್ಸಾದಾಗ ಸೋತು ನಿಲ್ಲುತ್ತಾನ, ಮುದಿ-ಯಾದಾಗ ಕುಳಿತುಕೊಳ್ಳುತ್ತಾನೆ, ಕೊನೆಗೆ ರುಗ್ಣ ಶಯ್ಯೆಯಲ್ಲಿ ಮರಣಶಯ್ಯೆಯಲ್ಲಿ ಮಲಗುತ್ತಾನೆ ಈ ಎಲ್ಲ ಅವಸ್ಥೆಗಳಲ್ಲಿಯೂ ಯಥಾಶಕ್ತಿ ಜ್ಞಾನಸಾಧನೆ ಮಾಡಲೇಬೇಕು ಮಲಗುವ ಶಿಶುಗಳಲ್ಲಿ ವೃದ್ಧರಲ್ಲಿ ತ್ರಿಕರಣದೌರ್ಬಲ್ಯದಿಂದ ಉಪಾಸನೆಯೂ ದೃಢವಾಗಿ-ರುವುದಿಲ್ಲ ಹರಿ ಕರುಣೆಯಿಂದ ಆಗಲೂ ಬಳಿಯಲ್ಲಿ ಕುಳಿತು ಆ ಉಪಾಸನೆಯನ್ನು ಸ್ವೀಕರಿಸುತ್ತಾನೆ ಕುಳಿತುಕೊಳ್ಳುವ, ನಿಲುವ ಸಶಕ್ತರಾದ ಸಾಧಕರ ಉಪಾಸನೆಯೂ ಸಶಕ್ತವಾಗಿರುತ್ತದೆ ಹರಿ ನಿಂತು ಕುಣಿದು ಅವರ ಸೇವೆ ಕೈಗೊಳ್ಳುತ್ತಾನೆ ಕುಣಿವ ಅಥವಾ ಕುಣಿಯಬಲ್ಲ ವಯಸ್ಸು ಯೌವನ ಉಪಾಸನೆಗೆ ಅತ್ಯಂತ ಯೋಗ್ಯಕಾಲ ವಿಷಯ-ಪ್ರಪಂಚದಲ್ಲಿ ಕುಣಿಯುವುದನ್ನು ಬಿಟ್ಟು ದೇಹಧಾರಣೆಗೆ ಬೇಕಾಗುವಷ್ಟು ಹರಿಗೆ ಅರ್ಪಿತವಾದ ವಿಷಯಪದಾರ್ಥ ಉಂಡು ಅಂತರಂಗದ ಆಧ್ಯಾತ್ಮಪ್ರಪಂಚದಲ್ಲಿ ಕುಣಿಯಬೇಕು ದೃಢವಾದ ಶರೀರಇಂದ್ರಿಯಗಳಿರುವುದರಿಂದ ಬಾಹ್ಯದಲ್ಲಿಯೂ ಕುಣಿಯಬೇಕು ಹೀಗೆ ಒಳಗೂ ಹೊರಗೂ ಹರಿಯೇ ಆದರೆ, ದೇಹಾಭಿಮಾನ ತೊರೆದು ಲಜ್ಜೆ ಬಿಟ್ಟು ಕುಣಿಯುವಂತಾದರೆ ಹರಿ ಒಲಿದು ಪ್ರತ್ಯಕ್ಷನೇ ಆಗುತ್ತಾನೆ ಈ ಅಭಿಪ್ರಾಯ-

ದಿಂದ ಪುರಾಣದಲ್ಲಿ 'ಪ್ರತ್ಯಕ್ಷೋ ಭವತಿ ಧ್ರುವಮ್' ಎಂದಿದೆ ಹರಿಕಥಾಮೃತಸಾರ-ದಲ್ಲಿಯೂ ಒಲಿವೆ'ನೆಂದರೆ ಪ್ರತ್ಯಕ್ಷವಾಗಿ ಕಾಣುವಷ್ಟು ಒಲಿವೆನೆಂಬ ಅರ್ಥ ವಿವಕ್ಷಿತ

೪ ಅಥವಾ ಮಲಗಿ ಕುಳಿತು ಎಂದೆಲ್ಲ ಅಧ್ಯಾತ್ಮಸಾಧನೆಯ ವಿವಿಧ ಹಂತಗಳನ್ನು ತೋರಿಸುತ್ತದೆ 'ಮಲಗಿ' ಎಂದರೆ ಜ್ಞಾನಮಾರ್ಗದಲ್ಲಿ ನಡೆಯಲು ಶ್ರವಣಾದಿಪ್ರವೃತ್ತಿಯನ್ನೆ ಮಾಡದೆ ಎಂದರ್ಥ ಅಂಥ ಸಾಧಕನೂ 'ಮಲಗಿ' ಕೊಂಡೇ ಕೇವಲ ಹರಿನಾಮಸಂಕೀ-ರ್ತನೆ ಮಾಡಲು ಹರಿ ಒಲಿದು ಬಳಿಯಲ್ಲಿ ಕುಳಿತು ಕೇಳುತ್ತಾನೆ ಕುಳಿತು ಶ್ರವಣಾದಿಗಳನ್ನು ನಡೆಸುವ ಸಾಮರ್ಥ್ಯ ನೀಡುತ್ತಾನೆ ಕುಳಿತು ಪಾಡಲು ನಿಂತು ಕೇಳುತ್ತಾನೆ ನಿಂತು ಪಾಡುವ ಸಾಮರ್ಥ್ಯ ನೀಡುತ್ತಾನೆ ಆತ ನಿಂತು ಹಾಡಿದಾಗ ಕುಣಿಯುತ್ತಾನೆ ಕುಣಿದು ಹಾಡುವ ಸಾಮರ್ಥ್ಯವನ್ನು ನೀಡುತ್ತಾನೆ ಧ್ಯಾನಾವಸ್ಥೆಯಲ್ಲಿ ಧ್ಯಾನಾನಂದದ ಅಮೃತಪಾನದಿಂದ ಮತ್ತನಾಗಿ ಅಂತರಂಗದಲ್ಲಿಯೂ ಬಾಹ್ಯದಲ್ಲಿಯೂ ಮೈಮರೆತು ಪರಮಾದರದಿ ಹಾಡಿ ಕುಣಿದನೆಂದರೆ ಹರಿ ಅಂತರಂಗದಲ್ಲಿ ಮೈದೋರುತ್ತಾನೆ

೫ ಅಥವಾ ಕಲಿಯುಗದ ಜನರು ಸಾಧನೆಯಲ್ಲಿ ಬಹಳ ಅಶಕ್ತರು ಅಧ್ಯಾತ್ಮವಿಷಯ-ದಲ್ಲಿ ಏನೂ ಅರಿವಿಲ್ಲದೆ ಕಣ್ಮುಚ್ಚಿ ಮಲಗಿರುತ್ತಾರೆ ಆದರೂ 'ಕಲೌ ಸಂಕೀರ್ತ್ಯ ಕೇಶವಮ್' ಎಂಬಂತೆ ನಾಮಸಂಕೀರ್ತನೆ ಮಾಡಿದರೆ ಹರಿ ಬೇಡವೆನ್ನುವುದಿಲ್ಲ ಕುಳಿತು ಕೇಳುತ್ತಾನೆ ದ್ವಾಪರದಲ್ಲಿ ಜನ ಕುಳಿತು ವಿಚಾರ ಮಾಡಬಲ್ಲರು ಅವರು ಕುಳಿತು ಹಾಡಿದರೆ ಹರಿ ನಿಂತು ಕೇಳುತ್ತಾನೆ ತ್ರೇತಾಯುಗದಲ್ಲಿ ಜನರು ಸಾಧನಕ್ಷೇತ್ರದಲ್ಲಿ ಎದ್ದು ನಿಲ್ಲುವ ಸಾಮ-ರ್ಥ್ಯದವರು ಅವರು ನಿಂತು ಹಾಡಿದಾಗ ಹರಿ ಕುಣಿಯುತ್ತಾನೆ ಕೃತಯುಗದಲ್ಲಿ ಜನ ಸಾಧನೆಯಲ್ಲಿ ಸಮರ್ಥರು ಕುಣಿಯಬಲ್ಲರು, ಕುಣಿಯುತ್ತಾರೆ ಹರಿ ಒಲಿವೆ ನಿಮಗೆ ಎನ್ನುತ್ತಾನೆ

ಐತರೇಯ ಬ್ರಾಹ್ಮಣದಲ್ಲಿ ಹೇಳಿದೆ—

ಕಲಿಃ ಶಯಾನೋ ಭವತಿ ಸಂಜಿಹಾನಸ್ತು ದ್ವಾಪರಃ ।
ಉತ್ತಿಷ್ಠನ್ ತ್ರೇತಾಯಾಂ ಭವತಿ ಕೃತಂ ಸಂಪದ್ಯತೇ ಚರನ್ ॥

'ಕಲಿಯುಗದ ಜನರು ಮಲಗಿರುತ್ತಾರೆ ದ್ವಾಪರದವರು ಸಂದೇಹಪಡುತ್ತಾರೆ ತ್ರೇತಾ-ಯುಗದವರು ಎದ್ದು ನಿಲ್ಲುತ್ತಾರೆ ಕೃತಯುಗದವರು ಓಡಾಡುತ್ತಾರೆ'

ವೃಷಭರೂಪಿ ಧರ್ಮಕ್ಕೆ ನಾಲ್ಕು ಕಾಲುಗಳು ತಪಸ್ಸು, ಶೌಚ, ದಯಾ, ಸತ್ಯ ಎಂದು ಕಲಿಯುಗದಲ್ಲಿ ಒಂದು, ದ್ವಾಪರದಲ್ಲಿ ಎರಡು, ತ್ರೇತೆಯಲ್ಲಿ ಮೂರು ಕಾಲುಗಳಿಂದ ನಿಂತು ಕೃತಯುಗದಲ್ಲಿ ನಾಲ್ಕು ಕಾಲುಗಳಿಂದ ಸಂಚರಿಸುತ್ತದೆ ಆದ್ದರಿಂದ ಜನರೂ ಸಾಧನಮಾರ್ಗದಲ್ಲಿ ಹಾಗೇ ಮಾಡುತ್ತಾರೆ

ಅಥರ್ವಣಭಾಷ್ಯದಲ್ಲಿ ಹೇಳಿದೆ—

ತಸ್ಮಾತ್ ಕಾರ್ತಯುಗಾ ಜನಾಃ ಪ್ರಾಪ್ನುವಂತಿ ಹರಿಮ್ ।

'ಕೃತಯುಗದ ಜನರಿಗೆ ಪರಮಾತ್ಮಪ್ರಾಪ್ತಿಯಾಗುತ್ತದೆ'

ಮುಖ್ಯೋ ಧರ್ಮಃ ಕಾರ್ತಯುಗೋ ವರ್ತಿತವ್ಯಃ ಕಲಾವಪಿ ।
ತ್ರೇತಾದೌ ತದಶಕ್ತ್ಯಾ ಹಿ ಧರ್ಮೋಽನ್ಯಃ ಸಂಪ್ರಕೀರ್ತಿತಃ ॥

'ಕೃತಯುಗದ ಧರ್ಮವೆ ಮುಖ್ಯವಾದ ವಿಷ್ಣುಧರ್ಮ ಶಕ್ತಿ ಇದ್ದರೆ ಕಲಿಯುಗದಲ್ಲಿಯೂ ಕೃತಯುಗದ ವಿಷ್ಣುಧರ್ಮವನ್ನೆನಡೆಸಬೇಕು ತ್ರೇತಾಯುಗ, ದ್ವಾಪರಯುಗ, ಕಲಿಯುಗ-ಗಳಲ್ಲಿ ಬೇರೆ ಧರ್ಮಗಳನ್ನು ಹೇಳಿರುವುದು ಅಶಕ್ತರಿಗಾಗಿ'

ಅದರಿಂದ ಹರಿದಾಸರು—

'ಕಲಿಯುಗದ ಗಾನದಲ್ಲಿ ಕೇಶವ ಎನಲು
ಕೈಗೂಡುವನು ರಂಗವಿಟ್ಠಲ'
'ಕೀರ್ತನಮಾತ್ರದಿ ಕಲಿಯುಗದಲ್ಲಿ
ಮುಕುತಿಯನೀವ ಪುರಂದರವಿಟ್ಠಲ'

ಎಂದು ಮುಂತಾಗಿ ಕಲಿಯುಗವನ್ನು ಪ್ರಶಂಸಿಸುವುದು ಮತ್ತು

ಭಾಗವತದಲ್ಲಿ,

ಕಲೇರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ ।
ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂ ವ್ರಜೇತ್ ॥

ಎಂದು ಕಲಿಯುಗದ 'ಮಹಾಗುಣ'ನ್ನು ಹೊಗಳುವುದು ಅಶಕ್ತರಿಗೂ ಕಲಿಯುಗದಲ್ಲಿ ಸುಲಭವಾದ ಧರ್ಮ ಒಂದಿದೆ ಎನ್ನುವ ಅಭಿಪ್ರಾಯದಿಂದ

೬ ಅಥವಾ ಕೃತಯುಗಾದಿಗಳಲ್ಲಿ ಮಾಡುವ ಕಠಿಣವಾದ ತಪಸ್ಸು ಯಜ್ಞಾದಿ ಕರ್ಮ ಮಾಡಲು ಕಲಿಯುಗದಲ್ಲಿ ಅಶಕ್ತರಾದ ಜನರಿಗಾಗಿ ನಾಮಸಂಕೀರ್ತನವೆಂಬ ಸುಲಭೋ-ಪಾಯ ಉಂಟೆನ್ನಲು ಈ ಪದ್ಯ ಹೊರಟಿದೆ ಜಪತಪ ಮುಂತಾದವುಗಳಿಗೆ ಮೌನ, ಆಸನಾದಿ ನಿಯಮಗಳಿವೆ ಗಾನಕ್ಕೆ ಯಾವ ಆಸನವಾದರೂ ಸರಿಯೆ ಅತ್ಯಂತ ಅಶಕ್ತನು ಮಲಿಗಿಯೆ ಹಾಡಲಿ ಸ್ವಲ್ಪ ಶಕ್ತಿ ಇದ್ದರೆ ಕುಳಿತು ಹಾಡಲಿ ಅಥವಾ ನಿಂತು ಕುಣಿದು ಹಾಡಲು ಶಕ್ತಿ ಇದ್ದರೆ ಕುಣಿದೇ ಹಾಡಬೇಕು ಅದು ಉತ್ತಮಕಲ್ಪ ಹರಿ ಒಲಿಯುತ್ತಾನೆ ಅಂದರೆ ಹೆಚ್ಚು ಒಲಿಯುತ್ತಾನೆ ಎಂದು ಅಭಿಪ್ರಾಯ ಹೇಳಬೇಕು 'ಕುಣಿದು ಹಾಡಿದ ಮಾತ್ರಕ್ಕೇ ಪ್ರತ್ಯಕ್ಷನಾಗುತ್ತಾನೆ' ಎನ್ನುವುದು 'ಆತ್ಮಾ ವಾರೇ ದ್ರಷ್ಟವ್ಯಃ' ಇತ್ಯಾದಿ ಶ್ರುತಿವಿರುದ್ಧ-ವಾಗುವುದು ಶಾಸ್ತ್ರಾಧ್ಯಯನವಿಲ್ಲದೆ ಪ್ರತ್ಯಕ್ಷವಿಲ್ಲ ಎನ್ನುತ್ತವೆ ಆ ಶ್ರುತಿಗಳು

ಅಭಕ್ತೋದಾಹೃತಂ ನೈವ ಫಲದಾತೃ ಭವಿಷ್ಯತಿ
ಭಕ್ತಿ ಇಲ್ಲದೆ ಕುಣಿದು ಹಾಡಿದರೂ ವ್ಯರ್ಥವೆ ಅದರಿಂದ 'ಪರಮಾದರದಿ' ಎಂದಿದೆ ಭಕ್ತಿ ಇದ್ದರೆ ಆಸನದಿಂದಾಗಬೇಕಾದ್ದೇನಿಲ್ಲ ಭಕ್ತಿ ಇಲ್ಲದಿದ್ದರೆ ಆಸನದಿಂದಲೂ ಏನೂ ಉಪಯೋಗವಿಲ್ಲ ಅದರಿಂದ ಪರಮಾದರದಿ ಹಾಡುವವನು ಮಲಗಿದ್ದರೂ ಕುಳಿತರೂ ನಿಂತರೂ ಕುಣಿದರೂ ಹರಿಗೆ ಮೆಚ್ಚಿಗೆಯೆ

೭ ಅಥವಾ ಪಾಡಲು ಎಂದರೆ ಸಂಗೀತದ ಪದಗಳನ್ನು ಹಾಡುವುದೇ ಅಲ್ಲ

ನಾರದಪುರಾಣದಲ್ಲಿ,

ಯಃ ಸ್ವಪಿತ್ವಾ ತು ಶಯನೇ ಹರಿಂ ಸಂಚಿಂತಯೇನ್ನರಃ
'ಮಲಗಿ ಹರಿಸ್ಮರಣೆ ಮಾಡಿದರೆ' ಎಂದಿದೆ ಪದಗಳನ್ನು ಹಾಡುವುದು, ಮಂತ್ರ, ಪಾರಾಯಣ, ಶಾಸ್ತ್ರಾಧ್ಯಯನ ಮುಂತಾದ ನಾನಾಬಗೆಯಿಂದ ಹರಿಸ್ಮರಣೆ ಮಾಡುವುದೆ ಇಲ್ಲಿ ವಿವಕ್ಷಿತ ಅದರಿಂದ 'ಮಲಗಿ' ಎಂದರೆ ಆಸನನಿಯಮವಿಲ್ಲದೆ ಪರಮಾದರದಿಂದ ನಾಮಸ್ಮರಣೆ ಸ್ತೋತ್ರಪಾಠ ಮುಂತಾದ ಸುಲಭ ಉಪಾಸನೆ ಮಾಡಿದರೂ ಹರಿ ಒಲಿದು ಕುಳಿತುಕೊಳ್ಳುತ್ತಾನೆ 'ಕುಳಿತು' ಅಂದರೆ ಪದ್ಮಾಸನ, ಸ್ವಸ್ತಿಕಾಸನ, ವೀರಾಸನ ಮುಂತಾದ ಸುಲಭವಾದ ಆಸನದಲ್ಲಿ ಕುಳಿತು ಸ್ಮರಣೋಪಾಸನೆ ಮಾಡಿದರೆ ನಿಂತುಕೊಳ್ಳುತ್ತಾನೆ 'ನಿಂತರೆ' ಅಂದರೆ ಏಕಪಾದಾಸನಾದಿ ಕ್ಲಿಷ್ಟಆಸನದಲ್ಲಿದ್ದು ಧ್ಯಾನ ಮಾಡಿದರೆ ಹರಿ ಕುಣಿಯುತ್ತಾನೆ ಆದರೆ ಕಠಿನ ಯೋಗಾಭ್ಯಾಸಪ್ರಾಣಾಯಾಮಗಳಿಂದ ಅವಸರವಾಗಿ ಮೋಕ್ಷ ಪಡೆಯಲು ಯತ್ನಿಸದೇ ದೀರ್ಘಕಾಲ ಸಜ್ಜನಸಂಗ ಮಾಡುತ್ತ ಸದಾ ಭಕ್ತಿಯಿಂದ ಮೈಮರೆತು ಕುಣಿದು ಹಾಡುತ್ತ ಉಪಾಸನ ಮಾಡಿದರೆ ಹರಿ ಇನ್ನೂ ಹೆಚ್ಚು ಒಲಿಯುತ್ತಾನೆ

೮ ಅಥವಾ 'ಮಲಗಿ' ಲೌಕಿಕ ವಿಚಾರಗಳಲ್ಲಿ ಮನಸ್ಸಿಡದೆ ವಿರಕ್ತಿಯಿಂದ ನಿದ್ದೆ ಮಾಡುವನಂತಿದ್ದು ಪರಮಾದರದಿ ಹಾಡಿದರೆ ಹರಿ ಕುಳಿತು ಕೇಳುತ್ತಾನೆ

ಭಗವದ್ಗೀತೆಯಲ್ಲಿ,

ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ
ಎಂದು ವಿಷಯವೈರಾಗ್ಯವನ್ನು ಯೋಗಿಗೆ ರಾತ್ರಿ, ನಿದ್ದೆ ಎಂದು ಆಲಂಕಾರಿಕವಾಗಿ ವರ್ಣಿಸಲಾಗಿದೆ

ಇಲ್ಲಿ ಹಾಡುವುದೆಂದರೆ ದೇವರನಾಮ ಪದಗಳನ್ನು ಹಾಡುವುದಲ್ಲ ಶಾಸ್ತ್ರಪ್ರವಚನ ವಿವಕ್ಷಿತ ವಾದಿರಾಜರು ರುಕ್ಮಿಣೀಶವಿಜಯದಲ್ಲಿಶ್ರೀಮದಾಚಾರ್ಯರನ್ನು 'ಸಮಸ್ತಾಗಮ ಗಾನಕರ್ತಾ' ಎಂದು ಹೊಗಳಿದ್ದಾರೆ ಸಮಸ್ತ ಆಗಮಗಳನ್ನು ಗಾನಮಾಡುವುದೆಂದರೆ ಪ್ರವಚನವೆ ಹೊರತು ಹಾಡುವುದಲ್ಲ ಇಂಥ ಜ್ಞಾನಕಾರ್ಯವಾದ ಪ್ರವಚನವನ್ನು 'ಮಲಗಿ'

ವೈರಾಗ್ಯದಿಂದ, ಪರಮಾದರದಿ ಭಕ್ತಿಯಿಂದ ಮಾಡುವಾಗ ಹರಿ ಬಳಿಯಲ್ಲಿಯೆ ಕುಳಿತು ಕೇಳುತ್ತಾನೆ ಆದರಿಂದ ಸುಮಧ್ವವಿಜಯದಲ್ಲಿ ಪ್ರವಚನ ಮೋಕ್ಷಸಾಧನ ಎಂದಿದೆ

ಬುಧೋऽಭಿಧಾನಂ ಶ್ರವಣಂ ಬುಧೇತರೋ
ಧ್ರುವಂ ವಿದಧ್ಯಾತ್ ವಿಮುಮುಕ್ಷುರಾತ್ಮನಃ ।

'ಮುಮುಕ್ಷುವು ವಿದ್ವಾಂಸನಾದರೆ ಪ್ರವಚನವನ್ನು ಅವಶ್ಯ ಮಾಡಬೇಕು'. ಅಥವಾ 'ಮಲಗಿ' ಎಂದರೆ ಮಲಗಿಕೊಂಡು ಅಲ್ಲ, ಮಲಗಿದ ಬಳಿಕ, ಎದ್ದು ಎಂದರ್ಥ

ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ ।
ಅತ್ಯಶಕ್ಯೇ ತು ನಿದ್ರಾದೌ ಪುನರೇವ ಸಮಾಚರೇತ್ ॥

'ಶ್ರವಣ, ಪ್ರವಚನ ಮುಂತಾದುವನ್ನು ಮಾಡದೆ ಒಂದು ಕ್ಷಣವನ್ನೂ ವ್ಯರ್ಥಗೊಳಿಸ-ಬಾರದು ಅತ್ಯಂತ ಅಶಕ್ಯವೆನಿಸಿದಾಗ ಸ್ವಲ್ಪ ಮಲಗಿ ತಕ್ಷಣವೆ ಎದ್ದು ತಿರುಗಿ ಶ್ರವಣಾದಿ-ಗಳನ್ನು ನಡೆಸಬೇಕು' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದೆ 'ಕುಳಿತು' ಹಾಡುವುದೆಂದರೆ ವಾದಕ್ಕೆ ಕುಳಿತು ಪ್ರತಿವಾದಿಗಳೊಡನೆ ವಾದಿಸುವುದು

ಕೌಮೋದಕೀ ವಾದನಿವಿಷ್ಟಮಧ್ವವಾಚಃ ಸಮಾ

ಶ್ರೀಮದಾಚಾರ್ಯರು ವಾದಕ್ಕೆ ಕುಳಿತರೆಂದರೆ ಅವರ ಪ್ರತಿಯೊಂದು ಮಾತೂ ಗದಾಪ್ರಹಾರ, ಇದಿರಾಳಿಗೆ ಎಂದಿದ್ದಾರೆ ವಾದಿರಾಜರು ಅಥವಾ ಯೋಗಾಸನದಲ್ಲಿ ಕುಳಿತು ಹಾಡುವುದೆಂದರೆ ಜಪ, ಪಾರಾಯಣ, ಪೂಜೆ, ಧ್ಯಾನ ಮುಂತಾದುದು ಹೀಗೆ 'ಸ್ವಕರ್ಮ ವಿಪ್ರಸ್ಯ ಜಪೋಪದೇಶೌ' ಎಂಬಂತೆ ಜಪ, ಉಪದೇಶಗಳನ್ನು, ಧ್ಯಾನಪ್ರವಚನಗಳನ್ನು ಮಾಡುತ್ತ ಸ್ವಕರ್ಮನಿಷ್ಠನಾದ ಬ್ರಾಹ್ಮಣನ ಬಳಿ ಸದಾ ರಕ್ಷಕನಾಗಿ ಹರಿ ನಿಂತುಕೊಳ್ಳುತ್ತಾನೆ ಜಪಪೂಜೆಗಳ ಜೊತೆಗೆ ಅವುಗಳ ಕೊನೆಯಲ್ಲಿ ನಿಂತು ಉಪಸ್ಥಾನಸ್ತೋತ್ರ ಮಾಡಬೇಕೆಂದು ವಿಧಿ ಇದೆ ಹಾಗೆ ನಿಂತು ಹಾಡಿದರೆ ಸ್ತೋತ್ರಪ್ರಿಯನಾದ ಹರಿ ಕುಣಿಯುತ್ತಾನೆ ಇದೆಲ್ಲ ವಿಹಿತನಿತ್ಯಾಹ್ನಿಕವಾಯಿತು ಜೊತೆಗೆ, ಎಲ್ಲ ವೈಷ್ಣವರೂ ಮಾಡಬೇಕಾದ ಕರ್ತವ್ಯ ಹಾಡುತ್ತ ನರ್ತನ ಮಾಡುವುದು ಶಾರೀರಿಕವಾಗಿ ಇಲ್ಲವೆ ಮಾನಸಿಕವಾಗಿ ಇದಕ್ಕೆ ಹರಿ ಬಹಳ ಒಲಿಯುತ್ತಾನೆ ನಿತ್ಯ ಕರ್ಮ ಬಿಡಬಾರದು ಬಿಟ್ಟು ಎಷ್ಟು ಕುಣಿದು ಹಾಡಿದರೂ ವ್ಯರ್ಥವೆ

೯ ಅಥವಾ ಈ ಪದ್ಯ ಅಪರೋಕ್ಷಜ್ಞಾನಿಗಳಿಗೆ ಸಂಬಂಧಿಸಿದುದು ಅವರು ಸದಾ ಹರಿಯ ಗುಣಗಾನ ಮಾಡುತ್ತಾರೆ ಆಸನಾದಿ ನಿಯಮವೆ ಇಲ್ಲ ಹರಿ ಒಲಿದು ಪ್ರತ್ಯಕ್ಷ-ನಾಗುತ್ತಾನೆ

ಆಸೀನಃ ಪರ್ಯಟನ್ ಅಶ್ನನ್ ಶಯಾನಃ ಪ್ರಪಿಬನ್ ಬ್ರುವನ್ ।
ನಾನುಸಂದಧ ಏತಾನಿ ಗೋವಿಂದಪರಿರಂಭಿತಃ ॥

ಪ್ರಹ್ಲಾದ ಕುಳಿತಾಗ, ನಡೆವಾಗ, ಉಣುವಾಗ, ಮಲಗುವಾಗ, ಕುಡಿವಾಗ, ನುಡಿವಾಗ ಎಲ್ಲ ಅವಸ್ಥೆಗಳಲ್ಲಿಯೂ ಮೈಮರೆತು ಹರಿಸ್ಮರಣೆ ಮಾಡುತ್ತಿದ್ದನಂತೆ ಹೀಗೆ ನಾರದ-ಪ್ರಹ್ಲಾದಾದಿಗಳು ಮಲಗಿ ಹಾಡಿದರೆ ಕುಳಿತು, ಕುಳಿತು ಹಾಡಿದರೆ ನಿಂತು, ನಿಂತರೆ ನಲಿದು, ನಲಿದರೆ ನಿಮಗೆ ಒಲಿವೆನೆನ್ನುತ್ತಾನೆ ಹರಿ

ಆದರಿಂದಲೆ ಭೀಷ್ಮ ಶರಮಂಚದಲ್ಲಿ ಮಲಗಿಯೆ ಹಾಡಿದ ಕೃಷ್ಣ ಕುಳಿತು ಕೇಳಿದ ಪುಂಡಲೀಕ ಮಾತಾಪಿತರ ಶುಶ್ರೂಷೆ ಮಾಡುತ್ತ ಕುಳಿತು ಹಾಡಿದರೆ ವಿಟ್ಠಲ ನಿಂತು ಕೇಳಿದ ಪ್ರಹ್ಲಾದ ನಿಂತು ಹಾಡಿದರೆ ನರಸಿಂಹ ಕಂಬದಿಂದೊಡೆದು ಕುಣಿಯುತ್ತಾ ಬಂದ ನಾರದ ಕುಣಿದು ಹಾಡಿದರೆ ಹರಿ 'ಒಲಿವ ನಿಮಗೆಂ'ದ 'ಜ್ಞಾನೀ ಪ್ರಿಯತಮಃ' ಎಂಬಂತೆ ಜ್ಞಾನಿ ಹೇಗೆ ಇದ್ದರೂ ಸರಿಯೆ

೧೦ ಅಥವಾ ಅಜ್ಞಾನಿಗೆ ಹರಿ ಬಲು ದೂರ ದೂರದ ಕ್ಷೀರಸಾಗರದಲ್ಲಿ ಮಲಗಿರು-ತ್ತಾನೆ ಕರೆದರೆ ಓಗೊಡುವುದೂ ಇಲ್ಲ ಪರಮಾದರದಿಂದ ಕನ್ನಡಪದ ಹಾಡಿದರೆ ಕುಳಿತು-ಕೊಳ್ಳುತ್ತಾನೆ ಹೀಗೆ ಕುಳಿತು, ಭಕ್ತನಿನ್ನೂ ಹಾಡಿದರೆ ನಿಲ್ಲುತ್ತಾನೆ ನಿಂತರೆ, ಭಕ್ತನಿನ್ನೂ ಹಾಡಿದಾಗ ಕುಣಿಯುತ್ತಾನೆ ಕುಣಿದರೆ, ಇನ್ನೂ ಹೆಚ್ಚಿನ ಆದರದಿಂದ ಭಕ್ತ ಹಾಡಿದಾಗ 'ಒಲಿವೆ ನಿಮಗೆ' ಎನ್ನುತ್ತಾನೆ, ಹೊರತು ಪ್ರತ್ಯಕ್ಷನಾಗಲಾರ ಅದಕ್ಕೆ ಬಹುಜನ್ಮದ ಶಾಸ್ತ್ರ-ಶ್ರವಣದ ಸಾಧನೆ ಬೇಕು ಹಾಗಾದರೆ 'ಸುಲಭನೋ ಹರಿ!' ಎಂಬುದೇಕೆ? ಎಂದರೆ ಅದು ಉಚ್ಚ ಧ್ವನಿಯ ಘೋಷಣೆ ಏನಲ್ಲ ಕೆಳಧ್ವನಿಯಲ್ಲಿ ಆಕ್ಷೇಪಿಸುತ್ತಿದ್ದಾರೆ ದಾಸರಾ-ಯರು 'ಸುಲಭನೋ ಹರಿ?' ಎಂದು ಇದಕ್ಕೆ ಕಾರಣ ಅಲ್ಲಿಯೆ ಇದೆ 'ಪಾಮರರು ರಮಾಧವನನೊಲಿಸದೆ ಬಳಲುವರು' ಹರಿ ರಮಾರಮಣ ಪಾಮರರಿಗೆ ರಮೆ ಬೇಕು ರಮಾರಮಣ ಬೇಡ ಆದರಿಂದ ಆತ ದೂರವಿರುತ್ತಾನೆ ವಸ್ತುತಃ ಆತ ದೂರದಲ್ಲಿಲ್ಲ ಬಿಂಬರೂಪನಾಗಿ ಒಳಗೇ ಇದ್ದಾನೆ ತನ್ನವರನರಗಳಿಗೆ ಬಿಟ್ಟು ಅಗಲದಂತಿದ್ದಾನೆ ಒಮ್ಮೆ ವಿಟ್ಠಲಾ! ಎಂದು ಕರೆದರೂ ಒಳಗೇ ನಿಂತು ಓಗೊಡುವ ಹರಿ ಸುಲಭನಲ್ಲದೆ ಇನ್ನೇನು? ಅರಿಯದ ಪಾಮರರು ಅವನನ್ನು ದುರ್ಲಭನೆಂದುಕೊಳ್ಳುತ್ತಾರೆ ಆದರೂ ಆತ ಕರು-ಣಾಳು ಅಜ್ಞಾನಿ ಸಜ್ಜನರುಗಳನ್ನು ತನ್ನವರೆಂದು ಬಗೆದು ಅವರ ಬಳಿ ಇದ್ದು ಸಾಧನೆ ಮಾಡಿಸಿ ಸಾಧನೆಗಿಂತ ಹೆಚ್ಚು ಅನುಗ್ರಹಮಾಡುತ್ತಾನೆ ಮಲಗಿ ಹಾಡಿದರೆ ಕುಳಿತು ಕೇಳು-ತ್ತಾನೆ ಅನುಗ್ರಹ ಮಾಡುವಲ್ಲಿ ಬೇಡುವವನಿಗಿಂತ ಒಂದು ಹೆಜ್ಜೆ ಮುಂದೇ ಇರುತ್ತಾನೆ

**ಮನದೊಳಗೆ ತಾನಿಪ್ಪ ಮನವೆಂ-**
**ದೆನಿಸಿಕೊಂಬನು ಮನದ ವೃತ್ತಿಗ-**
**ಳನುಸರಿಸಿ ಭೋಗಗಳನೀವನು ತ್ರಿವಿಧ ಚೇತನಕೆ ।**
**ಮನವನಿತ್ತರೆ ತನ್ನನೀವನು**

**ತನುವ ದಂಡಿಸಿ ದಿನದಿನದಿ ಸಾ-**
**ಧನವ ಮಾಳ್ಪರಿಗಿತ್ತಪನು ಸ್ವರ್ಗಾದಿ ಲೋಕಗಳ ॥ ೬ ॥**

ಶ್ರೀಹರಿ ಜೀವರ ಮನದೊಳಗೆ ತಾನಿರುತ್ತಾನೆ. ಮನವೆಂದೆನಿಸಿಕೊಳ್ಳುತ್ತಾನೆ ಮನೋವೃತ್ತಿಗಳನ್ನನುಸರಿಸಿಯೆ ತ್ರಿವಿಧ ಚೇತನರಿಗೂ ಸುಖದುಃಖಭೋಗಗಳನ್ನು ನೀಡುತ್ತಾನೆ ಅವನಿಗೆ ಮನವನ್ನಿತ್ತರೆ ಅವನು ತನ್ನನ್ನೇ ನೀಡುತ್ತಾನೆ ತನುವನ್ನು ದಂಡಿಸಿ ದಿನದಿನದಲ್ಲಿ ಯಜ್ಞಾದಿಸಾಧನವನ್ನು ಮಾಡುವವರಿಗೆ ಸ್ವರ್ಗಾದಿ ಲೋಕಗಳನ್ನು ಕೊಡುತ್ತಾನೆ

ಜಗತ್ಪಿತನಿಗೆ ಮಕ್ಕಳಲ್ಲಿ ಏಕೆ ತಾರತಮ್ಯ?

ಭಾಗವತ ಸಪ್ತಮಸ್ಕಂಧದಲ್ಲಿ ಪರೀಕ್ಷಿತರ ಪ್ರಶ್ನೆ—ಶ್ರೀಹರಿ ದೇವತೆಗಳ ಪಕ್ಷ ಹಿಡಿದು ಅಸುರರನ್ನು ಏಕೆ ನಾಶಮಾಡುತ್ತಾನೆ? ಎಲ್ಲರಿಗೂ ಅವನು ತಂದೆ! ಮಕ್ಕಳಲ್ಲಿ ಅವನಿಗೆ ಏಕೆ ವೈಷಮ್ಯ? ಲೋಕದಲ್ಲಿ ತಂದೆ ಮಕ್ಕಳಿಂದ ಪ್ರಯೋಜನ ಪಡೆಯುತ್ತಾನೆ ಅದಕ್ಕ-ನುಗುಣವಾಗಿ ಕೆಲವೊಮ್ಮೆ ವೈಷಮ್ಯಕ್ಕೂ ಅವಕಾಶವಿರಬಹುದು ಶ್ರೀಹರಿ ಪೂರ್ಣಾನಂದ ಅವನಿಗೆ ಯಾರಿಂದಲೂ ಏನೂ ಆಗಬೇಕಾಗಿಲ್ಲ

ತನಗೆ ಪ್ರಯೋಜನವಿಲ್ಲದಿದ್ದರೂ ಜೀವರ ಕರ್ಮಾನುಗುಣ ಫಲ ಕೊಡುತ್ತಾನೆ ಫಲದಲ್ಲಿ ವ್ಯತ್ಯಾಸ ಮಾಡಿದರೂ ಪಕ್ಷಪಾತ ಮಾಡುವುದಿಲ್ಲ ಎನ್ನುವುದಾದರೆ ಕರ್ಮವೂ ಅವನ ಅಧೀನ ಎಲ್ಲರಿಂದಲೂ ಸತ್ಕರ್ಮ ಮಾಡಿಸಿ ಸುಖವನ್ನೇ ನೀಡಲಿ ಕರ್ಮಪ್ರವಾಹ ಅನಾದಿಯಾದ್ದರಿಂದ ಹಿಂದಿನ ಕರ್ಮಾನುಸಾರ ಮುಂದಿನ ಕರ್ಮ ಮಾಡಿಸುತ್ತಾನೆ ಎನ್ನುವುದಾದರೆ ಕೆಲವರು ಅನಾದಿಯಿಂದ ದುಷ್ಕರ್ಮ ಮಾಡಲು ಏನು ಕಾರಣ? ಅನಾದಿಯಾದ್ದರಿಂದಲೇ ಕಾರಣವಿಲ್ಲವೆನ್ನುವುದಾದರೆ ಮಾಡುವುದಾದರೂ ಏನು? ಪೂರ್ವಕರ್ಮಾನುಸಾರ ಎಲ್ಲರೂ ಕರ್ಮ ಮಾಡುತ್ತಾರೆ ತಕ್ಕ ಫಲ ಉಣ್ಣುತ್ತಾರೆ ಪಾಲಿಗೆ ಬಂದದ್ದು ಪಂಚಾಮೃತವೆನ್ನುತ್ತಾರೆ ಹರಿಯ ಕರುಣೆ ಎಲ್ಲಿದೆ?

***ಮನದೊಳಗೆ ತಾನಿಪ್ಪ***

ಮೇಲಿನ ಪ್ರಶ್ನೆಗಳಿಗೆ ಉತ್ತರವಿದು ಹಿಂದಿನ ಕರ್ಮದಿಂದ ಮುಂದಿನ ಕರ್ಮ ಹುಟ್ಟುವಲ್ಲಿ ಒಂದು ಕ್ರಮವಿದೆ ಮೊದಲಿಗೆ ಹಿಂದಿನ ಕರ್ಮಾನುಗುಣವಾಗಿ ಮನಸ್ಸಿನಲ್ಲಿ ಒಂದು ಕಾರ್ಯದ ಬಗ್ಗೆ ಆಲೋಚನೆ ನಡೆಯುತ್ತದೆ ಅದರ ಬೆನ್ನಲ್ಲೇ ಆ ಕಾರ್ಯ ಮಾಡುವ ಬಯಕೆ, ಯತ್ನಗಳು ಮೂಡುತ್ತವೆ ಆದರಿಂದ ಕರ್ಮ ಉಂಟಾಗುತ್ತದೆ ಇಲ್ಲಿ ಒಂದು ಸಮಸ್ಯೆ ಮನಸ್ಸು ಒಂದು ಜಡ ಪದಾರ್ಥ ಅದರಲ್ಲಿ ಆಲೋಚನೆ ಹೇಗೆ ಹುಟ್ಟು-ತ್ತದೆ? ಅದಕ್ಕೆ ಒಬ್ಬ ಚೇತನ ಬೇಕು ಚೇತನರಾದ ನಾವೇ ನಮ್ಮ ಮನಸ್ಸಿನಲ್ಲಿ ಆಲೋಚನೆ ಉಂಟು ಮಾಡುತ್ತೇವೆಯೇ? ಹಾಗಿದ್ದರೆ ನಮ್ಮ ಆಲೋಚನೆ ಕೆಲವೊಮ್ಮೆ ಏಕೆ ತಪ್ಪಾಗುತ್ತದೆ?

ಅದರಿಂದ ಹರಿ ನಮ್ಮ ಮನಸ್ಸಿನಲ್ಲಿ ಎಲ್ಲ ಚಟುವಟಿಕೆಗಳನ್ನೂ ಉಂಟುಮಾಡುತ್ತಾನೆ ಅವನೆ ಮನಸ್ಸನ್ನು ಆಳುತ್ತಾನೆ ಎನ್ನಬೇಕು ಅವನಿಲ್ಲದಿರುತ್ತಿದ್ದರೆ ನಮ್ಮ ಮನಸ್ಸಿನಲ್ಲಿ ಯಾವ ಆಲೋಚನೆಯೂ ಹುಟ್ಟುತ್ತಿರಲಿಲ್ಲ ಬಯಕೆ ಮೂಡುತ್ತಿದ್ದಿಲ್ಲ ಅದು ಕಲ್ಲಿನಂತೆ ನಿರುಪ-ಯುಕ್ತವಾಗಿ ಬಿದ್ದಿರುತ್ತಿತ್ತು ಅವನಿರುವುದರಿಂದಲೇ,

ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ

ಎಂಬಂತೆ ಬಂಧಮೋಕ್ಷಸಾಧನವಾಗಿ ಮನಸ್ಸೇ ಮನುಷ್ಯನನ್ನು ಆಟವಾಡಿಸುತ್ತದೆ ಅದನ್ನು ಹಾಗೆ ಬಿಟ್ಟರೆ ಬಂಧಕಾರಣವಾಗುತ್ತದೆ, ನಿಗ್ರಹಿಸಿ ಹರಿಯಲ್ಲಿಟ್ಟರೆ ಮೋಕ್ಷಸಾಧನವಾಗು-ತ್ತದೆ ಅದಕ್ಕೆ ಅಂಥ ಶಕ್ತಿ ವ್ಯಕ್ತವಾದುದು ಹರಿಯ ಸನ್ನಿಧಾನದಿಂದ ಎಲ್ಲ ಇಂದ್ರಿಯಗಳೊ-ಳಗೂ ಹೀಗೆ ಶಕ್ತಿಪ್ರೇರಕನಾಗಿ ಹರಿ ಇರುತ್ತಾನೆ

ತಲವಕಾರೋಪನಿಷತ್ತು ಹೇಳುತ್ತದೆ

ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್

'ಕಿವಿಗೆ ಕೇಳುವ ಶಕ್ತಿ, ಮನಸ್ಸಿಗೆ ಆಲೋಚನೆ ಶಕ್ತಿ ಮುಂತಾದುದು ಹರಿಯಿಂದಲೇ ಪ್ರೇರಿತವಾಗುತ್ತದೆ' ಪೂರ್ಣಾನಂದನಾದ ಆತ ತನಗಾಗಿ ಏನೂ ಮಾಡಬೇಕಾಗಿಲ್ಲ ಜೀವರ ಮೇಲಿನ ಕರುಣೆಯಿಂದ ಹೀಗೆ ಮಾಡುತ್ತಾನೆ

**ಮನವೆಂದೆನಿಸಿಕೊಂಬನು**

ಮನಸ್ಸು ಮನಸ್ಸೆನಿಸಬೇಕಾದರೆ ಆಲೋಚನೆ ಮುಂತಾದ ಚಟುವಟಿಕೆ ತೋರಬೇಕಾ-ದರೆ ಅದರೊಳಗೆ ಹರಿ ಆಯಾ ಚಟುವಟಿಕೆಗಳನ್ನು ಮಾಡಿ ತಾನೂ ಮನಸ್ಸೆನಿಸಿಕೊಳ್ಳ-ಬೇಕು ವಾಹನ ಚಲಿಸಲು ಒಳಗೆ ಚಾಲಕನಿರಬೇಕು ಚಾಲಕನ ದೃಷ್ಟಾಂತವೂ ಸಾಲದು ಹರಿ ಪ್ರತಿಯೊಂದು ವಸ್ತುವಿನಲ್ಲಿ ಅದೇ ಆಕಾರದಿಂದ ಪ್ರೇರಕನಾಗಿ ಒಳಗಿದ್ದು ಅದೇ ಹೆಸರಿನಿಂದ ಕರೆಸಿಕೊಳ್ಳುತ್ತಾನೆ, ಸರ್ವಶಬ್ದವಾಚ್ಯನಾಗಿದ್ದಾನೆ

**ಮನದ ವೃತ್ತಿಗಳು**

ಅಣುವಾದ ಮನಸ್ಸಿನಲ್ಲಿ ಲೆಕ್ಕವಿಲ್ಲದಷ್ಟು ಚಟುವಟಿಕೆಗಳಿವೆ ಸಮುದ್ರದಲ್ಲಿ ಲೆಕ್ಕವಿಲ್ಲ-ದಷ್ಟು ಅಲೆಗಳು ಏಳುವಂತೆ ಮನಸ್ಸಿನಲ್ಲೂ ನಾನಾಬಗೆಯ ಲಹರಿಗಳು ಏಳುತ್ತವೆ ಅವು ಬ್ರಹ್ಮಸೂತ್ರದಲ್ಲಿ ಹೇಳಿದಂತೆ ಐದು ಬಗೆ–ಮನಸ್, ಬುದ್ಧಿ, ಅಹಂಕಾರ, ಚಿತ್ತ, ಚೇತನಾ ಎಂದು ಮನಸ್ಸು ಒಂದು ಕಾರ್ಯವನ್ನು ಇಷ್ಟಸಾಧನವೇ ಅಲ್ಲವೇ, ಮಾಡಬೇಕೆ ಬೇಡವೇ ಎಂದು ಮುಂತಾಗಿ ಆಲೋಚಿಸುತ್ತದೆ ಬುದ್ಧಿ ನಿರ್ಣಯ ಮಾಡುತ್ತದೆ ಅಹಂಕಾರ ನಾನು ಕಾರ್ಯ ಸಾಧಿಸುತ್ತೇನೆ, ನಾನು ಫಲ ಉಣ್ಣುತ್ತೇನೆ ಎಂದು ಅಭಿಮಾನ ತೋರುತ್ತದೆ ಚಿತ್ತ ಹಿಂದಿನ ಅನುಭವಗಳನ್ನು ನೆನೆಪಿಸಿಕೊಳ್ಳುತ್ತದೆ ಚೇತನ ಬಹು ವಿಷಯಗಳನ್ನು ಸ್ಮರಣ ಮಾಡುತ್ತದೆ ಅಥವಾ ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದಂತೆ,

ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ
ಧೃತಿರಧೃತಿರ್ಹ್ರೀರ್ಧೀರ್ಭೀರಿತ್ಯೇತತ್ ಸರ್ವಂ ಮನ ಏವ ॥

ಇಚ್ಛೆ, ಸಂಕಲ್ಪ, ವಿಚಾರ, ಶ್ರದ್ಧೆ ಅಶ್ರದ್ಧೆ ಧೈರ್ಯ, ಅಧೈರ್ಯ, ಲಜ್ಜೆ ಬುದ್ಧಿ ಭಯ–ಈ ಹತ್ತು ಮನಸ್ಸಿನ ಮುಖ್ಯ ಚಟುವಟಿಕೆಗಳು

ಅಥವಾ 'ನಾನು ಮಾಡುತ್ತೇನೆ' ಎನ್ನುವ ಕರ್ತೃತ್ವ, ಅಂದರೆ ಜ್ಞಾನ, ಇಚ್ಛಾ, ಪ್ರಯತ್ನ ಈ ಕಾರ್ಯ ನನಗೆ ಇಷ್ಟಸಾಧನವೆಂಬ ಜ್ಞಾನ, ಈ ಕಾರ್ಯ ಮಾಡಬೇಕೆನ್ನುವ ಇಚ್ಛೆ, ಅದಕ್ಕೆ ನಡೆಸುವ ಯತ್ನ–ಇವು ಮನಸ್ಸಿನ ವೃತ್ತಿಗಳು

*ಮನದ ವೃತ್ತಿಗಳನುಸರಿಸಿ ಭೋಗಗಳು*

ಕಾರ್ಯದ ಬಗ್ಗೆ ಆಲೋಚನೆ, ಕಾರ್ಯ ಮಾಡುವ ಬಯಕೆ, ಯತ್ನ–ಇವು ಸರಿಯಾಗಿದ್ದರೆ ಕಾರ್ಯಸಿದ್ಧಿ ಅದರಿಂದ ಸುಖಭೋಗ ತಪ್ಪಾಗಿದ್ದರೆ ಕಾರ್ಯನಾಶ ಅದರಿಂದ ದುಃಖಾನುಭವ ಕಾರ್ಯವನ್ನು ನಾನು ಸ್ವತಂತ್ರವಾಗಿ ಮಾಡುತ್ತಿಲ್ಲ ಹರಿಯೆ ಮಾಡುತ್ತಾನೆ ನನ್ನಿಂದಲೂ ಮಾಡಿಸುತ್ತಾನೆ ಅದೂ ಅವನ ಆರಾಧನೆ ನನಗೆ ಈ ಕಾರ್ಯದ ಫಲ ಬೇಡ ಅವನೊಲಿದರೆ ಸಾಕೆನ್ನುವ ಆಲೋಚನೆ ನೀಡುವವನು ಹರಿಯೆ ಹೀಗೆ ಮನದ ವೃತ್ತಿಗಳನುಸರಿಸಿ ಉತ್ತಮರಿಗೆ ಸುಖಭೋಗ, ಮಧ್ಯಮರಿಗೆ ಸುಖದುಃಖಮಿಶ್ರಭೋಗ, ಅಧಮರಿಗೆ ದುಃಖಭೋಗಗಳನ್ನು ಕೊಡುವವನು ಹರಿಯೆ

*ಮನದ*

ಈ ಪದ್ಯದಲ್ಲಿ ಮನದೊಳಗಿಪ್ಪನು, ಮನವೆನಿಸಿಕೊಂಬನು, ಭೋಗಗಳೀವನು ಯಾರು? ಎನ್ನುವ ಕರ್ತೃಪದವಿಲ್ಲ 'ಹರಿ' ಎಂದಿಟ್ಟುಕೊಳ್ಳಬೇಕು ಅಥವಾ 'ಮನದ' ಎಂಬುದೇ ಕರ್ತೃಪದ ಮನಸ್ಸನ್ನು ಮನಸ್ಸಾಗಿ ಮಾಡಿ ಜೀವರಿಗೆ ಕೊಡುವವನು ಎಂದರ್ಥ ಆದರೆ 'ಮನ ದದಾತಿ' ಎಂದು ಬಿಡಿಸಿದರೆ 'ಮನೋದ' ಎಂದಾದೀತು ಅದಕ್ಕೆ 'ಮನಂ ದದಾತಿ' ಎಂದು ಬಿಡಿಸಬೇಕು 'ಸರ್ವೇ ಸಾಂತಾ ಅದಂತಾಶ್ಚ' ಎಂಬ ನಿಯಮದಂತೆ 'ಮನಸ್ ಎಂಬ ಸಕಾರಾಂತಶಬ್ದ 'ಮನ' ಎಂದು ಅಕಾರಾಂತವೂ ಆಗಬಲ್ಲುದು ಉಪನಿಷತ್ತಿನಲ್ಲಿ 'ಮನೋಽನ್ನನಾಯ ನಮಃ' ಎಂದು ಮುಂತಾದ ಪ್ರಯೋಗಗಳನ್ನೂ,

ಅಭ್ರಶ್ಯಾಮಂ ಪೀತಕೌಶೇಯವಾಸಂ
ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ
ಸಹಸ್ರಪಾದಾಕ್ಷಿಶಿರೋರುಬಾಹವೇ

ಎಂದು ಮುಂತಾದೆಡೆ 'ವಾಸ' 'ಶಿರ' ಮುಂತಾದ ಅಕಾರಾಂತ ಪ್ರಯೋಗಗಳನ್ನು ಹೀಗೇ ಕೂಡಿಸಬೇಕು

**ವೃತ್ತಿಗಳನುಸರಿಸಿ ಭೋಗಗಳು**

ಈಗ ವೃತ್ತಿಗಳೆಂದರೆ ಬ್ರಾಹ್ಮಣವೃತ್ತಿ ಕ್ಷಾತ್ರವೃತ್ತಿ ಮುಂತಾದವು ಇವುಗಳನ್ನು ಅನು-ಸರಿಸಿಯೇ ಹರಿ ಭೋಗಗಳನ್ನು ನೀಡುತ್ತಾನೆ ನಮಗೆ ಬೇಕಾದ ವೃತ್ತಿಯನ್ನು ನಾವು ಆರಿಸಿಕೊಳ್ಳಲಾಗದು ನಮಗೆ ಅದು ವಿಹಿತವಾಗಿರಬೇಕು 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' ತನಗೆ ವಿಹಿತವಾದ ವರ್ಣಾಶ್ರಮಧರ್ಮವನ್ನೇ ಆಚರಿಸ-ಬೇಕು ಅದಕ್ಕೆ ಪ್ರತಿಫಲವಾಗಿ ಸುಖಭೋಗ ನೀಡುತ್ತಾನೆ ಹರಿ 'ಮನದ'ನಾಗಿ ವಿಚಾರಶಕ್ತಿ ನೀಡುತ್ತಾನೆ ಆತ ವಿಚಾರಮಾಡಿ ವಿಹಿತವಾದ ವೃತ್ತಿಯನ್ನೇ ನಾವು ಆರಿಸಿಕೊಳ್ಳಬೇಕು ವಿಹಿತವಾದ ವೃತ್ತಿಯಿಂದಲೆ ಹರಿಯನ್ನು ಆರಾಧಿಸಬೇಕು ಅವಿಹಿತವಾದ ವೃತ್ತಿಯನ್ನು ಆತನೊಲ್ಲ ಅದರಿಂದ ದುಃಖಭೋಗವನ್ನೇ ನೀಡುತ್ತಾನೆ

**ಮನವನಿತ್ತರೆ ತನ್ನನೀವನು**

ಆಥರ್ವಣೋಪನಿಷತ್ತು ಹೇಳುತ್ತದೆ—

ಪ್ರಣವೋ ಧನುಃ । ಶರೋ ಹ್ಯಾತ್ಮಾ । ಬ್ರಹ್ಮ ತಲ್ಲಕ್ಷ್ಯಮುಚ್ಯತೇ

ವೇದಾದಿಸಚ್ಛಾಸ್ತ್ರಾಧ್ಯಯನ ಮಾಡಿ ಅದರಲ್ಲಿ ಹೇಳಿದಂತೆ ಹರಿಯನ್ನು ಧ್ಯಾನಿಸಬೇಕು ಅಂದರೆ, ಶಾಸ್ತ್ರವೆಂಬ ಬಿಲ್ಲಿಗೆ ಮನಸ್ಸೆಂಬ ಬಾಣ ಹೂಡಿ ಹರಿಯ ಕಡೆಗೆ ಗುರಿ ಇಟ್ಟು ಎಸೆಯಬೇಕು ಹೀಗೆ ಮನವನ್ನಿತ್ತರೆ ಹರಿ ಅದಕ್ಕೆ ಪ್ರತಿಯಾಗಿ ಕೊಡಲು ಬೇರೇನೂ ಕಾಣದೇ ತನ್ನನ್ನೇ ಕೊಡುತ್ತಾನೆ ಅಷ್ಟು ವಾತ್ಸಲ್ಯ, ಕರುಣೆ! ಅವ್ಯಕ್ತಸ್ವಭಾವದವನಾದ ಹರಿ ಸಾಧಕನಿಗೆ ಒಲಿದಾಗಲೇ ವ್ಯಕ್ತನಾಗುತ್ತಾನೆ, ಮನಸ್ಸು ಅವನಲ್ಲಿ ನಾಟುತ್ತದೆ ಇಲ್ಲದಿದ್ದರೆ ಮನಸ್ಸು ಅವನನ್ನು ಸ್ಪರ್ಶಿಸಲೂ ಶಕ್ತವಲ್ಲ 'ಯತೋ ವಾಚೋ ನಿವರ್ತಂತೇ, ಅಪ್ರಾಪ್ಯ ಮನಸಾ ಸಹ' ಅವನು ಭಕ್ತನಿಗೆ ಒಲಿದು ಅವನ ಮನಸಿಗೆ ಗೋಚರನಾಗುವಲ್ಲಿ ಅಪಾರ ಕರುಣೆಯನ್ನು ಮೆರೆಯುತ್ತಾನೆ

ಅಥವಾ ಮನವನ್ನು ನೀಡುವುದೆಂದರೆ ಹೃದಯಸಿಂಹಾಸನವನ್ನು ಅವನಿಗೆ ಒಪ್ಪಿಸುವು-ದೆಂದರ್ಥ ಮುಖ್ಯಪ್ರಾಣನ ಹೃದಯಸಿಂಹಾಸನ ಯಾವಾಗಲೂ ಹರಿಗೇ ಮೀಸಲು ಭೀಮಸೇನನ ವಚನ—

ಆರಾಧಯಾಮಿ ಮಣಿಸನ್ನಿಭಮಾತ್ಮಬಿಂಬಂ
ಮಾಯಾಪುರೇ ಹೃದಯಪಂಕಜಸನ್ನಿವಿಷ್ಟಮ್ ।
ಶ್ರದ್ಧಾನದೀವಿಮಲಚಿತ್ತಜಲಾಭಿಷೇಕಂ
ಭಾವಾಷ್ಟಪುಷ್ಪವಿಧಿನಾ ಹರಿಮರ್ಚಯಾಮಿ ॥

'ನಾನು ಪದ್ಮರಾಗ ಮಣಿಯಂತೆ ಕೆಂಪಾಗಿ ಹೊಳೆವ ಬಿಂಬರೂಪಿಯಾದ ಹರಿಯನ್ನು ಹೃದಯಸಿಂಹಾಸನದಲ್ಲಿ ಕೂಡಿಸಿ ಶ್ರದ್ಧೆಯೆಂಬ ನದಿಯ ಧ್ಯಾನಜಲದಿಂದ ಅಭಿಷೇಕಗೈದು

ಅಹಿಂಸಾ, ಇಂದ್ರಿಯನಿಗ್ರಹ ಮುಂತಾದ ಎಂಟು ಬಗೆಯ ಭಾವಪುಷ್ಪಗಳಿಂದ ಆರಾಧಿಸುತ್ತೇನೆ'

ಬ್ರಹ್ಮಾಂಡದಾಚೆ ಅವ್ಯಾಕೃತಾಕಾಶದಲ್ಲಿಯೂ ಎಲ್ಲೆಡೆ ವ್ಯಾಪಿಸಿದ ಮಹತೋ ಮಹೀಯನಾದ ಹರಿ ಜೀವರ ಅಣುವಾದ ಹೃದಯಸಿಂಹಾಸನದಲ್ಲಿ ಅಣುವಾಗಿ ಕುಳಿತುಕೊಳ್ಳುತ್ತಾನೆ ಇದು ಕರುಣೆಯಲ್ಲದೆ ಇನ್ನೇನು?

ಅಥವಾ ಭಕ್ತರು ಮಾನಸಪೂಜೆಯಲ್ಲಿ ಹರಿಗೆ ಷೋಡಶೋಪಚಾರಗಳನ್ನು ಅರ್ಘ್ಯ, ಪಾದ್ಯ, ಆಚಮನೀಯ, ಮಧುಪರ್ಕ, ಪುನರಾಚಮನೀಯ, ಸ್ನಾನ, ವಸ್ತ್ರ ಭೂಷಣ, ಯಜ್ಞೋಪವೀತ, ಆಸನ, ಗಂಧ, ಪುಷ್ಪ ಧೂಪ, ದೀಪ, ನೈವೇದ್ಯ (ನಮಸ್ಕಾರ) ಆರು ಅನೂಪಚಾರಗಳನ್ನು(ಮುಖವಾಸ, ತಾಂಬೂಲ, ದರ್ಪಣ, ಛತ್ರ, ಚಾಮರ, ಪಾದುಕೆ) ಸಮರ್ಪಿಸುತ್ತಾರೆ ಆದರೆ ಇವೆಲ್ಲ ಮನಸ್ಸಿನಲ್ಲಿ ಕಲ್ಪಿಸಿಕೊಂಡವುಗಳು ಹೊರತು ಬಾಹ್ಯ ವಸ್ತುಗಳಲ್ಲಿ ಮನಸ್ಸಿನಲ್ಲಿ ಕಲ್ಪಿಸಿಕೊಂಡುದುದು ಎಲ್ಲವೂ ಮನಸ್ಸಿನ ಪರಿಣಾಮ, ರೂಪಾಂತರ ಅಂದರೆ ಈ ಉಪಚಾರ ಅನೂಪಚಾರಗಳ ರೂಪದಿಂದ ಮನಸ್ಸನ್ನೇ ಹರಿಗೆ ನೀಡುತ್ತಾರೆ ಅದನ್ನೂ ಸ್ವೀಕರಿಸಿ ಹರಿ ಒಲಿದು ತನ್ನನ್ನೇ ನೀಡುತ್ತಾನೆ ಕಲ್ಪಿತ ವಸ್ತುಗಳನ್ನು ಈತ ನೀಡುತ್ತಾನೆ ಎಂದು ತಿರಸ್ಕರಿಸುವುದಿಲ್ಲ ಆ ವಸ್ತುಗಳಲ್ಲಿಯೂ ಮಧುರವಾದ ರೂಪರಸಗಂಧಾದಿಗಳನ್ನು ಸವಿದು ಮೆಚ್ಚುತ್ತಾನೆ ಇದು ಕರುಣೆ

ಅಥವಾ ಮನಸ್ಸಿನ ಸಮರ್ಪಣೆ ಎಂದರೆ ಜಡವಾಗಿ ಕಲ್ಲಿನಂತಿದ್ದ ಮನಸ್ಸಿನೊಳಗೆ ಪ್ರವೇಶಿಸಿ ಅದರಲ್ಲಿ ಅದ್ಭುತಶಕ್ತಿಯನ್ನು ಜಾಗೃತಗೊಳಿಸಿ ಪ್ರೇರಿಸಿ ಬಂಧಮೋಕ್ಷಕಾರಣವೆನಿಸುವಂತೆ ಮಾಡಿ ನಮಗೆ ಕೊಟ್ಟವ ಹರಿ ಅವನಿಗೆ ಪ್ರತಿಯಾಗಿ ನಾವೇನು ಕೊಡಬಲ್ಲೆವು? ಕೊನೆಗೆ 'ಕೆರೆಯ ನೀರನು ಕೆರೆಗೆ ಚೆಲ್ಲಿ' ಎಂಬಂತೆ ಅವನು ಕೊಟ್ಟ ಮನಸ್ಸನ್ನೇ ಅವನಿಗೆ ಕೊಡಬೇಕು ಅಂದರೆ ಅದರ ಎಲ್ಲ ಚಟುವಟಿಕೆ ಹರಿಯ ಅಧೀನವೆಂದು ಚಿಂತಿಸಬೇಕು ಅಷ್ಟಕ್ಕೇ ಹರಿ ಒಲಿದು ತನ್ನನ್ನೇ ತಾನು ಕೊಟ್ಟುಬಿಡುತ್ತಾನೆ ಎಂಥ ಕರುಣೆ ಇದು! ನಾನು ಕೊಟ್ಟ ಮನಸ್ಸನ್ನೇ ತಿರುಗಿ ನನಗೇ ಕೊಡುತ್ತಾನೆ ಎಂದು ಕೋಪಿಸುವುದಿಲ್ಲ!

***ತನುವ ದಂಡಿಸಿ ಸಾಧನೆ ಮಾಳ್ಪರಿಗಿತ್ತವನು***

ಹೀಗೆ ಮನವನ್ನು ಹರಿಗೆ ಕೊಡುವ ಸಾತ್ವಿಕ ಜನರೆ ಕೆಲವೊಮ್ಮೆ ಪ್ರಾರಬ್ಧವಶದಿಂದ ವಿಷಯಪದಾರ್ಥಗಳನ್ನು ಬಯಸಿ ಆ ಪದಾರ್ಥಗಳಿಗೇ ಮನಸ್ಸನ್ನು ಕೊಟ್ಟುಬಿಡುತ್ತಾರೆ ಅವುಗಳನ್ನು ಹೊಂದುವುದಕ್ಕಾಗಿ ತನುವನ್ನು ದಂಡಿಸುತ್ತಾರೆ ಕರ್ಮದ ಕೊನೆಯಲ್ಲಿ ಕೃಷ್ಣಾರ್ಪಣ ಎನ್ನುತ್ತಾರೆ ಆದರೂ ಹರಿ ಆ ಕರ್ಮವನ್ನು ಸ್ವೀಕರಿಸುತ್ತಾನೆ ಹರಿ ಕೊಟ್ಟ ಮನವನ್ನು ಹರಿಗೆ ಕೊಡದೆ ಬೇರೆ ವಿಷಯಪದಾರ್ಥಗಳಿಗೆ ಮತ್ತು ಅವನ್ನು ಕೊಡುವ

ಅನ್ಯದೇವತೆಗಳಿಗೆ ಕೊಟ್ಟರೆ 'ಕರ್ಮವನ್ನಾದರೂ ಕೊನೆಯಲ್ಲಿ ಕೊಟ್ಟನಲ್ಲ!' ಎಂದು ಕರುಣೆಯಿಂದ ಸ್ವೀಕರಿಸಿ ಆ ಕರ್ಮದ ಫಲವಾದ ಸ್ವರ್ಗಾದಿಫಲವನ್ನು ಕೊಡುತ್ತಾನೆ

ಮನವನ್ನು ಕೊಡುವವರು ತನುವನ್ನು ದಂಡಿಸಿಯೇ ತೀರುತ್ತಾರೆ ತನುವನ್ನು ದಂಡಿಸುವವರು ಮನವನ್ನು ಕೊಡುವರೆಂಬ ನಿಯಮವಿಲ್ಲ ಅದಕ್ಕೆ ಮನವನ್ನು ಕೊಡದೆ ತನುವ ದಂಡಿಸುವವರಿಗೆ ಸ್ವರ್ಗಾದಿ ನಶ್ವರಫಲ ಎನ್ನುತ್ತಾರೆ ದಾಸರಾಯರು

ಅಥವಾ ಮನವನ್ನು ಕೊಡುವವರೂ ಮಿತಿಮೀರಿ ದೇಹದಂಡನೆ ಮಾಡಿಕೊಳ್ಳುವು-ದುಂಟು ಅದನ್ನು ಹರಿ ಒಲ್ಲ ಉತ್ತಮಭಕ್ತನಲ್ಲಿ ಇವು ಬೇಕು

ದಯಾ ಕ್ಷಮಾನಸೂಯಾ ಚ ಶೌಚಾನಾಯಾನಮಂಗಲಮ್ ।
ಅಕಾರ್ಪಣ್ಯಂ ಚಾಸ್ಪೃಹತ್ವಂ ಸರ್ವಸಾಧಾರಣಾನಿ ತು ॥

ದಯೆ, ಸಹನೆ, ನಿರ್ಮತ್ಸರತೆ, ಶೌಚ, ಅನಾಯಾಸ, ಶುಭಕರ್ಮ, ಔದಾರ್ಯ, ನಿಸ್ಪೃಹತೆ —ಇವು ಭಕ್ತರಲ್ಲಿ ಎಲ್ಲರಲ್ಲಿಯೂ ಸಾಧಾರಣವಾಗಿ ಇರಬೇಕಾದವುಗಳು ಇವುಗಳಲ್ಲಿ ಅನಾಯಾಸವೆಂದರೆ ಇದು

ಶರೀರಂ ಪೀಡ್ಯತೇ ಯೇನ ಸುಶುಭೇನಾಪಿ ಕರ್ಮಣಾ
ಅತ್ಯಂತಂ ತನ್ನ ಕರ್ತವ್ಯಂ ಅನಾಯಾಸಃ ಸ ಉಚ್ಯತೇ ॥

ಸತ್ಕರ್ಮವೇ ಆಗಿದ್ದರೂ ಅದರಿಂದ ಶರೀರಕ್ಕೆ ಮಿತಿಮೀರಿ ಪೀಡೆ ಉಂಟಾಗುವಂತಿದ್ದರೆ ಆ ಕರ್ಮವನ್ನು ಬಿಡಬೇಕು ಹಾಗೆ ಬಿಡುವುದೇ ಅನಾಯಾಸವೆಂದು ಹೆಸರು ಆಯಾಸ-ಕರ್ಮ ಮಾಡಿದವರೂ ಹಿರಣ್ಯಕಶಿಪು, ರಾವಣ ಮುಂತಾದವರಂತೆ ಸ್ವರ್ಗಾದಿ ಲೋಕ-ಗಳನ್ನು ಪಡೆಯುತ್ತಾರೆ ಅದೂ ಹರಿಯ ಕರುಣೆಯೆ

***ಸ್ವರ್ಗಾದಿ ಲೋಕಗಳ***

ಉತ್ತಮಜೀವರು ವಿಷಯಾಸಕ್ತಿಯಿಂದ ಶರೀರಶ್ರಮಸಾಧ್ಯವಾದ ಯಾಗಾದಿ ಕರ್ಮ ಮಾಡಿದರೆ ಸ್ವರ್ಗ, ಕೈಲಾಸ, ಚಂದ್ರಲೋಕ ಮುಂತಾದ ಲೋಕಗಳನ್ನು ಕೊಡುತ್ತಾನೆ 'ಸ್ವರ್ಗಾದಿ' ಎಂಬಲ್ಲಿ ಆದಿಪದದಿಂದ ಕೈಲಾಸಾದಿಗಳನ್ನು ಇಟ್ಟುಕೊಳ್ಳಬೇಕು

ಅಥವಾ ತ್ರಿವಿಧ ಜೀವರಲ್ಲಿ ಉತ್ತಮರಿಗೆ, 'ಮನವನಿತ್ತರೆ ತನ್ನನೀವನೆಂದು' ಮೋಕ್ಷ-ಫಲವನ್ನು ಹೇಳಿ ಇಲ್ಲಿ ಮಧ್ಯಮ ಅಧಮರಿಗೆ ಫಲಗಳನ್ನು ಹೇಳುತ್ತಿದ್ದಾನೆ ಸ್ವರ್ಗಾದಿ ಲೋಕಗಳು ಎಂದರೆ ಸ್ವರ್ಗಲೋಕ, ನರಕಲೋಕಗಳೆಂದರ್ಥ, ತನುವ ದಂಡಿಸಿ ಮಿಶ್ರ ಸಾಧನ ಮಾಡುವ ಮಧ್ಯಮಜೀವರಿಗೆ ಸ್ವಲ್ಪ ಭಕ್ತಿ ಇರುವುದರಿಂದ ಅವರಿಗೆ ಸ್ವರ್ಗ ನೀಡುತ್ತಾನೆ, ಹರಿ ದ್ವೇಷಸಾಧನೆ ಮಾಡುವ ಅಧಮರಿಗೆ ಸ್ವಲ್ಪವೂ ಭಕ್ತಿ ಇಲ್ಲದಿರುವು-ದರಿಂದ ಅವರು ದೇಹಶ್ರಮಸಾಧ್ಯವಾದ ಯಾಗಾದಿ ಕರ್ಮ ಮಾಡಿದರೂ ನರಕವನ್ನೇ ಕೊಡುತ್ತಾನೆ

ಭಾಗವತತಾತ್ಪರ್ಯದಲ್ಲಿ ಹೇಳಿದೆ—

ಈಷದ್ಭಕ್ತೋ ಭಗವತಿ ಸುಕರ್ಮಾ ಸ್ವರ್ಗಮೇಷ್ಯತಿ ।
ಅಭಕ್ತೋ ನಿರಯಂ ಯಾತಿ ಸುಕರ್ಮಾಪಿ ನ ಸಂಶಯಃ ॥

ಅಭಕ್ತರು ತುಂಬ ಶ್ರಮಪಟ್ಟು ಸತ್ಕರ್ಮ ಮಾಡಿದರೂ ಹರಿ ನರಕವನ್ನೇ ಕೊಡುವನೆಂದರೆ ಹರಿ ನಿಷ್ಕರುಣಿಯಾಗುವುದಿಲ್ಲವೇ? ಇಲ್ಲ ಭಕ್ತರಾದ ಸಜ್ಜನರಲ್ಲಿ ಕರುಣೆ ತೋರುವುದೇ ಗುಣವೆನಿಸುತ್ತದೆ ದುರ್ಜನರಲ್ಲಿ ಕರುಣೆ ತೋರಿದರೆ ಅದು ಗುಣವಾಗುವುದಿಲ್ಲ, ದೋಷವಾಗುತ್ತದೆ

**ಪರಮಸತ್ಪುರುಷಾರ್ಥರೂಪನು**
**ಹರಿಯು ಲೋಕಕೆ ಎಂದು ಪರಮಾ-**
**ದರದಿ ಸದುಪಾಸನೆಯ ಗೈವರಿಗಿತ್ತಪನು ತನ್ನ ।**
**ಮರೆದು ಧರ್ಮಾರ್ಥಗಳ ಕಾಮಿಸು-**
**ವರಿಗೆ ನಗುತತಿಶೀಘ್ರದಿಂದಲಿ**
**ಸುರಪತನಯ ಸುಯೋಧನರಿಗಿತ್ತಂತೆ ಕೊಡುತಿಪ್ಪ ॥ ೭ ॥**

ಶ್ರೀಹರಿಯು ಲೋಕಕ್ಕೆ ಪರಮಸತ್ಪುರುಷಾರ್ಥರೂಪನೆಂದು ಪರಮಾದರದಿಂದ ಸದುಪಾಸನೆ ಮಾಡುವವರಿಗೆ ಹರಿ ತನ್ನನ್ನೇ ಕೊಡುತ್ತಾನೆ ಅವರಿಗೆ ಭಗವತ್ಪ್ರಾಪ್ತಿರೂಪ ಮೋಕ್ಷ ಉಂಟಾಗುತ್ತದೆ ಆದರೆ ಹರಿಯನ್ನು ಮರೆತು ಧರ್ಮ, ಅರ್ಥಗಳನ್ನು ಕಾಮಿಸುವವರಿಗೆ ನಗುತ ಅತಿಶೀಘ್ರದಿಂದ ಅರ್ಜುನದುರ್ಯೋಧನರಿಗೆ ಕೊಟ್ಟಂತೆ ಕೊಡುತ್ತಾನೆ

***ಪರಮಸತ್ಪುರುಷಾರ್ಥರೂಪನು***

ಇಲ್ಲಿ ಮೇಲುನೋಟಕ್ಕೆ ಅನೇಕ ತೊಡಕುಗಳಿವೆ

೧ ಹರಿ ಲೋಕಕ್ಕೆ ಪುರುಷಾರ್ಥದಾಯಕನೆ ಹೊರತು ಪುರುಷಾರ್ಥರೂಪನಲ್ಲ

೨ ಪುರುಷಾರ್ಥದಾಯಕನನ್ನೇ ಪುರುಷಾರ್ಥರೂಪನೆಂದು ಪ್ರಶಂಸೆಗಾಗಿ ಹೇಳಿದೆ ಎಂದಿಟ್ಟುಕೊಂಡರೂ ಪುರುಷಾರ್ಥದಾಯಕನೆಂದು ಉಪಾಸನೆ ಮಾಡಿದರೆ ಪುರುಷಾರ್ಥ ನೀಡಬೇಕು, ತನ್ನನ್ನಲ್ಲ 'ತಂ ಯಥಾ ಯಥೋಪಾಸತೇ ತದೇವ ಭವತಿ'

೩ ಪರಮಸತ್ಪುರುಷರಿಗೆ ಅರ್ಥರೂಪ ಅಂದರೆ ಏಕಾಂತಭಕ್ತರಿಗೆ ಭಗವಂತನೆ ದೊಡ್ಡ ಸಂಪತ್ತು ಧನ ಬೇರೇನನ್ನೂ ಅವರು ಬಯಸುವುದಿಲ್ಲ ಅದರಿಂದ ತನ್ನನ್ನೇ ನೀಡುತ್ತಾನೆ ಎಂದು ಕೆಲವರು ವ್ಯಾಖ್ಯಾನಿಸಿದ್ದಾರೆ ಆದರೆ 'ಪರಮಸತ್ಪುರುಷರಿಗೆ ಅರ್ಥರೂಪನು ಹರಿಯು' ಎಂದಿಷ್ಟೇ ಹೇಳದೆ, 'ಲೋಕಕೆ' ಎಂದು ಸೇರಿಸಿದುದು

ಅನನ್ವಿತವಾದೀತು ಲೋಕಕ್ಕೆ ಏನು? ಎಂದು ಹೇಳದಿರುವುದೂ ನ್ಯೂನತೆಯಾಗುವುದು ವಾಕ್ಯಪೂರ್ತಿಯಾಗದು

೪. 'ಪರಮ ಸತ್ಪುರುಷರಿಗೆ ಅರ್ಥರೂಪನೆಂದು ಏಕಾಂತಭಕ್ತಿಯಿಂದ ಉಪಾಸನೆ ಮಾಡಿದಾಗ ಹರಿ ಉಪಾಸಕನಿಗೆ ತನ್ನನ್ನೆ ನೀಡಿದ್ದಕ್ಕೆ ಉದಾಹರಣೆ ಪ್ರಹ್ಲಾದ ಅವನು ಹರಿಯಲ್ಲಿ ವರ ಬೇಡಲಿಲ್ಲ ಅದರಿಂದ ಒಂದು ಮನ್ವಂತರಕಾಲ ಆಯುಷ್ಯವನ್ನೂ ಸುತಲ-ಲೋಕದ ಅರಮನೆಯಲ್ಲಿ ವಾಮನರೂಪದಿಂದ ನಿತ್ಯದರ್ಶನವನ್ನೂ ಕೊಟ್ಟ ಶ್ರೀಹರಿ ಹೀಗೆ ತನ್ನನ್ನೆ ಇತ್ತ ಧ್ರುವ ತಂದೆಯ ರಾಜ್ಯವನ್ನು ಬಯಸಿ ತಪಗೈದದ್ದರಿಂದ ಹರಿ ತನ್ನನ್ನು ಕೊಡದೆ ಮೂವತ್ತಾರು ಸಾವಿರ ವರ್ಷ ರಾಜ್ಯಾಧಿಪತ್ಯವನ್ನೂ ಅನಂತರ ಧ್ರುವಲೋಕಾ-ಧಿಪತ್ಯವನ್ನೂ ಕೊಟ್ಟ ಧ್ರುವಲೋಕ ಸ್ವರ್ಗಕ್ಕಿಂದಲೂ ಕೆಳಗಿರುವ ಸ್ಥಾನ ಐದು ತಿಂಗಳು ಕಠಿನ ತಪಸ್ಸು ಮಾಡಿದ್ದಕ್ಕೆ ಹರಿ ಪ್ರತ್ಯಕ್ಷನಾಗಿ, ವರ ಕೊಟ್ಟಿದ್ದು ಎಷ್ಟೋ ಅಷ್ಟೇ ಅದರ ಫಲ ಪುನಃ ಅವನಿಗೆ ಭಗವದ್ದರ್ಶನ ಇಲ್ಲ' ಹೀಗೆ ವ್ಯಾಖ್ಯಾನಕಾರರು ಹೇಳುತ್ತಿರುವುದು ನಿಜವಲ್ಲ ಧ್ರುವನಿಗೆ ಹೆಣ್ಣುಕೊಟ್ಟಮಾವನೆ ಶಿಂಶುಮಾರರೂಪಿ ಪರಮಾತ್ಮ ಅವನು ತನ್ನ ಮಗಳಾದ ಭ್ರಮಿ ದೇವಿಯನ್ನು ಧ್ರುವನಿಗೆ ಮದುವೆ ಮಾಡಿಕೊಟ್ಟು ಮನೆಯಳಿಯನನ್ನಾಗಿ ಮಾಡಿಕೊಂಡು, ತನ್ನ ಬಾಲದ ತುದಿಯಲ್ಲಿಯೇ ಧ್ರುವಲೋಕದ ಅಧಿಪತಿಯನ್ನಾಗಿ ಮಾಡಿ, ಅವನ ಸುತ್ತಲೂ ಅಂತರಿಕ್ಷದ ಜ್ಯೋತಿರ್ಮಂಡಲಗಳೆಲ್ಲ ಅವಿರತವಾಗಿ ಸುತ್ತುವಂತೆ ಮಾಡಿದ್ದಾನೆ ಜೊತೆಗೆ ವಾಯುದೇವನೂ ತನ್ನ ಮಗಳಾದ ಇಲಾದೇವಿಯನ್ನು ಅವನಿಗೆ ಮದುವೆ ಮಾಡಿಕೊಟ್ಟು ಅಂತರಿಕ್ಷದಲ್ಲಿ ಅವನ ಜೊತೆಗೆ ವಿಹರಿಸುತ್ತಾನೆ ಹೀಗೆ ಹರಿವಾಯುಗಳಿಬ್ಬರ ಮನೆಯಳಿಯನಾಗಿ ಅವರ ನಿತ್ಯದರ್ಶನ ಪಡೆಯುವ ಭಾಗ್ಯಶಾಲಿ ಧ್ರುವ ಆದ್ದರಿಂದ ಪುರುಷಾರ್ಥದಾಯಕನೆಂದು ಉಪಾಸನೆ ಮಾಡಿದ ಧ್ರುವನಿಗೂ ಹರಿ ತನ್ನನ್ನೆ ನೀಡಿದ್ದಾನೆ ಇದು ಹೇಗೆ ಎನ್ನುವ ಪ್ರಶ್ನೆ ಹಾಗೇ ಉಳಿಯುತ್ತದೆ

ಸಮಾಧಾನ ಹೀಗೆ—

೧ ಹರಿ ಲೋಕಕ್ಕೆ ಪುರುಷಾರ್ಥದಾಯಕನೂ ಹೌದು ಪುರುಷಾರ್ಥರೂಪನೂ ಹೌದು ಪುರುಷಾರ್ಥಗಳು ಪುರುಷಾರ್ಥಗಳೆನಿಸಬೇಕಾದರೆ ಹರಿ ಅವುಗಳೊಳಗೆ ನಿಂತು ಆಯಾ ಪುರುಷಾರ್ಥಗಳ ರೂಪು ತಳೆದು ಅವುಗಳಲ್ಲಿ ಆಹ್ಲಾದ ನೀಡುವ ಶಕ್ತಿಯನ್ನು ವ್ಯಕ್ತಮಾಡಬೇಕು

೨ ಈಗ ಎರಡನೆ ಪ್ರಶ್ನೆಗೂ ಸಮಾಧಾನ ಸಿಗುತ್ತದೆ ಹರಿ ಪುರುಷಾರ್ಥರೂಪನೂ ಆದ್ದರಿಂದ ಪುರುಷಾರ್ಥದಾಯಕನೆಂದು ಉಪಾಸನೆ ಮಾಡಿದಾಗ ತನ್ನನ್ನೆ ಕೊಡುತ್ತಾನೆ ಅವನು ಹೀಗೆ ಉಪಾಸಕನಿಗೆ ವಶನಾದನೆಂದರೆ ಎಲ್ಲಾ ಪುರುಷಾರ್ಥಗಳೂ ಹೊಳೆಯಂತೆ ಹರಿದು ಬರುತ್ತವೆ.

೩ 'ಪರಮಸತ್ಪುರುಷಾರ್ಥರೂಪನಾದ ಹರಿಯು ಲೋಕಕ್ಕೆ' ಎಂದು ಅನ್ವಯಿಸಿದರೆ ವಾಕ್ಯಪೂರ್ತಿಯಾಗುವುದಿಲ್ಲ, ನಿಜ ಆದರೆ 'ಪರಮ' ಎಂಬಲ್ಲಿ ಒಂದು ಅಲ್ಪವಿರಾಮ ಹಾಕಿ ಓದಬೇಕು ಪರಮ ಎಂದರೆ ಸರ್ವೋತ್ತಮನಾದ ಹರಿ ಸತ್ಪುರುಷಾರ್ಥರೂಪನು, ವಿವೇಕಿಗಳಿಗೆ, ಲೋಕಕ್ಕೆ ಹರಿಯು ಅಂದರೆ ಕೇವಲ ಹರಿ ಎಂಬ ಒಬ್ಬ ದೇವತೆ 'ಏಕೋ ದೇವಃ ಕೇಶವೋ ವಾ ಶಿವೋ ವಾ' ಒಬ್ಬ ದೇವತೆ ಬೇಕು ಅವನು ಕೇಶವನಾದರೇನು, ಶಿವನಾದರೇನು? ಎನ್ನುತ್ತದೆ ಅಜ್ಞಲೋಕ. ಹೀಗೆ ಅಜ್ಞರಿಗೆ ಸಾಮಾನ್ಯ ದೇವತೆ ಎನಿಸಿದ ಹರಿ ವಿವೇಕಿಗಳಿಗೆ ಸತ್ಪುರುಷಾರ್ಥರೂಪನಾಗಿದ್ದಾನೆ ಅವನು ಪುರುಷಾರ್ಥರೂಪನಾಗಿ ಪುರುಷಾರ್ಥಗಳಲ್ಲಿ ನಿಲ್ಲದಿರುತ್ತಿದ್ದರೆ ಈ ಶಿವನಾಗಲಿ ಬೇರೆ ದೇವತೆಯಾಗಲಿ ಯಾವ ಪುರುಷಾರ್ಥವನ್ನೂ ಕೊಡಲು ಶಕ್ತನಾಗುತ್ತಿದ್ದಿಲ್ಲ ಎಂದು ಸದುಪಾಸನೆ ಮಾಡಬೇಕು ಆಗ ಒಲಿದು ಹರಿ ತನ್ನನ್ನೇ ಕೊಟ್ಟುಬಿಡುತ್ತಾನೆ

೪ ಈಗ ನಾಲ್ಕನೆ ಪ್ರಶ್ನೆ ಪ್ರಶ್ನೆಯಾಗಿ ಉಳಿಯುವುದಿಲ್ಲ ಪುರುಷಾರ್ಥದಾಯಕನೆಂದು ಧ್ರುವ ಉಪಾಸನೆ ಮಾಡಿದ್ದರಿಂದ ಹರಿ ಒಲಿದು ತನ್ನನ್ನೇ ಕೊಟ್ಟುದು ಸಹಜ ಅವನು ಆಧಿಕಾರಿಕ ಚೇತನನಾದ್ದರಿಂದ ಅಧಿಕಾರವನ್ನು ಹರಿಯಲ್ಲಿ ಬೇಡಿದುದೂ ಸಹಜ ಅದೇ ಅವನಿಗೆ ಮೋಕ್ಷಸಾಧನ

***ಮರೆದು ಧರ್ಮಾರ್ಥಗಳ***

ಸುರವತನಯ ಸುಯೋಧನರಿಬ್ಬರೂ ಕುರುಕ್ಷೇತ್ರಯುದ್ಧದಲ್ಲಿ ಕೃಷ್ಣನ ಸಹಾಯ ಪಡೆಯಲೆಂದು ದ್ವಾರಕೆಗೆ ಬಂದರು ಕೃಷ್ಣ ಆಗಬೇಕೆಂದೆ ಮಲಗಿದ್ದ ದುರ್ಯೋಧನ ಮೊದಲಿಗೆ ಬಂದು ಕೃಷ್ಣನ ತಲೆಯ ಬಳಿ ಇದ್ದ ಆಸನದಲ್ಲಿ ಕುಳಿತ ಬಳಿಕ ಅರ್ಜುನ ಬಂದು ಕೃಷ್ಣನ ಕಾಲ ಬಳಿ ನಿಂತ ಕೃಷ್ಣ ಎದ್ದೊಡನೆ ಮೊದಲಿಗೆ ಅರ್ಜುನನನ್ನು ಕಂಡು 'ಬಂದೆಯ, ಅರ್ಜುನ?' ಎಂದ. 'ಇಗೋ, ನಾನು ಮೊದಲೇ ಬಂದು ಇಲ್ಲಿ ಕುಳಿತಿದ್ದೇನೆ' ಎಂದ ದುರ್ಯೋಧನ 'ನಿನ್ನ ಸಹಾಯ ಅಪೇಕ್ಷಿಸಿ ಇಬ್ಬರೂ ಬಂದಿದ್ದೇವೆ' ಎಂದ 'ದುರ್ಯೋಧನ, ನಾನು ಮೊದಲಿಗೆ ಅರ್ಜುನನನ್ನು ಕಂಡೆ ನೀನೂ ಮೊದಲಿಗೆ ಬಂದಿರುವೆ ಆದರಿಂದ ನಾನು ಇಬ್ಬರಿಗೂ ಸಹಾಯ ಮಾಡುತ್ತೇನೆ. ಆದರೆ ಅರ್ಜುನ ಸಣ್ಣವನೆಂದು ಅವನ ಅಪೇಕ್ಷೆಯನ್ನು ಮೊದಲು ಕೇಳುವೆ. ಅರ್ಜುನ, ನಿರಾಯುಧನಾಗಿ ನಾನೊಂದು ಕಡೆ ಶಸ್ತ್ರಾಸ್ತ್ರಸುಸಜ್ಜಿತವಾದ ನನ್ನ ಮಕ್ಕಳ ನಾರಾಯಣೀಸೈನ್ಯ ಒಂದು ಕಡೆ ಯಾವುದಾದರೊಂದನ್ನು ಆರಿಸಿಕೊಳ್ಳು' ಎಂದ ಕೃಷ್ಣ ಅರ್ಜುನನೆಂದ 'ನಿರಾಯುಧನಾದರೂ ನೀನೆ ನನಗೆ ಬೇಕು' ದುರ್ಯೋಧನನೆಂದ, 'ನನಗೆ ನಿನ್ನಿಂದೇನು? ಸೈನ್ಯವೆ ನನಗಿರಲಿ' ಕೃಷ್ಣ ಇಬ್ಬರಿಗೂ ಅವರು ಬಯಸಿದುದನ್ನು ನಗುತ್ತಾ ಕೊಟ್ಟ

ಇಲ್ಲಿಯೂ ಪ್ರಶ್ನೆಗಳು ಉದ್ಭವಿಸುತ್ತವೆ

೧ 'ಮರೆದು ಧರ್ಮಾರ್ಥಗಳ ಕಾಮಿಸುವರಿಗೆ' ಎಂದು ಧರ್ಮ ಅರ್ಥಗಳ ಬಗ್ಗೆ ಹೇಳಿದೆ ಕಾಮವೆಂಬ ಪುರುಷಾರ್ಥದ ಬಗ್ಗೆ ಏನೂ ಹೇಳಿಲ್ಲ ಅದನ್ನು ಕಾಮಿಸಬಹುದೆ?

೨ 'ಮರೆತು ಧರ್ಮಾರ್ಥಗಳ ಕಾಮಿಸುವರಿಗೆ ಸುರಪತನಯಸುಯೋಧನರಿಗಿತ್ತಂತೆ' ಎಂದು ಹೇಳಿದೆ ದುರ್ಯೋಧನ ಹರಿಯನ್ನು ಮರೆತರೂ ಅರ್ಜುನ ಮರೆಯಲಿಲ್ಲವಲ್ಲ? ಅದರಿಂದ ಮರೆತು ಧರ್ಮಾರ್ಥಗಳ ಕಾಮಿಸುವರಿಗೆ ಸುಯೋಧನನಂತೆ ಕೊಡುತಿಪ್ಪ ಎನ್ನಬೇಕಾಗಿತ್ತು ಮರೆಯದೆ ಧರ್ಮಾರ್ಥಗಳ ಕಾಮಿಸುವವರಿಗೆ ಸುರಪತನಯನಂತೆ ಕೊಡುತಿಪ್ಪ ಎನ್ನಬೇಕಾಗಿತ್ತು

೩ ಮರೆತು ಧರ್ಮಾರ್ಥಗಳ ಕಾಮಿಸುವರಿಗೆ ಅರ್ಜುನನಂತೆ ಸಂಪತ್ತನ್ನೂ ದುರ್ಯೋಧನನಂತೆ ಆಪತ್ತನ್ನೂ ನಗುತ್ತಾ ಕೊಡುತ್ತಾನೆ ಕೃಷ್ಣ ಎಂದರೆ ಇಬ್ಬರೂ ಹರಿಯನ್ನು ಮರೆತಿರುವಾಗ ಒಬ್ಬನಿಗೆ ಸಂಪತ್ತು ಇನ್ನೊಬ್ಬನಿಗೆ ಆಪತ್ತು ಏಕೆ?

ಈ ಪ್ರಶ್ನೆಗಳಿಗೆ ಸಮಾಧಾನ ಹೀಗೆ—

೧ ಪುರುಷಾರ್ಥಗಳಲ್ಲೆಲ್ಲ ಪರಮಸತ್ಪುರುಷಾರ್ಥವೆಂದರೆ ಮೋಕ್ಷ ಮೋಕ್ಷರೂಪನು ಹರಿ ಏಕೆಂದರೆ, ಜೀವರಿಗೆ ಭಗವತ್ಪ್ರಾಪ್ತಿಯೆ ಮೋಕ್ಷವೆನಿಸುತ್ತದೆ ತಾನೆ? ಹೀಗೆ ಮೋಕ್ಷರೂಪನಾದ ಹರಿಯನ್ನು ಉಪಾಸನೆ ಮಾಡುವವನು ಆ ಮೋಕ್ಷಕ್ಕಾಗಿ ಧರ್ಮ, ಅರ್ಥ, ಕಾಮಗಳೆಂಬ ಮೂರು ಪುರುಷಾರ್ಥಗಳನ್ನು ಸೇವಿಸಬೇಕು

ಧರ್ಮಾರ್ಥಕಾಮಾಃ ಸಮಮೇವ ಸೇವ್ಯಾಃ

ಎನ್ನುತ್ತದೆ ಮಹಾಭಾರತ ಧರ್ಮವೆಂದರೆ ಶ್ರವಣಾದಿ ನಿಷ್ಕಾಮ ಕರ್ಮ ಇದು ಜ್ಞಾನದ್ವಾರಾ ಮೋಕ್ಷಸಾಧನ ಅರ್ಥವೆಂದರೆ ದೈವವಿತ್ತವೆನಿಸಿದ ಜ್ಞಾನಭಕ್ತ್ಯಾದಿಗಳು ಅವು ನೇರವಾಗಿಯೆ ಮೋಕ್ಷಸಾಧನಗಳು ಕಾಮವೆಂದರೆ ಹರಿಗೆ ನಿವೇದಿತವಾದ ನೈವೇದ್ಯ-ನಿರ್ಮಾಲ್ಯಾದಿಸೇವನೆ ಇದೂ ಜ್ಞಾನದ್ವಾರಾ ಮೋಕ್ಷಸಾಧನ ಇದನ್ನು ಮರೆತು ವಿಷಯ-ಸುಖಭೋಗವೆಂಬ ಕಾಮವನ್ನೆ ಬಯಸಿ ಅದಕ್ಕೆ ಸಾಧನವಾಗಿ ಧರ್ಮ ಅರ್ಥಗಳನ್ನು ಕಾಮಿಸುವವರಿಗೆ ಅಧರ್ಮ ಅನರ್ಥಗಳನ್ನೇ ಕೊಡುತ್ತಾನೆ, ನಗುತ್ತಾ ಅತಿಶೀಘ್ರದಲ್ಲಿಯೆ, ಹದಿನೆಂಟು ದಿನಗಳ ಕುರುಕ್ಷೇತ್ರ ಯುದ್ಧ ಮುಗಿಯುವುದರಲ್ಲಿ ದುರ್ಯೋಧನನಿಗೆ ಸರ್ವನಾಶ ತಂದಿತ್ತಂತೆ ಈ ಅಭಿಪ್ರಾಯದಿಂದ ಧರ್ಮಅರ್ಥಗಳೆರಡನ್ನೆ ಇಲ್ಲಿ ಹೇಳಿದೆ ದುರ್ಯೋಧನ ಬಯಸಿದ ಧರ್ಮ ರಾಜ್ಯಭಾರರೂಪವಾದುದು ಅರ್ಥ ರಾಜ್ಯರೂಪ-ವಾದುದು ಅವೆರಡೂ ಅವನಿಗೆ ಕಾಮಕ್ಕಾಗಿ ಅಪೇಕ್ಷಿತವಾಗಿತ್ತು ಎಂದರ್ಥ

೨ ಅರ್ಜುನ ಹರಿಯನ್ನು ಮರೆಯಲಿಲ್ಲವೆನ್ನುವುದು ಕಷ್ಟ ಹರಿಗಾಗದವರನ್ನು ನಿಗ್ರಹಿಸುವುದು ಅವನ ಕ್ಷಾತ್ರಧರ್ಮವಾಗಿದ್ದರೂ ಅದನ್ನು ಮರೆತು 'ನ ಯೋತ್ಸ್ಯೇ' 'ನಾನು ಯುದ್ಧಮಾಡಲಾರೆ' ಎಂದವನಲ್ಲವೆ ಆತ?

೩ ಆದ್ದರಿಂದ ಅರ್ಜುನ ದುರ್ಯೋಧನರಿಬ್ಬರೂ ಹರಿಯನ್ನು ಮರೆತರು, ನಿಜ ಆದರೆ ಅರ್ಜುನನಿಗೆ ನಗುತ ಅತಿಶೀಘ್ರದಿಂದಲಿ ಗೀತೋಪದೇಶ ಮಾಡಿ ಯುದ್ಧ ಮಾಡಿಸಿದ ಜಯತಂದಿತ್ತ ದುರ್ಯೋಧನನಿಗೆ ಅಧರ್ಮರೂಪವಾದ ವಿಷ್ಣುದ್ವೇಷವನ್ನೆ ಬೆಳೆಸಿದ ರಣರಂಗದಲ್ಲಿ ತೊಡೆ ಮುರಿದು ಬಿದ್ದಾಗಲೂ ಅವನ ಮೇಲೆ ದೇವತೆಗಳಿಂದ ಪುಷ್ಪವೃಷ್ಟಿ ಮಾಡಿಸುವ ಮೂಲಕ ಅವನ ಅನ್ಯಥಾಜ್ಞಾನವನ್ನು ಇನ್ನೂ ಬಲಪಡಿಸಿ ಅನರ್ಥರೂಪವಾದ ತಮಸ್ಸಿಗೆ ತಳ್ಳಿದ ಇದಕ್ಕೆ ಕಾರಣ ಸ್ಪಷ್ಟ ಅರ್ಜುನನಲ್ಲಿ ಕರುಣೆ! ದುರ್ಯೋಧನನಲ್ಲಿ ಕರುಣೆ ಇಲ್ಲ! ಏಕೆಂದರೆ ದುರ್ಯೋಧನ ಸ್ವಭಾವದಿಂದ ದುಷ್ಟ ಅರ್ಜುನ ಸಜ್ಜನ ಇಲ್ಲದಿದ್ದರೆ, ಅರ್ಜುನನೂ ಹರಿಯನ್ನು ಮರೆತು ಧರ್ಮವನ್ನು ಬಯಸಿದವನೆ ದುರ್ಯೋಧನನೂ ಹರಿಯನ್ನು ಮರೆತು ಅರ್ಥವನ್ನು ಬಯಸಿದವನೆ 'ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ' ಎಂದು ಅರ್ಜುನ ಭಿಕ್ಷೆ ಬೇಡಲು ಬಯಸಿದ 'ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ' ಎನ್ನುತ್ತ ಸುಖಭೋಗ-ರೂಪದ ಕಾಮವನ್ನೇ ಮುಖ್ಯ ಪುರುಷಾರ್ಥವೆಂದು ಬಗೆದ ದುರ್ಯೋಧನನಂತೂ ಸೂಜಿ ಮೊನೆಯಷ್ಟು ರಾಜ್ಯ ಕೊಡೆನೆಂದು ಅರ್ಥವನ್ನು ಕಾಮಕ್ಕಾಗಿ ಬಯಸಿದವ ಹಾಗಿದ್ದರೂ ಕೃಷ್ಣನಿಗೆ ಪಕ್ಷಪಾತವೇಕೆ? ಈಗ, ಧರ್ಮ ಅರ್ಥಗಳನ್ನು ಕಾಮಿಸಿದವರು ಕ್ರಮವಾಗಿ ಸುರಪತನಯ ಸುಯೋಧನರು ಅಂದರೆ ಧರ್ಮವನ್ನು ಸುರಪತನಯ, ಅರ್ಥವನ್ನು ಸುಯೋಧನ ಬಯಸಿದರೆಂದು ಹೇಳುವ ಅಭಿಪ್ರಾಯದಿಂದ ಧರ್ಮ-ಅರ್ಥಗಳೆರಡನ್ನೆ ಹೇಳಿದೆ ಕಾಮದ ಬಗ್ಗೆ ಹೇಳಿಲ್ಲ ಎಂದು ಸಮಾಧಾನ ಹೇಳಬಹುದು

***ನಗುತ ಅತಿ ಶೀಘ್ರದಿಂದಲಿ ಕೊಡುತಿಪ್ಪ***

ಪುರುಷಾರ್ಥಗಳು ಸ್ವತಃ ಪುರುಷಾರ್ಥಗಳೆನಿಸುವುದಿಲ್ಲ ಆಕರ್ಷಕನಾದ ಹರಿ ಅವುಗಳಲ್ಲಿ ಪ್ರವಿಷ್ಟನಾಗದಿದ್ದರೆ ಅವುಗಳಲ್ಲಿ ಏನೂ ಆಕರ್ಷಣೆ ಇರುವುದಿಲ್ಲ

ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ

ಎನ್ನುತ್ತದೆ ಬೃಹದಾರಣ್ಯಕೋಪನಿಷತ್ತು ಆತ್ಮನಲ್ಲಿ ಪರಮಾತ್ಮನಿದ್ದು ಪ್ರಿಯನೆನಿಸುವದರಿಂದಲೆ ಆತ್ಮ ತನಗೆ ತಾನು ಪ್ರಿಯನೆನಿಸುತ್ತಾನೆ ಇಲ್ಲದಿದ್ದರೆ ತನಗೆ ತಾನೆ ಅಪ್ರಿಯನೆನಿಸಿ ನರಕಾದ್ಯನರ್ಥಸಾಧನದಲ್ಲಿ ಪ್ರವೃತ್ತಿ ಮಾಡುತ್ತಾನೆ

ಇದನ್ನು ಮರೆತು ವಸ್ತುಗಳು ಸ್ವತಃ ಪ್ರಿಯ ಅಪ್ರಿಯವೆನಿಸುತ್ತವೆ ಎಂಬ ಭ್ರಮೆಯಿಂದ ಪ್ರಿಯವಸ್ತುಗಳ ಮೃಗತೃಷ್ಣೆಯ ಬೆನ್ನು ಹತ್ತಿದರೆ ಹರಿ ನಗದೆ ಇನ್ನೇನು ಮಾಡುತ್ತಾನೆ? ಆದರೆ ಹರಿಯ ನಗು ಒಂದೇ ತೆರನಾಗಿರುವುದಿಲ್ಲ ಸಜ್ಜನರು ಪ್ರಾರಬ್ಧಕರ್ಮವಶದಿಂದ ವಿಷಯಾಸಕ್ತಿಯಲ್ಲಿ ಮುಳುಗಿದರೆ, ತನ್ನನ್ನು ಮರೆತರೆ, 'ಪ್ರಹಸನ್ನಿವ ಭಾರತ' ಎಂಬಂತೆ ವಾತ್ಸಲ್ಯಕರುಣೆಗಳಿಂದ ತುಂಬಿದ ನಗು ನಗುತ್ತಾನೆ! ವಿಷಯಸುಖ ಉಣಿಸುತ್ತಾನೆ!

ಕೇನೇಷಿತಂ ಪತತಿ ಪ್ರೇಷಿತಂ ಮನಃ?

'ವಿಷಯಪದಾರ್ಥಗಳಲ್ಲಿ ಮನಸ್ಸು ಬೀಳುವುದು ಯಾರ ಪ್ರೇರಣೆಯಿಂದ?' ಹರಿಯ ಪ್ರೇರಣೆಯಿಂದ. ಬಹು ಸ್ವಾದುವಾದ ವಿಷಯಪದಾರ್ಥದ ಸ್ವಾದುರಸವನ್ನು ಆಸ್ವಾದನ ಮಾಡುವಾಗ ಹರಿಯ ವಿಸ್ಮರಣೆಯಾಗುವುದು ಸಹಜ ಆದರೆ ವಿಸ್ಮರಣೆ ಸಲ್ಲದು ಹರಿ ಸ್ವಾದುರಸವನ್ನು ಆಗ ಅವನಿಗೆ ಕೊಡಬಾರದಿತ್ತು. ಆದರೂ ಆತ ಕರುಣೆಯಿಂದ ಅವನ ಮನಸ್ಸನ್ನು ವಿಷಯಪದಾರ್ಥದಲ್ಲಿ ಬೀಳಿಸಿ ಅಲ್ಲಿರುವ ಸ್ವಾದುರಸವನ್ನು ಉಣಿಸುತ್ತಾನೆ ಎಂದು ವಾದಿರಾಜರು ತಲವಕಾರಟಿಪ್ಪಣಿಯಲ್ಲಿ ಹೇಳಿದ್ದಾರೆ

ದುಷ್ಟರಿಗೆ ಹರಿ ನಗುವಾಗ ಕಪಟದ ನಗು ನಗುತ್ತಾನೆ

ತನ್ನವರಿಗಖಿಳ ಸಂಪದವೀವುದು ಸುಗುಣಸಂ-
ಪನ್ನ ಕೃಷ್ಣನ ಮುದ್ದು ಮಂದಹಾಸ
ಅನ್ಯಜನರ್ಗೆದೆಶೂಲವವನ ಮನೆ ಕೊಂಬುದು!

ಎಂದು ವಾದಿರಾಜರೆ ಭ್ರಮರಗೀತೆಯಲ್ಲಿ ಹೇಳಿದ್ದಾರೆ ಅದರಿಂದ ದುರ್ಯೋಧನನಿಗೆ ನಗುತ್ತ ಸೈನ್ಯ [illegible] ಸರ್ವನಾಶ ಮಾಡಿದ ಕೃಷ್ಣ

ಅಥವಾ 'ಮೋಕ್ಷರೂಪ ಪುರುಷಾರ್ಥವೆ ಪರಮಪುರುಷಾರ್ಥ, ಅಂಥ ಮೋಕ್ಷ ಭಗವತ್ಪ್ರಾಪ್ತಿರೂಪವಾದುದೆಂ'ದು ಸ್ಪಷ್ಟ ಹೇಳದೆ 'ಹರಿಯು ಪರಮಸತ್ಪುರುಷಾರ್ಥ-ರೂಪನೆಂ'ದು ಸಾಮಾನ್ಯವಾಗಿ ಹೇಳಿರುವುದರಿಂದ 'ಕಾಮವೂ ಪರಮಪುರುಷಾರ್ಥ, ಅಂಥ ಕಾಮವೂ ಭಗವತ್ಪ್ರಾಪ್ತಿರೂಪವಾದುದೆಂ'ದು ಹೇಳುವ ಅಭಿಪ್ರಾಯ ಸೂಚಿತ-ವಾಗುತ್ತದೆ ಧರ್ಮರಾಜನ ಆಸ್ಥಾನದಲ್ಲಿ ಒಮ್ಮೆ ಪುರುಷಾರ್ಥಗಳಲ್ಲಿ ಯಾವುದು ಹೆಚ್ಚೆಂದು ಚರ್ಚೆ ನಡೆದಾಗ ಭೀಮಸೇನ ಕಾಮವೆ ಹೆಚ್ಚೆಂದ ಕಾಮವೆಂದರೆ ಬಯಸುವ ವಸ್ತು ಮುಮುಕ್ಷುಗಳೆಲ್ಲರೂ ಬಯಸುವ ವಸ್ತು ಹರಿ ಹೀಗೆ ಲೋಕಕ್ಕೆ ಕಾಮಮೋಕ್ಷಗಳೆಂಬ ಪರಮಸತ್ಪುರುಷಾರ್ಥರೂಪನು ಹರಿ ಇದನ್ನು ಮರೆತು ಧರ್ಮಅರ್ಥಗಳನ್ನು ಬಯಸಿ-ದರೆ ಹರಿ ನಗುತ್ತಾನೆ ಎನ್ನುವುದು ದಾಸರಾಯರ ಆಂತರ್ಯ. ಇದರಿಂದ ಕಾಮದ ಬಗ್ಗೆ ಅದನ್ನು ಬಯಸಬಹುದೆ, ಕೂಡದೆ, ಎಂದು ಏನೂ ಹೇಳಿಲ್ಲವೆನ್ನುವ ಆಕ್ಷೇಪಕ್ಕೆ ಅವಕಾಶವಿಲ್ಲ

ಅಥವಾ ಸುರಪತನಯನೆಂದರೆ ವಾಲಿ, ವಾಲಿಯೂ ತಮ್ಮನಾದ ಸುಗ್ರೀವನಿಗೆ ಅನ್ಯಾಯ ಬಗೆದು ಹರಿಯನ್ನು ಮರೆತು ಧರ್ಮಾರ್ಥಗಳನ್ನು ಕಾಮಿಸಿದ ದುರ್ಯೋ-ಧನನೂ ಪಾಂಡವರಿಗೆ ಅನ್ಯಾಯ ಬಗೆದು ಹರಿಯನ್ನು ಮರೆತು ಧರ್ಮಾರ್ಥಗಳಲ್ಲಿ ಆಸಕ್ತನಾದ ಅದರಿಂದ ಹರಿ ನಗುತ್ತ ರಾಮಾವತಾರದಲ್ಲಿ ವಾಲಿಗೂ, ಕೃಷ್ಣಾವತಾರದಲ್ಲಿ ದುರ್ಯೋಧನನಿಗೂ ಅತಿಶೀಘ್ರದಿಂದಲೇ ಶಿಕ್ಷೆನೀಡಿದ. ಸಜ್ಜನರಿರಲಿ, ದುರ್ಜನರಿರಲಿ,

ಹರಿಯನ್ನು ಮರೆತರೆ ಶಿಕ್ಷೆ ತಪ್ಪದು ಹಾಗಾದರೆ ಕರುಣೆ ಎಲ್ಲಿ ಬಂತೆಂದರೆ ಸುರವತನಯನಿಗೆ ತತ್ಕಾಲದಲ್ಲಿ ಆ ಅವತಾರದಲ್ಲಿ ಶಿಕ್ಷೆ ಮಾಡಿದರೂ ಮುಂದೆ ಕೃಷ್ಣಾವತಾರದಲ್ಲಿ ಅವನಿಗೆ ಪ್ರಾಣಮಿತ್ರನಾಗಿ ಜೊತೆಯಲ್ಲಿಯೆ ನಿಂತು ರಕ್ಷಣೆಯನ್ನೇ ನೀಡಿದ ಸುಯೋಧನನಿಗೆ ಶಾಶ್ವತವಾಗಿ ನರಕವನ್ನೆ ಕೊಟ್ಟ, ಸಜ್ಜನರಲ್ಲಿ ಎಂಥ ಕರುಣಾಶಾಲಿ ಶ್ರೀಹರಿ ಎಂದು ಹೇಳುತ್ತಿದ್ದಾರೆ ದಾಸರಾಯರು.

**ಜಗವನೆಲ್ಲವ ನಿರ್ಮಿಸುವ ನಾ-**
**ಲ್ಮೊಗನೊಳಗೆ ತಾನಿದ್ದು ಸಲಹುವ**
**ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ ।**
**ಸ್ವಗತಭೇದವಿವರ್ಜಿತನು ಸ-**
**ರ್ವಗ ಸದಾನಂದೈಕದೇಹನು**
**ಬಗೆಬಗೆಯ ನಾಮದಲಿ ಕರೆಸುವ ಭಕುತರನು ಪೊರೆವ ॥ ೮ ॥**

ಶ್ರೀಹರಿ ಚತುರ್ಮುಖಬ್ರಹ್ಮನಲ್ಲಿದ್ದು ಎಲ್ಲಾ ಜಗತ್ತನ್ನೂ ಸೃಜಿಸುತ್ತಾನೆ ಬೇರೆಯಾಗಿ ಇದ್ದು ಪಾಲಿಸುತ್ತಾನೆ ವ್ಯೋಮಕೇಶನೆನಿಸಿದ ರುದ್ರನಲ್ಲಿದ್ದು ಲೋಕಗಳನ್ನು ಸಂಹರಿಸುತ್ತಾನೆ ತನ್ನ ಅವತಾರರೂಪಗಳಲ್ಲಿ ಗುಣಕ್ರಿಯಾದಿಗಳಲ್ಲಿ ಭೇದವಿಲ್ಲದವನು, ಸರ್ವತ್ರ ವ್ಯಾಪಿಸಿದವನು, ನಿರ್ಮಲ ಆನಂದವನ್ನೇ ಶರೀರವನ್ನಾಗಿ ಹೊಂದಿದವನು. ಬಗೆಬಗೆಯ ನಾಮದಲ್ಲಿ ಕರೆಸುವನು ಭಕ್ತರನ್ನು ಪೊರೆಯುವನು

***ಜಗವನೆಲ್ಲವ ನಿರ್ಮಿಸುವ, ಲೋಕಗಳ ಸಂಹರಿಸುವ***

ಚತುರ್ಮುಖ ಬ್ರಹ್ಮ ಸೃಷ್ಟಿಕರ್ತ, ರುದ್ರ ಸಂಹಾರಕರ್ತ ಎಂದು ಲೋಕದಲ್ಲಿ ಪ್ರಸಿದ್ಧಿ ಆದರೆ ಪ್ರಳಯಕಾಲದಲ್ಲಿ ಈ ಬ್ರಹ್ಮನಾಗಲಿ ರುದ್ರನಾಗಲಿ ಇರಲಿಲ್ಲ ನಾರಾಯಣನೊಬ್ಬನೆ ಇದ್ದ

ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನೇಶಾನಃ
ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನಚ ಶಂಕರಃ
ವಾಸುದೇವೋ ವಾ ಇದಮಗ್ರ ಆಸೀತ್ ನ ಬ್ರಹ್ಮಾ ನಚ ಶಂಕರಃ

ಇತ್ಯಾದಿ ವೇದವಾಕ್ಯಗಳು ಸ್ಪಷ್ಟವಾಗಿ ಪ್ರಳಯಕಾಲದಲ್ಲಿ ಆಲದೆಲೆಯ ಮೇಲೆ ಮಲಗಿದ್ದವನು ನಾರಾಯಣನೆ ಎನ್ನುತ್ತವೆ ಅದರಿಂದ ಅವನೆ ಹಿಂದಿನ ಕಲ್ಪದಲ್ಲಿ ಪ್ರಳಯ ಮಾಡಿದವನು, ಈ ಕಲ್ಪದಲ್ಲಿ ಸೃಷ್ಟಿಯನ್ನು ಮಾಡಿದವನೆಂದು ಸಿದ್ಧವಾಗುತ್ತದೆ ಬ್ರಹ್ಮರುದ್ರಾದಿಗಳಲ್ಲಿ ಅಜ್ಞಾನ, ಅಶಕ್ತಿ, ಪಾರತಂತ್ರ್ಯಾದಿ ದೋಷಗಳನ್ನು ವೇದವು ಹೇಳುವುದರಿಂದ ಅವರು ಸೃಷ್ಟಿಲಯಕರ್ತರೆನಿಸಲಾರರು ಹರಿಯಲ್ಲಿ ಆ ದೋಷಗಳನ್ನು ವೇದದಲ್ಲಿ ಹೇಳಿಲ್ಲ ಅದರಿಂದಲೂ ಅವನೇ ಸೃಷ್ಟ್ಯಾದಿ ಕರ್ತ

ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ ।
ಬಂಧಮೋಕ್ಷೌ ಚ ಪುರುಷಾದ್ ಯಸ್ಮಾತ್ ನ ಹರಿರೇಕರಾಟ್ ॥

'ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಆವರಣ, ಬಂಧ, ಮೋಕ್ಷ—ಈ ಎಂಟನ್ನೂ ಮಾಡುವವ ಸ್ವತಂತ್ರನಾದ ಹರಿಯೆ' ಎಂದು ಸ್ಪಷ್ಟವಾಗಿ ಸ್ಕಂದಪುರಾಣ ಹೇಳುತ್ತಿದೆ

***ನಾಲ್ಮೊಗನೊಳಿದ್ದು, ಗಗನಕೇಶನೊಳಿದ್ದು***

ಹಾಗಾದರೆ 'ಬ್ರಹ್ಮ ಸೃಷ್ಟಿಕರ್ತ, ರುದ್ರ ಸಂಹಾರಕರ್ತ' ನೆಂದು ಪುರಾಣಾದಿಗಳಲ್ಲಿ ಏಕೆ ವ್ಯವಹಾರವಿದೆ?

ನಾಮಾನಿ ಸರ್ವಾಣಿ ಯಮಾವಿಶಂತಿ
ತಂ ವೈ ವಿಷ್ಣುಂ ಪರಮಮುದಾಹರಂತಿ

'ಎಲ್ಲಾ ದೇವತೆಗಳ ಹೆಸರುಗಳೂ ಒಬ್ಬ ಹರಿಗೇ ಸಲ್ಲುತ್ತದೆ' ಎಂದು ಶ್ರುತಿ ಸಾರುವುದರಿಂದ ಬ್ರಹ್ಮರುದ್ರನಾಮಗಳೂ ಹರಿಯನ್ನೇ ಹೇಳುವುವು ಅದರಿಂದ 'ಬ್ರಹ್ಮರುದ್ರರು ಸೃಷ್ಟಿಲಯ-ಕರ್ತ' ರೆಂದರೂ ಹರಿ ಸೃಷ್ಟಿಲಯಕರ್ತನೆಂದೇ ಹೇಳಿದಂತಾಗುವುದು ನಿಜ, ಆದರೂ ಬ್ರಹ್ಮಶಬ್ದದಿಂದಲೆ ಸೃಷ್ಟಿಕರ್ತನನ್ನು, ರುದ್ರಶಬ್ದದಿಂದಲೆ ಲಯಕರ್ತನನ್ನು ನಿರ್ದೇಶಿಸು-ವುದೇಕೆ? ವ್ಯತ್ಯಾಸವನ್ನೇಕೆ ಮಾಡುವುದಿಲ್ಲ? ಅಥವಾ ವಿಷ್ಣು ಸೃಷ್ಟಿಕರ್ತ, ವಿಷ್ಣು ಲಯಕರ್ತ ಎಂದೇಕೆ ಹೇಳುವುದಿಲ್ಲ? ಇದಕ್ಕೆ ಸಮಾಧಾನ, 'ನಾಲ್ಮೊಗನೊಳಿದ್ದು, ಗಗನಕೇಶನೊಳಿದ್ದು' ಎಂದಿದೆ

ಬ್ರಹ್ಮ ರುದ್ರ ಎಂದು ಹರಿಗೆ ಬರೀ ಹೆಸರುಗಳಲ್ಲ ಹರಿಗೆ ಬ್ರಹ್ಮ ಎಂದು ಒಂದು ರೂಪವಿದೆ ರುದ್ರ ಎಂದು ಇನ್ನೊಂದು ರೂಪವಿದೆ ಈ ರೂಪಗಳಲ್ಲಿ ಭೇದವಿಲ್ಲದಿದ್ದರೂ ವಿಶೇಷಬಲದಿಂದ ಬೇರೆ ಬೇರೆಯಾಗಿದ್ದು ಬೇರೆ ಬೇರೆ ಕಾರ್ಯ ಮಾಡುತ್ತವೆ ಬ್ರಹ್ಮ-ನಲ್ಲಿದ್ದು ಬ್ರಹ್ಮನನ್ನು ನಿಮಿತ್ತ ಮಾಡಿಕೊಂಡು ಅವನ ಮೂಲಕ ಸೃಷ್ಟಿಕಾರ್ಯ ನಡೆಸುವ ರೂಪ 'ಬ್ರಹ್ಮ' ಎಂಬ ರೂಪ ಶಿವನೊಳಗಿದ್ದು ಹಾಗೇ ಲಯಗೈವ ರೂಪ 'ರುದ್ರ' ಎಂಬ ರೂಪ 'ವಿಷ್ಣು' ಎಂಬ ರೂಪ ಬೇರೆಯಾಗಿಯೆ ಇದ್ದು ಪಾಲನೆ ಮಾಡುತ್ತದೆ

ಏಕೆ ಈ ವ್ಯತ್ಯಾಸ? ಎಂದರೆ, ಬ್ರಹ್ಮ ನಾಲ್ಮೊಗನಾಗಿದ್ದಾನೆ ನಾಲ್ಕು ಮುಖಗಳಿಂದ ನಾಲ್ಕು ದಿಕ್ಕುಗಳಲ್ಲಿಯೂ ಹರಿಯನ್ನು ಕಾಣುತ್ತಾನೆ ನಾಲ್ಕು ವೇದಗಳನ್ನೂ ಪಠಿಸುತ್ತ ಹರಿಯನ್ನು ಹೊಗಳುತ್ತಾನೆ ನಾಲ್ಕು ವೇದಗಳಲ್ಲಿ ಬರುವ ಶಬ್ದಗಳನ್ನು ಅನುಸರಿಸಿ ಅವುಗಳು ಹೇಳುವ ವಸ್ತುಗಳನ್ನು ವ್ಯಕ್ತಿಗಳನ್ನೂ ಸೃಷ್ಟಿಸುತ್ತಾನೆ ಆ ವಸ್ತುಗಳೂ ವ್ಯಕ್ತಿಗಳೂ ಹುಟ್ಟುವ ಮೊದಲೆ ಹೆಸರುಗಳು ವೇದದಲ್ಲಿ ಸಿದ್ಧವಾಗಿರುತ್ತವೆ ಹೀಗೆ ಆತ ಸೃಷ್ಟಿ ಮಾಡಲಿ ಎಂದೇ ಹರಿ ಮೊದಲಿಗೆ ಬ್ರಹ್ಮನನ್ನು ಹುಟ್ಟಿಸಿ ಅವನಿಗೆ ವೇದ ಉಪದೇಶಿಸಿರುತ್ತಾನೆ

ಶ್ವೇತಾಶ್ವತರ ಉಪನಿಷತ್ತು ಹಾಗೇ ಹೇಳುತ್ತಿದೆ—

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ
ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ॥

ರುದ್ರನು ಗಗನಕೇಶನೆನಿಸಿದ್ದಾನೆ ಸ್ವರ್ಗದಿಂದ ಇಳಿದ ಹರಿಪಾದೋದಕ ಗಂಗಾಜಲವನ್ನು ತಲೆಯಲ್ಲಿ ಧರಿಸುವಾಗ ಕೂದಲುಗಳನ್ನು ಗಗನದಲ್ಲೆಲ್ಲ ಹರಡಿಕೊಂಡು ನಿಂತ, ಹರಿಪಾದೋದಕದ ಒಂದು ತೊಟ್ಟು ನೆಲಕ್ಕೆ ಬೀಳದಿರಲೆಂದು ಎಚ್ಚರ ವಹಿಸಿದ, ಶಿವ ಏಕೆಂದರೆ ಒಂದು ತೊಟ್ಟು ಬಿದ್ದರೂ ಮಹಾಪಾಪ!

ಪದ್ಮಪುರಾಣ ಹೇಳಿದೆ—

ಪರಮಾಣುಸಮಂ ತೀರ್ಥಂ ಯಸ್ತು ಭೂಮೌ ವಿನಿಕ್ಷಿಪೇತ್ ।
ಬ್ರಹ್ಮಹತ್ಯಾಸಮಂ ತಸ್ಯ ಪಾಪಮಾಹುರ್ಮನೀಷಿಣಃ ॥

'ಒಂದು ಪರಮಾಣುವಿನಷ್ಟಾದರೂ ವಿಷ್ಣುಪಾದೋದಕ ನೆಲಕ್ಕೆ ಹಾಕಿದರೆ ಬ್ರಹ್ಮಹತ್ಯೆಗೆ ಸಮಾನವಾದ ಪಾಪ ಸಂಭವಿಸುವುದು'

ಹೀಗೆ ಭಕ್ತಿಯಿಂದ ಸರ್ವದುರಿತೋಪಶಮನವೆನಿಸಿದ ಹರಿಪಾದೋದಕವನ್ನು ತಲೆಯಲ್ಲಿ ಧರಿಸುವ ಶಿವನಿಗೆ ಸರ್ವಸಂಹಾರ ಮಾಡಿದರೂ ದುರಿತವಿಲ್ಲ ಅದರಿಂದ ಅವನ ಮೂಲಕವೆ ಸಂಹಾರ ಮಾಡಿಸುತ್ತಾನೆ ಶ್ರೀಹರಿ

**ಸಲಹುವ**

ವಿಷ್ಣುರೂಪದಿಂದ ಬೇರೆಯಾಗಿಯೆ ಇದ್ದು ಜಗತ್ತಿನ ಪಾಲನ ಮಾಡುತ್ತಾನೆ ವಾಮನಪುರಾಣ ಹೇಳುತ್ತದೆ—

ಬ್ರಹ್ಮವಿಷ್ಣ್ವೀಶರೂಪಾಣಿ ತ್ರೀಣಿ ವಿಷ್ಣೋರ್ಮಹಾತ್ಮನಃ ।
ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ ॥
ಪೃಥಗೇವ ಸ್ಥಿತೋ ವಿಷ್ಣುರೂಪೀ ದೇವೋ ಜನಾರ್ದನಃ ।

'ತ್ರಿಮೂರ್ತಿರೂಪದಿಂದ ಇರುವವನು ಒಬ್ಬನೇ ದೇವ, ಬ್ರಹ್ಮವಿಷ್ಣುಮಹೇಶ್ವರರಲ್ಲಿ ಭೇದವೆ ಇಲ್ಲ' ಎನ್ನುವುದನ್ನು ವಿಷ್ಣುರಹಸ್ಯ ಸ್ಪಷ್ಟವಾಗಿ ನಿರಾಕರಿಸಿದೆ—

ವಿಷ್ಣುರೇವ ಹರಿಃ ಸಾಕ್ಷಾತ್ ತಾವುಭೌ ನ ಹರೀ ಸ್ಮೃತೌ ।
ಆವಿಷ್ಟರೂಪೌ ವಿಜ್ಞೇಯೌ ಬ್ರಹ್ಮರುದ್ರಾಭಿಧಾಯುತೌ ॥

'ಬ್ರಹ್ಮರುದ್ರರು ಸಾಕ್ಷಾತ್ ವಿಷ್ಣುರೂಪರೇನಲ್ಲ ವಿಷ್ಣುವಿನ ಬ್ರಹ್ಮರುದ್ರನಾಮಕ ರೂಪಗಳಿಂದ ಆವಿಷ್ಟರಾದ್ದರಿಂದ ಬ್ರಹ್ಮರುದ್ರರೆನಿಸಿದವರು'

ಪಾಲನೆ ಎಂದರೆ ಅಧ್ಯಾತ್ಮದಲ್ಲಿ ಪ್ರಾಣಿಶರೀರಗಳೊಳಗೆ ಹರಿಯು ವಿಶ್ವ, ತೈಜಸ, ಪ್ರಾಜ್ಞ ರೂಪಗಳಿಂದಿದ್ದು ಜಾಗ್ರದಾದಿ ಅವಸ್ಥೆ ನೀಡಿ ಅನ್ನನಿದ್ರಾದಿಗಳ ಮೂಲಕ ಶರೀರ-ಮನಸ್ಸುಗಳಿಗೆ ಪೋಷಣೆ ನೀಡುತ್ತಾನೆ ಆದಿಭೂತದಲ್ಲಿ,

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥
ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್ ॥

ಎಂದು ಮುಂತಾಗಿ ಹೇಳುವಂತೆ ಪಂಚಭೂತಗಳಲ್ಲಿ ನೆಲೆಸಿ ಅವುಗಳ ಕಾರ್ಯಗಳನ್ನು ನಡೆಸಿ ಜಗತ್ತನ್ನು ಪೋಷಿಸುತ್ತಾನೆ ಆಧಿದೈವದಲ್ಲಿ 'ಪರಿತ್ರಾಣಾಯ ಸಾಧೂನಾಂ' ಎನ್ನುತ್ತಾ ನಾನಾ ಅವತಾರರೂಪಗಳಿಂದ ಅಧರ್ಮ ಅಳಿಸಿ, ಧರ್ಮ ಉಳಿಸಿ ಜಗತ್ತನ್ನು ಕಾಪಾಡು-ತ್ತಾನೆ ಇದು ಹರಿಯ ಕರುಣೆಗೆ ನಿದರ್ಶನವೆನ್ನುತ್ತಿದ್ದಾರೆ ದಾಸರಾಯರು.

ಪಾಲಕ ವಿಷ್ಣುರೂಪ ಕಾರುಣ್ಯಮೂರ್ತಿ ಎನ್ನೋಣ ಸೃಷ್ಟಿಲಯಕಾರಿ ಬ್ರಹ್ಮರುದ್ರ-ರೂಪಗಳು ನಿಷ್ಕರುಣಿಯಲ್ಲವೆ ಎಂಬ ಪ್ರಶ್ನೆಗೆ ಸಮಾಧಾನ ನೀಡಲು ಈ ಪದ್ಯದ ಉತ್ತರಾರ್ಧ ಹೊರಟಿದೆ

*ಸ್ವಗತಭೇದವಿವರ್ಜಿತನು*

ವಿಷ್ಣುವಿನ ಯಾವ ರೂಪಗಳಲ್ಲಿಯೂ ಪರಸ್ಪರ ಭೇದವಿಲ್ಲ

ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ

ಎಂದು ಬ್ರಹ್ಮಸೂತ್ರ ಹೇಳಿದೆ

ಏಕರೂಪಃ ಪರೋ ವಿಷ್ಣುಃ ಸರ್ವತ್ರಾಪಿ ನ ಸಂಶಯಃ ।
ಐಶ್ವರ್ಯಾದ್ ರೂಪಮೇಕಂ ಚ ಸೂರ್ಯವದ್ ಬಹುಧೇಯತೇ ॥

ಎಂದು ಮತ್ಸ್ಯಪುರಾಣ ಹೇಳಿದೆ ಆದರಿಂದ ಪಾಲನೆ ಮಾಡುವ ವಿಷ್ಣುರೂಪವನ್ನು ಕಾರುಣ್ಯಮೂರ್ತಿ ಎಂದು ಒಪ್ಪುವುದಾದರೆ ಬ್ರಹ್ಮರುದ್ರರೂಪಗಳೂ ಹಾಗೆಯೇ ಅವು-ಗಳಲ್ಲಿ ಭೇದವೆಣಿಸಲಾಗದು ಅವೆಲ್ಲವೂ ಒಂದೇ ಅಚಿಂತ್ಯಶಕ್ತಿಯಿಂದ ಒಂದೇ ಅನೇಕ-ವಾಗಿದೆಯಷ್ಟೆ

*ಸರ್ವಗ*

ಪ್ರಪಂಚದ ಕಣಕಣಗಳಲ್ಲಿಯೂ ಬೇರೆ ಬೇರೆ ರೂಪಗಳಿಂದ ನೆಲೆಸಿದ್ದಾನೆ ಹರಿ ಆ ಎಲ್ಲಾ ರೂಪಗಳೂ ಒಂದೇ ಆಗಿರುವುದರಿಂದ ಹರಿ ಎಲ್ಲೆಡೆ ವ್ಯಾಪಿಸಿದ್ದಾನೆ ಏಕೆ? ಎಲ್ಲೆಡೆ ಇರುವ ಭಕ್ತರ ರಕ್ಷಣೆಗೆ, 'ಕಣ್ಣಿಗೆವೆಯಂದದಲಿ' ಬಂದೊದಗುವುದಕ್ಕಾಗಿ ಎಂಬು-ದನ್ನು ಬೇರೆ ಹೇಳಬೇಕಾಗಿಲ್ಲ 'ಅಣುರೇಣುತೃಣಕಾಷ್ಠಪರಿಪೂರ್ಣ ಗೋವಿಂದ' ಎಂದು ಪುರಂದರದಾಸರು ಹೇಳಿದ್ದಾರೆ ಹೀಗೆ ಅನಂತರೂಪಗಳಿಂದ ಹರಿ ಎಲ್ಲೆಡೆ ವ್ಯಾಪಿಸಿದ್ದಾನೆ

ಹೊರತು ಒಂದು ನಿರಾಕಾರ ಅಖಂಡ ಪದಾರ್ಥವಾಗಿ ಆಕಾಶದಂತೆ ವ್ಯಾಪಿಸಿಲ್ಲ ಅಂಥ ರೂಪವೂ ಹರಿಗೆ ಉಂಟು ಎನ್ನುವ ಮಾತು ಬೇರೆ ಎಲ್ಲೆಡೆ ಅವನು ಒಳಹೊರಗೆ ವ್ಯಾಪಿಸಿ-ದ್ದರೂ ತಾನೂ ಆಯಾ ಸ್ಥಳಗಳ ವಸ್ತುಗಳ ವ್ಯಕ್ತಿಗಳ ಪ್ರಭಾವಕ್ಕೆ ಒಳಗಾಗಿ ದುಃಖಾದಿ-ದೋಷಗಳಿಗೆ ಪಕ್ಕಾಗುವುದಿಲ್ಲ ಸದಾ ಆನಂದರೂಪನೆ ಆಗಿರುತ್ತಾನೆ

*ಸದಾನಂದೈಕದೇಹನು*

ಪಾಲನೆಯನ್ನೇನೋ ಕರುಣೆಯ ಕಾರ್ಯವೆನ್ನಬಹುದು ಸೃಷ್ಟಿಯನ್ನು ಹಾಗೆನ್ನ-ಬಹುದೆ? ಹುಟ್ಟಿದಂದಿನಿಂದ ಪ್ರಾಣಿಗಳಿಗೆ ಹಸಿವು ತೃಷೆ ಜರೆ ಮರಣ ರೋಗ ರುಜಿನ-ಗಳೆಂದು ನಾನಾ ಬಗೆಯ ಪೀಡೆ ತಪ್ಪಿದ್ದಲ್ಲ ಅನೇಕ ವೇಳೆ ಬದುಕೇ ಬೇಡವೆಂದೆನಿಸ-ಬಹುದು ಪುರಂದರದಾಸರು ಹರಿಯನ್ನು ಕೇಳಿದ್ದುಂಟು

ಏಕೆನ್ನ ಈ ರಾಜ್ಯಕ್ಕೆಳೆತಂದೆ ಹರಿಯೆ?
ಸಾಕಲಾರದೆ ಎನ್ನನೇಕೆ ಪುಟ್ಟಿಸಿದೆ?

ಪ್ರಳಯವಂತೂ ಬಲು ನಿಷ್ಠುರವಾದ ಕ್ರೂರವಾದ ಕಾರ್ಯ ಬದುಕಿನಲ್ಲಿ ಎಷ್ಟು ನೊಂದರೂ 'ಸಾಯಲಾರೆನು' ಎನ್ನುತ್ತೇವೆ 'ಏತಿ ಜೀವಂದಮಾನಂದಂ ನರಂ ವರ್ಷ-ಶತಾದಪಿ' ಎಂದು ಆಶಾಭಾವನೆ ತಾಳುತ್ತೇವೆ ಇನ್ನು ಬದುಕು ಅದೃಷ್ಟವಶಾತ್ ಸುಂದರ-ವಾಗೇ ಇದ್ದರೆ ಕೇಳುವುದೇನು? ಆದರೂ, ಪುರಂದರದಾಸರೆ ಹೇಳುವಂತೆ,

ಅರ್ತಿಯಾಗಿದೆ ಬದುಕು, ಸಾಯಲಾರೆನು ಎನಲು
ಮೃತ್ಯು ಹೆಡತಲೆಯಲ್ಲಿ ನಗುತಿರ್ಪುದರಿಯ?

ಕರುಣಾಸಂಧಿಯಲ್ಲಿ ಹರಿಯ ಇಂಥ ನಿಷ್ಠುರವಾದ ಕಾರ್ಯವನ್ನೇಕೆ ವರ್ಣಿಸುತ್ತಿದ್ದಾರೆ, ದಾಸರಾಯರು? ಹರಿಯಾದರೂ ಇಂಥ ಕ್ರೂರ ಕಾರ್ಯವೇಕೆ ಮಾಡುತ್ತಾನೆ? ಈ ಪ್ರಶ್ನೆಗೆ ಉತ್ತರ 'ಸದಾನಂದೈಕದೇಹನು' ಎಂದು ಆನಂದ ಉದ್ರೇಕದಲ್ಲಿ ನಾವು ನಗುತ್ತೇವೆ ಕುಣಿಯುತ್ತೇವೆ ಏಕೆ ಎಂಬ ಪ್ರಶ್ನೆ ಇಲ್ಲಿ ಇಲ್ಲ ಸದಾ ಆನಂದವೆ ಮೈವೆತ್ತು ನಿಂತವ ಹರಿ ಆನಂದೋದ್ರೇಕದಿಂದಲೆ ಅವನು ಸೃಷ್ಟಿ ಸಂಹಾರ ಕಾರ್ಯ ನಡೆಸುತ್ತಾನೆ ಏಕೆ ಎಂದು ಕೇಳಕೂಡದು

ಹಾಗಾದರೆ ಪಾಲನೆಯೂ ಕರುಣೆಯ ಕಾರ್ಯವಲ್ಲ ಆನಂದೋದ್ರೇಕದಿಂದಲೆ ಏನೋ ಮಾಡುತ್ತಿದ್ದಾನೆ ಅದನ್ನು ಕರುಣೆ ಎಂದು ಪ್ರಶಂಸೆ ಮಾಡುವುದೆ? ಎಂಬ ಪ್ರಶ್ನೆ ಸಹಜ ಆದರೆ ಇದು ಬರಿ ಆನಂದೋದ್ರೇಕವಲ್ಲ ಹಾಗಿದ್ದರೆ ನಗುವುದು ಕುಣಿಯುವುದು ಮುಂತಾದುವನ್ನೆ ಮಾಡುತ್ತಿದ್ದ ವ್ಯವಸ್ಥಿತವಾಗಿ ಪರರಿಗೆ ಪ್ರಯೋಜನವಾಗಬಲ್ಲ ಕಾರ್ಯಗಳನ್ನೇ ಮಾಡುತ್ತಿರಲಿಲ್ಲ. ಈ ಅಪಾರವಾದ ಸೃಷ್ಟಿಯಲ್ಲಿ ಒಂದು ಸಣ್ಣ ತೃಣವೂ ವ್ಯರ್ಥವಲ್ಲ

ನಾಸ್ತಿ ಮೂಲಮನೌಷಧಮ್

ಏನು ಪ್ರಯೋಜನವೆಂದು ವಿಜ್ಞಾನ ನಿರಂತರ ಅನ್ವೇಷಣೆ ನಡೆಸುತ್ತಲೆ ಇದೆ ಹೊಸ ಹೊಸ ಪ್ರಯೋಗಗಳನ್ನು ಮಾಡಿ ಕಂಡು ಹಿಡಿಯುತ್ತಲೆ ಇದೆ ಸಂಹಾರಕಾರ್ಯವೂ ಹೀಗೆ ಪ್ರಯೋಜನಕಾರಿಯೆ ಆಗಿದೆ

ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ
ಕಲ್ಪಾವಸಾನೇ ಚ ಯಃ

'ಒಂದು ಕಲ್ಪಕಾಲವಿಡೀ ನಾನಾ ಯೋನಿಗಳಲ್ಲಿ ಸುತ್ತಿ ಸುತ್ತಿ ಬಸವಳಿದ ಸಂಸಾರಿ ಜೀವರಿಗೆ ಒಂದು ಕಲ್ಪ ಕಾಲ ಗಾಢನಿದ್ರೆಯ ವಿಶ್ರಾಂತಿ ಸುಖ ನೀಡುವುದಕ್ಕಾಗಿ ಕಾರುಣ್ಯವಾತ್ಸಲ್ಯ-ಗಳಿಂದ ಪ್ರೇರಿತನಾಗಿಯೆ ಹರಿ ಬ್ರಹ್ಮಪ್ರಳಯ ಮಾಡುತ್ತಾನೆ' ಎಂದು ತತ್ವನಿರ್ಣಯ ಟೀಕೆಯಲ್ಲಿ ಹೇಳಿದೆ ಹೀಗೆ ಸಾರ್ಥಕವಾದ ಕಾರ್ಯವನ್ನೆ ಏಕೆ ಮಾಡುತ್ತಾನೆ ಹರಿ? ತನಗೆ ಅದರಿಂದ ಏನೂ ಆಗಬೇಕಾಗಿಲ್ಲ ತಾನು ಆನಂದಮಯ ಅದರಿಂದ ಕರುಣೆ ಎಂದೆ ಹೇಳಬೇಕು

'ಆನಂದೈಕದೇಹ' ಎಂದರೆ 'ಆನಂದ ಒಂದೇ ಶರೀರವಾಗಿದೆ, ಕರುಣೆಯಲ್ಲ' ಎಂದೇನೂ ತಿಳಿಯಬಾರದು 'ಆನಂದ ಒಂದೇ' ಎಂದರೆ ಪ್ರಾಕೃತ ಪಾಂಚಭೌತಿಕ ಜಡಶರೀರ ಅವನಿಗೆ ಇಲ್ಲ ಎಂದರ್ಥ ಅದರಿಂದ ಆನಂದ ಜ್ಞಾನ ಬಲ ಕಾರುಣ್ಯ ಎಂದಂತಾಯಿತು ಇಂಥ ಶ್ರೀಹರಿಯನ್ನು ಉಪಾಸನೆ ಮಾಡುವ ಬಗೆ ಹೇಗೆ? ನಮ್ಮ ಕಣ್ಣು ಜಡ ಪಾಂಚಭೌತಿಕ ವಸ್ತುವನ್ನು ಮಾತ್ರ ಕಾಣಬಲ್ಲುದು ಚಿನ್ಮಯನಾದ ಹರಿಯನ್ನು ಕಾಣುವುದೆಂತು? ಉಪಾಸನೆ ಮಾಡುವುದೆಂತು? ಇದಕ್ಕೆ ಉತ್ತರ 'ಬಗೆಬಗೆಯ ನಾಮದಲಿ ಕರೆಸುವ'

*ಬಗೆಬಗೆಯ ನಾಮ*

ಹರಿನಾಮಗಳು ಬರಿ ನಾಮಗಳಲ್ಲ, ಅನ್ವರ್ಥನಾಮಗಳು ಕೇವಲ ವ್ಯಕ್ತಿವಾಚಕಗಳಲ್ಲ ವ್ಯಕ್ತಿಯ ಜೊತೆಗೆ ಅವನ ಗುಣಗಳನ್ನೂ ಹೇಳುತ್ತವೆ ಹರಿ ಅನಂತಗುಣಗಣಸಾಗರ ಅವನ ಗುಣಗಳನ್ನು ಹೇಳಲು ಎಷ್ಟು ಶಬ್ದಗಳಿದ್ದರೂ ಸಾಲವು ಬರಿ ವ್ಯಕ್ತಿವಾಚಕವಾಗಿದ್ದರೆ ಯಾವುದಾದರೊಂದು ನಾಮ ಸಾಕಾಗಿತ್ತು ಏಕೆ ಶತನಾಮಗಳು? ಏಕೆ ಸಹಸ್ರನಾಮಗಳು?

ನಾಮಗಳು ಹರಿಯ ಗುಣಗಳನ್ನು ತಿಳಿಸಿಕೊಡುವ ರೀತಿ ಬಗೆಬಗೆಯಾಗಿದೆ ಅದರಿಂದ ನಾಮಗಳೂ ಬಗೆಬಗೆಯಾಗಿವೆ ಉದಾ—

೧ ನಾರಾಯಣ ಕೇಶವಾದಿ ಪ್ರಸಿದ್ಧ ಹರಿನಾಮಗಳು ಇವು ಸ್ಪಷ್ಟವಾಗಿ ಹರಿಯ ಗುಣಗಳನ್ನು ಹೇಳುತ್ತಿವೆ

೨ ಬ್ರಹ್ಮ ರುದ್ರ ಇಂದ್ರ ಮುಂತಾದ ಅನ್ಯದೇವತಾನಾಮಗಳು ಇವು ಹರಿನಾಮಗಳೆ ಆದರೆ ಮೇಲುನೋಟಕ್ಕೆ ಅನ್ಯ ದೇವತೆಗಳ ಗುಣಗಳನ್ನು ಹೇಳುತ್ತವೆ ಈ ಗುಣಗಳು ಅವರಲ್ಲಿ ಬರಿ ಅಲ್ಪ ಪ್ರಮಾಣದಲ್ಲಿರುತ್ತವೆ ಹರಿಯ ಅಧೀನವೂ ಆಗಿರುತ್ತವೆ ಅವನ ಅನುಗ್ರಹದಿಂದಲೆ ಅವರಲ್ಲಿ ಆ ಗುಣಗಳು ಬೆಳಗುತ್ತವೆ ಅದರಿಂದ ಜ್ಞಾನಿಗಳ ವ್ಯವಹಾರ-ದಲ್ಲಿ ಈ ನಾಮಗಳು ಹರಿನಾಮಗಳೆ ಆಗಿರುತ್ತವೆ ಹರಿಯ ಗುಣಗಳನ್ನೇ ಹೇಳುತ್ತವೆ ಆ ಗುಣಗಳು ಹರಿಯಲ್ಲಿ ಪೂರ್ಣಪ್ರಮಾಣದಲ್ಲಿಯೆ ಇರುತ್ತವೆ ಇನ್ನೊಬ್ಬರ ಅನುಗ್ರಹ-ವಿಲ್ಲದೆಯೆ ಸ್ವಯಂ ಸಿದ್ಧವಾಗಿರುತ್ತವೆ ಅನ್ಯ ದೇವತೆಗಳಲ್ಲಿ ಹಾಗಲ್ಲ ಕಾದ ಕಬ್ಬಿಣ ಸುಡು-ವುದು ಒಳಗೆ ಇರುವ ಬೆಂಕಿಯ ಪ್ರಭಾವ ಬೆಂಕಿ ಸುಡುವುದು ಬೆಂಕಿಯ ಸ್ವಭಾವ ಹಾಗೇ ಬ್ರಹ್ಮಾದಿಶಬ್ದಗಳಿಂದ ತಿಳಿದುಬರುವ ಗುಣಗಳು ಬ್ರಹ್ಮಾದಿಗಳಲ್ಲಿ ಕಾಣುವುದು ಅವರೊಳಗೆ ಅಂತರ್ಯಾಮಿಯಾಗಿ ನೆಲೆಸಿರುವ ಹರಿಯ ಸನ್ನಿಧಾನದ ಪ್ರಭಾವ ಹರಿಯಲ್ಲಿ ಅದು ಸ್ವಭಾವ

೩ ಅಕ್ಷರ ಭೂಮ ಮುಂತಾದ ಸಾಧಾರಣ ನಾಮಗಳು ಹರಿಗೂ ಅನ್ಯ ದೇವತೆ-ಗಳಿಗೂ ಸಲ್ಲುವಂಥವು 'ಅಕ್ಷರ' ಎಂದರೆ ಶರೀರನಾಶವಿಲ್ಲದವಳು ಮಹಾಲಕ್ಷ್ಮಿಯೂ ಆಗಬಹುದು, ಶರೀರನಾಶವಿಲ್ಲದ ಹರಿಯೂ ಆಗಬಹುದು ಆದರೆ ಈ ಮಹಿಮೆ ಲಕ್ಷ್ಮಿ-ಯಲ್ಲಿ ಹರಿಯ ಅಧೀನ, ಹರಿಯಲ್ಲಿ ಸ್ವಯಂಸಿದ್ಧ

೪ ದುಃಖಿ ಬದ್ಧ ಅಜ್ಞ ಅಶಕ್ತ ಮುಂತಾದ ಜೀವನಾಮಗಳು ಈ ನಾಮಗಳು ಹೇಳುವ ದುಃಖ, ಬಂಧ, ಅಜ್ಞಾನ, ಅಶಕ್ತಿ ಮುಂತಾದ ದೋಷಗಳು ಜೀವರಲ್ಲಿ ವಾಸ್ತವವಾಗಿದ್ದರೂ ಅವು ಹರಿಗೆ ಅಧೀನವಾಗಿವೆ ಒಂದು ನಾಮ ಒಬ್ಬ ವ್ಯಕ್ತಿಗೆ ಸಲ್ಲಬೇಕಾದರೆ ಆ ನಾಮ ಹೇಳುವ ಗುಣ ಅಥವಾ ದೋಷ ಆ ವ್ಯಕ್ತಿಯಲ್ಲಿ ಇರಬೇಕೆಂದಿಲ್ಲ ಅದು ಅವನ ವಶವಾಗಿ-ದ್ದರೂ ಆ ನಾಮ ಸಲ್ಲುವುದುಂಟು ಉದಾ—ಧನಿಕ ಧನ ಧನಿಕನ ಕೈಯಲ್ಲಿಯೆ ಇರಬೇಕಾ-ಗಿಲ್ಲ ಅದರ ಒಡೆತನ ಸಾಕು ಹಾಗೇ ಹರಿಯಲ್ಲಿ ದುಃಖಾದಿಗಳಿಲ್ಲದಿದ್ದರೂ ಅವು ಹರಿಯ ಅಧೀನವಾದ್ದರಿಂದ ಆ ಅರ್ಥದಲ್ಲಿ ಹರಿಯನ್ನು ದುಃಖಿ, ಬದ್ಧ ಎಂದು ಮುಂತಾಗಿ ಕರೆಯಬಹುದು ಲೋಕದಲ್ಲಿ ರಾಜ ಅಪರಾಧಿಯನ್ನು ಬಂಧಿಸಿದಾಗ ಅಪರಾಧಿಯ ಬಂಧನ ರಾಜನ ಅಧೀನವಾದರೂ ರಾಜನನ್ನು ಬದ್ಧನೆನ್ನುವುದಿಲ್ಲ, ನಿಜ ಆದರೆ ರಾಜ ತಾನೆ ಬದ್ಧನಾಗುವ ಸಾಧ್ಯತೆಯೂ ಇರುವುದರಿಂದ ಗೊಂದಲ ಉಂಟಾದೀತೆಂದು ರಾಜ-ನನ್ನು ಬದ್ಧನೆನ್ನುವುದಿಲ್ಲ ಹರಿಯಲ್ಲಿ ಯಾವ ದೋಷಕ್ಕೂ ಅವಕಾಶವಿಲ್ಲದಿರುವುದರಿಂದ ಬದ್ಧ ಮುಂತಾದ ನಾಮಗಳನ್ನು ಒಪ್ಪಬಹುದು ಲೋಕದಲ್ಲಿ ಹೊಟ್ಟೆಬಾಕನೆಂದರೆ ಕೆಟ್ಟ ಶಬ್ದ ಪರಮಾತ್ಮನಲ್ಲಿ ಮಾತ್ರ ಪ್ರಳಯಕಾಲದಲ್ಲಿ ಬ್ರಹ್ಮಾಂಡವನ್ನೇ ನುಂಗುವ ಸಂಹಾರ-ಮೂರ್ತಿ ಎಂಬ ಅರ್ಥ ಸ್ವಾಭಾವಿಕವಾಗಿ ಬರುವುದರಿಂದ ಅದೂ ಒಳ್ಳೆಯ ಶಬ್ದವೆ

ಈ ಸಮುದ್ರಘೋಷ, ಸಿಡಿಲಿನ ಗರ್ಜನೆ, ಬಿರುಗಾಳಿಯ ಶಬ್ದ, ಮೃಗಪಕ್ಷಿಗಳ ಕೂಗು, ಜಾಗಟೆ ಧ್ವನಿ, ವಾದ್ಯಘೋಷ ಮುಂತಾದವು ಲೋಕದಲ್ಲಿ ಯಾವ ವ್ಯಕ್ತಿಯ ಅಥವಾ ವಸ್ತುವಿನ ನಾಮವಲ್ಲದಿದ್ದರೂ ಜ್ಞಾನಿಗಳ ದೃಷ್ಟಿಯಲ್ಲಿ ಹರಿನಾಮಗಳೆ. ಅವು ಹರಿಯ ಬಲ, ಪರಾಕ್ರಮ, ಧೈರ್ಯಗಾಂಭೀರ್ಯಾದಿ ಸದ್ಗುಣಗಳನ್ನೆ ಹೇಳುತ್ತವೆ. ಇದನ್ನು ತಿಳಿದ ಜ್ಞಾನಿ ಒಂದು ಹಲ್ಲಿ ಲೊಚಗುಟ್ಟಿದರೂ ಹರಿಯ ಮಹಿಮೆ ಅದ್ಭುತವೆಂದು ಅರ್ಥ ಅನು-ಸಂದಾನ ಮಾಡುತ್ತ ಹರಿಯನ್ನು ಉಪಾಸನೆ ಮಾಡಬಲ್ಲ.

ಹೀಗೆ ಬಗೆಬಗೆಯ ನಾಮಗಳಿಂದ ಕರೆಸುತ್ತ ಹರಿಭಕ್ತರ ಉಪಾಸನೆಗೆ ಸುಲಭವಾಗಿ ಸಿಗುತ್ತಾನೆ. ಅವರನ್ನು ಪೊರೆಯುತ್ತಾನೆ. ಇದು ಹರಿಯ ಅಪಾರ ಕರುಣೆಯೆ ಸರಿ.

**ಒಬ್ಬನಲಿ ನಿಂತಾಡುವನು ಮ-**
**ತ್ತೊಬ್ಬನಲಿ ನೋಡುವನು ಬೇಡುವ-**
**ನೊಬ್ಬನಲಿ ನೀಡುವನು ಮಾತಾಡುವನು ಬೆರಗಾಗಿ ।**
**ಅಬ್ಬರದ ಹೆದ್ದೈವನಿವ ಮ-**
**ತ್ತೊಬ್ಬರನು ಲೆಕ್ಕಿಸನು ಲೋಕದೊ-**
**ಳೊಬ್ಬನೇ ತಾ ಬಾಧ್ಯ ಬಾಧಕನಾಹ ನಿರ್ಭೀತ ॥ ೯ ॥**

೧ ಒಬ್ಬನಲ್ಲಿನಿಂತು ಆಡುವವನೂ ಅವನೆ, ಮತ್ತೊಬ್ಬನಲ್ಲಿನಿಂತು ನೋಡುವವನೂ ಅವನೆ. ಆಡುವುದು, ಆಡುವುದನ್ನು ನೋಡುವುದು—ಈ ಎರಡೂ ವಿರುದ್ಧ ಕ್ರಿಯೆಗಳನ್ನು ಬೇರೆ ಬೇರೆ ಇಬ್ಬರಲ್ಲಿ ನಿಂತು ಒಬ್ಬನೆ ಹರಿ ಮಾಡುತ್ತಾನೆ. ಹಾಗೇ ಒಬ್ಬನಲ್ಲಿ ನಿಂತು ಬೇಡುವನು, ಮತ್ತೊಬ್ಬನಲ್ಲಿ ನಿಂತು ನೀಡುವನು. ಈ ವಿರುದ್ಧ ಕ್ರಿಯೆಗಳನ್ನು ಒಬ್ಬನೆ ಮಾಡಿ ಇನ್ನೊಬ್ಬನಲ್ಲಿ ನಿಂತು ಬೆರಗಾಗಿ ನೋಡಿ ಹೊಗಳಿಕೆಯ ಮಾತನ್ನಾಡುತ್ತಾನೆ! ಅಬ್ಬರದ ಹೆದ್ದೈವ ಇವ! ಏಕೆ ಹೀಗೆ ಮಾಡುವಿ ಎಂದು ಇವನಿಗೆ ಹೇಳುವರಿಲ್ಲ, ಕೇಳು-ವರಿಲ್ಲ! ಏಕೆಂದರೆ ಹೇಳುವ ಕೇಳುವ ಮತ್ತೊಬ್ಬರನ್ನು ಇವ ಲೆಕ್ಕಿಸನು! ಆತ ಜಗದುದರ-ನಾಗಿದ್ದೂ ಹಿಡಿ ಮಣ್ಣು ತಿಂದ. ಗೋಪಿ ಕೇಳಿದಳು, 'ಏಕೋ, ಮಣ್ಣು ತಿಂದಿ?' ಅದಕ್ಕೆ ಸಣ್ಣ ಬಾಯಿ ತೆರೆದು ದೊಡ್ಡ ಬ್ರಹ್ಮಾಂಡವನ್ನೆ ತೋರಿ ಅಂಜಿಸಿದ! ಆದರೂ ಭಕ್ತವಾತ್ಸಲ್ಯ ಅವನಿಗೆ! ಕರುಕಟ್ಟುವ ಹಗ್ಗ ತಂದು ಅವನನ್ನು ಕಟ್ಟಿದಳು ಅವಳು. ಅವನು ಕಟ್ಟಿಸಿಕೊಂಡ! ಮುಂದೆ ಕೌರವನೂ ಕಟ್ಟಲು ಬಂದ. ಆಗ ವಿಶ್ವರೂಪ ತೋರಿ ಅಂಜಿಸಿದ, ಕುರುಕ್ಷೇತ್ರ ಯುದ್ಧದಲ್ಲಿ ಅವನಿಗೆ ಸರ್ವನಾಶ ತಂದಿತ್ತ! ಗೋಪಿಗೆ ಬಾಧ್ಯನಾದ, ಕೌರವನಿಗೆ ಬಾಧಕ-ನಾದ! ಹೀಗೆ ಭಕ್ತರಿಗೆ ಬಾಧ್ಯ, ದ್ವೇಷಿಗಳಿಗೆ ಬಾಧಕನಾಗುತ್ತಾನೆ. ಸ್ವತಂತ್ರ ಆತ. ನಿರ್ಭೀತ, ಯಾರಿಗೆ ಭಯಪಡಬೇಕು?

೨ ಅಥವಾ ಜೀವರ ಮೋಕ್ಷಸಾಧನೆಯ ಆಟ ಇದು ಒಬ್ಬ ಶಿಷ್ಯನಲ್ಲಿ ನಿಂತು ಹರಿ ಆಡುತ್ತಾನೆ, ಅಂದರೆ ಓಡಾಡುತ್ತಾನೆ, ಕರ್ಮಾಚರಣೆ ಮಾಡುತ್ತಾನೆ ಮತ್ತೆ ಒಬ್ಬ ಗುರು-ವಿನಲ್ಲಿ ನಿಂತು ಶಿಷ್ಯನ ಕರ್ಮಾಚರಣೆಯನ್ನು ನೋಡುತ್ತಾನೆ, ತಪ್ಪಿದ್ದರೆ ಸರಿಪಡಿಸುತ್ತಾನೆ ಹೀಗೆ ಕರ್ಮಾಚರಣೆಯಿಂದ ಅಂತಃಕರಣಶುದ್ಧಿ ಪಡೆದ ಒಬ್ಬನಲ್ಲಿ ನಿಂತು ಜ್ಞಾನವನ್ನು ಬೇಡುತ್ತಾನೆ ಮತ್ತೆ ಒಬ್ಬ ಗುರುವಿನಲ್ಲಿ ನಿಂತು ಜ್ಞಾನ ನೀಡುತ್ತಾನೆ ಈ ಜ್ಞಾನಸಾಧನೆಯನ್ನು ಕಂಡು ಬೆರಗಾಗುತ್ತ ಮತ್ತೆ ಒಬ್ಬನಲ್ಲಿ ನಿಂತು ಪ್ರಶಂಸೆಯ ಮಾತುಗಳನ್ನಾಡುತ್ತಾನೆ ಹೀಗೆ ಹರಿ ತಾನೆ ಸಾಧನಕ್ಷೇತ್ರದಲ್ಲಿ ಎಲ್ಲವನ್ನೂ ನಿರ್ವಹಿಸುತ್ತಾನೆ ತನ್ನ ಸಾಮರ್ಥ್ಯಕ್ಕೆ ತಾನೆ ಬೆರಗಾಗುತ್ತಾನೆ ಹೆದ್ದೈವನಿವ, ಇದನ್ನು ಮಾಡಲು ಬೇರೆ ಯಾರ ಸಹಾಯವನ್ನೂ ಲೆಕ್ಕಿಸುವುದಿಲ್ಲ

ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ

'ಎಲ್ಲ ಗುರುಗಳಿಗೂ ಗುರು, ಎಲ್ಲ ಶಾಸ್ತ್ರಗಳಿಗೂ ಮೂಲ ಬಾದರಾಯಣರೇ' ಅವರು ಒಬ್ಬರೇ ಬಾಧ್ಯವಾದ ಸಂಸಾರಕ್ಕೆ ಬಾಧಕರೆನಿಸುತ್ತಾರೆ

ಕರ್ಮನಿರ್ಣಯದಲ್ಲಿ ಹೇಳಿದೆ

ಸಂಶ್ಲೇಷಾದೋದನಂ ಕರ್ಮ ವಚ್ಯಮಾನಂ ಗಿರೈವ ಹಿ ।
ಅಭಿನದ್ ಭಗವಾನ್ ವ್ಯಾಸಃ ಸ್ವಭಕ್ತಾನಾಮಶೇಷತಃ ॥

'ಭಕ್ತರಾದ ಸಂಸಾರಿಗಳಲ್ಲಿ ಗಾಢವಾಗಿ ಹತ್ತಿಕೊಂಡಿದ್ದು ದುಃಖಕಾರಣವಾಗಿರುವ ದುಷ್ಕರ್ಮಬಂಧನವನ್ನು ಭಗವಾನ್ ವ್ಯಾಸರು ವೇದಾಧ್ಯಯನದ ಮೂಲಕ ಸುಟ್ಟು ನಾಶಮಾಡುತ್ತಾರೆ ಸ್ವಯಂ ನಿತ್ಯಮುಕ್ತರಾಗಿದ್ದು ಸಂಸಾರಭಯರಹಿತರು ನಿರ್ಭೀತರು ಅವರು!

೩ ಅಥವಾ

'ನರನ ರಥವಾಜಿಯ ಸೂತ್ರವನೆ ಹಿಡಿದು
ಬೊಂಬೆಯಾಟವನಾಡಿಸಿದೆ, ಮಹಾಭಾರತದ ಬೊಂಬೆಯಾಟವನಾಡಿಸಿದೆ!

ಎಂದು ಕನಕದಾಸರು ಹೇಳುವಂತೆ ಇದೊಂದು ಬೊಂಬೆಯಾಟ ಒಬ್ಬ ದುರ್ಯೋ-ಧನನಲ್ಲಿ ನಿಂತು ಧಾರ್ಮಿಕರಾದ ಪಾಂಡವರೊಡನೆ ಜಗಳಾಡುವನು ಮತ್ತೆ ಒಬ್ಬ ಭೀಷ್ಮಾದಿ ಗುರುಜನರಲ್ಲಿನಿಂತು ಅಸಹಾಯನಂತೆ ನೋಡುವನು ಒಬ್ಬ ಧರ್ಮರಾಜನಲ್ಲಿ ನಿಂತು ದ್ರುಪದಾದಿ ಸಜ್ಜನರ ಸಹಾಯ ಬೇಡುವನು ಮತ್ತೊಬ್ಬ ದ್ರುಪದಾದಿ ಆಪ್ತನಲ್ಲಿ ನಿಂತು ಸಹಾಯ ನೀಡುವನು ಬಳಿಕ ನಡೆಯುತ್ತದೆ ಮಹಾಭಾರತ ಯುದ್ಧ ಮೇಲೆ ನಿಂತು ನೋಡುವ ಒಬ್ಬ ದೇವ ಋಷಿ ಮುಂತಾದ ಪ್ರೇಕ್ಷಕನಲ್ಲಿ ನಿಂತು ಬೆರಗಾಗಿ ಭಲೆ ಭಲೆ ಎಂದುಮುಂತಾಗಿ ಪ್ರಶಂಸೆಯ ಮಾತನ್ನಾಡುತ್ತಾನೆ ಅಬ್ಬರದ ಮಹಾಮಹಿಮೆಯ

ದೈವನಿವ ಸೂತ್ರಧಾರನಾಗಿ ನಿಂತು ಕುರುಕ್ಷೇತ್ರದ ನೆಲವನ್ನು ಭೀಕರ ಮಹಾರಣರಂಗ-ವನ್ನಾಗಿ ಮಾಡುತ್ತಾನೆ ಇನ್ನೊಬ್ಬರನ್ನು ಲೆಕ್ಕಿಸುವುದಿಲ್ಲ ಸಂಧಾನದ ನಾಟಕವಾಡಿದನಷ್ಟೆ ಸಂಧಾನ ಅವನಿಗೆ ಬೇಕಾಗಿರಲಿಲ್ಲ ದುರ್ಯೋಧನನ ದೌರ್ಜನ್ಯವನ್ನು ಲೋಕಕ್ಕೆ ತೋರಿ-ಸಲೆಂದೇ ಸಂಧಿ ಮಾಡಿಸುವ ರಾಯಭಾರಿಯಂತೆ ಬಂದ ಮೊದಲಿಂದಲೂ ಪಾಂಡವರ ಸೌಜನ್ಯ, ದಯೆ, ಕ್ಷಮೆ ಮುಂತಾದ ಗುಣಗಳನ್ನು ತೋರಿಸಲೆಂದೇ ಅವರನ್ನು ಕೌರವರಿಂದ ಅರಗಿನ ಮನೆ, ವಿಷದ ಲಡ್ಡು ಮುಂತಾದ ಬಗೆಯಿಂದ ಬಾಧ್ಯರನ್ನಾಗಿ ಮಾಡಿ ಅವರೊಳಗೆ ನಿಂತು ಎಲ್ಲವನ್ನೂ ಸಹಿಸುವ ಶಕ್ತಿ ನೀಡಿದ ಬಳಿಕ ಅವರನ್ನೆ ಕೌರವರಿಗೆ ಬಾಧಕರನ್ನಾಗಿ ಮಾಡಿ ಅವರೊಳಗೆ ನಿಂತು ಅವರ ಮೂಲಕ ಕೌರವನ್ನು ನಾಶಪಡಿಸಿದ ನಿರ್ಭೀತನೀತ

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥

ಎಂದು ಸಾರಿ ಹೇಳುತ್ತಲೇ ಅದರಂತೆ ನಡೆದು ತೋರಿದ

೪ ಅಥವಾ ಇದೊಂದು ಡೊಂಬರಾಟ ಡೊಂಬರಾಟದಲ್ಲಿ ಒಬ್ಬ ಆಟಗಾರ ಆಟ-ವಾಡುತ್ತಾನೆ ಪ್ರೇಕ್ಷಕವರ್ಗ ನೋಡುತ್ತದೆ ಆಟಗಾರನ ಕಡೆಯವ ಒಬ್ಬ ಹಣ ಬೇಡುತ್ತಾನೆ ಪ್ರೇಕ್ಷಕರಲ್ಲಿ ಒಂದು ವರ್ಗ ಹಣ ನೀಡುತ್ತದೆ ಇನ್ನೊಂದು ವರ್ಗ ಬೆರಗಾಗಿ ಕೇವಲ ಪ್ರಶಂಸೆ ಮಾಡುತ್ತದೆ ಆದರೆ ವಸ್ತುತಃ ಹರಿಯೆ ಒಬ್ಬನಲ್ಲಿ ನಿಂತು ಆಡುತ್ತಾನೆ, ಒಬ್ಬನಲ್ಲಿ ನಿಂತು ನೋಡುತ್ತಾನೆ ಮತ್ತೊಬ್ಬನಲ್ಲಿ ನಿಂತು ಬೇಡುತ್ತಾನೆ ಇನ್ನೊಬ್ಬನಲ್ಲಿ ನಿಂತು ನೀಡು-ತ್ತಾನೆ ಪುನಃ ಇನ್ನೊಬ್ಬನಲ್ಲಿ ನಿಂತು ಬೆರಗಾದವನಂತೆ ಮಾತನಾಡುತ್ತಾನೆ ಅವರೆಲ್ಲ ಕೇವಲ ಬೊಂಬೆಗಳು ಇದು ಬೊಂಬೆಯಾಟವೆಂದರೂ ಸರಿಯೆ, ಡೊಂಬರಾಟವೆಂದರೂ ಸರಿಯೆ ಹೊಟ್ಟೆಪಾಡಿಗಾಗಿ ನಿತ್ಯಸಂಸಾರಿ ಜೀವರು ನಡೆಸುವ ಆಟವೆಲ್ಲ ಡೊಂಬರಾಟವೆ ಹರಿಗೆ ಇದು ಬೊಂಬೆಯಾಟವೆ ಅಬ್ಬರದ ಹಿರಿಯ ದೈವ ಆತ ನಿತ್ಯ ಸಂಸಾರಿಗಳನ್ನು ಹೀಗೆ ನಿತ್ಯ ದುಡಿಸಿ ದುಡಿಸಿ ಸುಖದುಃಖ ಉಣಿಸುವ ಏಕೆ ಎಂದು ಅವನನ್ನು ಯಾರೂ ಕೇಳುವವರಿಲ್ಲ ಕೇಳುವ ಅನ್ಯರನ್ನು ಅವನು ಲೆಕ್ಕಿಸುವುದಿಲ್ಲ ಏಕೆಂದರೆ ಅವನು ಅಬಾಧ್ಯ ಯಾರೂ ಅವನನ್ನು ಬಾಧಿಸಲಾರರು ಅವನೆ ತನ್ನನ್ನು ವಿರೋಧಿಸುವವರಿಗೆ ಬಾಧಕ-ನಾಗುತ್ತಾನೆ ಅವನಿಗೆ ಯಾರ ಭಯ? ಆತ ನಿರ್ಭೀತ

೫ ಅಥವಾ ಜೀವರ ಶರೀರ ಇಂದ್ರಿಯ ಅಂತಃಕರಣಗಳನ್ನು ಹರಿ ಪ್ರೇರಿಸುವ ವೈಖರಿ ಇದು ಒಬ್ಬನಲ್ಲಿ ನಿಂತು ಕರ್ಮೇಂದ್ರಿಯಗಳಿಗೆ ಪ್ರೇರಣೆ ನೀಡಿ ಓಡಾಟದ ತೀರ್ಥ-ಯಾತ್ರಾದಿ ಕರ್ಮ ಮಾಡುತ್ತಾನೆ, ಮಾಡಿಸುತ್ತಾನೆ ಮತ್ತೆ ಒಬ್ಬನಲ್ಲಿ ನಿಂತು ಜ್ಞಾನೇಂದ್ರಿಯ-ಗಳಿಗೆ ಪ್ರೇರಣೆ ನೀಡಿ ತೀರ್ಥಕ್ಷೇತ್ರಗಳನ್ನು ಭಗವಂತನ ವಿಗ್ರಹಗಳನ್ನು ನೋಡುವುದು, ಭಗವಂತನ ಚರಿತ್ರೆ ಕೇಳುವುದು, ಭಗವಂತನ ನಿರ್ಮಾಲ್ಯವನ್ನು ಆಘ್ರಾಣಿಸುವುದು ಮುಂತಾದ ಕ್ರಿಯೆಗಳನ್ನು ಮಾಡುತ್ತಾನೆ, ಮಾಡಿಸುತ್ತಾನೆ ಮತ್ತೆ ಒಬ್ಬನಲ್ಲಿ ನಿಂತು ಮನಸ್ಸನ್ನು

ಪ್ರೇರಿಸಿ ಐಹಿಕ ಆಮುಷ್ಮಿಕ ಸುಖಭೋಗಗಳ ಅಥವಾ ಮೋಕ್ಷಸುಖಾ- ನುಭವದ ಬಯಕೆ ಮೂಡಿಸಿ ಅವುಗಳನ್ನು ಬೇಡುವಂತೆ ಮಾಡುತ್ತಾನೆ ಮತ್ತೆ ಒಬ್ಬನಲ್ಲಿ ನಿಂತು ಶರೀರವನ್ನು ಪ್ರೇರಿಸಿ ಯಾಗ, ದಾನ, ಹೋಮ ಮುಂತಾದ ರೂಪದಲ್ಲಿ ಸತ್ಪಾತ್ರರಿಗೆ ದ್ರವ್ಯವನ್ನು ನೀಡುವಂತೆ ಮಾಡುತ್ತಾನೆ ಮತ್ತೆ ಒಬ್ಬನಲ್ಲಿ ನಿಂತು ವಾಗಿಂದ್ರಿಯಕ್ಕೆ ಪ್ರೇರಣೆ ನೀಡಿ ತನ್ನ ಸಾಮರ್ಥ್ಯದ ಬಗ್ಗೆ ಬೆರಗಿಂದ ಪ್ರಶಂಸೆಯ ಮಾತನ್ನಾಡಿಸುತ್ತಾನೆ ಸ್ತೋತ್ರ ಮಾಡಿಸಿಕೊಳ್ಳು- ತ್ತಾನೆ ಹೀಗೆ ಜ್ಞಾನಕರ್ಮೇಂದ್ರಿಯಗಳಿಗೂ ಶರೀರ, ಮನಸ್ಸು, ವಾಕ್, ರೂಪ, ಕರಣತ್ರಯಗಳಿಗೂ ಪ್ರೇರಣೆ ನೀಡಿ ಸಾತ್ವಿಕರಿಂದ ನಾನಾ ಬಗೆಯ ಮೋಕ್ಷಸಾಧನೆ ಮಾಡಿ- ಸುತ್ತಾನೆ ಅದೇ ರೀತಿ ರಾಜಸತಾಮಸರಿಂದಲೂ ಅವರಿಗೆ ತಕ್ಕ ಸಾಧನೆ ಮಾಡಿಸು- ತ್ತಾನೆ ಹೀಗೆ ಸರ್ವಜೀವಪ್ರೇರಕನಾದ ಹರಿ ಅಬ್ಬರದ ಹೆದ್ದೈವನೆನ್ನುವುದರಲ್ಲಿ ಸಂಶಯ- ವಿಲ್ಲ ಅನ್ಯದೇವತೆಗಳು ಅವನೊಡನೆ ಸ್ಪರ್ಧಿಸಲಾರರು ಅವನು ಯಾರನ್ನೂ ಲೆಕ್ಕಿಸುವು- ದಿಲ್ಲ ಉದಾ–ಶಿವ ಬಾಣಾಸುರನಿಗೆ ವರವಿತ್ತು ಅವನ ಕಡೆ ನಿಂತು ಕೃಷ್ಣನೊಡನೆ ಹೋರಾ- ಡತೊಡಗಿದಾಗ ಇದ್ದಕ್ಕಿದ್ದಂತೆ ಸ್ತಂಭಿತನಾದ ಅದರಿಂದ ಹರಿಯೆ ಸ್ವತಂತ್ರನಾಗಿದ್ದು ಜೀವನ ಬಾಧ್ಯವಾದ ಶರೀರೇಂದ್ರಿಯದೋಷಗಳಿಗೆ ಬಾಧಕನಾಗುತ್ತಾನೆ, ದೋಷಗಳನ್ನು ಕಳೆಯು- ತ್ತಾನೆ, ಪಾಪಗಳನ್ನು ಪರಿಹರಿಸುತ್ತಾನೆ ಎನ್ನಬೇಕು ಅವನು ನಿರ್ಭೀತನಾಗಿ 'ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ' ಎಂದವನಲ್ಲವೆ?

೬ ಅಥವಾ ಹರಿಕರುಣೆಗೆ ಪಾತ್ರನಾಗುವವ ಸಾವಿರಕ್ಕೊಬ್ಬ ಯಾರೋ ಪುಣ್ಯಾತ್ಮ ಎನ್ನುತ್ತಿದ್ದಾರೆ ದಾಸರು ಒಬ್ಬನಲ್ಲಿ ನಿಂತು ಆಡುತ್ತಾನೆ ಎಂದರೆ

> ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ ।
> ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ॥

'ಮನುಷ್ಯರಲ್ಲಿ ಸಾವಿರಕ್ಕೊಬ್ಬ ಯಾರೋ ಪುಣ್ಯಾತ್ಮ ಜ್ಞಾನಸಿದ್ಧಿಗೆ ಶ್ರಮಿಸುತ್ತಾನೆ ಶ್ರಮಿಸುವವರಲ್ಲಿ ಸಾವಿರಕ್ಕೊಬ್ಬ ಸಿದ್ಧಿ ಹೊಂದುತ್ತಾನೆ ಸಿದ್ಧಿ ಪಡೆದವರಲ್ಲಿಯೂ ಸಾವಿರ- ಕ್ಕೊಬ್ಬ ನನ್ನನ್ನು ಸ್ಫುಟವಾಗಿ ತಿಳಿಯುತ್ತಾನೆ' ಎಂದು ಭಗವದ್ಗೀತೆಯಲ್ಲಿ ಹೇಳಿದಂತೆ ಸಾವಿರ- ಕ್ಕೊಬ್ಬ ಯಾರೋ ಪುಣ್ಯಾತ್ಮನಲ್ಲಿ ಮಾತ್ರವೆ ನಿಂತು ತೀರ್ಥಯಾತ್ರಾದಿ ಓಡಾಟ ಮಾಡಿಸು- ತ್ತಾನೆ ತಾನೂ ಬಿಂಬರೂಪಿಯಾಗಿ ಮಾಡುತ್ತಾನೆ ಹಾಗೇ ಕ್ಷೇತ್ರದರ್ಶನ ಮಾಡುತ್ತಾನೆ, ಮಾಡಿಸುತ್ತಾನೆ, ಜ್ಞಾನಭಕ್ತಿವೈರಾಗ್ಯಗಳನ್ನು ಬೇಡುತ್ತಾನೆ, ಬೇಡಿಸುತ್ತಾನೆ, ಅವುಗಳನ್ನೇ ನೀಡುತ್ತಾನೆ, ನೀಡಿಸುತ್ತಾನೆ ಹರಿಯ ವಿಗ್ರಹಗಳನ್ನು ಹರಿಭಕ್ತರನ್ನು ಕಂಡು ಬೆರಗಾಗಿ ಸ್ತೋತ್ರ ಮಾಡುತ್ತಾನೆ, ಮಾಡಿಸುತ್ತಾನೆ ಇದೆಲ್ಲವೂ ಏಕೆ? ಸ್ತೋತ್ರ ಮಾಡಿದ್ದರಿಂದ ಅವನಿಗೇನಾಗಬೇಕಾಗಿದೆ? ಅಬ್ಬರದ ದೈವ ಆತ ಅವನಂತೆ ಪೂರ್ಣಾನಂದಮಯನಾದ ಸರ್ವಶಕ್ತ, ಸ್ವತಂತ್ರ ದೈವ ಇನ್ನೊಬ್ಬನಿಲ್ಲ ಅವನಿಗೆ ಯಾರ ಸ್ತುತಿಯೂ ಬೇಕಾಗಿಲ್ಲ ಬೇಕಾ- ಗಿದ್ದರೆ ಸರ್ವಶಕ್ತನಾದ ಆತ ಎಲ್ಲರಿಂದಲೂ ಸ್ತುತಿ ಮಾಡಿಸಿಕೊಳ್ಳುತ್ತಿದ್ದ ಸಹಸ್ರಸಹಸ್ರಗಳಲ್ಲಿ

ಯಾರೋ ಒಬ್ಬನಿಂದ ಮಾತ್ರ ಏಕೆ ಸ್ತುತಿಸಿಕೊಳ್ಳುತ್ತಾನೆ? ಕೇವಲ ಪ್ರೀತಿವಾತ್ಸಲ್ಯ! ಸ್ತುತಿ ಮಾಡುವಾಗ ಮಾಡುವವನಿಗೇ ಅದರಿಂದ ಆನಂದ, ತನಗಲ್ಲ ಅವನಿಗೆ ಆ ಆನಂದ ಸಿಗಲೆಂದೆ ತಾನು ಸ್ತುತಿಗೆ ವಶನಾದಂತೆ, ಬಾಧ್ಯನಾದಂತೆ, ತೋರಿಕೊಳ್ಳುತ್ತಾನೆ ಪುರಂದರ-ದಾಸರಿಗೆ ಶಿಷ್ಯನ ರೂಪದಿಂದ ಬಹಿರ್ದೇಶಕ್ಕೆ ನೀರನ್ನೂ ತಂದಿತ್ತು, ಏಕೆ ವಿಳಂಬವಾಯಿ-ತೆಂದು ಅವರಿಂದ ತಲೆಗೆ ಟೊಣಪೆಯನ್ನು ತಾಕಿಸಿಕೊಳ್ಳುತ್ತಾನೆ ಹೀಗೆ ಭಕ್ತರಿಗೆ ಬಾಧ್ಯ-ನಾದವನೇ ಒಮ್ಮೊಮ್ಮೆ ಆ ಭಕ್ತನಿಗೆ ಅಹಂಕಾರ ಬಂದಿತೆಂದರೆ ಅದನ್ನು ಕಳೆಯಲು ಪ್ರೀತಿ-ಯಿಂದಲೆ ಬಾಧಕನೂ ಆಗುತ್ತಾನೆ ಬಲಿ ಚಕ್ರವರ್ತಿ ಅಹಂಕಾರದಿಂದ ಇಂದ್ರನ ಸಿಂಹಾಸನವನ್ನು ಅಪಹರಿಸಿದಾಗ ವಾಮನನಾಗಿ ಬಂದು ತ್ರಿವಿಕ್ರಮನಾಗಿ ಬೆಳೆದು ತಲೆಯನ್ನು ಮೆಟ್ಟಿದ ಯಾರಿಗೂ ಹೆದರುವವನಲ್ಲ, ನಿರ್ಭೀತ, ಈತ

೭ ಅಥವಾ ಒಬ್ಬನಲ್ಲಿ ನಿಂತು ಆಡುವನು ಎಂದರೆ ಒಬ್ಬ ಮಾನವನಲ್ಲಿ ನಿಂತು ಆಡುವನು ಎಂದಿಷ್ಟೇ ಅರ್ಥವಲ್ಲ ಒಬ್ಬ ಪಾದಾಭಿಮಾನಿಯಲ್ಲಿ ನಿಂತು ಆಡುತ್ತಾನೆ ಪಾದಾಭಿಮಾನಿಗಳು ಇಬ್ಬರು ಒಬ್ಬ ತೃಣಾವರ್ತನೆಂಬ ಅಸುರ ಇನ್ನೊಬ್ಬ ಜಯಂತನೆಂಬ ದೇವತೆ ಅನ್ಯಾಯದ ದ್ರವ್ಯಾರ್ಜನೆಗಾಗಿಯೋ ಕೊಲೆ ಕಳವು ಮುಂತಾದ ಅಧರ್ಮ ಕಾರ್ಯಗಳಿಗೋ ಓಡಾಡುವುದಿದ್ದರೆ ಆಗ ಪಾದಾಭಿಮಾನಿ ತೃಣಾವರ್ತನಲ್ಲಿ ಹರಿ ನಿಂತು ಆ ಓಡಾಟ ನಡೆಸುತ್ತಾನೆ ನ್ಯಾಯದ ದ್ರವ್ಯಾರ್ಜನೆಗಾಗಿ ತೀರ್ಥಯಾತ್ರೆ, ಭೂಪ್ರದಕ್ಷಿಣೆ ಮುಂತಾದ ಧರ್ಮಕಾರ್ಯಗಳಿಗಾಗಿ ಓಡಾಟವಾಗಿದ್ದರೆ ಆಗ ಪಾದಾಭಿಮಾನಿ ಜಯಂತ-ನಲ್ಲಿ ನಿಂತು ಓಡಾಡಿಸುತ್ತಾನೆ. ಜೀವನ ಪ್ರಾಚೀನ ಕರ್ಮವನ್ನು ಇದು ಅವಲಂಬಿಸುತ್ತದೆ ಆ ಕರ್ಮಾನುಗುಣವಾಗಿಯೆ ತೃಣಾವರ್ತನಲ್ಲಿಯೋ ಜಯಂತನಲ್ಲಿಯೋ ಯಾರಾದ-ರೊಬ್ಬನಲ್ಲಿ ನಿಂತು ಹರಿ ಓಡಾಡುತ್ತಾನೆ ಹಾಗೆಯೆ ಕರ್ಮಾನುಗುಣವಾಗಿ ಚಕ್ಷುರಿಂ-ದ್ರಿಯಾಭಿಮಾನಿಗಳಾದ ಬಾಣಾಸುರ-ಸೂರ್ಯರೊಳಗೆ ಯಾರಾದರೊಬ್ಬನಲ್ಲಿ ನಿಂತು ನೋಡುತ್ತಾನೆ ಮನೋಭಿಮಾನಿ ಕಾಲನೇಮಿ-ರುದ್ರರೊಳಗೆ ಯಾರಾದರೊಬ್ಬರಲ್ಲಿ ನಿಂತು ಬೇಡುತ್ತಾನೆ ಹಸ್ತಾಭಿಮಾನಿ ಕೇಶಿದಾನವ-ದಕ್ಷಪ್ರಜಾಪತಿಗಳೊಳಗೆ ಯಾರಾ-ದರೊಬ್ಬರಲ್ಲಿ ನಿಂತು ನೀಡುತ್ತಾನೆ ವಾಗಿಂದ್ರಿಯಾಭಿಮಾನಿ ವಾತಾಪಿ ದಾನವ-ಅಗ್ನಿ-ದೇವರಲ್ಲಿ ಯಾರಾದರೊಬ್ಬರಲ್ಲಿ ನಿಂತು ಬೆರಗಾಗಿ ಮಾತನಾಡುತ್ತಾನೆ ಒಬ್ಬನೆ ದೇವತೆಗೆ ಸಾತ್ವಿಕ, ತಾಮಸ ಎಂದು ಎರಡು ರೂಪಗಳಿಲ್ಲ ದೇವತೆ ಸಾತ್ವಿಕನೆ, ಅದೇ ಹೆಸರಿನ ತಾಮಸ ಅಸುರನಿನ್ನೊಬ್ಬನಿರಬಹುದು ಜೀವನ ಪ್ರಾಚೀನ ಕರ್ಮ ಪುಣ್ಯಕರ್ಮವಾಗಿದ್ದರೆ ತತ್ವಾಭಿಮಾನಿ ಸಾತ್ವಿಕ ದೇವತೆಯಲ್ಲಿ ನಿಂತು ಪುಣ್ಯಕರ್ಮ ಮಾಡಿಸುತ್ತಾನೆ ಪಾಪಕರ್ಮ-ವಾಗಿದ್ದರೆ ತತ್ವಾಭಿಮಾನಿ ತಾಮಸ ಅಸುರನಲ್ಲಿ ನಿಂತು ಪಾಪಕರ್ಮವನ್ನೇ ಮಾಡಿಸುತ್ತಾನೆ ಈ ಕರ್ಮನಿಯಮವನ್ನು ಹರಿಯೇ ಮಾಡಿದವ ಅದರಿಂದ ಶ್ರೀಮದಾಚಾರ್ಯರು ಹೇಳುತ್ತಾರೆ

ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ
ಹರಿಪಾದವಿನಮ್ರಧಿಯಾ ಸತತಮ್ ।

ಈ ಕರ್ಮನಿಯಮವನ್ನು ಬ್ರಹ್ಮರುದ್ರಾದಿಗಳೂ ಯಾರೂ ಮುರಿಯಲಾರರು ಅಬ್ಬರದ ದೈವ ಇವ

ಹರಿರೇವ ಪರೋ ಹರಿರೇವ ಗುರುಃ
ಹರಿರೇವ ಜಗತ್ಪಿತೃಮಾತೃಗತಿಃ ।

ಲೋಕದಲ್ಲಿಮತ್ತೊಬ್ಬರನ್ನು ಅವನು ಲೆಕ್ಕಿಸುವುದಿಲ್ಲ ಜೀವರ ಯೋಗ್ಯತೆ ಪೂರ್ವ ಕರ್ಮ-ಗಳನ್ನು ಸ್ವೇಚ್ಛೆಯಿಂದಲೆ ಅನುಸರಿಸಿ ಸ್ವತಂತ್ರನಾಗಿ ಕರ್ಮ ಮಾಡಿಸುತ್ತಾನೆ ದುಷ್ಕರ್ಮ ಮಾಡಿಸಿ ಆ ದುಷ್ಟಮಾನವರನ್ನೂ ತತ್ತ್ವಾಭಿಮಾನಿ ಅಸುರರನ್ನೂ ಬಾಧಿಸುತ್ತಾನೆ ಅದಕ್ಕಾಗಿ ಬಾಧ್ಯರಾದ ಅವರಲ್ಲಿ ನಿಂತು ತಾನು 'ಬಾಧ್ಯ' ನೆನಿಸುತ್ತಾನೆ ಇಲ್ಲಿ 'ಬಾಧ್ಯ' ಎಂದರೆ ಬಾಧ್ಯ-ರೊಳಗಿದ್ದು ಅವರಿಗೆ ಬಾಧ್ಯತ್ವಪ್ರದನಾಗಿರುವವ ಎಂದರ್ಥ ತಾನೆ ಬಾಧ್ಯನಾಗುವುದಿಲ್ಲ 'ನೋಕನೀಯ' ನೆನಿಸಿದವ ಆತ ನರಕದಲ್ಲಿ ಯಮ ಪಾಪಿಗಳನ್ನು ಬಾಧಿಸುವಾಗ ಬಾಧಕ-ನಾದ ಯಮನಲ್ಲಿ ತಾನು ನಿಂತು ಅವನಿಗೆ ಬಾಧಕತ್ವಪ್ರದನಾಗಿ 'ಬಾಧಕ' ನೆನಿಸುತ್ತಾನೆ ಏಕೆಂದರೆ ಯಮನಿಗೂ ಬಾಧಕ ಆತ, ನಿರ್ಭೀತ

೮ ಅಥವಾ ವಾಯುಜೀವೋತ್ತಮತ್ವಕ್ಕೆ ವಿವರಣೆ ಇದು ಒಬ್ಬ ಮಾನವನಲ್ಲಿ ಅಲ್ಲ, ಒಬ್ಬ ತತ್ತ್ವಾಭಿಮಾನಿಯಲ್ಲಿಯೂ ಅಲ್ಲ ಒಬ್ಬ ಮುಖ್ಯಪ್ರಾಣನಲ್ಲಿಯೆ ಅಂತರ್ಯಾಮಿ-ಯಾಗಿ ನಿಂತು ಆಡುತ್ತಾನೆ, ನೋಡುತ್ತಾನೆ, ಬೇಡುತ್ತಾನೆ, ನೀಡುತ್ತಾನೆ, ಮಾತನಾಡುತ್ತಾನೆ, ಎಲ್ಲ ಕ್ರಿಯೆಗಳನ್ನು ನಡೆಸುತ್ತಾನೆ ಪ್ರಾಣನನ್ನು ಒಬ್ಬನನ್ನೇ ಸರ್ವಾಂತರ್ಯಾಮಿಯಾಗಿ ಸರ್ವರೊಳಗಿಟ್ಟು ಅವನೊಳಗೆ ಅಂತರ್ಯಾಮಿಯಾಗಿ ತಾನಿದ್ದಾನೆ ಜೀವೋತ್ತಮ ಪ್ರಾಣ-ನಿಗೂ ಪ್ರಾಣನಾಗಿ ಎಲ್ಲವನ್ನೂ ಮಾಡುವ ಅಬ್ಬರದ ದೈವ ಸರ್ವೋತ್ತಮ ಹರಿ ಅವನು ಈ ಪ್ರಾಣನನ್ನು ಹೊರತು ಲೋಕದಲ್ಲಿ ಮತ್ತೊಬ್ಬರನ್ನು ಲೆಕ್ಕಿಸುವುದಿಲ್ಲ ಏಕೆಂದರೆ ಪ್ರಾಣನಂಥ ಭಕ್ತನಿನ್ನೊಬ್ಬನಿಲ್ಲ ಅವನೆಂದೂ ಹರಿಯನ್ನು ವಿರೋಧಿಸುವುದಿಲ್ಲ 'ಹನುಮನ ಮತವೇ ಹರಿಯ ಮತ ಹರಿಯ ಮತವೆ ಹನುಮನ ಮತ' ಆದರಿಂದ ಇತರ ದೇವತೆಗಳಂತೆ ಪ್ರಮಾದದಿಂದಲೋ ಅಸುರಾವೇಶದಿಂದಲೋ ಅವನೆಂದೂ ಹರಿಯನ್ನು ಬಾಧಿಸಲು ಯತ್ನಿಸುವುದಿಲ್ಲ ಪ್ರೀತಿವಾತ್ಸಲ್ಯಗಳಿಂದಲೂ ಹರಿ ಬಾಧ್ಯನಾಗುವ ಸಂದರ್ಭ ಇಲ್ಲ ಹಾಗೇ ಅವನನ್ನು ಹರಿ ಬಾಧಿಸುವ ಸಂದರ್ಭವೂ ಇಲ್ಲ 'ಬಾಧ್ಯ' 'ಬಾಧಕ' ನಾಗದೆ 'ಅಬಾಧ್ಯ' 'ಅಬಾಧಕ' ನೆನಿಸುತ್ತಾನೆ ಹರಿ 'ಅಬಾಧ್ಯಬಾಧಕನಾಹ' ಎಂದು ಪದ ವಿಂಗಡಿಸಿಕೊಳ್ಳಬೇಕು ಬಾಧ್ಯನೂ ಅಲ್ಲ, ಬಾಧಕನೂ ಅಲ್ಲ ಎಂದರ್ಥ ಏಕೆ 'ಅಬಾಧ್ಯಬಾಧಕ?' ನಿರ್ಭೀತ ಹರಿಯಿಂದ ಹನುಮನಿಗೆ ಹೇಗೆ ಭಯ ಅಂದರೆ ಆವತ್ತು ಇಲ್ಲವೋ ಹಾಗೆ ಹನುಮನಿಂದ ಹರಿಗೂ ಭಯ ಆವತ್ತು ಇಲ್ಲ

೯ ಅಥವಾ ಈ ಪದ್ಯದಲ್ಲಿ 'ಒಬ್ಬ' ಎನ್ನುವುದು ಏಕಮೇವಾದ್ವಿತೀಯನೆನಿಸಿದ ಹರಿಯನ್ನೇ ಹೇಳುತ್ತದೆ ಹರಿ ಎಲ್ಲರಲ್ಲಿಯೂ ಇದ್ದಾನೆ, ಯಾರಲ್ಲಿಯೂ ಇಲ್ಲ ಅಂದರೆ ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ಇದ್ದಾನೆ, ಯಾರನ್ನೂ ಆಶ್ರಯಿಸಿ ಇರುವುದಿಲ್ಲ ಅವನು ತನ್ನಲ್ಲೆ ತಾನಿರುತ್ತಾನೆ 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎನ್ನುತ್ತದೆ ಉಪನಿಷತ್ತು 'ಒಬ್ಬ'ನಲ್ಲಿ ಏಕಮೇವಾದ್ವಿತೀಯನಾದ ತನ್ನಲ್ಲಿಯೇ ತಾನು ಇದ್ದು ಆಡುವುದು, ನೋಡುವುದು ಮುಂತಾದ ಎಲ್ಲ ಕ್ರಿಯೆಗಳನ್ನು ನಡೆಸುತ್ತಾನೆ ಅಬ್ಬರದ ದೈವ ಮಹಾಮಹಿಮೆ ಉಳ್ಳವ ಯಾರನ್ನೂ ಲೋಕದಲ್ಲಿ ಲೆಕ್ಕಿಸುವುದಿಲ್ಲ ಯಾರನ್ನೂ ಆಶ್ರಯಿಸುವುದಿಲ್ಲ ತನ್ನಲ್ಲಿಯೆ ತಾನಿರುವುದೆಂದರೆ ವಿರುದ್ಧವಲ್ಲವೆ? ಲೋಕದಲ್ಲಿ ವಿರುದ್ಧವೆ ಆದರೆ ಹರಿಯಲ್ಲಿ ಅವನ ಅಚಿಂತ್ಯ ಶಕ್ತಿಯಿಂದ ಎಲ್ಲಾ ವಿರುದ್ಧ ಸಂಗತಿಗಳೂ ಅವಿರುದ್ಧವೆನಿಸುತ್ತವೆ ಹಾಗಾದರೆ ಅಚಿಂತ್ಯ ಶಕ್ತಿಯಿಂದ ತನ್ನನ್ನು ತಾನೇ ಬಾಧಿಸಲಿ! ತಾನೇ ಬಾಧ್ಯ, ತಾನೇ ಬಾಧಕನೆನಿಸಲಿ! ಹರಿ ಸರ್ವಶಕ್ತನೆಂದಾದರೆ ತನಗೆ ಎತ್ತಲಾಗದಷ್ಟು ಭಾರದ ಒಂದು ಬಂಡೆಗಲ್ಲನ್ನು ತಾನೆ ಸೃಷ್ಟಿಸಲಿ! ಸೃಷ್ಟಿಸಲಾರನೆಂದರೆ ಸರ್ವಶಕ್ತನಲ್ಲ ಸೃಷ್ಟಿಸುವನಂದರೆ ಆ ಕಲ್ಲನ್ನು ಎತ್ತಲಾರ, ಸರ್ವಶಕ್ತನಾಗಲಾರ ಹೀಗೆ ಸರ್ವಶಕ್ತನೆಂಬ ಒಬ್ಬ ಈಶ್ವರನ ಕಲ್ಪನೆ ತರ್ಕಶುದ್ಧವಲ್ಲ ಎಂದು ಕೆಲವರು ಹೇಳುವುದುಂಟು ಆದರೆ ಈಶ್ವರನ 'ಕಲ್ಪನೆ' ಎನ್ನುವುದೇ ತಪ್ಪು ಮತ್ತು ಶುಷ್ಕವಾದ ತರ್ಕವೂ ತಪ್ಪು ವೇದಾದಿ ಶಾಸ್ತ್ರಗಳಿಂದಲೂ ಮಹಾತ್ಮರ ದಿವ್ಯ ಸಾಕ್ಷಾತ್ಕಾರದಿಂದಲೂ ಈಶ್ವರಾಸ್ತಿತ್ವ ಸಿದ್ಧಿಸುತ್ತದೆ ಆ ಈಶ್ವರ ಸರ್ವಗುಣಪರಿಪೂರ್ಣ ಲೋಕದಲ್ಲಿ ವಿರುದ್ಧವಾದ ಗುಣಗಳೂ ಅಚಿಂತ್ಯ ಶಕ್ತಿಯಿಂದ ಅವನಲ್ಲಿ ಕೂಡುತ್ತವೆ ತರ್ಕಶುದ್ಧವಾಗುತ್ತವೆ ಆದರ ದೋಷಗಳನ್ನು ಅಚಿಂತ್ಯ ಶಕ್ತಿ ಕೂಡಿಸಲಾರದು ನರಸಿಂಹನ ನಖದ ಒಂದು ಕಿಡಿ ಪ್ರಳಯಕಾಲದಲ್ಲಿ ಬ್ರಹ್ಮಾಂಡವನ್ನು ಸುಟ್ಟರೂ ನರಸಿಂಹನನ್ನು ಸುಡುವುದಿಲ್ಲ ಸುಡುವುದನ್ನು ಅಚಿಂತ್ಯ ಶಕ್ತಿನಿರ್ವಾಹ ಮಾಡುವುದಿಲ್ಲ ಅದರಿಂದ ಹರಿ ತನ್ನನ್ನೇ ತಾನು ಅಚಿಂತ್ಯ ಶಕ್ತಿಯಿಂದ ಆಶ್ರಯಿಸಿದರೂ ತನ್ನನ್ನು ತಾನು ಬಾಧಿಸುವುದಿಲ್ಲ, ತಾನಗೆ ತಾನೇ ಬಾಧ್ಯ ಬಾಧಕನೆನಿಸುವುದಿಲ್ಲ ಅಬಾಧ್ಯಬಾಧಕನೆನಿಸುತ್ತಾನೆ, ಏಕೆ? ನಿರ್ಭೀತ ಯಾರ ಭಯವೂ ಇಲ್ಲ 'ಭೀಷಾಸ್ಮಾದ್ ವಾತಃ ಪವತೇ' ಎಂದು ಉಪನಿಷತ್ತು ಹೇಳುವಂತೆ ಅವನಿಂದ ಇತರರಿಗೇ ಭಯ ಅವರಿಗೆ ತಾನು ಅಬಾಧ್ಯನೆನಿಸುತ್ತಾನೆ, ಬಾಧಕನೂ ಎನಿಸುತ್ತಾನೆ

೧೦ ಅಥವಾ ವಾಯುಸ್ತುತಿ ಇದು ವಾಯು ಏಕಮೇವಾದ್ವಿತೀಯನೆನಿಸಿದ 'ಒಬ್ಬ' ಹರಿಯಲ್ಲಿ ನಿಂತು, ಅಂದರೆ ಆಶ್ರಯಿಸಿ ನಿಂತು ಓಡಾಡುತ್ತಾನೆ, ನೋಡುತ್ತಾನೆ, ಬೇಡುತ್ತಾನೆ, ನೀಡುತ್ತಾನೆ, ಮಾತನಾಡುತ್ತಾನೆ, ಎಲ್ಲರಲ್ಲಿಯೂ ಈ ಕ್ರಿಯೆಗಳ'ನ್ನು ತಾನು ಮಾಡುತ್ತಾನೆ, ಮಾಡಿಸುತ್ತಾನೆ, ಎಲ್ಲವೂ ಹರಿಪೂಜೆ 'ಆರಾಧ್ಯಸೇ ಪ್ರಾಣಭೃತಾಂ ಪ್ರಣೇತ್ರಾ ಪ್ರಾಣಾಧಿನಾಥೇನ ಸಮೀರಣೇನ' ಅಬ್ಬರದ ಪೆದ್ದೈವ ಇವ ಹರಿಯನ್ನು ಹೊರತು ಮತ್ತೊಬ್ಬರನ್ನು ಲೆಕ್ಕಿಸುವುದಿಲ್ಲ ಕಲ್ಯಾದಿ ಅಸುರರಿಂದ ಅಬಾಧ್ಯನಾಗಿದ್ದು ಅವರಿಗೆ ಬಾಧಕನೆ ಆಗಿರುತ್ತಾನೆ

ಅಬಾಧ್ಯಬಾಧಕನಾಹ ನಿರ್ಭೀತ ಬಯರಹಿತ 'ನಿರ್ಭಯತ್ವಮರೋಗತಾ, ಅಜಾಡ್ಯಂ ವಾಕ್ಪಟುತ್ವಂ ಚ ಹನುಮತ್‌ಸ್ಮರಣಾದ್ಭವೇತ್' ಎಂದ ಮೇಲೆ ಅವನಿಗೇತರ ಭಯ? ಕೇವಲ ಕರುಣೆಯಿಂದ ಜೀವಾಭಿಮಾನಿ ಜೀವೋತ್ತಮ ಪ್ರಾಣ ಜೀವರಿಂದ ಸಾಧನೆ ಮಾಡಿಸಿ ಸರ್ವೋತ್ತಮ ಹರಿಯಿಂದ ಮೋಕ್ಷ ಕೊಡಿಸುತ್ತಾನೆ

**ಶರಣಜನಮಂದಾರ ಶಾಶ್ವತ-**
**ಕರುಣಿ ಕಮಲಾಕಾಂತ ಕಾಮದ**
**ಪರಮಪಾವನತರ ಸುಮಂಗಳಚರಿತ ಪಾರ್ಥಸಖ ।**
**ನಿರುಪಮಾನಂದಾತ್ಮ ನಿರ್ಗತ-**
**ದುರಿತ ದೇವವರೇಣ್ಯನೆಂದಾ-**
**ದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ ॥ ೧೦ ॥**

ಶರಣಾಗತರಾದ ಜನರಿಗೆ ಕಲ್ಪವೃಕ್ಷದಂತೆ ಇರುವವನೆ, ಶಾಶ್ವತವಾದ ಕರುಣೆ-ದೋರುವವನೆ, ಲಕ್ಷ್ಮೀರಮಣನೆ, ಬಯಸಿದ್ದನ್ನೆಲ್ಲನೀಡುವವನೆ, ಅತ್ಯಂತ ಪರಮ ಪಾವ-ನನೆ, ಮಂಗಳಕರವಾದ ಚರಿತ್ರೆ ಉಳ್ಳವನೆ, ಪಾಂಡವರ ಮಿತ್ರನೆ, ಅನುಪಮ ಆನಂದ-ಸ್ವರೂಪನೆ, ಪಾಪಲೇಪರಹಿತನೆ, ದೇವತೆಗಳಿಗೆ ಆರಾಧ್ಯನೆ! ಎಂದು ಮುಂತಾಗಿ ಆದರ-ದಿಂದ ಕರೆದಾಗ ಶ್ರೀಹರಿ ತನ್ನವರ ಬಳಿಗೆ ಬಂದೊದಗುವನು

***ಶರಣಜನಮಂದಾರ***

ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನ, ಎಂದು ಐದು ಬಗೆಯಾದ ದೇವಲೋಕದ ವೃಕ್ಷಗಳಲ್ಲಿ ಮಂದಾರವೂ ಒಂದು ಅದರ ಬುಡಕ್ಕೆ ಬಂದು ಏನು ಬಯಸಿದರೂ ಕೊಡುತ್ತದೆ ಹರಿಯೂ ಹಾಗೇ ಭಾಗವತದಲ್ಲಿ ಶ್ರೀಕೃಷ್ಣ ಗೋಪಿಯರಿಗೆ ಹೇಳುತ್ತಾನೆ

ತದ್ವೈವ ಮತ್ತಃ ಫಲಸಂಪದಃ ಸ್ಯುಃ
ಉಚ್ಚಾವಚಾಃ ಕಲ್ಪತರೋರಿವಾರ್ಥಿನಾಮ್

ಕಲ್ಪವೃಕ್ಷವೇನೆಂದರೂ ಅಲ್ಪ ಅಸ್ಥಿರ ಭೋಗಭಾಗ್ಯಗಳನ್ನು ಕೊಟ್ಟೀತು ಹರಿಯೂ ಹಾಗೇ ಏನು? ಎನ್ನಬಾರದು ಕಲ್ಪವೃಕ್ಷದ ಸಾಮ್ಯ ಕೊಟ್ಟಮಾತ್ರಕ್ಕೆ ಪೂರ್ತಿ ಸಾಮ್ಯವೆಂದು ತಿಳಿಯಬಾರದು ಶ್ರೀಹರಿಗೆ ಪೂರ್ತಿ ಸಮಾನನೆಂದರೆ ಶ್ರೀಹರಿಯೆ ಹೊರತು ಇನ್ನೊಬ್ಬ ಪ್ರಪಂಚದಲ್ಲಿಲ್ಲ ಅದರಿಂದ ಕಲ್ಪವೃಕ್ಷದ ಸಾಮ್ಯದಿಂದಲೆ ತೃಪ್ತಿಪಡಬೇಕು

ವಸ್ತುತಃ ಶ್ರೀಹರಿ ಎಲ್ಲಾ ಕಾಲದಲ್ಲಿ ಕಲ್ಪವೃಕ್ಷದಂತೆ ಬೇಡಿದ್ದನ್ನೆಲ್ಲ ಕೊಡುವುದಿಲ್ಲ ಮೋಕ್ಷದಲ್ಲಿ ಮಾತ್ರ ಕೊಡುತ್ತಾನೆ

ಯಂ ಯಂ ಸುಖೀ ಕಾಮಯತೇಽರ್ಥಮತ್ರ
ಸಂಕಲ್ಪಮಾತ್ರಾತ್ ಸಕಲೋಽಪಿ ಸ ಸ್ಯಾತ್ ॥

ಎಂದು ಪಂಡಿತಾಚಾರ್ಯರು ಹೇಳುವಂತೆ ಸಂಕಲ್ಪಮಾತ್ರದಿಂದ ಎಲ್ಲ ಸಿಗುವುದು ಮೋಕ್ಷದಲ್ಲಿ ಮಾತ್ರವೆ. ಶ್ರೀಹರಿ ರುದ್ರಾದಿದೇವತೆಗಳಂತೆ ಬೇಗೆ ಒಲಿಯುವುದೂ ಇಲ್ಲ, ಬೇಡುವ ಎಲ್ಲಾ ಜನರಿಗೂ ಕೊಡುತ್ತಾನೆ ಎನ್ನುವ ನಿಯಮವೂ ಇಲ್ಲ. ಅದರಿಂದಲೆ ಹಿರಣ್ಯಕಶಿಪು ರಾವಣ ಮುಂತಾದವರು ಬ್ರಹ್ಮರುದ್ರಾದಿಗಳನ್ನೇ ಆರಾಧಿಸಿದರು. ಹರಿ ಬಹಳ ನಿಧಾನ ಒಲಿಯುತ್ತಾನೆ. ಸಾತ್ವಿಕರ ಸತ್ವಗುಣ ಅಭಿವೃದ್ಧಿಯಾಗಲು ಕಾಯುತ್ತಾನೆ. ತಾಮಸರಿಗೆ ಒಲಿಯುವುದೇ ಇಲ್ಲ. ಕಲ್ಪವೃಕ್ಷ ಹೀಗಿಲ್ಲ. ಅದರಿಂದಲೂ ಕಲ್ಪವೃಕ್ಷಸಾಮ್ಯ ಪೂರ್ತಿ ವಿವಕ್ಷಿತವಲ್ಲ.

ಮೋಕ್ಷದಲ್ಲಿ ಜನರು ಆನಂದಸ್ವರೂಪರಾಗಿಯೆ ಇರುವುದರಿಂದ ಏನೂ ಬೇಡುವುದೆ ಇಲ್ಲ. ಅವರು ಏನು ಬಯಸಿದರೂ ಸಂಕಲ್ಪಮಾತ್ರದಿಂದಲೆ ಸಿಗುವುದರಿಂದ ಬೇಡುವ ಪ್ರಮೇಯವೇ ಇರುವುದಿಲ್ಲ ತಾನೆ? ನಿಜ. ಆದರೂ ಅವರು ಬೇಡುತ್ತಾರೆ. ಹರಿಯಲ್ಲಿ ತಮ್ಮ ಸ್ವರೂಪಾನಂದದ ಭಿಕ್ಷೆ ಬೇಡುತ್ತಾರೆ!

ಅಥ ಭಿಕ್ಷಾಚರ್ಯಾಂ ಚರಂತಿ

ಎಂಬ ಬೃಹದಾರಣ್ಯಕವಾಕ್ಯಕ್ಕೆ ಬಾಷ್ಯದಲ್ಲಿ ವಿವರಣ ನೀಡುತ್ತ

ಮುಕ್ತಾ ಅಪಿ ಬ್ರಹ್ಮಾದಯಸ್ತಸ್ಮಾದೇವ ಪರಮೇಶ್ವರಾತ್
ವಿಪ್ರುಡಾನಂದಮೇವ ಭಿಕ್ಷಂತೋ ವರ್ತಂತೇ ॥

'ಮುಕ್ತರಾದ ಬ್ರಹ್ಮಾದಿಗಳೂ ಕೂಡ ಹರಿಯಲ್ಲಿ ಸ್ವಲ್ಪ ಆನಂದವನ್ನೇ ಬೇಡುತ್ತಿರುತ್ತಾರೆ' ಎಂದಿದೆ.

ಸಂಸಾರದಲ್ಲಿ ಹರಿ ಏಕೆ ಕಲ್ಪವೃಕ್ಷದಂತೆ ಬೇಡಿದುದನ್ನೆಲ್ಲ ಕೊಡುವುದಿಲ್ಲ? ಅಸಾಮರ್ಥ್ಯವೆ? ಎಂದರೆ, ಜೀವರು ಸಂಸಾರದಲ್ಲಿ ಅಜ್ಞಾನಿಗಳಾಗಿದ್ದು ತಮಗೆ ಹಿತವೇನೆಂಬುದನ್ನು ತಾವೆ ತಿಳಿಯರು. ಬೇಡಿದರೆ ಅಹಿತವನ್ನೂ ಬೇಡುವರು. ಅತ್ಯಂತ ಆಪ್ತನಾದ ಹರಿ ಅವರ ಬೇಡಿಕೆಗಳನ್ನೆಲ್ಲ ಕಣ್ಮುಚ್ಚಿ ಪೂರೈಸುವುದಿಲ್ಲ.

ಯದ್ಯಪ್ರಿಯಂ ಕಾಮಯಂತಿ
ನ ರಾತೀಶೋ ಹಿತೋ ಯತಃ ।

ಎಂದು ಭಾಗವತತಾತ್ಪರ್ಯದಲ್ಲಿ ಹೇಳಿದೆ.

ಶ್ರೀಹರಿಗೆ ಕಲ್ಪವೃಕ್ಷದ ದೃಷ್ಟಾಂತವನ್ನೇಕೆ ಕೊಡಬೇಕು? ಕಮಲಾಕಾಂತ, ಕಾಮದ ಎಂದು ಹರಿಯನ್ನು ಅಭೀಷ್ಟದಾಯಕನೆಂದು ಮುಂದೆ ದಾಸರಾಯರೆ ಹೇಳುತ್ತಾರೆ. ದೃಷ್ಟಾಂತದಿಂದ ಇನ್ನೇನು ಹೆಚ್ಚಿಗೆ ಹೇಳಿದಂತಾಯಿತು? ಎಂಬ ಪ್ರಶ್ನೆ ಬರಬಹುದು. ಆದರೆ

ಹರಿ ಕೇವಲ ಮೋಕ್ಷದಾಯಕನೆಂದು ಪ್ರಸಿದ್ಧಿ ಆರೋಗ್ಯ ಐಶ್ವರ್ಯಾದಿಗಳನ್ನು ನೀಡು-ವವರು ಬೇರೆ ದೇವತೆಗಳು ಎನ್ನುತ್ತಾರೆ

ಆರೋಗ್ಯಂ ಭಾಸ್ಕರಾದಿಚ್ಛೇತ್ ಧನಮಿಚ್ಛೇದ್ಧುತಾಶನಾತ್ ।
ಜ್ಞಾನಂ ಮಹೇಶ್ವರಾದಿಚ್ಛೇತ್ ಮೋಕ್ಷಮಿಚ್ಛೇಜ್ಜನಾರ್ದನಾತ್ ॥

'ಆರೋಗ್ಯವನ್ನು ಸೂರ್ಯನಿಂದ, ಐಶ್ವರ್ಯವನ್ನು ಅಗ್ನಿಯಿಂದ, ಜ್ಞಾನವನ್ನು ಶಿವನಿಂದ, ಮೋಕ್ಷವನ್ನು ಹರಿಯಿಂದ ಬೇಡಿ ಪಡೆಯಬೇಕು' ಆದರಿಂದ ಐಶ್ವರ್ಯಾದಿ ಐಹಿಕ ಫಲಕ್ಕಾಗಿ ಅಜ್ಞರು ಬೇರೆ ದೇವತೆಗಳನ್ನೇ ಮೊರೆಹೋಗುತ್ತಾರೆ ಇದು ಸರಿಯಲ್ಲ ಹರಿ ಜೀವರಿಗೆ ಹಿತವಾದುದನ್ನು, ಅದು ಐಹಿಕವಿರಲಿ, ಪಾರತ್ರಿಕವಿರಲಿ ಎಲ್ಲವನ್ನೂ ಕಲ್ಪವೃಕ್ಷ-ದಂತೆ ಕೊಡುತ್ತಾನೆ

ಸ್ಮರತಃ ಪಾದಕಮಲಮಾತ್ಮಾನಮಪಿ ಯಚ್ಛತಿ ।
ಕಿಂ ನ್ವರ್ಥಕಾಮಾನ್ ಭಜತೋ ನಾತ್ಯಭೀಷ್ಟಾನ್ ಜಗದ್ಗುರುಃ ॥

ಎಂದು ಭಾಗವತದಲ್ಲಿ ಹೇಳಿದಂತೆ ಹರಿ ಬೇಡುವವರಿಗೆ ತನ್ನನ್ನೆ ಕೊಡುವವ ಇನ್ನು ಅರ್ಥಕಾಮಗಳ ಬಗ್ಗೆ ನಿಧಾನಿಸುವನೆ? ಅದರಿಂದ ಹರಿ ಕೇವಲ ಮೋಕ್ಷವನ್ನು ಮಾತ್ರವಲ್ಲದೆ ಮೋಕ್ಷಸಾಧನೆಗೆ ಆವಶ್ಯಕವಾದ ಅನಿಷಿದ್ಧವಾದ ಪವಿತ್ರವಾದ ವಿಷಯಸುಖವನ್ನೂ ಶರೀರದಾರ್ಢ್ಯ, ಮನಃಸ್ವಾಸ್ಥ್ಯಗಳನ್ನೂ ಕೊಟ್ಟೇ ಕೊಡುತ್ತಾನೆ ಎಂದು ತಿಳಿಸಲು ಕಲ್ಪವೃಕ್ಷದ ದೃಷ್ಟಾಂತ ಬೇಕು

ಕಲ್ಪವೃಕ್ಷ ಕೇವಲ ವಿಷಯಸುಖ ಆರೋಗ್ಯಾದಿಗಳನ್ನು ಕೊಟ್ಟೀತು ಹರಿ ಮೋಕ್ಷವನ್ನೂ ಕೊಡಬಲ್ಲ ಅದರಿಂದ ದೃಷ್ಟಾಂತ ಸರಿಯಲ್ಲ ಎನ್ನುವ ಆಕ್ಷೇಪಕ್ಕೆ ಪೂರ್ತಿ ಸಾಮ್ಯ ಬೇಕಾ-ಗಿಲ್ಲವೆಂದು ಹಿಂದೆಯೆ ಸಮಾಧಾನ ನೀಡಿದೆ ವಸ್ತುತಃ ಕಲ್ಪವೃಕ್ಷ ಕೇವಲ ವಿಷಯಸುಖಾದಿ-ಗಳನ್ನು ಮಾತ್ರ ನೀಡುವಂಥದ್ದಲ್ಲ ತತ್ತ್ವಜ್ಞಾನವನ್ನೂ ನೀಡುತ್ತದೆ ಆ ಮೂಲಕ ಮೋಕ್ಷವನ್ನೂ ನೀಡುತ್ತದೆ! ಆ ಮರದ ಬುಡದಲ್ಲಿ ಕುಳಿತರೆ ಸಾಕು, ಪೂರ್ವಜನ್ಮಗಳ ಸ್ಮರಣೆ ಬರುತ್ತದೆ ಎಂದು ಹರಿವಂಶದಲ್ಲಿ ಹೇಳಿದೆ. ಶ್ರೀರಾಘವೇಂದ್ರರು 'ಸಕಲಪ್ರದಾತಾ' ಎಂಬ ಬಿರುದಿನ-ವರು ತತ್ತ್ವಜ್ಞಾನದ್ವಾರಾ ಮೋಕ್ಷವನ್ನೂ ನೀಡುತ್ತಾರೆ ಎನ್ನುವುದಾದರೆ ರಾಘವೇಂದ್ರರಂತೆಯೆ ಕರ್ಮಜದೇವತೆಯಾದ ಕಲ್ಪವೃಕ್ಷವೂ ಜ್ಞಾನದ್ವಾರಾ ಮೋಕ್ಷದಾಯಕವೆನ್ನಲಡ್ಡಿಯಿಲ್ಲ

ಶ್ರೀಹರಿ ಜನರಿಗೆ ಅಪೇಕ್ಷಿತಪ್ರದಾತನೆಂದು ನಿಯಮವಿಲ್ಲ ದ್ವೇಷಿಗಳಿಗೆ ಅನಪೇಕ್ಷಿತ-ವಾದ ಅಹಿತವಾದ ದುಃಖ ಕೊಡುತ್ತಾನೆ ಅದರಿಂದ ಕಲ್ಪವೃಕ್ಷದ ಸಾಮ್ಯ ಹೇಗೆ? 'ದುರ್ಮ-ರಣಾದಿಗಳನ್ನು ಮಾಡಿಕೊಳ್ಳುವವರು ಮೃತಿ, ದುಃಖ ಒಡಂಬಟ್ಟೇ ಮಾಡುವರೆಂದು ಅನುಭವಸಿದ್ಧವಾದ್ದರಿಂದ ಅವರಿಂದ ಅಪೇಕ್ಷಿತವಾಗಿದ್ದು ತತ್ಕಾಲದಲ್ಲಿ ಹಿತವೂ ಎನಿಸಿದ ದುಃಖವನ್ನೇ ಕೊಡುವ ಹರಿ ಕಲ್ಪವೃಕ್ಷವೇ ಸರಿ' ಎಂದು ಸಮಾಧಾನ ಹೇಳಿದರೆ ಸಾಲದು

ದುರ್ಮರಣಾದಿದುಃಖವನ್ನು ಕೆಲವೊಮ್ಮೆ ಮಹತ್ತಾದ ದುಃಖದ ಪರಿಹಾರಕ್ಕಾಗಿ ಸಹಿಸಿ-ಕೊಳ್ಳುತ್ತಾರೆ ಎಲ್ಲಾ ಕಾಲಕ್ಕೂ ದುಃಖ ಅಪೇಕ್ಷಿತವಾಗಲಾರದು ದುಃಖಕರವಾದುದರಲ್ಲಿ ಸುಖಕರ ಎಂಬ ಭ್ರಮೆಗೆ ಅವಕಾಶವಿಲ್ಲದಿಲ್ಲ ಆದರೆ ದುಃಖದಲ್ಲಿ ಸುಖಭ್ರಮೆ ಇಲ್ಲ ದುಃಖ ಅಪೇಕ್ಷಿತವಾಗುವುದು ಶಕ್ಯವಿಲ್ಲ ಅನಪೇಕ್ಷಿತವಾದ ದುಃಖವನ್ನೇ ಕೊಡುತ್ತಾನೆ ಎನ್ನಬೇಕು ಆಗ ಕಲ್ಪವೃಕ್ಷದ ಸಾಮ್ಯ ಹೇಗೆ ಎನ್ನುವ ಪ್ರಶ್ನೆ ಹಾಗೇ ಉಳಿಯುವುದು ಇದಕ್ಕೆ ದಾಸರಾಯರು 'ಶರಣಜನ' ಎಂದಿದ್ದಾರೆ ಶರಣಾಗತರಾದವರಿಗೆ ಮಾತ್ರ ಕಲ್ಪವೃಕ್ಷದಂತೆ ಅಪೇಕ್ಷಿತವಾದ ಸುಖವನ್ನೇ ನೀಡುತ್ತಾನೆ ಹರಿ ದ್ವೇಷಿಗಳಿಗೆ ಅಲ್ಲ

ದ್ವೇಷಿಯಾದ ದುರ್ಯೋಧನನಿಗೆ ಹಸ್ತಿನಾವತಿಯ ಸಿಂಹಾಸನದ ಒಡೆತನವನ್ನು ಹರಿ ಕೊಟ್ಟ, ಶರಣಾಗತರಾದ ಪಾಂಡವರಿಗೆ ವನವಾಸ ಕೊಟ್ಟ! ಈ ಆಕ್ಷೇಪಕ್ಕೆ ಉತ್ತರವಾಗಿ 'ಶಾಶ್ವತ ಕರುಣಿ' ಎಂದಿದ್ದಾರೆ ದಾಸರಾಯರು

**ಶಾಶ್ವತಕರುಣಿ**

ದುರ್ಯೋಧನನಿಗೆ ಐಶ್ವರ್ಯ ಬಂದರೂ ಅದರಿಂದ ಅವನಿಗೆ ಒಳ್ಳೆಯದಾಗಲಿಲ್ಲ ಪಾಂಡವರಿಗೆ ವನವಾಸ ಬಂದರೂ ಅದರಿಂದ ಅವರಿಗೆ ಕೆಟ್ಟದಾಗಲಿಲ್ಲ ಏಕೆ? ಹರಿಗೆ ದುರ್ಯೋಧನನಲ್ಲಿ ಕರುಣೆ ತಾತ್ಕಾಲಿಕ ಅವನಿಗಿತ್ತ ಸಂಪತ್ತೂ ತಾತ್ಕಾಲಿಕ ಅನರ್ಥ ಶಾಶ್ವತ ಪಾಂಡವರಲ್ಲಿ ಕರುಣೆ ಶಾಶ್ವತ ಅದರಿಂದ ಮೊದಲಿಗೆ ದುಃಖ ಕೊಟ್ಟರೂ ಕೊನೆಯಲ್ಲಿ ಸುಖವಿತ್ತ ಶಾಶ್ವತ ಸುಖವನ್ನೇ ಕೊಟ್ಟ ಬಂದ ಸಂಪತನ್ನು ಉಳಿಸಿಕೊಳ್ಳಲು ಸರಿಯಾಗಿ ಬಳಸಿಕೊಳ್ಳಲು ಸಾಮರ್ಥ್ಯವಿಲ್ಲದವನಿಗೆ, ಅವನು ದುಷ್ಟನಾದರೆ, ಒಮ್ಮೆಲೆ ಸಂಪತ್ತು ಕೊಟ್ಟು ಅವನನ್ನು ನಾಶಮಾಡುತ್ತಾನೆ ಸಜ್ಜನನಾಗಿದ್ದರೆ ಜೀವನದಲ್ಲಿ ನಾನಾ ಬಗೆಯ ಅಗ್ನಿಪರೀಕ್ಷೆಗೆ ಒಡ್ಡಿ ಸಹನಶಕ್ತಿಯನ್ನು ನೀಡಿ ಕೊನೆಯಲ್ಲಿ ಶಾಶ್ವತ ಸಂಪತ್ತನ್ನು ನೀಡುತ್ತಾನೆ ಇದು ಶಾಶ್ವತ ಕರುಣೆ

ಹರಿ ಶಾಶ್ವತ ಕರುಣಿಯಾಗಿ ಶರಣಜನಮಂದಾರನಾಗಿದ್ದಾನೆ ಎನ್ನುವುದಕ್ಕೆ ಉತ್ತಮ ಸಾಕ್ಷಿ ರಮಾದೇವಿ ಅವಳಿಗೆ ಅವನು ಕಾಂತ ಕಮಲಾಕಾಂತ ಆತ

**ಕಮಲಾಕಾಂತ ಕಾಮದ**

ದೇವಿಗೆ ಹರಿ ಕಾಂತ ಹರಿಗೆ ದೇವಿ ಕಾಂತೆ ಎರಡು ಅರ್ಥದಲ್ಲಿ 'ಕಮಲಾಕಾಂತ' ದೇವಿಯನ್ನು ಎದೆಯಲ್ಲಿ ಹೊತ್ತಿರುವ ಶಾಶ್ವತಕರುಣಿ, ಶರಣಜನಮಂದಾರ ಎಲ್ಲಾ ದೇಶ, ಎಲ್ಲಾ ಕಾಲಗಳಲ್ಲಿ ಅವಳ ಜೊತೆಗೇ ಇರುತ್ತಾನೆ ಲೋಕದ ಎಲ್ಲಾ ಸಂಪತ್ತಿಗೂ ಅವಳನ್ನೇ ಒಡತಿಯನ್ನಾಗಿ ಮಾಡಿರುತ್ತಾನೆ ಅದರಿಂದ 'ಲಕ್ಷ್ಮಿ' ಎಂದರೇ ಸಂಪತ್ತು ಎಂದಾಗಿದೆ

ದೇವಾಸುರಮನುಷ್ಯೇಷು ಯೇ ಭಜಂತ್ಯಶಿವಂ ಶಿವಮ್ ।
ಪ್ರಾಯಸ್ತೇ ಧನಿನೋ ಬ್ರಹ್ಮನ್ ನತು ಲಕ್ಷ್ಮೀಪತಿಂ ಹರಿಮ್ ॥

'ಶಿವಭಕ್ತರು ಧನಿಕರಾಗುತ್ತಾರೆ ಲಕ್ಷ್ಮೀಪತಿಯ ಭಕ್ತರು ಹಾಗಾಗುವುದಿಲ್ಲ' ಎಂದು ಆಶ್ವಾಸನವಿತ್ತಿದ್ದಾನೆ ಶ್ರೀಕರಮೂರ್ತಿ ಹೆಸರೇ ಹೇಳುವಂತೆ ಶ್ರೀಕರ 'ಕರಾಭ್ಯಾಂ ವಸು ತರ್ಪಯಾನಃ' ಎರಡು ಕೈಗಳಲ್ಲಿ ಎತ್ತಿ ಎತ್ತಿ ನೀಡುವವ ವಿಶ್ವಾದಿ ಸಹಸ್ರಮೂರ್ತಿಗಳಲ್ಲಿ 'ಕಾಮಪ್ರದ' ಮೂರ್ತಿ, 'ವಸುದ' ಮೂರ್ತಿ, ಮುಂತಾದವರಿದ್ದಾರೆ ಹರಿ ಒಲಿದರೆ ಕಾಮದ ಬೇಗನೆ ಒಲಿಯುವುದಿಲ್ಲ ಏಕೆಂದರೆ ಒಲಿಸಲು ಜನರು ಅರಿತಿಲ್ಲ ಒಲಿಸಲರಿಯದೆ ಪಾಮರರು ಬಳಲುವರು ಅದರಿಂದ ಲಕ್ಷ್ಮೀಪತಿಯ ಉಪಾಸಕರು ಒಮ್ಮೆಲೆ ಧನಿಕರಾಗುವುದಿಲ್ಲ

'ಶರಣಜನಮಂದಾರ' ಎಂದರೆ ಬೇಡಿದ್ದನ್ನು ಕೊಡುವವ 'ಕಾಮದ' ಎಂದರೂ ಬೇಡಿದ್ದನ್ನುಕೊಡುವವ ಪುನರುಕ್ತಿಯಾಗಲಿಲ್ಲವೆ? ಇಲ್ಲ 'ಶರಣಾಗತಜನರಿಗೆ ಕಲ್ಪವೃಕ್ಷದಂತೆ, ಏಕೆಂದರೆ ಬೇಡಿದ್ದನ್ನೆಲ್ಲಾ ಕೊಡುತ್ತಾನೆ' ಎಂದು ಸ್ಪಷ್ಟಪಡಿಸುವುದಕ್ಕಾಗಿ ಎರಡು ವಿಶೇಷಣಗಳು

ಅಥವಾ 'ಕಾಮದ' ಎದರೆ ಕಾಮಿತಪ್ರದ ಮಾತ್ರವಲ್ಲ ಕಾಮನೆಯನ್ನೂ ನೀಡುವವ ಕಲ್ಲಿನಂತೆ ಜಡವಾಗಿ ಬಿದ್ದಿರುವ ಜೀವರಲ್ಲಿ ತಾನು ಒಳಗೆ ಪ್ರವೇಶಿಸಿ ನಾನಾ ಬಗೆಯ ಕಾಮನೆಗಳನ್ನುಂಟುಮಾಡಿ ಕೊಡುತ್ತಾನೆ ಕಾಮಿತ ನೀಡುತ್ತ ಆ ಕಾಮನೆಗಳನ್ನು ತಣಿಸುತ್ತಾನೆ, ಬೆಂಕಿ ಹೊತ್ತಿಸಿ ತುಪ್ಪ ಸುರಿದಂತೆ ಇದರ ಫಲ ಜೀವರಿಗೆ ಸುಖಾನುಭವ ಇದು ಹರಿಯ ಕರುಣೆ

ಲೌಕಿಕ ವಿಷಯ ಸುಖಕಾಮನೆಯನ್ನು ಕೆಲವೊಮ್ಮೆ ಕೆರಳಿಸಿ ಅದಕ್ಕೂ ತುಪ್ಪಸುರಿಯುತ್ತಾನೆ ಮನಸ್ಸಿನ ಆರೋಗ್ಯ ಕೆಡಿಸುತ್ತಾನೆ ಆದರೆ ಶಾಶ್ವತ ಕರುಣೆಯಿಂದ ಜೀವನದಲ್ಲಿ ನಾನಾ ಕ್ಲೇಶಗಳಿಗೂ ಈಡು ಮಾಡಿ ಕ್ರಮೇಣ ಆ ಕಾಮನೆಯನ್ನು ಚಿವುಟುತ್ತಾನೆ ವೈರಾಗ್ಯ ನೀಡುತ್ತಾನೆ 'ಕಾಮದ' ಎಂದರೆ ಕಾಮನೆಗಳನ್ನು ನಾಶಗೊಳಿಸುವವ ಅದರಿಂದ 'ಕಾಮಪೂರ ನಾನು' ಎಂದ ನೃಸಿಂಹದೇವರಿಗೆ 'ಕಾಮಾನಾಂ ಹೃದಿ ಅಸಂರೋಹಂ ವರಂ ವೃಣೇ' ನನ್ನೆದೆಯಲ್ಲಿ ಲೌಕಿಕ ಕಾಮನೆಗಳು ಒಡಮೂಡದಂತೆ ವರ ನೀಡೆಂದು ಬೇಡುತ್ತಾನೆ ಪ್ರಹ್ಲಾದ

ಹೀಗೆ ಸಂಸಾರದಲ್ಲಿ ಬಳಲುವ ಸಾತ್ವಿಕರಿಗೆ ಮಮತೆಯ ತಾಯಾಗಿ ಬೇಡಿದ್ದನ್ನೆಲ್ಲ ನೀಡಿ ಪಾಲನ ಪೋಷಣಗೈವ ಹರಿಯ ಕರುಣೆ ಅಪಾರವೆಂದು ಹೇಳಿ ಮುಂದೆ ಭಕ್ತರು ನೆಮ್ಮದಿಯಿಂದ ಬಾಳಿ ಮೋಕ್ಷಸಾಧನೆ ಮಾಡುವಂತೆ ಅನುಗ್ರಹಿಸುವ ಹರಿಯ ಕರುಣೆಯನ್ನು ಬಣ್ಣಿಸುತ್ತಾರೆ ದಾಸರಾಯರು

**ಪರಮಪಾವನತರ**

ಬೇಡಿದ ಭೋಗಭಾಗ್ಯಗಳನ್ನು ಕಲ್ಪವೃಕ್ಷದಂತೆ ಕೊಡುವುದು ಮಾತ್ರವಲ್ಲದೆ ಅವು-ಗಳನ್ನು ಪಾವನಗೊಳಿಸುವುದೂ ಹರಿಯ ಕರುಣೆ ಪವನ ಎಲ್ಲವನ್ನೂ ಪಾವನಗೊಳಿಸು-ವವ ಆ ಪವನನನ್ನೂ ಪಾವನಗೊಳಿಸುವ ಪರಮಪಾವನತರ ಹರಿ 'ಪವನಃ ಪಾವನೋऽನಲಃ' ಎಂದು ವಿಷ್ಣುಸಹಸ್ರನಾಮದಲ್ಲಿ ಹೇಳಿದೆ ಹರಿವಾಯುಗಳ ನಿರ್ಮಾಲ್ಯ ನೈವೇದ್ಯಗಳ ಸೇವನೆಯಿಂದ ಶರೀರ ಅಂತಃಕರಣಶುದ್ಧಿ ಲಭಿಸುವುದು ತತ್ವಜ್ಞಾನ ಸಿದ್ಧಿಸು-ವುದು ಆದರೆ ಅದಕ್ಕೆ ಹರಿಯ ಸುಮಂಗಳ ಚರಿತೆಯನ್ನು ಶಾಸ್ತ್ರದ ಮೂಲಕ ಶ್ರವಣ ಮಾಡಬೇಕು ಮಾಡಿಸುತ್ತಾನೆ ಹರಿ ಇದು ಕರುಣೆ

**ಸುಮಂಗಳಚರಿತ**

ಕೃಷ್ಣರೂಪದಿಂದ ಮಂಗಳಚರಿತೆಯನ್ನು ಮಾಡಿ ತೋರಿದ ವ್ಯಾಸರೂಪದಿಂದ ತಾನೆ ಬರೆದು ಉಪದೇಶಿಸಿದ ಪಾರ್ಥಸಖನಾಗಿ ಆಯುಧ ಹಿಡಿಯದೆ ಕುರುಕ್ಷೇತ್ರ ಸಮರದ ಸೂತ್ರಧಾರನಾಗಿ ಗೀತೆ ಉಪದೇಶಿಸಿ ಯುದ್ಧ ಮಾಡಿಸಿ ಪಾರ್ಥರನ್ನು ಗೆಲ್ಲಿಸಿದ ಅಧರ್ಮ-ವನ್ನು ಮೆಟ್ಟಿ ಧರ್ಮವನ್ನು ನಿಲ್ಲಿಸಿದ ಎಂಥ ಕರುಣೆ!

**ಪಾರ್ಥಸಖ**

'ಮಮ ಪ್ರಾಣಾ ಹಿ ಪಾಂಡವಾಃ' ಎನ್ನುತ್ತ ಪಾಂಡವರಿಗೆ ಮಿತ್ರನಾದ ಮಿತ್ರನೆಂದರೆ ಹೀಗಿರಬೇಕೆಂದು ಭರ್ತೃಹರಿ ಹೇಳುತ್ತಾನೆ

> ಪಾಪಾನ್ನಿವಾರಯತಿ ಯೋಜಯತೇ ಹಿತಾಯ
> ಗುಹ್ಯಂ ಚ ಗೂಹತಿ ಗುಣಾನ್ ಪ್ರಕಟೀಕರೋತಿ ।
> ಆಪದ್ಗತಂ ಚ ನ ಜಹಾತಿ ದದಾತಿ ಕಾಲೇ
> ಸನ್ಮಿತ್ರಲಕ್ಷಣಮಿದಂ ಪ್ರವದಂತಿ ಸಂತಃ ॥

'ಪಾಪ ಮಾಡುವುದನ್ನು ತಡೆಯಬೇಕು, ಹಿತಕಾರ್ಯ ಮಾಡಿಸಬೇಕು ರಹಸ್ಯ ಮುಚ್ಚಿಡ-ಬೇಕು ಸದ್ಗುಣಗಳನ್ನು ಪ್ರಕಾಶಗೊಳಿಸಬೇಕು ಆಪತ್ತಿನಲ್ಲಿ ಕೈಬಿಡಬಾರದು ಸಕಾಲದಲ್ಲಿ ಸಹಾಯ ನೀಡಬೇಕು ಇವು ಆರು ಆದರ್ಶಮಿತ್ರನ ಗುಣಗಳು' ಇವೆಲ್ಲ ಗುಣಗಳು ಕೃಷ್ಣನಲ್ಲಿದ್ದವು ಆದರಿಂದ ಪಾಂಡವರ ಮನೆಯಲ್ಲಿ ಎಂಜಲು ಬಳಿದ, ಕುದುರೆಗಳ ಕಾಲ್ತೊಳೆದ, ಕೃಷ್ಣ

ಕೃಷ್ಣ ಪಾಂಡವರಿಗೆ ಅಷ್ಟು ವಶನಾಗಲು ಏನು ಕಾರಣ? ಅವರು ಅಗ್ರಪೂಜೆ ಕೊಟ್ಟರು ಅಗ್ರಪೂಜೆ ಕೊಟ್ಟವರಿಗೆ ವನವಾಸವಾಯಿತೆಂದು ಜನರಾಡಿಕೊಳ್ಳಬಾರದೆಂದು ಸಾರಥ್ಯ ಮಾಡಿದ, ಕುದುರೆಗಳ ಕಾಲ್ತೊಳೆದನೆಂದೇಕೆ ಹೇಳಬಾರದು? ಇದಕ್ಕೆ ಉತ್ತರ 'ನಿರು-ಪಮಾನಂದಾತ್ಮ' ಎಂದು

***ನಿರುಪಮಾನಂದಾತ್ಮ***

ಹರಿಪೂಜೆಯಿಂದ ಆನಂದ ಪಡೆಯಬೇಕಾಗಿಲ್ಲ ನಿಂದೆಯಿಂದ ದುಃಖ ಹೊಂದು-ವುದೂ ಇಲ್ಲ

ಆನಂದಮೂರ್ತಿಮುಪಗುಹ್ಯ ಜಹುಸ್ತದಾಧಿಮ್

ಎಂದು ಭಾಗವತ ಹೇಳುವಂತೆ ಶ್ರೀಕೃಷ್ಣ ಆನಂದಸ್ವರೂಪ ಅವನಿಗೆ 'ಪಾರ್ಥಿವ ಶರೀರವಿಲ್ಲ ಪಾರ್ಥಿವ ಶರೀರವಿಲ್ಲದವನಿಗೆ ಪ್ರಿಯ ಅಪ್ರಿಯಗಳಿಲ್ಲ'

ಅಶರೀರಂ ವಾವ ಸಂತಂ ಪ್ರಿಯಾಪ್ರಿಯೇ ನ ಸ್ಪೃಶತಃ

ಎಂದು ಬೃಹದಾರಣ್ಯಕ ಹೇಳುತ್ತದೆ ಅದರಿಂದ ನಿರುಪಮ ಆನಂದಸ್ವರೂಪನಾದ ಕೃಷ್ಣ ಅಗ್ರಪೂಜೆಗೆ ವಶನಾಗಿ ಕುದುರೆಗಳ ಕಾಲ್ತೊಳೆದನೆನ್ನಲಾಗದು 'ಹಾಗಾದರೆ ಪ್ರಾರಬ್ಧಕರ್ಮವಿರಬಹುದೆ'ಂಬ ಕುಚೋದ್ಯಕ್ಕೆ ಉತ್ತರ 'ನಿರ್ಗತದುರಿತ' ಎಂದು

***ನಿರ್ಗತದುರಿತ***

ದುರಿತವಿಲ್ಲದವ ಕೃಷ್ಣ ಇದು ಉಪಲಕ್ಷಣ ಸುಕೃತದುಷ್ಕೃತಗಳೆರಡರ ಲೇಪವೂ ಇಲ್ಲದವ ಆತ

ನ ಕರ್ಮಣಾ ವರ್ಧತೇ ನೋ ಕನೀಯಾನ್

ಹಾಗಾದರೆ ಕುದುರೆಗಳ ಕಾಲ್ತೊಳೆದುದೇಕೆ? ಇದಕ್ಕೆ 'ದೇವವರೇಣ್ಯ' ಎಂಬಲ್ಲಿ ಉತ್ತರವಿದೆ

***ದೇವವರೇಣ್ಯ***

ಬ್ರಹ್ಮಾದಿ ದೇವತೆಗಳಿಗೆ ಆರಾಧ್ಯ ಸರ್ವೋತ್ತಮನಾದ ಹರಿ ದೇವತೆಗಳು ಕ್ಷೀರ-ಸಾಗರದ ಬಳಿಗೆ ಹೋಗಿ ಅವನನ್ನು ಬೇಡಿದರು 'ಅವತರಿಸು, ನಿನ್ನ ಮಂಗಳ ಚರಿತೆಗಳನ್ನು ತೋರು!' ಎಂದು ಅದರಂತೆ ಹರಿ ತೋರಿದ ಒಂದು ಮಂಗಳಚರಿತೆಯೆ ಇದು— ಕುದುರೆಗಳ ಕಾಲು ತೊಳೆದುದು ಸರ್ವೇಶ್ವರನಾದ ಹರಿ ಹಾಗೆ ಮಾಡಿದನೆಂದರೆ ಎಂಥ ಅದ್ಭುತ! ಅದನ್ನು ಕಂಡು ದೇವತೆಗಳು ಅದ್ಭುತ ರಸಾನುಭವದಲ್ಲಿ ಮುಳುಗಿದರು ಕಾಣುವ ಸವಿಯ ಭಾಗ್ಯ ಅವರದಾಯಿತೆಂದು ನಾವು ಕೊರಗಬೇಕಾಗಿಲ್ಲ ಆದರದಿಂದ ನಾಲಿಗೆಯಲ್ಲಿ ಒಮ್ಮೆ ಹೇಳಿದರೂ ಸಾಕು ಕರೆದರೂ ಸಾಕು, ಹರಿ ಒಲಿಯುವನು, ಬಂದೊದಗುವನು ತನ್ನವರ ಬಳಿಗೆ

***ಆದರದಿ ಕರೆಯಲು***

ಆದರದಿಂದ ಕರೆದರೆ ಸಾಕು ನಿಜ ಆದರೆ ಜನ ಕರೆಯುವುದಿಲ್ಲ

ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।
ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥

'ನಾರಾಯಣ' ಎಂಬ ಸುಲಭವಾದ ಮಂತ್ರವಿದೆ ಏನು ಬೇಕಾದರೂ ನುಡಿಯಬಲ್ಲ ನಾಲಿಗೆ ವಶದಲ್ಲಿದೆ ಆದರೂ ಜನ ನರಕದಲ್ಲಿ ಬೀಳುತ್ತಾರಲ್ಲ! ಇದೊಂದು ಅದ್ಭುತವೇ ಸರಿ! ಎಂದು ಶ್ರೀಕೃಷ್ಣಾಮೃತಮಹಾರ್ಣವದಲ್ಲಿ ಉಕ್ತವಾಗಿದೆ

ಪುರಂದರದಾಸರು ಹೇಳುತ್ತಾರೆ

'ನಾರಾಯಣ ಎನ್ನಬಾರದೆ? ನಿಮ್ಮ
ನಾಲಿಗೆಯೊಳು ಮುಳ್ಳು ಮುರಿದಿಹುದೆ? ಕಲ್ಲು ಜಡಿದಿಹುದೆ?
ವಾರಣಾಸಿಗೆ ಪೋಗಿ ದೂರ ಬಳಲಲೇಕೆ? ನೀರ ಕಾವಡಿ ಪೊತ್ತು ತಿರುಗಲೇಕೆ?
ಊರೂರು ತಪ್ಪದೆ ದೇಶಾಂತರವೇಕೆ? ದಾರಿಗೆ ಸಾಧನವಲ್ಲವೆ, ಹರಿನಾಮ?

ಏನೂ ಶ್ರಮಪಡದೆ ಆದರದಿಂದ ಒಮ್ಮೆ ಕರೆದರೂ ಸಾಕು, ತನ್ನವರ ಬಳಿಗೆ ಬಂದೊದಗುವ ಹರಿಯ ಕರುಣೆಗೆ ಎಣೆಯುಂಟೆ?

ಅಥವಾ ಶರಣಜನಮಂದಾರನೂ ಶಾಶ್ವತಕರುಣಿಯೂ ಕಮಲಾಕಾಂತನೂ, ಕಾಮದನೂ, ಪರಮಪಾವನತರನೂ, ಸುಮಂಗಳಚರಿತನೂ, ಪಾರ್ಥಸಖನೂ, ನಿರುಪಮಾನಂದಾತ್ಮನೂ, ನಿರ್ಗತದುರಿತನೂ ಆದ ದೇವವರೇಣ್ಯನು ಎಂದೂ ಯಾವ ಕಾಲಕ್ಕೂ ಆದರದಿ ಕರೆಯಲು ಕರೆಯುವುದಕ್ಕಾಗಿ ತನ್ನವರ ಬಳಿಗೆ ಬಂದೊದಗುವನು ಎಂದು ಅನ್ವಯಿಸಿಕೊಂಡರೆ ಹರಿಯ ಕರುಣೆಗೆ ಇನ್ನೂ ಉತ್ತಮವಾದ ನಿದರ್ಶನವನ್ನು ದಾಸರಾಯರು ಕೊಡುತ್ತಿರುವಂತೆ ಕಾಣುತ್ತದೆ ಪುರಂದರದಾಸರು ನವಕೋಟಿ ನಾರಾಯಣರಾಗಿ ಹಣ ಎಣಿಸುತ್ತಿದ್ದರೆ 'ಸಾಕು ಮಾಡು, ತಾಳ ತಂಬೂರಿ ಕೈಗೆ ತೆಗೆದುಕೊಳ್ಳೆಂ' ದು ಹೇಳುತ್ತಾ 'ಕರೆಯಲು' ಬಂದ ಶ್ರೀಹರಿ ಕೂಸೀಮಗದಾಸರಾಗಿ ಬವಣೆ ಪಡುತ್ತಿದ್ದ ವಿಜಯದಾಸರನ್ನು ಕಾಶಿಗೆ ಕರೆಸಿಕೊಂಡು ಸ್ವಪ್ನದಲ್ಲಿ ಬದರಿಗೂ ಕರೆಸಿಕೊಂಡು ಅಂಕಿತಪ್ರದಾನ ಮಾಡಿಸಿ ತನ್ನೆಡೆಗೆ ಕರೆಸಿಕೊಂಡ ಗೋಪಾಲದಾಸರು ಭವಿಷ್ಯ ಹೇಳುತ್ತ ಹಣ ಕೂಡಿಸಿಕೊಳ್ಳುತ್ತಿದ್ದಾಗ, ಜಗನ್ನಾಥ ದಾಸರು ಪಾಂಡಿತ್ಯ ಪ್ರದರ್ಶನ ಮಾಡುತ್ತ ಕರ್ತವ್ಯ ಮರೆತಿದ್ದಾಗ ವಿಜಯದಾಸರ ಮೂಲಕ ಅವರನ್ನೂ ತನ್ನೆಡೆಗೆ ಕರೆಸಿಕೊಂಡ ಅದಕ್ಕೆ ಕರೆಯಲು ಬಂದೊದಗಿದ ಹೀಗೆ ತನ್ನವರು ಪ್ರಾರಬ್ಧವಶಾತ್ ತನ್ನ ಸೇವೆ ಮರೆತು ಕುಳಿತರೂ ಹರಿ ಯಾವ ಕಾಲಕ್ಕೂ ಮರೆಯುವುದಿಲ್ಲ ತಾನೇ ಕರೆಯಲು ಬರುತ್ತಾನೆ ಹರಿಯ ಈ ಕರುಣೆಗೆ ಎಣೆಯುಂಟೆ? ಎನ್ನುತ್ತಿದ್ದಾರೆ ದಾಸರಾಯರು

**ಜನನಿಯನು ಕಾಣದಿಹ ಬಾಲಕ**
**ನೆನೆನೆನೆದು ಹಲಬುತಿರೆ ಕತ್ತಲೆ-**
**ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲಿ ।**
**ತನಯನಂ ಬಿಗಿದಪ್ಪಿ ರಂಬಿಸಿ**

**ಕನಲಿಕೆಯ ಕಳೆವಂತೆ ಮಧುಸೂ-**
**ದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು ॥ ೧೧ ॥**

ತಾಯಿಯನ್ನು ಕಾಣದಿರುವ ಮಗು 'ಅಮ್ಮ! ಅಮ್ಮ!' ಎಂದು ನೆನೆನೆನೆದು ಅಮ್ಮ ಕಾಣಿಸುತ್ತಿಲ್ಲವೆಂಬ ದುಃಖ, ಏಕೆ ಬಿಟ್ಟು ಹೋದಳೆಂಬ ಕೋಪಗಳಿಂದ ಅಳುತ್ತಿರುವಾಗ ಕತ್ತಲೆ ಮನೆಯೊಳಗಿದ್ದು ಅವನನ್ನು ನೋಡುತ್ತ ನಗುತ್ತಾಳೆ ನಕ್ಕು ಹೊರಗೆ ಬಂದು ಸಂತೋಷದಿಂದ ಮಗನನ್ನು ಬಿಗಿದಪ್ಪಿ ಸಂತೈಸಿ ರಮಿಸುತ್ತಾಳೆ ದುಃಖಕೋಪಗಳನ್ನು ಕಳೆಯುತ್ತಾಳೆ ಹಾಗೆಯೆ ಹರಿಯನ್ನು ಕಾಣದಿರುವ ಭಕ್ತ 'ಹರಿ! ಹರಿ!' ಎಂದು ನೆನೆನೆನೆದು ಹರಿಯ ದರ್ಶನವಿಲ್ಲದ ದುಃಖ, ದರ್ಶನ ನೀಡಲು ಏಕೆ ವಿಲಂಬ ಮಾಡುತ್ತಿದ್ದಾನೆ ಎನ್ನುವ ಕೋಪಗಳಿಂದ ಅಳುತ್ತಿರುವಾಗ ಅವನ ಅಜ್ಞಾನದ ಕತ್ತಲ ಮನೆಯಲ್ಲಿ ಹರಿ ಅಡಗಿ ಕುಳಿತಿದ್ದು ಅವನನ್ನು ನೋಡುತ್ತ ನಗುತ್ತಾನೆ ನಕ್ಕು ಮೈದೋರಿ ಆನಂದದಿಂದ ಬಿಗಿದಪ್ಪಿ ಸಂತೈಸಿ ರಮಿಸುತ್ತಾನೆ ದುಃಖಕೋಪಗಳನ್ನು ಕಳೆಯುತ್ತಾನೆ ಹೀಗೆ ತನ್ನವರಿದ್ದೆಡೆಗೆ ಬಂದು ಸಲಹುತ್ತಾನೆ

ಇದಕ್ಕೆ ಉದಾಹರಣೆ ಗೋಪಿಯರಿಗೆ ಕೃಷ್ಣನಲ್ಲಿದ್ದ ಭಕ್ತಿ ಲೌಕಿಕ ಕಾಮಭಾವನೆಯಾಗಿ ತಿರುಗಿದಾಗ ಕಾಮಿಜನರಿಗೆ ತಾನು ಲಭ್ಯನಲ್ಲವೆಂದು ಅವರಿಗೆ ತಿಳಿಸುವುದಕ್ಕಾಗಿ ಕೃಷ್ಣ ಮರೆಯಾದ ಗೋಪಿಯರ ಅಜ್ಞಾನದ ಕತ್ತಲಲ್ಲಿ ಅಡಗಿ ಕುಳಿತ ಅವರು ಶುದ್ಧ ಭಕ್ತಿಯಿಂದ ನೆನೆದು ಹಲುಬಿದಾಗ ನೋಡಿ ನಕ್ಕು ಮೈದೋರಿದ ಬಿಗಿದಪ್ಪಿ ರಮಿಸಿದ ಸರಸವಾಡಿ ಅವರ ದುಃಖಕೋಪಗಳನ್ನು ಕಳೆದ 'ಕೃಷ್ಣ! ಎಲ್ಲಿಗೆ ಹೋದೆ? ಬರಲು ಏಕೆ ವಿಲಂಬ ಮಾಡಿದೆ?' ಎಂದು ಅವರು ಕೋಪದಿಂದ ಕೇಳಿದರೆ ಹೇಳುತ್ತಾನೆ, 'ನಿಮ್ಮನ್ನು ನಾನು ಬಹಳ ಹುಡುಕಬೇಕಾಯಿತು ಮರಗಳ ಎಲೆಗಳ ಸಂದಿನಿಂದ ಬರುವ ಬೆಳದಿಂಗಳ ಕೋಲಿಗೂ ನಿಮ್ಮ ತೆಳು ಮೈಗೂ ವ್ಯತ್ಯಾಸ ತಿಳಿಯದೆ ಹೋದೆ ಗಿಳಿಯ ಮಾತಿಗೂ, ನಿಮ್ಮ ಮಾತಿಗೂ, ಕೋಗಿಲೆಯ ದನಿಗೂ ನಿಮ್ಮ ದನಿಗೂ ವ್ಯತ್ಯಾಸ ಕಾಣದೆ ಭ್ರಮಿಸಿದೆ. ಆದರಿಂದ ವಿಲಂಬವಾಯಿತು'

ಹರಿಯನ್ನು ನಲ್ಲನೆಂದು ಆರಾಧಿಸಿದ ಗೋಪಿಯರ ಉದಾಹರಣೆ ಆ ಗೋಪಿಯ-ರಿಗೇ ಅನ್ವಯಿಸೀತು ಎಲ್ಲ ಭಕ್ತರಿಗೆ ಅಲ್ಲ ಅವರಿಗೆ ಹರಿ ಜನನಿ, ತಾಯಿ

ಭಗವಂತ ತಂದೆ ಎಂದು 'ಯೋ ನಃ ಪಿತಾ ಜನಿತಾ' ಎಂಬ ಶ್ರುತಿ ಹೇಳುತ್ತಿದೆ ತಾಯಿಗೆ ಅವನನ್ನು ಏಕೆ ಹೋಲಿಸುತ್ತಾರೆ ದಾಸರಾಯರು? ತಂದೆಗಿಂತ ತಾಯಿಗೇ ಮಕ್ಕಳಲ್ಲಿ ಹೆಚ್ಚು ಮಮತೆ, ಕಾರುಣ್ಯ ಎನ್ನುವುದು ಸರಿಯೆ ಆದರೆ ಹರಿ ತಂದೆಯೆ ತಾನೆ?

ವಸ್ತುತಃ ತಂದೆಯೂ ಹೌದು, ತಾಯಿಯೂ ಹೌದು ಅವನಿಗೆ ಸ್ತ್ರೀಪುರುಷರೂಪ-ಗಳೆರಡೂ ಉಂಟು ಅವುಗಳಿಗೆ ಭೇದವಿಲ್ಲ

**ಹರಿಕರುಣೆ ಅಪಾರ**

ಹರಿಯನ್ನು ತಾಯಿಗೆ ಹೋಲಿಸುವ ಮೂಲಕ ಅವನ ಕರುಣೆ ಅಪಾರ ಎನ್ನುತ್ತಿದ್ದಾರೆ ದಾಸರಾಯರು

ಹರಿ ಸಾತ್ವಿಕರಿಗೆ ಮಾತ್ರ ಕರುಣಾಳು, ಹೊರತು ದುಷ್ಟಸ್ವಭಾವದವರಿಗೆ ಅಲ್ಲ

ಬಿಟ್ಟವರ ಭವಪಾಶದಿಂದಲಿ ಕಟ್ಟುವನು ಬಹು ಕಠಿಣನಿವ

ಎಂದು ದಾಸರಾಯರೆ ಹೇಳುತ್ತಾರೆ ಆದರೆ ಇದರಿಂದ ಕರುಣೆಗೆ ಮಿತಿ ಬಂದಿತೆನ್ನ-ಕೂಡದು ಅವನ ಕರುಣೆಗೆ ಏನೂ ಕುಂದಿಲ್ಲ ಇದು ಗುಣವೆ ದುಷ್ಟರಿಗೆ ಕರುಣೆ-ದೋರಿದರೆ ಅದೇ ದೋಷವಾದೀತು

ಕ್ಷಮಾ ಸರ್ವತ್ರ ಧರ್ಮೋ ನ ಪಾಪಹೇತುಶ್ಚ ದುರ್ಜನೇ

'ಕ್ಷಮೆ ಎಲ್ಲ ಕಡೆ ಒಳ್ಳೆಯದಲ್ಲ ದುರ್ಜನರಲ್ಲಿ ಕ್ಷಮೆ ತೋರುವುದು ಪಾಪ' ಎಂದು ನಿರ್ಣಯದಲ್ಲಿ ಭೀಮಸೇನ ಹೇಳಿದಂತೆ ಕ್ಷಮೆ, ಕರುಣೆ ಎಲ್ಲವೂ ದುಷ್ಟರ ವಿಷಯದಲ್ಲಿ ಗುಣವೆನಿಸುವುದಿಲ್ಲ, ಅವಗುಣವೆನಿಸುತ್ತದೆ

ಹಾಗಾದರೆ ವೇದವ್ಯಾಸರು ತಮ್ಮ ಸೂತ್ರಕ್ಕೆ ತಮ್ಮ ಅಭಿಪ್ರಾಯಕ್ಕೆ ವಿರುದ್ಧವಾಗಿ ಭಾಷ್ಯ ಬರೆದವರನ್ನು ತಕ್ಷಣವೇ ಸುಡದಿದ್ದುದು ಕ್ಷಮಾಗುಣವಾಗುವದೇ? ಅವಗುಣವಾಗುವು-ದಿಲ್ಲವೇ? ಎಂದರೆ, ಶಿಶುಪಾಲನ ಶತಾಪರಾಧ ಕ್ಷಮಿಸಿದಂತೆ ಇದು ಕೇವಲ ತಾತ್ಕಾಲಿಕ ಕ್ಷಮೆ ಇದು ಅವಗುಣವಾಗುವುದಿಲ್ಲ ಇಲ್ಲದಿದ್ದರೆ ಶಿಶುಪಾಲನೊಳಗಿದ್ದ ದ್ವೇಷಿ ಜೀವನಿಗೆ ಆಗಲೇ ಶಿಕ್ಷೆ ಕೊಡಬಹುದಾಗಿತ್ತು ಹಾಗೆ ಮಾಡಲಿಲ್ಲ ಕೃಷ್ಣ ಲೋಕದಲ್ಲಿಯೂ ಅಪರಾಧಿ ಗಳು ಒಂದು ಸಲ ಎರಡು ಸಲ ಅಪರಾಧ ಮಾಡಿದಾಗ ನಾವು ಸಾಮಾನ್ಯವಾಗಿ ಕ್ಷಮಿಸುವುದುಂಟು ಇದು ಗುಣವೆ ಹರಿಯೂ ಹೀಗೆ ಅಪಭಾಷ್ಯವನ್ನು ಕ್ಷಮಿಸಿದ ಮುಂದೆ ಅದರಿಂದ ಸಜ್ಜನರಿಗೆ ಬಹಳ ತಾಪ ಉಂಟಾದಾಗ ಮಾತ್ರ ಕ್ಷಮಿಸದೆ ಶ್ರೀಮದಾಚಾರ್ಯ-ರನ್ನು ಕಳಿಸಿದ ಎಂದು ಸುಮಧ್ವವಿಜಯ ಹೇಳಿದೆ ದುಷ್ಟರಿಗೆ ತತ್ಕಾಲದಲ್ಲಿ ಕ್ಷಮೆ ಸಜ್ಜನರಿಗೆ ಶಾಶ್ವತ ಕ್ಷಮೆ, ಶಿಶುಪಾಲನಲ್ಲಿದ್ದ ಜಯನಿಗೆ ಹಾಗೆ 'ಹೊಟ್ಟೆಯಲಿ ಇಂಬಿಟ್ಟು' ಅನುಗ್ರಹಿಸಿದ ಹೀಗೆ ದುಷ್ಟರಿಗೂ ಕ್ಷಮೆ ನೀಡುವ ಹರಿ ಸಜ್ಜನರಿಗೆ ಎಷ್ಟು ಕ್ಷಮಾಶೀಲನಿರಬಹುದೆಂದು ಕೈಮುತ್ಯನ್ಯಾಯದಿಂದ ಸೂಚಿಸುತ್ತ

ನ ವ್ಯಾಸರೂಪೋ ಭಗವಾನ್ ಕ್ಷಮಾಬ್ಧಿಃ

'ವ್ಯಾಸರು ಕ್ಷಮಾಸಮುದ್ರರು, ಅವರ ಕ್ಷಮೆಗೆ ಪಾರವಿಲ್ಲ' ಎಂದರು ಪಂಡಿತಾಚಾರ್ಯರು ಬರೇ ಆಲಂಕಾರಿಕವಾಗಿ ಹೇಳಿಲ್ಲ

ಭಕ್ತರ ಭಕ್ತ್ಯನುಸಾರ ಫಲ ನೀಡುತ್ತಾನೆ ಹರಿ 'ಭಕ್ತರು!' ಎಂದು ವಿಪರೀತವಾಗಿ ಸಲುಗೆ ತೋರುವುದು ತಲೆ ಮೇಲೆ ಕುಳ್ಳಿರಿಸಿಕೊಳ್ಳುವುದು, ಇವೆಲ್ಲವನ್ನೂ ಮಾಡುವುದಿಲ್ಲ

ದುಷ್ಟರ ದುಷ್ಟಸ್ವಭಾವವನ್ನೇ ಅಳಿದು ಶಾಶ್ವತ ಸುಖವನ್ನೂ ನೀಡುವುದಿಲ್ಲ. ಹಾಗೆ ಮಾಡಿದರೆ ಅದು ವೈಷಮ್ಯವೆಂಬ ದೋಷವಾಗುತ್ತದೆ. ಭಕ್ತರ ಯೋಗ್ಯತೆಗನುಗುಣವಾಗಿ ಅವರ ಭಕ್ತಿಯ ಪ್ರಮಾಣಕ್ಕೆ ಅನುಗುಣವಾಗಿಯೆ ಕರುಣೆ ತೋರುತ್ತಾನೆ. 'ಏಧಮಾನ- ದ್ವಿಟ್' ಎನಿಸಿದವನಲ್ಲವೆ? ಇದರಿಂದಲೂ ಅವನ ಕರುಣೆ ವೈಷಮ್ಯದೋಷರಹಿತವಾಗಿ ನಿರ್ದುಷ್ಟವಾಯಿತು, ಗುಣವಾಯಿತು, ಹೊರತು ಅವನ ಕರುಣೆಗೆ ಏನೂ ಕುಂದಿಲ್ಲ. ಯೋಗ್ಯತಾನುಗುಣವಾಗಿಯಾದರೂ ಅವನು ಫಲ ಏಕೆ ಕೊಡಬೇಕಾಗಿತ್ತು? ಕರುಣೆ ಏಕೆ ತೋರಬೇಕಾಗಿತ್ತು? ಅದರಿಂದ ಅವನಿಗೇನಾಗಬೇಕಾಗಿದೆ? ಪೂರ್ಣಾನಂದ ಆತ.

ಲೋಕದಲ್ಲಿ ದುಃಖಿಗಳನ್ನು ಕಂಡಾಗ ನಮಗೆ ದುಃಖವುಂಟಾಗುವುದು. ಅದಕ್ಕೆ ಕರುಣೆದೋರುತ್ತೇವೆ. ಅಂದರೆ ಅದರ ಹಿನ್ನೆಲೆಯಲ್ಲಿ ನಮ್ಮ ದುಃಖಪರಿಹಾರದ ಸ್ವಾರ್ಥ ಅಡಗಿದೆ. ಹರಿಗೆ ದುಃಖವೆಂಬುದೆ ಇಲ್ಲ. ಅವನು ಸ್ವಾರ್ಥದ ಲೇಶವೂ ಇಲ್ಲದ ನಿರ್ಮಲ ಕರುಣೆಯನ್ನೇ ಮೆರೆಯುತ್ತಾನೆ.

ಮಾತೆಯ ಕರುಣೆ ನಿಃಸ್ವಾರ್ಥದ್ದೆಂದು ಲೋಕದಲ್ಲಿ ಪ್ರಸಿದ್ಧ. ಆದರೆ ಮಗುವಿಗೆ ಒಂದಿಷ್ಟು ದುಃಖವಾದರೂ ಅವಳಿಗೆ ಅಸಹನೀಯ ದುಃಖವಾಗುತ್ತದೆ. ಹರಿಕರುಣೆ ಮಾತ್ರ ಹಾಗಲ್ಲ. ಅದರಿಂದ ಅವನ ಕರುಣೆ ಅಪಾರ, ಅನ್ಯಾದೃಶ. ಮಾತೆಗೆ ಹೋಲಿಸಿರುವುದು ಹಿಂದಿನ ಪದ್ಯದಲ್ಲಿ ಕಲ್ಪವೃಕ್ಷದ ಹೋಲಿಕೆ ಕೊಟ್ಟಂತೆ. ವಸ್ತುತಃ ಅವನಿಗೆ ಅವನೆ ಸರಿಯಾದ ಹೋಲಿಕೆ. ಇಲ್ಲದಿದ್ದರೆ ತಾಯಿಯ ಹೋಲಿಕೆ ಎಷ್ಟು ಸಂಗತ? ತಾಯಿ ಮಗುವನ್ನು ಬಿಟ್ಟು ಕತ್ತಲೆ ಮನೆಯಲ್ಲಿ ಅಡಗುವುದು ಮಗುವನ್ನು ಅಳಿಸಿ ಅದಕ್ಕೆ ತಾನು ಎಷ್ಟು ಇಷ್ಟಳೆಂಬುದನ್ನು ತಿಳಿಯುವ ಉದ್ದೇಶದಿಂದ. ಅಳಿಸಿದ್ದಕ್ಕಿಂತ ಎಷ್ಟೋ ಹೆಚ್ಚು ನಗಿಸುವ ಉದ್ದೇಶದಿಂದ. ತನಗೆ ಈ ಆಟದ ಸುಖ ಪಡೆಯುವ ಉದ್ದೇಶವೂ ಇಲ್ಲದಿಲ್ಲ. ಆದರೆ ಹರಿ ಭಕ್ತನನ್ನು ಏಕೆ ಪರೀಕ್ಷಿಸಬೇಕು? ಅವನಿಗೆ ತಿಳಿಯದೆ? ಅಳಿಸುವುದೇಕೆ? ಅಳಿಸಿ ನಗಿಸುವ ಆಟ- ವಾದರೂ ಅವನಿಗೆ ಏಕೆ ಬೇಕು? ಅದರಿಂದ 'ನಹಿ ದೃಷ್ಟಾಂತೇ ಸರ್ವಸಾಮ್ಯಮ್' ಎಲ್ಲ ಸಾಮ್ಯ ವಿವಕ್ಷಿತವಲ್ಲ ಎನ್ನಬೇಕು. ಹರಿ ಜೀವನಿಂದ ಮೋಕ್ಷಸಾದನೆ ಮಾಡಿಸುತ್ತಿದ್ದಾನೆ. ಜೀವನ ಸ್ವಭಾವದಲ್ಲಿ ಅಡಗಿರುವ ಜ್ಞಾನ ಆನಂದಾದಿ ಗುಣ ವ್ಯಕ್ತವಾಗಲೆಂದು ಈ ಸಾಧನೆ. ಅದಕ್ಕೆ ಹರಿ ಸಂಸಾರಸುಖಭೋಗದಲ್ಲಿ ವೈರಾಗ್ಯ ಬರಲೆಂದು ತಾಪತ್ರಯ ನೀಡುತ್ತಾನೆ. ತಾನು ಮರೆಯಾಗಿರುತ್ತಾನೆ. ಆಗ ಜೀವ ತಾಯಿಂದ ಅಗಲಿದ ಮಗುವಿನಂತೆ ನೆನೆನೆನೆದು ಹಲುಬುವುದನ್ನು ನೋಡಿ ಸಹಿಸಲಾರದೆ ಕರುಣೆಯಿಂದ ದರ್ಶನ ನೀಡುತ್ತಾನೆ. ಸಂತೈಸು- ತ್ತಾನೆ. ಅವನ ಪ್ರಾಚೀನ ಕರ್ಮಕ್ಕೆ ಅನುಗುಣವಾಗಿ ಸುಖ ನೀಡುತ್ತಾನೆ. ಆ ಕರ್ಮ ಅತ್ಯಲ್ಪ. ಅದೂ ಜೀವ ಸ್ವತಂತ್ರವಾಗಿ ಮಾಡಿದ್ದಲ್ಲ. ತಾನೇ ಮಾಡಿಸಿದ್ದಾನೆ. ಆದರೆ ಅದಕ್ಕೇ ಮಹಾಫಲ ನೀಡುತ್ತಾನೆ. ಇದು ಅವನ ಅಪಾರ ಕರುಣೆ. 'ಪತ್ರಂ ಪುಷ್ಪಂ ಫಲಂ ತೋಯಂ' 'ಒಂದು ದಳ ಶ್ರೀತುಳಸಿ, ಬಿಂದು ಗಂಗೋದಕ'ವೂ ಅವನಿಗೆ, ದೊಡ್ಡ ಕಾಣಿಕೆ! ಇದನ್ನು

ಮುಂದೆ 'ಬಡ ಬ್ರಾಹ್ಮಣನ ಒಪ್ಪಿಡಿಯವಲಿಗಖಿಳಾರ್ಥ ಕೊಟ್ಟ' ಎಂದು ದಾಸರಾಯರೆ ಹೇಳುತ್ತಾರೆ

**ಜನನಿಯನು ಕಾಣದಿಹ ಬಾಲಕ**

ತಾಯಿ ತನ್ನ ಜೊತೆಗಿರುವ ಮಗುವನ್ನೇ ದೂರ ಬಿಟ್ಟು ಮರೆಯಾಗಿ ಕುಳಿತು ಆಟವಾಡ-ಬಹುದು ಕೆಲವೊಮ್ಮೆ ಕಾರಣಾಂತರಗಳಿಂದ ಎಳೆಯ ಶಿಶು ತಾಯಿಂದ ದೂರಾದರೆ ಆಗಲೂ ಅದು 'ಜನನಿಯನು ಕಾಣದಿಹ ಬಾಲಕ'ನೆನಿಸಬಹುದು ಭಗವಂತನ ಬಳಿಯಲ್ಲಿಯೆ ಇರುವ ದೇವತೆಗಳು ಋಷಿಗಳು ಮುಂತಾದವರು ಮೊದಲನೆ ವರ್ಗ-ದವರು ಅಜ್ಞ ಮಾನವರು ಎರಡನೆ ವರ್ಗಕ್ಕೆ ನೇರುತ್ತಾರೆ

***ನೆನೆನೆನೆದು ಹಲಬುತಿರೆ***

ತಾಯಿಯ ಜೊತೆಗೇ ಇರುವ ಮಗು ತಾಯಿ ಅಡಗಿ ಕುಳಿತಾಗ ಅಳುವುದು ಸ್ವಾಭಾ-ವಿಕ ಹಾಗೇ ಭಗವಂತನ ಬಳಿಯೆ ಇರುವ ದೇವತೆಗಳೂ ದೇವಾಂಶಸಂಭೂತರಾದ ಮಾನವರೂ ಭಗವಂತನ ದರ್ಶನವಿಲ್ಲದಾಗ ಹಂಬಲಿಸುವುದುಂಟು

> ನೋಡಲಿಲ್ಲವೋ ನಿನ್ನ, ಪಾಡಲಿಲ್ಲವೋ ಮಹಿಮೆ!
> ಗಾಡಿಕಾರ ಕೃಷ್ಣ ಬೇಡಿಕೊಂಬೆನೊ ನಿನ್ನ!
> ಇಂದು ಎನಗೆ, ಗೋವಿಂದ, ನಿನ್ನ ಪಾದಾರ-
> ವಿಂದವ ತೋರೋ, ಮುಕುಂದ!

ಎನ್ನುವುದುಂಟು 'ನೋಡಲಿಲ್ಲವೊ!' ಎಂದರೆ ಎಂದೂ ನೋಡಲೇ ಇಲ್ಲವೆಂದರ್ಥವಲ್ಲ ಎಷ್ಟು ನೋಡಿದರೂ ನಾಕೆನಿಸದುದು, ಇನ್ನೂ ನೋಡಬೇಕೆನಿಸುವಂಥದ್ದು ಎಂದರ್ಥ ಅದರಿಂದ ಹರಿ ಮರೆಯಾದರೆ ಭಕ್ತ ಹಲುಬುತ್ತಾನೆ ಆ ದುಃಖ ಜನನಿಯನ್ನು ಕಾಣದೆ ಹಲುಬುವ ಬಾಲಕನ ದುಃಖಕ್ಕಿಂತ ಕಡಿಮೆ ಏನಲ್ಲ ಅದನ್ನು ನೋಡಿ ಹರಿ ನಗುತ್ತಾನೆ, ನಗುತ್ತ ಬಂದು ಬಿಗಿದಪ್ಪಿ ಆ ದುಃಖಕ್ಕಿಂತ ನೂರಾರು ಪಟ್ಟು ಅಧಿಕವಾದ ಆನಂದ ನೀಡುತ್ತಾನೆ

ಎಳವೆಯಲ್ಲಿಯೆ ತಾಯಿಂದ ದೂರಾದ ಮಗು ತಾಯಿಯನ್ನು ನೋಡಿದ ನೆನಪೇ ಇಲ್ಲದೆ ತನ್ನಷ್ಟಕ್ಕೆ ತಾನಿರುತ್ತದೆ ಅದು ತಾಯಿಯನ್ನು ನೆನೆಯುವುದು ಶಕ್ಯವಿಲ್ಲ ಆದರೆ ಜೊತೆಯ ಬಾಲಕರು ತಾಯಿಯ ಪ್ರೀತಿ ವಾತ್ಸಲ್ಯದ ಸುಖ ಅನುಭವಿಸುವುದನ್ನು ಕಂಡು 'ನನಗೂ ಒಬ್ಬಳು ತಾಯಿ ಇರಲೇಬೇಕು ಎಲ್ಲಿರುವಳು?' ಎಂದು ನೆನೆನೆನೆದು ಹಲುಬು-ವುದುಂಟು ಅನಾದಿಕಾಲದಿಂದ ಸಂಸಾರಬದ್ಧನಾಗಿ ಭಗವಂತನಿಂದ ದೂರಾದ ಭಕ್ತ ಮೊದಲಿಗೆ ಭಗವಂತನನ್ನು ಏನೂ ನೆನೆಯಲಾರ ಈ ಅಭಿಪ್ರಾಯದಿಂದಲ,

ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।
ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥

ಎನ್ನುವ ಸೂಕ್ತಿ ಹೊರಟಿದೆ ಆದರೆ ತನ್ನನ್ನು ಮರೆತು ಸುಮ್ಮನೆ ಕುಳಿತ ಈ ಭಕ್ತನಿಗೆ ಸಂಕಟ ನೀಡಿ 'ಸಂಕಟ ಬಂದಾಗ ವೆಂಕಟರಮಣ' ಎಂಬಂತೆ ತನ್ನ ಬಗ್ಗೆ ಜಿಜ್ಞಾಸೆ ಹುಟ್ಟಿಸುತ್ತಾನೆ ಶ್ರೀಹರಿ ಗುರೂಪದೇಶದ ಮೂಲಕ ತನ್ನ ಪರಿಚಯ ಮಾಡಿಸಿಕೊಳ್ಳುತ್ತಾನೆ ಆಗ ಭಕ್ತ ಭಗವಂತನನ್ನು ಕಾಣಲು ಹಾತೊರೆಯುತ್ತಾನೆ ನೆನೆನೆನೆದು ಹಲುಬುತ್ತಾನೆ ಭಗವಂತ ಬಳಿಗೆ ಬಂದು ಸಂತೈಸುತ್ತಾನೆ

ಅಪರೋಕ್ಷದರ್ಶನದ ಸವಿಯನ್ನು ಉಣಿಸಿ ಇನ್ನೂ ನೋಡಬೇಕೆಂಬ ಆಸೆ ಹುಟ್ಟಿಸಿ ತಿರುಗಿ ಮರೆಯಾಗಿ ನಿಂತು ಆಟವಾಡುತ್ತಾನೆ ಭಾಗವತದಲ್ಲಿ ನಾರದರು ತಮ್ಮ ಸ್ವಾನುಭವವನ್ನು ಹೀಗೇ ವರ್ಣಿಸುತ್ತಾರೆ

ನಗುವರೊ ರೋದಿಸುವರೊ ನಾಟ್ಯವಾಡುವರೊ!

ಎಂದು ದಾಸರಾಯರೆ ಬಣ್ಣಿಸುವಂತೆ ಜ್ಞಾನಿಯಾದ ಭಕ್ತ ಒಮ್ಮೆ ಅಳುತ್ತಾನೆ, ಇನ್ನೊಮ್ಮೆ ನಗುತ್ತಾನೆ, ನಾಟ್ಯವಾಡುತ್ತಾನೆ, ಹುಚ್ಚನಂತಿರುತ್ತಾನೆ ಅಳುವುದು ದರ್ಶನಕ್ಕಾಗಿ ಹಂಬ-ಲಿಸುವ ಕಾಲ ನಗುವುದು, ನಾಟ್ಯವಾಡುವುದು, ಹರಿ ಮೈದೋರಿ ಬಿಗಿದಪ್ಪಿ ಸಂತೈಸುವ ರಮಿಸುವ ಕಾಲ ಹಂಬಲಿಸುವ ಕಾಲದಲ್ಲಿ 'ಎಂದಿಗಾಹುದೊ, ನಿನ್ನ ದರ್ಶನ?' ಎಂದು ಬೇಡುತ್ತಾರೆ 'ನೋಡಲಿಲ್ಲವೊ ನಿನ್ನ! ಪಾಡಲಿಲ್ಲವೊ ಮಹಿಮೆ! ಗಾಡಿಕಾರ, ಕೃಷ್ಣ!' ಎನ್ನುತ್ತಾರೆ ರಮಿಸುವ ಕಾಲದಲ್ಲಿ ಆನಂದ ಆಶ್ಚರ್ಯಗಳಿಂದ ಪರವಶರಾಗಿ, 'ಆವ ಕಡೆ-ಯಿಂದ ಬಂದೆ ವಾಜಿವದನನೆ!' ಎನ್ನುತ್ತಾರೆ ಜೀವನ್ಮುಕ್ತ್ಯವಸ್ಥೆ ಕಳೆದು ಮುಕ್ತಿ ಬರುವವರೆಗೂ ಈ ತಾಯಿ ಮಕ್ಕಳಾಟ ಹೀಗೆ ನಡೆದಿರುತ್ತದೆ

### *ಕತ್ತಲೆ ಮನೆಯೊಳಡಗಿದ್ದು*

ಕತ್ತಲೆ ಮನೆಯಲ್ಲಿ ಅಡಗಿರುವವನು ಯಾರು? ತಾಯಿಯೆ? ಮಗುವೆ? ಸ್ಪಷ್ಟವಿಲ್ಲ 'ಹಲುಬುತಿರೆ ಕತ್ತಲೆ ಮನೆಯೊಳಡಗಿದ್ದು' ಎಂದು ಓದಿದರೆ ಬಾಲಕ ಕತ್ತಲೆ ಮನೆಯಲ್ಲಿ ಅಡಗಿದ್ದಾನೆ ಎಂದಂತಾಗುವುದು 'ಹಲುಬುತಿರೆ' ಎಂದ ಬಳಿಕ ಅಲ್ಪ ವಿರಾಮ ಹಾಕಿ 'ಕತ್ತಲೆಮನೆಯೊಳಡಗಿದ್ದು ಅವನ ನೋಡುತ' ಎಂದು ಓದಿದರೆ ಬಾಲಕನನ್ನು ನೋಡುವ ತಾಯಿ ಕತ್ತಲೆ ಮನೆಯಲ್ಲಿ ಅಡಗಿದ್ದಾಳೆ ಎಂದಾಗುತ್ತದೆ ಬಾಲಕನನ್ನು ಕತ್ತಲೆ ಮನೆಗೆ ತಳ್ಳಿ-ದರೆ ಸರಿಯಾಗುವುದಿಲ್ಲ ತಾಯಿ ಹಾಗೆ ಎಂದೂ ಮಾಡುವುದಿಲ್ಲ ತಾನೆ ಕತ್ತಲೆ ಮನೆಯಲ್ಲಿ ಅಡಗುತ್ತಾಳೆ ಆದರೆ ಪ್ರಕೃತದಲ್ಲಿ ಭಕ್ತನೆ ಅಜ್ಞಾನದ ಕತ್ತಲೆ ಮನೆಯಾದ ಲಿಂಗದೇಹ-ದೊಳಗೆ ಅಡಗಿದ್ದಾನೆ ಭಗವಂತನಲ್ಲ ಭಗವಂತನಿಗೆ ಅಜ್ಞಾನವಿಲ್ಲ ಆದರಿಂದ ದೃಷ್ಟಾಂತ ಅಸಮರ್ಪಕವಾದೀತು ಅದಕ್ಕೆ ಮಗುವನ್ನು ಕತ್ತಲಲ್ಲಿಟ್ಟು ತಾಯಿ ಬೆಳಕಿನಲ್ಲಿದ್ದರೆ ಹೇಗೆ? ಕತ್ತಲಲ್ಲಿರುವವರಿಗೆ ಬೆಳಕಿನಲ್ಲಿರುವವರು ಕಾಣಿಸುತ್ತಾರೆ ಬೆಳಕಿನಲ್ಲಿರುವವರಿಗೆ ಕತ್ತಲಲ್ಲಿ-

ರುವವರು ಕಾಣಿಸುವುದಿಲ್ಲ ತಾಯಿಗೆ ಮಗು ಕಾಣಿಸುವುದಿಲ್ಲ ಮಗುವಿಗೇ ತಾಯಿ ಕಾಣಿಸುತ್ತಾಳೆ ಎಂದಾಗುವುದರಿಂದ ಈ ತಾಯಿ ಮಕ್ಕಳ ಆಟ ಸಾಗುವುದಿಲ್ಲ

ಈ ಪ್ರಶ್ನೆಗೆ ಸಮಾಧಾನ ಹೀಗೆ ಹೇಳಬೇಕು ಜೀವನು ಅಜ್ಞಾನದ ಕತ್ತಲ ಮನೆಯಾದ ಲಿಂಗದೇಹದಲ್ಲಿ ಇರುವಂತೆ ಭಗವಂತನೂ ಅಲ್ಲಿಯೆ ಇರುತ್ತಾನೆ ಜೀವಪರಮಾತ್ಮರು ಜೊತೆಯಾಗಿಯೆ ಇರುತ್ತಾರೆ ಒಬ್ಬರನ್ನು ಒಬ್ಬರು ಬಿಟ್ಟಿರುವುದಿಲ್ಲ ಭಕ್ತನಿಗೇ ಅಜ್ಞಾನ, ಭಗವಂತನಿಗಿಲ್ಲ ನಿಜ ಆದರೂ ಭಕ್ತನ ಅಜ್ಞಾನದಲ್ಲಿ ಭಗವಂತ ಅಡಗಿರುತ್ತಾನೆ ಅಂದರೆ ಭಕ್ತನಿಗೆ ಭಗವಂತ ಕಾಣಿಸುವುದಿಲ್ಲ ಈಗ ತಾಯಿ ಮಕ್ಕಳಿಬ್ಬರೂ ಒಂದೇ ಕತ್ತಲೆ ಮನೆಯಲ್ಲಿ ಅಡಗಿದ್ದಾರೆ ಎನ್ನಬಹುದು ತಾಯಿ ದೂರ ನಿಂತು ಮಗು ಅಳುವುದನ್ನು ನೋಡುತ್ತಾಳೆ, ಅಂದರೆ ತಿಳಿಯುತ್ತಾಳೆ ಮಗುವಿಗೆ ತಾಯಿ ಏನು ಮಾಡುತ್ತಿರುತ್ತಾಳೆ, ತಿಳಿಯದು ಹೀಗೆ ದೃಷ್ಟಾಂತವನ್ನು ಹೊಂದಿಸಬಹುದು

ಅಥವಾ ಭಕ್ತ ಸಂಸಾರ ತಾಪತ್ರಯದಲ್ಲಿ ಸಿಲುಕಿ, ಕಾಪಾಡುವವರನ್ನು ಯಾರನ್ನೂ ಕಾಣದಿರುವುದೆ ಅಜ್ಞಾನದ ಕತ್ತಲು ಆ ಕತ್ತಲಲ್ಲಿ ಅಡಗಿದವ ಭಗವಂತನೆ ಭಕ್ತ ಕಾತರಗೊಂಡಾಗ ಭಗವಂತ ಸಕಾಲದಲ್ಲಿ ಬಂದು ಸಂತೈಸಿ ಸುಖ ನೀಡುತ್ತಾನೆ ಈಗ ತಾಯಿಯೆ ಕತ್ತಲ ಮನೆಯಲ್ಲಿ ಅಡಗಿದ್ದು ಮಗುವನ್ನು ನೋಡುತ್ತಿರುತ್ತಾಳೆ ಎನ್ನುತ್ತ ದೃಷ್ಟಾಂತವನ್ನು ಕೂಡಿಸಬಹುದು ತಾಯಿ ಯಾರೆಂದು ತಿಳಿಯದಿರುವುದೇ ಮಗುವಿಗೆ ಅಜ್ಞಾನದ ಕತ್ತಲೆ ಎಂದರೂ ಆ ಕತ್ತಲೆ ಮನೆಯಲ್ಲಿ ಅಡಗಿದವಳು ತಾಯಿಯೆ ಅವಳು ಮಗುವನ್ನು ಗುರುತಿಸಿ ಬಿಗಿದಪ್ಪಿ ಸಂತೈಸುವಳೆಂದೂ ದೃಷ್ಟಾಂತ ಹೊಂದಿಕೆಯಾಗುವುದು ಇದಕ್ಕೆ ಉದಾಹರಣೆ–ಬ್ರಹ್ಮದೇವರು ನಾರಾಯಣನ ನಾಭಿಕಮಲದಿಂದ ಹುಟ್ಟಿದಾಗ ಎಲ್ಲೆಲ್ಲೂ ನೀರೇ ಹರಿಯನ್ನು ಆರಾದಿಸುವುದು ಹೇಗೆ ಎಂದು ಚಿಂತೆಯಿಂದ ಒಂದು ಸಾವಿರ ವರ್ಷಗಳ ಕಾಲ ತಪಸ್ಸು ಮಾಡಿದರು ಹರಿಯ ದರ್ಶನವಾಗಲಿಲ್ಲವೆಂದು ಮನಸ್ಸಿಗೆ ಶ್ರಮಸಂತಾಪ ಉಂಟಾದ್ದರಿಂದ ಶರೀರತ್ಯಾಗ ಮಾಡಿ ತಿರುಗಿ ಅದೇ ಶರೀರ ಪ್ರವೇಶಿಸಿ ಅಶ್ವಮೇಧಯಾಗ ಮಾಡಿದರು ಬಳಿಕ ಶ್ರೀಹರಿ ಪ್ರತ್ಯಕ್ಷನಾಗಿ ವೈಕುಂಠದರ್ಶನ ಮಾಡಿ ಸಂತೈಸಿದ

ಪ್ರಾರಬ್ಧಕಾಲದಲ್ಲಿ ಭಕ್ತ ಬ್ರಹ್ಮದೇವರಂತೆ ಸದಾ ಹರಿಯನ್ನು ನೆನೆದೇ ನೆನೆಯುತ್ತಾನೆ ಎನ್ನಲಾಗುವುದಿಲ್ಲ 'ನವಕೋಟಿ ನಾರಾಯಣ' ಹರಿಯನ್ನು ಮರೆತು ಹಣವನ್ನು ಎಣಿಸುತ್ತಿದ್ದ! 'ಶರಣಜನಮಂದಾರ' ಎಂದು ಹಿಂದಿನ ಪದ್ಯದಲ್ಲಿ ಹೇಳಿದಂತೆ ಹರಿ ಸಕಾಲದಲ್ಲಿ ಕರೆಯಲು ಬಂದು ಎಚ್ಚರಿಸಿದ ಅದರ ಫಲವಾಗಿ ಅವರು ಹರಿಯನ್ನು ಕರೆದರು

ಓಡಿಬಾರೈ, ವೈಕುಂಠಪತಿ! ನಿನ್ನ ನೋಡುವೆ ಮನದಣಿಯ ।
ಕಾಡಬೇಡವೊ ಕರುಣಾಕರ! ನಿನ್ನ ಬೇಡಿಕೊಂಬೆನೊ ರಂಗಯ್ಯ ॥

ಕರುಣಾಕರ ರಂಗಯ್ಯ ಓಡಿಬಂದು ದಾಸರನ್ನು ನಂತೈಸಿದ ರಮಿಸಿದ, ವಶನೆ ಆಗಿಹೋದ

***ಕನಲಿಕೆಯ ಕಳೆವಂತೆ***

ತಾಯಿ ತನ್ನನ್ನು ಬಿಟ್ಟು ದೂರ ಹೋದಳೆಂದು ದುಃಖಕೋಪ ಎರಡೂ ಬಂದಿರುತ್ತದೆ ಮಗುವಿಗೆ ಅದನ್ನು ತಾಯಿ ಕಳೆಯುತ್ತಾಳೆ ಹಾಗೇ ಭಕ್ತನಿಗೂ ದುಃಖಕೋಪಗಳು ಸಹಜ ಕೋಪವೆಂದರೆ ಪ್ರಣಯಕೋಪ ಉದಾ–ಭೃಗುಮುನಿ ತ್ರಿಮೂರ್ತಿಗಳನ್ನು ಪರೀಕ್ಷಿಸುತ್ತ ವೈಕುಂಠಕ್ಕೆ ಬಂದಾಗ ನಾರಾಯಣ ನಿದ್ದೆ ಮಾಡುತ್ತಿದ್ದುದನ್ನು ಕಂಡು ಕೋಪಗೊಂಡ ಸರ್ವಜ್ಞ ಅವನೊಬ್ಬನೇ ಎಂದು ವಿಶ್ವಾಸದಿಂದ ಬಂದರೆ ನಿದ್ದೆ ಮಾಡುತ್ತಿದ್ದಾನೆ ನಿದ್ದೆಯ ನಟನೆ ಮಾಡುತ್ತಿದ್ದಾನೆ ಎಂದು. ಅದಕ್ಕೆ ಹರಿ ತಕ್ಷಣ ಎದ್ದು ಕೋಪ ಮಾಡದೆ ತಾನು ಸರ್ವಜ್ಞನೆಂಬುದನ್ನು ನಾಬೀತುಪಡಿಸಿ ಮುನಿಯ ಕಾಲೊತ್ತಿ ಅವನ ಕೋಪ ಶಾಂತ ಮಾಡಿದ ವಿಜಯದಾಸರೂ ತಿರುಪತಿಗೆ ಬಂದಾಗ ದರ್ಶನ ಸಿಗಲಿಲ್ಲವೆಂದು ಕೋಪ-ದಿಂದ 'ಅನ್ಯಾಯಕಾರಿ' ಯೆಂದು ಬೈದರು!

> ತನ್ನ ನೋಡೇನೆಂದು ಮುನ್ನೂರು ಗಾವುದ ಬರೆ
> ತನ್ನ ಗುಡಿಯ ಪೊಕ್ಕ ಜನರಿಗೆಲ್ಲ।
> ಹೊನ್ನು ಹಣಗಳ ಕೊಂಡು ತನ್ನ ದರುಶನ ಕೊಡದೆ
> ಬೆನ್ನೊಡೆಯೆ ಹೊಯಿಸುವ ಅನ್ಯಾಯಕಾರಿಗೆ ॥
> ಜಯಮಂಗಳಂ ನಿತ್ಯ ಶುಭಮಂಗಳಂ ॥

ಅದಕ್ಕೆ ಶ್ರೀನಿವಾಸ 'ಹರಿಕರುಣವೆಂಬಂಥ ಕೀಲಿಕೈ ಕೊಟ್ಟು ಅಂತರಂಗದ ಕದವ ತೆರೆಸಿದ, ದಾಸರು 'ಎಂತು ಪುಣ್ಯದ ಫಲವು ಪ್ರಾಪ್ತಿ ದೊರಕಿತೊ ಎನಗೆ!' ಎಂದುಕೊಳ್ಳುತ್ತ 'ಕಮಲಜಾದಿಗಳಿಂದ ತುತಿಸಿಕೊಳ್ಳುತ್ತ ಹೃದಯಕಮಲದೊಳಗಿರುವ ಶ್ರೀವಿಜಯವಿಠಲನ ಕಂಡೆ!' ಎಂದರು

***ಮಧುಸೂದನನು ಬಂದೊದಗಿ ಸಲಹುವನು***

'ಮಧುಸೂದನ'ನೆಂದರೆ ಬ್ರಹ್ಮನಿಂದ ವೇದಗಳನ್ನು ಅಪಹರಿಸಿ ಅವನನ್ನೆ ನುಂಗಲು ಬಂದ ಮಧುಕೈಟಭರನ್ನು ವಧಿಸಿದ ಹಯಗ್ರೀವರೂಪ ವೇದವನ್ನು ತಂದಿತ್ತು ಬ್ರಹ್ಮನನ್ನು ಕಾಪಾಡಿದವ ತನ್ನನ್ನು ಕಾಣದೆ ಹಂಬಲಿಸುವ ಭಕ್ತನಿಗೆ ವೇದಶಾಸ್ತ್ರಗಳ ಪ್ರಮೇಯಜ್ಞಾನ ನೀಡುತ್ತಾನೆ' ವೇದಗಳು ಹೊರಟಿರುವುದೆ ಭಕ್ತರ ಮೇಲಿನ ಕರುಣದಿಂದ,

> ಅದುಃಖಮಿತರತ್ ಸರ್ವಂ ಜೀವಾ ಏವ ತು ದುಃಖಿನಃ ।
> ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥

ಸಂಸಾರದುಃಖದಿಂದ ಬಿಡುಗಡೆ ಹೊಂದುವ ಉಪಾಯವನ್ನು ವೇದದ ಮೂಲಕ ತಿಳಿಸುವ ಕರುಣಾಳು ಹರಿ ಅದನ್ನು ತಿಳಿದು ಉಪಾಸನೆ ಮಾಡುವ ಭಕ್ತನಿಗೆ ತನ್ನ ದರ್ಶನವಿತ್ತುಸಲಹುವ, ಮೋಕ್ಷನೀಡುವ ಕರುಣಾಳು ಹರಿ ಎನ್ನುತ್ತಿದ್ದಾರೆ ದಾಸರಾಯರು

**ಇಟ್ಟಿಕಲ್ಲನು ಭಕುತಿಯಿಂದಲಿ**
**ಕೊಟ್ಟ ಭಕುತಗೆ ಮೆಚ್ಚಿ ತನ್ನನೆ**
**ಕೊಟ್ಟ ಬಡಬ್ರಾಹ್ಮಣನ ಒಪ್ಪಿಡಿಯವಲಿಗಖಿಳಾರ್ಥ ।**
**ಕೆಟ್ಟ ಮಾತುಗಳೆಂದ ಚೈದ್ಯನ**
**ಪೊಟ್ಟೆಯೊಳಗಿಂಬಿಟ್ಟ ಬಾಣದ-**
**ಲಿಟ್ಟ ಭೀಷ್ಮನ ಅವಗುಣಗಳೆಣಿಸಿದನೆ ಕರುಣಾಳು** ॥ ೧೨ ॥

ಇಟ್ಟಿಕಲ್ಲನ್ನು ಭಕ್ತಿಯಿಂದ ಕೊ. .ಕ್ತ ಪುಂಡರೀಕ ಮುನಿಗ ವಿಟ್ಠಲ ಮೆಚ್ಚಿ ತನ್ನನ್ನೆ ಕೊಟ್ಟ, ಬಡಬ್ರಾಹ್ಮಣನಾದ ಸುದ..ಮನ ಒಂದು ಮುಷ್ಟಿ ಅವಲಕ್ಕಿಗೆ ಸಕಲಾಭೀಷ್ಟವನ್ನೇ ನೀಡಿದ ಕೆಟ್ಟ ಮಾತುಗಳನ್ನಾಡಿದ ಶಿಶುಪಾಲನನ್ನು ಹೊಟ್ಟೆಯೊಳಗೇ ಇಟ್ಟುಕೊಂಡ ಬಾಣದಿಂದ ಹೊಡೆದ ಭೀಷ್ಮನ ಅವಗುಣಗಳನ್ನು ಕರುಣಾಳು ಕೃಷ್ಣನು ಎಣಿಸಿದನೆ?

**ಕರುಣಾಳು ಕೃಷ್ಣ**

ಸ್ವಾಭಾವಿಕ ಭಕ್ತಿಯುಳ್ಳ ಭಕ್ತರು ಎಷ್ಟು ಸಣ್ಣ ಸೇವೆ ಮಾಡಿದರೂ ಮುನಿಸಿಕೊಳ್ಳದೆ ಪ್ರೀತಿಯಿಂದಲೇ ಸ್ವೀಕರಿಸಿ ಆ ಸೇವೆಗೆ ಪ್ರತಿಯಾಗಿ ಸಕಲಾಭೀಷ್ಟ ನೀಡುವ ಹರಿಯ ಕರುಣೆ ಅಪಾರವಾದುದು ಪುಂಡರೀಕಮುನಿ ತನ್ನ ಬಳಿಗೆ ಬಂದ ವಿಟ್ಠಲನಿಗೆ ಕುಳಿತು-ಕೊಳ್ಳಲು ಆಸನ ನೀಡದೆ, ಸೊಂಟದಲ್ಲಿ ಕೈಯಿಟ್ಟು ನಿಲ್ಲಲು ಒಂದು ಇಟ್ಟಿಗೆ ಕಲ್ಲನ್ನಿತ್ತ ಅದಕ್ಕೆ ಪ್ರತಿಯಾಗಿ ವಿಟ್ಠಲ ಅವನಿಗೆ ತನ್ನನ್ನೇ ನೀಡಿದ ಸುದಾಮ ಒಂದು ಮುಷ್ಟಿ ಅವಲಕ್ಕಿ ನೀಡಿದ್ದಕ್ಕೆ ಮೆಚ್ಚಿ ಸಕಲಾಭೀಷ್ಟವನ್ನೇ ನೀಡಿದ

ಸ್ವಾಭಾವಿಕ ಭಕ್ತರು ಎಷ್ಟು ದೊಡ್ಡ ಅಪರಾಧ ಮಾಡಿದರೂ ಬಗೆಯದೇ ಅನುಗ್ರಹ-ವನ್ನೇ ಮಾಡುವ ಹರಿಯ ಕರುಣೆಗೂ ಪಾರವೆಲ್ಲಿದೆ? ಶಿಶುಪಾಲ ನೂರಕ್ಕೂ ಹೆಚ್ಚಿನ ಅಪರಾಧ ಮಾಡಿದವ ಆದರೂ ಅವನ ಶಿರಶ್ಛೇದ ಮಾಡಿದ ಬಳಿಕ ಅವನ ಆತ್ಮವನ್ನು ತನ್ನ ಉದರದೊಳಗಿಟ್ಟುಕೊಂಡ ಭೀಷ್ಮ ಕೃಷ್ಣನ ಮೇಲೆ, ಅರ್ಜುನನ ಮೇಲೆ ಬಾಣ-ಪ್ರಯೋಗ ಮಾಡಿದರೂ ಅದನ್ನು ಕ್ಷಮಿಸಿದ ಮುಂದೆ ಭೀಷ್ಮರು ಶರಮಂಚದಲ್ಲಿ ಮಲಗಿ-ದುದು ಈ ಅಪರಾಧದ ಫಲವೇನಲ್ಲ ಅದು ಮುನಿಶಾಪದ ಫಲ ಶರಮಂಚದಲ್ಲಿ ಮಲಗಿ ವೇದನೆ ಅನುಭವಿಸುತ್ತಿದ್ದ ಭೀಷ್ಮನ ಮೈದಡವಿ ನೋವನ್ನು ಕಳೆದು ಅವನಿಂದ ಯುಧಿ ಷ್ಠಿರನಿಗೆ ಧರ್ಮೋಪದೇಶವನ್ನೇ ಮಾಡಿಸಿದ ಕೃಷ್ಣ ತನ್ನನ್ನೂ ಸ್ತುತಿಸಿಕೊಂಡ

**ಯಾರು ವಿಟ್ಠಲ?**

ಮಹಾಕೃಷ್ಣಭಕ್ತನಾದ ಜ್ಞಾನಿಯಾದ ಪುಂಡರೀಕ ಮುನಿ ಭೀಮರಥೀತೀರದಲ್ಲಿವಾಸ ಮಾಡುತ್ತಿದ್ದ. ಭೀಮರಥಿಗೇ ಭೀಮಾ ಎಂದೂ ಚಂದ್ರಭಾಗಾ ಎಂದು ಹೆಸರುಗಳು. ಅದರ ತೀರದಲ್ಲಿ ತಂದೆತಾಯಿಗಳ ಸೇವೆ ಮಾಡುತ್ತಿದ್ದ ಪುಂಡರೀಕನ ಸಾಧನೆಯನ್ನು ಕಂಡು ನಾರದರು ಮೆಚ್ಚಿದರು. 'ಧನ್ಯ! ಪುಂಡರೀಕ!' ಎಂದುಕೊಂಡರು. ಅವನಿಗೆ ಕೃಷ್ಣನ ದರ್ಶನ ಮಾಡಿಸಲು ಬಯಸಿ ದ್ವಾರಕೆಗೆ ಹೋಗಿ ಕೃಷ್ಣನ ಬಳಿಯಲ್ಲಿ ಬಿನ್ನೈಸಿಕೊಂಡರು. ಕೃಷ್ಣ ಅದನ್ನು ಕೇಳಿ ಪುಂಡರೀಕನ ಬಳಿಗೆ ಬಂದ. ಆಗ ಮುನಿ ನದಿಯಲ್ಲಿ ಸ್ನಾನಾದಿ ಅನುಷ್ಠಾನ ಮಾಡುತ್ತಿದ್ದ.

'ಪ್ರಭು, ನೀನು ಸ್ವಲ್ಪ ಕಾಲ ಈ ಇಟ್ಟಿಗೆ ಮೇಲೆ ನಿಂತಿರು. ನಾನು ತಂದೆತಾಯಿಗಳ ಸೇವೆ ಮಾಡಿ ಮುಗಿಸಿ ಬೇಗನೆ ಬರುವೆ' ಎನ್ನುತ್ತ ಒಂದು ಇಟ್ಟಿಗೆ ಕಲ್ಲನ್ನಿತ್ತ, ಮುನಿ. ಕೃಷ್ಣ 'ಆಗಲಿ' ಎಂದು ಹೇಳಿ ಇಟ್ಟಿಗೆ ಮೇಲೇ ನಿಂತ. ಮುನಿ ತಂದೆತಾಯಿಗಳ ಸೇವೆಯನ್ನೆಲ್ಲ ಮಾಡಿ ಮುಗಿಸಿ ಬಂದು ನೋಡಿದರೆ ಕೃಷ್ಣನಿನ್ನೂ ಸೊಂಟದ ಮೇಲೆ ಕೈಯಿಟ್ಟು ನಿಂತು ಮುನಿಯ ಆಗಮನವನ್ನೇ ಇದಿರುನೋಡುತ್ತಿದ್ದ. ಮುನಿಯನ್ನು ಕಂಡು 'ನಿನಗೆ ಸದಾ ದರ್ಶನ ನೀಡಲೆಂದು ನನ್ನನ್ನೆ ನಿನಗೆ ಕೊಡುತ್ತಿದ್ದೇನೆ' ಎಂದ. ಅಂದಿನ ಪುಂಡರೀಕವರದ ಪಾಂಡುರಂಗ ಹರಿ ವಿಟ್ಠಲ ಕಟಿಯಲ್ಲಿ ಕರವಿಟ್ಟ ಪಂಡರೀರಾಯನಾಗಿ ಲೋಕವನ್ನು ಅನುಗ್ರಹಿಸುತ್ತಿದ್ದಾನೆ. ಆ ಕ್ಷೇತ್ರಕ್ಕೂ ಪುಂಡರೀಕಕ್ಷೇತ್ರವೆಂಬ ಹೆಸರನ್ನಿತ್ತು ಮೆರೆಸುತ್ತಿದ್ದಾನೆ.

ದಾಸರಾಯರು ಒಂದು ಕೀರ್ತನೆಯಲ್ಲಿ ಕೃಷ್ಣನೆ ವಿಟ್ಠಲನಾಗಿ ನಿಂತ ಪ್ರಸಂಗವನ್ನು ಹೀಗೆ ಹಾಡಿದ್ದಾರೆ.

> ಯಾತುಧಾನರ ಭಾರ ತಾಳದೆ
> ಭೂತರುಣಿ ಗೋರೂಪಳಾಗಿ ಸ-
> ನಾತನನ ತುತಿಸಲ್ಕೆ ಶೇಷಫಣಾತಪತ್ರನು
> ನಂದಗೋಪನಿಕೇತನದಲವತರಿಸಿ ।
> ತನ್ನ ತಾಯ್ತಂದೆಗಳ ಹೃದಯವೆ
> ಪನ್ನಗಾರಿಧ್ವಜಗೆ ಸದನವೆಂ-
> ದುನ್ನತಬಕುತಿಭಾರದಿ ಅರ್ಚಿಪ
> ಧನ್ಯಪುರುಷನ ಕಂಡು ನಾರದ
> ಬಿನ್ನಯಿಸಿ ತುತಿಸಲ್ಕೆ ಕೇಳಿ ಪ್ರ-
> ಪನ್ನವತ್ಸಲ ಬಿರುದು ಮೆರೆಯಲು
> ಜೊನ್ನೊಡಲ ಭಾಗದಿ ನೆಲೆಸಿದ
> ಜಗನ್ನಾಥ ವಿಠಲನ ಮೂರ್ತಿಯ ನೋಡಿದೆ ॥

ಇಲ್ಲಿ 'ಜೊನ್ನೊಡಲ ಭಾಗ' ಎಂದರೆ ಚಂದ್ರಭಾಗಾ ನದಿ ನಂದಗೋಪನ ಮನೆಯಲ್ಲಿ ಅವತರಿಸಿದವನೆ ನಾರದರ ಪ್ರಾರ್ಥನೆಯಂತೆ ಚಂದ್ರಭಾಗಾ ತೀರದಲ್ಲಿ ನೆಲೆಸಿದನೆಂದಿದ್ದಾರೆ ಅದರಿಂದ ಕಟಿಯಲ್ಲಿ ಕರವಿಟ್ಟು ನಿಂತ ಕೃಷ್ಣನೆ ವಿಟ್ಠಲ

ಅಕ್ರೂರ ಕೃಷ್ಣನನ್ನು ಮಧುರೆಗೆ ಕರೆದೊಯ್ಯುವಾಗ ದಾರಿಯಲ್ಲಿ ಮಾಧ್ಯಾಹ್ನಿಕಕ್ಕಾಗಿ ಯಮುನೆಯಲ್ಲಿ ಇಳಿದ ಆಹ್ನಿಕ ಮುಗಿಸಿ ಬಂದಾಗ ರಥದಲ್ಲಿ ಕೃಷ್ಣ ಪ್ರಾಯಃ ಕಟಿಯಲ್ಲಿ ಕರವಿಟ್ಟುಕಾಯುತ್ತ ಸಮಭಂಗಿಯಲ್ಲಿ ನಿಂತಿರಬೇಕು ಅಕ್ರೂರ 'ಸ್ವಾಮಿನ್ ವಿಟ್ಠಲ' ಎಂದು ಸ್ತುತಿಸಿದಂತೆ ರುಕ್ಮಿಣೀಶವಿಜಯದಲ್ಲಿ ಶ್ರೀವಾದಿರಾಜರು ವರ್ಣಿಸಿದ್ದಾರೆ ತೀರ್ಥಪ್ರಬಂಧದಲ್ಲಿಯೂ ರಾಜರು ವಿಟ್ಠಲನನ್ನು ಗೋಪಾಲಬಾಲನೆಂದೇ ಸ್ತುತಿಸಿದ್ದಾರೆ

> ಗೋಪಾಲಬಾಲಃ ಕೃಪಯಾ ಸ್ವಯಂ ನಃ
> ಶ್ರೀಪಾಂಡುರಂಗೋ ಭವತು ಪ್ರಸನ್ನಃ ॥

ವಿಜಯದಾಸರೂ 'ವಿರಲ ವಿಮಲಶೀಲ ಬಾಲಗೋಪಾಲ!' ಎಂದಿದ್ದಾರೆ

ಉಡುಪಿಯಲ್ಲಿ ನೆಲೆಸಿದವ ಕಟಿಯಲ್ಲಿ ಕರವಿಟ್ಟಿಲ್ಲ ಅದರಿಂದ ವಿಟ್ಠಲ ಅಲ್ಲ ವಿಟ್ಠಲಶಬ್ದದ ಬಳಕೆಯನ್ನು ಮೊದಲಿಗೆ ಪಂಢರಪುರದ ಸ್ಥಳಪುರಾಣದಲ್ಲಿ ಕಾಣಬಹುದು ಶ್ರೀಮದಾಚಾರ್ಯರು ಪುತ್ತಿಗೆ ಶೀರೂರು ಪೇಜಾವರ ಮಠಗಳಿಗೆ ವಿಟ್ಠಲಮೂರ್ತಿಗಳನ್ನು ಕೊಟ್ಟುದರ ಉಲ್ಲೇಖ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀಹೃಷೀಕೇಶತೀರ್ಥರ ಸಂಪ್ರದಾಯಪದ್ಧತಿಯಲ್ಲಿ ಹೀಗೆ ಬರುತ್ತದೆ

> ಜನಾರ್ದನೋಪೇಂದ್ರಸುಯೋಗಿನೋರದಾತ್
> ಕೃಷ್ಣಂ ದ್ವಿಹಸ್ತಂ ಭುಜಗಸ್ಯ ಮರ್ದನಮ್ ।
> ಶ್ರೀವಿಟ್ಠಲಂ ವಾಮನಯೋಗಿನೋಽಪಿ ತಂ ।
> ಅಧೋಕ್ಷಜಯೋಗಿನಃ ಪುನಃ ಶ್ರೀವಿಟ್ಠಲಂ ।

ಕೃಷ್ಣಾವತಾರಕಾಲದಲ್ಲಿಯೆ ವಿಟ್ಠಲಶಬ್ದ ಬಳಕೆಯಲ್ಲಿ ಇದ್ದಿರಬೇಕು ಏಕೆಂದರೆ ಅಕ್ರೂರ ಆ ಶಬ್ದವನ್ನು ಉಚ್ಚರಿಸುತ್ತಾನೆ! ಇಲ್ಲದಿದ್ದರೆ ರುಕ್ಮಿಣೀಶವಿಜಯ ಬರೆಯುವಾಗ ಶ್ರೀವಾದಿರಾಜರಿಗೆ ಇತಿಹಾಸಪ್ರಜ್ಞೆ ಇರಲಿಲ್ಲವೆನ್ನಬೇಕಾದೀತು!

**ಇಟ್ಟಕಲ್ಲು**

'ಇಟ್ಟಿಗೆ ಪೀಠ ಸಂಸ್ಥಿತಪಾದ! ಮಂಗಳಪ್ರದ! ಎಂದು 'ಪಾಂಡುರಂಗ ಪಾರಿಜಾತ' ದಲ್ಲಿ ದಾಸರಾಯರು ಹೇಳುವಂತೆ ವಿಟ್ಠಲ ಇಟ್ಟಂಗಿ ಅಥವಾ ಇಟ್ಟಿಗೆಯ ಮೇಲೆ ನಿಂತಿದ್ದಾನೆ ಆದರೆ ಮೂರ್ತಿಪ್ರತಿಷ್ಠೆಗೆ ಎಲ್ಲಿಯೂ ಮಣ್ಣಿನ ಇಟ್ಟಿಗೆ ಬಳಸುವುದಿಲ್ಲ ಕಲ್ಲಿನ ಪೀಠವಾಗಬೇಕು ಅದರಿಂದ ಇಲ್ಲಿ 'ಇಟ್ಟಕಲ್ಲನು' ಎಂದರೆ ಮಣ್ಣಿನ ಇಟ್ಟಿಗೆಯಲ್ಲ ಒಂದು ಬಗೆಯ

ಮೃದುವಾದ ಕೆಂಪುಕಲ್ಲು. ಇದನ್ನು ಸೂಚಿಸುವುದಕ್ಕಾಗಿಯೆ 'ಇಟ್ಟಕಲ್ಲು' ಎಂದು 'ಕಲ್ಲು' ಶಬ್ದವಿದೆ ಎಂದು ಕಾಣುತ್ತದೆ.

ಸಂಸ್ಕೃತದ 'ಇಷ್ಟಕಾ' 'ಇಷ್ಟಿಕಾ'ಗಳೆ ಕನ್ನಡದಲ್ಲಿ ಇಟ್ಟಿಗೆ ಇಟ್ಟಿಗೆ ಎನಿಸಿವೆ.

'ಇಟ್ಟ ಕಲ್ಲನು ಬಕುತಿಯಿಂದಲಿ' ಎಂದೊಡನೆ ಒಂದು ಪೂರ್ಣವಿರಾಮ ಹಾಕಿದರೆ 'ಒಬ್ಬ ಭಕ್ತ ಬಕುತಿಯಿಂದಲಿ ಕಲ್ಲನ್ನು ಇಟ್ಟ' ಎಂದಾಗುತ್ತದೆ. ಮುಂದೆ 'ವಿಟ್ಠಲ ಕೊಟ್ಟ ಬಕುತಗೆ ಮೆಚ್ಚಿ ತನ್ನನೆ' ಎನ್ನಬೇಕು. ಬಳಿಕ 'ಕೊಟ್ಟ ಬಡ ಬ್ರಾಹ್ಮಣ ಒಪ್ಪಿಡಿಯವಲಿಗಖಿಳಾರ್ಥ' ಎಂದು ಪೂರ್ಣವಾಕ್ಯ ಸಿಗುತ್ತದೆ.

ಒಬ್ಬ ಭಕ್ತ ಭಕ್ತಿಯಿಂದ ಕಲ್ಲನ್ನು ಇಟ್ಟ. ಯಾರು ಆ ಭಕ್ತ? ಪುಂಡರೀಕ ಮುನಿ ಎನ್ನುವುದು ಪ್ರಸಿದ್ಧ. ಕಲ್ಲನ್ನು ಭಕ್ತಿಯಿಂದ ಇಟ್ಟವ ರಾಮನ ದೂತ ಹನುಮನೆಂದೂ ಹೇಳಬಹುದು. ಇಲ್ಲಿ 'ಕಲ್ಲು' ಎಂದರೆ ಬೆಲೆ ಬಾಳುವ ರತ್ನದ ಕಲ್ಲು, ಸೀತಾದೇವಿಯ ಚೂಡಾಮಣಿ. ಅದನ್ನು ತಂದು ರಾಮನ ಪಾದದಲ್ಲಿ ಇಟ್ಟ ಹನುಮ. ಸೇತುವೆ ಕಟ್ಟುವಾಗಲೂ ಬಂಡೆಗಲ್ಲುಗಳನ್ನು ಸಮುದ್ರದಲ್ಲಿಟ್ಟ. ಲಂಕೆಯ ಯುದ್ಧದಲ್ಲಿ ರಾಕ್ಷಸ ಸೈನ್ಯಕ್ಕೆ ಕಲ್ಲನ್ನು ಇಟ್ಟ. ಅಂದರೆ ಎಸೆದ. ಸಂಜೀವನ ಬೆಟ್ಟವನ್ನು ತಂದು ಲಂಕೆಯಲ್ಲಿಟ್ಟ. ಬಳಿಕ ಅದನ್ನು ಸ್ವಸ್ಥಾನಕ್ಕೆ ಇಟ್ಟ. ಎಸೆದ. ಇಲ್ಲಿ 'ಕಲ್ಲು' ಎಂದರೆ ಬೆಟ್ಟ. ವಿಜಯದಾಸರು ಮಂದರ ಪರ್ವತವನ್ನು 'ಕಲ್ಲು' ಎಂದಿದ್ದಾರೆ.

'ಕಲ್ಲು ಕಡೆಯುತ್ತಿರಲು ಅಮೃತವೆ ಪುಟ್ಟಿತು'

ಗೋವರ್ಧನ ಪರ್ವತವನ್ನು 'ಕಲ್ಲು' ಎಂದೇ ಕರೆದಿದ್ದಾರೆ.

'ಕಲ್ಲು ಎತ್ತಲು ಮಳೆಯೊಳೆಲ್ಲರು ಉಳಿದರು'

ಶ್ರೀಮದಾಚಾರ್ಯರು ಉಡುಪಿಯಲ್ಲಿ ಕೃಷ್ಣನಿಗೆ ಪೀಠವಾಗಿ ಭಕ್ತಿಯಿಂದ ಕಲ್ಲನ್ನೇ ಇಟ್ಟರು. ಬ್ರಹ್ಮಪದವಿಗೆ ಬಂದಾಗ ಮುಂದೆ ಕೌಸ್ತುಭ ಮಣಿಯ ಕಲ್ಲನ್ನು ಹರಿಯ ಎದೆಯಲ್ಲಿ ಇಡುವರು. ಹರಿಯ ತಲೆಯಲ್ಲಿಯೂ ಚೂಡಾಮಣಿಯ ಕಲ್ಲನ್ನೇ ಇಡುವರು. ಇಂಥ ಭಕ್ತನಿಗೆ ಹರಿ ಮೆಚ್ಚಿ ತನ್ನನ್ನೇ ಕೊಟ್ಟ. ಸ್ವಾತ್ಮಪ್ರದಾನ ಮಾಡಿದ.

**ಒಪ್ಪಿಡಿ ಅವಲು**

ದ್ವಿಃಸ್ವಿನ್ನಮನ್ನಂ ಪೃಥುಕಂ ಶುದ್ಧಂ ದೇಶವಿಶೇಷಕೇ ।
ನಾತ್ಯಂತಶಸ್ತಂ ವಿಪ್ರಾಣಾಂ ಭಕ್ಷಣೇ ಚ ನಿವೇದನೇ ॥
ಅಭಕ್ಷ್ಯಂ ಚ ಯತೀನಾಂ ಚ ವಿಧವಾಬ್ರಹ್ಮಚಾರಿಣಾಮ್ ॥

'ಕುಸುಬಲಕ್ಕಿ ಅವಲಕ್ಕಿಗಳು ಕೆಲವು ಪ್ರದೇಶಗಳಲ್ಲಿ ಮಡಿಗೆ ಬಂದರೂ ಬ್ರಾಹ್ಮಣರಿಗೆ ಅವು ದೇವರ ನೈವೇದ್ಯಕ್ಕಾಗಲಿ ಭಕ್ಷಣಕ್ಕಾಗಲಿ ಹೆಚ್ಚು ಪ್ರಶಸ್ತವಲ್ಲ. ಯತಿಗಳೂ, ವಿಧವೆ-

ಯರೂ, ಬ್ರಹ್ಮಚಾರಿಗಳೂ ಅವನ್ನುಸೇವಿಸಬಾರದು' ಎಂದು ಬ್ರಹ್ಮವೈವರ್ತಪುರಾಣದಲ್ಲಿ ಹೇಳಿದೆ

ಸುಧಾಮ ಪ್ರಾಯಃ ಈ 'ಕೆಲವು ಪ್ರದೇಶ' ದವನಾಗಿರಬೇಕು ಕಡುಬಡವನಾದ್ದರಿಂದ ಬೇಡಿ ಸಂಪಾದಿಸಿದುದೂ ಈ ಅವಲಕ್ಕಿಯನ್ನೇ ಅದು ಅವನ ಪ್ರಾರಬ್ಧ ಪೂರ್ವಜನ್ಮದಲ್ಲಿ ಶ್ರೀಮಂತನಾಗಿದ್ದೂ ಅನ್ನದಾನ ಮಾಡದಿದ್ದುದರಿಂದ ಈಗ ಬಡತನ ಬಂದಿತ್ತು ಬಡತನ ಪ್ರಯುಕ್ತವಾಗಿಯೆ ಅವಲಕ್ಕಿ ಮಡಿಗೂ ಬಂದಿತ್ತು ಕೃಷ್ಣ ಪ್ರಶಸ್ತವಲ್ಲದ ಈ ನೈವೇದ್ಯವನ್ನು ಅದೂ ಒಂದು ಮುಷ್ಟಿಮಾತ್ರವನ್ನು ಸ್ವೀಕರಿಸಿ ಅಖಿಲಾಭೀಷ್ಟ ನೀಡಿದ

ವಸ್ತುತಃ ಆ ಒಪ್ಪಿಡಿ ಅವಲಕ್ಕಿಯ ಜೊತೆ ಸುಧಾಮ ತನ್ನನ್ನೇ ತಾನು ಕೊಟ್ಟಿದ್ದ 'ತನ್ನನೆ ಕೊಟ್ಟ ಬಡ ಬ್ರಾಹ್ಮಣನ ಒಪ್ಪಿಡಿಯವಲಿಗೆ ಅಖಿಳಾರ್ಥ ಕೊಟ್ಟ' ತನ್ನನ್ನು ಕೊಡದೆ ಇಡಿ ಬ್ರಹ್ಮಾಂಡವನ್ನು ಕೊಟ್ಟರೂ ಹರಿ ಒಲ್ಲ

**ಕೆಟ್ಟ ಮಾತುಗಳು**

ಶಿಶುಪಾಲ ಕೃಷ್ಣನಿಗೆ ಸೋದರತ್ತೆಯ ಮಗ ಆದರಿಂದ ಅವನ ನೂರು ಅಪರಾಧ-ಗಳನ್ನು ತಾನು ಸಹಿಸುವುದಾಗಿ ಕೃಷ್ಣ ಮಾತು ಕೊಟ್ಟಿದ್ದ ಅವನ ದೊಡ್ಡ ಅಪರಾಧ ಸಾಕ್ಷಾತ್ ಲಕ್ಷ್ಮೀಸ್ವರೂಪಳಾದ ರುಕ್ಮಿಣಿಯನ್ನು ಬಯಸಿದುದು ಕೃಷ್ಣ ಅದನ್ನು ರಾಜಸೂಯ ಸಭೆಯಲ್ಲಿ ಎಲ್ಲ ರಾಜರ ಮುಂದೆ ಹೇಳಿದಾಗ ಶಿಶುಪಾಲನೆಂದ 'ನಾನು ರುಕ್ಮಿಣಿಯನ್ನು ಬಯಸಿದುದು ನಿಜ ಆದರಿಂದ ಅವಳು ನಿನಗೆ ಪರಸ್ತ್ರೀ ನೀನು ನಾಚಿಕೆ ಇಲ್ಲದೆ ಹೇಗೆ ಅವಳನ್ನು ಪರಿಗ್ರಹಿಸಿದೆ?' ಶಿಶುಪಾಲನ ಅಪರಾಧಗಳ ಸಂಖ್ಯೆ ಆಗಲೆ ನೂರನ್ನು ದಾಟಿತ್ತು ಕೃಷ್ಣ ಅವನ ಶಿರಶ್ಛೇದಗೈದ ಅವನ ಶರೀರದಿಂದ ಜಯನೆಂಬ ದೇವತೆ ತೇಜೋಮಯ ಶರೀರಧಾರಿಯಾಗಿ ಹೊರಟು ಬಂದು ಕೃಷ್ಣನನ್ನು ಭಕ್ತಿಯಿಂದ ನಮಿಸಿ ಅವನ ಹೊಟ್ಟೆ-ಯೊಳಗೆ ಪ್ರವೇಶಿಸಿದ ಅಂದಿನವರೆಗೆ ಶಿಶುಪಾಲಶರೀರದಲ್ಲಿ ಆ ದೇವತೆ ಹಿರಣ್ಯಕಶಿಪು ದೈತ್ಯನ ಜೊತೆಗಿದ್ದು ಕೃಷ್ಣನನ್ನು ದ್ವೇಷಿಸಿದ್ದ ಆದರೂ ಸ್ವಾಭಾವಿಕವಾಗಿ ಅವನು ಭಕ್ತನೆ ಎಂದು ಕೃಷ್ಣ ಕ್ಷಮಿಸಿದ

'ಕೆಟ್ಟ ಮಾತುಗಳೆಂದ ಚೈದ್ಯನ' ಎಂದರೆ ಕೆಟ್ಟ ಮಾತುಗಳನ್ನಾಡಿದ ಚೈದ್ಯನನ್ನು ಎಂದ-ರ್ಥ 'ಕೆಟ್ಟ ಮಾತುಗಳೆನದೆ ಚೈದ್ಯನ' ಎಂದೂ ಒಂದು ಪಾಠವಿದೆ 'ಕೆಟ್ಟ ಮಾತುಗಳು!' ಎನ್ನದೆ ಚೈದ್ಯನನ್ನು ಹೊಟ್ಟೆಯಲ್ಲಿಟ್ಟುಕೊಂಡ ಎಂದರ್ಥ

**ಬಾಣದಲ್ಲಿಟ್ಟ ಭೀಷ್ಮ**

ಅಂಬೆಯನ್ನು ಪರಿಗ್ರಹಿಸಲು ಪರಶುರಾಮ ಆಜ್ಞೆಮಾಡಿದರೂ ಭೀಷ್ಮ ಅದನ್ನು ನಡೆಸದೆ ತನ್ನ ನೈಷ್ಠಿಕ ಬ್ರಹ್ಮಚರ್ಯದ ಪ್ರತಿಜ್ಞೆಯನ್ನು ನಡೆಸಲು ಪರಶುರಾಮನೊಡನೆ ಯುದ್ಧ ಮಾಡಿದ ಪರ್ಯಾಜ್ಞಾ ಉಲ್ಲಂಘನ, ಗುರ್ವಾಜ್ಞಾ ಉಲ್ಲಂಘನ ಎರಡೂ ಇಲ್ಲಿ ನಡೆದುವು

ಅದರಿಂದ ಇದು ಅಧರ್ಮ. ಅಧರ್ಮಯುದ್ಧದಲ್ಲಿ ಪರಶುರಾಮನ ಮೇಲೆ ಬಾಣವೆಸೆ-ದುದೂ ಅಧರ್ಮ. ಆದರೂ ತನ್ನನ್ನು ಮೊರೆಹೊಕ್ಕ ಶಿಷ್ಯನೆಂದು ಕರುಣೆಯಿಂದ ಪರಶು-ರಾಮ ಕ್ಷಮಿಸಿ ತಾನೆ ಯುದ್ಧದಲ್ಲಿ ಸೋತಂತೆ ತೋರಿಕೊಂಡ. ಕುರುಕ್ಷೇತ್ರದಲ್ಲಿ ಕೌರವರ ಪರವಾಗಿ ಭೀಷ್ಮ ಹೋರಾಡಿದುದೂ ಅಧರ್ಮ. ಆಗ ಕೃಷ್ಣನ ಮೇಲೆ ಬಾಣವೆಸೆದುದು ಭೀಷ್ಮನ ಅವಗುಣವಾಗಿತ್ತು. ಕೃಷ್ಣನಿಗೆ ಪ್ರಾಣಸಮಾನನಾದ ಅರ್ಜುನನ ಮೇಲೆ ಬಾಣವೆಸೆದುದು ಇನ್ನೂ ಹೆಚ್ಚಿನ ಅವಗುಣವಾಗಿತ್ತು. ಆದರೂ ಕೃಷ್ಣ ಕ್ಷಮಿಸಿದ.

**ಭೀಷ್ಮಪ್ರತಿಜ್ಞೆ**

'ಕುರುಕ್ಷೇತ್ರ ಯುದ್ಧದಲ್ಲಿ ಕೃಷ್ಣ ತಾನು ಆಯುಧ ಹಿಡಿದು ಯುದ್ಧ ಮಾಡುವುದಿಲ್ಲ' ಎಂದು ಪ್ರತಿಜ್ಞೆ ಮಾಡಿದ್ದ. ಆದರೆ ಕೃಷ್ಣನ ಕೈಯಲ್ಲಿ ಆಯುಧ ಹಿಡಿಸುತ್ತೇನೆ ಎಂದು ಭೀಷ್ಮ ಪ್ರತಿಜ್ಞೆ ಮಾಡಿ ಕೃಷ್ಣನ ಮೇಲೂ ಅರ್ಜುನನ ಮೇಲೂ ಬಾಣಗಳ ಮಳೆಗರೆದ! ಆಗ ಕೃಷ್ಣ ತನ್ನ ಪ್ರತಿಜ್ಞೆಯನ್ನು ಲೆಕ್ಕಿಸದೆ ಚಕ್ರ ಹಿಡಿದ. ಭೀಷ್ಮನ ಪ್ರತಿಜ್ಞೆಯನ್ನು ಪೂರೈಸಿಕೊಟ್ಟ. ಎಂಥ ಕರುಣಾಳು!' ಎಂದು ಈ ಪದ್ಯಕ್ಕೆ ವಿವರಣೆ ನೀಡುವುದುಂಟು. ಆದರೆ ಇಲ್ಲಿ ಭೀಷ್ಮನ ಅವಗುಣಗಳೇನು?

ಕೃಷ್ಣನ ಪ್ರತಿಜ್ಞೆಗೆ ವಿರೋಧವಾಗಿ ತಾನು ಪ್ರತಿಜ್ಞೆಗೈದುದೇ ಅಧರ್ಮ ಎನ್ನೋಣವೇ? ಅಥವಾ ಅಸುರಾವೇಶದಿಂದ ಕೃಷ್ಣನನ್ನು ಬಾಣಗಳಿಂದ ನೋಯಿಸಿದನೆನ್ನೋಣವೆ? ಮಹಾಭಾರತಾನುಸಾರ ಇವೆರಡೂ ಕಾಣುವುದಿಲ್ಲ. ಕ್ಷತ್ರಿಯಾಗ್ರಣಿಯಾಗಿ ಪರಶುರಾಮರ ಶಿಷ್ಯನಾಗಿ ರಣರಂಗಲ್ಲಿ ತನ್ನ ಪರಾಕ್ರಮವನ್ನು ತೋರಿ ತನಗೂ ಗುರುಗಳಿಗೂ ಕೀರ್ತಿ ಬರುವಂತೆ ಯತ್ನಿಸಿದ್ದ ಭೀಷ್ಮ. ತನ್ನ ಯುದ್ಧ ವಿದ್ಯೆಯನ್ನು ಕೃಷ್ಣನಿಗೆ ಸಮರ್ಪಿಸಲೂ ಬಯಸಿದ್ದ. ಅರ್ಜುನನಿಗೂ ಆಗಾಗ 'ಮಗು, ಇನ್ನೂ ಜೋರಾಗಿ ಯುದ್ಧ ಮಾಡು' ಎಂದು ಆಗಾಗ ಹುರಿದುಂಬಿಸುತ್ತಿದ್ದ. ಕೃಷ್ಣಾರ್ಜುನರ ಮೇಲೆ ಬಾಣಪ್ರಯೋಗ ಮಾಡುವ ಕಾಲದಲ್ಲಿ ಅಸುರಾವೇಶವೂ ಇರಲಿಲ್ಲ.

ಪ್ರಹರಸ್ವ ಯಥೇಷ್ಟಂ ವೈ ದಾಸೋಽಸ್ಮಿ ತವ ಚಾನಘ

'ನಾನು ನಿನ್ನ ದಾಸ, ನಿನ್ನಿಚ್ಛಾನುಸಾರ ಹೊಡೆ' ಎಂದ ಭೀಷ್ಮ. ಅವನಿಗೆ ಗೊತ್ತು, ತನ್ನ ಪ್ರತಿಜ್ಞೆಯನ್ನಾದರೂ ಮುರಿದು ಭಕ್ತನ ಪ್ರತಿಜ್ಞೆಯನ್ನು ಈಡೇರಿಸುವವ ಭಕ್ತವತ್ಸಲನಾದ ಕೃಷ್ಣ ಎಂದು. ಅದರಿಂದ ಕೃಷ್ಣ ಚಕ್ರ ಹಿಡಿದು ಕೋಪದಿಂದ ನೆಲ ಅದುರುವಂತೆ ಹೆಜ್ಜೆ ಇಡುತ್ತ ಭೀಷ್ಮನನ್ನು ಕೊಲ್ಲುವೆನೆಂದು ಧಾವಿಸಿ ಬಂದಾಗ, 'ಹಾ! ಭೀಷ್ಮ ಸತ್ತ!' ಎಂದು ಎಲ್ಲರೂ ಹೇಳಿಕೊಂಡಾಗ ಭೀಷ್ಮ ತಾನು ಧನ್ಯನೆಂದು ಉಬ್ಬಿದ, ಭಕ್ತಿಯಿಂದ ನಮಸ್ಕರಿಸಿದ.

ಏಹ್ಯೇಹಿ ದೇವೇಶ! ಜಗನ್ನಿವಾಸ!
ನಮೋಽಸ್ತು ತೇ ಮಾಧವ! ಚಕ್ರಪಾಣೇ!

'ಕೃಷ್ಣ! ಚಕ್ರಪಾಣಿ! ಬಾ ಬಾ, ನಿನಗೆ ವಂದಿಸುವೆ. ನೀನು ನನ್ನನ್ನು ಕೊಂದರೂ ನನಗೆ ಅದರಿಂದ ಇಹಪರಗಳೆರಡರಲ್ಲಿಯೂ ಶ್ರೇಯಸ್ಸು. ಚಕ್ರ ಹಿಡಿದು ನನ್ನ ಮೇಲೇರಿ ಬರುತ್ತ ನೀನು ಮೂಲೋಕದಲ್ಲಿಯೆ ತುಂಬುವಂಥ ಕೀರ್ತಿಯನ್ನು ನನಗೆ ತಂದುಕೊಟ್ಟೆ.'

ಇಲ್ಲಿ ಭೀಷ್ಮನಲ್ಲಿ ಅವಗುಣಗಳಿರುತ್ತಿದ್ದರೆ ಅವನ ಕೀರ್ತಿ ಮೂಲೋಕದಲ್ಲಿ ಹರಡುವುದು ಅಸಂಭಾವಿತವಾಗುತ್ತಿತ್ತು.

ಭೀಷ್ಮನ ಪ್ರತಿಜ್ಞೆ ಕೃಷ್ಣನ ಪ್ರತಿಜ್ಞೆಗೆ ವಿರುದ್ಧವೂ ಆಗಿರಲಿಲ್ಲ. 'ಚಕ್ರ ಹಿಡಿದು ಯುದ್ಧ ಮಾಡಲಾರೆ' ಎಂದು ಕೃಷ್ಣನ ಪ್ರತಿಜ್ಞೆ. ಚಕ್ರ ಹಿಡಿಸುವೆನೆಂದು ಭೀಷ್ಮನ ಪ್ರತಿಜ್ಞೆ. ಕೃಷ್ಣ ಚಕ್ರ ಹಿಡಿದು ಕೋಪದಿಂದ ತನ್ನ ಬಳಿಗೆ ಧಾವಿಸಿ ಬಂದನೆಂದರೆ ಸಾಕು, ಭೀಷ್ಮ ಕೃತಾರ್ಥ! ಅವನ ಪ್ರತಿಜ್ಞೆ ಪೂರೈಸಿತು! ಪರಾಕ್ರಮ ಮೆರೆಯಿತು! ಕೃಷ್ಣ ಅಷ್ಟೇ ಮಾಡಿದ. ಭೀಷ್ಮನಿಗೆ ಕೀರ್ತಿ ತಂದಿತ್ತ.

ಕೃಷ್ಣ ತನ್ನ ಪ್ರತಿಜ್ಞೆಯನ್ನು ಮುರಿದಿರಲಿಲ್ಲ. ಅರ್ಜುನ ಕೃಷ್ಣನನ್ನು ಬೇಡುತ್ತಾನೆ—

ನಿವರ್ತಸ್ವ ಮಹಾಬಾಹೋ ನಾನೃತಂ ಕರ್ತುಮರ್ಹಸಿ ।
ಮಿಥ್ಯಾವಾದೀತಿ ಲೋಕಾಸ್ತ್ವಾಂ ಕಥಯಿಷ್ಯಂತಿ ಮಾಧವ ॥

'ಕೇಶವ, ಹಿಂತಿರುಗಿ ಬಾ' 'ಯುದ್ಧ ಮಾಡೆನೆ'ಂದು ನೀನು ಹಿಂದೆ ಮಾಡಿದ ಪ್ರತಿಜ್ಞೆಯನ್ನು ಮುರಿಯಬೇಡ. ಹಾಗೆ ಮಾಡಿದರೆ ಲೋಕ ನಿನ್ನನ್ನು ಸುಳ್ಳುಗಾರನೆಂದು ಕರೆದೀತು!'

ಚಕ್ರ ಹಿಡಿದ ಮಾತ್ರಕ್ಕೆ ಪ್ರತಿಜ್ಞೆ ಮುರಿದಿದ್ದರೆ ಅರ್ಜುನನ ಮೇಲಿನ ಮಾತುಗಳೆಲ್ಲ ವ್ಯರ್ಥ. ವಸ್ತುತಃ ಚಕ್ರ ಹಿಡಿದು ಭೀಷ್ಮನ ಬಳಿಗೆ ಧಾವಿಸಿದುದು ಅವನನ್ನು ಕೊಲ್ಲಲೆಂದಲ್ಲ. ಅರ್ಜುನ ಬಂಧುಮೋಹದಿಂದ ಸಪ್ಪೆಯಾಗಿ ಹೋರಾಡುತ್ತಿದ್ದುದನ್ನು ಕಂಡು ಅವನ ಮೇಲೆ ಕೋಪ. ಅದನ್ನು ತಿಳಿದ ಅರ್ಜುನ ಕ್ಷಮೆ ಬೇಡಿ ಹೇಳುತ್ತಾನೆ, 'ನಾನು ವೀರಾವೇಶದಿಂದಲೆ ಕಾದುವೆ!' ಎಂದು, ಆಗ ಕೃಷ್ಣನಿಗೆ ಸಮಾಧಾನವಾಯಿತು. ಇಲ್ಲಿ ಭೀಷ್ಮನ ಅವಗುಣವೂ ಇಲ್ಲ, ಕೃಷ್ಣನ ಪ್ರತಿಜ್ಞಾಭಂಗವೂ ಆಗಿಲ್ಲ. ಅರ್ಜುನನಿಗಾಗಿ ಕೃಷ್ಣ ತನ್ನ ಪ್ರತಿಜ್ಞಾಭಂಗ ಮಾಡಿಕೊಳ್ಳಲು ಮುಂದಾದಂತೆ ತೋರಿಕೊಂಡನಷ್ಟೆ. ಈ ನೆಪದಿಂದ ತನಗೇ ಕೀರ್ತಿ ತಂದಿತ್ತನೆಂದು ಭೀಷ್ಮನಿಗೆ ಆನಂದ!

ಭಾಗವತದಲ್ಲಿ ಕೃಷ್ಣ ತನ್ನ ಪ್ರತಿಜ್ಞೆಯನ್ನೆ ಮುರಿದಂತೆ ಕಾಣುತ್ತದೆ—

ಸ್ವನಿಯಮಮಪಹಾಯ ಮತ್ಪ್ರತಿಜ್ಞಾಂ
ಋತಮಧಿಕರ್ತುಮವಪ್ಲುತೋ ರಥಸ್ಥಃ

'ತನ್ನ ಪ್ರತಿಜ್ಞೆಯನ್ನು ಬಿಟ್ಟು ನನ್ನ ಪ್ರತಿಜ್ಞೆಯನ್ನು ಸತ್ಯಗೊಳಿಸಲು ಕೃಷ್ಣ ರಥದಿಂದ ಕೆಳಗೆ ಧುಮುಕಿದ'–ಇಲ್ಲಿ ತನ್ನ ಪ್ರತಿಜ್ಞೆಯನ್ನು ಬಿಡುವುದೆಂದರೆ ಅದನ್ನು ಸತ್ಯಗೊಳಿಸಲು

ಯತ್ನಿಸದಿರುವುದು ಹೊರತು ಪ್ರತಿಜ್ಞಾಭಂಗವಲ್ಲ. ತನ್ನ ಪ್ರತಿಜ್ಞೆಯ ರಕ್ಷಣೆಗೆ ಯತ್ನಿಸುವಂತೆ ಕಾಣುತ್ತಿರಲಿಲ್ಲ ಕೃಷ್ಣ. ಅದನ್ನು ಮುರಿಯಲು ಸಿದ್ಧನಾದಂತೆಯೆ ತೋರಿಕೊಂಡ! ಜರಾಸಂಧ ಕೃಷ್ಣಾರ್ಜುನರನ್ನು ಬಿಟ್ಟು ಭೀಮನೊಂದಿಗೇ ಹೋರಾಡಿದ ಎಂದರೆ, ಕೃಷ್ಣಾರ್ಜುನರನ್ನು ಪರಿತ್ಯಾಗ ಮಾಡಿದನೆಂದರ್ಥವಲ್ಲ. ಹಾಗೇ ಇದು. ಮಹಾಭಾರತಾನುಸಾರ ಭಾಗವತಕ್ಕೆ ಅರ್ಥ ಹೇಳಬೇಕು. ಇಲ್ಲದಿದ್ದರೆ ಮಹಾಭಾರತದ ವಿರೋಧ.

**ಧನವ ಸಂರಕ್ಷಿಸುವ ಫಣಿ ತಾ-**
**ನುಣದೆ ಮತ್ತೊಬ್ಬರಿಗೆ ಕೊಡದನು-**
**ದಿನದಿ ನೋಡುತ ಸುಖಿಸುವಂದದಿ ಲಕುಮಿವಲ್ಲಭನು ।**
**ಪ್ರಣತರನು ಕಾದಿಹನು ನಿಷ್ಕಾ-**
**ಮನದಿ ನಿತ್ಯಾನಂದಮಯ ದು-**
**ರ್ಜನರ ಸೇವೆಯನೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೧೨ ॥**

ಭೂಗತವಾದ ನಿಧಿಯನ್ನು ಕಾಯುವ ಸರ್ಪ ಅದನ್ನು ತಾನು ಅನುಭವಿಸದೆ ಮತ್ತೊಬ್ಬರಿಗೆ ಕೊಡದೆ ಸದಾ ನೋಡುತ್ತ ಸುಖಿಸುವಂತೆ ಲಕ್ಷ್ಮೀರಮಣ ಭಕ್ತರನ್ನು ಪ್ರತಿಫಲಾಪೇಕ್ಷೆಯಿಲ್ಲದೆ ಕಾಯುತ್ತಿರುವನು. ನಿತ್ಯಾನಂದಪೂರ್ಣನಾದ ಆತ ದುರ್ಜನರ ಸೇವೆಯನ್ನು ಒಲ್ಲ. ಜಗತ್ತಿಗೆಲ್ಲ ಅವನು ಅಪ್ರತಿಮಲ್ಲ.

*ಧನವ ಸಂರಕ್ಷಿಸುವ ಫಣಿ*

'ಫಣಿ' ಎಂದರೆ ಹೆಡೆ ಎತ್ತಿ ಬುಸುಗುಟ್ಟುವ ನಾಗರಹಾವು. ಅದು ಭೂಗತವಾದ ನಿಧಿಯನ್ನು ಕಾಯುತ್ತದೆ. ಅಪಹರಿಸಲು ಯತ್ನಿಸುವವರ ಮುಂದೆ ಹೆಡೆ ಎತ್ತಿ ಬುಸುಗುಟ್ಟುತ್ತದೆ, ಕಚ್ಚುತ್ತದೆ. ಏಕೆ? ನಿಧಿಯಿಂದ ಅದಕ್ಕೆ ಉಪಯೋಗವೇನಿದೆ? ತಾನು ಅದನ್ನು ಭೋಗಿಸುವುದಿಲ್ಲ. ಮತ್ತೊಬ್ಬರಿಗೆ ಕೊಡುವುದಿಲ್ಲ. ಪುಣ್ಯವಂತರಾದ ಯೋಗ್ಯ ವ್ಯಕ್ತಿಗೆ ಮಾತ್ರ ಬಿಟ್ಟುಕೊಡುತ್ತದೆ. ಹಾಗೆ ಲಕ್ಷ್ಮೀರಮಣ ಭಕ್ತರನ್ನು ಕಾಯುತ್ತಾನೆ. ಪ್ರಳಯಕಾಲದಲ್ಲಿ ನುಂಗಿದರೂ ಹೊಟ್ಟೆಯೊಳಗೆ ಜೋಪಾನವಾಗಿ ಇಟ್ಟುಕೊಳ್ಳುತ್ತಾನೆ. ಜೀರ್ಣ ಮಾಡಿ ನಾಶಪಡಿಸುವುದಿಲ್ಲ. ಮತ್ತೊಬ್ಬರಿಗೆ ಕೊಡುವುದೂ ಇಲ್ಲ. ವಿಜಯದಾಸರು ಹೇಳುತ್ತಾರೆ.

ಪಾಪಪುರುಷನೆಂಬೊ ಪಾಪಿಯ ಕೈಗೆ
ಪೋಪಗೊಡದೆ ಎನ್ನ ಕಾಪಾಡೊ ರನ್ನ ।
ಕರುಣಿಸೊ ಕೃಷ್ಣ ಕರುಣಿಸೊ ॥

ಪಾಪಪುರುಷನಾದ ಕಲಿಗೆ ಕೊಡದೆ ಪುಣ್ಯಪುರುಷನಾದ ಮುಖ್ಯಪ್ರಾಣನಿಗೇ ಕೊಡುತ್ತಾನೆ. ಅದರಿಂದಲೆ ಭಕ್ತರ ಮೋಕ್ಷಸಾಧನೆ ಸಾಗುತ್ತಿದೆ. ಇಲ್ಲದಿದ್ದರೆ ನರಕಸಾಧನೆಯಾಗುತ್ತಿತ್ತು.

ಹಾವು ನಿಧಿಯನ್ನು ಏಕೆ ಕಾವಾಡುತ್ತದೆ? ಅದಕ್ಕೇ ತಿಳಿಯದು ಸ್ವಾಭಾವಿಕ ಪ್ರವೃತ್ತಿ ಅದು ಹರಿ ತಿಳಿದು ಉದ್ದೇಶಪೂರ್ವಕವಾಗಿಯೆ ಕರುಣೆಯಿಂದ ಭಕ್ತರನ್ನು ಕಾವಾಡುತ್ತಾನೆ ಆದರೂ ಹಾವಿಗೆ ಕಾಮನೆ ಇಲ್ಲ ಹರಿಗೂ ಕಾಮನೆ ಇಲ್ಲ ಇಷ್ಟು ಅಂಶದಲ್ಲಿ ಸಾಮ್ಯವಿದೆ

**ಪ್ರಣತರನು ಕಾದಿಹನು**

ಆವೃತಾಸೋऽವತಾಸೋ ನ ಕರ್ತೃಭಿಃ
ತನೂಷು ತೇ ಕ್ರತವ ಇಂದ್ರ ಭೂರಯಃ

'ಶ್ರೀಹರಿ ಧನಿಕರು ಧನವನ್ನು ಗಂಟುಕಟ್ಟಿ ಭದ್ರವಾಗಿ ಭೂಗತ ಮಾಡಿ ಕಾಯುವಂತೆ ನೀನು ಭಕ್ತರನ್ನು ಮಹದಾದಿ ತತ್ವಗಳಿಂದ ಕಟ್ಟಿ ಹೊಟ್ಟೆಯಲ್ಲಿ ಇರಿಸಿಕೊಂಡು ಕಾಯುವಿ' ಎನ್ನುತ್ತದೆ ಒಂದು ಋಗ್ವೇದ ಮಂತ್ರ ಹರಿಗೆ ಜೀವರು ಬಂಗಾರ, ನಿಧಿ ಭದ್ರವಾಗಿ ಅವರನ್ನು ಇಪ್ಪತ್ತೈದು ಆವರಣಗಳೊಳಗೆ ಕಟ್ಟಿ ಜೋಪಾನವಾಗಿ ಇಡುತ್ತಾನೆ. ಆ ಆವರಣ-ಗಳು ಇವು ಸ್ವರೂಪಶರೀರದ ಮೇಲೆ ಮೊದಲಿಗೆ ಹರಿಯ ಇಚ್ಛಾವರಣ, ಬಳಿಕ ಲಿಂಗಶರೀರ, ಅವ್ಯಕ್ತ ಶರೀರ, ಅವಿದ್ಯಾವರಣ, ಕರ್ಮಕಾಮ ಆವರಣಗಳು, ಜೀವಾ-ಚ್ಛಾದಕ ಪರಮಾಚ್ಛಾದಕಗಳು, ನಾರಾಯಣಾವರಣ, ವಾಸುದೇವಾವರಣ, ಸಂಕರ್ಷ-ಣಾವರಣ, ಪ್ರದ್ಯುಮ್ನಾವರಣ, ಅನಿರುದ್ಧಾವರಣಗಳು, ಅನಿರುದ್ಧ ಶರೀರ, ವಾಸುದೇವ ಕವಚ, ನಾರಾಯಣಕವಚಗಳು ಆನಂದಮಯ ವಿಜ್ಞಾನಮಯ ಮನೋಮಯ ವಾಙ್ಮಯ ಶ್ರೋತ್ರಮಯ ಚಕ್ಷುರ್ಮಯ ಪ್ರಾಣಮಯ ಅನ್ನಮಯಗಳೆಂಬ ಎಂಟು ಕೋಶಗಳು, ಕೊನೆಯಲ್ಲಿ ಪ್ರತ್ಯಕ್ಷ ಕಾಣುವ ಸ್ಥೂಲ ಶರೀರ ಹೀಗೆ ಇಪ್ಪತ್ತೈದು ಬಿಗಿಯಾದ ಆವರಣ- ಗಳೊಳಗೆ ಭದ್ರವಾಗಿ ಕೆಡದಂತೆ ಇರಿಸಿ, ಅಚ್ಛೇದ್ಯ ಅಭೇದ್ಯವನ್ನಾಗಿ ಮಾಡಿ, ಭಕ್ತನನ್ನು ಕಾವಾಡುತ್ತಾನೆ, ಹರಿ ವಿಜಯದಾಸರೂ ಇದನ್ನು ಒಂದು ಸುಳಾದಿಯಲ್ಲಿ ಹೇಳುತ್ತಾರೆ

ಜಡಕೇವಲತರ ಸೂಕ್ಷ್ಮಪ್ರಕೃತಿಯಿಂದ
ಬಿಡದೆ ಬದ್ಧವಾದ ಜೀವರ ಜೀವರಾಶಿ
ಕೆಡಲುಂಟೆ? ಎಂದಿಗೆ ಅಚ್ಛೇದ್ಯ ಅಭೇದ್ಯ ಎಂಬೊ
ನುಡಿ ದೃಢವಾಗಿಪ್ಪುದು ಸರ್ವಕಾಲ!

ಅದರಿಂದ ಜೀವರ ಈ ಸಂಸಾರಬಂಧ ಹರಿಯ ಕರುಣೆಯ ವ್ಯಾಪಾರವೆ ಎನ್ನುತ್ತಿದ್ದಾರೆ ದಾಸರಾಯರು ಬಂಗಾರವನ್ನು ಗಂಟುಕಟ್ಟಿಡುವುದು ಅದರ ರಕ್ಷಣೆಗಾಗಿ ಜೀವರನ್ನು ಸಂಸಾರದಲ್ಲಿ ಬಂಧಿಸಿಡುವುದೂ ಹಾಗೇ ಅವರ ರಕ್ಷಣೆಗಾಗಿ ಅಂದರೆ ಅವರ ಸುಖ-ಸಾಧನೆಗಾಗಿ ಅದರಿಂದಲೆ ಈ ಶರೀರವನ್ನು ಸಾಧನಶರೀರವೆನ್ನುತ್ತೇವೆ ಇದರ ಮೂಲಕ ಸಾಧನ ಮಾಡಿಸಿ ಕಾವಾಡುತ್ತಾನೆ ಹರಿ

**ಲಕುಮಿವಲ್ಲಭ**

ಜೀವರನ್ನು ಕಾಪಾಡಿ ಹರಿಗೆ ಏನಾಗಬೇಕಾಗಿದೆ? ಆದರೂ ಆತ ಲಕ್ಷ್ಮೀರಮಣ ತನ್ನ ಮನದನ್ನೆಯಾದ ಲಕ್ಷ್ಮಿಯ ಮುದ್ದು ಮಕ್ಕಳೆಂದು ಪ್ರೀತಿಯಿಂದ ಕರುಣೆಯಿಂದ ಅವರನ್ನು ಕಾಪಾಡುತ್ತಾನೆ ಕಾಪಾಡೆಂದು ದೇವಿ ಬೇಡುವುದರಿಂದಲೆ ಕಾಪಾಡುತ್ತಾನೆ ಇಲ್ಲದಿದ್ದರೆ ಸಂಪತ್ತಿನ ಅಧಿದೇವತೆಯಾದ ಲಕ್ಷ್ಮಿಯ ರಮಣನಿಗೆ ಭಕ್ತ ಏನು ತಾನೆ ಕೊಟ್ಟು ತೃಪ್ತಿ ಪಡಿಸಬಲ್ಲ? ಕಾಸು ಬಿಡದೆ ಎಲ್ಲವನ್ನೂ ಕಸಿದುಕೊಂಡು ಭಕ್ತನಿಂದ ಪೂಜೆ ಮಾಡಿಸಿಕೊಳ್ಳುತ್ತಾನೆ ಶ್ರೀನಿವಾಸ! ಇದು ಕರುಣೆ!

**ನಿತ್ಯಾನಂದಮಯ**

ವಸ್ತುತಃ ಲಕ್ಷ್ಮಿಯಿಂದಲೂ ಅವನಿಗೆ ಏನಾಗಬೇಕಾಗಿಲ್ಲ ನಿತ್ಯಾನಂದಮಯ, ಸ್ವರಮಣ ಆತ ಲಕ್ಷ್ಮಿಯನ್ನು ಆತ ಆದರಿಸುವುದು ಅವಳ ಭಕ್ತಿಗಾಗಿ ಅಂದಕ್ಕಲ್ಲ ಅವಳ ಅಂದಕ್ಕಿಂತ ಅನಂತ ಮಡಿಯಾದ ಅಂದದ ಸ್ತ್ರೀರೂಪ ಅವನಲ್ಲಿಯೇ ಇದೆ ಅವನ ಮೋಹಿನಿರೂಪ ಕಂಡು ಲಕ್ಷ್ಮಿ ಅವಾಕ್ಕಾದಳಂತೆ, ವಾದಿರಾಜರು ಲಕ್ಷ್ಮೀಶೋಭನ-ಪದದಲ್ಲಿ ಹೇಳಿದ್ದಾರೆ—

> ತನ್ನ ಸೌಂದರ್ಯದಿಂದನ್ನಂತ ಮಡಿಯಾದ ಲಾ-
> ವಣ್ಯದಿ ಮೆರೆವ ನಿಜಪತಿಯ ।
> ಹೆಣ್ಣು ರೂಪವ ಕಂಡು ಕನ್ನೆ ಮಹಲಕ್ಷುಮಿ ಇವ-
> ಗನ್ಯರೇಕೆಂದು ಬೆರಗಾದಳು ॥

ಅದರಿಂದ ಕೇವಲ ಪ್ರೀತಿ ಕರುಣೆಗಳಿಂದಲೆ ಹರಿ ಒಲಿದು ದೇವಿಯ ಇಂಗಿತದಂತೆ ಭಕ್ತರನ್ನು ಕಾಪಾಡುತ್ತಾನೆ ಎನ್ನಬೇಕು

**ದುರ್ಜನರ ಸೇವೆಯನೊಲ್ಲ**

'ಹರಿಗೆ ಭಕ್ತರು ತನ್ನನ್ನು ಪೂಜಿಸಬೇಕು, ಹೊಗಳಬೇಕೆಂಬಾಸೆ ಇದೆ, ಅದರಿಂದಲೆ, ಪೂಜಿಸದ ದುರ್ಜನರನ್ನು ಆತ ನಾಶಮಾಡುತ್ತಾನೆ' ಎಂದರೆ ಅದು ತಪ್ಪಾಗುತ್ತದೆ ಪೂಜೆ ಹೊಗಳಿಕೆಗಳ ಆಸೆ ಇರುತ್ತಿದ್ದರೆ ಆತ ದುರ್ಜನರಿಂದಲೂ ಬಲಾತ್ಕಾರವಾಗಿಯಾದರೂ ಅವನ್ನು ಪಡೆಯುತ್ತಿದ್ದ ಆದರೆ ಆತ ಅವರ ಸೇವೆಯನ್ನೆ ಒಲ್ಲ

> ಭೂರ್ಯಪ್ಯಭಕ್ತೋಪಹೃತಂ
> ನ ಮೇ ತೋಷಾಯ ಕಲ್ಪತೇ

ಎನ್ನುತ್ತಾನೆ ಕೇವಲ ಸಜ್ಜನರ ಭಕ್ತಿಗೇ ಮೆಚ್ಚಿ ಅವರಿಂದಲೇ ಸೇವೆ ಸ್ವೀಕರಿಸುತ್ತಾನೆ ಅದೂ ತನಗಾಗಿ ಅಲ್ಲ, ಅವರಿಗಾಗಿ ಅವರ ಮೋಕ್ಷಸಾಧನೆಗಾಗಿ

**ಜಗಕೆಲ್ಲ ಅಪ್ರತಿಮಲ್ಲ**

ಹರಿ ಸರ್ವಶಕ್ತ ಅವನ ಮುಂದೆ ಎಲ್ಲರೂ ದುರ್ಬಲರು ಅವರು ಅವನನ್ನು ಏನೂ ಮಾಡಲಾರರು

ಕಿಂ ಮಾಂ ನಿಂದಂತಿ ಶತ್ರವೋಽನಿಂದ್ರಾಃ

'ದುರ್ಬಲರಾದ ಈ ಶತ್ರುಗಳು ನಿಂದಿಸಿ ಏನು ಮಾಡಬಲ್ಲರು?' ಎಂದು ವೇದದಲ್ಲಿ ತಾನೆ ಹೇಳಿದ್ದಾನೆ ಆದರಿಂದ ಅವನಿಗೆ ಯಾರಿಂದಲೂ ಅಪಾಯವಿಲ್ಲ ಯಾರ ಸಹಾಯವೂ ಬೇಕಾಗಿಲ್ಲ ದುರ್ಜನರ ಸೇವೆಯನ್ನೇಕೆ ಬಯಸುತ್ತಾನೆ? ಸಜ್ಜನರಿಂದಲೆ ಸೇವೆ ಸ್ವೀಕರಿಸುತ್ತಾನೆ. ಅವರನ್ನು ಅನುಗ್ರಹಿಸುತ್ತಾನೆ ಇದೆ ಅವನು ಮಾಡುವ ರಕ್ಷಣೆ

**ನಿಷ್ಕಾಮನದಿ ಕಾದಿಹನು**

ಹಣವನ್ನು ತಾನೂ ಅನುಭವಿಸದೆ ಮತ್ತೊಬ್ಬರಿಗೂ ಕೊಡದೆ ಸರ್ಪನಂತೆ ಕಾದು, ನೋಡಿ ಆನಂದಿಸುವುದು ಮಹಾಲೋಭಿಯ ಸ್ವಭಾವ ಇದನ್ನು ಭಗವಂತನ ಭಕ್ತರಕ್ಷಣ-ಕಾರ್ಯಕ್ಕೆ ಉದಾಹರಣೆಯಾಗಿ ಕೊಟ್ಟುದು ಉಚಿತವೆ? ಎಂಬ ಪ್ರಶ್ನೆ ಬರಬಹುದು ಆದರೆ ಈ ಅಂಶದಲ್ಲಿ ಸಾಮ್ಯ ವಿವಕ್ಷಿತವಲ್ಲ ಹಾವಿಗೆ ಹೇಗೆ ಸ್ವಾರ್ಥವಿಲ್ಲವೊ ಹಾಗೇ ಹರಿಗೂ ಎಂದು ಮಾತ್ರವೆ ಇಟ್ಟುಕೂಳ್ಳಬೇಕೆಂಬ ಅಭಿಪ್ರಾಯದಿಂದ 'ನಿಷ್ಕಾಮನದಿ ಕಾದಿಹನು' ಎನ್ನಲಾಗಿದೆ

ಅಥವಾ ಧನವ ಸಂರಕ್ಷಿಸುವ ಫಣಿ ಎಂದರೆ ಸಾಮಾನ್ಯ ಹಾವಲ್ಲ, ಮಹಾಶೇಷ ಅವನು ಸಂರಕ್ಷಿಸುವ ನಿಧಿಯೂ ಸಾಮಾನ್ಯ ನಿಧಿಯಲ್ಲ

ಭೂತಾದಿರ್ನಿಧಿರವ್ಯಯಃ

ಎಂದು ವಿಷ್ಣುಸಹಸ್ರನಾಮ ಹೇಳುವಂತೆ ಸಕಲ ಸಜ್ಜನರೂ ತಮ್ಮ ಹೃದಯ ಗುಹೆಗಳಲ್ಲಿ ಸದಾ ಬಚ್ಚಿಟ್ಟುಕೊಳ್ಳುವ ಅವ್ಯಯ ನಿಧಿಯಾದ ಭಗವಂತ ಶ್ರೀಮದಾಚಾರ್ಯರು ಸಜ್ಜನರಿಗೆ ತೋರಿಸಿಕೊಟ್ಟ ಮಹಾನಿಧಿಯೆ ಈತನೆಂದು ವ್ಯಾಸರಾಜರು ಹೇಳಿದ್ದಾರೆ—

ಆನಂದತೀರ್ಥೋಪದಿಷ್ಟೋ ನಿಧಿರ್ನಾರಾಯಣಾಹ್ವಯಃ

ಅನಂತಶಯನ, ಅನಂತಾಸನನೆನಿಸಿದ ಹರಿಗೆ ಆಸನಶಯನವೆರಡೂ ಶೇಷನೆ ಹರಿಯನ್ನು ತನ್ನ ಮಿದುವಾದ ಮೈಮೇಲೆ ಮಲಗಿಸಿ ಸಾವಿರ ಹೆಡೆಗಳಿಂದ ತಬ್ಬಿಕೊಳ್ಳುತ್ತಾನೆ ಶೇಷ ರಾಮಾವತಾರಕಾಲದಲ್ಲಿ ಲಕ್ಷ್ಮಣನಾಗಿ ದಂಡಕಾರಣ್ಯದಲ್ಲಿ ಪರ್ಣಕುಟೀರ ನಿರ್ಮಿಸಿ ಸೀತಾರಾಮರನ್ನು ಅದರೊಳಗೆ ಇರಿಸಿ, ರಾತ್ರಿ ಇಡೀ ನಿದ್ರೆ ಇಲ್ಲದೆ ಎಚ್ಚರದಿಂದ ಇದ್ದು ಕಾವಲು ಕಾಯುತ್ತಿದ್ದ ಹಗಲೂ 'ತಾನುಣದೆ' ಅವರನ್ನು ಉಣಿಸಿ ಬೆಂಗಾವಲಾಗಿದ್ದು ನೋಡಿಕೊಳ್ಳುತ್ತಿದ್ದ 'ಮತ್ತೊಬ್ಬರಿಗೆ ಕೊಡದೆ' ಅಂದರೆ ಕ್ರೂರಮೃಗಗಳ ಅಥವಾ ರಾಕ್ಷಸರ ಪಾಲಾಗದಂತೆ 'ಅನುದಿನದಿ ನೋಡುತ ಸುಖಿಸು'ತ್ತಿದ್ದ ಪ್ರೀತಿಭಕ್ತಿಗಳಿಂದ ಕಣ್ತುಂಬ ನೋಡಿ ಆನಂದಿಸುತ್ತಿದ್ದ

ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಭಿವಂದನಾತ್
ನಿತ್ಯ ಪಾದವಂದನೆ ಮಾಡುತ್ತಿದ್ದನಂತೆ ಲಕ್ಷ್ಮಣ

ಈ ಉದಾಹರಣೆಯಲ್ಲಿ ಭಕ್ತ ಭಗವಂತನನ್ನು ಭಕ್ತಿಪ್ರೀತಿಗಳಿಂದ ನೋಡಿಕೊಂಡರೆ ಭಗವಂತ ಭಕ್ತನನ್ನು ವಾತ್ಸಲ್ಯ ಕರುಣಗಳಿಂದ ನೋಡಿಕೊಳ್ಳುತ್ತಾನೆ ಎಂದಿಷ್ಟೇ ವ್ಯತ್ಯಾಸ

**ಪ್ರಣತರು ಯಾರು?**

ಪ್ರಣತರು, ಭಕ್ತರು ಎಂದರೆ ಲಕ್ಷ್ಮಣನಂತಿರಬೇಕು ತಮ್ಮ ಶರೀರವೆಂಬ ದಂಡಕಾ-ರಣ್ಯದ ನಡುವೆ ಹೃದಯವೆಂಬ ಪರ್ಣಕುಟೀರದಲ್ಲಿ ಲಕ್ಷ್ಮೀನಾರಾಯಣರನ್ನು ಇರಿಸಿ-ಕೊಂಡು ದುಷ್ಟಕಾಮನೆಗಳೆಂಬ ರಾಕ್ಷಸರ ಬಾಧೆ ಉಂಟಾಗದಂತೆ ನೋಡಿಕೊಳ್ಳಬೇಕು ಈ ರಾಕ್ಷಸರು ಮುತ್ತಿದರೆ 'ಭಗವಂತ' ಮರೆಯಾಗುತ್ತಾನೆ ಹಾಗಾಗದಂತೆ 'ಉಣದೆ' ನಿಷಿದ್ಧಾನ್ನಪಾನಗಳನ್ನು ವರ್ಜಿಸಿ ಉಪವಾಸಾದಿ ವ್ರತಗಳಿಂದ ಅಂತಃಕರಣಶುದ್ಧಿ ಸಂಪಾ-ದಿಸಿಕೊಳ್ಳಬೇಕು ಅನುದಿನ ಹೃದಯದಲ್ಲಿ ಭಗವಂತನನ್ನು ಧ್ಯಾನದೃಷ್ಟಿಯಿಂದ ಕಂಡು ಸುಖಿಸಬೇಕು

ಪ್ರಣತರಿಗೆಲ್ಲ ಆದರ್ಶ ಮುಖ್ಯಪ್ರಾಣ ಅವನು 'ಆಖಣಾಶ್ಮ'ನಾಗಿ ಕಲ್ಯಾದಿಗಳ ಆಕ್ರಮಣವನ್ನು ತಡೆದು ಸುರಕ್ಷಿತವಾಗಿ ಹರಿಯನ್ನು ತನ್ನೊಳಗೆ ಇರಿಸಿ ಕಾದುಕೊಂಡಿದ್ದಾನೆ ಅದರಿಂದ ಅಷ್ಟೇ ಸುರಕ್ಷಿತವಾಗಿ ಹರಿಯೂ ಅವನನ್ನು ಕಾದುಕೊಂಡಿದ್ದಾನೆ

ತ್ರಾತಾ ಯಸ್ಯ ತ್ರಿಧಾಮಾ
ತ್ರಿಧಾಮನಾದ ಹರಿ ಪ್ರಾಣನಿಗೆ ರಕ್ಷಕ ಅದರಿಂದ ಅವನಿಗೆ ಯಾರಿಂದಲೂ ಭಯವಿಲ್ಲ

ಜಗದುತ ವಶಗಂ ಕಿಂಕರಾಃ ಶಂಕರಾದ್ಯಾಃ
'ಜಗತ್ತೇ ಅವನ ಅಧೀನ ರುದ್ರಾದಿಗಳೆಲ್ಲ ಅವನ ಕಿಂಕರರು ಹೀಗೇ ನಾವೂ ಭಗವಂತ-ನನ್ನು ಹೃದಯದಲ್ಲಿ ಬಚ್ಚಿಟ್ಟುಕೊಂಡು ಕಾಪಾಡಿದರೆ ಅವನು ನಮ್ಮನ್ನು ತನ್ನ ಉದರದೊಳಗೆ ಬಚ್ಚಿಟ್ಟುಕೊಂಡು ಕಾಪಾಡುತ್ತಾನೆ ಎನ್ನುತ್ತಿದ್ದಾರೆ ದಾಸರಾಯರು

**ಬಾಲಕನ ಕಲಭಾಷೆ ಜನನಿಯು**
**ಕೇಳಿ ಸುಖಪಡುವಂತೆ ಲಕುಮೀ-**
**ಲೋಲ ಬಕುತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು ।**
**ತಾಳ ತನ್ನವರಲ್ಲಿ ಮಾಡುವ**
**ಹೇಳನವ ಹೆದ್ದೈವ ವಿದುರನ**
**ಆಲಯದಿ ಪಾಲುಂಡು ಕುರುಪನ ಮಾನವನೆ ಕೊಂಡ ॥ ೧೪ ॥**

ಎಳೆ ಮಗುವಿನ ತೊದಲು ಮಾತನ್ನು ಹೆತ್ತ ತಾಯಿ ಕೇಳಿ ಸುಖಪಡುವಂತೆ ಲಕ್ಷ್ಮೀ-ಲೋಲ ಶ್ರೀಹರಿ ಭಕ್ತರು ಮಾಡುವ ಸ್ತುತಿಗೆ ಹಿಗ್ಗುತ್ತಾನೆ ತನ್ನವರಲ್ಲಿ ಯಾರಾದರೂ ತಿರಸ್ಕಾರ

ಮಾಡಿದರೆ ತಾಳಲಾರ ಇದಕ್ಕೆ ಉದಾಹರಣೆ—ಶ್ರೀಕೃಷ್ಣಪ್ರಿಯರಾದ ಪಾಂಡವರನ್ನು ದ್ವೇಷಿಸಿದ್ದರಿಂದ ದುರ್ಯೋಧನ ಭೋಜನಕ್ಕೆ ಕರೆದರೂ ಕೃಷ್ಣ ತಿರಸ್ಕರಿಸಿದ ವಿದುರನ ಮನೆಯಲ್ಲಿ ಕ್ಷೀರಾನ್ನ ಉಂಡು ದುರ್ಯೋಧನನ ಮಾನವನ್ನೆ ಕೊಂಡ

**ಬಾಲಕನ ಕಲಭಾಷೆ**

'ಕಲ' ಎಂದರೆ ಅಸ್ಪಷ್ಟವಾಗಿದ್ದರೂ ಕೇಳಲು ಮಧುರವಾದ ಭಾಷೆ, ಮಾತು, ತೊದಲು ನುಡಿ ಎಳೆಮಗುವಿನ ತೊದಲು ನುಡಿ ಕೇಳುವುದೆಂದರೆ ತಾಯಿಗೆ ಹಿಗ್ಗು ಹೀಗೇ ಹರಿಭಕ್ತರಿಗೆ ಜನನಿಯಾಗಿ ಅವರು ಮಾಡುವ 'ಸಂಸ್ತುತಿ'ಯನ್ನು ಮಧುರವಾದ ಭಕ್ತಿಭಾವದ ಸ್ತುತಿಯನ್ನು ಕೇಳಿ ಹಿಗ್ಗುತ್ತಾನೆ ಪುರುಷಸೂಕ್ತದಲ್ಲಿ ಹೇಳುವಂತೆ ತನ್ನ ಅಂಗಾಂಗಗಳಿಂದಲೇ ನೇರವಾಗಿ ಬ್ರಹ್ಮಾದಿ ದೇವತೆಗಳನ್ನು ಸೃಜಿಸುವ ಪರಮಪುರುಷ ನಾರಾಯಣನೆ ನಿಜವಾಗಿ ಎಲ್ಲರ ತಾಯಿ ತಂದೆ ತಾಯಿಯ ಮೂಲಕ ಸೃಷ್ಟಿಮಾಡುವವ ತಾಯಿ ಸಾಕ್ಷಾತ್ ಉತ್ಪತ್ತಿಕಾರಣಳು ಹರಿಯೂ ಸಾಕ್ಷಾತ್ ಉತ್ಪತ್ತಿಕಾರಣನೆಂದ ಮೇಲೆ, ಅವನಿಗೆ ಸ್ತ್ರೀರೂಪವೂ ಇರುವುದರಿಂದ ಎಲ್ಲರ ತಾಯಿ ಎನ್ನಲಡ್ಡಿಯಿಲ್ಲ ಆದ್ದರಿಂದ ಇಲ್ಲಿ ಕೊಟ್ಟ ಉದಾಹರಣೆಯಲ್ಲಿ ಪೂರ್ತಿ ಸಾಮ್ಯವೆ ಇದೆ ಭಕ್ತರು ಬಾಲಕರೆ, ಏನೂ ತಿಳಿಯದ ಮಕ್ಕಳೆ, ಹರಿಯ ದೃಷ್ಟಿಯಲ್ಲಿ ಆತ ಹೆತ್ತ ತಾಯಿ ವಾತ್ಸಲ್ಯದ ಜನನಿಯೆ

ಎಳೆ ಮಕ್ಕಳ ತೊದಲು ನುಡಿ ಅಸ್ಪಷ್ಟಮತ್ತು ಅಶುದ್ಧ, ಅಬದ್ಧ ಅದವಿ ಆಚಾರ್ಯರು ಷೋಡಶಿಯಲ್ಲಿ ಹೇಳುತ್ತಾರೆ

ಪ್ರಮದಾತಿರೇಕೇಣಾನವರತಮಮರಗಣೈರಾಚೀರ್ಯಮಾಣಂ
ಸ್ವಗುಣಗಣಾನಾಂ ಮನಸೋಪಾಸನಂ ವಾಚಾ ವರ್ಣನಂ ಚಾತಿಪಾಯ
ಕಥಂಚಿದುಪಾಸನಂ ಪ್ರತಿಶ್ಲೋಕಮಬದ್ಧಸ್ತವನಂ ಚಾನುಕಂಪಯೈವ ಸ್ವೀಕೃತ್ಯಾಸ್ತೇ ॥

'ವೈಕುಂಠಾದಿ ಲೋಕಗಳಲ್ಲಿ ದೇವತೆಗಳು ಆನಂದೋದ್ರೇಕದಿಂದ ನಿರಂತರ ತನ್ನ ಅಪಾರ ಗುಣಗಳನ್ನು ಮನದಲ್ಲಿ ನೆನೆಸೆದು ಮಾತಿಂದ ಹೊಗಳುತ್ತಿರುವಾಗ ಅದೆಲ್ಲವನ್ನೂ ಬಿಟ್ಟು ಭೂಮಿಗೆ ಬಂದು ಅಜ್ಞ ಮಾನವರು ಮಾಡುವ ಅಲ್ಪ ಉಪಾಸನೆಯನ್ನೂ ಪ್ರತಿ ಶ್ಲೋಕದಲ್ಲಿಯೂ ತಪ್ಪುತಪ್ಪಾಗಿ ಮಾಡುವ ಸ್ತೋತ್ರವನ್ನೂ ಕರುಣೆಯಿಂದಲೆ ಸ್ವೀಕರಿಸುತ್ತಾನೆ ಶ್ರೀಹರಿ' ಆದ್ದರಿಂದ ಜನನಿ ಬಾಲಕನ ತೊದಲು ನುಡಿಯಲ್ಲಿಯೆ ಸುಖ ಕಾಣಬಹುದು, ಹರಿ ಭಕ್ತನ ಅಬದ್ಧವಾದ ಸ್ತೋತ್ರದಲ್ಲಿ ದೋಷವನ್ನು ಮರೆತು ಭಕ್ತಿಯನ್ನು ಮಾತ್ರ ಗ್ರಹಣ ಮಾಡುತ್ತಾನೆ ಎಂದು ವಿಶೇಷ ತಿಳಿಯಬೇಕು ದೋಷವನ್ನು ಮರೆತು ಗುಣವನ್ನು ಸ್ವೀಕರಿಸುವ ಮಹಾಗುಣ ಹರಿಯಲ್ಲಿ ಉಂಟು ಆತ ಭಕ್ತವತ್ಸಲ, ಕರುಣಾಸಾಗರ, ಎನ್ನುತ್ತಿದ್ದಾರೆ ದಾಸರಾಯರು

ಅಥವಾ ಇಲ್ಲಿ ಬಾಲಕನೆಂದರೆ ಏನೂ ತಿಳಿಯದ ಎಳೆ ಮಗುವಲ್ಲ ಎಳೆ ಮಗುವಿನ ತೊದಲು ನುಡಿಯಂಥ ಅಪ್ರಬುದ್ಧವಾದ ಸ್ತೋತ್ರವನ್ನು ಮೆಚ್ಚುವವ ಹರಿಯಲ್ಲ ಅಶಕ್ತಿ

ಅಜ್ಞಾನ, ಪಾಪಗಳೆ ಹರಿಯ ಕರುಣೆ ಸಂಪಾದಿಸಲು ಇರುವ ಅರ್ಹತೆ ಎಂದು ತಿಳಿದರೆ ತಪ್ಪಾಗುತ್ತದೆ

ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಸ್ವರತೋಽಪರಾಧಾತ್ ।

ಮಂತ್ರದಲ್ಲಿ ಒಂದು ಸ್ವರ, ಒಂದು ವರ್ಣ ವ್ಯತ್ಯಾಸವಾದರೂ ಮಹಾ ಅನರ್ಥವನ್ನೇ ನೀಡುತ್ತಾನೆ ಶ್ರೀಹರಿ ಅದರಿಂದ ಯಜ್ಞಗಳಲ್ಲಿ 'ಮಂತ್ರಭ್ರೇಷ'ಕ್ಕೆ ಪ್ರಾಯಶ್ಚಿತ್ತ ವಿಧಿಸಿದ್ದಾರೆ ಜಪಪೂಜಾದಿಗಳಲ್ಲಿಯೂ 'ಸ್ವರವರ್ಣಸರ್ವಲೋಪಪ್ರಾಯಶ್ಚಿತ್ತ' ರೂಪವಾಗಿ ನಾಮ-ತ್ರಯ ಜಪಿಸುತ್ತೇವೆ ಆದ್ದರಿಂದ ಇಲ್ಲಿ ಹೇಳಿದ ತೊದಲುನುಡಿ ಅಶಕ್ತರಾದ ಅಲ್ಪಾಧಿಕಾರಿ-ಗಳ ತೊದಲು ನುಡಿಯಲ್ಲ ಬ್ರಹ್ಮಾದಿ ದೇವತೆಗಳಂಥ ಮಹಾಧಿಕಾರಿಗಳು,

ಬಿಗಿದ ಕಂಠದಿಂ ದೃಗ್ಬಾಷ್ಪಗಳಿಂ
ನಗೆಮೊಗದಿಂದ ರೋಮಗಳೊಗೆದು
ಮಿಗೆ ಸಂತೋಷದಿಂ ನೆಗೆದಾಡುತ

ಎಂದು ದಾಸರಾಯರೆ ಹೇಳುವಂತೆ ಭಕ್ತಿಭರದಿಂದ ಸ್ತೋತ್ರ ಮಾಡುತ್ತಾರೆ ಆಗ ಸ್ವಾಭಾ-ವಿಕವಾಗಿ ನಾಲಿಗೆ ತೊದಲುತ್ತದೆ ಮುಂದೆ ಕಕ್ಷ್ಯಾತಾರತಮ್ಯಸಂಧಿಯಲ್ಲಿ ದಾಸರಾಯರು ಬ್ರಹ್ಮದೇವರು ತೊದಲುವುದನ್ನು ವರ್ಣಿಸುತ್ತಾರೆ

ಮಂದಜಾಸನ ಪುಳಕಪುಳಕಾ-
ನಂದಬಾಷ್ಪದ ತೊದಲ ನುಡಿಯಿಂ-
ದಿಂದಿರಾವಲ್ಲಭನ ಮಹಿಮೆ ಗಭೀರತರವೆಂದ ।

ಆದ್ದರಿಂದ ತೊದಲುನುಡಿಯ 'ಬಾಲಕ' ಇಲ್ಲಿ ಲಕ್ಷ್ಮೀನಾರಾಯಣರ 'ಬಾಲ'ನಾದ 'ಕ' ಎಂದರೆ ಬ್ರಹ್ಮನೆ ಅವನ ತೊದಲುನುಡಿ ಜನನಿಯಾದ ಲಕ್ಷ್ಮಿಗೂ, ಜನನಿಯಂತಿರುವ ನಾರಾಯಣನಿಗೂ ಬಲು ಮೆಚ್ಚು ಅದೇ ಸಂ-ಸ್ತುತಿ

ಬ್ರಹ್ಮಾದಿಗಳ ಸಂಸ್ತುತಿಯನ್ನೂ ಹರಿ ಏಕೆ ಮೆಚ್ಚುತ್ತಾನೆ? ಅವನಿಗೆ ಅದರಲ್ಲಿ ಏನು ಸೊಗಸಿದೆ? ಸಾಕ್ಷಾತ್ ಸಕಲಶಬ್ದಮಯಿಯಾದ ಲಕ್ಷ್ಮಿ ಸದಾ ಲಕುಮೀಲೋಲನನ್ನು ಹಾಡಿ ಕೊಂಡಾಡುತ್ತಿರುತ್ತಾಳೆ ಬ್ರಹ್ಮಪ್ರಳಯಕಾಲದ ಸುದೀರ್ಘಕಾಲದಲ್ಲಿಯೂ ಲಕ್ಷ್ಮಿ ನಾರಾ-ಯಣನನ್ನು ಮಧುರವಾದ ಸಾಮಗಾನದಿಂದ ಆರಾಧಿಸುತ್ತಾಳೆ ಆಲದೆಲೆಯ ಮೇಲೆ ಮಗುವಾಗಿ ಮಲಗಿದ ಹರಿಯನ್ನು ಜೋಗುಳ ಹಾಡುತ್ತ ತೂಗುತ್ತಾಳೆ

ಆಲದೆಲೆಯ ಮೇಲೆ ಮಲಗಿದಂದು ನಿನ್ನ
ಲಾಲಿ ಲಾಲಿ ಎಂದು ಪಾಡಿದರಾರಯ್ಯ?

ಎಂದು ಶ್ರೀವ್ಯಾಸರಾಯರು ಹಾಡಿದ್ದಾರೆ ಇಂಥ ಲಕುಮೀಲೋಲನಿಗೆ ಅನ್ಯರು ಮಾಡುವ ಸ್ತುತಿಯಲ್ಲಿ ಏನು ಸೊಗಸು ಕಂಡೀತು? ಆದರೂ ಕರುಣೆಯಿಂದಲೆ ಅಡವಿ ಆಚಾರ್ಯರು ಹೇಳುವಂತೆ ಹರಿಭಕ್ತರ ಸಂಸ್ತುತಿಗೆ ಹಿಗ್ಗುತ್ತಾನೆ

ಅಥವಾ ಬಾಲಕನೆಂದರೆ ಯಶೋದೆಯ ಮಡಿಲಲ್ಲಿ ಆಡಿದ ಬಾಲಕ, ಶ್ರೀಕೃಷ್ಣ ಭಾಗವತ ಹೇಳುವಂತೆ,

ದೂರೇ ಕ್ರೀಡನಕಾಸಕ್ತಂ ಪುತ್ರಂ ನಾರಾಯಣಾಹ್ವಯಮ್

ದೂರದಲ್ಲಿ ಬ್ರಹ್ಮಾಂಡದ ಆಚೆ ಅವ್ಯಾಕೃತಾಕಾಶದಲ್ಲಿ ವ್ಯಾಪ್ತನಾಗಿದ್ದು ಬ್ರಹ್ಮಾಂಡದ ಸೃಷ್ಟ್ಯಾದಿ ಕ್ರೀಡೆ ಮಾಡುವುದರಲ್ಲಿ ಆಸಕ್ತನಾದ ಬಾಲಕ ಶ್ರೀಹರಿ ಅಥವಾ ಅವನಿಗೆ ಬಾಲಕ' ಎನಿಸಿದ ಬ್ರಹ್ಮ ಅದರಿಂದಲೂ ಆತ 'ಬಾಲಕ' ಅವನು ಯಶೋದೆಯ ಬಳಿ ತೊದಲು ನುಡಿಯಿಂದ ನುಡಿದುದನ್ನು ವಿಜಯದಾಸರು ಸುಂದರವಾಗಿ ಬಣ್ಣಿಸಿದ್ದಾರೆ

ಅಂಗಿ ತೊತ್ತೇನೆ, ಗೋಪಿ! ತಿಂಗಲವಾದೇನೆ,
ತಿಂಗಾದಿ ಪಿದಿದೇನು, ಸಲ ನಲವೋಗಿ
ಗಂಗೆಯ ತಿದೆಯಲ್ಲಿ ಆದಿ ಬಂದೇನು || ಪ ||
ಆಕಲ ಕಲಕೊಲ್ಲೆ ತಾಯಿ! ಹಾಲು ಕುದಿದೇನಿ
ಗೋಕುಲ ಮಕ್ಕಲ ಕೂದ ಕಲಿತು
ತಾಕಾಕೋಲು ಹೊದದೇನೆ ||
ಹೊಲಗೆ ಅನ್ಯಯ್ಯ ಬಿದ್ದಾನೆ, ತಲೆಯಲ್ಲಿ ಮನ್ನು,
ಶಲಗಿಲಿ ವಲಗಿಸು, ವೇಗ ಬಂದು,
ತೊಲಿಯೆ ಬಿತಿ ನೀರಿಂದ ಕೆತರು
ತೊದಲ ಮಾತು ಕೇಳಿ ಮಗನ ವದನ ಮುದ್ದಿ
ಸಿದಳಮಲ ಭಾಗ್ಯ ವಿಜಯವಿಟ್ಠಲ
ಯದುಕುಲ ಪಾವನವೆಂದಳು ಗೋಪಿ ||

ಪ್ರಸನ್ನ ವೆಂಕಟದಾಸರೂ ಹೀಗೆ ಹಾಡಿದ್ದಾರೆ

ಎತ್ತೋದೆಯಮ್ಮ! ನಂಗನ್ನೆತ್ತಿಕೊ, ಅಮ್ಮ! ಬಲು
ಮತ್ತು ಅತ್ತು ಬಂದೀನೆ ಇತ್ತೆ ಅಮ್ಮಿ ತಿಂದೇನೆ || ಪ ||
ಕೂಚಿಗಮ್ಮಿ ಕೂಬ್ಯಾಲೆ ನಂಗಂಗಚ್ಚತಾನೆ ಅವನಾಲೆ
ಪಾಚನ್ನು ವೆಂಕತ್ತಕಿತ್ತಪ್ಪ ಕನ್ನದೀಲಿ ನಚುನಗಿ ನಗುತಾನೆ ಕಲತಾಲ || ೭ ||

ಹೀಗೆ ಬಾಲಕ ಕೃಷ್ಣನ ಕಲಭಾಷೆಯನ್ನು ಜನನಿ ಯಶೋದೆ ಕೇಳಿ ಸುಖಪಡುವಂತೆ ಎಂದು ಉದಾಹರಣೆ ನೀಡುವ ಮೂಲಕ ಮಕ್ಕಳ ಮುದ್ದು ಮಾತು ಎಲ್ಲವೂ ಕೃಷ್ಣನ ಮಾತೆಂದು ಆದರಿಸಲು ಕರೆ ನೀಡುತ್ತಿದ್ದಾರೆ ದಾಸರಾಯರು

ಐತರೇಯಭಾಷ್ಯದಲ್ಲಿ,

ಪುತ್ರಸ್ಯ ಭಾವನಾ ಸೈವ ತದ್ಗತ್ವಾದ್ ಹರಿಭಾವನಾ ।
ಪುತ್ರಸ್ಥಸ್ಯ ಹರೇಃ ಪೂಜಾಂ ಕುರ್ವತಃ ಪೃಥಿವೀಸ್ಥಿತಿಃ ॥
ಸ್ವರ್ಗಸ್ಥಸ್ಯಾಪಿ ಭವತಿ ಪುತ್ರಪುಣ್ಯಂ ಯತೋಽಖಿಲಮ್ ॥

'ಪುತ್ರನನ್ನು ಆದರಿಸುವುದು ಪುತ್ರನಲ್ಲಿ ಹರಿ ಇರುವನೆಂಬ ಅರಿವುಳ್ಳವನಿಗೆ ಹರಿಪೂಜೆ ಎಂದೆನಿಸುತ್ತದೆ ಪುತ್ರನೊಳಗಿರುವ ಹರಿಯನ್ನು ಆರಾಧಿಸುವವ ಸ್ವರ್ಗಸ್ಥನಾದರೂ ಅವನಿಗೆ ಭೂಮಿಯಲ್ಲಿ ಹುಟ್ಟದೆಯೂ ಭೂಮಿಯಲ್ಲಿ ಅಸ್ತಿತ್ವವಿದ್ದಂತೆಯೆ, ಏಕೆಂದರೆ ಪುತ್ರನು ಮಾಡುವ ಪುಣ್ಯವೆಲ್ಲವೂ ಸ್ವರ್ಗದಲ್ಲಿರುವ ಪಿತನಿಗೂ ಲಭಿಸುತ್ತದೆ' ಎನ್ನುತ್ತಾರೆ ಶ್ರೀಮದಾಚಾರ್ಯರು

**ತಾಳ ಹೇಳನವ**

ಶ್ರೀಹರಿ ತನ್ನವರನ್ನು ಮಕ್ಕಳಂತೆ ನೋಡಿಕೊಳ್ಳುವುದರಿಂದ, ಮಕ್ಕಳಲ್ಲಿ ಎಷ್ಟೇ ದೋಷ-ವಿರಲಿ ಯಾರಾದರೂ ಅವಮಾನ ಮಾಡಿದರೆ ತಾಯಿ ಸಹಿಸದಿರುವಂತೆ ಭಕ್ತರನ್ನು ದ್ವೇಷಿ-ಸಿದರೆ ಹರಿಯೂ ಉಗ್ರನಾಗುತ್ತಾನೆ ಭಕ್ತ ಅಂಬರೀಷನನ್ನು ಕೆಣಕಲು ಬಂದ ಸಾಕ್ಷಾದ್ ರುದ್ರಾವತಾರನಾದ ದೂರ್ವಾಸ ಮಹರ್ಷಿಯನ್ನೂ ಸುಮ್ಮನೆ ಬಿಡಲಿಲ್ಲ 'ತದ್ಭಕ್ತದ್ವೇಷ ಏವ ಚ' ಎಂದು ನವವಿಧ ದ್ವೇಷದಲ್ಲಿ ಭಕ್ತದ್ವೇಷವನ್ನೂ ಒಂದೆಂದು ಪರಿಗಣಿಸಲಾಗಿದೆ ಪ್ರಹ್ಲಾದನನ್ನು ದ್ವೇಷಿಸಿದ ಹಿರಣ್ಯಕಶಿಪುವನ್ನು ಅತಿ ಉಗ್ರರೂಪದಿಂದ ಶಿಕ್ಷಿಸಿದ ಈ ಕ್ರೋಧ ದ್ವೇಷವಲ್ಲ ಪ್ರಹ್ಲಾದನ ಮೇಲಿನ ಕರುಣೆಯ ಇನ್ನೊಂದು ಮುಖವಷ್ಟೆ ಇಂಥ ನಿದರ್ಶನಗಳು ನೂರಾರು ಲಭ್ಯವಿದ್ದರೂ ದಾಸರಾಯರು ಇಲ್ಲಿ ಕೃಷ್ಣ ವಿದುರನ ಮನೆಯಲ್ಲಿ ಪಾಲುಂಡು ಕುರುಪನ ಮಾನ ಕೊಂಡ ನಿದರ್ಶನ ನೀಡಿದುದು ಗಮನಾರ್ಹ

**ವಿದುರನ ಆಲಯದಿ ಪಾಲುಂಡ**

ಪಾಂಡವರ ರಾಯಭಾರಿಯಾಗಿ ಬಂದ ಕೃಷ್ಣ ದುರ್ಯೋಧನ ನೀಡಿದ ಭೋಜನದ ಆಮಂತ್ರಣವನ್ನು ನಿರಾಕರಿಸಿ ದಾಸೀಪುತ್ರನಾದ ವಿದುರನ ಮನೆಗೆ ಹೋಗಿ ಹಾಲುಂಡ ಇದು ದುರ್ಯೋಧನನಿಗೆ ದೊಡ್ಡ ಅವಮಾನ ಕುಮಾರವ್ಯಾಸಭಾರತದಲ್ಲಿ ಹೇಳಿದೆ—

'ನಮ್ಮರಮನೆಗೆ ಬರದೆ ತೊತ್ತಿನ ಮಗನ ಮನೆಯಲಿ ಹಸಿವ ನೂಕಿದಿರಿ!'

'ಪಾಲುಂಡ' ಎನ್ನುವುದು ಪ್ರಾಯಃ ಕುಮಾರವ್ಯಾಸ ಭಾರತದ ಈ ಮಾತಿಗೆ ಸಂವಾದಿ-ಯಾಗಿ ಹೊರಟಿದೆ—

ಪಾಲ್ಗಡಲೊಳಗೆ ಮಲಗುವ ವಿಷ್ಣು ವಿದುರನ
ನಿಳಯದೊಳಗೊಕ್ಕುಡಿತೆ ಹಾಲಲಿ ಹಸಿವ ನೂಕಿದನು ।

ಶ್ರೀವ್ಯಾಸರಾಜರ ಹೇಳುತ್ತಾರೆ—

ಪಾಡು ರಸಾಯನದೊಟ್ಟ ರಚಿಸಿರಲು ಕುರುಪತಿಯು
ಬಡ ವಿದುರನ ಮನೆಯ ಕುಡುತೆ ಪಾಲ್ಕುಡಿದು

ವಸ್ತುತಃ ಇದು ಅತಿಶಯೋಕ್ತಿ ನಿರ್ಣಯದಲ್ಲಿ ಶ್ರೀಮದಾಚಾರ್ಯರು,

ಸಂಪೂಜಿತಃ ಸರ್ವಸಮರ್ಪಣೇನ

'ವಿದುರ ಕೃಷ್ಣನಿಗೆ ತನ್ನ ಸರ್ವಸ್ವವನ್ನೆ ಸಮರ್ಪಿಸಿದ' ಎಂದಿದ್ದಾರೆ 'ಒಕ್ಕುಡಿತೆ ಹಾಲು' ಎಂದಿಲ್ಲ ಅದೇ ಸರ್ವಸ್ವವೆನ್ನೋಣವೆ? ಮಹಾಭಾರತ ಸ್ಪಷ್ಟವಾಗಿ ಹೀಗೆ ಹೇಳುತ್ತದೆ

ಅಭ್ಯರ್ಚಯಾಮಾಸ ತದಾ ಸರ್ವಕಾಮೈಃ ಪ್ರಯತ್ನವಾನ್

'ಸರ್ವಪ್ರಯತ್ನದಿಂದ ಕೃಷ್ಣನಿಗೆ ಬೇಕಾದುದನ್ನೆಲ್ಲ ನೀಡಿ ಸತ್ಕರಿಸಿದ ಶುಚಿರುಚಿಯಾದ ನಾನಾ ಬಗೆಯ ಅನ್ನಪಾನಗಳನ್ನು ಅರ್ಪಿಸಿದ ಆಗ ಕೃಷ್ಣ ಮೊದಲಿಗೆ ವೇದವೇತ್ತರಾದ ಬ್ರಾಹ್ಮಣರಿಗೆ ಅನ್ನ ನೀಡಿದ, ಅಪಾರ ಧನಕನಕಗಳನ್ನು ದಕ್ಷಿಣೆ ನೀಡಿದ ಬಳಿಕ ಪರಿವಾರ-ಸಮೇತನಾಗಿ ನಾನಾ ಬಗೆಯ ಅನ್ನಗಳನ್ನು ಭುಂಜಿಸಿದ, ದೇವತೆಗಳ ಪರಿವಾರದೊಂದಿಗೆ ಇಂದ್ರನಂತೆ ಕುಳಿತು ಆತಿಥ್ಯ ಸ್ವೀಕರಿಸಿದ'

ಇನ್ನೂ ಹೆಚ್ಚಿನ ಸಂಭ್ರಮದ ಆತಿಥ್ಯ ನೀಡಲು ದುರ್ಯೋಧನ ಸಮರ್ಥನಿದ್ದ ಸಿದ್ಧನೂ ಇದ್ದ ಆದರೆ ಕೃಷ್ಣ ಅವನ ಆತಿಥ್ಯವನ್ನು ಸ್ವೀಕರಿಸಲಿಲ್ಲ ಇದು ಅವನಿಗೆ ಬರಲಿದ್ದ ಮಹಾ ಅನರ್ಥಕ್ಕೆ ಸೂಚಕವಾಗಿತ್ತು ನಮ್ಮನ್ನು ಹಾಗೆ ಅನರ್ಥಕ್ಕೆ ತಳ್ಳದೆ ಅನುಗ್ರಹಿಸಲೆಂದೆ ಕಾಸಿಗೆ ಕೈಯೊಡ್ಡುತ್ತಾನೆ, ಕರುಣಾಳು ಶ್ರೀನಿವಾಸ

**ಕುರುಪನ ಮಾನವನೆ ಕೊಂಡ**

ಕೃಷ್ಣ ವಿದುರನ ಮನೆಯಲ್ಲಿ ಪಾಲುಣ್ಣುವುದರ ಮೂಲಕ ಕುರುಪನ ಮಾನ ಕೊಂಡಿದ್ದು ಮಾತ್ರವಲ್ಲದೆ ಇನ್ನೊಂದು ರೀತಿಯಿಂದಲೂ ಅವಮಾನ ಮಾಡಿದ ಕುಮಾರವ್ಯಾಸ ಹೇಳುತ್ತಾನೆ ಕೃಷ್ಣ ಕೌರವನ ಓಲಗವನ್ನು ಪ್ರವೇಶಿಸಿದಾಗ ಎಲ್ಲ ಸಭಾಸದರೂ ಎದ್ದು ಗೌರವ ತೋರಿದರು

'ಕುಮತಿ ಕೌರವನಿಳಿಯದಿರ್ದನು ಸಿಂಹವಿಷ್ಟರವ!'

ನೆಣಸು ನೇರದ ದೇವನಿದಿರಿಲಿ
ಮಣಿಯದಾತನ ಕಾಣುತಲೆ ಧಾ-
ರುಣಿಯ ನೊತ್ತಿದ ಸುಂಗುಟದ ತುದಿಯಿಂದ ನಸುನಗುತ ।
ಮಣಿಖಚಿತ ಕಾಂಚನದ ಪೀಠದ
ಗೊಣಸು ಮುರಿದುದು ಮೇಲೆ ಸುರಸಂ-
ದಣಿಗಳ್ 'ಆ!' ಎನೆ ಕವಿದು ಬಿದ್ದನು ಹರಿಯ ಚರಣದಲಿ ॥

ಈ ಅಂಶ ಮಹಾಭಾರತದಲ್ಲಿ ಕಾಣುವುದಿಲ್ಲ ಪ್ರಾಯಃ ಪ್ರಚಲಿತ ಪಾಠದಲ್ಲಿ ಅದನ್ನು ಯಾರೋ ತೆಗೆದುಹಾಕಿರಬಹುದು ಏಕೆಂದರೆ ಶ್ರೀವಾದಿರಾಜರೂ ಒಂದು ಕೀರ್ತನೆಯಲ್ಲಿ ಇದನ್ನು ಉಲ್ಲೇಖಿಸುತ್ತಾರೆ

ಎಂಥಾ ಪಾವನ ಪಾದ ಇಂತು ಜಗತಿನೊಳು
ಪಂಥದೊಳಿದ್ದ ಕುರುಪತಿಯ ಉರುಳಿಸಿದ

**ಲಕುಮೀಲೋಲ ಹೆದ್ದೈವ**

ಮಹಾಲಕ್ಷ್ಮಿ ಬೇರೆ ಎಲ್ಲ ದೇವತೆಗಳನ್ನು ತಿರಸ್ಕರಿಸಿ ಹರಿಯೆ ಹೆದ್ದೈವನೆಂದು ಅವನನ್ನೆ ವಂದಿಸಿದಳು ವೃಕಾಸುರ 'ನಾನು ಯಾರ ತಲೆಯ ಮೇಲೆ ಕೈ ಇಡುವೆನೊ ಅವನು ಸುಟ್ಟು ಬೂದಿಯಾಗಲಿ' ಎಂದಾಗ 'ತಥಾಸ್ತು' ಎಂದ ಸ್ತೋತ್ರಪ್ರಿಯನಾದ ಶಿವ ಆಗ ಅವನ ರಕ್ಷಣೆಗೆ ಹರಿ ಬರಬೇಕಾಯಿತು ಹೀಗೆ ಸ್ತೋತ್ರಕ್ಕೆ ವಶನಾಗಿ ಅನರ್ಥ ತಂದುಕೊಳ್ಳಬಲ್ಲ ಸಾಮಾನ್ಯ ದೇವತೆಯಲ್ಲ, ಹರಿ, ಹೆದ್ದೈವ

ಸ್ವತಃ ಆನಂದಮಯನಾದ ಆತನಿಗೆ ಸ್ತೋತ್ರ ಬೇಕಾಗಿಲ್ಲ ಅದೊಂದು ವೈಭವವಷ್ಟೆ ಸ್ತೋತ್ರ ಬೇಕೆನಿಸಿದರೂ ಮಹಾಲಕ್ಷ್ಮಿ ನಿರಂತರ ಮಾಡುವ ಮಧುರವಾದ ದಿವ್ಯವಾದ ಸ್ತೋತ್ರಗಳು ಇವೆ ಕೇವಲ ಕರುಣೆಯಿಂದಲೆ ನಮ್ಮ ಸ್ತೋತ್ರಗಳನ್ನು ಲಾಲಿಸುತ್ತಾನೆ

**ಸ್ಮರಿಸುವವರಪರಾಧಗಳ ತಾ**
**ಸ್ಮರಿಸ ಸಕಲೇಷ್ಟಪ್ರದಾಯಕ**
**ಮರಳಿ ತನಗರ್ಪಿಸಲು ಕೊಟ್ಟುದನಂತ ಮಡಿ ಮಾಡಿ ।**
**ಪರಿಪರಿಯಲುಂಡುಣಿಸಿ ಸುಖಸಾ-**
**ಗರದಿ ಲೋಲಾಡಿಸುವ ಮಂಗಳ-**
**ಚರಿತ ಚಿನ್ಮಯಗಾತ್ರ, ಸಜ್ಜನಮಿತ್ರ, ಸರ್ವತ್ರ ॥ ೧೫ ॥**

ತನ್ನನ್ನು ಭಕ್ತಿಯಿಂದ ಸ್ಮರಿಸುವವರ ಅಪರಾಧಗಳನ್ನು ಹರಿ ತಾನು ಸ್ಮರಿಸುವುದಿಲ್ಲ, ಮರೆತುಬಿಡುತ್ತಾನೆ ಸಕಲಾಭೀಷ್ಟದಾಯಕನೇ ಆಗುತ್ತಾನೆ ಭಕ್ತರು ಅವನು ಕೊಟ್ಟಿದ್ದನ್ನೇ ಮರಳಿ ತನಗೆ ಅರ್ಪಿಸಿದರೂ ಕೊಟ್ಟುದನ್ನು ಅನಂತಮಡಿ ಮಾಡಿ ಪರಿಪರಿಯಲ್ಲಿ ಉಂಡು ಉಣಿಸುತ್ತಾನೆ ಸುಖಸಾಗರದಲ್ಲಿ ಓಲಾಡಿಸುತ್ತಾನೆ ಏಕೆಂದರೆ ಆತ ಮಂಗಳಚರಿತ ಚಿನ್ಮಯಶರೀರಿ, ಎಲ್ಲಾ ಕಡೆ ಸಜ್ಜನರಿಗೆ ಮಿತ್ರನಾಗಿರುವವ

***ಸ್ಮರಿಸುವವರ ಅಪರಾಧಗಳ ಸ್ಮರಿಸ***

ಇಲ್ಲಿ 'ಸ್ಮರಿಸುವರ ಅಪರಾಧಗಳ ಸ್ಮರಿಸ' ಎಂದೂ ಒಂದು ಪಾಠವಿದೆ ಆದರೆ 'ಸ್ಮರಿಸು-ವರ ಅಪರಾಧ'ವೆಂದು ಸಂಧಿ ಮಾಡದಿರುವುದು, ವಿಸಂಧಿ ಕಾವ್ಯದೋಷವೆನಿಸುವು-ದರಿಂದ ಸಂಧಿಮಾಡಿರುವ 'ಸ್ಮರಿಸುವವರಪರಾಧ' ಎಂಬ ಪಾಠವೆ ಉತ್ತಮ

ಭಗವಂತನಲ್ಲಿ ನಾವು ಮಾಡುವ ದೊಡ್ಡ ಅಪರಾಧ ಅವನ ವಿಸ್ಮರಣೆ ಆತ ನಮ್ಮನ್ನು ಹುಟ್ಟಿಸಿದ ತಂದೆ ಕಣ್ಣಿಗೆ ರೆಪ್ಪೆಯಂತೆ ಹೊರಗೂ, ಹಾರಕ್ಕೆ ಸೂತ್ರದಂತೆ ಒಳಗೂ ರಕ್ಷಕನಾಗಿದ್ದು ಮೋಕ್ಷಸಾಧನ ಮಾಡಿಸಿ ಸುಖಸಾಗರದಲ್ಲಿ ಓಲಾಡಿಸುತ್ತಾನೆ ಇಷ್ಟು ಮಾಡಿದ್ದಕ್ಕೆ ಪ್ರತಿಫಲವೇನೂ ಬಯಸುವುದಿಲ್ಲ ಅಂಥ ಭಗವಂತನನ್ನು ಮಕ್ಕಳಾದ ನಾವು ಮರೆಯುವುದೆಂದರೆ ಅದು ಕೃತಘ್ನತೆಯ ಪರಮಾವಧಿ

ಗೋಪಾಲದಾಸರು ಹೇಳುತ್ತಾರೆ

ಇಂದಿರೆಯರಸ ಗೋಪಾಲವಿಟ್ಠಲ ಕೃಷ್ಣ
ತಂದೆ! ನಿನ್ನ ವಿಸ್ಮೃತಿ ಎನಗೆ ಮುಖ್ಯಾಪರಾಧ

ಅದರಿಂದ ಆತನ ಉಪಕಾರವನ್ನು ಸ್ಮರಿಸಿದರೆ ಸಾಕು ಅವನು ಪ್ರಸನ್ನನಾಗಿ ಎಲ್ಲಾ ಅಪರಾಧಗಳನ್ನು ಮರೆಯುತ್ತಾನೆ ಸ್ಮರಿಸಿ, 'ಪತ್ರಂ ಪುಷ್ಪಂ ಫಲಂ ತೋಯಂ' ಎಂದು ಏನು ಕೊಟ್ಟರೂ ಅದನ್ನೆ ಅನಂತಮಡಿ ಮಾಡಿ ಸ್ವೀಕರಿಸುತ್ತಾನೆ ಒಂದಿಷ್ಟು ನೀರು ಕೊಟ್ಟರೂ 'ಅಮೃತೋಪಹಾರ ಮಹಾನೈವೇದ್ಯ'ವೆಂದು ಉಂಡು ನಲಿಯುತ್ತಾನೆ ಮೋಕ್ಷಾನಂದ ನೀಡಿ ನಮ್ಮನ್ನೂ ನಲಿಸುತ್ತಾನೆ

ಅಥವಾ ಪೂಜೆ, ಜಪ ಮುಂತಾದ ಯಾವುದೇ ಸತ್ಕರ್ಮ ಮಾಡುವಾಗ 'ಬಗವತೋ ಬಲೇನ ಭಗವತೋ ವೀರ್ಯೇಣ ಭಗವತಸ್ತೇಜಸಾ ಭಗವತಃ ಕರ್ಮಣಾ' 'ಭಗವಂತ ಕೊಟ್ಟಿರುವ ಬಲವೀರ್ಯತೇಜಸ್ಸುಕ್ರಿಯಾಶಕ್ತಿಗಳಿಂದಲೆ ನಾನು ಅವನನ್ನು ಆರಾಧಿಸುತ್ತೇನೆ' ಎನ್ನುತ್ತ ಅವನನ್ನು ಸ್ಮರಿಸಬೇಕು ಅದರಿಂದಲೆ ಪ್ರತಿಕರ್ಮದ ಆದಿಯಲ್ಲಿ 'ಸಂಕಲ್ಪ' ಮಾಡುವ ಸಂಪ್ರದಾಯ ಬಂದಿದೆ ಹೀಗೆ ಭಕ್ತಿಪೂರ್ವಕ ಸ್ಮರಿಸದೆ ಏನೂ ಮಾಡಿದರೂ ಒಲ್ಲ ಸ್ಮರಿಸಿ ಏನು ಮಾಡಿದರೂ ಸ್ವೀಕರಿಸುವ ಏನು ಅಪರಾಧ ಮಾಡಿದರೂ ಮರೆವ

ಶ್ರೀಮದಾಚಾರ್ಯರು ಸದಾಚಾರಸ್ಮೃತಿಯಲ್ಲಿ ಹೇಳುತ್ತಾರೆ

ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ ।
ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥

'ಕರ್ಮಕಾಲದಲ್ಲಿ ಸದಾ ವಿಷ್ಣುಸ್ಮರಣೆ ಮಾಡುತ್ತಿರಬೇಕು ಎಂದೂ ಮರೆಯಕೂಡದು ಬೇರೆ ಎಲ್ಲಾ ವಿಧಿನಿಷೇಧಗಳೂ ಈ ವಿಧಿನಿಷೇಧಗಳಿಗೇ ಕಿಂಕರರು' ಅಂದರೆ ಭಗವಂತನ ಸ್ಮರಣಪೂರ್ವಕವಾಗಿಯೆ ವಿಹಿತಕರ್ಮ ಮಾಡಬೇಕು ಸ್ಮರಣವಿದ್ದರೇ ವಿಹಿತಕರ್ಮದಲ್ಲಿ ಪ್ರವೃತ್ತಿ ಸ್ಮರಣಪೂರ್ವಕವಾದ ಆ ಕರ್ಮದಿಂದಲೇ ಅಂತಃಕರಣಶುದ್ಧಿಯಾಗಿ ತಿರುಗಿ ಗಾಢವಾದ ಸ್ಮರಣೆ ಲಭಿಸುತ್ತದೆ ಆ ಕರ್ಮದಲ್ಲಿ ಏನು ದೋಷವಿದ್ದರೂ ಪರಿಹಾರವಾಗುತ್ತದೆ ಮತ್ತು ಕರ್ಮಫಲವೂ ಲಭಿಸುತ್ತದೆ ಹರಿಸ್ಮರಣೆ ಇಲ್ಲದಿದ್ದರೆ ಕರ್ಮದಲ್ಲಿ ಪ್ರವೃತ್ತಿಯಾಗಲಾರದು ಒಂದು ವೇಳೆ ಆದರೂ ಅದರಿಂದ ಫಲ ಸಿಗದು ಅದರಿಂದ ಕರ್ಮವಿಧಿ ಸ್ಮರಣವಿಧಿಗೆ ಕಿಂಕರ ಹಾಗೇ ಹರಿಯ ವಿಸ್ಮರಣೆಯಿಂದಲೆ ನಿಷಿದ್ಧಕರ್ಮದಲ್ಲಿ

ಪ್ರವೃತ್ತಿ ಅದರಿಂದಲೇ ಅಂತಃಕರಣ ಕಲುಷಿತವಾಗುತ್ತದೆ ಅನರ್ಥ ಹೆಚ್ಚುತ್ತದೆ ಎಂದೇ ದುಷ್ಕರ್ಮನಿಷೇಧವನ್ನು ವಿಸ್ಮರಣನಿಷೇಧಕ್ಕೆ ಕಿಂಕರ ಎನ್ನಲಾಗಿದೆ ಆದರಿಂದ ಅತ್ಯಂತ-ನಿಷಿದ್ಧವಾದ ವಿಸ್ಮರಣೆ ಒಂದನ್ನು ಮಾಡದಿದ್ದರೆ ಸಾಕು, ಬೇರೆ ಎಲ್ಲಾ ನಿಷಿದ್ಧ ಕರ್ಮಾ-ಚರಣೆಯನ್ನು ಹರಿ ಮರೆಯುತ್ತಾನೆ

ಅಥವಾ ಗರುಡಪುರಾಣದಲ್ಲಿ ಬ್ರಹ್ಮ ನಾರದರಿಗೆ ಹೇಳಿದ ಶತಾಪರಾಧಗಳು ಅಂದರೆ ನೂರು ಅಪರಾಧಗಳು—

ಸ್ನಾನ ಮಾಡದೆ ದೇವತಾರ್ಚನೆ ಮಾಡುವುದು, ಸ್ನಾನ ಮಾಡದೆ, ಕಾಲು ತೊಳೆದು-ಕೊಳ್ಳದೆ ದೇವಾಲಯ ಪ್ರವೇಶಿಸುವುದು, ದೀಪವಿಲ್ಲದ ಆಲಯದಲ್ಲಿ ಪೂಜೆ ಮಾಡು-ವುದು, ಗೋಮಯ ಸಾರಿಸದ ನೆಲದಲ್ಲಿ ದೇವತಾರ್ಚನೆ, ಹೂಗಳನ್ನು ತೊಳೆಯದೆ ಅರ್ಪಿಸುವುದು, ತುಳಸಿಯನ್ನು ತೊಳೆದು ಅರ್ಪಿಸುವುದು, ಪೂಜಾಕಾಲದಲ್ಲಿ ಮಾತನಾ-ಡುವುದು, ಗಂಧವಿಲ್ಲದ ಪೂಜೆ, ಗಂಟೆ ಇಲ್ಲದ ಪೂಜೆ, ಧೂಪಾರತಿಯನ್ನು ಬಾಯಿಂದ ಊದುವುದು ಸ್ತೋತ್ರವಿಲ್ಲದೆ ನಿರ್ಮಾಲ್ಯ ವಿಸರ್ಜಿಸುವುದು, ಬಟ್ಟೆಯಿಂದ ಸೋಸದೆ ಅಗ್ರೋದಕ ತರುವುದು, ಅದಕ್ಕೆ ಮಾನವನ ನೆರಳು ಬೀಳುವುದು, ಉಗುರಿನ ಸ್ಪರ್ಶ-ವಾಗುವುದು, ಪೂಜೋಪಕರಣಗಳಿಗೆ ಪಾದಸ್ಪರ್ಶ, ಮಿಂದು ಮಡಿ ಉಡದೆ ನೈವೇದ್ಯಪಾಕ ಮಾಡುವುದು, ಅಗ್ರೋದಕ ಕಲಶಕ್ಕೆ ಬಾಯಿ ಮುಚ್ಚದಿರುವುದು, ಅಭೋಜ್ಯ ಪದಾರ್ಥ ನಿವೇದಿಸುವುದು, ಅದನ್ನು ಉಣ್ಣುವುದು, ಕೂದಲು ಗಡ್ಡ, ಮೀಸೆ, ಉಗುರುಗಳನ್ನು ಸ್ಪರ್ಶಿಸಿದ ಕೈಗಳಿಂದ ದೇವರನ್ನು ಸ್ಪರ್ಶಿಸುವುದು, ಬೇರೆಯವರು ಉಟ್ಟ ಬಟ್ಟೆ, ಹರಿದ ಬಟ್ಟೆ, ಕಪ್ಪು ಬಟ್ಟೆ, ಒಗೆಯದ ಬಟ್ಟೆಗಳನ್ನು ಅರ್ಪಿಸುವುದು, ಉಡುವುದು, ಅಷ್ಟಾಕ್ಷರ ಮಂತ್ರೋಪದೇಶವಿಲ್ಲದೆ ಪೂಜೆ ಮಾಡುವುದು, ಕದ್ದು ತಂದ, ಬೇರೆಯವರು ಉಪಯೋಗಿಸಿದ, ಉದುರಿಬಿದ್ದ, ಕೊಳೆತ, ಬಾಡಿದ ಹೂಗಳ ಸಮರ್ಪಣೆ, ಬಟ್ಟೆ, ಎಕ್ಕೆ ಎಲೆ, ಹರಳಿನ ಎಲೆಗಳಲ್ಲಿ ತಂದ, ಸುವಾಸನೆ ಇಲ್ಲದ ಹೂ ಅರ್ಪಿಸುವುದು, ತುಲಸಿಯಿಲ್ಲದ ಪೂಜೆ, ಹರಳೆಣ್ಣೆ ದೀಪವಿಟ್ಟು ಪೂಜೆ, ಪಂಚಸಂಸ್ಕಾರ(ತಪ್ತಮುದ್ರಾಧಾರಣೆ, ಊರ್ಧ್ವಪುಂಡ್ರಧಾರಣೆ, ಹರಿಯ, ಹರಿಭಕ್ತರ ನಾಮ ಧರಿಸುವುದು, ವಿಷ್ಣುಮಂತ್ರಜಪ, ನಿತ್ಯ ದೇವತಾರ್ಚನೆ ಎಂದು ಐದು ಬಗೆಯ ವಿಷ್ಣುದೀಕ್ಷೆ) ಇಲ್ಲದೆ ಪೂಜೆ ಮಾಡುವುದು, ಶಿವಾದಿಗಳಿಗೆ ಸಮಾನವಾಗಿ ಏಕಕಾಲದಲ್ಲಿ ಒಂದೇ ಪೀಠದಲ್ಲಿ ಹರಿಯನ್ನು ಪೂಜಿಸುವುದು, ತುಲಸಿಮಣಿ, ಕಮಲಮಣಿಮಾಲೆಗಳನ್ನು ಧರಿಸದೆ ಪೂಜೆ ಮಾಡುವುದು ಉತ್ತರೀಯವನ್ನು ಪವಿತ್ರವನ್ನೂ ಧರಿಸದೆ, ಕಚ್ಚೆ ಉಡದೆ ಪೂಜಿಸುವುದು, ವೇದನಿಂದಕರ ಒಡನಾಟ, ದುಷ್ಟ ಶಾಸ್ತ್ರಾಧ್ಯಯನ, ನರಸ್ತುತಿ ಮಾಡುವುದು, ಕೇಳುವುದು, ಪೂಜ್ಯರನ್ನು ಸ್ತುತಿಸದಿರುವುದು, ಸಚ್ಛಾಸ್ತ್ರಾಧ್ಯಯನ ಮಾಡದಿರುವುದು, ಹರಿಗುರುಗಳ ಸಚ್ಛಾಸ್ತ್ರಗಳ ಸತ್ಪುರುಷರ ನಿಂದೆ ಶ್ರವಣ ಮಾಡುವುದು, ಪೂಜಾಕಾಲದಲ್ಲಿ ಮಕ್ಕಳನ್ನು ಆಡಿಸುವುದು, ತುಪ್ಪದ ಅಭಿ-

ಘಾರವಿಲ್ಲದೆ ನೈವೇದ್ಯ ಸಮರ್ಪಿಸುವುದು, ಮಲಮೂತ್ರ ಬಂಧಿಸಿಕೊಂಡು, ಉಂಡು ಅಥವಾ ಉಂಡ ಅನ್ನ ಜೀರ್ಣವಾಗದಿದ್ದಾಗ ಪೂಜಿಸುವುದು, ಪೂಜಾಕಾಲದಲ್ಲಿ ಪೂಜ್ಯರು ಬಂದಾಗ ಎದ್ದು ಇದಿರುಗೊಳ್ಳದಿರುವುದು ಹರಿಕಥೆ, ಪುರಾಣಶ್ರವಣಕಾಲದಲ್ಲಿ ತಾಂಬೂಲ ಮೆಲ್ಲುವುದು, ಗುರುವಿಗೆ ಸಮಾನ ಆಸನದಲ್ಲಿ ಕುಳಿತು ಶ್ರವಣ ಮಾಡುವುದು ಅಶ್ರದ್ಧೆಯಿಂದ ಕೇಳುವುದು, ಲೋಕವಾರ್ತೆ, ಮನೆವಾರ್ತೆಗಳಲ್ಲಿ ಕಾಲ ಕಳೆಯುವುದು, ದೇವರಿಗೆ ನಮಸ್ಕರಿಸಿ ಮೈದೂಳು ಕೊಡವಿಕೊಳ್ಳುವುದು, ಒದ್ದೆಬಟ್ಟೆ ಉಟ್ಟು ಪೂಜೆ ಮಾಡುವುದು, ಏಕಾದಶೀವ್ರತ ಮಾಡದಿರುವುದು, ಪರ್ವದಿನಗಳಲ್ಲಿ ಸ್ತ್ರೀಸಂಗ ಮಾಡು-ವುದು, ಪುರುಷಸೂಕ್ತಪಠನವಿಲ್ಲದೆ ಪೂಜೆ, ಪೂಜೆಯ ಆದ್ಯಂತಗಳಲ್ಲಿ ವಿಷ್ಣುಸಹಸ್ರನಾಮ ಪಠಿಸದಿರುವುದು, ಅಗ್ನಿ, ಬ್ರಾಹ್ಮಣರಿಗೆ ಅನ್ನನೀಡದೆ ಉಣ್ಣುವುದು, ದೇವಾಲಯದೊಳಗೆ ಸಂಸಾರ ಮಾಡುವುದು, ಶಂಖವಿಲ್ಲದ ಪೂಜೆ, ದೇವರ ಮುಂದೆ ಕಾಲು ಚಾಚುವುದು, ತುಲಸೀವೃಂದಾವನವಿಲ್ಲದ ಮನೆಯಲ್ಲಿ ಪಾನಮಾಡುವುದು, ತುಲಾ, ಮಕರ ಮೇಷಗಳಲ್ಲಿ ಪ್ರಾತಃ ಸ್ನಾನ ಮಾಡದಿರುವುದು, ಪೂಜಾವಸಾನದಲ್ಲಿ ದೇವರಿಗೆ ಮುಖವಸ್ತ್ರ ಅರ್ಪಿಸ-ದಿರುವುದು, ಬ್ರಹ್ಮಪಾರಸ್ತೋತ್ರ ಹೇಳದೆ ಪೂಜಿಸುವುದು

ನಿತ್ಯ ವಿಷ್ಣುಸಹಸ್ರನಾಮಗಳಿಂದ ಹರಿಸ್ಮರಣೆ ಮಾಡುತ್ತ ಬಂದರೆ ಪ್ರಮಾದದಿಂದಾದ ಶತಾಪರಾಧಗಳನ್ನೂ ಹರಿ ಮರೆತುಬಿಡುತ್ತಾನೆ

ಅಥವಾ ವರಾಹಪುರಾಣದಲ್ಲಿ ವರಾಹಮೂರ್ತಿ ಭೂದೇವಿಗೆ ಹೇಳುವ ದ್ವಾತ್ರಿಂಶದ-ಪರಾದಗಳು ಅಂದರೆ ಮೂವತ್ತೆರಡು ಅಪರಾದಗಳು—

ತಿರ್ಯಕ್‌ಪುಂಡ್ರ ಧರಿಸಿಕೊಂಡು, ದಂತಧಾವನ ಮಾಡದೆ ಪೂಜೆ ಮಾಡುವುದು, ಬೇಡಿ ತಂದ ಹೂತುಲಸಿಗಳಿಂದ ಅರ್ಚನೆ, ಕಾಲು ತೊಳೆಯದೆ ದೇವಾಲಯ ಪ್ರವೇಶಿಸು-ವುದು, ದೇವರೆದುರು ತಾಂಬೂಲ ಮೆಲ್ಲುವುದು, ಕುಸುಬೆ ಹೂವನ್ನು ಸೇವಿಸುವುದು, ಸೌತೆ, ಮುತ್ತುಗಗಳ ಹೂಗಳಿಂದ ಅರ್ಚನೆ, ಆಸುರಕಾಲದಲ್ಲಿ ಪೂಜೆ ಮಾಡುವುದು, ವಿಷ್ಣುಭಕ್ತರಲ್ಲದವರು ಪಾಕ ಮಾಡಿದ್ದನ್ನು ನಿವೇದಿಸುವುದು, ಗುರುಗಳ ಸನ್ನಿಧಿಯಲ್ಲಿ ದೇವರ ಪೂಜೆ ಮಾಡುವುದು, ಅಭಿಘಾರವಿಲ್ಲದ, ಅಥವಾ ಕೇವಲ ಘೃತದಿಂದಾದ ಧೂಪ, ಬಟ್ಟೆಯಿಂದ ಅಥವಾ ಕೈಗಳಿಂದ ಬೀಸಿ ಅಥವಾ ಬಾಯಿಂದ ಊದಿ ಹಾಕಿದ ಧೂಪ ಸಮರ್ಪಿಸುವುದು, ಅವೈಷ್ಣವರು ನೋಡುವಂತೆ ಪೂಜಿಸುವುದು, ಎಡಗೈಯಲ್ಲಿ ದೇವರನ್ನು ಹಿಡಿದುಕೊಂಡು ಅಭಿಷೇಕ ಮಾಡುವುದು, ಹಿಂದಿನ ದಿನದ ಅಡುಗೆ ಅಥವಾ ಮೂಸಿ ನೋಡಿದ ಅನ್ನಾದಿಗಳನ್ನು ನಿವೇದಿಸುವುದು ಕರಿಬಟ್ಟೆ, ಕೆಂಪುಬಟ್ಟೆ ಉಡುವುದು, ಒಗೆಯದ ಹೊಸ ಬಟ್ಟೆ, ಹರಕುಬಟ್ಟೆಗಳನ್ನು ಅರ್ಪಿಸುವುದು, ಉಗುರು ಸೋಕಿದ ನೀರಿಂದ ಅಭಿಷೇಕ, ಪೂಜಾಕಾಲದಲ್ಲಿ ಮೌನ ಮುರಿಯುವುದು, ಬೆವರಿಂದ ಮೈ ತೊಯ್ದುಕೊಂಡು ಪೂಜಿಸುವುದು, ಅಪಾನವಾಯುಮಲಮೂತ್ರಗಳನ್ನು ತಡೆದುಕೊಂಡು ಪೂಜಿಸುವುದು,

ಕಂಬಳಿ ಹೊದ್ದುಕೊಂಡು ಅಥವಾ ಎತ್ತರದ ಆಸನದಲ್ಲಿ ಕುಳಿತು ಪೂಜಿಸುವುದು ಶಿವನನ್ನು ದ್ವೇಷಿಸುವುದು, ಕೃಷ್ಣಾಷ್ಟಮಿ ಏಕಾದಶೀವ್ರತ ಬಿಡುವುದು, ಇನ್ನೊಬ್ಬರ ಬಟ್ಟೆ ಉಟ್ಟು ಪೂಜಿಸುವುದು, ಮೊದಲಿಗೇ ಗಣೇಶಶಿವರನ್ನು ಪೂಜಿಸದೆ ವಿಷ್ಣುವನ್ನು ಪೂಜಿಸುವುದು, ಕ್ರುದ್ಧನಾಗಿ ಪೂಜಿಸುವುದು, ಕತ್ತಲಲ್ಲಿ ದೇವಸ್ಪರ್ಶ, ರಜಸ್ವಲೆಯೊಡನೆ ಸಂಭಾಷಿಸಿ ಪೂಜಿ-ಸುವುದು, ಕುಸುಬೆಣ್ಣೆ ಹರಳೆಣ್ಣೆಗಳ ದೀಪವಿಡು- ವುದು, ತಂತ್ರಸಾರಕ್ಕೆ ಅನುಗುಣವಲ್ಲದ ಪೂಜೆ

ಸ್ಮರಿಸುವವರ ಈ ನೂರು ಅಪರಾಧ, ಮೂವತ್ತೆರಡು ಅಪರಾಧಗಳನ್ನು ಹರಿ ಮರೆ-ಯುತ್ತಾನೆ ಅಂದರೆ ಪ್ರತಿದಿನ ಗೀತೆಯ ಒಂದು ಅಧ್ಯಾಯವನ್ನಾದರೂ ಪಠಿಸಿದರೆ ಪ್ರತಿದಿನ ಅಪರಾಧಪರಿಹಾರ ಎಂದು ಸ್ಕಾಂದಪುರಾಣ ನರಸಿಂಹಪುರಾಣಗಳಲ್ಲಿ ಹೇಳಿದೆ

ಅಥವಾ 'ಶ್ರುತಿಸ್ಮೃತೀ ಹರೇರಾಜ್ಞೇ' ಎಂಬಂತೆ ಶ್ರುತಿಸ್ಮೃತ್ಯುಕ್ತವಾದ ವಿಧಿನಿಷೇಧಗಳು ಅವುಗಳನ್ನು ಉಪದೇಶಿಸಿದ ಋಷಿಮುನಿಗಳು ಮಾಡಿದುವು ಅಲ್ಲ, ಎಲ್ಲವೂ ಹರಿಯ ಆಜ್ಞೆಗಳು ಅದರಿಂದ ಅವುಗಳನ್ನು ಅತಿಕ್ರಮಿಸಿದರೆ ಹರಿಯಾಜ್ಞೆಯನ್ನು ಉಲ್ಲಂಘಿಸಿ-ದಂತೆಯೆ, ಮಹಾ ಅಪರಾಧ ಆದರೆ ಎಲ್ಲಾ ಅಪರಾಧಗಳಿಗೂ ಒಂದು ಪ್ರಾಯಶ್ಚಿತ್ತವಿದೆ ಅದು ಅಚ್ಯುತ, ಅನಂತ, ಗೋವಿಂದನಾಮಸ್ಮರಣೆ ನಾಮಸ್ಮರಣೆಗೆ ಎಷ್ಟು ಸಾಮರ್ಥ್ಯ-ವೆಂದರೆ ಅದು ಎಷ್ಟು ಪಾಪಗಳನ್ನು ನಾಶಮಾಡಬಲ್ಲುದೋ ಅಷ್ಟು ಪಾಪವನ್ನು ಮಾಡಲು ಯಾವ ಪಾಪಿಗೂ ಸಾಮರ್ಥ್ಯವಿಲ್ಲ

ಅಥವಾ ಪರಶುಕ್ಲತ್ರಯರನ್ನು ಹೊರತುಪಡಿಸಿ ಬೇರೆ ಎಲ್ಲಾ ದೇವತೆಗಳೂ ಕೆಲವೊಮ್ಮೆ ಅಸುರಾವೇಶದಿಂದ ವಿಷ್ಣುಪ್ರೇಷ್ಠರಲ್ಲಿ ಅಪರಾಧ ಮಾಡುವುದುಂಟು ಅವತಾರಗಳಲ್ಲಿ ಸಾಮಾನ್ಯವಾಗಿ ಇದು ಕಂಡುಬರುತ್ತದೆ ಆದರೆ ಪಶ್ಚಾತ್ತಾಪಪಟ್ಟು ನಾಮಸ್ಮರಣೆ ಮಾಡಿ ಆ ಅಪರಾಧವನ್ನು ತೊಡೆದುಕೊಳ್ಳುತ್ತಾರೆ ಉದಾ–ಗೋವರ್ಧನೋದ್ಧಾರಕಾಲದಲ್ಲಿ ಇಂದ್ರ ಕೃಷ್ಣನನ್ನು ವಿರೋಧಿಸಿದ ಬಳಿಕ, ಪಶ್ಚಾತ್ತಾಪ ಪಟ್ಟು ಗೋವಿಂದಪಟ್ಟಾಭಿಷೇಕದ ನೆಪದಿಂದ ಗೋವಿಂದನಾಮಸ್ಮರಣೆ ಮಾಡಿದ ಅಪರಾಧದಿಂದ ಮುಕ್ತನಾದ, ಮಾತ್ರವಲ್ಲ, ತನ್ನ ಮಗನಾದ ಅರ್ಜುನನನ್ನು ಚೆನ್ನಾಗಿ ಕಾಪಾಡುವ ವರವನ್ನೂ ಪಡೆದ

ಅಥವಾ ಐತರೇಯಭಾಷ್ಯದಲ್ಲಿ ಪರಮಾತ್ಮ ತ್ಯಾಗವನ್ನು ನಾಲ್ಕು ವಿಧವೆಂದು ಹೇಳಿ-ದ್ದಾರೆ 'ಪರಮಾತ್ಮನಿಲ್ಲವೆಂದು ಮುಂತಾದ ನಾಸ್ತಿಕ್ಯವಾದ ಮೊದಲನೆಯ ದೊಡ್ಡ ತ್ಯಾಗ, ಅಂಧಂತಮಸ್ಸಿಗೆ ಕಾರಣ ಪರಮಾತ್ಮನ ವಿಸ್ಮರಣೆ ದ್ವಿತೀಯಾಪರಾಧ ಇದು ತಮಸ್ಸಿಗೆ ಕಾರಣ ನಿಷಿದ್ಧಕರ್ಮಾಚರಣೆ ಮೂರನೆಯ ತ್ಯಾಗ ಇದು ಅನಿತ್ಯನರಕಕ್ಕೆ ಕಾರಣ ಅಯೋಗ್ಯರಲ್ಲಿ ವಿಧಿವತ್ತಾಗಿ ತತ್ತ್ವೋಪದೇಶ ಮಾಡುವುದು ನಾಲ್ಕನೆಯ ತ್ಯಾಗ ಇದು ನರಕಾದಿಕಾರಣವಲ್ಲದಿದ್ದರೂ ಉತ್ತಮಲೋಕಪ್ರಾಪ್ತಿಗೆ ಪ್ರತಿಬಂಧಕ' ವ್ಯಾಸರಾಜರು ಈ ನಾಲ್ಕುಬಗೆಯ ತ್ಯಾಗಗಳನ್ನು ಅಪರಾಧಗಳೆಂದು ಕರೆದು ಹೀಗೆ ಹಾಡಿದ್ದಾರೆ

ಆದ್ಯಾಪರಾಧ ಮಿಥ್ಯಾವಾದ, ದ್ವಿತೀಯ ಹರಿವಿಸ್ಮರಣೆ
ತೃತೀಯ ನಿಷಿದ್ಧಕರ್ಮಾಚರಣೆ, ಚತುರ್ಥ ಅಯೋಗ್ಯನಲ್ಲುಪದೇಶ
ಕರುಣಾಕರ! ನೀ ದಯದಿ ನೋಡಯ್ಯ! ಸಿರಿಕೃಷ್ಣ!

ವಿಸ್ಮರಣೆ ಎಂಬ ಅಪರಾಧಕ್ಕೆ ಸ್ಮರಣೆಯೆ ಪ್ರಾಯಶ್ಚಿತ್ತ ಒಮ್ಮೆ, ವ್ಯಾಸರಾಜರಂತೆ, ಸ್ಮರಣೆ ಮಾಡಿದರೆ ಸಾಕು, ಅಂದಿನವರೆಗೆ ಮಾಡಿದ ಅವಿಸ್ಮರಣೆಯ ಅಪರಾಧವನ್ನೆಲ್ಲ ಮನ್ನಿಸಿ ಮರೆತುಬಿಡುತ್ತಾನೆ, ಶ್ರೀಹರಿ

ಇಲ್ಲಿ ಒಂದು ಪ್ರಶ್ನೆ ಬರುತ್ತದೆ ಶತಾಪರಾಧ, ದ್ವಾತ್ರಿಂಶದಪರಾಧಗಳಲ್ಲಿ ಹೆಚ್ಚಿನವು ಬರಿ ಸಣ್ಣ ತಪ್ಪುಗಳು ಉದಾ–ಪೂಜಾಕಾಲದಲ್ಲಿ ಕರಿಬಟ್ಟೆ ಒದ್ದೆ ಬಟ್ಟೆ ಮೈ ಬೆವರಿಂದ ತೊಯ್ದುಕೊಂಡಿರುವುದು, ಇತ್ಯಾದಿ ಪೂಜೆಗೆ ಹೊರಡುವುದೇ ಪುಣ್ಯದ ಕೆಲಸ ಪೂಜಾಕಾಲದಲ್ಲಿ ಭಕ್ತಿ ಮುಖ್ಯ ಸಣ್ಣ ತಪ್ಪು ಮಾಡಿದರೂ ಅದನ್ನು ಅಪರಾಧವೆಂದು ಪರಿಗಣಿಸಬಹುದೆ? ಕರುಣಾಕರನಾದ ಹರಿ ಹಾಗೆ ಮಾಡಬಹುದೆ?

ಈ ಪ್ರಶ್ನೆಗೆ ಸಮಾಧಾನವನ್ನು ಶ್ರೀಮದಾಚಾರ್ಯರು ಹೇಳಿದ್ದಾರೆ 'ಸ್ಮರ್ತವ್ಯಃ ಸತತಂ ವಿಷ್ಣುಃ' ಮೇಲಿನ ತಪ್ಪುಗಳು ಸಣ್ಣ ತಪ್ಪುಗಳೆಂದು ಕಾಣಬಹುದು ಆದರೆ ಹರಿಯಾಜ್ಞೆ ಉಲ್ಲಂಘನೆಯಾಗುವುದರಿಂದ ಅವೂ ಅಪರಾಧಗಳೆ ಏಕೆಂದರೆ ಹರಿಯಾಜ್ಞೆಯನ್ನು ಉಲ್ಲಂಘಿಸುವುದು, ಹರಿಯ ವಿಸ್ಮರಣೆಯಿಂದ ಅದರ ಪರಿಣಾಮವೂ ಹರಿಯ ಗಾಢ ವಿಸ್ಮರಣರೂಪ ಮಹಾಪರಾಧದಲ್ಲಿ ಪರ್ಯವಸಾನವಾಗುವುದು

ಪರಮಾತ್ಮನನ್ನು ಸ್ಮರಿಸಿದರೆ ಪುಣ್ಯ ಕೆಲಸವೆನ್ನೋಣ ವಿಸ್ಮರಣೆ ಅಪರಾಧವೇಕೆ? ವಿಸ್ಮರಣಮಾತ್ರದಿಂದ ಸರ್ವಶಕ್ತನಿಗೆ ಏನು ತೊಂದರೆ? ನಿಜ, ಅವನಿಗೆ ಏನೂ ತೊಂದರೆಯಾಗುವುದಿಲ್ಲ ಆದರೆ ಸದಾ ಸ್ಮರಿಸಿ ಆನಂದಿಸುವುದು ಜೀವನ ಸ್ವಭಾವ ಅದು ಸ್ವರೂಪದಲ್ಲಿ ಈಗ ಸುಪ್ತವಾಗಿದ್ದು ಇನ್ನೂ ವಿಕಾಸ ಹೊಂದಬೇಕಾಗಿದೆ ಅದಕ್ಕೆ ಈಗಿಂದಲೇ ಸದಾ ಸ್ಮರಿಸುವ ಅಭ್ಯಾಸ ಮಾಡಬೇಕು ಮಾಡದಿದ್ದರೆ ಅವನಿಗೇ ತೊಂದರೆ, ಹರಿಗೆ ಅಲ್ಲ ಓದುವ ಮಕ್ಕಳು ಸರಿಯಾಗಿ ಅಭ್ಯಾಸ ಮಾಡದಿದ್ದರೆ ಅದನ್ನು ಅಪರಾಧವೆಂದು ಪರಿಗಣಿಸಿ ಪೋಷಕರು ಶಿಕ್ಷಿಸುವಂತೆಯೆ ಇದು

*ಸಕಲೇಷ್ಟಪ್ರದಾಯಕ*

ಶ್ರೀಹರಿ ಭಕ್ತರ ಮೇಲಿನ ಕರುಣೆಯಿಂದಲೆ ಅವರ ಅಪರಾಧಕ್ಕೆ ಸಿಟ್ಟಾಗುತ್ತಾನೆ ಅವರನ್ನು ಶಿಕ್ಷಿಸಿ ಸರಿದಾರಿಗೆ ತರುತ್ತಾನೆ ಇಷ್ಟೇ ಅಲ್ಲ, ಶಿಕ್ಷೆಯಿಂದ ನೊಂದ ಭಕ್ತರ ಮೇಲೆ ಇನ್ನೂ ಕರುಣೆ ಹೆಚ್ಚಿ ಅವರು ಬಯಸಿದ ಎಲ್ಲ ಅಭೀಷ್ಟ ವಸ್ತುಗಳನ್ನೂ ನೀಡುತ್ತಾನೆ

***ಮರಳಿ ತನಗರ್ಪಿಸಲು.***

'ಕರೆಯ ನೀರನು ಕೆರೆಗೆ ಚೆಲ್ಲಿ' ಎಂಬಂತೆ ಅವನು ಕೊಟ್ಟುದನ್ನು ಅವನಿಗೆ ಮರಳಿ ನೀಡುವುದೇ ಮೋಕ್ಷಸಾಧನೆ ಹರಿ ಹಾಗೆ ಭಕ್ತರು ಕೊಟ್ಟುದನ್ನು ಅನಂತ ಮಡಿ ಮಾಡು-ತ್ತಾನೆ ಅಂದರೆ 'ಒಂದು ದಳ ಶ್ರೀತುಳಸಿ ಬಿಂದು ಗಂಗೋದಕ'ನೀಡಿದರೂ ಬಲು ಸಂತುಷ್ಟನಾಗಿ ಅನಂತವಾದ ಮೋಕ್ಷಾನಂದದ ಫಲವನ್ನೇ ನೀಡುತ್ತಾನೆ ಅಲ್ಪವಾದ ಪದಾರ್ಥ, ಅದೂ ತಾನೇ ಕೊಟ್ಟಿರುವುದೆಂದು ಉಪೇಕ್ಷಿಸುವುದಿಲ್ಲ ಇದು ಕರುಣೆಯ ಪರಾಕಾಷ್ಠೆ ಈ ಮೋಕ್ಷಾನಂದವನ್ನೂ ಬಿಂಬರೂಪಿಯಾಗಿ 'ತಾನು ಮೊದಲಿಗೆ ಉಣ್ಣು-ತ್ತಾನೆ, ಪ್ರತಿಬಿಂಬರಾದ ಭಕ್ತರಿಗೆ ಉಣಿಸುತ್ತಾನೆ ಸ್ವತಃ ಅವರು ತಮ್ಮ ಸ್ವರೂಪಾನಂದವನ್ನೇ ತಾವು ಉಣಲರಿಯರು ಅದಕ್ಕೆ ಕರುಣೆಯಿಂದಲೆ ಉಂಡು ಉಣಿಸುತ್ತಾನೆ

***ಸುಖಸಾಗರದಿ ಲೋಲಾಡಿಸುವ***

ಪರಮಾತ್ಮ ಸುಖಸಾಗರನೆನ್ನುವುದು ನಿಜವೆ ಆದರೆ ಅವನು ತನ್ನ ಸುಖಸಾಗರದಲ್ಲಿ ಭಕ್ತರನ್ನು ಲೋಲಾಡಿಸುವನೆ? ಭಕ್ತರ ಸ್ವರೂಪಸುಖವೇನೂ ಸಾಗರವಲ್ಲ, ಒಂದು ಸಣ್ಣ ಹನಿ ಮಾತ್ರ ಆದರಿಂದ ಹರಿಭಕ್ತರನ್ನು ಸುಖಸಾಗರದಲ್ಲಿ ಲೋಲಾಡಿಸುವುದು ಸಂಭವನೀಯವೆ? ಎಂಬ ಪ್ರಶ್ನೆ ಇಲ್ಲಿ ಸಹಜ ಆದರೆ ಪರಮಾತ್ಮನ ಸುಖಕ್ಕೆ ಹೋಲಿಸಿದಾಗ ಜೀವನಿಗೆ ಅವನ ಸ್ವರೂಪಭೂತಸುಖ ಒಂದು ಹನಿಮಾತ್ರವೇ ಆದರೂ ಜೀವನಿಗೆ ಆ ಒಂದು ಹನಿಯೇ ಸಾಗರ ಅವನ ಯೋಗ್ಯತಾನುಸಾರ ಪೂರ್ಣತೆಯ ಅನುಭವ ಅವನಿ-ಗುಂಟು ಸಣ್ಣ ಮಕ್ಕಳು ಸ್ವಲ್ಪವೆ ಉಂಡರೂ ಪೂರ್ಣತೃಪ್ತಿಯಾಗುವಂತೆಯೆ ಇದು

***ಮಂಗಳಚರಿತ***

ಗೀತಾಭಾಷ್ಯದಲ್ಲಿ ಹೇಳಿದಂತೆ 'ಮಿತ್ರ' ಎಂದರೆ 'ತನ್ನ ಜೊತೆಗಾರನಿಗೆ ಇಂಥ ವಸ್ತುವಿನಿಂದ ಅಪಾಯ ಉಂಟೆಂದು ತಾನೇ ತಿಳಿದು ಅದರಿಂದ ಆತನನ್ನು ರಕ್ಷಿಸುವವ' ಸಜ್ಜನರಿಗೆ ಈ ಬಗೆಯ 'ಮಿತ್ರ'ನಾಗಿ ಸರ್ವತ್ರ ಸಜ್ಜನರನ್ನು ಕರುಣೆಯಿಂದ ಕಾಪಾಡುವ ಮಂಗಳಚರಿತ, ಚಿನ್ಮಯಗಾತ್ರ, ಶ್ರೀಹರಿ

**ಏನು ಕರುಣಾನಿಧಿಯೊ ಹರಿ ಮ-**
**ತ್ತೇನು ಭಕ್ತಾಧೀನನೋ ಇ-**
**ನ್ನೇನು ಈತನ ಲೀಲೆ ಇಚ್ಛಾಮಾತ್ರದಲಿ ಜಗವ ।**
**ತಾನೆ ಸೃಜಿಸುವ ಪಾಲಿಸುವ ನಿ-**
**ರ್ವಾಣ ಮೊದಲಾದ್ಯಖಿಳ ಲೋಕ-**
**ಸ್ಥಾನದಲಿ ಮತ್ತವರನಿಟ್ಟಾನಂದ ಪಡಿಸುವನು ॥ ೧೬ ॥**

ಹರಿ ಏನು ಕರುಣಾನಿಧಿಯೋ! ಮತ್ತೆ, ಏನು ಭಕ್ತಾಧೀನನೋ! ಇನ್ನು, ಏನು ಈತನ ಲೀಲೆ! ಇಚ್ಛಾಮಾತ್ರದಲ್ಲಿ ಜಗತ್ತನ್ನು ತಾನೆ ಸೃಜಿಸುತ್ತಾನೆ, ಪಾಲಿಸುತ್ತಾನೆ ಮತ್ತು ಮೋಕ್ಷಾದಿ ಸಕಲ ಲೋಕಸ್ಥಾನದಲ್ಲಿ ಇರಿಸಿ ಆನಂದಪಡಿಸುತ್ತಾನೆ

ಈ ಪದ್ಯದಲ್ಲಿ 'ಕರುಣಾನಿಧಿಯೊ' ಎಂದು ಹ್ರಸ್ವ 'ಒ'ಕಾರ ದೀರ್ಘವಿಟ್ಟುಕೊಂಡರೆ ಷಟ್ಪದಿಯ ಛಂದಸ್ಸಿಗೆ ಭಂಗವುಂಟಾಗುತ್ತದೆ 'ಭಕ್ತಾಧೀನನೊ' ಎಂದು ಓಕಾರ ದೀರ್ಘವೆ ಹ್ರಸ್ವವಿಟ್ಟುಕೊಂಡರೆ ಛಂದೋಭಂಗ 'ಇನ್ನೇನು' 'ಈತನ' 'ಇಚ್ಛಾ' ಎಂದು ಮೂರು ಕಡೆ ಸ್ವರಾಕ್ಷರವಿಟ್ಟಕೊಂಡರೆ ವಿಸಂಧಿ ದೋಷ ಅದಕ್ಕೆ ಯಕಾರಾಗಮಸಂಧಿ ಮಾಡಿ 'ಯಿನ್ನೇನು' 'ಯೀತನ' 'ಯಿಚ್ಛಾ' ಎಂದು ಇಟ್ಟುಕೊಂಡರೆ ಈ ದೋಷವಿಲ್ಲ ನಿರ್ವಾಣ-ವೆಂದರೆ ಮೋಕ್ಷ ವಕಾರಬಕಾರಗಳಿಗೆ ಭೇದವಿರುವುದರಿಂದ 'ವಾಣ' ಎಂದರೆ 'ಬಾಣ', 'ಲಿಂಗಶರೀರ' ಅದು ಇಲ್ಲದ ಸ್ಥಿತಿಯೆ ನಿರ್ವಾಣ, ಅಂದರೆ ಮೋಕ್ಷ

**ಏನು ಕರುಣಾನಿಧಿಯೊ**

ಶ್ರೀಹರಿ ಅಪಾರ ಕರುಣೆಯ ನಿಧಿ ಏಕೆಂದರೆ ಸೃಷ್ಟಿಕರ್ತ- ನೆಂದು ಚತುರ್ಮುಖ ಬ್ರಹ್ಮನೆ ಪ್ರಸಿದ್ಧನಾದರೂ ವಸ್ತುತಃ ಅವನಲ್ಲಿ ಬ್ರಹ್ಮರೂಪದಿಂದ ಇದ್ದು ಹರಿಯೆ ಸೃಷ್ಟಿ ಮಾಡುತ್ತಾನೆ ಬ್ರಹ್ಮನಿಂದ ಮಾಡಿಸುತ್ತಾನೆ ಸ್ವತಃ ಪಾಲನೆ ಮಾಡುತ್ತಾನೆ ಅಂದರೆ ಜೀವರನ್ನು ಎಲ್ಲಾ ಅಪಾಯಗಳಿಂದ ರಕ್ಷಿಸುತ್ತ ಯೋಗ್ಯ ಸಾಧನೆ ಮಾಡಿಸುತ್ತಾನೆ ಕೊನೆಯಲ್ಲಿ ಮೋಕ್ಷಾದಿ ಲೋಕಗಳಲ್ಲಿ ಅವರನ್ನಿರಿಸಿ ಸುಖಪಡಿಸುತ್ತಾನೆ ಇದರಿಂದ ಅವನಿಗೆ ಏನೂ ಸುಖವಿಲ್ಲ ಆ ಸುಖ ಅವನಿಗೆ ಬೇಕಾಗಿಯೂ ಇಲ್ಲ ಏಕೆಂದರೆ ಅವನು ಮೊದಲೇ ಪೂರ್ಣಾನಂದ, ತುಂಬಿದ ಆನಂದಸಾಗರ

> ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
> ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥

ಎಂದು ಭಗವದ್ಗೀತೆಯಲ್ಲಿ ಹರಿಯೆ ಹೇಳುತ್ತಾನೆ ಅವನೇನೂ ಮಾಡಬೇಕಾಗಿಲ್ಲ, ನಿಜ ಆದರೆ, ಅವನೇನೂ ಮಾಡದಿದ್ದರೆ ಅಸ್ವತಂತ್ರರಾದ ಜೀವರು ಏನೂ ಮಾಡಲಾರರು, ಅವರು ತಾವಾಗಿಯೆ ಜನಿಸರು ತಾವೆ ತಮ್ಮನ್ನು ರಕ್ಷಿಸಿಕೊಳ್ಳಲಾರರು, ಬದುಕಿ ಸಾಧನೆ ಮಾಡಿಕೊಳ್ಳಲಾರರು ಮೋಕ್ಷಾದಿ ಲೋಕಸ್ಥಾನಗಳನ್ನು ಸಂಪಾದಿಸಿಕೊಳ್ಳಲಾರರು ಅದಕ್ಕೆ ಕರುಣೆಯಿಂದ ತಾನೆ ಅವರನ್ನು ಹುಟ್ಟಿಸುತ್ತಾನೆ, ಬದುಕಿಸುತ್ತಾನೆ, ಸಾಧನೆ ಮಾಡಿಸಿ, ಸಾಧನೆಗೆ ಫಲವಾಗಿ ಮೋಕ್ಷಾದಿ ಲೋಕಗಳಲ್ಲಿ ಸ್ಥಾನ ಕೊಟ್ಟು ಆನಂದಪಡಿಸುತ್ತಾನೆ ಅದಕ್ಕೆ ಪ್ರತಿಫಲವೇನೂ ಬಯಸುವುದಿಲ್ಲ ಇದನ್ನು ಬ್ರಹ್ಮಸೂತ್ರದ 'ನ ಪ್ರಯೋಜನ-ವತ್ತ್ವಾತ್' ಎಂಬ ಅಧಿಕರಣದಲ್ಲಿ ಸಿದ್ಧಾಂತಿಸಲಾಗಿದೆ ಭಾಗವತದ ಮಂಗಲಪದ್ಯದಲ್ಲಿಯೆ 'ಯತ್ರ ತ್ರಿಸರ್ಗೋ ಮೃಷಾ' ಎಂದು ಇದನ್ನೆ ಹೇಳಿದೆ

*ಏನು ಭಕ್ತಾಧೀನನೊ!*

ವಸ್ತುತಃ ಜೀವರನ್ನು ಹುಟ್ಟಿಸಿ ಬದುಕಿಸಿ ಸಾಧನೆ ಮಾಡಿಸುವ ಕೆಲಸ ತತ್ತ್ವಾಭಿಮಾನಿ ದೇವತೆಗಳದು ಏಕೆಂದರೆ ಅವರಿಗೆ ಅದೇ ಮೋಕ್ಷಸಾಧನೆ ಅವರು ಬೇರೆ ಎಲ್ಲಾ ಜೀವ-ರಿಗೂ ಬಿಂಬಭೂತರು ಪ್ರತಿಬಿಂಬರಾದ ಆ ಜೀವರನ್ನು ಹುಟ್ಟಿಸಿ ಅವರ ಶರೀರೇಂದ್ರಿ-ಯಾದಿಗಳಲ್ಲಿನಿಂತು ಮೋಕ್ಷಾದಿ ಸಾಧನೆ ಮಾಡಿಸಬೇಕೆಂದು ಶ್ರುತಿ- ಸ್ಮೃತಿಗಳು ಸಾರುತ್ತಿವೆ

ಯದು ಕಿಂಚೇಮಾಃ ಪ್ರಜಾಃ ಶುಭಮಾಚರಂತಿ
ದೇವಾ ಏವ ತದಾಚರಂತಿ
ಜ್ಞಾನಾದಿದಾನಂ ದೇವಾನಾಂ ವಿಷ್ಣುನಾ ಸಾಧುಚೋದಿತಮ್

ಎಂದು ಸೂತ್ರಭಾಷ್ಯದಲ್ಲಿ ಹೇಳಿದೆ ಆದರೆ ಅಸ್ವತಂತ್ರರಾದ ಅವರು ಈ ಕರ್ತವ್ಯ ನಿರ್ವ-ಹಿಸಲು ಸ್ವತಃ ಶಕ್ತರಲ್ಲಿ ಉದಾ—ಸೃಷ್ಟಿಯ ಆದಿಯಲ್ಲಿ ಹರಿ ತತ್ತ್ವಗಳನ್ನು ತತ್ತ್ವದೇವತೆಗಳನ್ನೂ ಸೃಷ್ಟಿಸಿ, 'ಇನ್ನು ನೀವೆಲ್ಲ ಸೇರಿ ಬ್ರಹ್ಮಾಂಡಸೃಷ್ಟಿ ಮಾಡಿರೆಂದು ಆಜ್ಞಾಪಿಸಿದ ಆದರೆ ಅವರು ತಾವು ಅಶಕ್ತರೆಂದು ಹೇಳಿ ನೀನೆ ನಮ್ಮಿಂದ ಈ ಕಾರ್ಯ ನಡೆಸಬೇಕೆಂದು ಬೇಡಿಕೊಂಡರು ಹರಿ ಆಗ ಅವರೊಳಗೆ ಪ್ರವೇಶಿಸಿ ಅವರಲ್ಲಿದ್ದ ಸುಪ್ತ ಶಕ್ತಿಯನ್ನು ಉದ್ಬೋಧಗೊಳಿಸಿ ಅವರ ಮೂಲಕವೆ ಬ್ರಹ್ಮಾಂಡಸೃಷ್ಟಿ ಮಾಡಿಸಿದ ಇದನ್ನು ಭಾಗವತ ತೃತೀಯಸ್ಕಂಧ ಸ್ಪಷ್ಟ ಹೇಳಿದೆ—

ಇತಿ ತಾಸಾಂ ಸ್ವಶಕ್ತೀನಾಂ ಅಸತೀನಾಂ ಸಮೇತ್ಯ ನಃ ।
ಪ್ರಸುಪ್ತಲೋಕತಂತ್ರಾಣಾಂ ನಿಶಮ್ಯ ಗಿರಮೀಶ್ವರಃ ॥
ತ್ರಯೋವಿಂಶತಿತತ್ತ್ವಾನಾಂ ಗಣಂ ಯುಗವದಾವಿಶತ್ ।
ಭಿನ್ನಂ ಸಂಯೋಜಯಾಮಾಸ ಸುಪ್ತಂ ಕರ್ಮ ಪ್ರಬೋಧಯನ್ ॥

ಏಕೆ ಹೀಗೆ? ಸೃಷ್ಟ್ಯಾದಿಕಾರ್ಯ ಆಗಬೇಕೆನಿಸಿದರೆ ತಾನೆ ಮಾಡಿದರಾಯಿತು! ಆದರೆ ಭಕ್ತರಾದ ತತ್ತ್ವದೇವತೆಗಳಿಗೆ ಸಾಧನೆಯಾಗುವ ದೃಷ್ಟಿಯಿಂದ, ಅವರ ಭಕ್ತಿಗೆ ಮೆಚ್ಚಿ ಅವರಿಗೆ ಅಧೀನನಾಗಿ ಅವರ ಹೆಸರಿನಲ್ಲಿ ತಾನೆ ಎಲ್ಲಾ ಕಾರ್ಯ ನಡೆಸುತ್ತಾನೆ ಅದರಿಂದ ಬರುವ ಕೀರ್ತಿ, ಮೋಕ್ಷಾದಿ ಅಭೀಷ್ಟಫಲಗಳನ್ನೆಲ್ಲ ಅವರಿಗೇ ಕೊಡುತ್ತಾನೆ ಅದರಿಂದ ಬ್ರಹ್ಮಾದಿಗಳೆ ಸೃಷ್ಟ್ಯಾದಿಕರ್ತರೆಂದು ಲೋಕದಲ್ಲಿ ಪ್ರಸಿದ್ಧಿ ಇದು ಭಕ್ತಪರಾಧೀನತೆ! ಇದು ಸ್ವೇಚ್ಛೆಯಿಂದ ತಾನೆ ತಂದುಕೊಂಡುದುದು ಅದರಿಂದ ಅವನ ಸ್ವಾತಂತ್ರಕ್ಕೆ ಕುಂದಿಲ್ಲ

ಸೃಷ್ಟಿಯಲ್ಲಿ ಮಾತ್ರವಲ್ಲ, ಪಾಲನೆಯಲ್ಲಿಯೂ ಬ್ರಹ್ಮಾದಿಗಳು ಸ್ವತಃ ಅಶಕ್ತರು ಅಂಬ-ರೀಷರಾಜನಲ್ಲಿ ಅಪರಾಧಗೈದ ದುರ್ವಾಸರನ್ನು ವಿಷ್ಣುಚಕ್ರ ಬೆನ್ನಟ್ಟಿದಾಗ ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ಮುನಿಯ ರಕ್ಷಣೆ ಮಾಡಲಾರದೆ ತಮ್ಮ ಅಸಹಾಯಕತೆಯನ್ನೆ ಹೇಳಿ-ಕೊಂಡರು ಇದು ಭಾಗವತದಲ್ಲಿ ಸ್ಪಷ್ಟವೆ ಇದೆ

ಜೀವರಿಗೆ ಮೋಕ್ಷಸಾಧನೆ ಮಾಡಿಸಿ ಜ್ಞಾನ ನೀಡುವುದು ದೇವತೆಗಳ ಕರ್ತವ್ಯ-ವಾದರೂ ತಾವು ಸ್ವತಃ ಅಶಕ್ತರಾದ್ದರಿಂದ ಹರಿಯನ್ನೆ ಬೇಡುತ್ತಾರೆ ಅವರ ಪ್ರಾರ್ಥನೆಗೆ ಓಗೊಟ್ಟು ಹರಿ ವೇದವ್ಯಾಸಾದಿ ಅವತಾರ ಮಾಡಿ ಜ್ಞಾನಕಾರ್ಯ ನಡೆಸುತ್ತಾನೆ ಆದರೆ ಲೋಕದಲ್ಲಿ 'ಜ್ಞಾನಂ ಮಹೇಶ್ವರಾದಿಚ್ಛೇತ್' ತತ್ವಜ್ಞಾನವನ್ನು ಶಿವನಲ್ಲಿ ಬೇಡಬೇಕು 'ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ' 'ಎಲ್ಲರೂ ಚತುರ್ಮುಖನಿಂದ ತತ್ವೋಪದೇಶ ಪಡೆದೇ ಮುಕ್ತಿ ಹೊಂದಬೇಕು' ಎಂದು ಬ್ರಹ್ಮರುದ್ರಾದಿಗಳೆ ಜ್ಞಾನ-ದಾಯಕರೆಂದು ಪ್ರಸಿದ್ಧಿ ಇದು ಹರಿಯ ಭಕ್ತಪರಾಧೀನತೆ ಭಕ್ತರಾದ ಬ್ರಹ್ಮಾದಿಗಳಿಗೇ ಜಗದ್ಗುರುಗಳೆಂಬ ಕೀರ್ತಿ ತಂದುಕೊಡುತ್ತಾನೆ

ಮೋಕ್ಷ ನೀಡುವ ವಿಷಯದಲ್ಲಿಯೂ ದೇವತೆಗಳು ಮುಚುಕುಂದ ಮಹಾರಾಜನಿಗೆ ಹೀಗೆ ಹೇಳಿದ್ದಾರೆ.

ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ ।
ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ ॥

'ರಾಜನೆ, ಬೇರೇನಾದರೂ ವರ ಕೇಳು, ಕೊಡುತ್ತೇವೆ ಮೋಕ್ಷವನ್ನು ಮಾತ್ರ ವಿಷ್ಣುವೆ ಕೊಡಬೇಕು' ಆದರೆ 'ಕಾಶೀಮರಣಾನ್ಮುಕ್ತಿಃ' ಕಾಶಿಯಲ್ಲಿ ಮರಣ ಹೊಂದುವವರಿಗೆ ಶಿವ ಮುಕ್ತಿ ನೀಡುತ್ತಾನೆ ಎಂದು ಪ್ರಸಿದ್ಧಿ ವಸ್ತುತಃ ಕಾಶಿಯಲ್ಲಿ ಮರಣ ಹೊಂದುವ ಸಜ್ಜನರಿಗೆ ಶಿವನ ತಾರಕ ರಾಮಮಂತ್ರೋಪದೇಶದಿಂದಲೆ ಮುಕ್ತಿ ಮುಕ್ತಿ ನೀಡುವವನೆಂಬ ಪ್ರಸಿದ್ಧಿ ಶಿವನಿಗೆ ಇದು ಭಕ್ತಪರಾಧೀನತೆ!

***ಏನು ಈತನ ಲೀಲೆ!***

ದೂರದ ವೈಕುಂಠಾದಿ ಲೋಕಗಳಲ್ಲಿ ಶೇಷನ ಮೇಲೆ ಸುಖವಾಗಿ ಮಲಗಿದ್ದೇ ತನ್ನ ಇಚ್ಛಾಮಾತ್ರದಿಂದ ಭಕ್ತರಾದ ಬ್ರಹ್ಮಾದಿಗಳ ಮೂಲಕ ಸೃಷ್ಟ್ಯಾದಿ ಸಕಲ ಕಾರ್ಯಗಳನ್ನು ಸರ್ವಶಕ್ತನಾದ ಹರಿ ನಡೆಸಬಹುದಿತ್ತು ಆದರೆ ಆತ ಹಾಗೆ ಮಾಡುವುದಿಲ್ಲ ತಾನು ಬೇರೆ ಬೇರೆ ನಾನಾ ರೂಪಗಳಿಂದ ಅವರೊಳಗೆ ಪ್ರವೇಶಿಸಿ ಎಲ್ಲ ತಾನೆ ಮಾಡುತ್ತಾನೆ ಉದಾ– ಬ್ರಹ್ಮನಿಂದ ಶಿವ ಜನಿಸುವಾಗ ಬ್ರಹ್ಮನಲ್ಲಿ ಬ್ರಹ್ಮರೂಪದಿಂದ ಇದ್ದು ತನ್ನದೆ ಆದ ಶಿವರೂಪ-ದಿಂದ ಸಮೇತ ಶಿವನನ್ನು ಹುಟ್ಟಿಸುತ್ತಾನೆ ತನ್ನ ಬ್ರಹ್ಮರೂಪದಿಂದ ಶಿವರೂಪನಾಗಿ ತಾನೆ ಹುಟ್ಟುತ್ತಾನೆ ಹೀಗೆ ಮಾಡದೆ ಕೇವಲ ಶಿವನನ್ನೇ ಹುಟ್ಟಿಸಬಹುದಾಗಿತ್ತು ಆದರೆ ತನ್ನಿಂದ ತಾನು ಹುಟ್ಟುತ್ತಾನೆ ಇದು ಲೀಲೆ ಒಂದು ದೀಪದಿಂದ ಇನ್ನೊಂದು ದೀಪ ಹೊರಗೆ ಬರುವಂತೆ ಒಂದು ರೂಪದಿಂದ ಇನ್ನೊಂದು ರೂಪ ಹೊರಗೆ ಬರುತ್ತದೆ ತಿರುಗಿ ಸೇರಿದರೆ ಒಂದಾಗುತ್ತದೆ ಆ ರೂಪಗಳಲ್ಲಿ ಏನೂ ವ್ಯತ್ಯಾಸವಿಲ್ಲ ಮಾತ್ರವಲ್ಲ ಭೇದವೂ ಇಲ್ಲ ಅಚಿಂತ್ಯ ಶಕ್ತಿಯಿಂದ ಬೇರೆಯಾಗಿ ಕಾಣುತ್ತಾನೆ ಹುಟ್ಟುವಂತೆ ಕಾಣುತ್ತಾನೆ ಇದು ಲೀಲೆ

ಲೀಲೆಗಾಗಿ ಭಗವಂತ ಸೃಷ್ಟಿಮಾಡುತ್ತಾನೆ ಎಂದು ಕೆಲವರ ವಾದವಿದೆ ಬ್ರಹ್ಮಾದಿಗಳನ್ನು ಸೃಷ್ಟಿ ಮಾಡಿದರೆ ಮಾತ್ರ ಅವರೊಳಗೆ ಇರುವ ತನಗೂ ಸೃಷ್ಟಿಯಾಗುತ್ತದೆ ಆದರಿಂದ ಲೀಲೆ ನಡೆಯುತ್ತದೆ ಇಲ್ಲದಿದ್ದರೆ ಇಲ್ಲ, ಎನ್ನುವುದು ಅವರ ಅಭಿಪ್ರಾಯ ಆದರೆ ಮಾಂಡೂಕ್ಯೋಪನಿಷತ್ತು ಸ್ಪಷ್ಟವಾಗಿ,

'ಕ್ರೀಡಾರ್ಥಮಿತಿ ಚಾಪರೇ'

'ಕ್ರೀಡೆಗಾಗಿ ಸೃಷ್ಟಿ' ಎಂಬ ಪಕ್ಷವನ್ನು ಇತರರದೆಂದು ಕೈಬಿಟ್ಟಿದೆ ಹರಿ ತನ್ನನ್ನು ತಾನೇ ಸೃಷ್ಟಿ-ಮಾಡಿಕೊಳ್ಳುವ ಆಟವಾಡಲು ಬ್ರಹ್ಮಾದಿಸೃಷ್ಟಿ ಮಾಡಲೇಬೇಕೆಂದಿಲ್ಲ ಪ್ರಳಯಕಾಲದ ಯೋಗನಿದ್ರೆಯಿಂದ ಎಚ್ಚೆತ್ತ ಹರಿ ಮೊದಲಿಗೆ ತನ್ನ ಶುದ್ಧಸೃಷ್ಟಿಮಾಡಿಕೊಳ್ಳುತ್ತಾನೆ ಅನಂತ ಅವತಾರರೂಪಗಳೂ ಆಗಲೆ ಮೂಲರೂಪದಿಂದ ಹೊರಗೆ ಬರುತ್ತವೆ ಈ ಸೃಷ್ಟಿಯನ್ನು ಹರಿ ಯಾವುದೇ ಚೇತನ, ಅಚೇತನ ವಸ್ತುವಿನ ಸೃಷ್ಟಿಯ ಮೂಲಕ ಮಾಡಿಕೊಳ್ಳುವುದಿಲ್ಲ ಆದರಿಂದ ಲೀಲೆಗಾಗಿ ಸೃಷ್ಟಿಯಲ್ಲ, ಸೃಷ್ಟಿಯೆ ಲೀಲೆ ಎಂದು 'ಲೋಕವತ್ತು ಲೀಲಾ ಕೈವಲ್ಯಂ' ಎಂದು ಬ್ರಹ್ಮಸೂತ್ರ ಸಿದ್ಧಾಂತ ಮಾಡಿದೆ

**ಇಚ್ಛಾಮಾತ್ರದಲಿ ಜಗವ ತಾನೆ ಸೃಜಿಸುವ**

ಹರಿ ಲೀಲೆಯನ್ನಾದರೂ ಏಕೆ ಮಾಡುತ್ತಾನೆ? ಆದರಿಂದೇನು ಫಲ? ಆಯಾಸವೇ ಅಲ್ಲವೆ? ಎಂದರೆ, ಇತರರಿಗೆ ಆಯಾಸವಿದೆ, ಆದರೂ, ವ್ಯಾಯಾಮದಿಂದ ಶರೀರ-ಮನಸ್ಸುಗಳ ಸ್ವಾಸ್ಥ್ಯರಕ್ಷಣೆ ಎಂಬ ಪ್ರಯೋಜನವೂ ಅವರಿಗೆ ಇದೆ ಆದರೆ ಸರ್ವಶಕ್ತನಾದ, ಚಿನ್ಮಯಶರೀರಿಯಾದ ಹರಿಗೆ ಆಯಾಸವೂ ಇಲ್ಲ, ಶರೀರಮನಸ್ಸುಗಳ ಸ್ವಾಸ್ಥ್ಯ ಕಾಪಾಡಿ-ಕೊಳ್ಳಬೇಕಾದ ಪ್ರಮೇಯವೂ ಇಲ್ಲ ಇನ್ನು ಕ್ರೀಡೆಯಿಂದ ಇತರರಿಗೆ ಆನಂದವಿದೆ ಹರಿಗೆ ಅದೂ ಇಲ್ಲ ಏಕೆಂದರೆ ಅವನು ಮೊದಲೇ ಪೂರ್ಣಾನಂದ ಕ್ರೀಡೆಯಿಂದ ಹೊಸದಾಗಿ ಆನಂದವೇನೂ ಬರಬೇಕಾಗಿಲ್ಲ ಆದರಿಂದ ಮಾಂಡೂಕೋಪನಿಷತ್ತು ಹೇಳುತ್ತಿದೆ 'ದೇವಸ್ಯೈಷಃ ಸ್ವಭಾವೋಽಯಂ' ಲೀಲೆ ಮಾಡುವುದು ಹರಿಯ ಸ್ವಭಾವ ಆನಂದೋ-ದ್ರೇಕಗೊಂಡಾಗ ಜನರು ನಗುವಂತೆ ಕುಣಿವಂತೆ ಇದು ಇಲ್ಲಿ ಪ್ರಯೋಜನವನ್ನು ಯಾರೂ ಕೇಳುವುದಿಲ್ಲ ಹಾಗೇ ಪೂರ್ಣಾನಂದನಾದ ಹರಿ ಆನಂದೋದ್ರೇಕದಿಂದ ಸೃಷ್ಟ್ಯಾದಿ-ಗಳನ್ನು ಮಾಡುತ್ತಾನೆ ಎಂದು ಬ್ರಹ್ಮಸೂತ್ರದ ಆನಂದಮಯಾಧಿಕರಣದಲ್ಲಿ ಹೇಳಿದೆ ಹೀಗೆ ಹರಿ ಮಾಡುವುದೆಲ್ಲ ಕರುಣೆಯಿಂದ, ಭಕ್ತವಾತ್ಸಲ್ಯದಿಂದ ಮತ್ತು ಮಹಾ ಆನಂದೋ-ದ್ರೇಕದಿಂದ ಸ್ವಾಭಾವಿಕವಾಗಿಯೆ ಮಾಡುವ ಲೀಲೆ ಇಚ್ಛಾಮಾತ್ರದಿಂದಲೆ ಈ ಲೀಲೆ ಮಾಡುವುದರಿಂದ ಆಯಾಸವೂ ಇಲ್ಲ

**ಜನಪ ಮೆಚ್ಚಿದರೀವ ಧನ ವಾ-**
**ಹನ ವಿಭೂಷಣ ವಸನ ಭೂಮಿಯ**

**ತನುಮನೆಗಳಿತ್ತಾದರಿಪರುಂಟೇನೊ ಲೋಕದೊಳು ॥**
**ಅನವರತ ನೆನೆವವರನಂತಾ-**
**ಸನವೆ ಮೊದಲಾದಾಲಯದೊಳಿ**
**ಟ್ಟಣುಗನಂದದಲವರ ವಶನಾಗುವ ಮಹಾಮಹಿಮ ॥ ೧೭ ॥**

ಮಹಾರಾಜರುಗಳು ಮೆಚ್ಚಿದರೆ ಧನವಾಹನಭೂಷಣವಸ್ತ್ರಭೂಮಿಗಳನ್ನು ನೀಡುವುದುಂಟು. ಎಷ್ಟೇ ಮೆಚ್ಚಿದರೂ ತನುಮನಗಳನ್ನು ನೀಡಿ ಆದರಿಸುವರುಂಟೇನೊ ಲೋಕದಲ್ಲಿ? ಆದರೆ ಹರಿ ಮಹಾಮಹಿಮ ಅನವರತ ತನ್ನನ್ನು ನೆನೆವ ಭಕ್ತರನ್ನು ಅನಂತಾ-ಸನವೆ ಮೊದಲಾದ ಧಾಮತ್ರಯದೊಳಗೆ ಇರಿಸಿ ಮಗುವಿನಂತೆ ಅವರ ವಶನಾಗುತ್ತಾನೆ!

***ತನುಮನೆಗಳಿತ್ತಾದರಿಪರುಂಟೇನೋ***

ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।
ಪ್ರಾದಾದನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂ ಪುರಮ್ ॥

'ರಾಜನು ತನ್ನ ಪಟ್ಟಣವನ್ನು ಹೊರತು ಬೇರೆ ಏನನ್ನಾದರೂ ಕೊಡುವಂತೆ ಹರಿ ತನ್ನ ನಾರಾಯಣಾದಿ ನಾಮವನ್ನು ಹೊರತು ಬೇರೆ ಎಲ್ಲಾ ನಾಮಗಳನ್ನು ಇತರ ದೇವತೆಗಳಿಗೆ ಕೊಟ್ಟಿದ್ದಾನೆ ಎನ್ನುತ್ತದೆ ಸ್ಕಾಂದಪುರಾಣ ಅದರಿಂದ ರಾಜ ತನ್ನ ಪಟ್ಟಣವನ್ನು ಯಾರಿಗೂ ಕೊಡುವುದಿಲ್ಲ ತನ್ನ ಶರೀರದ ಬಗ್ಗೆ ಇನ್ನೇನು ಹೇಳಬೇಕು? ಉದಾರಿಯಾದ ರಾಜ ಬೇರೆ ಧನವಾಹನಾದಿಗಳನ್ನು ಕೊಟ್ಟಾನು ತನ್ನ ಪಟ್ಟಣ, ಅರಮನೆಗಳನ್ನು ತನ್ನ ಶರೀರ-ಮನಸ್ಸುಗಳನ್ನು ಇನ್ನೊಬ್ಬರಿಗೆ ಕೊಡುವುದು ಎಲ್ಲಿಯೂ ಕಂಡಿಲ್ಲ ಶ್ರೀಹರಿ ಎಲ್ಲಾ ರಾಜರಂತೆ ಧನವಾಹನವಿಭೂಷಣವಸ್ತ್ರಗಳನ್ನು ಕೊಡುತ್ತಾನೆ, ಮುಕ್ತರಿಗೆ ಸಾರೂಪ್ಯ ಮೋಕ್ಷದಲ್ಲಿ

ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ-
ಪ್ರವೇಕನಿಷ್ಕಾಭರಣಾಃ ಸುವರ್ಚಸಃ

ಎಂದು ಭಾಗವತದಲ್ಲಿ ಚತುರ್ಮುಖ ವೈಕುಂಠದ ಪ್ರಜೆಗಳನ್ನು ಕಂಡು ಅವರ ಆಭರಣ-ವಸ್ತ್ರಾದಿಗಳನ್ನು ವರ್ಣಿಸುತ್ತಾನೆ ಸಾಲೋಕ್ಯ ಮುಕ್ತರಿಗೆ ಹರಿ ಸತ್ಯಲೋಕಾದಿಗಳಲ್ಲಿ ವಾಸಕ್ಕೆ ಭೂಮಿಯನ್ನು ಕೊಡುತ್ತಾನೆ ಸಾಮೀಪ್ಯ ಮುಕ್ತರಿಗೆ ಅನಂತಾಸನಾದಿ ಪಟ್ಟಣಗಳಲ್ಲಿ ತನ್ನ ಅರಮನೆಯನ್ನೇ ಕೊಡುತ್ತಾನೆ ಆ ಮುಕ್ತರು ಹರಿಗೆ ಪರಿವಾರದವರಾಗಿ ಸಮೀಪದಲ್ಲಿಯೇ ವಾಸಮಾಡುತ್ತಾರೆ ಸಾಯುಜ್ಯ ಮುಕ್ತರಿಗೆ ತನ್ನ ತನುವನ್ನೇ ಕೊಡುತ್ತಾನೆ ಮುಕ್ತರು ಹರಿಯ ಅಂಗಗಳಲ್ಲಿಯೆ ನೆಲೆಸಿ ಆ ಅಂಗಗಳಿಂದಲೇ ತಮ್ಮ ಎಲ್ಲಾ ಚಟುವಟಿಕೆಗಳನ್ನು ನಡೆಸುತ್ತಾರೆ

ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥

'ಹರಿಯ ಕೈಯಿಂದಲೇ ಎತ್ತಿಕೊಳ್ಳುತ್ತಾನೆ ಹರಿಯ ಕಣ್ಣಿಂದಲೆ ಕಾಣುತ್ತಾನೆ ಹರಿಯ ಕಾಲಿಂದಲೇ ನಡೆಯುತ್ತಾನೆ ಇದು ಮುಕ್ತನ ಸ್ಥಿತಿ' ಎನ್ನುತ್ತದೆ ಸೂತ್ರಭಾಷ್ಯ

ತನುವನ್ನು ಮಾತ್ರವಲ್ಲ, ಮನಸ್ಸನ್ನೂ ಹೀಗೇ ಸಾಯುಜ್ಯ ಮುಕ್ತರಿಗೆ ನೀಡುತ್ತಾನೆ 'ಚಂದ್ರಮಾ ಮನಸೋ ಜಾತಃ ಚಕ್ಷೋಃ ಸೂರ್ಯೋ ಅಜಾಯತ' ಎಂದು ಮುಂತಾಗಿ ಪುರುಷಸೂಕ್ತ ಹೇಳುವಂತೆ ಸಾಯುಜ್ಯ ಮುಕ್ತಿಯೋಗ್ಯರಾದ ದೇವತೆಗಳು ಭಗವಂತನ ಯಾವ ಯಾವ ಅಂಗಗಳಿಂದ ಹುಟ್ಟುವರೋ ಆ ಅಂಗಗಳನ್ನು ಉಪಾಸನೆ ಮಾಡಿ ಆ ಅಂಗಗಳಲ್ಲಿಯೇ ಅವರು ಸಾಯುಜ್ಯ ಪಡೆಯುತ್ತಾರೆ

ತನುಮನಗಳಿತ್ತಾದರಿಪರುಂಟೇನೊ

ಎಂದೂ ಪಾಠವಿದೆ ಆ ಪಾಠದಲ್ಲಿ ತನುಮನಗಳೆರಡೂ ಸಾಯುಜ್ಯಮುಕ್ತರಿಗೆ 'ತನುಮನೆ' ಎಂಬ ಪಾಠದಲ್ಲಿ ತನು ಸಾಯುಜ್ಯ ಮುಕ್ತರಿಗೆ, ಮನೆ ಸಾಮೀಪ್ಯ ಮುಕ್ತರಿಗೆ

ವಸ್ತುತಃ ಹರಿಯ ಅರಮನೆ ಸಾಲೋಕ್ಯ ಮುಕ್ತರಿಗೆ, ಹೊರತು ಸಾಮೀಪ್ಯ ಮುಕ್ತರಿಗಲ್ಲ ಎನ್ನುತ್ತಾರೆ ವಾದಿರಾಜರು ಸಾಲೋಕ್ಯವೆಂದರೆ ವಿಷ್ಣುಲೋಕದಲ್ಲಿ ವಾಸಮಾಡುವುದು ವಿಷ್ಣುಲೋಕವೆಂದರೆ ಮುಖ್ಯವಾಗಿ ಧಾಮತ್ರಯವೆನಿಸಿದ ಅನಂತಾಸನ, ಶ್ವೇತದ್ವೀಪ, ವೈಕುಂಠಗಳೆ ಸತ್ಯಲೋಕಾದಿಗಳಲ್ಲ ಅದರಿಂದ ಅನಂತಾಸನಾದಿಗಳಲ್ಲಿ ವಾಸ ಮಾಡುವವರೆಲ್ಲ ಸಾಲೋಕ್ಯಮುಕ್ತರು ಅವರಿಗೆ ತನ್ನ 'ಮನೆ'ಗಳನ್ನೇ ನೀಡುತ್ತಾನೆ ಸಾಮೀಪ್ಯಮುಕ್ತಿಯೆಂದರೆ ವಿಷ್ಣುಲೋಕಗಳೆನಿಸಿದ ಅನಂತಾಸನಾದಿಗಳಿಗೆ ಸಮೀಪ ಪ್ರದೇಶಗಳಲ್ಲಿ ವಾಸಮಾಡುವುದು, ಸಾರೂಪ್ಯ ಮುಕ್ತಿ ಎಂದರೆ ವಾದಿರಾಜರ ಅಭಿಪ್ರಾಯದಲ್ಲಿ ಜಯವಿಜಯಾದಿ ಪಾರ್ಷದರಿಗೆ ಮಾತ್ರ ಸಿಗುವ ಮುಕ್ತಿಯಲ್ಲ ಹರಿಯಂತೆಯೆ ಚತುರ್ಭುಜಗಳಲ್ಲಿ ಶಂಖಚಕ್ರಾದಿ ಧರಿಸಿ ಪೀತಾಂಬರ ಉಟ್ಟು ಮೆರೆವ ಮುಕ್ತಿಯೆ ಸಾರೂಪ್ಯಮುಕ್ತಿ ಜಯವಿಜಯಾದಿಗಳಿಗೆ ಈ ಸಾರೂಪ್ಯವೂ ಇರುವುದು ನಿಜವೆ ಆದರೆ ಅವರು ವಿಷ್ಣುಲೋಕದಲ್ಲಿರುವುದರಿಂದ ಸಾಲೋಕ್ಯ ಮುಕ್ತರೆಂದೆ ಅವರನ್ನು ಕರೆಯಬೇಕು ಸಾರೂಪ್ಯಮುಕ್ತರೆಂದಲ್ಲ ವಾದಿರಾಜರು ಇದಕ್ಕೆ ಒಂದು ಉದಾಹರಣೆ ಹೀಗೆ ಕೊಡುತ್ತಾರೆ

ಮೂರು ಶಾಕವ ಮಾಡಿ ಲವಣ ಕೂಡಿಸಿದರು
ಮೂರು ಶಾಕವೆಂದು ಕರೆವರ್ರೈಸೆ ।
ಬೇರೆ ಬಡಿಸಿದ ಲವಣ ಲವಣವೆಂದೆನಿಪುದು
ಈ ರೀತಿಯಹುದು ಸಾರೂಪ್ಯ ॥

ಭೋಜನ ಪದಾರ್ಥಗಳಿಗೆ ಉಪ್ಪು ಸೇರಿಸಿದರೂ ಉಪ್ಪು ಎಂದು ವ್ಯವಹಾರವಿಲ್ಲ ಪ್ರತ್ಯೇಕ ಬಡಿಸಿದ ಉಪ್ಪನ್ನೇ ಉಪ್ಪೆನ್ನುತ್ತಾರೆ ಹಾಗೇ ಎಲ್ಲಾ ಮುಕ್ತರಿಗೂ ಸಾರೂಪ್ಯವಿದ್ದೇ ಇದೆ. 'ಸರ್ವೇ ಚತುರ್ಬಾಹವಃ' ಎಂದು ಭಾಗವತ ಎಲ್ಲಾ ಮುಕ್ತರೂ ಹರಿಯಂತೆ ಕಾಣುತ್ತಾರೆ ಎಂದಿದೆ 'ಪರಮಂ ಸಾಮ್ಯಮುಪೈತಿ' 'ಮಮ ಸಾಧರ್ಮ್ಯಮಾಗತಾಃ' ಎಂದು ಉಪನಿಷತ್ತು ಗೀತೆಗಳಲ್ಲಿಯೂ ಮೋಕ್ಷವನ್ನು ಸಾಮ್ಯ ಸಾಧರ್ಮ್ಯ ಎಂದು ಮುಂತಾಗಿಯೆ ಕರೆಯಲಾಗಿದೆ ಅದರಿಂದ ಸಾರೂಪ್ಯ ಎಲ್ಲರಿಗೂ ಸಾಮಾನ್ಯ, ಎಲ್ಲಾ ಶಾಕಪದಾರ್ಥಗಳಿಗೂ

ಉಪ್ಪು ಸಾಮಾನ್ಯವಿರುವಂತೆ ಸಾಮೀಪ್ಯಾದಿಗಳು ವಿಶೇಷ ಅವು ಇಲ್ಲದ ಮುಕ್ತರಿಗೆಲ್ಲರಿಗೂ ಸಾರೂಪ್ಯಮುಕ್ತರು ಎಂದು ಹೆಸರು ಅವರು ಭೂಲೋಕದಿಂದ ತೊಡಗಿ ಸತ್ಯಲೋಕ-ದವರೆಗೂ ಹರಡಿದ್ದಾರೆ ಮುಕ್ತರಾದ್ದರಿಂದ ಭೂಲೋಕಾದಿವಾಸಿ ಸಂಸಾರಿ ಜೀವರೊಡನೆ ಅವರಿಗೆ ಏನೂ ಸಂಪರ್ಕವಿರುವುದಿಲ್ಲ

ಹೀಗೆ ಸತ್ಯಲೋಕದವರೆಗಿನ ಲೋಕಗಳಲ್ಲಿವಾಸಿಸುವ ಸಾರೂಪ್ಯಮುಕ್ತರು, ಧಾಮ-ತ್ರಯದ ಆಸುಪಾಸಿನ ಕ್ಷೀರಸಾಗರಾದಿಗಳಲ್ಲಿ ವಾಸಮಾಡುವ ಸಾಮೀಪ್ಯಮುಕ್ತರು, ಧಾಮತ್ರಯದೊಳಗೆ ವಾಸಮಾಡುವ ಸಾಲೋಕ್ಯಮುಕ್ತರು, ಹರಿಯ ಮೈಮನಗಳಲ್ಲಿಯೆ ವಾಸಮಾಡುವ ಸಾಯುಜ್ಯಮುಕ್ತರು ಎಂದು ಮುಕ್ತರು ನಾಲ್ಕು ಬಗೆ ಒಬ್ಬರಿಗಿಂತ ಒಬ್ಬರು ಧಾಮತ್ರಯದಲ್ಲಿರುವ ಭಗವನ್ಮೂರ್ತಿಗೆ ಹೆಚ್ಚುಸಮೀಪವಾಗಿರುವುದರಿಂದ ತಾರತಮ್ಯ-ದಲ್ಲಿಯೂ ಹೆಚ್ಚಿನವರು

ಹರಿ ಹೀಗೆ ಮುಕ್ತರಿಗೆ ತನ್ನ ಮನೆಗಳನ್ನೂ ಮೈಮನಗಳನ್ನೂ ಕೊಡುವುದರಿಂದ ಅವನ ಕರುಣೆಗೆ ಪಾರವಿಲ್ಲ, ಮಹಾಮಹಿಮ ಆತ

*ಜನಪ ಮೆಚ್ಚಿದರೀವ*

ಹರಿಶ್ಚಂದ್ರ ಶಿಬಿ ಮುಂತಾದ ರಾಜರು ತಮ್ಮ ಮನೆಮಠಗಳನ್ನು ಶರೀರವನ್ನೂ ತ್ಯಾಗ-ಮಾಡಿ ಅಮರರಾದುದುಂಟು ದಾಸರಾಯರು 'ತನುಮನೆಗಳಿತ್ತಾದರಿವರುಂಟೇನೊ ಲೋಕದಲಿ' ಎಂದು ಕೇಳುತ್ತಿದ್ದಾರೆ!

ವಸ್ತುತಃ ಹರಿಶ್ಚಂದ್ರಾದಿ ರಾಜರುಗಳು ಸತ್ಯವಚನಪರಿಪಾಲನೆ, ಶರಣಾಗತರಕ್ಷಣೆ ಮುಂತಾದವುಗಳಿಗಾಗಿ ತಮ್ಮ ಪ್ರಾಣವನ್ನೇ ಕೊಡಲು ಸಿದ್ಧರಿದ್ದರು, ಪುಣ್ಯದಾಸೆಯಿಂದ ಮೆಚ್ಚಿಕೆಯಿಂದಲ್ಲ ಪೂರ್ಣಕಾಮನಾದ ಶ್ರೀಹರಿ ಮಾತ್ರ ಭಕ್ತರ ಕೇವಲ ಭಕ್ತಿಗೇ ಮೆಚ್ಚಿ ಕರುಣೆಯಿಂದಲೆ ತನ್ನ ಸರ್ವಸ್ವವನ್ನು ಕೊಡುತ್ತಿದ್ದಾನೆ ಅಂದರೆ, ಸಾಲೋಕ್ಯ ಮುಕ್ತರಿಗೆ ತನ್ನ ಪ್ರೇಯಸಿಯಾದ ಮಹಾಲಕ್ಷ್ಮಿಯ ಸ್ವರೂಪವೆ ಆದ ಧಾಮತ್ರಯಗಳನ್ನು ಕೊಡುತ್ತಿದ್ದಾನೆ ಸಾಯುಜ್ಯ ಮುಕ್ತರಿಗೆ ತನ್ನ ಶರೀರ ಮನಸ್ಸುಗಳನ್ನೇ ಕೊಡುತ್ತಿದ್ದಾನೆ 'ಜನಪ ಮೆಚ್ಚಿದರೀವ' ಎಂದು ದಾಸರಾಯರು ಇದನ್ನೇ ಸೂಚಿಸುತ್ತಿದ್ದಾರೆ

ಶರೀರ ಮನಸ್ಸುಗಳನ್ನು ಕೊಡುವುದೆಂದರೆ ಸಾಯುಜ್ಯ ಮುಕ್ತರು ತಮ್ಮ ಇಚ್ಛಾನುಸಾರ ಹರಿಯ ಶರೀರಮನಸ್ಸುಗಳನ್ನೇ ತಮ್ಮ ಶಾರೀರ ಮಾನಸಿಕ ಚಟುವಟಿಕೆಗಳಿಗೆ ಬಳಸಿ-ಕೊಳ್ಳುವಂತೆ ಮಾಡುವುದು ಹೀಗೆಂದಮಾತ್ರಕ್ಕೆ ಹರಿಯ ಇಚ್ಛಾನುಸಾರ ಹರಿಗೇ ತನ್ನ ಮೈಮನಗಳನ್ನು ಬಳಸಿಕೊಳ್ಳಲಾಗದಿರುವ ಸಂದರ್ಭ ಬಂದೀತೆನ್ನಬಾರದು ಮುಕ್ತರ ಇಚ್ಛೆ ಎಂದಿಗೂ ಹರಿಯ ಅಧೀನವಾಗಿದ್ದು ಅವನ ಇಚ್ಛಾನುಸಾರವೆ ಇರುತ್ತದೆ ವಿರುದ್ಧ-ವಾಗಿರುವುದಿಲ್ಲ

**ಅನಂತಾಸನವೆ ಮೊದಲಾದಾಲಯ**

ಅನಂತಾಸನಾದಿ ಲೋಕಗಳು ಪೂರ್ತಿ ಮಹಾಲಕ್ಷ್ಮೀಸ್ವರೂಪವಲ್ಲ ಅವುಗಳಲ್ಲಿ ಶ್ರೀಭಾಗ, ಭೂಭಾಗ, ದುರ್ಗಾಭಾಗಗಳೆಂದು ಮೂರು ಬಾಗಗಳಿವೆ ಅವುಗಳಲ್ಲಿ ಶ್ರೀ-ಭಾಗಮಾತ್ರ ಮಹಾಲಕ್ಷ್ಮೀಸ್ವರೂಪ, ಮುಕ್ತಸ್ಥಾನ ಉಳಿದುವು ಜಡಲೋಕಗಳು ಅಮುಕ್ತ-ಸ್ಥಾನಗಳು, ಅಂದರೆ ಜೀವನ್ಮುಕ್ತರು ಬ್ರಹ್ಮಪ್ರಳಯಪರ್ಯಂತ ವಾಸಮಾಡುವ ಪ್ರದೇಶ-ಗಳು

ನಾವು ವಾಸಮಾಡುವ ಈ ಜಂಬೂದ್ವೀಪದಿಂದಾಚೆ ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರ ದ್ವೀಪಗಳಿವೆ ಅವುಗಳಾಚೆ ವಜ್ರಲೇಪಯುಕ್ತ ಸ್ವರ್ಣಭೂಮಿ ಮತ್ತು ಲೋಕಾಲೋಕಪರ್ವತಗಳಿವೆ ಲೋಕಾಲೋಕಪರ್ವತ ಐವತ್ತು ಲಕ್ಷಯೋಜನ ವಿಸ್ತಾರ-ವಾಗಿದೆ ಮೇರುಮಧ್ಯದಿಂದ ಸ್ವರ್ಣಭೂಮಿವರೆಗೆ ಮೂರುವರೆಕೋಟಿ ಯೋಜನ-ಗಳಾಗುತ್ತವೆ ಲೋಕಾಲೋಕ ನೇರಿ ಒಟ್ಟುನಾಲ್ಕು ಕೋಟಿ ಯೋಜನ ಲೋಕಾಲೋಕದ ಆಚೆ ಏಳುಕೋಟಿ ಯೋಜನ ವಿಸ್ತಾರದ ಅಂಧಂತಮಸ್ಸು ಅದರಿಂದಾಚೆ ಹದಿನಾಲ್ಕು ಕೋಟಿ ಯೋಜನ ಘನೋದಕ ಸಮುದ್ರ ಬಳಿಕ ನೂರು ಕೋಟಿ ಯೋಜನ ದಪ್ಪದ ಬ್ರಹ್ಮಾಂಡ ಖರ್ಪರ

ಶಾಕದ್ವೀಪದಿಂದ ಇಪ್ಪತ್ತು ಲಕ್ಷ ಯೋಜನ ದೂರದಲ್ಲಿ ಶ್ವೇತದ್ವೀಪ ಕ್ಷೀರಸಮುದ್ರದ ನಡುವೆ ಇದೆ ಆ ಭಾಗದಲ್ಲಿ ಕ್ಷೀರ ಹೆಪ್ಪುಗಟ್ಟಿ ಬೆಟ್ಟದಂತೆ ಉನ್ನತವಾಗಿ ಐವತ್ತೊಂದು ಲಕ್ಷ ಯೋಜನ ಎತ್ತರಕ್ಕೆ ಬೆಳೆದಿದೆ ಅದರ ತುದಿಯಲ್ಲಿ ಶ್ವೇತದ್ವೀಪ ಅದಕ್ಕೆ ಭೂಸ್ಪರ್ಶ-ವಿದ್ದರೂ ಸ್ವರ್ಗದಷ್ಟು ಎತ್ತರವಾದ್ದರಿಂದ ಸ್ವರ್ಗಪ್ರದೇಶವೆಂದೇ ಶ್ರುತಿಪುರಾಣಗಳಲ್ಲಿ ಪರಿಗಣಿಸಲಾಗಿದೆ

ಶ್ವೇತದ್ವೀಪದಲ್ಲಿ ಶ್ರೀಭಾಗ, ಭೂಭಾಗ, ದುರ್ಗಾಭಾಗಗಳು ಪ್ರತಿಯೊಂದೂ ಆರು ಲಕ್ಷಯೋಜನವಿಸ್ತಾರವಾಗಿದೆ

ಅನಂತಾಸನ ಉತ್ತರದಲ್ಲಿ ಘನೋದಕ ಸಮುದ್ರದಾಚೆ ಖರ್ಪರಕ್ಕೆ ತಾಗಿಕೊಂಡಂತೆ ಇದ್ದು ಒಂದು ಲಕ್ಷ ಯೋಜನ ವಿಸ್ತಾರದ ಭೂಭಾಗ ಮತ್ತು ಅಷ್ಟೇ ವಿಸ್ತಾರದ ಶ್ರೀಭಾಗ-ದುರ್ಗಾಭಾಗಗಳಿಂದ ಕೂಡಿದೆ ಒಂದು ಲಕ್ಷ ಯೋಜನ ಎತ್ತರದ ಅಂತರಿಕ್ಷಲೋಕಕ್ಕಿಂತ ಎತ್ತರವಾಗಿದೆ

ವೈಕುಂಠವೂ ಬ್ರಹ್ಮಾಂಡದೊಳಗೇ ಇದೆ ಭೂಮಿಯಿಂದ ಸ್ವರ್ಗ ಐವತ್ತು ಲಕ್ಷ ಯೋಜನ ಎತ್ತರ ಮುಂದೆ ಮಹ, ಜನ, ತಪಗಳು ಒಂದಕ್ಕಿಂತ ಒಂದು ಒಂದೂವರೆ ಪಟ್ಟು ಹೆಚ್ಚು ಎತ್ತರ ತಪೋಲೋಕದಿಂದ ಮೇಲೆ, ಭೂಮಿಯಿಂದ ತಪದವರೆಗಿನ ಒಟ್ಟು ಎತ್ತರದಷ್ಟು ಎತ್ತರ ಸತ್ಯಲೋಕ ಅಂದರೆ ಒಟ್ಟು ಭೂಮಿಯಿಂದ ಸತ್ಯಲೋಕದೆತ್ತರ ಎಂಟು

ಕೋಟಿ ಹನ್ನೆರಡುವರೆ ಲಕ್ಷ ಯೋಜನ ಇದರ ಎರಡರಷ್ಟು, ಅಂದರೆ ಹದಿನಾರು ಕೋಟಿ ಇಪ್ಪತ್ತೈದು ಲಕ್ಷಯೋಜನದೆತ್ತರದಲ್ಲಿ ಭೂಮಿಯಿಂದ ಮೇಲೆ ಇರುವ ಲೋಕವೆ ವೈಕುಂಠ ಇದರಲ್ಲಿ ದಕ್ಷಿಣಕ್ಕೆ ಭೂಭಾಗ ಎರಡೂವರೆ ಕೋಟಿ ಯೋಜನ ವಿಸ್ತಾರ ಇದು ಅಮುಕ್ತಸ್ಥಾನ ಉತ್ತರಕ್ಕೆ ದುರ್ಗಾಭಾಗವೂ ಎರಡೂವರೆ ಕೋಟಿ ಯೋಜನ ವಿಸ್ತಾರ ಇದೂ ಅಮುಕ್ತ ಸ್ಥಾನ ನಡುವೆ ಇಪ್ಪತ್ತಮೂರು ಕೋಟಿ ಯೋಜನ ಶ್ರೀಭಾಗ ಇದು ಸಾಕ್ಷಾತ್ ಲಕ್ಷ್ಮೀಸ್ವರೂಪ, ಮುಕ್ತಸ್ಥಾನ ಇದಕ್ಕೆ ಅಯೋಧ್ಯೆ ಎಂದು ಹೆಸರು ಹರಿಯ ಅಂತಃಪುರವಿದು ಅದರ ಸುತ್ತಲೂ ಕಂದಕದಂತೆ ವಿರಜಾನದಿ ಹರಿಯುವುದು ಇದೂ ಲಕ್ಷ್ಮ್ಯಾತ್ಮಕ

ಪ್ರಳಯಕಾಲದಲ್ಲಿ ಧಾಮತ್ರಯದ ಭೂಭಾಗ ದುರ್ಗಾಭಾಗಗಳೆರಡಕ್ಕೂ ಲಯವಿದೆ ಶ್ರೀಭಾಗ ಅವ್ಯಕ್ತವಾಗಿರುತ್ತದೆ ಸೃಷ್ಟಿಕಾಲದಲ್ಲಿ ವ್ಯಕ್ತವಾಗುತ್ತದೆ

ಹೀಗೆ ಶ್ರೀಹರಿ ಸಾರೂಪ್ಯಮುಕ್ತರಿಗೆ ಧನವಾಹನವಿಭೂಷಣವಸನಗಳನ್ನೂ, ಸಾಮೀಪ್ಯಮುಕ್ತರಿಗೆ ಭೂಮಿಯನ್ನು ಅಂದರೆ ಪ್ರಕೃತದಲ್ಲಿ ಕ್ಷೀರಸಾಗರಾದಿ ಪ್ರದೇಶಗಳನ್ನೂ, ಸಾಯುಜ್ಯ ಮುಕ್ತರಿಗೆ ತನ್ನ ತನುವನ್ನೂ, ಸಾಲೋಕ್ಯ ಮುಕ್ತರಿಗೆ, ತನ್ನ ಮನೆಯನ್ನೂ ಕೊಡುತ್ತಾನೆ ಸಾಯುಜ್ಯ ಮುಕ್ತರಿಗೆ ಮೈಮನಗಳನ್ನಿತ್ತು ಕರುಣೆಯಿಂದ ಸಣ್ಣ ಮಗುವಿನಂತೆ ಆ ಮುಕ್ತರ ಇಚ್ಛಾನುಸಾರ ನಡೆಯುತ್ತಾನೆ ಇದು ತಾನೆ ಅವನ ಮಹಾಮಹಿಮೆ?

**ಭುವನಪಾವನಚರಿತ ಪುಣ್ಯ-**
**ಶ್ರವಣಕೀರ್ತನ ಪಾಪನಾಶನ**
**ಕವಿಭಿರೀಡಿತ ಕೈರವದಳಶ್ಯಾಮ ನಿಸ್ಸೀಮ ।**
**ಯುವತಿವೇಷದಿ ಹಿಂದೆ ಗೌರೀ-**
**ಧವನ ಮೋಹಿಸಿ ಕೆಡಿಸಿ ಉಳಿಸಿದ**
**ಇವನ ಮಾಯವ ಗೆಲುವನಾವನು ಈ ಜಗತ್ತ್ರಯದಿ? ॥ ೧೮ ॥**

'ಶ್ರೀಹರಿ ಲೋಕಪಾವನಚರಿತೆ ಉಳ್ಳವ ಅವನ ಶ್ರವಣ ಕೀರ್ತನೆಗಳೇ ಪುಣ್ಯಕರ ಪಾಪನಾಶಕ ಜ್ಞಾನಿಗಳಿಂದ ಸ್ತುತ್ಯ ಆತ ನೀಲಕಮಲದ ದಳಗಳಂಥ ಶ್ಯಾಮಲ ವರ್ಣದವ ಅವನ ಮಹಿಮೆಗೆ ಸೀಮೆಯೆ ಇಲ್ಲ ಏಕೆಂದರೆ ಹಿಂದೆ ಸ್ತ್ರೀವೇಷದಲ್ಲಿ ಪಾರ್ವತೀಪತಿಯಾದ ಶಿವನನ್ನೇ ಮೋಹಿಸಿ ಕೆಡಿಸಿ ಉಳಿಸಿದನಂತೆ ಇವನ ಮಾಯೆಯನ್ನು ಗೆಲ್ಲುವವನು ಯಾವನು ಈ ಮೂರು ಲೋಕದಲ್ಲಿ?'

'ಜನವ ಮೆಚ್ಚಿದರೀವ ಧನವಾಹನ' ಎಂಬ ಹಿಂದಿನ ಪದ್ಯದಲ್ಲಿ ಹರಿಯು ಭಕ್ತರಿಗೆ ಕರುಣೆಯಿಂದ ಮೋಕ್ಷಸುಖ ನೀಡುವುದನ್ನು ವರ್ಣಿಸಿ ಈ ಪದ್ಯದಲ್ಲಿ ಸಂಸಾರದಲ್ಲಿಯೂ ಭಕ್ತರು ಬಯಸುವ ವಿಷಯಸುಖವನ್ನು ನೀಡಿ, ಆ ಸುಖದಲ್ಲಿ ಅವರು ಮೈಮರೆಯ-

ದಂತೆಯೂ ನೋಡಿಕೊಳ್ಳುವ ಹರಿಯ ಕರುಣೆಗೆ ಪಾರವಿಲ್ಲ ಎನ್ನುತ್ತಿದ್ದಾರೆ ದಾಸರಾಯರು ಇದಕ್ಕೆ ಉದಾಹರಣೆಯಾಗಿ ಶಿವನಿಗೆ ಮೋಹಿನೀರೂಪ ತೋರಿ ಕ್ಷಣಕಾಲ ಸ್ತ್ರೀದರ್ಶನ-ಸುಖದಲ್ಲಿ ಮೈಮರೆವಂತೆ ಮಾಡಿ ಒಡನೆ ಎಚ್ಚರಿಸಿದ ಹರಿಯ ಮಹಿಮೆಯನ್ನು ವರ್ಣಿಸು-ತ್ತಿದ್ದಾರೆ ಭಾಗವತ ಅಷ್ಟಮಸ್ಕಂಧದಲ್ಲಿ ಈ ಕಥೆ ಬರುತ್ತದೆ

***ಭುವನಪಾವನಚರಿತ***

ಹರಿಯ ಚರಿತ ಬೇರೆ ಅಲ್ಲ, ಅವನು ಬೇರೆ ಅಲ್ಲ 'ನೇಹ ನಾನಾಸ್ತಿ ಕಿಂಚನ!' ಅದ-ರಿಂದ ಚರಿತರೂಪದಲ್ಲಿ ಹರಿ ಶ್ರವಣದ್ವಾರಾ ಎಲ್ಲಾ ಭಕ್ತರ ಹೃದಯವನ್ನು ಪ್ರವೇಶಿಸಿ ಅಲ್ಲಿ ತುಂಬಿರುವ ಪಾಪಗಳನ್ನೆಲ್ಲಾ ನಾಶಮಾಡುತ್ತಾನೆ ಇದಕ್ಕೆ ಉದಾಹರಣೆ ಮೋಹಿನೀಚರಿತೆ

***ಪುಣ್ಯಶ್ರವಣಕೀರ್ತನ***

ಎದೆಯಲ್ಲಿ ಮನೆಮಾಡಿದ ಎಲ್ಲಾ ಪಾಪಗಳನ್ನು ಪರಿಹರಿಸುವುದು ಮಾತ್ರವಲ್ಲದೆ ಪುಣ್ಯರಾಶಿಯನ್ನೂ ತುಂಬುತ್ತದೆ, ಈ ಕಥೆಯ ಶ್ರವಣ ಮತ್ತು ಕೀರ್ತನ ಕೀರ್ತನ ಮಾಡ-ಲಾರದವರು ಶ್ರವಣ ಮಾಡಿದರೂ ನಾಕು ಎಂಥ ಕರುಣೆ!

***ಪಾಪನಾಶನ***

ಪಾಪಾಭಿಮಾನಿ ಅಸುರರನ್ನು ಅಮೃತಪಾನದಿಂದ ವಂಚಿತರನ್ನಾಗಿ ಮಾಡಿ ಸ್ವತಃ ಅವರನ್ನು ನಾಶ ಮಾಡಿದ, ದೇವತೆಗಳ ಕೈಯಿಂದಲೂ ನಾಶಪಡಿಸಿದ, ಶ್ರೀಹರಿ

***ಕವಿಭಿರೀಡಿತ***

ಜ್ಞಾನಿಗಳಿಂದ ಸ್ತುತ್ಯ ಶಿವನನ್ನೂ ಮರುಳು ಮಾಡಿದ ವಿಷ್ಣುಮಾಯೆಯನ್ನು ಮುನಿ-ಗಳು ಮನಸಾರೆ ಕೊಂಡಾಡಿದರು ಮಹಾಲಕ್ಷ್ಮಿಯ ಸ್ತುತಿಗೂ ಪೂರ್ತಿ ಗೋಚರಿಸದ ಅಪ್ರತಿಮಮಹಿಮ ಮುನಿಗಳಿಂದಲೂ ಕೊಂಡಾಡಿಸಿಕೊಂಡ, ಕರುಣಾಳು!

***ಕೈರವದಳಶ್ಯಾಮ***

ದುಷ್ಟರಿಗೆ ಉಗ್ರರೂಪ ತೋರಿ ಅಂಜಿಸಿದರೂ ಸಜ್ಜನರಿಗೆ ಅರಳಿದ ನೈದಿಲೆಯಂಥ ಮೋಹಕ ಬಣ್ಣದ ಮನೋಹರರೂಪಿನಿಂದ ದರ್ಶನವಿತ್ತು ಮನ ಸೆಳೆಯುತ್ತಾನೆ ಆನಂದ ನೀಡುತ್ತಾನೆ ಮೋಹಿನೀರೂಪದಿಂದ ಶಿವನಿಗೆ ಹಾಗೇ ಮಾಡಿದ

ಸ್ತ್ರೀಪ್ರೇಕ್ಷಣ ಪ್ರತಿಸಮೀಕ್ಷಣ ನಿರ್ವೃತಾತ್ಮಾ

ಮೋಹಿನೀರೂಪದ ದರ್ಶನದಿಂದ ಶಿವನ ಮನಸ್ಸಿಗೆ ಪರಮಾಹ್ಲಾದ ಉಂಟಾಯಿತಂತೆ!

***ನಿಸ್ಸೀಮ***

ಕಾಮನನ್ನೇ ಸುಟ್ಟು ಬೂದಿ ಮಾಡಿದ ವೈರಾಗ್ಯಾಧಿಪತಿ ಮಹಾರುದ್ರನನ್ನು ಮರುಳು ಮಾಡಿ ಕಂಗೆಡಿಸಿದ ಹರಿಯ ಮಹಿಮೆಗೆ ಸೀಮೆ ಉಂಟೆ?

***ಯುವತಿ ವೇಷ***

ಮೋಹಿನೀರೂಪ ಈ ರೂಪದಿಂದ ಭಕ್ತರಿಗೆ ಮಾತ್ರ ಆಹ್ಲಾದ ನೀಡಿದುದು ಭಕ್ತರ ಮೇಲಿನ ಕರುಣೆಯೆ ಸರಿ ದೈತ್ಯರಿಗೆ 'ಕಣ್ಣುಮುಚ್ಚಿರಿ' ಎಂದಳು ಮೋಹಿನಿ ದೇವತೆಗಳು ಮಾತ್ರ ಕಣ್ಣರಳಿಸಿ ಯಥೇಚ್ಛ ಆ ರೂಪಸೌಂದರ್ಯರಸವನ್ನು ಕಣ್ಣ ಬೊಗಸೆಯಿಂದೆತ್ತಿ ಪಾನ ಮಾಡಿದರು ಅವರು ಅಸುರರಂತೆ ಕೇವಲ 'ಸ್ತ್ರೀ' ಎಂಬ ದೃಷ್ಟಿಯಿಂದ ಕಾಣದೆ ಜಗನ್ಮಾತೆ ಎಂಬ ದೃಷ್ಟಿಯಿಂದಲೇ ಕಂಡರು ಅದರಿಂದ ಹರಿಕರುಣೆ ಅವರೆಡೆಗೇ ಹರಿಯಿತು

***ಗೌರೀಧವನ ಮೋಹಿಸಿ***

ಶಿವನೊಮ್ಮೆ ಪಾರ್ವತಿ ಮತ್ತು ಎಲ್ಲಾ ಗಣಗಳೊಂದಿಗೆ ಹರಿಯ ಬಳಿಗೆ ಹೋಗಿ ಬೇಡಿದ, 'ದೈತ್ಯರನ್ನು ಮೋಹಗೊಳಿಸಿದ ಆ ನಿನ್ನ ಮೋಹಿನೀರೂಪ ನೋಡುವ ಕುತೂ-ಹಲ ಉಂಟಾಗಿದೆ, ಒಮ್ಮೆ ತೋರು' 'ನೋಡು ಶಿವ, ಆ ರೂಪು ಪರಮವಿರಕ್ತಶಿಖಾಮಣಿ-ಗಳಿಗೂ ಮೋಹ ಉಂಟುಮಾಡಬಲ್ಲುದು!' ಎನ್ನುತ್ತ ಹರಿ ಅದೃಶ್ಯನಾದ

ದೂರದಲ್ಲಿ ಒಂದು ಉಪವನದಲ್ಲಿ ಬಂಗಾರದ ಬಳ್ಳಿಯಂತೆ ಬಳಕುವ ರೂಪಸಿ ಚೆಂಡಾಟವಾಡುತ್ತಿದ್ದಾಳೆ ಶಿವ ಕಂಡು ಮೈಮರೆಯುತ್ತಾನೆ ಬಳಿಯಲ್ಲಿ ದೇವಿ ಪಾರ್ವತಿ ಇರುವುದು, ಗಣಗಳೆಲ್ಲ ನಿಂತು ನೋಡುತ್ತಿರುವುದು ಇವಾವುದರ ಪರಿವೆಯೂ ಇಲ್ಲ ಶಿವನಿಗೆ! ಅವರೆಲ್ಲರೂ ನೋಡುತ್ತಿದ್ದಂತೆಯೆ ಒಂದಿಷ್ಟೂ ಲಜ್ಜೆ ಇಲ್ಲದೆ ಆ ಹೆಣ್ಣ ಬಳಿಗೆ ಓಡಿದ ಇದನ್ನು ಶ್ರೀವಾದಿರಾಜರು ಹೀಗೆ ಬಣ್ಣಿಸಿದ್ದಾರೆ—

ಹರಿಹರರಿಬ್ಬರು ಒಲಿದು ಮಾತಾಡಲು ಕೊಳವ ಕಂಡಲ್ಲಿ ಎಲೆ ತೋಟ ।
ಕೊಳವ ಕಂಡಲ್ಲಿ ಎಲೆ ತೋಟದೊಳಗಾಡುವ ಹೆಣ್ಣಿನ ಕಂಡು ಹರ ಮರುಳಾದ ।
ನಡು ಬಳುಕಿ ಮುಡಿ ನಡಲಿ ಉಡಿಗಂಟೆ ಹೊಳೆಯುತ ಕೊರಳ ಪದಕ ಹಾರ ಒಲೆಯುತ।
ಕೊರಳ ಪದಕ ಹಾರ ಒಲೆಯುತ ಹೆಣ್ಣಿನ ಇರವ ವರ್ಣಿಸಲಾರಿಗಳವಲ್ಲ ॥
ತೋರ ಕುಚದ ಮೇಲೆ ಚಾರುಗಂಧವ ಪೂಸಿ ಆಯಕೆ ಹಿಡಿದಳೆ ಕಮಲ ।
ಆಯಕೆ ಹಿಡಿದಳೆ ಕಮಲವ ಕಡೆಗಣ್ಣ ಡಾಳ ಬಂದ್ಧರನ ಕಂಗೆಡಿಸಿತು ॥
ಅಮ್ಮಾಲೆ ಆಡೋಳು ಒಮ್ಮೊಮ್ಮೆ ನೋಡೋಳು ತನ್ನೊಳಗೆ ತಾನು ನಗುವೋಳು ।
ತನ್ನೊಳಗೆ ತಾನು ನಗುವೋಳು ಬೊಮ್ಮನ ಮಗನ ಮರುಳಮಾಡಿ ನಡೆಯೋಳು ॥
ನೋಡಳು ನುಡಿಯಳು ಹರನ ಕೂಡೆ ಮಾತಾಡಳು ಓಡುತ್ತ ಚೆಂಡ ಹೊಯ್ವಳು ।
ಓಡುತ್ತ ಚೆಂಡ ಹೊಯ್ವಳು ಪಾರೆಗಣ್ಣಿಂದ ಮೂರು ಕಣ್ಣ ಹರ ಮರುಳಾದ ॥
ಕೆದರಿದ ಕೆಂಜೆಡೆ ಕೊರಳ ರುದ್ರಾಕ್ಷಿ ಕರದಿ ತ್ರಿಶೂಲ ಹೊಳೆಯುತ ।
ಕರದಿ ತ್ರಿಶೂಲ ಹೊಳೆಯುತ ಹೆಣ್ಣಿನ ಕಾಡುತ್ತ ಹಿಂದೆ ನಡೆದನು ॥
ಮಂಗಳಮಹಿಮನು ಅಂಜಿಕೆಯಿಲ್ಲದೆ ಗಂಗೆ ಪೊತ್ತವನ ತಿರುಗಿಸಿದ ।

ಗಂಗೆ ಪೊತ್ತವನ ತಿರುಗಿಸಿದ ತನ್ನಯ ಮನದ ಅಂದವೆಲ್ಲ ಇಳುಹಿದ ||
ಭೂಮಿಯನೆಲ್ಲ ಈರಡಿ ಮಾಡಿದ ಆಲದೆಲೆ ಮೇಲೆ ಮಲಗಿದ |
ಆಲದೆಲೆ ಮೇಲೆ ಮಲಗಿದ ಶ್ರೀಹಯವದನನೆಂದ್ಧರನು ತಿಳಿದನು ||

***ಕೆಡಿಸಿ ಉಳಿಸಿದ***

ಇಲ್ಲಿ ಒಂದಂಶವನ್ನು ವಾದಿರಾಜರು ಹೇಳಿಲ್ಲ. ಭಾಗವತ ಹೇಳುತ್ತದೆ

ತಸ್ಯಾನುಧಾವತೋ ರೇತಶ್ಚಸ್ಕಂದಾಮೋಘರೇತಸಃ

'ಹೆಣ್ಣಿನ ಹಿಂದೆ ಹಿಂದೆ ಧಾವಿಸುತ್ತಿದ್ದಂತೆ ಶಿವನ ವೀರ್ಯಸ್ಖಲನವಾಯಿತು' ವಸ್ತುತಃ ಊರ್ಧ್ವರೇತಸ್ಕನಾದ ಶಿವ ಲೋಕೈಕಸುಂದರಿಯಾದ ಪಾರ್ವತಿಯನ್ನು ಮದುವೆಯಾದ ಹೊಸದರಲ್ಲಿ ಆ ನವವಧುವಿನೊಡನೆ ಏಕಾಂತದಲ್ಲಿ ದೇವಮಾನದ ಒಂದು ಸಾವಿರ ವರ್ಷ ಕಾಲ ಅಂದರೆ ಮನುಷ್ಯಮಾನದಲ್ಲಿ ಮೂರು ಲಕ್ಷ ಅರವತ್ತು ಸಾವಿರ ವರ್ಷ ವಿಹಾರ ಮಾಡಿದ. ಆದರೂ ವೀರ್ಯಸ್ಖಲನವಾಗಲಿಲ್ಲ. ಮೋಹಿನಿಯ ಹಿಂದೆ ಹಿಂದೆ ಧಾವಿಸುತ್ತಿದ್ದಂತೆಯೆ ಸ್ಖಲನಗೊಂಡು ನೆಲದಲ್ಲಿ ಅಲ್ಲಲ್ಲಿ ಬಿದ್ದಿತು! ಇದಕ್ಕೆ ಕಾರಣ 'ದೇವಮಾಯೆ', ಹರೀಚ್ಛೆ!

ಸ್ಕನ್ನೇ ರೇತಸಿ ಸೋऽಪಶ್ಯದಾತ್ಮಾನಂ ದೇವಮಾಯಯಾ |
ಜಡೀಕೃತಂ ನೃಪಶ್ರೇಷ್ಠ ಸನ್ನ್ಯವರ್ತತ ಕಶ್ಮಲಾತ್ || —ಭಾಗವತ

'ವೀರ್ಯಸ್ಖಲನವಾದೊಡನೆ ತಾನು ಅಷ್ಟರವರೆಗೆ ಅಜ್ಞಾನಕ್ಕೊಳಗಾಗಿದ್ದುದು 'ದೇವಮಾಯೆ'ಯಿಂದ ಹರೀಚ್ಛೆಯಿಂದ ಎಂದು ತಿಳಿಯಿತು ಶಿವನಿಗೆ. ಒಡನೆ ತನ್ನ ಮನಸ್ಸಿನಲ್ಲಿ ಉಂಟಾಗಿದ್ದ ಕಾಮವಿಕಾರವನ್ನು ತಡೆದುಕೊಂಡ. ಅದೂ ದೇವಮಾಯೆ-ಯಿಂದಲೇ ಸಾಧ್ಯವಾಯಿತು'

***ಇವನ ಮಾಯವ ಗೆಲುವನಾವನು?***

'ಇವನ ಮಾಯೆ' ಎಂದರೆ ಇವನ ಇಚ್ಛೆ ಮತ್ತು ಇವನ ಮಡದಿ ಮಾಯಾದೇವಿ, ಮಹಾಲಕ್ಷ್ಮಿ. ಈ ಎರಡೂ ಮಾಯೆಗಳನ್ನು ಗೆಲ್ಲುವುದು ಬ್ರಹ್ಮಾದಿ ಜೀವರ ಸಾಮರ್ಥ್ಯಕ್ಕೆ ಮೀರಿದುದು. ಲಕ್ಷ್ಮೀನಾರಾಯಣರ ವಿಶೇಷಾನುಗ್ರಹದ ಬಲದಿಂದ ಋಜುಗಳಿಗೂ ಅವರ ಪತ್ನಿಯರಿಗೂ ಈ ಮಾಯೆಗಳ ತೊಡಕಿಲ್ಲ. ರುದ್ರಾದಿಗಳಿಗೆ ಉಂಟು. ಅದರಿಂದಲೆ ಶಿವ ಮೋಹಿನೀರೂಪ ಕಾಣುವ ಬಯಕೆಯನ್ನು ಹೇಳಿಕೊಂಡಾಗ ಹರಿ ಎಚ್ಚರಿಸಿದ್ದ! 'ಮಾಯೆಯನ್ನು ಗೆಲ್ಲಲಾರೆ!' ಎಂದಿದ್ದ! ಹಾಗೇ ಆಯಿತು 'ನೋಡಿದೆಯಾ, ಮಾಯೆಯ ಪ್ರಭಾವವನ್ನು?'

ದುಸ್ತರಯಾ ಸ್ವೈರಂ ಮೋಹಿತೋऽಸ್ಯಂಗ ಮಾಯಯಾ ||

'ದುಸ್ತರವಾದ ನನ್ನ ಮಾಯೆಯಿಂದ ನೀನು ಮೋಹಿತನಾದೆ' ಎಂದ ಹರಿ

ಮೋಹಕ್ಕೊಳಗಾಗಿ ಒಮ್ಮೆ ಕೆಟ್ಟರೂ ಒಡನೆ ಎಚ್ಚೆತ್ತು ಉಳಿದುಕೊಂಡ ಶಿವ ಹರಿ ಅವನನ್ನು ಉಳಿಸಿದ ಬೇರೆಯವರಾಗಿದ್ದರೆ ಪೂರ್ತಿ ಹೆಣ್ಣಿನ ಮಾಯೆಯಲ್ಲಿ ಮುಳುಗಿ ಹೋಗುತ್ತಿದ್ದರು ಹರಿ ಹೇಳಿದ—

ನೇಯಂ ಗುಣಮಯೀ ಮಾಯಾ ನ ತ್ವಾಮಭಿಭವಿಷ್ಯತಿ ॥

'ಶಿವ, ನನ್ನ ಈ ಮಾಯೆ ನಿನ್ನನ್ನು ತತ್ಕಾಲ ಕೆಡಿಸಿದರೂ ಪೂರ್ತಿ ಕೆಡಿಸುವುದಿಲ್ಲ, ಉಳಿಸುತ್ತದೆ'

ಶಿವ ಎಚ್ಚೆತ್ತುಕೊಂಡಾಗ ಋಷಿಮುನಿಗಳೆಲ್ಲರೂ 'ಭಲೆ' ಎಂದು ಕೊಂಡಾಡಿದರು ಆಗ ಶಿವನೆಂದ, 'ಮುನಿಗಳೆ, ನನ್ನನ್ನೇಕೆ ಹೊಗಳುವಿರಿ? ನಾನು ಎಚ್ಚೆತ್ತುಕೊಂಡುದುದು ನನ್ನ ಸಾಮರ್ಥ್ಯವೇನಲ್ಲ ಅದು ಹರಿಯ ಕರುಣೆ ಅವನನ್ನೇ ಕೊಂಡಾಡಿರಿ'

ಹೀಗೆ ದುರ್ಜನರನ್ನು ತನ್ನ ಮಾಯೆಯಿಂದ ಕೆಡಿಸಿ ಪರಮಪುರುಷಾರ್ಥದಿಂದ ವಂಚಿತರನ್ನಾಗಿ ಮಾಡಿ ಸಜ್ಜನರನ್ನು ಮಾತ್ರ ಕೆಡಿಸದೆ ಉಳಿಸುತ್ತಾನೆ ಮೋಕ್ಷಸುಖ ನೀಡುತ್ತಾನೆ ಇದಕ್ಕೆ ಮೋಹಿನಿಯ ವೃತ್ತಾಂತವೆ ಸಾಕ್ಷಿ ಅವಳು ಅಸುರರನ್ನು ಮೋಹದಲ್ಲಿ ಕೆಡವಿ ಅಮೃತಪಾನದಿಂದ ವಂಚಿತರನ್ನಾಗಿ ಮಾಡಿದಳು ದೇವತೆಗಳನ್ನು ಯಥೇಚ್ಛ ಅಮೃತಪಾನ ಮಾಡಿಸಿದಳು ಹರಿಯ ಕರುಣೆ ಅಪಾರ!

**ಪಾಪಕರ್ಮವ ಸಹಿಸುವರೆ ಲ-**
**ಕ್ಷ್ಮೀಪತಿಗೆ ಸಮರಾದ ದಿವಿಜರ-**
**ನೀ ಪಯೋಜಭವಾಂಡದೊಳಗಾವಲ್ಲಿ ನಾ ಕಾಣೆ ।**
**ಗೋಪ ಗುರುವಿನ ಮಡದಿ ಭೃಗು ನಗ-**
**ಚಾಪ ಮೊದಲಾದವರು ಮಾಡ್ದ ಮ-**
**ಹಾಪರಾಧಗಳೆಣಿಸಿದನೆ ಕರುಣಾಸಮುದ್ರ ಹರಿ** ॥ ೧೯ ॥

ಪಾಪಕರ್ಮಗಳನ್ನು ಸಹಿಸಬೇಕೆಂದರೆ ಈ ವಿಷಯದಲ್ಲಿ ಲಕ್ಷ್ಮೀಪತಿಗೆ ಸಮಾನರಾದ ದೇವತೆಗಳನ್ನು ಈ ಬ್ರಹ್ಮಾಂಡದಲ್ಲಿ ನಾನೆಲ್ಲಿಯೂ ಕಾಣೆ ಏಕೆಂದರೆ ಇಂದ್ರ, ತಾರೆ, ಭೃಗು, ಶಿವ ಮೊದಲಾದವರು ಮಹಾಪರಾಧ ಮಾಡಿದರು ಅವುಗಳನ್ನು ಎಣಿಸಿದನೆ, ಕರುಣಾಸಮುದ್ರನಾದ ಹರಿ?

**ಗೋಪನ ಅಪರಾಧ**

ಗೋಶಬ್ದಕ್ಕೆ ಅನೇಕ ಅರ್ಥಗಳಿವೆ ಮೇಲುನೋಟಕ್ಕೆ 'ಗೋ' ಎಂದರೆ ಹಸು ಹಸು-ಗಳನ್ನು ಮೇಸುವ ಅಜ್ಞಮಾನವ ಗೋಪ ಇಂದ್ರ ಕೃಷ್ಣನನ್ನು ಇಂಥ ಒಬ್ಬ ಗೋಪನೆಂದು ತಿಳಿದ ಏಕೆಂದರೆ ಆಗ ಅವನೂ ಅಸುರಾವೇಶಕ್ಕೊಳಗಾಗಿ ಗೋಪನಂತೆ ಆಗಿದ್ದ ವಾಸ್ತವದಲ್ಲಿ ಇಂದ್ರ 'ಗೋ' ಸ್ವರ್ಗದ 'ಪ' ಅಧಿಪತಿ ಮಹಾಜ್ಞಾನಿ ಆದರೂ ಗೋವ-ರ್ಧನೋದ್ಧಾರಕಾಲದಲ್ಲಿ ಅಜ್ಞನಂತೆ ಕೃಷ್ಣನನ್ನು ವಿರೋಧಿಸಿದ ಪಾರಿಜಾತಾಪಹರಣ-

ಕಾಲದಲ್ಲಿ ಅಜ್ಞನಂತೆ ಎಲ್ಲಾ ದೇವತೆಗಳ ಸೈನ್ಯದೊಂದಿಗೆ ಬಂದು ಕೃಷ್ಣನ ಮೇಲೆ ಆಕ್ರಮಣ ಮಾಡಿದ. ಈ ಅಪರಾಧಕ್ಕೆ ಹರಿ ಏನೂ ಶಿಕ್ಷೆ ಮಾಡಲಿಲ್ಲ!

**ಗುರುವಿನ ಮಡದಿಯ ಅಪರಾಧ**

ದೇವಗುರು ಬೃಹಸ್ಪತ್ಯಾಚಾರ್ಯರ ಮಡದಿ ತಾರೆ ಚಂದ್ರನನ್ನು ಸೇರಿ ಬುಧನನ್ನು ಹೆತ್ತಳು. ಚಂದ್ರ ಅವಳಿಗೆ ಶಿಷ್ಯನಂತೆ, ಮಗನಂತೆ. ಆದರೂ ಅವನು ಬಲಾತ್ಕರಿಸಿದಾಗ ವಿರೋಧಿಸಲಿಲ್ಲ. ಇದು ಅಪರಾಧ ಮಾತ್ರವಲ್ಲ. ಪತಿಗಿಂತ ಕಡಿಮೆಯವನಾದ ಪುರುಷನನ್ನು ಸೇರುವುದು ಮಹಾಪರಾಧ. ಹರಿ ಇದಕ್ಕೆ ಶಿಕ್ಷೆ ಮಾಡಲಿಲ್ಲ. ಪ್ರಾತಃಸ್ಮರಣೀಯರಾದ ಪಂಚಕನ್ಯೆಯರಲ್ಲಿ ಒಬ್ಬಳನ್ನಾಗಿ ಮಾಡಿದ!

**ಭೃಗುವಿನ ಅಪರಾಧ**

'ಭೃ' ಚೆನ್ನಾಗಿ, ಬೇಗನೆ 'ಗು' ಹೋಗುವವ 'ಭೃಶಂ ಗಚ್ಛತಿ' ತ್ರಿಮೂರ್ತಿಗಳಲ್ಲಿ ಯಾರು ಶ್ರೇಷ್ಠನೆಂದು ನಿರ್ಣಯಿಸಲು ಹೋಗುವವ ಭೃಗುಮುನಿ. ಹುಟ್ಟುವಾಗ 'ಭೃಕ್' ತಪೋಜ್ವಾಲೆಯಿಂದ ಕೂಡಿಕೊಂಡೇ ಹುಟ್ಟಿದವ, ಅದರಿಂದಲೂ ಭೃಗುವೆನಿಸಿದ. ಆದರೂ ಸಕಲ ತಪಸ್ಸಿಗೂ ಧ್ಯೇಯವೆನಿಸಿದ, ಸರ್ವೋತ್ತಮನಾದ ಹರಿಯನ್ನು ಎದೆಗೆ ಒದ್ದು ಮಹಾಪರಾಧಗೈದ. ಇದಕ್ಕೆ ಹರಿ ಏನು ಶಿಕ್ಷೆ ಮಾಡಿದ? 'ಜರಾ' ಎಂಬ ಬೇಡನಾಗಿ ಹುಟ್ಟುವಂತೆ ಮಾತ್ರ ಮಾಡಿದ. ಬೇಡ ಜನ್ಮದಲ್ಲಿಯೂ ಅವನ ಬಾಣದೇಟನ್ನು ಸಂತೋಷದಿಂದ ಸ್ವೀಕರಿಸಿದ. ಇದು ಆ ಮಹಾಪರಾಧಕ್ಕೆ ಶಿಕ್ಷೆಯೆ? ಕರುಣಾಸಮುದ್ರ ಹರಿ!

**ನಗಚಾಪ ಮಾಡಿದ ಅಪರಾಧ**

ತ್ರಿಪುರಾಸುರರ ಸಂಹಾರಕಾಲದಲ್ಲಿ ಶಿವ ಬ್ರಹ್ಮನನ್ನು ಸಾರಥಿಯಾಗಿ ಮಾಡಿಕೊಂಡು ಮೇರುಪರ್ವತವನ್ನು ಧನುಸ್ಸನ್ನಾಗಿ ಮಾಡಿಕೊಂಡು ವಿಷ್ಣುವನ್ನೇ ಬಾಣವನ್ನಾಗಿ ಮಾಡಿ ಎಸೆದನಂತೆ. ಕೆಲವು ಪುರಾಣಗಳಲ್ಲಿ ಮಂದರ ಪರ್ವತವೆ ಧನುಸ್ಸು. ಇನ್ನು ಕೆಲವು ಪುರಾಣ-ಗಳಲ್ಲಿ ಹಿಮಾಲಯ. ಕಲ್ಪಭೇದದಿಂದ ವಿರೋಧಪರಿಹಾರ. ಶಿವಧನುಸ್ಸು ಬೆಟ್ಟದಷ್ಟು ಭಾರವೂ ಆಗಿತ್ತು. ಜನಕರಾಜನ ಬಳಿ ಇದ್ದ ಶಿವಧನುಸ್ಸನ್ನು ಐದು ಸಾವಿರ ಮಂದಿ ವೀರರು ಕಷ್ಟದಿಂದ ಬಂಡಿಯಲ್ಲಿ ಎಳೆದು ಅತ್ತ ಇತ್ತ ಸಾಗಿಸುತ್ತಿದ್ದರಂತೆ! ಅಂತೂ ಯಾವುದಾದ-ರೊಂದು 'ನಗ' ಎಂದರೆ ಬೆಟ್ಟವೆ ಶಿವನಿಗೆ ಧನುಸ್ಸಾಗಿತ್ತು. ಅದರಿಂದ ಅವನನ್ನು 'ನಗಚಾಪ' ನೆನ್ನಬಹುದು. ಈ ನಗಚಾಪ ಶಿವ ಬಾಣವನ್ನು ಪ್ರಯೋಗಿಸಿದಾಗ ಅದರಲ್ಲಿ ಇದ್ದು ತ್ರಿಪುರರ ಮೂರು ಪಟ್ಟಣಗಳನ್ನು ಸುಟ್ಟಿದ್ದು ವಿಷ್ಣುವೆ. ತ್ರಿಪುರದಹನದ ಕೀರ್ತಿ ಮಾತ್ರ ಶಿವನಿಗೆ. ಇದು ಹರಿಯ ಕರುಣೆಯೇ ಸರಿ. ಆದರೂ ಶಿವ ರಾವಣ, ಬಾಣ ಮುಂತಾದವರ ಪಕ್ಷದಲ್ಲಿ ನಿಂತು ಹರಿಯೊಡನೆ ಕಾದಿದ. ಇದಕ್ಕೆ ಹರಿ ಏನೂ ಶಿಕ್ಷೆ ಮಾಡಲಿಲ್ಲ! ಏಕೆಂದರೆ ಹರಿ ಕರುಣಾಸಮುದ್ರ. ಪಾಪಕರ್ಮ ಸಹಿಸುವುದರಲ್ಲಿ ಅವನಿಗೆ ಸಮಾನರೆ ಇಲ್ಲ.

**ಪಾಪಕರ್ಮ ಸಹಿಸುವುದೆಂದರೇನು?**

ಪಾಪಕರ್ಮವೆಂದರೆ,

ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್ ॥

ಕೋಟಿ ಧರ್ಮಶಾಸ್ತ್ರ ಗ್ರಂಥಗಳು ಹೇಳುವುದನ್ನೆ ಒಂದು ಅರ್ಧಶ್ಲೋಕದಲ್ಲಿ ಹೀಗೆ ಹೇಳಬಹುದು. 'ಪರರಿಗೆ ಉಪಕಾರ ಮಾಡುವುದೆ ಪುಣ್ಯ ಪರರನ್ನು ಪೀಡಿಸುವುದೆ ಪಾಪ' ಹರಿ ಪಾಪಕರ್ಮ ಸಹಿಸುವನೆಂದರೆ ಪರರಿಗೆ ಪೀಡೆ ಉಂಟುಮಾಡುವುದನ್ನು ಸಹಿಸುವನೆ? ಸಹಿಸಿದರೆ ಆತನನ್ನು ಕರುಣಾಸಮುದ್ರನೆನಬಹುದೆ?

ನಿಷಿದ್ಧ ಕರ್ಮ ಮಾಡುವುದು, ವಿಹಿತ ಕರ್ಮ ಮಾಡದಿರುವುದು ಇವೇ ಪಾಪ ಎನ್ನುವುದಾದರೆ 'ಮಾ ಹಿಂಸ್ಯಾತ್ ಸರ್ವಭೂತಾನಿ' 'ಯಾವ ಜೀವಿಯನ್ನೂ ಹಿಂಸಿಸಬಾರದು' ಎಂದು ನಿಷಿದ್ಧವಾದ ಹಿಂಸೆ ಮಹಾಪಾಪ ಅದನ್ನು ಹರಿ ಸಹಿಸುವನೆ? ಸಹಿಸಿದರೆ ಅವನನ್ನು ಕರುಣಿ ಎನ್ನಬಹುದೆ? ಎಲ್ಲಾ ನಿಷಿದ್ಧ ಕರ್ಮಾಚರಣೆಯನ್ನು ಹರಿ ಸಹಿಸುವುದಾದರೆ ನಿಷೇಧಕ್ಕೆ ಏನು ಬೆಲೆ?

ಪಾಪ ಮಾಡಿದ್ದಕ್ಕೆ ಪಶ್ಚಾತ್ತಾಪಪಟ್ಟು 'ಪಾಪೋಽಹಂ ಪಾಪಕರ್ಮಾಹಂ' ಎಂದು ಮುಂತಾಗಿ ಕ್ಷಮಾಯಾಚನೆ ಮಾಡಿದರೆ ಹರಿ ಕ್ಷಮಿಸುತ್ತಾನೆ ಎನ್ನುವುದಾದರೆ ಎಲ್ಲಾ ದೇವತೆಗಳೂ ಹಾಗೇ ಮಾಡುತ್ತಾರೆ ಹರಿಯಲ್ಲಿ ಹೆಚ್ಚುಗಾರಿಕೆ ಏನಿದೆ?

ಹರೌ ರುಷ್ಟೇ ಗುರುಸ್ತ್ರಾತಾ

'ಹರಿ ಕುಪಿತನಾದರೂ ಗುರು ಕ್ಷಮಿಸಿ ರಕ್ಷಿಸುತ್ತಾನೆ!'

ಬೇರೆ ದೇವತೆಗಳೆಲ್ಲ ಗುರುಗಳು ಅದರಿಂದ ಹರಿಗಿಂತ ಬೇರೆ ದೇವತೆಗಳೇ ಹೆಚ್ಚು ಕರುಣಾಳುಗಳೆಂದಾಯಿತು

'ಪಾಪಕರ್ಮ' ಎಂದರೆ 'ಮಹಾಪರಾಧಗಳೆಣಿಸಿದನೆ ಕರುಣಾಳು?' ಎನ್ನುವ ವಿವರಣೆಗನುಸಾರವಾಗಿ, ಅಪರಾಧ ಎಂದರ್ಥ ತಮ್ಮಲ್ಲಿ ಅಪರಾಧ ಮಾಡಿದಾಗ ಬೇರೆ ದೇವತೆಗಳು ಬೇಗನೆ ಮುನಿಯುತ್ತಾರೆ ಹರಿ ಹಾಗಲ್ಲ ಎನ್ನುತ್ತದೆ ಭಾಗವತ—

ಸದ್ಯಃ ಶಾಪಪ್ರಸಾದೋಽಂಗ ಶಿವೋ ಬ್ರಹ್ಮಾ ನಚಾಚ್ಯುತಃ

ಇದು ಈ ಪದ್ಯದ ಭಾವ ಎನ್ನುವುದೂ ಸರಿಯಾಗದು ಏಕೆಂದರೆ ಇಂದ್ರ ಭೃಗು ಶಿವರು ಹರಿಯಲ್ಲಿ ಅಪರಾಧಗೈದಿರುವುದು ನಿಜ ಗುರುವಿನ ಮಡದಿ ತಾರೆ ಏನು ಅಪರಾಧ ಮಾಡಿದಳು? ಚಂದ್ರನನ್ನು ಸೇರುವ ಮೂಲಕ ಪತಿಯಾದ ಬೃಹಸ್ಪತಿಯಲ್ಲಿ ಅಪರಾಧ ಮಾಡಿದರೂ ಹರಿಯಲ್ಲಿ ಏನು ಅಪರಾಧ ಮಾಡಿದಳು? ಹರಿ ಅದನ್ನು ಸಹಿಸುವ ಪ್ರಸಕ್ತಿಯೆ ಇಲ್ಲ ತಾನೆ? ಬೃಹಸ್ಪತಿ ಕ್ಷಮಿಸಿದ್ದಾನೆ ಅವನೇನೂ ಶಿಕ್ಷೆ ಮಾಡಲಿಲ್ಲ ತನ್ನ ಮಡದಿಯ

ಪಾತಿವ್ರತ್ಯಭಂಗವನ್ನು ಅವನು ಕ್ಷಮಿಸಿದುದೇ ಅವನ ಹೆಚ್ಚುಗಾರಿಕೆ ದಾಸರಾಯರು ಹರಿಯನ್ನೇ ಕರುಣಾಸಮುದ್ರನೆಂದು ಹೊಗಳುತ್ತಿದ್ದಾರೆ!

ಈ ಎಲ್ಲಾ ಪ್ರಶ್ನೆಗಳಿಗೆ ಸಮಾಧಾನ ಸಿಗಬೇಕಾದರೆ ಪಾಪವೆಂದರೇನು, ಪುಣ್ಯವೆಂದ-ರೇನು ಸರಿಯಾಗಿ ತಿಳಿಯಬೇಕಾಗುತ್ತದೆ ನಿಷಿದ್ಧ ಕರ್ಮ ಮಾಡುವುದು, ವಿಹಿತ ಕರ್ಮ ಮಾಡದಿರುವುವದು ಇವೇ ಪಾಪಗಳೆನ್ನುವುದು ಸರಿಯೆ ಆದರೆ ವಿಧಿನಿಷೇಧಗಳ ಮರ್ಮ- ವೇನೆಂಬುದನ್ನು ಮೊದಲಿಗೆ ನಿರ್ಧರಿಸಬೇಕು ಶ್ರೀಮದಾಚಾರ್ಯರು ಮಹಾಭಾರತ- ತಾತ್ಪರ್ಯನಿರ್ಣಯದಲ್ಲಿಯೂ ಸದಾಚಾರಸ್ಮೃತಿಯಲ್ಲಿಯೂ ಹೀಗೆ ಹೇಳಿದ್ದಾರೆ

ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ ।
ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥

'ಸದಾ ಹರಿಯನ್ನು ನೆನೆಯಬೇಕು, ಎಂದೂ ಮರೆಯಬಾರದು ಶಾಸ್ತ್ರದ ಎಲ್ಲಾ ವಿಧಿ ನಿಷೇಧಗಳೂ ಈ ಎರಡು ವಿಧಿನಿಷೇಧಗಳಿಗೇ ಅಧೀನವಾಗಿರುತ್ತವೆ' ಉದಾ–ಭೀಮಸೇನ ಕೌರವರನ್ನುಕೊಂದುದು ಹಿಂಸೆಯಾದರೂ ಅದರಿಂದ ದುಷ್ಟರ ನಾಶದ ಮೂಲಕ ಧರ್ಮ-ಸ್ಥಾಪನೆಯಾಯಿತು ಹರಿಸ್ಮರಣೆಗೆ ಅನುಕೂಲವಾಯಿತು ಅದರಿಂದ ಅದು ಪಾಪವಲ್ಲ ಶಾಸ್ತ್ರದ ವಿಧಿನಿಷೇಧಗಳೆಲ್ಲ ಹೀಗೆ ಹರಿಸ್ಮರಣೆವಿಸ್ಮರಣೆಗಳಿಗೆ ದಾರಿಯಾಗುತ್ತಿದ್ದರೆ ಮಾತ್ರ ವಿಧಿನಿಷೇಧಗಳೆನಿಸುತ್ತವೆ ಪುಣ್ಯಪಾಪಗಳೆನಿಸುತ್ತವೆ ಇಂದ್ರಾದಿದೇವತೆಗಳು ಹರಿಯೊಡನೆ ಹೋರಾಡಿದುದು ಹರಿಸ್ಮರಣೆಗೆ ವಿರೋಧಿಯಾದ್ದರಿಂದಲೆ ಪಾಪವೆನಿಸಿತು ತಾರೆ ಪತಿಯಲ್ಲಿ ಹರಿಯನ್ನು ಆರಾಧಿಸದೆ ಚಂದ್ರನ್ನು ಸೇರಿದುದು ಹರಿವಿಸ್ಮರಣೆಗೆ ಕಾರಣವಾದ್ದರಿಂದ ಪಾಪವೆನಿಸಿತು ಇಂಥ ಪಾಪಗಳನ್ನುಕರುಣಾಳುವಾದ ಹರಿ ಸಹಿಸಿಯಾನು ಹರಿಭಕ್ತರಾದ ದೇವತೆಗಳು ಯಾರೂ ಸಹಿಸಲಾರರು ಅದರಿಂದಲೆ ಬ್ರಹ್ಮರುದ್ರರಿಗೆ ಬೇಗನೆ ಸಿಟ್ಟು ಬರು- ತ್ತದೆ ಎನ್ನುತ್ತದೆ ಭಾಗವತ

'ಹರೌ ರುಷ್ಟೇ ಗುರುಸ್ತ್ರಾತಾ' ಎಂದರೆ ಅದರ ಅಭಿಪ್ರಾಯ ಹೀಗಿದೆ ಸಜ್ಜನರು ಹರಿಯನ್ನುಮರೆತರೆ ಹರಿ ಕುಪಿತನಾಗುತ್ತಾನೆ, ಮಕ್ಕಳು ದಾರಿ ತಪ್ಪಿದರೆ ತಂದೆತಾಯಿಗಳು ಕುಪಿತರಾಗುವಂತೆ ಹರಿಭಕ್ತರಾದ, ಜ್ಞಾನಿಗಳಾದ ಗುರುಗಳು ಆಗ 'ಹರಿ, ಈತನನ್ನು ಸರಿದಾರಿಗೆ ತರುತ್ತೇನೆ, ಶಾಂತನಾಗು, ಎನ್ನುತ್ತಾರೆ' ಸರಿದಾರಿಗೆ ತರುತ್ತಾರೆ, ಆ ಮೂಲಕ ರಕ್ಷಿಸುತ್ತಾರೆ ಅವರ ಯತ್ನ ಫಲಿಸದಿದ್ದರೆ ಅವರು ತಾವೂ ಕುಪಿತರಾಗುತ್ತಾರೆ ಆಗ ಹರಿಯೂ ಕ್ಷಮಿಸುವುದಿಲ್ಲ, ಗುರೌ ರುಷ್ಟೇ ನ ಕಶ್ಚನ!

ಪಾಪಕರ್ಮವನ್ನು ಸಹಿಸುವುದರಲ್ಲಿ ಬೇರೆ ದೇವತೆಗಳೇನು ಕಡಿಮೆಯವರಲ್ಲ ಉದಾ–ಅಘಾದ್ರಿಸಂಭೇದನದೃಷ್ಟಿವಜ್ರಃ ರಾಘವೇಂದ್ರರ ದೃಷ್ಟಿ ಎಂಬ ವಜ್ರಾಯುಧ ಪಾಪದ ಬೆಟ್ಟವನ್ನು ಸೀಳಬಲ್ಲುದು

ಗಂಗಾ ಗಂಗೇತಿ ಯೋ ಬ್ರೂಯಾದ್ ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥

'ಗಂಗೆ, ಗಂಗೆ ಎಂದು ನೂರಾರು ಯೋಜನಗಳಾಚೆ ನಿಂತು ಕೂಗಿದರೂ ಸಾಕು ಸಕಲ-ಪಾಪಪರಿಹಾರ, ವಿಷ್ಣುಲೋಕಪ್ರಾಪ್ತಿ'

ತಥಾಪಿ ಭವತಃ ಪದಂ ಶಿವ ಶಿವೇತ್ಯದೋ ಜಲ್ಪತಾಂ
ಅಕಿಂಚನ ನ ಕಿಂಚನ ವೃಜಿನಮನ್ಯಭಸ್ಮೀಭವತ್ ॥

ಶಿವ ಶಿವ ಎಂದು ಜಪಿಸುವವರಿಗೆ ಸುಡದ ಪಾಪ ಒಂದೂ ಇಲ್ಲ

ಹರಿಯ ನಾಮಕೆ ಹರಿಯದ ಪಾಪ ಧರೆಯೊಳಗಿಲ್ಲವೆಂಬೋದು ಖರೆ ಎನ್ನುವುದು ಹರಿಯ ಹೆಚ್ಚುಗಾರಿಕೆ ಏನಲ್ಲ!

ಈ ಪ್ರಶ್ನೆಗೆ ಸಮಾಧಾನ ಸುಲಭ ದೇವತೆಗಳನ್ನು ಹರಿಯ ಪರಿವಾರದವರೆಂದು ನೆನೆದರೆ ಮಾತ್ರ ಪಾಪಪರಿಹಾರ ಅರ್ಥಾತ್ ಹರಿಸ್ಮರಣೆಯಿಂದಲೇ ಪಾಪಪರಿಹಾರ-ವೆಂದಂತಾಯಿತು!

ದೇವತಾಸ್ಮರಣದಿಂದ ಸಂಚಿತ ಮಾತ್ರ ನಾಶವಾದೀತು ಪ್ರಾರಬ್ಧ ಆಗಾಮಿಗಳು ಹಾಗೇ ಉಳಿಯುವುವು ಹರಿಸ್ಮರಣದಿಂದ ಅಪರೋಕ್ಷಜ್ಞಾನಿಗೆ ಸಂಚಿತ ನಾಶದ ಜೊತೆಗೆ ಆಗಾಮಿಯ ಲೇಪವಿಲ್ಲದಂತೆಯೂ ಆಗುವುದು ಪ್ರಾರಬ್ಧವೂ ಅಲ್ಪವಾಗಿದ್ದರೆ ಪೂರ್ತಿ-ನಾಶವಾಗುವುದು ಮಹತ್ತಾಗಿದ್ದರೆ ಕಡಿಮೆಯಾಗುವುದು, ಅಂದರೆ ಅದರ ಶಕ್ತಿಹ್ರಾಸ-ವಾಗುವುದು

ಹಾಗಾದರೆ ಇಂದ್ರ ಬ್ರಹ್ಮಹತ್ಯಾಪಾಪದಿಂದ ಏಕೆ ಬಳಲಿದ? ಅವನು ಜ್ಞಾನಿ ಬ್ರಹ್ಮಹತ್ಯೆ ಲೇಪವಾಗಬಾರದು ತಾನೆ? ಎಂದರೆ, ಲೇಪವಾಗಲೆ ಇಲ್ಲವೆಂದು ಉತ್ತರ ಪ್ರಾರಬ್ಧದ ಫಲವಾಗಿ ದುಃಖ ಅನುಭವಿಸುವ ಕಾಲ ಬಂದಾಗ ಅದಕ್ಕೆ ಮುನ್ಸೂಚನೆಯಾಗಿ ಜ್ಞಾನಿಯಿಂದ ಪಾಪಕರ್ಮ ಘಟಿಸುತ್ತದೆ ಪ್ರಯಾಣಕ್ಕೆ ಹೊರಟಾಗ ಬೆಕ್ಕು ಅಡ್ಡ ಬಂದರೆ ಅದು ಮುಂದೆ ಆಗಲಿರುವ ಕಾರ್ಯವಿಘ್ನಕ್ಕೆ ಮುನ್ಸೂಚನೆ ಕಾರ್ಯ ಕೆಡಲು ಬೆಕ್ಕು ಕಾರಣವಲ್ಲ ಹಾಗೇ ದುಃಸ್ವಪ್ನದರ್ಶನ, ಶಕುನಗಳು, ಜಾತಕದಲ್ಲಿ ಗ್ರಹಗಳ ಸ್ಥಿತಿ ಎಲ್ಲವೂ ಪ್ರಾರಬ್ಧಸೂಚಕಗಳೇ ಹೊರತು ದುಃಖಕ್ಕೆ ಕಾರಣಗಳಲ್ಲ ಪ್ರಾಯಶ್ಚಿತ್ತ ಹರಿಸ್ಮರಣೆಗಳಿಂದ ಪ್ರಾರಬ್ಧವನ್ನು ಕಡಿಮೆಮಾಡಿಕೊಳ್ಳಲು ಈ ಮುನ್ಸೂಚನೆಗಳು! ಹೀಗೆ ನಾನಾರೀತಿಯಿಂದ ಹರಿ ಪಾಪ- ಕರ್ಮ ಸಹಿಸುತ್ತಾನೆ ಇನ್ನಾವ ದೇವತೆಗಳೂ ಇಂಥ ಸಾಮರ್ಥ್ಯ ಉಳ್ಳವರಲ್ಲ ಅದರಿಂದ 'ಈ ಪಯೋಜಭವಾಂಡದೊಳಗಾವಲ್ಲಿನಾ ಕಾಣೆ' ಎನ್ನುತ್ತಾರೆ ದಾಸರಾಯರು

**ಅಂಗುಟಾಗ್ರದಿ ಜನಿಸಿದಮರತ-**
**ರಂಗಿಣಿಯು ಲೋಕತ್ರಯಗಳಘ**

**ಹಿಂಗಿಸುವಳವ್ಯಾಕೃತಾಕಾಶಾಂತ ವ್ಯಾಪಿಸಿದ ।**
**ಇಂಗಡಲ ಮಗಳೊಡೆಯನಂಗೋ-**
**ಪಾಂಗಗಳಲಿಪ್ಪಮಲನಂತ ಸು-**
**ಮಂಗಳಪ್ರದ ನಾಮ ಪಾವನ ಮಾಳ್ಪುದೇನರಿದು? ॥ ೨೦ ॥**

ಶ್ರೀಹರಿಯ ಪಾದಾಂಗುಷ್ಠದ ತುದಿಯಲ್ಲಿ ಜನಿಸಿದ ದೇವನದಿ ಗಂಗೆಯೆ ಮೂಲೋಕ- ಗಳ ಪಾಪ ಕಳೆವಳು ಎಂದ ಮೇಲೆ ಲಕ್ಷ್ಮೀಪತಿಯ ಅಂಗೋಪಾಂಗಗಳಲ್ಲಿ ಇರುವ ನಿರ್ಮಲವಾದ ಅನಂತಸುಮಂಗಲದಾಯಕ ನಾಮ ಪಾವನ ಮಾಡುವುದು ಏನಾಶ್ಚರ್ಯ?

***ಅಮರ ತರಂಗಿಣಿ***

ಶ್ರೀಹರಿ ವಾಮನಾವತಾರದಲ್ಲಿ ಬಲಿಚಕ್ರವರ್ತಿಯಿಂದ ಮೂರು ಹೆಜ್ಜೆ ಭೂಮಿ ಬೇಡಿ ಅಳೆಯುವುದಕ್ಕಾಗಿ ಎಡಗಾಲು ಮೇಲೆತ್ತಿದ ಆಗ ಅಂಗುಷ್ಠದ ಉಗುರಿನ ತುದಿ ಬ್ರಹ್ಮಾಂಡಕಟಾಹಕ್ಕೆ ತಗುಲಿ ಬಿರುಕು ಬಿಟ್ಟಿತು ಹೊರಗಿನ ಜಲಾವರಣದ ಶುದ್ಧಜಲ ಒಳಗೆ ಸುರಿಯಿತು ಬ್ರಹ್ಮದೇವ ಅದನ್ನು ಕಮಂಡಲುವಿನಲ್ಲಿ ಸಂಗ್ರಹಿಸಿ ಅದರಿಂದಲೆ ಆ ವಿಷ್ಣುಪಾದವನ್ನು ತೊಳೆದ ಆ ನೀರು ಗಂಗೆಯಾಯಿತು ಅಂಗುಟಾಗ್ರದಿ ಜನಿಸಿದಳು ಗಂಗೆ, ದೇವನದಿ ಎನಿಸಿದಳು

ಬಹುಸಾವಿರ ಯುಗಗಳ ಬಳಿಕ ಗಂಗೆ ಶಿಂಶುಮಾರಲೋಕಕ್ಕೆ ಹರಿದಳು ಅಲ್ಲಿ ಭಕ್ತ ಧ್ರುವರಾಜ ಕುಲದೇವತೆಯ ಪಾದೋದಕವೆಂದು ಆ ಜಲವನ್ನು ತಲೆಯಲ್ಲಿ ಧರಿಸಿದ ಅಲ್ಲಿಂದ ನದಿ ಸಪ್ತರ್ಷಿಗಳ ಲೋಕಕ್ಕೆ ಹರಿಯಿತು ಸಪ್ತಋಷಿಗಳೂ ಆ ನೀರನ್ನು ತಲೆಯಲ್ಲಿ ಧರಿಸಿದರು ಮುಂದೆ ದೇವಯಾನಮಾರ್ಗವಾಗಿ ಗಂಗೆ ಹರಿದು ಚಂದ್ರಮಂಡಲವನ್ನು ತಲುಪಿದಳು ಅಲ್ಲಿ ಸೂರ್ಯನ ಕಿರಣಗಳಿಂದ ಇನ್ನಷ್ಟು ಶುದ್ಧಿಯನ್ನು ಪಡೆದು ಮೇರು-ಶಿಖರದ ಮೇಲೂ ಹರಿದಳು ಅಲ್ಲಿಂದ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ದಿಕ್ಕುಗಳಿಗೆ ಕ್ರಮವಾಗಿ ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂಬ ಹೆಸರುಗಳಿಂದ ನಾಲ್ಕು ಭಾಗಗಳಾಗಿ ಕೆಳಗೆ ಇಳಿದು ನಾಲ್ಕು ಸಮುದ್ರಗಳ ಕಡೆಗೆ ಹರಿದಳು ದಕ್ಷಿಣಕ್ಕೆ ಹರಿಯ ತೊಡಗಿದ ಅಲಕನಂದೆ ಗಂಧಮಾದನ ಪರ್ವತದ ಮಾರ್ಗವಾಗಿ ಮಾನಸಸರೋವರವನ್ನು ಸೇರಿ ತ್ರಿಶಿಖರ ಪರ್ವತವನ್ನೂ ತೋಯಿಸಿ ಹಿಮಾಲಯವನ್ನು ತಲುಪಿದಳು ಅಲ್ಲಿ ಮೇರುವಿನ ಮಗಳಾದ ಮನೋರಮೆಯಲ್ಲಿ ಹಿಮಾಲಯನಿಂದ ಪುನರ್ಜನ್ಮ ಪಡೆದು ಹಿಮಾದ್ರಿಪುತ್ರಿ ಗಿರಿಸುತೆ ಪಾರ್ವತಿ ಎಂದೆಲ್ಲ ಕರೆಸಿಕೊಂಡಳು ಆದರೆ ಆಗ ದೇವತೆಗಳು ಬಂದು ಅವಳನ್ನು ತಮ್ಮ ಲೋಕಕ್ಕೇ ಬರಮಾಡಿಕೊಂಡರು ಅಮರತರಂಗಿಣಿ ಅಮರಲೋಕಕ್ಕೇ ಹಿಂತಿರುಗಿದಳು

***ಲೋಕತ್ರಯಗಳಘ ಹಿಂಗಿಸುವಳು***

ಮುಂದೆ ಸಗರಪುತ್ರರು ಕಪಿಲಮುನಿಯ ಕ್ರೋಧದ ನೇತ್ರಾಗ್ನಿಯಲ್ಲಿ ಉರಿದು ಬೂದಿಯಾದಾಗ ಅವರ ವಂಶದಲ್ಲಿ ಬಂದ ಭಗೀರಥ ಗಂಗೆಯನ್ನು ಭೂಮಿಗೆ ಇಳಿಸಿದ. ಅವಳು ಹರನ ಶಿರದ ಮೇಲೆ ಇಳಿದು ಅಲ್ಲಿಂದ ಸಾಗರವನ್ನು ನೇರಿ ಸಮುದ್ರರಾಜನ ಮಡದಿ ಎನಿಸಿದಳು. ಅಲ್ಲಿಂದ ಮುಂದೆ ಪಾತಾಳಕ್ಕೂ ಇಳಿದು ಅರವತ್ತು ಸಾವಿರ ಮಂದಿ ಸಗರ ಪುತ್ರರ ಬೂದಿಯ ಮೇಲೆ ಹರಿದು ಅವರಿಗೆ ಸದ್ಗತಿ ನೀಡಿದಳು.

ಭಗೀರಥನ ಯತ್ನದಿಂದ ಗಂಗೆ ದೇವಲೋಕದಿಂದ ಭೂಮಿಗೆ ಇಳಿದು ಪಾತಾಳದಲ್ಲಿಯೂ ಹರಿದು ತ್ರಿಪಥಗಾ ಎನಿಸಿದಳು. ದೇವಲೋಕದಲ್ಲಿ ಮಂದಾಕಿನೀ, ಭೂಲೋಕದಲ್ಲಿ ಭಾಗೀರಥೀ, ಪಾತಾಳದಲ್ಲಿ ಭೋಗವತೀ ಎಂಬ ಹೆಸರಿನಿಂದ ತ್ರಿಲೋಕಪಾವನೆ ಎನಿಸಿದಳು.

ಜ್ಯೇಷ್ಠಶುದ್ಧ ದಶಮಿ ದಶಹರಾ. ಅಂದು ಗಂಗೆಯನ್ನು ಪೂಜಿಸಿದರೆ ಹತ್ತು ಜನ್ಮಗಳ ಹತ್ತು ಬಗೆಯ ಪಾಪಪರಿಹಾರ. ಕಠಿನ ಮಾತು, ಸುಳ್ಳು, ಚಾಡಿ ಮಾತು, ಅಸಂಬದ್ಧ ಪ್ರಲಾಪಗಳು ಇವು ನಾಲ್ಕು ವಾಚಿಕ ಪಾಪಗಳು. ಪರದ್ರವ್ಯಾಪಹಾರ, ಹಿಂಸೆ, ಪರಸ್ತ್ರೀಸಂಗ ಇವು ಮೂರು ಕಾಯಿಕ ಪಾಪಗಳು. ಪರದ್ರವ್ಯದ ಬಯಕೆ, ಪರರಿಗೆ ಕೇಡೆಣಿಸುವುದು, ಅಲಭ್ಯ ವಸ್ತುಗಳನ್ನು ಪಡೆಯಲು ತಡೆಯಲಾಗದಂಥ ಬಯಕೆ ಇವು ಮೂರು ಮಾನಸ ಪಾಪಗಳು. ಈ ಹತ್ತು ಬಗೆಯ ಪಾಪಗಳನ್ನೂ ಕಳೆಯುವುದರಿಂದ ಗಂಗೆ 'ಗಂಗೆ' ಎನಿಸಿದಳು. 'ಗಮಯತಿ ನಿರ್ಗಮಯತಿ ಪಾಪಂ' ಎನ್ನುತ್ತದೆ ಆ ಹೆಸರು. 'ಪುಣ್ಯಾ' ಎಂಬುದು ಗಂಗೆಗೆ ಇನ್ನೊಂದು ಹೆಸರು. ಅಧ್ಯಾತ್ಮದಲ್ಲಿ ಶರೀರದ ಇಡಾನಾಡಿ ಪ್ರಧಾನವಾದ ಹನ್ನೆರಡು ನಾಡಿಗಳಲ್ಲಿ ಒಂದು. ಅದರಲ್ಲಿ ಗಂಗೆ ಹರಿಯುತ್ತಾಳೆ. ಇದರ ಅನುಸಂಧಾನದಿಂದ ಗಂಗಾಸ್ನಾನದ ಫಲ ಸಿಗುತ್ತದೆ.

ಸ್ಕಾಂದ ಪುರಾಣ ಕಾಶೀಖಂಡದಲ್ಲಿ ಗಂಗೆಯ ಪಾವಿತ್ರ್ಯವನ್ನು ಹೀಗೆ ಬಣ್ಣಿಸಲಾಗಿದೆ —'ಪುಣ್ಯತೀರ್ಥ ಸರೋವರ ನದಿಗಳು ಲೋಕದಲ್ಲಿ ಬಹಳ ಇವೆ. ಆದರೆ ಗಂಗಾನದಿಯ ಒಂದು ಕೋಟಿಯ ಅಂಶವೂ ಅವುಗಳಲ್ಲಿ ಇಲ್ಲ. ದೇವದೇವನಾದ ಶಿವ ಗಂಗೆಯನ್ನು ತಲೆಯ ಮೇಲೆ ಹೊತ್ತನೆಂದರೆ ಅವಳು ಎಷ್ಟು ಪವಿತ್ರಳು! ವಿಷ್ಣುಪಾದೋದ್ಭವೆಯಾದ ಈ ಗಂಗೆಯನ್ನು ಬಿಟ್ಟರೆ ಪಾಪಪರಿಹಾರ ಮಾಡಬಲ್ಲ ಇನ್ನೊಂದು ವಸ್ತು ಎಲ್ಲಿ? ಗಂಗಾಸ್ನಾನದ ಫಲ ಗಂಗೆಯಲ್ಲಿಯೇ, ಇನ್ನೆಲ್ಲೂ ಸಿಗದು. ದ್ರಾಕ್ಷಿಯ ಸಿಹಿ ದ್ರಾಕ್ಷಿಯಲ್ಲಿಯೆ ಹೊರತು ಬೇರೆ ಎಲ್ಲಿಯೂ ಸಿಗದು ತಾನೆ!'

ಭಾಗವತದಲ್ಲಿ ಹೀಗೆ ಹೇಳಿದೆ—'ದಿಗಂಬರನಾಗಿ ಭಸ್ಮ ಸರ್ಪ ರುಂಡಮಾಲೆ ಕಪಾಲಗಳನ್ನು ಧರಿಸಿ ಪ್ರೇತಗಣಗಳೊಂದಿಗೆ ಸ್ಮಶಾನದಲ್ಲಿ ತಿರುಗುತ್ತ ಅಮಂಗಲವೇಷ ಆಚಾರ-

ಗಳಿಂದ 'ಅಶಿವ'ನಾಗಿದ್ದ ಶಿವ 'ಶಿವ'ನೆನಿಸಿದುದು ಪರಮಮಂಗಳಕರವಾದ ಹರಿಪಾದೋ-ದಕವನ್ನು ಶಿರದಲ್ಲಿ ಧರಿಸಿದ್ದರಿಂದ'

ಮಹಾಭಾರತದಲ್ಲಿಯೂ ಹೇಳಿದೆ—

ನ ಗಂಗಾಸದೃಶಂ ತೀರ್ಥಂ ನ ದೇವಃ ಕೇಶವಾತ್ ಪರಃ

'ಗಂಗೆಗೆ ಸದೃಶವಾದ ತೀರ್ಥವಿಲ್ಲ, ಕೇಶವನಿಗಿಂತ ಬೇರೆ ದೈವವಿಲ್ಲ'

ಶ್ರೀಮದಾಚಾರ್ಯರೂ ಸುಮಧ್ವವಿಜಯದಲ್ಲಿ ಹೇಳಿದ್ದಾರೆ—

ನೇದೃಶಂ ಸ್ಥಲಮಲಂ ಶಮಲಘ್ನಂ ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ

'ಬದರಿಯಂಥ ಪಾಪಹರಕ್ಷೇತ್ರ ಇನ್ನಿಲ್ಲ, ಗಂಗೆಯಂಥ ಪವಿತ್ರ ತೀರ್ಥ ಇನ್ನೊಂದಿಲ್ಲ'

***ಸುಮಂಗಳಪ್ರದನಾಮ ಅವ್ಯಾಕೃತಾಕಾಶಾಂತವ್ಯಾಪಿ***

ಸುಮುಖ, ಶುಭಾಂಗ ಸ್ವಂಗ ಹೇಮಾಂಗ ಸುವರ್ಣವರ್ಣ ಪುಂಡರೀಕಾಕ್ಷ ಪದ್ಮ-ನಿಭೇಕ್ಷಣ ಪದ್ಮನಾಭ ವರಾಂಗ ಸ್ವಾಂಗ ಪುಷ್ಕರಾಕ್ಷ ಲೋಹಿತಾಕ್ಷ ಇತ್ಯಾದಿ ವಿಷ್ಣುಸಹಸ್ರ-ನಾಮಗಳು

ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್

ಎಂದು ಶ್ರುತಿ ಹೇಳುವಂತೆ ವಿಷ್ಣು ಎಲ್ಲೆಲ್ಲಿ ವ್ಯಾಪಿಸಿದ್ದಾನೋ ಅಲ್ಲೆಲ್ಲ ಅವನ ನಾಮಗಳೂ ವ್ಯಾಪಿಸಿವೆ ವಿಷ್ಣುವಿಗೆ ಎಷ್ಟೆಷ್ಟು ರೂಪಗಳಿವೆಯೋ ಅಷ್ಟು ರೂಪಗಳಿಗೂ ವಾಚಕನಾಮ-ಗಳಿವೆ ಹೀಗೆ ಹರಿನಾಮಗಳು ಅವನ ರೂಪಗಳ ಜೊತೆಗೇ ಇರುವುದರಿಂದ ಅವು ಅನಂತವಾಗಿದ್ದರೂ 'ಸಹಸ್ರ'ವೆನಿಸಿವೆ 'ರೂಪೈಃ ಸಹೈವ ಸರತೀತಿ ಸಹಸ್ರಂ' ಹಾಗೆ ಹರಿ-ರೂಪಗಳೂ ಅವನ ನಾಮಗಳ ಜೊತೆಗೇ ಇರುವುದರಿಂದ ಅವು ಅನಂತವಾಗಿದ್ದರೂ 'ಸಹಸ್ರ'ವೆನಿಸಿವೆ 'ನಾಮ್ನಾ ಸಹ ಸೃತೇರೇವ ರೂಪಾಣಾಂ ವಾ ಸಹಸ್ರತಾ' ಎಂದು ಐತ-ರೇಯಭಾಷ್ಯದಲ್ಲಿ ಹೇಳಿದೆ ಹೀಗೆ ಸಹಸ್ರನಾಮಗಳು ಸಹಸ್ರರೂಪಗಳಲ್ಲಿ ಅಂದರೆ ಅಂಗೋಪಾಂಗಗಳಲ್ಲಿ ಇವೆ ಏಕೆಂದರೆ ಹರಿಯ ಅಂಗೋಪಾಂಗಗಳೆಲ್ಲವೂ ಪ್ರತ್ಯೇಕ ರೂಪಗಳೇ ಅವೆಲ್ಲ ಒಟ್ಟುಸೇರಿಯೂ ಬೇರೆ ಬೇರೆ ರೂಪಗಳಾಗುತ್ತವೆ, ಪಂಚ- ನಾರೀ-ತುರಗದಂತೆ, ಅಥವಾ ನವನಾರೀಕುಂಜರದಂತೆ

ಹರಿಯ ಅಂಗೋಪಾಂಗಗಳು 'ಅವ್ಯಾಕೃತಾಕಾಶಾಂತ' ವ್ಯಾಪಿಸಿವೆ ಅವ್ಯಾಕೃತಾಕಾಶ ಅಂತವಿಲ್ಲದ್ದು, ಅನಂತ ಆದರೂ ಅದರ ಅಂತ್ಯದವರೆಗೂ ವ್ಯಾಪಿಸಿವೆ ಹರಿಯ ಅಂಗಗಳು ಎನ್ನುತ್ತಾರೆ ದಾಸರಾಯರು ಏಕೆಂದರೆ ಹರಿ ಅಚಿಂತ್ಯ ಶಕ್ತಿಯಿಂದ 'ಮಹತೋ ಮಹೀ-ಯಾನ್' ಮಹತ್ತಾದ ಅವ್ಯಾಕೃತಾಕಾಶಕ್ಕಿಂತಲೂ ಮಹತ್ತಾಗಿದ್ದಾನೆ

**ಇಂಗಡಲ ಮಗಳೊಡೆಯ**

'ಇಂಗಡಲು' ಎಂದರೆ ಇನಿದಾದ ಇಂಪಾದ ಮಧುರವಾದ ಹಾಲಿನ ಕಡಲು, ಕ್ಷೀರ ಸಮುದ್ರ ಅದರಲ್ಲಿ ಉದಿಸಿದ ಲಕ್ಷ್ಮಿ ಕ್ಷೀರಸಮುದ್ರಕನ್ನಿಕೆ ಅವಳ ಒಡೆಯ ಶ್ರೀಹರಿ ಇಂಗಡಲ ಮಗಳೂ ಅವ್ಯಾಕೃತಾಕಾಶಕ್ಕೆ ಅಭಿಮಾನಿನಿಯಾಗಿದ್ದು ಅವ್ಯಾಕೃತಾಕಾಶಾಂತ ವ್ಯಾಪಿಸಿದವಳು ಹರಿಗೆ ದೇಶಕಾಲಗಳಲ್ಲಿ ಅವಳು ಸಮವ್ಯಾಪ್ತಿ ಉಳ್ಳವಳು, 'ಸಮನಾ' ಎನಿಸಿದವಳು ಅವಳೇ ಅವ್ಯಾಕೃತಾಕಾಶಾಂತ ವ್ಯಾಪಿಸಿದ ಹರಿಯ ಅಂಗೋಪಾಂಗಗಳಲ್ಲಿರುವ ನಾಮಗಳಿಗೂ ಅಭಿಮಾನಿನಿ ಅದರಿಂದ ಆ ನಾಮಗಳು ಅನಂತ ಸುಮಂಗಲಪ್ರದವೆನಿಸಿವೆ ಮಂಗಳ ದೇವತೆಯಾದ ಲಕ್ಷ್ಮಿ ಅಭಿಮಾನಿನಿ 'ಮಂಗಲಾನಾಂ ಚ ಮಂಗಲಮ್' ಎನಿಸಿದ ಹರಿಯ ಅಂಗೋಪಾಂಗಗಳು ವಾಚ್ಯಗಳೆಂದ ಮೇಲೆ ನಾಮಗಳು ಅನಂತ ಸುಮಂಗಲಪ್ರದಗಳೆನ್ನುವುದನ್ನು ಬೇರೆ ಹೇಳಬೇಕಾಗಿಲ್ಲ

**ಪಾವನ ಮಾಳ್ಪುದೇನರಿದು?**

ಹರಿಯ ಪಾದಾಂಗುಷ್ಠನಖದ ತುದಿಯಿಂದ ಅಂಡ- ಕಟಾಹ ಬಿರುಕು ಬಿಟ್ಟಾಗ ಒಳಗೆ ಹರಿದು ಬಂದ ನೀರು ಆ ನಖಾಗ್ರವನ್ನು ಮಾತ್ರ ಸ್ಪರ್ಶಿಸಿ ತಕ್ಷಣವೆ ಈಚೆಗೆ ಬಂದಿತ್ತು ಎಲ್ಲ ಅಂಗೋಪಾಂಗಗಳ ಸ್ಪರ್ಶ ಆ ನೀರಿಗೆ ಆಗಿರಲಿಲ್ಲ ಆ ಸ್ಪರ್ಶವೂ ಸಾರ್ವಕಾಲಿಕವಲ್ಲ ಆದೂ ಆ ನೀರು 'ಗಂಗೆ' ಎನಿಸಿ ಮೂಲೋಕದ ಪಾಪಗಳನ್ನು ತೊಳೆಯುವಳು ಹರಿನಾಮ ಹರಿಯ ಎಲ್ಲಾ ಅಂಗೋಪಾಂಗಗಳಲ್ಲಿ ಇದ್ದು ವಾಚಕವಾಗಿವೆ ಮತ್ತು ಈ ವಾಚ್ಯವಾಚಕಭಾವ ಸಂಬಂಧ ಸಾರ್ವಕಾಲಿಕವಾಗಿದೆ ಎಂದ ಮೇಲೆ ಗಂಗೆಗಿಂತ ಹರಿನಾಮ ಎಷ್ಟೋ ಉತ್ತಮವಾದ್ದರಿಂದ ಮೂಲೋಕದ ಪಾಪಗಳನ್ನು ತೊಡೆಯುವುದರಲ್ಲಿ ಏನಾಶ್ಚರ್ಯ?

**ಕಾಮಧೇನು ಸುಕಲ್ಪತರು ಚಿಂ-**
**ತಾಮಣಿಗಳಮರೇಂದ್ರ ಲೋಕದಿ**
**ಕಾಮಿತಾರ್ಥಗಳೀವವಲ್ಲದೆ ಸೇವೆ ಮಾಳ್ಪರಿಗೆ ।**
**ಶ್ರೀಮುಕುಂದನ ಪರಮ ಮಂಗಳ-**
**ನಾಮ ನರಕಸ್ಥರನು ಸಲಹಿತು**
**ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು ॥ ೨೧ ॥**

ಕಾಮಧೇನು ಕಲ್ಪವೃಕ್ಷ ಚಿಂತಾಮಣಿಗಳು ದೇವಲೋಕದಲ್ಲಿ ಬಯಸಿದ್ದನ್ನೆಲ್ಲ ನೀಡಬಲ್ಲುವು ಆದರೆ ಸೇವೆ ಮಾಡುವವರಿಗೆ ಶ್ರೀಮುಕುಂದನ ಪರಮ ಮಂಗಳನಾಮ, ಅವರು ನರಕದಲ್ಲಿದ್ದರೂ ಸರಿಯೆ, ಸಲಹಿತು ಅದು ಅಜ್ಞಾನಿಗಳನ್ನು ಜ್ಞಾನಿಗಳನ್ನಾಗಿ ಮಾಡಿ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುತ್ತಿದೆ

**ಕಾಮಧೇನು**

ಕ್ಷೀರಸಮುದ್ರಮಥನಕಾಲದಲ್ಲಿ ಉದ್ಭವಿಸಿದ ಹದಿನಾಲ್ಕು ರತ್ನಗಳಲ್ಲಿ ಒಂದು ದೇವಲೋಕದ ಹಸು ಸುರಭಿ ಎಂಬ ಕಾಮಧೇನು ಗೋವರ್ಧನಗಿರಿಧಾರಿ ಶ್ರೀಕೃಷ್ಣನಿಗೆ ಗೋಮಾತೆ ಸುರಭಿ ಕ್ಷೀರಾಭಿಷೇಕಗೈದಳು

ವಸಿಷ್ಠರ ನಂದಿನಿ ಹಸುವೂ ಕಾಮಧೇನು ವಿಶ್ವಾಮಿತ್ರಮುನಿ ಮೊದಲಿಗೆ ರಾಜನಾಗಿದ್ದಾಗ ವಸಿಷ್ಠರ ಆಶ್ರಮಕ್ಕೆ ಒಮ್ಮೆ ಬಂದಿದ್ದ ಆಗ ಈ ನಂದಿನಿ ಹಸುವಿನ ಸಹಾಯದಿಂದಲೇ ರಾಜಯೋಗ್ಯ ಸತ್ಕಾರ ನೀಡಿದ್ದರು ವಸಿಷ್ಠರು ರಾಜ ಹಸುವನ್ನು ಕಟ್ಟಿ ಒಯ್ಯಲು ಯತ್ನಿಸಿ ಸೋತು ತಪಸ್ಸು ಮಾಡಿ ಬ್ರಹ್ಮರ್ಷಿಯಾದ ಅಷ್ಟವಸುಗಳೂ ಈ ಹಸುವನ್ನು ಅಪಹರಿಸಲು ಯತ್ನಿಸಿ ಶಾಪಗ್ರಸ್ತರಾದರು ಭೀಷ್ಮನ ಜನನ ಈ ಹಿನ್ನೆಲೆಯಲ್ಲಿ ನಡೆಯಿತು

ಜಮದಗ್ನಿ ಮುನಿಯ ಕಪಿಲೆಯೂ ಕಾಮಧೇನು ಅವಳನ್ನು ಶ್ರೀಹರಿ ಬ್ರಹ್ಮನಿಗಿತ್ತ ಬ್ರಹ್ಮ ಭೃಗುಮುನಿಗೆ ಭೃಗುಮುನಿ ಜಮದಗ್ನಿಗೆ ಇತ್ತ ರಾಜಾ ಕಾರ್ತವೀರ್ಯಾರ್ಜುನ ಅವನ ಆಶ್ರಮಕ್ಕೆ ಬಂದಾಗ ಕಾಮಧೇನು ಹಸು ಅವನಿಗೆ ರಾಜಯೋಗ್ಯ ಸತ್ಕಾರವಿತ್ತಳು ಅದರಿಂದ ರಾಜ ಸೈನ್ಯಸಹಾಯದಿಂದ ಹಸುವನ್ನು ಕಟ್ಟಿ ಒಯ್ಯಲು ಪ್ರಯತ್ನಿಸಿದ ಹಸು ಸೈನ್ಯವನ್ನು ಧ್ವಂಸಮಾಡಿ ಅಂತರಿಕ್ಷದಲ್ಲಿ ಹಾರಿಹೋಯಿತು ರಾಜ ಕೋಪದಿಂದ ಜಮದಗ್ನಿಯನ್ನು ಕೊಂದ ಪರಶುರಾಮನ ಕೋಪಕ್ಕೆ ತುತ್ತಾಗಿ ಹತನಾದ

**ಕಲ್ಪವೃಕ್ಷ**

ಹರಿವಂಶದಲ್ಲಿ ಹೇಳಿದಂತೆ ದೇವಲೋಕದ ಪಾರಿಜಾತ ವೃಕ್ಷದ ದರ್ಶನಮಾತ್ರದಿಂದ ವೃದ್ಧರಿಗೆ ನವಯೌವನ ಬಳಿಗೆ ಬಂದರೆ ದಿವ್ಯವಾದ ಮಧುರ ಸಂಗೀತಧ್ವನಿ ಕೇಳಿಬರುತ್ತದೆ ಬಯಸಿದ ಸುಗಂಧದ ಅನುಭವವಾಗುತ್ತದೆ ಅದನ್ನು ಆಘ್ರಾಣಿಸಿದ ಮಾತ್ರಕ್ಕೆ ಅಂಧರಿಗೆ ದಿವ್ಯ ದಷ್ಟಿ ರೋಗಿಗಳಿಗೆ ರೋಗಪರಿಹಾರ ನೆರಳಲ್ಲಿ ಕುಳಿತರೆ ಪೂರ್ವಜನ್ಮದ ಸ್ಮರಣೆ ಉಂಟಾಗುವುದು ಬಯಸಿದ ಸಂಪತ್ತು ಕರಗತವಾಗುವುದು

ಅರ್ಥಿಗಳ ಬಯಕೆಯಂತೆ ಈ ವೃಕ್ಷ ಗಿಡವೂ ಆಗಬಹುದು, ಹೆಮ್ಮರವೂ ಆಗಬಹುದು ಶ್ರೀಕೃಷ್ಣ ಅದನ್ನು ಸ್ವರ್ಗದಿಂದ ದ್ವಾರಕೆಗೆ ತಂದಾಗ ಒಂದು ಸಣ್ಣ ಗಿಡವಾಗಿತ್ತು ಸತ್ಯಭಾಮೆಯ ಮನೆಯಂಗಳದಲ್ಲಿ ನೆಟ್ಟಾಗ ನಾಲ್ಕು ಯೋಜನ ಉದ್ದದ ಇಡೀ ದ್ವಾರಕಾನಗರಿಯನ್ನೆ ಪೂರ್ತಿಯಾಗಿ ನೆರಳಿಂದ ಆಚ್ಛಾದಿಸುವಷ್ಟು ದೊಡ್ಡ ಗಾತ್ರಕ್ಕೆ ಬೆಳೆಯುತ್ತಿತ್ತು ದೇವೇಂದ್ರನ ಸೊತ್ತಾಗಿದ್ದ ಈ ಪಾರಿಜಾತವನ್ನು ಶಿವ ಬಯಸಿದ ಆದರೆ ಶಚೀದೇವಿಗಾಗಿ ದೇವೇಂದ್ರ ಹೇಗೋ ಶಿವನನ್ನು ಒಲಿಸಿಕೊಂಡು ಅದನ್ನು ತನ್ನಲ್ಲಿ ಉಳಿಸಿಕೊಂಡ ಬಳಿಕ ಶಿವ ಬೇರೆಯೆ ಒಂದು ಪಾರಿಜಾತವನವನ್ನು ಮಂದರ ಪರ್ವತದಲ್ಲಿ ಬೆಳೆಸಿ ಅಲ್ಲಿ ವಿಹರಿಸಿದ ದಟ್ಟವಾದ ಆ ವನ ಸೂರ್ಯಚಂದ್ರರ ಕಿರಣಗಳಿಗೆ ಪ್ರವೇಶ ನೀಡದೆ ಸ್ವಯಂ

ಪ್ರಭೆಯಿಂದ ಬೆಳಗುತ್ತದೆ ವೃಕ್ಷ ದೇವತೆಗಳು ಮೂರ್ತಿಮತ್ತಾಗಿ ಬಂದು ಶಿವಪಾರ್ವತಿ-ಯರನ್ನು ಸೇವಿಸುತ್ತಾರೆ

ದೇವಲೋಕದಲ್ಲಿ ಪಾರಿಜಾತ ಮಾತ್ರವಲ್ಲದೆ ಮಂದಾರ, ಸಂತಾನ, ಕಲ್ಪವೃಕ್ಷ, ಹರಿ-ಚಂದನ ಎಂದು ಇನ್ನೂ ನಾಲ್ಕು ಬಗೆಯ ಕಲ್ಪವೃಕ್ಷಗಳಿವೆ ಇವುಗಳಿಗೆ ಕಲ್ಪದ ಕೊನೆಯ-ವರೆಗೂ ಆಯುಷ್ಯವಿದೆ. ಏಕೆಂದರೆ ಇವರೆಲ್ಲರೂ ಕರ್ಮಜ ದೇವತೆಗಳು ಶ್ರೀಕೃಷ್ಣ ಪಾರಿಜಾತವನ್ನು ಕಿತ್ತಾಗ ಪಾರಿಜಾತ ದೇವ ಕೈಮುಗಿದು 'ರಕ್ಷಿಸು' ಎಂದ 'ಭಯ ಪಡಬೇಡ' ಎಂದ ಕೃಷ್ಣ ಇದು ಹರಿವಂಶದಲ್ಲಿ ಸ್ಪಷ್ಟವಿದೆ

ಭೂಲೋಕದಲ್ಲಿ ಪಾರಿಜಾತವಿದ್ದರೆ ಭೂಮಿ ಸ್ವರ್ಗವಾದೀತು ಎಂದು ದೇವೇಂದ್ರ ಭಯಪಟ್ಟಿದ್ದ ಅದರಿಂದ ಅದಿತಿ ಕೃಷ್ಣನಿಗೆ ಹೇಳಿದಳು ನಿನ್ನ ಅವತಾರಕಾರ್ಯ ಸಮಾಪ್ತಿ ಹೊಂದಿದಾಗ ಸ್ವರ್ಗಕ್ಕೇ ಕಳಿಸಿ ಕೊಡು, ಎಂದು ಕೃಷ್ಣ 'ಆಗಲಿ' ಎಂದು ಹೇಳಿ ಗಿಡವನ್ನು ತಂದ

***ಚಿಂತಾಮಣಿ***

ಕಾಮಧೇನು ಕಲ್ಪವೃಕ್ಷಗಳಂತೆಯೆ ಬಯಸಿದ್ದನ್ನೆಲ್ಲ ನೀಡುವ ಮಣಿ ಚಿಂತಾಮಣಿ ಮಣಿ ಎಂದರೆ ಮುತ್ತುರತ್ನ ಮುಂತಾದುವು ಒಂದು ಒಳ್ಳೆಯ ದೊಡ್ಡ ಜಾತಿ ಮುತ್ತನ್ನು ಧರಿಸಿದ ಮಾತ್ರಕ್ಕೆ ಚಂಚಲೆ ಎಂದು ಪ್ರಸಿದ್ಧಳಾದ ಲಕ್ಷ್ಮಿ ಚಂಚಲತೆಯನ್ನು ಬದಿಗಿಟ್ಟು ಸ್ಥಿರವಾಗಿ ನೆಲೆಸುವಳೆಂದು ಗರುಡಪುರಾಣ ಹೇಳುತ್ತದೆ

> ಗುಣವದ್ ಗುರು ಯದ್ದೇಹೇ ಮೌಕ್ತಿಕ್ತೈಕಂ ಹಿ ತಿಷ್ಠತಿ ।
> ಚಂಚಲಾಪಿ ಸ್ಥಿರಾ ಭೂತ್ವಾ ಕಮಲಾ ತತ್ರ ತಿಷ್ಠತಿ ॥

ಹೀಗೆ ಭೂಲೋಕದಲ್ಲಿರುವ ಒಂದು ಮುತ್ತು ಪ್ರಭಾವಶಾಲಿ ಎಂದ ಮೇಲೆ ದೇವ-ಲೋಕದ ಚಿಂತಾಮಣಿ ಹೇಗಿರಬಹುದು? ಸ್ಯಮಂತಕ ಮಣಿ ಇದ್ದ ದೇಶದಲ್ಲೆಲ್ಲ ಸುಭಿಕ್ಷೆ ಇರುತ್ತಿತ್ತು ಅದು ದೂರ ಹೋಯಿತೆಂದರೆ ಕ್ಷಾಮಡಾಮರಗಳು ರೋಗರುಜಿನಗಳು ಬರುತ್ತಿದ್ದವು ಎನ್ನುತ್ತದೆ ಭಾಗವತ ಮತ್ತು ಹರಿವಂಶ.

ಆದರೆ ಕಾಮಧೇನು ಕಲ್ಪವೃಕ್ಷ ಚಿಂತಾಮಣಿಗಳೆಲ್ಲ ಈಗ ಸ್ವರ್ಗದಲ್ಲಿಯೆ ಇವೆ ಅವು ಭೂಮಿಗೆ ಬಂದರೆ ಭೂಮಿ ಸ್ವರ್ಗವಾದೀತು ಜನರು ಪುಣ್ಯಕರ್ಮ ಮಾಡುವದನ್ನು ಬಿಟ್ಟು ವಿಷಯಭೋಗದಲ್ಲಿ ಮುಳುಗಿ ತಮ್ಮ ಜನ್ಮ ವ್ಯರ್ಥ ಮಾಡಿಕೊಂಡಾರೆಂದು ದೇವೇಂದ್ರ ಹೇಳಿದಂತೆ ಭಗವಂತನೂ ಆಲೋಚಿಸಿ ಭೂಮಿಯಲ್ಲಿ ಅವುಗಳನ್ನು ಅಲಭ್ಯಗೊಳಿಸಿದ್ದಾನೆ

***ಶ್ರೀಮುಕುಂದನ ಪರಮಮಂಗಳ ನಾಮ***

ಈ ಕಾಮಧೇನು ಮುಂತಾದವುಗಳಲ್ಲಿ ಒಂದು ದೋಷವಿದೆ ಅವು ಅರ್ಥಿಗಳ ಸ್ವಭಾವ ಯೋಗ್ಯತೆಗಳನ್ನು ಗಮನಿಸದೆ ಎಲ್ಲರಿಗೂ ಬೇಡಿದ್ದನ್ನೆಲ್ಲ ಕೊಡುತ್ತವೆ. ಭಗವಂತನ ನಾಮ ಬೇಡಿದ್ದನ್ನೆಲ್ಲ ಕೊಡುತ್ತದೆ ಆದರೆ ಯೋಗ್ಯತೆ ಉಳ್ಳವರಿಗೆ ಮಾತ್ರ ಇದಕ್ಕಿಂತ ಇನ್ನೊಂದು ಮುಖ್ಯವಾದ ವೈಲಕ್ಷಣ್ಯವನ್ನು ದಾಸರಾಯರು ಇಲ್ಲಿ ಹೇಳುತ್ತಿದ್ದಾರೆ

ಶ್ರೀಮುಕುಂದನ ಪರಮ ಮಂಗಳನಾಮ ನರಕಸ್ಥರನು ಸಲಹಿತು

ಕಾಮಧೇನು ಮುಂತಾದುವು ಸ್ವರ್ಗಲೋಕದಲ್ಲಿರುವವರಿಗೆ ಮಾತ್ರ ಬೇಡಿದ್ದನ್ನು ಕೊಡುವುವು ಹರಿನಾಮ ನರಕದಲ್ಲಿರುವವರಿಗೂ ಸ್ವರ್ಗಮೋಕ್ಷಾದಿ ಪುರುಷಾರ್ಥಗಳನ್ನು ಕೊಡಬಲ್ಲುದು

***ನರಕಸ್ಥರನು ಸಲಹಿತು***

ಒಮ್ಮೆ ನಾರದರು ವೈಕುಂಠಕ್ಕೆ ಹೋಗಿದ್ದಾಗ ಶ್ರೀಹರಿಯ ಮುಂದೆ, 'ನಾನೆಂದೂ ನರಕವನ್ನು ನೋಡೇ ಇಲ್ಲ, ಒಮ್ಮೆ ನೋಡಬೇಕು' ಎಂದರು

ದೇವಾನಾಂ ನಿರಯೋ ನಾಸ್ತಿ

'ದೇವತೆಗಳಿಗೆ ಎಂದೂ ನರಕಪ್ರಾಪ್ತಿ ಇಲ್ಲ' ಎಂದು ನಿಯಮ ಅದರಿಂದ ದೇವರ್ಷಿ ನಾರದರು ಎಂದೂ ನರಕ ಕಂಡವರಲ್ಲ ಕಾಣುವ ಕುತೂಹಲದಿಂದ ಹರಿಯ ಅನುಜ್ಞೆ ಪಡೆದು ಯಮಪಟ್ಟಣಕ್ಕೆ ಬಂದರು ಅಲ್ಲಿ ನರಕವಾಸಿಗಳು ಯಾತನೆ ಪಡುವುದನ್ನು ಕಣ್ಣಾರೆ ಕಂಡು ಆಶ್ಚರ್ಯಚಕಿತರಾದರು ಅವರಿಗೆ ಇದು ಸಮಸ್ಯೆ—

ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।
ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥

'ನಾರಾಯಣ ಎಂಬ ಮಂತ್ರವಿದೆ ಸ್ವಾಧೀನದಲ್ಲಿರುವ ನಾಲಿಗೆ ಇದೆ ಆದರೂ ಜನರು ಘೋರ ನರಕದಲ್ಲಿ ಬೀಳುತ್ತಾರೆ! ಆಶ್ಚರ್ಯ!'

ಆಶ್ಚರ್ಯದ ಜೊತೆಗೆ ವಿಷಾದ, ಅನುಕಂಪ ಅದರಿಂದ ಒಂದು ದೊಡ್ಡ ಎತ್ತರವಾದ ಬಂಡೆಗಲ್ಲನ್ನೇರಿ ವೀಣೆ ನುಡಿಸುತ್ತ, ಶಾಂಡಿಲ್ಯ ತತ್ವದ ಇಪ್ಪತ್ತೆರಡನೆ ಅಧ್ಯಾಯದಲ್ಲಿ ಹೇಳಿದಂತೆ,

ಗೋವಿಂದ ನಾರಾಯಣ ವಾಸುದೇವ ಮುಕುಂದ ಕೃಷ್ಣಾಚ್ಯುತ ಮಾಧವೇತಿ ।
ನೃಸಿಂಹ ದೇವೇಶ ಹರೇ ಮುರಾರೇ ರಮೇಶ ಲೋಕೇಶ ಜಗನ್ನಿವಾಸ ॥
ಅನಂತ ವೈಕುಂಠ ದುರಂತಶಕ್ತೇ ಸಮಸ್ತಲೋಕಸ್ಯ ನಿದಾನಮೂರ್ತೇ ।
ನಿರಂಜನಾನಂತ ಗುಣಾಕರೇಶ ಚಿದ್ರೂಪ ನಿರ್ದೋಷ ಜಗದ್ವಿಹಾರ ॥
ನೀರೂಪ ನಿತ್ಯಾವ್ಯಯ ನಿರ್ವಿಕಾರ ನಿರಾಶ್ರಯಾನಂತ ವಿಚಿತ್ರಕರ್ಮನ್ ।

ದಾಶಾರ್ಹಕೃಷ್ಣ ಖಗವಾಹನ ವಾರಿಜಾಕ್ಷ
ನಾರಾಯಣಾಖಿಲಗುರೋ ಜಗತಾಮಧೀಶ ॥
ಎಂದು ನಾಮಸಂಕೀರ್ತನೆ ಮಾಡಿದರು ನರಕಸ್ಥರು ನಾಮಾಮೃತಪಾನ ಮಾಡಿ ಪಾಪರಹಿತರಾದರು. ತಕ್ಷಣವೆ ಪುಷ್ಪಕವಿಮಾನವೇರಿ ನಾರದರನ್ನು ಸ್ತುತಿಸುತ್ತ ಸ್ವರ್ಗಕ್ಕೆ ತೆರಳಿದರು

ಹರಿನಾಮ ನರಕಸ್ಥರನ್ನೆಲ್ಲ ಉದ್ಧರಿಸಿತೆಂದರೆ ಅದಕ್ಕೂ ಕಾಮಧೇನು ಮುಂತಾದ-ವುಗಳಿಗೂ ವ್ಯತ್ಯಾಸವೇನು ಉಳಿಯಿತು? ನರಕದಲ್ಲಿಯೂ ಅದರ ಪ್ರಭಾವವಿರುವುದೇ ವ್ಯತ್ಯಾಸವೆನ್ನುವುದಾದರೆ ಕಾಮಧೇನು ಮುಂತಾದುವೂ ಭೂಮಿಗೆ ಬಂದಾಗ ಅದೇ ರೀತಿ ಪ್ರಭಾವ ತೋರಿದುದು ಕೃಷ್ಣಾವತಾರಾದಿ ಸಂದರ್ಭಗಳಲ್ಲಿ ಸ್ಪಷ್ಟವಿದೆ ಈ ಪ್ರಶ್ನೆಗೆ ಸಮಾಧಾನವನ್ನು ಶಾಂಡಿಲ್ಯ ತತ್ವವೆ ಇಪ್ಪತ್ತನೆ ಅಧ್ಯಾಯದಲ್ಲಿ ಹೇಳಿದೆ—

ನಾರದರು ಸಂಯಮನೀ ನಗರಿಗೆ ಹೋದಾಗ ಅಲ್ಲಿ ಮೋಕ್ಷಯೋಗ್ಯರೂ ಅನೇಕರು ವಿಷ್ಣುದ್ವೇಷಿಗಳ ಸಂಗದೋಷದಿಂದ ಏಕಾದಶೀಭೋಜನ ಮಾಡಿ ನರಕದಲ್ಲಿ ಕಾದ ಕಬ್ಬಿಣದ ದ್ರವವನ್ನು ಕುಡಿಯುತ್ತಿದ್ದುದನ್ನು ಕಂಡರು ಹಾಗೇ ಮಾತಾಪಿತೃದ್ವೇಷ, ಗುರು-ದ್ವೇಷ, ದಂಪತಿಗಳಿಗೆ ವಿರಸ ಉಂಟುಮಾಡುವುದು, ವಿಷ್ಣುವಿಗೆ ಅನಿವೇದಿತವಾದ ಅನ್ನ ಉಣ್ಣುವುದು ಹರಿಕಥೆ ಕೇಳದಿರುವುದು, ವಿಷ್ಣುಮಂತ್ರ ತ್ಯಜಿಸಿ ಅನ್ಯ ದೇವತೆಗಳ ಮಂತ್ರ ಜಪಿಸುವುದು ಮುಂತಾದ ಪಾಪ ಮಾಡಿ ತಕ್ಕ ಶಿಕ್ಷೆ ಅನುಭವಿಸುವುದನ್ನು ಕಂಡು ದುಃಖಿತ-ರಾದರು ಅವರಿಗೆ ಸದ್ಗತಿಯಾಗಲೆಂದು ನಾಮಸಂಕೀರ್ತನ ಮಾಡಿದರು ಅದು ಎಲ್ಲ-ರಿಗೂ ರುಚಿಸಲಿಲ್ಲ ಮೋಕ್ಷಯೋಗ್ಯರಿಗೆ ಮಾತ್ರ ರುಚಿಸಿತು ಪಾಮರರಾಗಿದ್ದ ಅವರು ನಾಮಸಂಕೀರ್ತನಶ್ರವಣದಿಂದ ಪಂಡಿತರಾಗಿ ವಿಷ್ಣುಲೋಕ ಪಡೆದರು

***ಪಾಮರರ ಪಂಡಿತರೆನಿಸುವುದು***

ಹರಿನಾಮ ಪಾಮರರನ್ನು ಪಂಡಿತರೆನಿಸುವುದುಂಟೆ? ಜಡವಾದ ನಾಮಕ್ಕೆ ಅಂಥ ಮಹಿಮೆ ಶಕ್ಯವೆ? ಜನರ ಯೋಗ್ಯತೆಯರಿತು ಅವರನ್ನು ಉದ್ಧರಿಸಬಲ್ಲದೆ? ಎಂಬ ಪ್ರಶ್ನೆಗೂ ದಾಸರಾಯರು ಉತ್ತರಿಸಿದ್ದಾರೆ

ಕಾಮಧೇನು ಒಂದು ಪಶು, ಕಲ್ಪವೃಕ್ಷ ಒಂದು ಮರ, ಚಿಂತಾಮಣಿ ಕಲ್ಲು ಪಶು ಮರ ಕಲ್ಲುಗಳೂ ಅರ್ಥಿಗಳ ಮನೋಗತವರಿತು ಅವರು ಬೇಡಿದುದನ್ನು ನೀಡುವುದು ಹರಿಯ ಒಂದು ಅಘಟಿತಘಟನಾಶಕ್ತಿ ಈ ಶಕ್ತಿಯನ್ನು ತೋರುವುದಕ್ಕಾಗಿಯೇ ಕಾಮ-ಧೇನು ಮುಂತಾದುದನ್ನು ಸೃಜಿಸಿದ್ದಾನೆ ಹರಿ ಅದರಿಂದ ಜಡವಾದ ನಾಮವೂ ಜನರ ಯೋಗ್ಯತೆಯರಿತು ಯೋಗ್ಯ ಗತಿ ಕೊಡುತ್ತದೆ ಎಂದರೆ ತಪ್ಪೇನು?

ಹರಿನಾಮ ಪಾಮರರಿಗೆ ಜ್ಞಾನ ನೀಡುವುದು ಭಾಗವತದ ರುದ್ರಗೀತೆಯ ಪ್ರಸಂಗದಲ್ಲಿ ಸ್ಪಷ್ಟವಿದೆ ಪ್ರಾಚೀನಬರ್ಹಿ ಎಂಬ ರಾಜನ ಮಕ್ಕಳಾದ ಪ್ರಚೇತಸರು ತಂದೆಯ ಆಜ್ಞೆಯಂತೆ ಸೃಷ್ಟಿಕಾರ್ಯಕ್ಕೆ ತೊಡಗಿದವರು ರುದ್ರಗೀತೆ ಕೇಳಿ ಜ್ಞಾನಿಗಳಾಗಿ ತಪೋನಿರತರಾದರು ರುದ್ರಗೀತೆ ಎಂದರೆ ಕೇವಲ ಹರಿನಾಮಗಳೆ

**ಮನದೊಳಗೆ ಸುಂದರ ಪದಾರ್ಥವ**
**ನೆನೆದು ಕೊಡೆ ಕೈಕೊಂಡು ಬಲು ನೂ-**
**ತನ ಸುಶೋಭಿತ ಗಂಧ ಸುರಸೋಪೇತ ಫಲರಾಶಿ ।**
**ದ್ಯುನದಿನಿವಹಗಳಂತೆ ಕೊಟ್ಟವ-**
**ರನು ಸದಾ ಸಂತೈಸುವನು ಸ-**
**ದ್ಗುಣವ ಕದ್ದವರಘವ ಕದಿವನು ಅನಘನೆಂದೆನಿಸಿ ॥ ೨೨ ॥**

ಮನಸ್ಸಿನೊಳಗೆ ಸುಂದರ ಪದಾರ್ಥವನ್ನು ನೆನೆದು ಹರಿಗೆ ಅರ್ಪಿಸಿದಾಗ ಅವನು ಅದನ್ನು ಸ್ವೀಕರಿಸಿ ಅದಕ್ಕೆ ಪ್ರತಿಯಾಗಿ ಬಲು ನೂತನವಾದ ಒಳ್ಳೆಯ ಶೋಭಾಯಮಾನ-ವಾದ ಸುಗಂಧ ದ್ರವ್ಯಗಳನ್ನೂ ಒಳ್ಳೆಯ ಗಂಧರಸಗಳಿಂದ ಕೂಡಿದ ಫಲರಾಶಿಗಳನ್ನೂ ಗಂಗಾಪ್ರವಾಹಗಳ ಸಮೂಹಗಳಂತೆ ಕೊಟ್ಟು ಅವರನ್ನು ಸದಾ ಸಂತೈಸುತ್ತಾನೆ ಅನಘ-ನೆಂದೆನಿಸಿ ತನ್ನ ಸದ್ಗುಣ ಕದಿವವರ ಪಾಪವನ್ನು ಕದಿಯುತ್ತಾನೆ

***ಮನದೊಳಗೆ ಸುಂದರ ಪದಾರ್ಥ***

'ಹೇಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ?
ಮಂಗಳಾಭಿಷೇಕಕೆ ಉದಕ ತರುವೆನೆನೆ ಗಂಗೆಯಂಗುಷ್ಠದಿ ಪಡೆದಿರುವೆ!
ಪುಷ್ಪವ ತಂದು ನಿನಗರ್ಚಿಸುವೆನೆಂದರೆ ಪುಷ್ಪ ಪಲ್ಲವಿಸಿದೆ ಹೊಕ್ಕುಳಲಿ!

ಎಂದು ಮುಂತಾಗಿ ಪುರಂದರದಾಸರು ಹೇಳುವಂತೆ ಸರ್ವೇಶನಾದ ಪರಿಪೂರ್ಣನಾದ ಹರಿಗೆ ನಾವೇನು ಕೊಡಬಲ್ಲೆವು? ಆದರೂ ಅವನೇ ಕೊಟ್ಟ ಸುಂದರವಾದ ಅಂದರೆ ಅನಿಷಿದ್ಧವಾದ, ಶಕ್ಯವಿದ್ದಷ್ಟು ಆರಿಸಿ, ಸುಂದರವೇ ಆದ ಫಲಪುಷ್ಪಾದಿ ಪದಾರ್ಥಗಳನ್ನು ಮನದೊಳಗೆ ಭಕ್ತಿಯಿಂದ ನೆನೆದು ಕೊಡಬೇಕು ಮನಸ್ಸಿನಲ್ಲಿ ಅವೆಲ್ಲವನ್ನೂ ಅವನ ಅಧೀನವೆಂದು ಚಿಂತಿಸಿ ಕೆರೆಯ ನೀರನು ಕೆರೆಗೇ ಚೆಲ್ಲುವಂತೆ ಅವನಿಗೆ ಕೊಡಬೇಕು ಅವನ ಪದಾರ್ಥವನ್ನು ಅವನಿಗೆ ಕೊಟ್ಟರೂ ಅಷ್ಟರಿಂದಲೆ ಆತ ಸಂತೋಷದಿಂದ ಸ್ವೀಕರಿಸಿ ಫಲ ನೀಡುತ್ತಾನೆ, ಎಂಥ ಕರುಣೆ!

ನಾವು ಕೊಡುವ ನೈವೇದ್ಯ ಪದಾರ್ಥಗಳು ನಮಗೆ ಎಷ್ಟು ಸುಂದರವಾಗಿ ಕಂಡರೂ ಹರಿಗೆ ಸುಂದರವಾಗಿ ಕಂಡುಬರುವುವೇ? ನರರಿಗೇ ಸುಂದರವಾಗಿ ಕಂಡುಬರುವ

ನಿಯಮವಿಲ್ಲ ಆದರೂ ಹರಿ ಸುಂದರವೆಂದು ಸ್ವೀಕರಿಸುತ್ತಾನೆ ವಸ್ತುತಃ ಅವೆಲ್ಲ ಪ್ರಾಕೃತ ಪದಾರ್ಥಗಳು ಅಪ್ರಾಕೃತಕ್ಕೆ ಹೋಲಿಸಿದಾಗ ಪ್ರಾಕೃತವೆಂದೂ ಸುಂದರವೆನಿಸದು ಅಪ್ರಾಕೃತವನ್ನು ಉಣ್ಣುವ ಹರಿಗೆ ಅವು ಹೇಗೆ ಸುಂದರವಾದಾವು? ಆದರೂ ಆತ ಅವುಗಳನ್ನು ಸ್ವೀಕರಿಸುತ್ತಾನೆ

ಅಥವಾ ಅಪ್ರಾಕೃತವಾದ ಹರಿಯ ಸುಂದರರೂಪ ಪ್ರಾಕೃತ ಅನ್ನದಲ್ಲಿ ತುಂಬಿರು-ವುದರಿಂದ ಇದ್ದಲಿನಲ್ಲಿ ಬೆಂಕಿ ಸೇರಿದಾಗ ಕೆಂಡವಾಗಿ ಹೊಳೆವಂತೆ ಸುಂದರವಾಗಿ ಕಾಣುತ್ತದೆ ಇದನ್ನು ಮನದೊಳಗೇ ಚಿಂತಿಸಿ ನೈವೇದ್ಯ ನೀಡಬೇಕು ಉದಾ–ಅನ್ನದಲ್ಲಿ ಕೇಶವ, ಪರಮಾನ್ನದಲ್ಲಿ ನಾರಾಯಣ, ಭಕ್ಷ್ಯದಲ್ಲಿ ಮಾಧವ, ಘೃತದಲ್ಲಿ ಗೋವಿಂದ ಎಂದು ಮುಂತಾಗಿ ನೈವೇದ್ಯ ಪದಾರ್ಥಗಳಲ್ಲಿ ತನ್ನ ಸ್ವರೂಪಭೂತ ಚಿನ್ಮಯ ರೂಪದಿಂದ ಹರಿ ತಾನೆ ಇದ್ದಾನೆ ಆ ಚಿನ್ಮಯ ರೂಪವೆ ಸುಂದರ ಪದಾರ್ಥ ಅದನ್ನು ಮನದೊಳಗೆ ಚಿಂತಿಸಿ ಪ್ರತಿಮೆಯಲ್ಲಿ ಸನ್ನಿಹಿತನಾದ ಉಪಾಸಕನ ಬಿಂಬರೂಪಿ ಹರಿಗೆ ಸಮರ್ಪಿಸಬೇಕು ಅವನನ್ನು ಅವನಿಗೇ ಕೊಟ್ಟಂತಾಗುವುದು ಹಾಗೇ ಕೊಡಬೇಕು ಇದೇನು ಹುಚ್ಚು! ಎನ್ನಕೂಡದು ಹರಿ ಲೀಲೆಯಿಂದ ಅನ್ನದೊಳಗಿರುವ ತನ್ನದೇ ಆದ ರುಚಿಕರವಾದ ಸುಗಂಧರಸಭರಿತವಾದ ರೂಪವನ್ನು ಪ್ರತಿಮಾಂತರ್ಗತನಾಗಿ ಉಂಡು ನಲಿಯುತ್ತಾನೆ ನಮ್ಮನ್ನು ಸಂತೈಸುತ್ತಾನೆ ಇದು ನಿರ್ವ್ಯಾಜ ಕರುಣೆಯೆ ಸರಿ

ಅಥವಾ ಕಾಡಿನಲ್ಲಿ ಎಲೆ ಮನೆಗಳಲ್ಲಿಯೊ ಗಿರಿಗುಹೆಗಳಲ್ಲಿಯೋ ವಾಸ ಮಾಡುತ್ತ ತಪಸ್ಸು ಮಾಡುವ ಋಷಿಮುನಿಗಳು, ನಾಡಿನಲ್ಲಿ ಭಿಕ್ಷಾನ್ನ ಉಂಡು ಬದುಕುವ ಬ್ರಹ್ಮಚಾರಿ ಯತಿಗಳು ಮತ್ತು ಅಂಬಲಿ ಉಂಡು ಬದುಕುವ ಕಡು ಬಡ ಜನರೂ ಪ್ರತ್ಯಕ್ಷವಾಗಿ ಹರಿಗೆ ಷೋಡಶೋಪಚಾರಗಳನ್ನೂ ಛತ್ರಚಾಮರಾದಿ ರಾಜೋಪಚಾರಗಳನ್ನೂ ನೀಡಲು ಅಸಮರ್ಥರು ಆದರೆ ಉಪಚಾರ ನೀಡದೆ ಪೂಜೆಯಾಗುವುದಿಲ್ಲ ಪೂಜೆ ಏಕೆ? ಬರಿ ಧ್ಯಾನ ಮಾಡಿದರೆ ಸಾಕೆನ್ನಕೂಡದು. ಧ್ಯಾನವೆಂದರೂ, ಅದು ಮಾನಸವಾದ ಪೂಜೆಯೆ ಪೂಜೆ ಎಂದರೆ ಉಪಚಾರ ಸಮರ್ಪಣೆ ಇದ್ದೇ ಇದೆ ಅದರಿಂದ ಮಾನಸಪೂಜೆ ಮಾಡಬೇಕು ಮನದೊಳಗೆ ಮಾನಸ ಪ್ರತಿಮೆಯನ್ನು ಕಲ್ಪಿಸಿಕೊಂಡು ತದೇಕಚಿತ್ತದಿಂದ ಅದನ್ನೆ ಅಂತಶ್ಚಕ್ಷುವಿನಿಂದ ಕಾಣಬೇಕು ಅದರಲ್ಲಿ ಭಗವಂತನನ್ನು ನೆನೆಯಬೇಕು ಪ್ರತಿಮೆಯನ್ನೇ ಭಗವಂತನೆಂದು ತಿಳಿಯಬಾರದು ಹೊರಗೆ ಶಿಲಾದಿ ಪ್ರತಿಮಾ ಪೂಜೆ-ಯಲ್ಲಿಯೂ ಹೀಗೆಯೇ ಈ ಮಾನಸ ಪ್ರತಿಮಾ ಪೂಜೆಯಲ್ಲಿ ಸಮರ್ಪಿಸುವ ಪದಾರ್ಥ-ಗಳೂ ಮಾನಸವೆ ಅವು ಸುಂದರವಾಗಿರುತ್ತವೆ ಅವುಗಳಲ್ಲಿ ಸುಗಂಧ ರಸಗಳ ಕೊರತೆ-ಯೂ ಇರುವುದಿಲ್ಲ ಇರಬಾರದು ಸುಗಂಧರಸಭರಿತ ಸುಂದರ ಪದಾರ್ಥಗಳನ್ನೇ ಕಲ್ಪಿಸಿ-ಕೊಂಡು ಸಮರ್ಪಿಸಬೇಕು ಆಗ ಅವುಗಳನ್ನು ಭಗವಂತ ಸ್ವೀಕರಿಸುತ್ತಾನೆ ತೃಪ್ತಿಪಟ್ಟು ನಮ್ಮನ್ನು ಸಂತೈಸುತ್ತಾನೆ. ಇದು ಕರುಣೆಯಲ್ಲದೆ ಇನ್ನೇನು?

**ದ್ಯುನದಿ ನಿವಹಗಳಂತೆ**

ಮೇಲೆ ಹೇಳಿದ ಯಾವುದೇ ರೀತಿಯಿಂದ ಸುಂದರ ಪದಾರ್ಥವನ್ನು ಪರಮ ಸುಂದರನಾದ ಭಗವಂತನಿಗೆ ಅರ್ಪಿಸಿದಾಗ ಅವನು ಕರುಣೆಯಿಂದ ಸ್ವೀಕರಿಸಿ ಅದಕ್ಕೆ ಪ್ರತಿಯಾಗಿ ಅದೇ ರೀತಿಯ ಸುಗಂಧರಸಭರಿತ ಫಲರಾಶಿಗಳನ್ನು ಗಂಗಾಪ್ರವಾಹದಂತೆ ಅವಿಚ್ಛಿನ್ನವಾಗಿ ನಮ್ಮೆಡೆಗೆ ಹರಿಸುತ್ತಾನೆ ಕಾಸು ಖರ್ಚಿಲ್ಲದಿದ್ದರೂ ಕೋಟಿ ಸಂಪತ್ತು! ಈ ಕರುಣೆಗೂ ನಾಟಿ ಇರಬಹುದೆ?

ಇಲ್ಲಿ ಗಂಗಾಪ್ರವಾಹದ ದೃಷ್ಟಾಂತ ಅರ್ಥಗರ್ಭಿತವಾಗಿದೆ ಇತರ ನದಿಗಳು ಬತ್ತಿ ಹೋಗುವುದುಂಟು ಗಂಗೆ ಬತ್ತುವುದೆಂದಿಲ್ಲ ಹಾಗೇ ಇತರ ದೇವತೆಗಳು ಕೊಟ್ಟರೂ ಸ್ವಲ್ಪ ಕಾಲ ಸ್ವಲ್ಪವೆ ಕೊಡಬಲ್ಲರು ಸಾಕ್ಷಾತ್ ಮಹಾಲಕ್ಷ್ಮಿಯೂ ಪುರಂದರದಾಸರು ಹೇಳುವಂತೆ 'ಸಕ್ಕರೆ ತುಪ್ಪ ಕಾಲುವೆ ಹರಿಸಿ' ಯಾಳು ಶ್ರೀಹರಿ ಮಹಾಗಂಗಾಪ್ರವಾಹವನ್ನೇ ಹರಿಸುತ್ತಾನೆ ಅದರಿಂದಲೆ ಶ್ರೀಕೃಷ್ಣ ಭಗವದ್ಗೀತೆಯಲ್ಲಿ ಹೇಳುತ್ತಾನೆ

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್

ಅಥವಾ ಗಂಗಾಪ್ರವಾಹ ಪಾವಿತ್ರ್ಯಕ್ಕೆ ಸಂಕೇತ ಹರಿ ತಾನುಂಡು ಪ್ರಸಾದ ಕೊಟ್ಟರೆ ಅದು ಗಂಗೆಯಂತೆ ಪವಿತ್ರ ಅದನ್ನು ಉಂಡರೆ ನಿತ್ಯೋಪವಾಸ ಫಲ, ಮಹಾಯಜ್ಞ ಆಚರಿಸಿದ ಫಲ

**ಅಘವ ಕದಿವನು**

ಹರಿಯ ಕರುಣೆಗೆ ಇನ್ನೊಂದು ನಿದರ್ಶನ ಅವನು ನಮ್ಮ ಪಾಪಗಳನ್ನು ಪರಿಹರಿಸುತ್ತಾನೆ ಅವನು ಹಾಗೆ ಮಾಡದಿರುತ್ತಿದ್ದರೆ ನಾವು ಅನಾದಿಕಾಲದಿಂದ ಕೂಡಿಹಾಕಿದ ಪಾಪದ ಬೆಟ್ಟಗಳ ಅಡಿಯಲ್ಲಿ ಎಂದೋ ನುಚ್ಚು ನೂರಾಗುತ್ತಿದ್ದೆವು

ನಾರಾಯಣೋ ನಾಮ ನರೋ ನರಾಣಾಂ
ಪ್ರಸಿದ್ಧಚೋರಃ ಕಥಿತಃ ಪೃಥಿವ್ಯಾಮ್ ।
ಅನೇಕಜನ್ಮಾರ್ಜಿತಪಾಪಸಂಚಯಂ
ಹರತ್ಯಶೇಷಂ ಸ್ಮೃತಮಾತ್ರ ಏವ ॥

'ನಾರಾಯಣನೊಬ್ಬ ಮಹಾಚೋರ ನಾವು ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪಾಪರಾಶಿಯನ್ನೇ ಸ್ಮರಣಮಾತ್ರದಿಂದ ಕದ್ದೊಯ್ಯುತ್ತಾನೆ'

ನಮ್ಮಲ್ಲಿದ್ದು ನಮ್ಮನ್ನು ಸದಾ ಪೀಡಿಸುವ ಪಾಪಗಳನ್ನು ನಮ್ಮ ಮುಂದೆ ಪ್ರತ್ಯಕ್ಷವಾಗಿ ನಾಶಮಾಡದೆ ಸ್ಮರಣಮಾತ್ರದಿಂದಲೇ ನಮಗರಿವಿಲ್ಲದಂತೆ ಕದ್ದೊಯ್ಯುವುದಂತೂ ಕರುಣೆಯ ಪರಾಕಾಷ್ಠೆಯೆ ಸರಿ

**ಅನಘನೆಂದೆನಿಸಿ**

ಒಬ್ಬೊಬ್ಬ ಭಕ್ತನ ಬೆಟ್ಟದಷ್ಟು ಪಾಪಗಳನ್ನು ಕದಿವವ ಎಷ್ಟು ದೊಡ್ಡ ಪಾಪಸಂಗ್ರಹ ಮಾಡಿಕೊಂಡಿರಬಹುದು? ಎಷ್ಟು ದೊಡ್ಡ ಪಾಪಿಯಾಗಿರಬಹುದು? ಎಂದು ಚಿಂತೆ ಪಡಬೇಕಾಗಿಲ್ಲ ಅವನಲ್ಲಿ ಪಾಪದ ಲೇಶವೂ ಇಲ್ಲ 'ಅನಘ' ಪಾಪವಿಲ್ಲದವ ಎಂದು ಅವನಿಗೆ ಒಂದು ಹೆಸರೇ ಇದೆ

ಅನಘೋ ವಿಜಯೋ ಜೇತಾ

ಎಂದು ವಿಷ್ಣುಸಹಸ್ರನಾಮಸ್ತೋತ್ರ ಹೇಳಿದೆ ವಿಷ್ಣುಸಹಸ್ರನಾಮಗಳೆಲ್ಲವೂ ಬೃಹತೀಸಹಸ್ರ-ಮಂತ್ರಾರ್ಥ 'ಅನಘ' ಎಂಬುದೂ ಹಾಗೆಯೇ

ಉಪ ನೋ ಮಾಹಿ ವಾಜಾನ್ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ

ಎಂಬ ಬೃಹತೀ ಮಂತ್ರ 'ಸ್ವಸ್ತಿ' ಎಂದರೆ ಕೇವಲ ಸದ್ಗುಣಗಳಿಂದಲೆ ತುಂಬಿದ್ದು ಪಾಪಾದಿ-ದೋಷರಹಿತನಾದ ನೀನು ನಮ್ಮನ್ನೂ ಹಾಗೇ ಮಾಡು ಎಂದು ಪ್ರಾರ್ಥಿಸುವ ಮೂಲಕ ಭಗವಂತ ಸ್ವತಃ ಪಾಪರಹಿತನಾಗಿದ್ದಾನೆ ಭಕ್ತರನ್ನೂ ಪಾಪರಹಿತರನ್ನಾಗಿ ಮಾಡುತ್ತಾನೆ ಎಂದು ಅರ್ಥವನ್ನು 'ಅನಘ' ಶಬ್ದಕ್ಕೆ ಹೇಳುತ್ತಿದೆ ಅದರಿಂದ ಭಗವಂತ ಎರಡು ಅರ್ಥಗಳಲ್ಲಿ 'ಅನಘ' ನೆಂದೆನಿಸಿ ನಮ್ಮ ಪಾಪಗಳನ್ನು ಕದಿಯುತ್ತಾನೆ ಕದ್ದೂ ತಾನು ಪಾಪಿ ಎನಿಸುವುದಿಲ್ಲ, ಪಾಪರಹಿತನೆ ಆಗಿರುತ್ತಾನೆ

**ಸದ್ಗುಣವ ಕದ್ದವರು**

ನಮ್ಮ ಪಾಪಗಳನ್ನು ಕದಿಯಬೇಕಾದರೆ ಆತ ನಮ್ಮಿಂದ ನಿರೀಕ್ಷಿಸುವ ಕಾರ್ಯವೂ ಕದಿಯುವುದೇ ಅಂದರೆ ಅವನ ಸದ್ಗುಣಗಳನ್ನು ನಾವು ಕದಿಯಬೇಕು ಕದಿಯುವ ಕೆಲಸ ನಮಗೆಲ್ಲ ಪ್ರಿಯವಾದುದು, ಸುಲಭವಾದುದು! ಮತ್ತು ಕದ್ದವನಿಗೆ ಹರಿ ಪಾಪ ನೀಡದೆ ಶಿಕ್ಷಿಸದೆ, ಅವನ ಪಾಪಗಳನ್ನು ತಾನು ಕದ್ದು ಅವನನ್ನು ಸುಖವಾಗಿ ಇಟ್ಟಿರುತ್ತಾನೆ ಕದಿಯದಿದ್ದರೆ ಪಾಪ ನೀಡಿ ಶಿಕ್ಷಿಸುತ್ತಾನೆ ಎಂಥ ಕರುಣೆ!

ಆದರೆ ಸದ್ಗುಣಗಳನ್ನು ಕದಿಯುವುದೆಂದರೆ, ಹರಿ ನಮ್ಮ ಪಾಪವನ್ನು ಕದ್ದಂತಲ್ಲ ಅವನ ಸದ್ಗುಣಗಳನ್ನು ನಾವು ನಮ್ಮ ಹೃದಯದಲ್ಲಿ ತುಂಬಿಟ್ಟುಕೊಂಡು ಜೋಪಾನವಾಗಿ ನೋಡಿಕೊಳ್ಳುವುದು ಅಂದರೆ, ಹರಿಯ ಸದ್ಗುಣಗಳಲ್ಲಿ ಕೆಲವನ್ನಾದರೂ 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂಬಂತೆ ಉಪಾಸನೆಯಿಂದ ನಮ್ಮ ಯೋಗ್ಯತಾನು-ಸಾರ ನಮ್ಮಲ್ಲಿ ಬೆಳೆಸಿಕೊಳ್ಳುವುದು ಇದೇ ಮೋಕ್ಷಸಾಧನೆ ಅಥವಾ ಹರಿಯ ಸ್ವಾತಂತ್ರ್ಯಾದಿ ಗುಣಗಳನ್ನೂ ಯಥಾಶಕ್ತಿ ಹದಯದಲ್ಲಿಟ್ಟುಕೊಂಡು ಧ್ಯಾನ ಮಾಡುವುದು ಧ್ಯಾನದಿಂದ ಸಕಲಪಾಪಪರಿಹಾರವಾಗುತ್ತದೆ ತಾನೆ!

**ಚೇತನಾಚೇತನವಿಲಕ್ಷಣ**
**ನೂತನಪದಾರ್ಥಗಳೊಳಗೆ ಬಲು**
**ನೂತನತಿಸುಂದರಕೆ ಸುಂದರ ರಸಕೆ ರಸರೂಪ ।**
**ಜಾತರೂಪೋದರಭವಾದ್ಯರೊ-**
**ಳಾತತಪ್ರತಿಮಪ್ರಭಾವ ಧ-**
**ರಾತಳದೊಳೆಮ್ಮೊಡನೆಯಾಡುತಲಿಪ್ಪ ನಮ್ಮಪ್ಪ** ॥ ೨೩ ॥

ಚೇತನ ಅಚೇತನರಿಗಿಂತ ವಿಲಕ್ಷಣ, ನೂತನ ಪದಾರ್ಥಗಳೊಳಗೆ ಬಲು ನೂತನ, ಅತಿ ಸುಂದರಕ್ಕೂ ಸುಂದರ, ರಸಕ್ಕೆ ರಸರೂಪ, ಬ್ರಹ್ಮರುದ್ರಾದಿಗಳೊಳಗೆ ವ್ಯಾಪ್ತ, ಅಪ್ರತಿಮಪ್ರಭಾವ ಹೀಗಿದ್ದರೂ ಧರಾತಳದೊಳಗೆ ನಮ್ಮೊಡನೆ ಆಡುತ್ತಿರುತ್ತಾನೆ ನಮ್ಮಪ್ಪ!

***ಚೇತನಾಚೇತನವಿಲಕ್ಷಣ***

ಚೇತನವೆಂದರೆ ಜ್ಞಾನ ಉಳ್ಳವರು, ರಮಾಬ್ರಹ್ಮಾದಿಗಳು ಅಚೇತನ ಎಂದರೆ ಜಡ ಪದಾರ್ಥ ಮಹದಾದಿ ತತ್ವಗಳು ಎಲ್ಲವೂ ಜಡ ಇವೆರಡಕ್ಕಿಂತಲೂ ವಿಲಕ್ಷಣ ಶ್ರೀಹರಿ

ಜಡವಸ್ತುವಿಗಿಂತ ವಿಲಕ್ಷಣ ಹೌದು ಆತ ಜಡನಲ್ಲ ಆದರೆ ಚೇತನಕ್ಕಿಂತ ವಿಲಕ್ಷಣ ಹೇಗೆ? ಅವನು ಚೇತನನಲ್ಲವೆ? ಈ ಪ್ರಶ್ನೆಗೆ ಕಾಠಕೋಪನಿಷತ್ತಿನಲ್ಲಿ ಸಮಾಧಾನವಿದೆ

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ
ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ
ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥

'ನಿತ್ಯಗಳಿಗೆ ನಿತ್ಯ, ಚೇತನರಿಗೆ ಚೇತನ, ಎಲ್ಲರಿಗೂ ಎಲ್ಲಾ ಅಭೀಷ್ಟ ನೀಡುವವ, ಸರ್ವೋತ್ತಮ ಹರಿ ಅವನನ್ನು ತಮ್ಮೊಳಗೆ ಕಾಣಬಲ್ಲ ಜ್ಞಾನಿಗಳಿಗೇ ಶಾಶ್ವತ ಸುಖ ಹೊರತು ಕಾಣದವರಿಗಲ್ಲ'

ಇಲ್ಲಿ ಹರಿಯನ್ನು 'ಚೇತನರಿಗೆ ಚೇತನ' ಎಂದು ವರ್ಣಿಸಲಾಗಿದೆ ಚೇತನರೆಲ್ಲ ಅವನ ಅಧೀನ ಅವರ ಚೈತನ್ಯವೂ ಅವನ ಅಧೀನ ಎಂದರ್ಥ ಎಲ್ಲರಂತೆ ಅವನೂ ಒಬ್ಬ ಚೇತನನೆಂದರೆ ಅದು ಅವನನ್ನು ಅವಮಾನ ಮಾಡಿದಂತೆ ಅದರಿಂದ ಭಗವದ್ಗೀತೆಯಲ್ಲಿ ತಾನು 'ಪುರುಷೋತ್ತಮ' ಏಕೆ ಎಂಬುದನ್ನು ಹೇಳುತ್ತಾನೆ—

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥

ಶ್ರೀಹರಿಯೂ ಒಬ್ಬ ಆತ್ಮನೆ ಆದರೆ ನಾವು ಹಾಗೆನ್ನುವುದಿಲ್ಲ, ಪರಮಾತ್ಮನೆನ್ನುತ್ತೇವೆ ಆತ್ಮ, ಅಂತರಾತ್ಮ, ಪರಮಾತ್ಮ ಎಂದೆಲ್ಲ ರೂಪವಿಶೇಷಗಳನ್ನು ಹೇಳುವಾಗ ಮಾತ್ರ 'ಆತ್ಮ' ಎನ್ನುತ್ತೇವೆ ಅದರಿಂದ ನಿತ್ಯಮುಕ್ತ ಚೇತನರೂಪಳಾದ ರಮಾದೇವಿ, ಸಂಸಾರದಲ್ಲಿರುವ ಅಥವಾ ಅದರಿಂದ ಮುಕ್ತರಾದ ಬ್ರಹ್ಮಾದಿಗಳೆಂದು ಎರಡು ಬಗೆಯಾದ ಚೇತನರಿಗಿಂತ ವಿಲಕ್ಷಣ, ಉತ್ತಮನಾದ್ದರಿಂದ ತಾನು 'ಪುರುಷೋತ್ತಮ' ಎನ್ನುತ್ತಾನೆ ಶ್ರೀಕೃಷ್ಣ ಅದರಿಂದ ಆತ ಚೇತನಾಚೇತನವಿಲಕ್ಷಣ ಹಾಗಾದರೆ,

ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ
ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।
ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ
ನಿರಂಜನಃ ಪರಮಂ ಸಾಮ್ಯಮುಪೈತಿ ॥

'ಹರಿಯ ಅಪರೋಕ್ಷ ಪಡೆದವ ಹರಿಯ ಪರಮ ಸಾಮ್ಯ ಹೊಂದುತ್ತಾನೆ' ಎಂದು ಆಥರ್ವಣೋಪನಿಷತ್ತು ಜೀವನಿಗೆ ಹರಿಯ ಪರಮ ಸಾಮ್ಯವನ್ನು ಹೇಗೆ ಹೇಳುತ್ತದೆ? ಎಂದರೆ, ಜೀವನ ಸ್ವರೂಪ ಹಿಂದೆಯೂ ಹರಿಸ್ವರೂಪದಂತೆಯೆ ಜ್ಞಾನಾನಂದರೂಪ-ವಾಗೇ ಇತ್ತು. ಆದರೆ ಆ ಸ್ವಭಾವ ವ್ಯಕ್ತವಾಗಿರಲಿಲ್ಲ ಅದರಿಂದ ಸ್ವಲ್ಪವೆ ಸಾಮ್ಯವಿತ್ತು ಈ ಅಪರೋಕ್ಷ ಲಭಿಸಿದಾಗ ವ್ಯಕ್ತವಾಯಿತು, ಪರಮಸಾಮ್ಯ ಬಂದಿತು ಎನ್ನಬೇಕು, ಹೊರತು ಹರಿಯ ಜ್ಞಾನಾನಂದ ಜೀವನಿಗಿಂತ ವಿಲಕ್ಷಣವೆ

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ ॥

ಎನ್ನುವಂತೆ ಅನಿರ್ವಚನೀಯ, ಅಚಿಂತ್ಯ, ಅನಂತ, ಆನಂದಸಾಗರ ಆತ ಬ್ರಹ್ಮಾದಿಗಳ ಆನಂದ ಆ ಸಾಗರದ ಮುಂದೆ ಒಂದು ಸಣ್ಣ ಹನಿ ಮಾತ್ರ. ಸಾಗರಕ್ಕೂ ನೀರ ಹನಿಗೂ ಎಷ್ಟು ಸಾಮ್ಯವೋ ಮೇರು ಪರ್ವತಕ್ಕೂ ಸಾಸಿವೆ ಕಾಳಿಗೂ ಎಷ್ಟು ಸಾಮ್ಯವೋ ಅಷ್ಟು ಸಾಮ್ಯವೂ ಇಲ್ಲಿ ಇಲ್ಲ| ಅದರಿಂದ ಆತ ವಿಲಕ್ಷಣ

ಅಥವಾ ಬೃಹದಾರಣ್ಯಕದ ಮೂರ್ತಾಮೂರ್ತಬ್ರಾಹ್ಮಣದಲ್ಲಿ,

ಅಥಾತ ಆದೇಶೋ ನೇತಿ ನೇತಿ

ಎಂಬಲ್ಲಿ ಹೇಳಿದಂತೆ ಮೂರ್ತಾಮೂರ್ತವಿಲಕ್ಷಣ, ಪಾಪಕರ್ಮಗಳನ್ನು ಮಾಡುವ ರುದ್ರಾದಿಗಳಿಗಿಂತಲೂ, ಮಾಡದ ರಮಾಬ್ರಹ್ಮಾದಿಗಳಿಗಿಂತಲೂ ವಿಲಕ್ಷಣ ಎಂಬ ಅಭಿ-ಪ್ರಾಯದಿಂದ, ಅವರೆಲ್ಲ ಅಸ್ವತಂತ್ರರು, ಈತ ಸ್ವತಂತ್ರ ಎಂಬ ಅಭಿಪ್ರಾಯದಿಂದ ಚೇತನ-ವಿಲಕ್ಷಣ ಎಂದಿದೆ. ಇದನ್ನೇ ಇನ್ನೂ ವಿಶದವಾಗಿ ಹೇಳುತ್ತದೆ ಭಾಗವತದಲ್ಲಿ ಗಜೇಂದ್ರ-ಮೋಕ್ಷದ ಈ ವಚನ—

ನ ವೈ ನ ದೇವಾಸುರಮರ್ತ್ಯತಿರ್ಯಕ್

ನ ಸ್ತ್ರೀ ನ ಷಂಡೋ ನ ವುಮಾನ್ ನ ಜಂತುಃ ।
ನಾಯಂ ಗುಣಃ ಕರ್ಮ ನ ಸನ್ನ ಚಾಸನ್
ನಿಷೇಧಶೇಷೋ ಜಯತಾದಶೇಷಃ ॥

ಶ್ರೀಹರಿ ದೇವನಲ್ಲ, ಅಸುರನಲ್ಲ, ಮನುಷ್ಯನಲ್ಲ, ಮೃಗವಲ್ಲ, ಸ್ತ್ರೀಯಲ್ಲ, ನಪುಂಸಕನಲ್ಲ, ಪುರುಷನಲ್ಲ, ಜಂತುವಲ್ಲ, ಗುಣವಲ್ಲ, ಕರ್ಮವಲ್ಲ, ಸತ್ ಅಲ್ಲ, ಅಸತ್ತೂ ಅಲ್ಲ, ಎಲ್ಲಾ ನಿಷೇಧ ಮಾಡಿದಾಗ ಉಳಿದ ಶೇಷ ಅವನು ಆದರೆ ಸ್ವತಃ ಅಶೇಷ ಅಂದರೆ ಪೂರ್ಣ ನಿರಾಕಾರ, ಆದರೆ ಸರ್ವಾಕಾರನೂ ಹೌದು ಪ್ರಾಕೃತವಾದ ಎಲ್ಲಾ ವಸ್ತುಗಳಲ್ಲಿ ಅಪ್ರಾಕೃತ-ವಾದ ಅದೇ ಆಕಾರದಿಂದ ಇರುವವನು ಆ ವಸ್ತುಗಳಿಗಿಂತ ವಿಲಕ್ಷಣ

ಹೀಗೆ ಚೇತನವಿಲಕ್ಷಣನಾದ ಹರಿ ಚೇತನರೊಡನೆ ಆಡುತ್ತಾನೆ ಏಕೆ?

ಸರ್ವಃ ಸಗಂಧೇಷು ವಿಶ್ವಸಿತಿ

'ಎಲ್ಲರೂ ತಮಗೆ ಸಮರಾದವರೊಡನೆ ಕಲೆದು ವ್ಯವಹರಿಸುತ್ತಾರೆ

ಆದರೆ, ಹರಿ ಹಾಗಲ್ಲ ಅವನಿಗೂ ನಮಗೂ ಏನು ಸಾಮ್ಯವಿಲ್ಲ! ಅಂದರೆ ಜೊತೆಯಾಗಿ ಬೆರೆಯುವಷ್ಟು ಸಾಮ್ಯವಿಲ್ಲ, ಆದರೂ ನಮ್ಮೊಡನೆ ಬೆರೆಯುತ್ತಾನೆ ಮಾನವರ ನಡುವೆ ಮಾನವರಂತೆಯೇ ಕಾಣಿಸಿಕೊಳ್ಳುತ್ತಾನೆ

ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್

'ನನ್ನನ್ನು ಮಾನವನೆಂದು ಕಡೆಗಣಿಸುತ್ತಾರೆ, ಮೂಢರು. ಏಕೆಂದರೆ ನಾನು ಮಾನವರೂಪ ತಾಳುತ್ತೇನೆ' ಹೀಗೆ ಮಾನವನೆಂಬ ಭ್ರಮೆ ಬರುವಷ್ಟು ನಮ್ಮೊಡನೆ ಒಂದಾಗಿ ಬೆರೆತು ಆಟವಾಡುತ್ತಾನೆ ನಮಗೆ ಅತಿ ಸಮೀಪದಲ್ಲಿ ರಕ್ಷಕನಾಗಿ ನಿಲ್ಲುತ್ತಾನೆ ಇದು ಕರುಣೆಯಲ್ಲದೆ ಇನ್ನೇನು?

***ನೂತನ ಪದಾರ್ಥಗಳೊಳಗೆ ಬಲು ನೂತನ***

ನೂತನ ಪದಾರ್ಥಗಳಲ್ಲಿರುವ ಆಕರ್ಷಣೆ ಅವುಗಳ ರೂಪ, ರಸ, ಗಂಧ ಮುಂತಾದುವು ಅವು ಹೊಸತಾಗಿದ್ದು ಸುಂದರ ಮಧುರವಾಗಿರುತ್ತವೆ ಉದಾ–ಹೂವು, ಆಗ ತಾನೆ ಅರಳಿದ ಹೂವು ಒಳ್ಳೆಯ ರೂಪ, ಗಂಧ ಮುಂತಾದವುಗಳಿಂದ ಆಕರ್ಷಕವಾಗಿರುತ್ತದೆ ಇದು ಒಂದು ಕ್ಷಣ ಮರುಕ್ಷಣದಲ್ಲಿ ಅದು ಬಾಡುತ್ತದೆ ಹಿಂದಿನ ಹೊಸತನ ಮಾಸಿರುತ್ತದೆ ಹಾಲು, ಆಗತಾನೆ ಕರೆದ ಬಿಸಿಯಾದ ನೊರೆ ಹಾಲು ಆ ಕ್ಷಣದಲ್ಲಿ ಅಮೃತದಂತೆ ಇರುತ್ತದೆ ಬಳಿಕ ಅದರ ರಸಗಂಧಗಳೆಲ್ಲ ಬೇರೆ ಆಗಿರುತ್ತವೆ ಹರಿಯಲ್ಲಿ ರೂಪರಸಗಂಧಾದಿ ಗುಣಗಳು ಎಂದೂ ಹೀಗೆ ಮಾಸುವುದಿಲ್ಲ, ಹಳಸುವುದಿಲ್ಲ ಚಿರನೂತನವಾಗಿರುತ್ತವೆ ಈ ಅಭಿಪ್ರಾಯದಿಂದ ನೂತನ ಪದಾರ್ಥಗಳೊಳಗೆ ಬಲು ನೂತನ ಎನ್ನಲಾಗಿದೆ

ಅಥವಾ ನೂತನ ಪದಾರ್ಥಗಳಲ್ಲಿ ರೂಪರಸಗಂಧಾದಿಗಳು ಸುಂದರವಾಗಿ ಆಕರ್ಷಕವಾಗಿರುವುದು ಇವನ ಸನ್ನಿಧಾನದಿಂದ

ಅಥವಾ ನೂತನ ಪದಾರ್ಥಗಳಲ್ಲಿ ಕಾಣುವ ರೂಪರಸಾದಿಗಳೆಲ್ಲ ಹೊಸತು ಹಾಗೆಯೆ ಭಕ್ತರಿಗೆ ಭಗವಂತನಲ್ಲಿ ಕಾಣುವ ಗುಣಗಳೂ ಹೊಸ ಹೊಸತಾಗಿರುತ್ತವೆ ಅನಾದಿಕಾಲದಿಂದ ಮಹಾಲಕ್ಷ್ಮಿ ಕ್ಷಣ ಬಿಡದೆ ಹರಿಯ ಗುಣಗಳನ್ನು ಎಣಿಸುತ್ತಿದ್ದರೂ ಇನ್ನೂ ಹೊಸ ಗುಣಗಳನ್ನೇ ಕಾಣುತ್ತ ರೋಮಾಂಚಿತಳಾಗುತ್ತಿದ್ದಾಳೆ

***ಅತಿ ಸುಂದರಕೆ ಸುಂದರ***

ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ

ಎಂದು ಈಶಾವಾಸ್ಯೋಪನಿಷತ್ತು ಹರಿಯ ರೂಪ ಅತ್ಯಂತ ಸುಂದರವೆನ್ನುತ್ತಿದೆ ಎಷ್ಟು ಸುಂದರವೆಂದರೆ ಲೋಕೈಕಸುಂದರಿಯಾದ ಮಹಾಲಕ್ಷ್ಮಿಯೂ ಕಂಡು ಬೆರಗಾಗುವಷ್ಟು ಸುಂದರ

ತನ್ನ ಸೌಂದರ್ಯದಿಂದನ್ನಂತ ಮಡಿಯಾ ಲಾ-
ವಣ್ಯಾದಿ ಮೆರೆವ ನಿಜಪತಿಯ ।
ಹೆಣ್ಣುರೂಪವ ಕಂಡು ಕನ್ಯೆ ಮಹಲಕ್ಷುಮಿ ಇವ-
ಗನ್ಯರೇಕೆಂದು ಬೆರಗಾದಳು ॥

ಎಂದು ಲಕ್ಷ್ಮೀಶೋಭನಪದದಲ್ಲಿ ವಾದಿರಾಜರು ಹೇಳುತ್ತಾರೆ

***ರಸಕೆ ರಸರೂಪ***

ರಸ ಎಂದರೆ ಆನಂದ

ರಸೋ ವೈ ಸಃ । ರಸಂ ಹ್ಯೇವಾಯಂ ಲಬ್ಧ್ವಾಽಽನಂದೀ ಭವತಿ ॥

ಎಂದು ತೈತ್ತಿರೀಯೋಪನಿಷತ್ತು ಹರಿಯನ್ನು ರಸರೂಪನೆನ್ನುತ್ತಿದೆ ಆನಂದರೂಪರಾದ ಚೇತನರೊಳಗೆ ಆನಂದರೂಪನಾಗಿ ಹರಿ ಇರುತ್ತಾನೆ ಅದರಿಂದ ಚೇತನಸ್ವರೂಪಭೂತ-ವಾದ ಆನಂದ ಹರಿಯ ಅಧೀನ ಆತ ಆನಂದಸಾಗರ, ಜೀವ ಆನಂದದ ಕಣ ಕಣದಲ್ಲಿ ಸಾಗರ ಅಂತರ್ಗತವಾಗಿದೆ! ಇದು ಅಚಿಂತ್ಯಶಕ್ತಿ

ನೂತನಗಳಲ್ಲಿ ನೂತನನಾದವ ನಮ್ಮಲ್ಲಿ ಏನು ನೂತನ ಕಾಣುತ್ತಾನೆ? ಸುಂದರಕ್ಕೆ ಸುಂದರ ನಮ್ಮಲ್ಲಿ ಏನು ಸೌಂದರ್ಯ ಕಾಣುತ್ತಾನೆ? ರಸಕ್ಕೆ ರಸ ನಮ್ಮಲ್ಲಿ ಏನು ರಸ ಕಾಣುತ್ತಾನೆ? ಇದು ಕೇವಲ ಕರುಣೆಯಲ್ಲದೆ ಇನ್ನೇನೂ ಅಲ್ಲ

***ಜಾತರೂಪೋದರ ಭವಾದ್ಯರೊಳಾತತ***

ಜಾತರೂಪ ಎಂದರೆ ಚಿನ್ನ ಚಿನ್ನದಂತೆ ಹೊಳೆವ ಬ್ರಹ್ಮಾಂಡ ಅದರ ಗರ್ಭದಲ್ಲಿ ಚತುರ್ದಶಲೋಕವ್ಯಾಪ್ತವಾದ ವಿರಾಟ್ ರೂಪದಿಂದ ಜನಿಸಿದ ಬ್ರಹ್ಮನೇ ಜಾತರೂಪೋ-ದರ, ಹಿರಣ್ಯಗರ್ಭ ಅಥವಾ ಮಹತ್ತತ್ವಾವರಣಪರ್ಯಂತ ವ್ಯಾಪ್ತನಾಗಿ ಮಹತ್ತತ್ವಾ-

ಭಿಮಾನಿಯಾಗಿರುವ ಬ್ರಹ್ಮನ ಗರ್ಭದಲ್ಲಿ ಬಂಗಾರದಂತೆ ಹೊಳೆವ ಬ್ರಹ್ಮಾಂಡವಿದೆ ಆದರಿಂದ 'ಮಹಾನ್' ಎನಿಸಿರುವ ಈ ಬ್ರಹ್ಮನೆ ಹಿರಣ್ಯಗರ್ಭ, ಜಾತರೂಪೋದರ ಇಂಥ ಬ್ರಹ್ಮನಲ್ಲಿ 'ಬ್ರಹ್ಮಣಿ ಬ್ರಹ್ಮರೂಪೋಽಸೌ' ಎಂಬಂತೆ ಬ್ರಹ್ಮರೂಪದಿಂದ 'ಆತತ' ನಾಗಿದ್ದಾನೆ, ವ್ಯಾಪಿಸಿದ್ದಾನೆ 'ಭವ' ಎಂದರೆ ರುದ್ರ ಅಹಂಕಾರತತ್ವಾಭಿಮಾನಿ, ಅಹಂ-ಕಾರಾವರಣಪರ್ಯಂತ ವ್ಯಾಪಿಸಿದ್ದಾನೆ ಅವನಲ್ಲಿಯೂ ಹರಿ 'ಶಿವರೂಪಃ ಶಿವೇ ಸ್ಥಿತಃ' ಎಂಬಂತೆ ಶಿವರೂಪದಿಂದ 'ಆತತ'ನಾಗಿದ್ದಾನೆ ಇದೇ ರೀತಿ ಇಂದ್ರಾದಿ ದೇವತೆಗಳ-ಲ್ಲಿಯೂ ವ್ಯಾಪಿಸಿದ್ದು ಅಪ್ರತಿಮಪ್ರಭಾವನಾಗಿದ್ದಾನೆ ಅನುಪಮ ಅಚಿಂತ್ಯಶಕ್ತಿಯವನಾಗಿ-ದ್ದಾನೆ ಆ ದೇವತೆಗಳ ಪ್ರಭಾವಗಳನ್ನು ವ್ಯಕ್ತಗೊಳಿಸಿ ಆಟವಾಡುತ್ತಾನೆ, ಆಟವಾಡಿಸುತ್ತಾನೆ ಮಹಾತ್ಮರಾದ ಆ ದೇವತೆಗಳನ್ನು ಸ್ವರ್ಗಲೋಕ-ಸತ್ಯಲೋಕಾದಿಗಳಲ್ಲಿ ಆಡಿಸುವವ ಈ ಧರಾತಳಕ್ಕೆ ಬಂದು ಹುಲು ಮಾನವರ ಬಳಿ ಆಡುತ್ತ ನಮಗೆ ಆನಂದ ನೀಡಬೇಕೇ? ಏಕೆ?

**ಎಮ್ಮೊಡನೆಯಾಡುತಲಿಪ್ಪ ನಮ್ಮಪ್ಪ**

'ನಮ್ಮಪ್ಪ' ಎನ್ನುವುದು

ಯೋ ನಃ ಪಿತಾ ಜನಿತಾ ಯೋ ವಿಧಾತಾ

ಎಂದು ಶ್ರುತಿ ಹೇಳುವಂತೆ ಹರಿ ನಮ್ಮೆಲ್ಲರ ತಂದೆ ಎನ್ನುವ ಅಭಿಪ್ರಾಯದಿಂದ ವಸ್ತುತಃ ಅದೊಂದು ಪ್ರೀತಿಯ ಸಂಬೋಧನೆ ನಮಗೆ ಹರಿ ಕೇವಲ ತಂದೆಯಲ್ಲ, ತಂದೆ, ತಾಯಿ, ಬಂಧು, ಬಳಗವೆಲ್ಲವೂ ಅವನೆ

ಮಾತಾ ರಾಮೋ ಮತ್ಪಿತಾ ರಾಮಚಂದ್ರೋ
ಭ್ರಾತಾ ರಾಮೋ ಮತ್ಸಖಾ ರಾಮಚಂದ್ರಃ ।
ಸರ್ವಸ್ವಂ ಮೇ ರಾಮಚಂದ್ರೋ ದಯಾಳುಃ
ನಾನ್ಯದ್ ದೈವಂ ನೈವ ಜಾನೇ ನ ಜಾನೇ ॥

ಹೀಗೆ ನಮ್ಮೆಲ್ಲರಿಗೂ ಸರ್ವಸ್ವನಾದ ದಯಾಳುವಾದ ಹರಿಯನ್ನು ಕರೆಯಲು ಇದಕ್ಕಿಂತ ಚೆನ್ನಾದ ಶಬ್ದ ಇನ್ನೊಂದಿರಲಾರದು

**ತಂದೆತಾಯ್ಗಳು ತಮ್ಮ ಶಿಶುವಿಗೆ**
**ಬಂದ ಭಯಗಳ ಪರಿಹರಿಸಿ ನಿಜ-**
**ಮಂದಿರದಿ ಬೇಡಿದುದನಿತ್ತಾದರಿಸುವಂದದಲಿ ।**
**ಹಿಂದೆ ಮುಂದೆಡಬಲದಿ ಒಳ ಹೊರ-**
**ಗಿಂದಿರೇಶನು ತನ್ನವರನೆಂ-**
**ದೆಂದು ಸಲಹುವನಾಗಸದವೋಲೆತ್ತ ನೋಡಿದರು ॥ ೨೪ ॥**

ತಂದೆ ತಾಯಿಗಳು ತಮ್ಮ ಮಗುವಿಗೆ ಬರಬಹುದಾದ ಎಲ್ಲ ಬಗೆಯ ಆಪತ್ತುಗಳನ್ನೂ ಪರಿಹರಿಸಿ ತಮ್ಮ ಮನೆಯಲ್ಲಿರಿಸಿಕೊಂಡು ಬೇಡಿದುದನ್ನೆಲ್ಲ ನೀಡಿ ಆದರಿಸುವಂತೆ ಇಂದಿರಾರಮಣ ಶ್ರೀಹರಿ ಎತ್ತ ನೋಡಿದರೂ ಆಕಾಶದಂತೆ ಹಿಂದೆ ಮುಂದೆ ಎಡಬಲಗಳಲ್ಲಿ ಒಳಗೆ ಹೊರಗೆ ಎಲ್ಲೆಡೆ ಇದ್ದು ತನ್ನವರನ್ನು ಎಂದೆಂದೂ ಸಲಹುತ್ತಾನೆ

***ಶಿಶುವಿಗೆ ಬಂದ ಭಯಗಳ ಪರಿಹರಿಸಿ***

ಆದಿಭೂತ ಅಧ್ಯಾತ್ಮ ಆಧಿದೈವ ಎಂದು ಮೂರು ಬಗೆಯ ಭಯಗಳು ಅಂದರೆ ಆಪತ್ತುಗಳಿವೆ ಮೃಗ, ಸರ್ಪ, ಕ್ರಿಮಿ, ಕೀಟ ಮುಂತಾದವುಗಳಿಂದ ಬರುವ ಭಯ ಅಧಿಭೂತ ಹಸಿವು, ತೃಷೆ, ನಿದ್ರೆ ಮುಂತಾದವು ಮತ್ತು ದೈಹಿಕ, ಮಾನಸಿಕ ಪೀಡೆಗಳು, ರೋಗರುಜಿನಗಳು ಇವೆಲ್ಲವೂ ಅಧ್ಯಾತ್ಮ ಭಯಗಳು ಮಳೆ, ಬಿಸಿಲು, ಗಾಳಿ, ಚಳಿ ಮುಂತಾದವು ಆಧಿದೈವ ಭಯಗಳು ಇವು ಯಾವುವೂ ಮಗುವನ್ನು ಪೀಡಿಸದಂತೆ ನೋಡಿಕೊಳ್ಳುತ್ತಾರೆ, ತಂದೆತಾಯಿಗಳು ಅದಕ್ಕಾಗಿ ಸದಾ ಹಿಂದೆ ಮುಂದೆ ಎಡಬಲಗಳಲ್ಲಿ ಆವಶ್ಯಕತೆ ಇದ್ದಲ್ಲೆಲ್ಲ ಅವರು ಎಚ್ಚರದಿಂದ ಇರುತ್ತಾರೆ

***ಬೇಡಿದುದನಿತ್ತು ಆದರಿಸುವರು***

ತಂದೆ ಮಗುವಿಗೆ ವಿದ್ಯೆಬುದ್ಧಿಗಳನ್ನು ನೀಡಿ ಒಳ್ಳೆಯ ಮನುಷ್ಯನನ್ನಾಗಿ ಮಾಡುತ್ತಾನೆ 'ತಂದೆ' ಎಂಬಲ್ಲಿ 'ತನ್-ದೆ' ಎಂದು ಎರಡು ಶಬ್ದಗಳಿವೆ ತನುವನ್ನು ಕೊಡುವವನು, 'ತನುಂ ದದಾತಿ' ಎಂದರ್ಥ

> ಜನಿತಾ ಚೋಪನೇತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ ।
> ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥

ತಂದೆ ಶಿಶುವಿನ ಹುಟ್ಟಿಗೆ ಕಾರಣನಾಗಿ ತನುವನ್ನು ಕೊಡುತ್ತಾನೆ ಉಪನಯನ ಸಂಸ್ಕಾರದಿಂದ ಎರಡನೆ ಜನ್ಮದಲ್ಲಿ ಸಂಸ್ಕೃತವಾದ ತನುವನ್ನು ನೀಡುತ್ತಾನೆ ವಿದ್ಯೆ ನೀಡುವ ಮೂಲಕವೂ ಸುಸಂಸ್ಕೃತವಾದ ತನುವನ್ನು ನೀಡುತ್ತಾನೆ ಅನ್ನ ನೀಡುವ ಮೂಲಕ ಶರೀರದ ಪೋಷಣೆ ಮಾಡುವುದರಿಂದಲೂ ಪುಷ್ಟವಾದ ತನುವನ್ನು ನೀಡುತ್ತಾನೆ ಭಯಗಳಿಂದ ಅಂದರೆ ಹಿಂದೆ ಹೇಳಿದ ಆಧಿಭೌತಿಕ ಮುಂತಾದ ಮೂರು ಬಗೆಯ ಭಯ ಪರಿಹರಿಸುವ ಮೂಲಕವೂ ತನುವನ್ನು ನೀಡುತ್ತಾನೆ ಹೀಗೆ ಐದು ಬಗೆಯಿಂದ ತಂದೆ 'ತಂದೆ' ಎನಿಸುತ್ತಾನೆ ಈ ಐದು ಬಗೆಯ ತನುದಾನವೂ ಮಗುವಿಗೆ ಬೇಕು ಮಗುವಿನ ಆತ್ಮ ಅದೆಲ್ಲವನ್ನು ಬೇಡುತ್ತದೆ ತಂದೆ ಅದನ್ನು ನೀಡಿ ಆದರಿಸುತ್ತಾನೆ

ತಾಯಿ ಮಗುವನ್ನು ಆದರಿಸುವ ಬಗೆಯನ್ನು ವಿಜಯದಾಸರ ಮಾತಿನಲ್ಲಿ ಹೇಳಬೇಕೆಂದರೆ,

> ಬಡತನದಲಿ ಹುಚ್ಚು ಹಿಡಿದು ತಿರುಗುವ ಮಗನು
> ಅಡವಿ ಅಡವಿ ತಿರುಗಿ ತಿರುಗುತಿರಲು

ಹಡೆದ ತಾಯಿ ಬಹು ಮೋಹಪಾಶದಲ್ಲಿ
ಅಡಿಗಡಿಗೆ ಅವನ ರಕ್ಷಿಸುತಿಪ್ಪಳು
ನಿಚ್ಚ ಜನನಿ ಬಲು ಹುಚ್ಚು ಹಿಡಿದ ತನ್ನ
ಕಚ್ಚುವ ಮಗನಿಗೆ ಬಚ್ಚಿಟ್ಟು ಪದಾರ್ಥ
ಮುಚ್ಚಿಕೊಂಡು ಬಂದು ಮುಚ್ಚುಗೊಳಿಸಿ ಗ್ರಾಸ
ಅಚ್ಚನಾಗಿ ಇತ್ತು ನಿಚ್ಚಳಾಗಿ ॥

ಇಷ್ಟು ವ್ಯತ್ಯಾಸ ತಾಯಿ ಮಗುವಿನ ಮೇಲಿನ ಕುರುಡು ಮೋಹದಿಂದ, ಮಗು ಎಷ್ಟೇ ಕೆಟ್ಟಿರಲಿ, ಬೇಡಿದುದನಿತ್ತು ಆದರಿಸುತ್ತಾಳೆ ಸರ್ವಜ್ಞನಾದ ಶ್ರೀಹರಿ ಕೇವಲ ಕರುಣೆಯಿಂದಲೆ, ಭಕ್ತ ಎಷ್ಟೇ ಅಪರಾಧಗೈದರೂ, ಮರೆತು, ಬೇಡಿದುದನಿತ್ತು ಆದರಿಸು-ತ್ತಾನೆ ಐದು ಬಗೆಯಿಂದಲೂ ತಂದೆಯಾಗಿ ಭಕ್ತರನ್ನು ಕಾಪಾಡುತ್ತಾನೆ

***ಹಿಂದೆ ಮುಂದೆ ಎಡಬಲದಿ***

ಅಗ್ರತಃ ಪೃಷ್ಠತಶ್ಚೈವ ಪಾರ್ಶ್ವಯೋಶ್ಚ ಮಹಾಬಲೌ ।
ಆಕರ್ಣಪೂರ್ಣಧನ್ವಾನೌ ರಕ್ಷೇತಾಂ ರಾಮಲಕ್ಷ್ಮಣೌ ॥

'ಮುಂದೆ ಹಿಂದೆ ಎಡಬಲಗಳಲ್ಲಿ ಬಿಲ್ಲಿನ ಹೆದೆಯನ್ನು ಕಿವಿವರೆಗೆ ಸೆಳೆದು ನಿಂತಿರುವ ಮಹಾ-ಬಲಶಾಲಿಗಳಾದ ರಾಮಲಕ್ಷ್ಮಣರು ನಮ್ಮನ್ನು ಕಾಪಾಡಲಿ' ಎಂದು ನಾವು ಬೇಡುತ್ತೇವೆ ಬೇಡಿದರೆ ಅವರು ಹಾಗೇ ಕಾಪಾಡುತ್ತಾರೆ ವಿಜಯದಾಸರು ಸ್ವಾನುಭವದಲ್ಲಿ ಇದನ್ನು ಕಂಡಿದ್ದಾರೆ—

ಒಂದು ಕೈಯಲಿ ಖಡ್ಗ ಒಂದು ಕೈಯಲಿ ಹಲಗೆ
ಅಂದವಾಗಿ ಪಿಡಿದುಕೊಂಡು ದಿವಾರಾತ್ರಿಯಲಿ ।
ಬಂದು ಬದಿಯಲ್ಲಿ ನಿತ್ಯ ಬಾರಾಸನಾಗಿ
ಹಿಂದು ಮುಂದುಪದ್ರವವಾಗದಂತೆ
ಇಂದಿರೆರಮಣ ಕಾಯುತಲಿರೆ ಎನಗಾವ
ಬಂಧಕಗಳು ಇಲ್ಲ ॥

ತಂದೆತಾಯಿಗಳೊಳಗಿದ್ದು ಅವರ ಮೂಲಕ ರಮಾನಾರಾಯಣರು ಎಲ್ಲಾ ಮಕ್ಕಳಿಗೆ ಜನ್ಮ ನೀಡುತ್ತಾರೆ ಎಂದು ಶ್ರೀಕೃಷ್ಣನೆ ಭಗವದ್ಗೀತೆಯಲ್ಲಿ ಹೇಳುತ್ತಾನೆ—

ಸರ್ವಯೋನಿಷು ಕೌಂತೇಯ ಮೂರ್ತಯಸ್ಸಂಭವಂತಿ ಯಾಃ ।
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥

'ಅರ್ಜುನ, ಎಲ್ಲ ದೇವ ಮನುಷ್ಯ ಪ್ರಾಣಿ ಜಾತಿಗಳಲ್ಲಿಯೂ ಶರೀರೋತ್ಪತ್ತಿಗೆ ಭೂಮಿಯಂತೆ ಮಹಾಲಕ್ಷ್ಮಿ ಕಾರಣಳು ಬೀಜ ಬಿತ್ತುವ ತಂದೆ ನಾನು'

ತಾಯಿ ಮಗುವಿಗೆ ಸ್ತನಪಾನ ಮಾಡಿಸಿ ಪೋಷಿಸಿದರೂ ವಾಸ್ತವದಲ್ಲಿ ಅವಳಲ್ಲಿ ಶ್ರೀಹರಿಯ ಸರಸ್ವತಿನಾಮಕ ಸ್ತ್ರೀರೂಪ ಮತ್ತು ರಮಾದೇವಿ ಭಾರತಿಸರಸ್ವತಿಯರೇ ಎಲ್ಲರಿಗೂ ಸ್ತನಪಾನ ಮಾಡಿಸುತ್ತಿದ್ದಾರೆ. ಋಗ್ವೇದದ ಈ ಮಂತ್ರ ಅದನ್ನು ಹೇಳುತ್ತಿದೆ—

ಯಸ್ತೇ ಸ್ತನಃ ಶಶಯೋ ಯೋ ಮಯೋ ಭೂಃ
ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ ।
ಯೋ ರತ್ನಧಾ ವಸುವಿದ್ ಯಃ ಸುದತ್ರಃ
ಸರಸ್ವತಿ ತಮಿಹ ಧಾತವೇಕಃ ॥

'ಸರಸ್ವತಿ! ಅತ್ಯಂತ ಸುಖಕರ ಸರ್ವೋತ್ಕೃಷ್ಟ ಹಾಗೂ ಗುಣಪೂರ್ಣ ನಿನ್ನ ಸ್ತನ ರತ್ನಹಾರಗಳಿಂದ ಒಪ್ಪುತ್ತಿದೆ. ಚಿನ್ನದಾಭರಣಗಳಿಂದ ಹೊಳೆಯುತ್ತಿದೆ. ನಮಗೆ ಸಕಲಾಭೀಷ್ಟ ನೀಡುತ್ತ ರಕ್ಷಣೆ ಮಾಡುತ್ತಿದೆ. ಅದರ ಮೂಲಕ ನೀನು ಎಲ್ಲ ಸಜ್ಜನರನ್ನೂ ಪೋಷಿಸುವಿ'

**ನಿಜ ಮಂದಿರದಿ .**

ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥

ಎಂಬಂತೆ ಇಡೀ ಬ್ರಹ್ಮಾಂಡವೆ ಶ್ರೀಹರಿಯ ನಿಜ ಮಂದಿರ. ಅದರೊಳಗೆ ಹುಟ್ಟುವ ಎಲ್ಲ ಚೇತನರೂ ಹರಿಯ ಮಕ್ಕಳು. ಅವನು ತಂದೆ. ಬೇಡಿದುದನ್ನಿತ್ತು ಆದರಿಸುತ್ತಾನೆ. ಬೇಡಬೇಕಷ್ಟೆ. ಮಕ್ಕಳು ಅತ್ತರೆ ತಂದೆತಾಯಿಗಳು ಬಳಿಗೆ ಧಾವಿಸಿ ಬರುತ್ತಾರೆ. ಭಕ್ತರು ಹಾಗೇ ಭಗವಂತನನ್ನು ಬೇಡಬೇಕು.

ಒಂದು ವೇಳೆ ಭಕ್ತ ಪ್ರಾರಬ್ಧವಶದಿಂದ ಭಗವಂತನನ್ನು ಮರೆತರೂ ತಂದೆಯಾದ ಆತನೆ ತಾಯಾಗಿ ಬರುತ್ತಾನೆ. 'ತಾಯಿ' ಎಂದರೆ, 'ತಾಯೃ ಸಂತಾನಪಾಲನಯೋಃ' ಎಂಬ ಧಾತು ನಿಷ್ಪನ್ನವಾಗಿದೆ ಈ ಶಬ್ದ. ಮಗುವನ್ನು ಕಾಪಾಡುವವಳು, ಮಗು ಎಷ್ಟೇ ಕೆಟ್ಟಿರಲಿ, ವಿಜಯದಾಸರು ಹೇಳುವಂತೆ 'ಹುಚ್ಚು ಹಿಡಿದ, ತನ್ನ ಕಚ್ಚುವ ಮಗನಿಗೆ, ಬಚ್ಚಿಟ್ಟು ಪದಾರ್ಥ ಮುಚ್ಚಿಕೊಂಡು ಬಂದು ಕೊಡು'ವವಳು! ಅಂಥ ತಾಯಾಗಿ ಬಂದು ಹರಿ ಭಕ್ತನನ್ನು ಆದರಿಸುತ್ತಾನೆ.

ಅಥವಾ 'ತನ್ನವರ ನಿಜಮಂದಿರ'ವೆ ಹರಿಯ ನಿಜಮಂದಿರ. ನಮ್ಮ ಮನೆ ಭಗವಂತನ ಮನೆಯಾಗಬೇಕು. ಅಲ್ಲಿ ಭಗವಂತನ ಆರಾಧನೆ ನಡೆಯುತ್ತಿರಬೇಕು. ಆಗ ಅವನು ಬೇಡಿದುದನ್ನಿತ್ತು ಆದರಿಸುತ್ತಾನೆ.

ವಸ್ತುತಃ ಶ್ವೇತದ್ವೀಪ, ಅನಂತಾಸನ, ವೈಕುಂಠ ಮುಂತಾದ ಮುಕ್ತಲೋಕಗಳೆ ಶ್ರೀಹರಿಯ ನಿಜಮಂದಿರಗಳು. ಅವುಗಳಲ್ಲಿ 'ಶಿಶು'ಗಳನ್ನು ಅಂದರೆ ಮಕ್ಕಳಂತೆ ಅಜ್ಞಾನಿಗಳಾದ ನಿಷ್ಪಾಪರಾದ ಸಜ್ಜನರನ್ನು ಅವರಿಗೆ ಬಂದ ಸಂಸಾರಭಯಗಳನ್ನು ಪರಿಹರಿಸಿ ಅವರು ಬೇಡುವ ಎಲ್ಲಾ ಮೋಕ್ಷಸುಖಭೋಗಗಳನ್ನಿತ್ತು ಆದರಿಸುತ್ತಾನೆ.

*ಆಗಸದ ಓಲೆತ್ತ ನೋಡಿದರು*

ತಂದೆತಾಯಿಗಳು ಮಗುವಿಗೆ ಹಿಂದೆ ಮುಂದೆ ಎಡಬಲಗಳಲ್ಲಿ ಮಾತ್ರ ನಿಲ್ಲಬಹುದು ಆದರೆ ಶ್ರೀಹರಿ ಎತ್ತನೋಡಿದರೂ ಆಕಾಶದಂತೆ ಒಳಗೂ ಹೊರಗೂ ಎಲ್ಲೆಡೆ ಇರುತ್ತಾನೆ ಆಕಾಶದಂತೆ ನಿರಾಕಾರಮಾತ್ರನಲ್ಲ ಅನಂತ ಆಕಾರಗಳುಳ್ಳವ ಅನಂತ ರೂಪಗಳಿಂದ ಎಲ್ಲೆಡೆ ವ್ಯಾಪಿಸಿದ್ದಾನೆ ಆತ ಅನಂತವಾದ ಆಕಾಶ ಹೇಗೆ ಅನಂತ ವಸ್ತುಗಳಿಗೆ ಅವಕಾಶ ನೀಡುವುದೋ ಹಾಗೇ ಹರಿ ಅನಂತ ಜೀವರನ್ನು ತನ್ನೊಳಗೆ ಇಟ್ಟುಕೊಂಡಿದ್ದಾನೆ ಆಕಾಶದಂತೆಯೆ ಕಣ್ಣಿಗೆ ಅಗೋಚರನಾಗಿದ್ದೇ ಎಲ್ಲರನ್ನೂ ಕಾಪಾಡುತ್ತಾನೆ

**ಒಡಲ ನೆಳಲಂದದಲಿ ಹರಿ ನ-**
**ಮ್ಮೊಡನೆ ತಿರುಗುವ ಒಂದರಕ್ಷಣ**
**ಬಿಡದೆ ಬೆಂಬಲನಾಗಿ ಭಕ್ತಾಧೀನನೆಂದೆನಿಸಿ ।**
**ತಡೆವ ದುರಿತೌಘಗಳ ಕಾಮದ**
**ಕೊಡುವ ಸಕಲೇಷ್ಟಗಳ ಸಂತತ**
**ನಡೆವ ನಮ್ಮಂದದಲಿ ನವಸುವಿಶೇಷ ಸನ್ಮಹಿಮ ॥ ೨೫ ॥**

ನಮ್ಮೊಡನೆ ನಮ್ಮ ಮೈಯ ನೆರಳು ಒಂದರೆಕ್ಷಣ ಬಿಡದೆ ಹೇಗೆ ತಿರುಗುವುದೊ ಹಾಗೆಯೇ ಶ್ರೀಹರಿ ಭಕ್ತರೊಡನೆ ಒಂದರೆಕ್ಷಣ ಬಿಡದೆ ತಿರುಗುತ್ತಾನೆ ಭಕ್ತನಿಗೆ ಬೆಂಬಲನಾಗಿದ್ದೇ ಅವನಿಗೆ ಅಧೀನನೂ ಎಂದೆನಿಸುತ್ತಾನೆ ಭಕ್ತರಿಗೆ ಬಂದೊದಗುವ ಪಾಪರಾಶಿಗಳನ್ನು ತಡೆಯುತ್ತಾನೆ ಕಾಮಿತದಾಯಕನೆನಿಸಿ ಸಕಲಾಭೀಷ್ಟಗಳನ್ನು ಕೊಡುತ್ತಾನೆ ಸದಾ ನಮ್ಮ ನಡುವೆ ನಮ್ಮಂತೆಯೆ ನಡೆಯುತ್ತಾನೆ, ನೆರಳಿನಂತೆಯೆ ಇವೆಲ್ಲವೂ ಸದಾ ಹೊಸ ಹೊಸ ಬಗೆಯ ನಿರ್ದುಷ್ಟ ಮಹಿಮಾಶಾಲಿ ಶ್ರೀಹರಿಗೆ ಒಪ್ಪುವಂಥವು

ಹಿಂದಿನ ನುಡಿಯಲ್ಲಿ ಹರಿಕರುಣೆಯನ್ನು ಬಣ್ಣಿಸುತ್ತ 'ಭಕ್ತನಿಗೆ ಹರಿ ತಂದೆಯಾಗಿ, ತಾಯಾಗಿ, ಬಂಧುವಾಗಿ, ರಕ್ಷಕನೆನಿಸುತ್ತಾನೆ ಹಿಂದೆ ಮುಂದೆ ಎಡ ಬಲ ಒಳಗೆ ಹೊರಗೆ ಎತ್ತ ನೋಡಿದರೂ ಆಕಾಶದಂತೆ ಜೊತೆಗಿದ್ದು ರಕ್ಷಿಸುತ್ತಾನೆ ಎಂದಿದೆ ಈ ನುಡಿಯಲ್ಲಿ ಅವನ ಕರುಣೆಯನ್ನು ಇನ್ನೂ ಹೆಚ್ಚು ಪರಿಣಾಮಕಾರಿಯಾಗುವಂತೆ ಚಿತ್ರಿಸುತ್ತಾರೆ ದಾಸರಾಯರು

*ಒಡಲ ನೆಳಲಂದದಲಿ*

ಭಕ್ತ ಭಗವಂತರೊಳಗಿನ ಸಂಬಂಧ ಶರೀರ ಮತ್ತು ಅದರ ನೆರಳುಗಳೊಳಗಿರುವ ಸಂಬಂಧದಂತೆ ಶಾಶ್ವತ

ನೆಳಲು ಅಥವಾ ನೆರಳು ಸಂಸ್ಕೃತದಲ್ಲಿ 'ಛಾಯೆ' ಒಂದು ಬಗೆಯ ಪ್ರತಿಬಿಂಬ ಆಕಾಶದಲ್ಲಿ ಸೂರ್ಯಚಂದ್ರರ ಪರಿವೇಷ, ಕಾಮನಬಿಲ್ಲು, ಸ್ಫಟಿಕದಲ್ಲಿ ದಾಸವಾಳದ

ಕೆಂಬಣ್ಣ, ಪ್ರತಿಧ್ವನಿ ಮುಂತಾದುವು ಹೀಗೆಯೆ ಪ್ರತಿಬಿಂಗಳೆ ಪ್ರತಿಬಿಂಬವೆಂದರೆ ಬಿಂಬಕ್ಕೆ ಸದಾ ಅಧೀನ ದೇಹಕ್ಕೆ ಚಲನೆಯಿಲ್ಲದೆ ಅದರ ನೆರಳಿಗೆ ಸ್ವತಃ ಚಲನೆಯಿಲ್ಲ ಈಗ ಈ ದೃಷ್ಟಾಂತದಿಂದ ಭಕ್ತನ ಕ್ರಿಯೆಯಿಲ್ಲದೆ ಭಗವಂತನಿಗೆ ಸ್ವತಃ ಕ್ರಿಯೆ ಇಲ್ಲಎಂದಂತಾಗುವುದು ಏಕೆಂದರೆ ಭಕ್ತನಿಗೆ ನೆರಳಿನಂತೆ, ಭಗವಂತ!

ವಸ್ತುತಃ ಭಗವಂತ ಬಿಂಬ. ಅವನ ನೆರಳಿನಂತೆ ಭಕ್ತ ಲೋಕಮಾತೆಯಾದ ಮಹಾಲಕ್ಷ್ಮಿ ಭಗವಂತನ ಛಾಯೆ! 'ಛಾಯಾ ವಿಷ್ಣೋ ರಮಾ' ಇನ್ನುಳಿದವರ ಪಾಡೇನು? ಹೀಗೆ ಎಲ್ಲರಿಗೂ ಬಿಂಬನಾದ ಹರಿಯಲ್ಲಿ ಭಕ್ತ ಹೀಗೆ ಬೇಡಬೇಕಂತೆ, ಗೋಪಾಲದಾಸರು ಹೇಳುತ್ತಾರೆ—

> ಇದೆ ಪಾಲಿಸು ಇದೆ ಪಾಲಿಸು ಇದೆ ಪಾಲಿಸಯ್ಯ!
> ಬಿಂಬ ಚಲಿಸೆ ಪ್ರತಿಬಿಂಬ ಚಲಿಸುವನು,
> ಬಿಂಬ ಪೂರ್ಣನು, ಪ್ರತಿಬಿಂಬ ಅಪೂರ್ಣ!
> ಉಂಬುಡುಕ್ರಿಯೆ ಬಿಂಬ ಮಾಡಿಸೆ, ಪ್ರತಿ-
> ಬಿಂಬಕ್ಕುಂಟೆಂಬುವ ಬಿಂಬಕ್ರಿಯೆಯೆನಗೆ ॥

ಹೀಗೆ ಎಲ್ಲರಿಗೂ ಬಿಂಬನಾದ ಹರಿ ಎಲ್ಲರಿಗೂ ಪ್ರತಿಬಿಂಬನಂತೆ ವರ್ತಿಸುತ್ತಾನೆ ಎಂದರೆ, ಭಕ್ತಪರಾಧೀನನೆನಿಸುವನೆಂದರೆ ಅವನ ಕರುಣೆಗೆ ಪಾರ ಉಂಟೆ!

***ಹರಿ ನಮ್ಮೊಡನೆ ತಿರುಗುವ***

ಹರಿ ನಮ್ಮೊಡನೆ ತಿರುಗುತ್ತಾನೆ ಅರೆಕ್ಷಣ ಬಿಡದೆ, ಎಂದರೆ ನಮ್ಮೊಡನೆ ದೇಹದಿಂದ ದೇಹಕ್ಕೆ ತಿರುಗುತ್ತಾನೆ, ನಮ್ಮೊಡನೆಯೆ ಹುಟ್ಟುತ್ತಾನೆ ಬದುಕುತ್ತಾನೆ, ಸಾಯುತ್ತಾನೆ ನಿಜ ಹೇಳಬೇಕೆಂದರೆ ಜೀವನೂ ಹುಟ್ಟುವುದಿಲ್ಲ, ಸಾಯುವುದಿಲ್ಲ ಅವನಿಗೆ ಶರೀರದಲ್ಲಿ ಪ್ರವೇಶನಿರ್ಗಮನಗಳೆ ಹುಟ್ಟುಸಾವುಗಳು ಇವು ಹರಿಗೂ ಸಮಾನವೆ ಆದರೆ ಹರಿ ಶರೀರ ತೊರೆದಾಗ ಜೀವ ಸತ್ತನೆಂದು ವ್ಯವಹಾರ ಏಕೆಂದರೆ ಸಾವಿನ ಸಂಕಟ ಜೀವನಿಗೆ ಹೊರತು ಭಗವಂತನಿಗಿಲ್ಲ ಅವನು ಬಿಂಬನಾದ್ದರಿಂದ ಬಿಂಬಕ್ರಿಯೆ ಪ್ರತಿಬಿಂಬಕ್ರಿಯೆಗಾಗಿ ಬೇಕಾಗುತ್ತದೆ ಇಷ್ಟು ವ್ಯತ್ಯಾಸ, ಜೀವ ಕ್ರಿಯೆಯನ್ನು ದುಃಖದಿಂದ ಮಾಡುತ್ತಾನೆ, ಹರಿ ಸ್ವತಂತ್ರನಾಗಿ ಆನಂದದಿಂದ ಮಾಡುತ್ತಾನೆ ನಾವು ದುಃಖದಿಂದ ಕಣ್ಣೀರಿಡುವಾಗ ಆತ ಆನಂದದ ಬಾಷ್ಪ ಸುರಿಸುತ್ತಾನೆ ಬಿಂಬಪ್ರತಿಬಿಂಬಗಳೊಳಗೆ ಪೂರ್ಣಸಾಮ್ಯ ಶಕ್ಯವಿಲ್ಲ ತಾನೆ? ಶರೀರಕ್ಕೆ ಕಣ್ಣು ಮೂಗು ಕಿವಿ ಎಲ್ಲ ಇವೆ ನೆರಳಿಗೆ ಏನೂ ಇರುವುದಿಲ್ಲ!

***ಒಂದರೆಕ್ಷಣ ಬಿಡದೆ ಬೆಂಬಲನಾಗಿ***

'ಆಗಸದವೋಲೆತ್ತನೋಡಿದರೂ' ಎಂಬಂತೆ ಎಲ್ಲಕಡೆ ವ್ಯಾಪಿಸಿದ್ದು ಒಂದು ಅರೆಕ್ಷಣ ಬಿಡದೆ ಭಕ್ತನಿಗೆ ಬೆಂಬಲನಾಗಿ ಬೆಂಗಾವಲಾಗಿ ಹಿಂದೆ ಮುಂದೆ ಎಡಬಲ ಎಲ್ಲೆಡೆ

ತಿರುಗುತ್ತಾನೆ ನೆರಳಿನಂತೆ ನಾವು ಬೆಳಕಿಗೆ ಮುಖ ಮಾಡಿರುತ್ತೇವೆ ಹಿಂದೆ ನೆಳಲು ಬೆನ್ನು ಮಾಡಿದರೆ ಮುಂದೆ ನೆಳಲು ಬಲಕ್ಕೆ ನಿಂತರೆ ಎಡದಲ್ಲಿ ಎಡಕ್ಕೆ ನಿಂತರೆ ಬಲದಲ್ಲಿ ಹೀಗೆ ಭಗವಂತ ನಮಗೆ ಅರಿವಿಲ್ಲದಂತೆ ನಮ್ಮ ಜೊತೆಗೇ ಇದ್ದು ಕಾಪಾಡುತ್ತಾನೆ ನೆರಳು ನಮ್ಮ ಜೊತೆಗೇ ಇರುತ್ತದೆ ಬೆಂಬಲವಾಗಿ ಅಲ್ಲ ಅದು ಕೇವಲ ಪ್ರತಿಬಿಂಬ ಬಿಂಬಬಲ ಅದಕ್ಕೆ ಬೇಕು

*ಭಕ್ತಾಧೀನನೆಂದೆನಿಸಿ*

ಪೂರ್ಣಾನಂದ, ಪೂರ್ಣಕಾಮನಾದ ಹರಿ ಮಾಡುವುದೆಲ್ಲ ಭಕ್ತರಿಗಾಗಿ ತನಗಾಗಿ ಅಲ್ಲ ಸೃಷ್ಟಿಸ್ಥಿತಿಲಯನಿಯಮನ ಮುಂತಾದುದನ್ನು ಯಾವುದನ್ನೆ ಮಾಡಲಿ ಅದರಿಂದ ಅವನಿಗೇನೂ ಆಗಬೇಕಾಗಿಲ್ಲ ಭಕ್ತರಿಗೇ ಅದರಿಂದ ಪ್ರಯೋಜನ ಹೀಗಾಗಿ ಗೋಪಾಲ-ದಾಸರು ಹೇಳುವಂತೆ,

ಭಕ್ತರ ಸೃಷ್ಟಿಯೇವೆ ನಿನ್ನ ಸೃಷ್ಟಿಯೊ ದೇವ
ಭಕ್ತರ ಸ್ಥಿತಿಯೇವೆ ನಿನಗೆ ಸ್ಥಿತಿಯೊ ಸ್ವಾಮಿ
ಭಕ್ತರು ನಿನ್ನಾಧೀನ ನೀ ಭಕ್ತರಾಧೀನ ॥

ಸೃಷ್ಟ್ಯಾದಿಗಳು ಮಾತ್ರವಲ್ಲ ಹರಿಯ ಜ್ಞಾನಾನಂದಬಲಕಾರುಣ್ಯಾದಿ ಅನಂತಗುಣ-ಗಳೂ ಭಕ್ತರ ವಿಷಯದಲ್ಲಿಯೆ ಭಕ್ತರಿಗಾಗಿಯೆ ಭಕ್ತರಿಂದಲೆ ವ್ಯಕ್ತವಾಗುತ್ತವೆ ಭಕ್ತರು ಮೊರೆ ಇಡದಿದ್ದರೆ ಭಗವಂತನ ಕಾರುಣ್ಯ ಹೇಗೆ ವ್ಯಕ್ತವಾಗಬೇಕು?

ಭಕ್ತರೆ ನಿನಗಿನ್ನು ಬ್ಯಾಡದಿದ್ದರೆ ಸ್ವಾಮಿ
ವ್ಯಕ್ತಿ ಮಾಡುವರಾರು ಈ ನಿನ್ನ ಗುಣಗಳ?

ಎಂದೂ ಸವಾಲು ಒಡ್ಡುತ್ತಾರೆ ಗೋಪಾಲದಾಸರು ಒಂದು ಕಂಚಿನ ಘಂಟೆಯ ದೃಷ್ಟಾಂತ ಕೊಡುತ್ತಾರೆ—

ಎಂಟು ನೇರಿನದೊಂದು ಗಂಟೆಯ ನಿರ್ಮಿಸಿ
ಒಂಟಿಲಿ ಇಟ್ಟಿನ್ನು ಹಿಡಿದು ಬಾರಿಸಿದರೆ
ಘಂಟೆಯಲ್ಲಿದ್ದ ನಾದ ತಿಳಿಯುವುದೆ?
ಎಂಟು ತೊಲೆಯದೊಂದು ಸೊಂಟ ನಾಲಿಗೆಯಿನ್ನು
ಉಂಟಾದರಾಯಿತು, ಘಂಟೆ ಶೋಭಿಸುವುದು!
ಘಂಟೆಯಂತೆ ನೀನು, ನಾಲಿಗೆಯಂತೆ ನಾನು !
ವೈಕುಂಠಮೂರುತಿ ರಂಗ ಗೋಪಾಲವಿಠಲ
ಬಂಟರಿಂದಲೆ ನಿನ್ನ ಭಾಗ್ಯ ಶೋಭಿಸುವುದು ॥

ಎಂಟು ನೇರಿನ ಭಾರಿ ಘಂಟೆಯನ್ನು ಕೈಯಿಂದ ಬಾರಿಸಿದರೆ ಧ್ವನಿಯೆ ಹೊರಡದು ಒಂದು ಚಿಕ್ಕ ನಾಲಿಗೆ ಎಂಟು ತೊಲೆಯದು, ಅದು ಇದ್ದರೇ ಘಂಟೆ ಶೋಭಿಸುವುದು ಅದು

ಘಂಟೆಯನ್ನು ಸ್ಪರ್ಶಿಸಿದರೆ ಸಾಕು ಘಂಟೆಯಿಂದ ಧ್ವನಿ ಹೊರಡುವುದು ಘಂಟೆ ಭಗವಂತ, ನಾಲಿಗೆ ಜೀವ ಜೀವ ತನ್ನ ನಾಲಿಗೆಯಿಂದ ರಾಮನಾಮವನ್ನು ಮೆತ್ತಗೆ ನುಡಿದರೆ ಸಾಕು ಶ್ರೀರಾಮ ಗಟ್ಟಿಯಾಗಿ ಹೇಳುತ್ತಾನೆ—'ಅಭಯಂ ಸರ್ವಭೂತೇಭ್ಯೋ ದದಾಮಿ' ನಿನಗೆ ಅಭಯವನ್ನು ನೀಡುತ್ತೇನೆ, ಮೋಕ್ಷ ಕೊಡುತ್ತೇನೆ ಎಂದು ನಾಲಿಗೆ ಒಂದು ಬಾರಿ ಘಂಟೆಯೊಡನೆ ಸೇರಿ ಒಂದು ಮಧುರ ಧ್ವನಿ ಹೊರಡಿಸಿದರೆ ಸಾಕು, ಆ ಧ್ವನಿ ಅನುರಣನ ಹೊಂದಿ ನಿರಂತರ ಅಲೆಅಲೆಯಾಗಿ ಹೊರಡುತ್ತದೆ ಒಂದು ಧ್ವನಿ ಅನಂತವಾಗುತ್ತದೆ ಹೀಗೆ ಜೀವನ ಒಂದು ಸಣ್ಣ ಕರ್ಮ 'ಶ್ರೀರಾಮ' ಎಂಬ ನಾಮೋಚ್ಚಾರಣೆ ಅದರ ಫಲ ಅನಂತ ಶಾಶ್ವತವಾದ ಮೋಕ್ಷಾನಂದ ಇಲ್ಲಿ ಘಂಟೆಯೂ ಕಂಚಿನದು, ನಾಲಿಗೆಯೂ ಕಂಚಿನದು ಆದರೆ ಘಂಟೆ ಎಂಟು ಸೇರು ನಾಲಿಗೆ ಎಂಟು ತೊಲೆ ನಾಲಿಗೆ ಘಂಟೆಯೊಳಗೆ ಅಡಕವಾಗಿರುತ್ತದೆ ಅದಕ್ಕೆ ಘಂಟೆ ಆಧಾರ ಹಾಗೇ ಭಗವಂತಭಕ್ತರಿಬ್ಬರೂ ಸಚ್ಚಿದಾನಂದಸ್ವರೂಪರು ಆದರೆ ಭಗವಂತ ಆನಂದಸಾಗರ, ಭಕ್ತ ಒಂದು ಬಿಂದು ಭಕ್ತ ಭಗವಂತನ ಉದರದಲ್ಲಿ ಸೇರಿಹೋಗಿದ್ದಾನೆ ಅವನಿಗೆ ಭಗವಂತನೆ ಆಧಾರ ಅವನೆ ಸ್ವತಂತ್ರ ಭಕ್ತ ನಿಮಿತ್ತಮಾತ್ರ ನಾಲಿಗೆ ಧ್ವನಿ ಮಾಡಿದರೂ ಅದು ಘಂಟೆಯ ಧ್ವನಿ ಎಂದೆ ಕರೆಸುವುದು 'ನಾಹಂ ಕರ್ತಾ ಹರಿಃ ಕರ್ತಾ' ತಾಯ ಮಡಿಲಲ್ಲಿ ಕೂಸಿನಂತೆ, ಘಂಟೆಯಲ್ಲಿ ನಾಲಿಗೆ ಕರು ತಾಯ ಕೆಚ್ಚಲನ್ನು ಗುದ್ದಿದರೇ ಹಾಲು ಸುರಿಯುವುದು ಹಾಗೇ ನಾಲಿಗೆ ಹರಿನಾಮ ನುಡಿದರೆ ಮಾತ್ರ ಹರಿಯ ಕಾರುಣ್ಯಸುಧೆ ಹರಿಯುವುದು ಕರುಣಾಸಾಗರನೆಂಬ ಬಿರುದು ಅವನಿಗೆ ಸಲ್ಲುವುದು ಅದರಿಂದಲೆ 'ಬಂಟರಿಂದಲೆ ನಿನ್ನ ಭಾಗ್ಯ ಶೋಭಿಸುವುದು' ಎನ್ನುತ್ತಾರೆ

***ತಡೆವ ದುರಿತೌಘಗಳ***

ವಿಧಿನಿಷೇಧಗಳನ್ನು ಹರಿ ತಾನೆ ಮಾಡಿ ತಾನೆ ನೆರಳಿನಂತೆ ನಮ್ಮೊಡನಿದ್ದು ಆ ವಿಧಿ ನಿಷೇಧಗಳನ್ನು ನಡೆಸಿಕೊಡುತ್ತಾನೆ ಆದರಿಂದ ಭಕ್ತರಿಗೆ ಪುಣ್ಯಫಲ ಮಾತ್ರವೆ ಹೊರತು ಪಾಪ ತಗಲುವುದಿಲ್ಲ ಗೋಪಾಲದಾಸರು ಇದಕ್ಕೆ ಒಂದು ಉದಾಹರಣೆ ಕೊಡುತ್ತಾರೆ—

> ಪತಿವ್ರತೆ ಸ್ತ್ರೀ ತನ್ನ ಪತಿಯಾಜ್ಞೆಯಿಂದ ವಿ-
> ಜಾತಿ ಪುರುಷನ್ನ ಅನುಸರಿಸೆಂದು ಆಜ್ಞೆ ಕೊಡೆ
> ಮಾತು ಪತಿಯದು ನಡೆಸೆ ಪಾತಕವವಳಿಗೆ ಉಂಟೆ?

***ಕಾಮದ ಕೊಡುವ ಸಕಲಾರ್ಥಗಳ***

ಭಕ್ತನ ಇಷ್ಟಾರ್ಥ ಭಗವಂತನಿಗೇ ಗೊತ್ತು ಭಗವಂತ ತಾಯಿ, ಭಕ್ತ ಕೂಸು ಕೂಸಿಗೆ ಅಳುವುದೊಂದೇ ಗೊತ್ತು! ಗೋಪಾಲದಾಸರ ಸುಳಾದಿ—

> ಹಸಿದು ಉದರಗತಿಯ ಹದನವನರಿಯದ
> ಶಿಶುವಿನ ತಾಯಿ ಪಿಡಿದು ಮೊಸರನ್ನ ಉಣಿಸಿದರೆ

ಕೊಸರಿಕೊಳ್ಳುತಲಿಪ್ಪುದು। ಒಲ್ಲೆನೆನ್ನಲಾ ಜನನಿ
ಶಿಶುವಿಗೆ ಅನ್ನವ ಉಣಿಸದಲೆ ಬಿಡುವಳೆ।

ಹೀಗೆ ತಾಯ ಕರುಣೆಯಿಂದ ಹರಿ ಸಕಲೇಷ್ಟಾರ್ಥಗಳನ್ನು ಕೊಡುತ್ತಾನೆ

***ನಡೆವ ನಮ್ಮಂದದಲಿ***

ಸವಸುವಿಶೇಷಸನ್ಮಹಿಮನಾಗಿದ್ದೂ ಸಾಮಾನ್ಯ ಮಾನವನಂತೆ ನಮ್ಮ ನಡುವೆಯೆ ಓಡಾಡುತ್ತಾನೆ, ಕರುಣೆಯಿಂದ, ಗೋಪಾಲದಾಸರು ಇದನ್ನೂ ಹೇಳಿದ್ದಾರೆ—

ಆವ ಲೀಲೆಯೊ ನಿನ್ನನಾವ ವರ್ಣಿಪ ।
ಆವ ಜನುಮರಹಿತನಾದ ನೀನು ಇನ್ನು
ದೇವಕಿಜಠರದಿ ಜನಿಸಿದುದೇನೊ
ಆವ ಜಗವೆಲ್ಲ ಬಂಧನವ ಮಾಡಿದ ಶಕ್ತ
ಗೋವತ್ಸ ಹಗ್ಗದಿಂದ ನೀ ಸಿಕ್ಕೋದೇನೊ
ಆವ ನಿತ್ಯತೃಪ್ತನಾದವ ನೀ ಇನ್ನು ಪೋಗಿ
ಆವ ಗೋಪಿಕೇರೊಡನಾಟ ಕ್ರೀಡೆಗಳೇನೊ
ಜನನಿಗಾಟವ ತೋರಿ ಜನರ ತೋಷವಡಿಸಿದ
ಘನಕರುಣಾಮೂರ್ತಿ ಇದೆ।

**ಬಿಟ್ಟವರ ಭವಪಾಶದಿಂದಲಿ**
**ಕಟ್ಟುವನು ಬಹು ಕಠಿಣನಿವ ಶಿ-**
**ಷ್ಟೇಷ್ಟನೆಂದರಿದನವರತ ಸದ್ಭಕ್ತಿಪಾಶದಲಿ ।**
**ಕಟ್ಟುವರ ಭವ ಕಟ್ಟು ಬಿಡಿಸುವ**
**ಸಿಟ್ಟಿನವನಿವನಲ್ಲ ಕಾಮದ**
**ಕೊಟ್ಟು ಕಾವನು ಸಕಲ ಸೌಖ್ಯವನಿಹಪರಂಗಳಲಿ** ॥ ೨೬ ॥

ಹರಿ ತನ್ನನ್ನು ಬಿಟ್ಟವರನ್ನು ಸಂಸಾರಬಂಧನದಿಂದ ಕಟ್ಟುತ್ತಾನೆ ಅವರಿಗೆ ಇವನು ಬಹು ಕಠಿಣ. ಆದರೆ ಇವನು ಶಿಷ್ಟರಿಗೆಲ್ಲರಿಗೂ ಪರಮ ಇಷ್ಟನೆಂದು ತಿಳಿದು ಸದಾ ಸದ್ಭಕ್ತಿಪಾಶದಿಂದ ಕಟ್ಟಿದರೆ ಕಟ್ಟಿದವರನ್ನು ಭವಪಾಶದಿಂದ ಬಿಡಿಸುತ್ತಾನೆ ಅವರಿಗೆ ಇವನು ಎಂದೂ ಸಿಟ್ಟಿನವನಲ್ಲ ಕಾಮಿತಪ್ರದನೆನಿಸಿ ಇಹಪರಗಳೆರಡರಲ್ಲಿಯೂ ಸೌಖ್ಯವನ್ನೇ ಕೊಟ್ಟು ಕಾಪಾಡುತ್ತಾನೆ

***ಬಿಟ್ಟವರ ಭವಪಾಶದಿಂದಲಿ ಕಟ್ಟುವನು***

ಭಗವಂತನನ್ನು ಬಿಡುವುದೆಂದರೇನು? ಸರ್ವವ್ಯಾಪ್ತನಾದ ಆತನನ್ನು ಬಿಟ್ಟು ಎಲ್ಲಿಗೆ ಹೋಗಲು ಸಾಧ್ಯವಿದೆ? 'ದ್ವಾ ಸುಪರ್ಣಾ' ಶ್ರುತಿ ಹೇಳುವಂತೆ ದೇಹವೆಂಬ ವೃಕ್ಷದಲ್ಲಿ

ಜೀವಪಕ್ಷಿ ಪರಮಾತ್ಮಪಕ್ಷಿಗಳೆರಡೂ ಸದಾ ಜೊತೆಗೇ ಇರುತ್ತವೆ ಜೀವ ಪರಮಾತ್ಮನನ್ನು ಕ್ಷಣವೂ ಬಿಟ್ಟಿರಲಾರ ಪರಮಾತ್ಮನೂ ಜೀವನನ್ನು ಕ್ಷಣವೂ ಬಿಡಲೊಲ್ಲ ಅದರಿಂದ ಬಿಡುವುದೆಂದರೆ ಭಕ್ತಿಪಾಶದಿಂದ ಕಟ್ಟದೆ ಬಿಡುವುದು ಇದು ಅಪರೋಕ್ಷ ಜ್ಞಾನಿಗಳ-ಲ್ಲಿಯೂ ಕೆಲವೊಮ್ಮೆ ಪ್ರಾರಬ್ಧವಶದಿಂದ ಕಂಡುಬರಬಹುದು ಉದಾ–ಸೌಭರಿಮುನಿ ಯಮುನಾತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ಒಮ್ಮೆ ನೀರಿನಲ್ಲಿ ಮೀನಿನ ಜೋಡಿಗಳು ಜೊತೆಯಾಗಿ ವಿಹರಿಸುವುದನ್ನು ಕಂಡು ತಾನೂ ಗೃಹಸ್ಥ ಜೀವನದ ಸುಖ ಸವಿಯಬೇಕೆಂದು ಬಯಸಿ ತಪೋಬಲದಿಂದ ವೃದ್ಧನಾದ ತಾನು ಹದಿನಾರರ ನವಯುವಕನಾಗಿ ಮಾಂಧಾತೃರಾಜನ ಐವತ್ತು ಮಂದಿ ಕನ್ಯೆಯರನ್ನು ಮದುವೆಯಾಗಿ ಅವರಲ್ಲಿ ಪ್ರತಿಯೊಬ್ಬ-ರಲ್ಲಿಯೂ ನೂರು ಮಂದಿ ಮಕ್ಕಳನ್ನು ಪಡೆದ ಐವತ್ತು ಶರೀರಗಳನ್ನು ಧರಿಸಿ ಏಕಕಾಲದಲ್ಲಿ ಐವತ್ತು ಮಂದಿ ರಾಜಕುಮಾರಿಯರೊಡನೆ ಸುಖವಾಗಿ ಗೃಹಸ್ಥ ಜೀವನ ನಡೆಸಿದ ಇದನ್ನು ಕಂಡು ಮಾವನಾದ ಮಾಂಧಾತೃ ಚಕ್ರವರ್ತಿ ವಿಸ್ಮಿತನಾದ. ಕೊನೆಯಲ್ಲಿ ಮುನಿ ಪಶ್ಚಾತ್ತಾಪ-ಪಟ್ಟನಂತೆ ಹೀಗೆ ನವಮಸ್ಕಂಧ ಭಾಗವತ ಹೇಳುತ್ತದೆ ಒಂದು ಕ್ಷಣ ಭಗವಂತನನ್ನು ಮರೆತು ಐಹಿಕ ಸುಖವನ್ನು ಆಸಕ್ತಿಯಿಂದ ಕಂಡ ಮಾತ್ರಕ್ಕೆ ಮುನಿಯಲ್ಲಿ ಎಂಥ ಮಾರ್ಪಾ-ಟು! ಅವನು ವೇದಮಂತ್ರದ್ರಷ್ಟಾರನಾದ ಅಪರೋಕ್ಷಜ್ಞಾನಿಯಾದ ಮುನಿ ಅವನಿಗೇ ಹೇಯವಾದ ಸಂಸಾರಸುಖದಲ್ಲಿ ಆಸಕ್ತಿ ಮೂಡಿತೆಂದರೆ ಉಳಿದವರ ಪಾಡೇನು? ಹೀಗೆ ಸಾತ್ವಿಕರೂ ಕೆಲವೊಮ್ಮೆ ಭಗವಂತನನ್ನು ಮರೆಯುವುದುಂಟು

ರಾಜಸರು ಭಗವಂತನ ಬಗ್ಗೆ ಔದಾಸೀನ್ಯ ಉಳ್ಳವರಾದ್ದರಿಂದ ಅವನನ್ನು ಬಿಟ್ಟು ನಿತ್ಯ ಸಂಸಾರಮಗ್ನರಾಗುತ್ತಾರೆ

ತಾಮಸರು ದ್ವೇಷದಿಂದಲೆ ಭಗವಂತನನ್ನು ತ್ಯಾಗ ಮಾಡುತ್ತಾರೆ ಅವರು ಮಾಡುವ ವಿಷ್ಣುತ್ಯಾಗ ಅನೇಕಬಗೆ

ಪರಮಾತ್ಮನೆ ಇಲ್ಲವೆಂದು ಒಪ್ಪಿ ಅದರ ಸಾಧನೆಗೆ ಶುಷ್ಕತರ್ಕವನ್ನು ಮಾಡುವುದು ಹರಿಗೆ ಸಮಾನ ಅಥವಾ ಅವನಿಗಿಂತ ಶ್ರೇಷ್ಠ ಇದ್ದಾನೆ ಎನ್ನುವುದು ಬೇರೆ ಇಷ್ಟದೈವಗಳಿಂದ ಹರಿಗೆ ಅಭೇದ ಹೇಳುವುದು. ಹರಿಯ ಗುಣಗಳಲ್ಲಿ ನ್ಯೂನತೆ ಇದೆ, ಪರಿಮಿತಿ ಇದೆ, ಎನ್ನುವುದು ಗುಣವೆ ಇಲ್ಲ, ಮೋಕ್ಷಕ್ಕೆ ಅವನ ಅನುಗ್ರಹ ಬೇಕಾಗಿಲ್ಲ ತ್ರಿಮೂರ್ತಿಗಳೆಲ್ಲ ಒಂದೆ ಎನ್ನುವುದು ಅವನ ಅವತಾರಗಳನ್ನು ವ್ಯತ್ಯಾಸವಾಗಿ ತಿಳಿಯುವುದು, ಹರಿಗೂ ಜೀವರಿಗೂ ಅಭೇದ ಅಥವಾ ಭೇದಾಭೇದವನ್ನು ಒಪ್ಪುವುದು ಹರಿಗೂ ಅವನ ಗುಣಕ್ರಿಯಾವಯವಾವತಾರರೂಪಗಳಿಗೂ ಪರಸ್ಪರವಾಗಿ ಗುಣಕ್ರಿಯಾದಿಗಳಿಗೂ ಭೇದ, ಭೇದಾಭೇದಗಳನ್ನು, ತಾರತಮ್ಯವನ್ನು ತಿಳಿಯುವುದು ಹರಿಗೆ ಶರೀರವಿಲ್ಲ, ಇದ್ದರೂ ಪ್ರಾಕೃತವಾದ ಬಾಹ್ಯ ಶರೀರ ಉಂಟೆನ್ನುವುದು, ಅಜ್ಞಾನ, ಅಶಕ್ತ್ಯಾದಿ ದೋಷಗಳಿವೆ ಎನ್ನುವುದು, ಅವನ ಸರ್ವಸ್ವಾತಂತ್ರ್ಯವನ್ನು ಅಲ್ಲಗಳೆಯುವುದು, ಅಚಿಂತ್ಯ ಶಕ್ತಿಯಿಂದಲೂ

ಅಣುತ್ವ, ಮಹತ್ವ ಮುಂತಾದ ವಿರುದ್ಧ ಗುಣಗಳಿರುವುದು ಅಸಂಭಾವಿತ ಎನ್ನುವುದು, ಇವೆಲ್ಲವೂ ಮಹಾ ಅನರ್ಥಕರವಾದ ವಿಷ್ಣುತ್ಯಾಗಗಳು ಇವನ್ನು ದುಷ್ಟತರ್ಕಗಳ ಸಹಾಯದಿಂದ ಸಾಧಿಸುವುದೂ ಅಷ್ಟೇ ಅನರ್ಥಕರ

ರಮಾಬ್ರಹ್ಮಾದಿ ದೇವತೆಗಳಲ್ಲಿ ತಾರತಮ್ಯ ಒಪ್ಪದಿರುವುದು ಗುರುಗಳು ಚೆನ್ನಾಗಿ ಉಪದೇಶಿಸಿದ ಮೇಲೆಯೂ ತತ್ವದಲ್ಲಿ ಸಂಶಯವನ್ನೇ ಮಾಡುವುದು ಜಗನ್ಮಿಥ್ಯಾತ್ವ ಒಪ್ಪುವುದು ಹರಿಸ್ಮರಣೆ ಮಾಡದಿರುವುದು ಹರಿಭಕ್ತರನ್ನು ನಿಂದಿಸುವುದು ಇವೂ ತಮಸ್ಸಿಗೆ ಕಾರಣವಾದ ವಿಷ್ಣುತ್ಯಾಗಗಳೆ

ಹರಿಯಾಜ್ಞೆ ಉಲ್ಲಂಘಿಸುತ್ತ ನಿಷಿದ್ಧಕರ್ಮ ಮಾಡುವುದು, ವಿಹಿತಕರ್ಮ ಮಾಡದಿರುವುದು, ಇವು ನರಕಸಾಧನವಾದ ವಿಷ್ಣುತ್ಯಾಗಗಳು

ಅಯೋಗ್ಯ ಜನರಿಗೆ ವಿಧ್ಯುಕ್ತವಾಗಿ ತತ್ವೋಪದೇಶ ಮಾಡುವುದು, ಗುರುಗಳಿಗಾಗಿ ಅಥವಾ ತಂದೆಗಳಿಗಾಗಿ ಹೊರತು ಬೇರೆಯವರಿಗಾಗಿ ಮಹಾವ್ರತಯಾಗದಲ್ಲಿ ಹೋತೃ, ಉದ್ಗಾತೃ ಅಧ್ವರ್ಯುಗಳಾಗಿ ಕೆಲಸ ಮಾಡುವುದು-ಇವುಗಳಿಂದ ಸ್ವರ್ಗಮೋಕ್ಷಗಳು ಇಲ್ಲವಾಗುತ್ತವೆ

ಐತರೇಯಭಾಷ್ಯೋಕ್ತವಾದ ಈ ವಿಷ್ಣುತ್ಯಾಗಗಳನ್ನು ಮಾಡಿದವರಿಗೆ ಹರಿ ನಿತ್ಯದುಃಖದ ಪಾಶದಿಂದ ಬಂಧನವನ್ನೇ ನೀಡುತ್ತಾನೆ

***ಬಹು ಕಠಿಣನಿವ***

ದ್ವೇಷಿಗಳಲ್ಲಿ ಹರಿ ಬಹಳ ನಿಷ್ಠುರವಾಗಿಯೆ ವರ್ತಿಸುತ್ತಾನೆ ಇದನ್ನು ಹಿಂದೆಯೆ ಹೇಳಿದ್ದಾರೆ, ದಾಸರಾಯರು

> ವಿದುರನ ಆಲಯದಿ ಪಾಲುಂಡು
> ಕುರುಪನ ಮಾನವನೆ ಕೊಂಡ!

ವಿದುರನ ಮನೆಯಲ್ಲಿ ಬರಿ ಹಾಲುಂಡು ತೃಪ್ತನಾದೇನು, ಹೊರತು ಕುರುಚಕ್ರವರ್ತಿಯ ಅರಮನೆಯ ಔತಣವನ್ನು ಮಾತ್ರ ಒಲ್ಲೆನೆನ್ನುತ್ತಾನೆ ಏಕೆಂದರೆ ಆತ ತನಗೆ ಪ್ರಿಯರಾದ ಪಾಂಡವರನ್ನು ದ್ವೇಷಿಸುತ್ತಾನೆ!

***ಶಿಷ್ಟೇಷ್ಟನೆಂದರಿತು***

ಶಿಷ್ಟರೆಂದರೆ ಸಜ್ಜನರು, ಶಾಸ್ತ್ರನಿಯಮಗಳನ್ನು ವಿಧಿನಿಷೇಧಗಳನ್ನು ಅರಿತು ಅದರಂತೆ ನಡೆಯುವವರು. ಮುಖ್ಯವಾಗಿ ರಮಾಬ್ರಹ್ಮಾದಿ ದೇವತೆಗಳು, ಋಷಿಗಳು ಮುಂತಾದವರು ಅವರಿಗೆ ಹರಿ ಇಷ್ಟ ಹರಿಗೆ ಅವರು ಇಷ್ಟರು ಎನ್ನುವುದೇ ಎಲ್ಲವೇದಶಾಸ್ತ್ರಪುರಾಣಾದಿಗಳ ಅಭಿಪ್ರಾಯ ಆದರಿಂದ ಹರಿ ಶಿಷ್ಟೇಷ್ಟನೆಂದು ಅರಿಯಬೇಕಾದರೆ ಸಕಲ ಶಾಸ್ತ್ರಗಳ ಅಧ್ಯಯನ ಮಾಡಬೇಕಾಗುತ್ತದೆ ಅಂದರೆ ಶ್ರವಣಮನನನಿದಿಧ್ಯಾಸನಗಳನ್ನು ಮಾಡ-

ಬೇಕಾಗುತ್ತದೆ. ಇವೆಲ್ಲವನ್ನೂ ಭಕ್ತಿಪೂರ್ವಕವಾಗಿಯೆ ಮಾಡಬೇಕು ಆಗ ಆ ಭಕ್ತಿಪಾಶಕ್ಕೆ ಭಗವಂತ ಕಟ್ಟುಬೀಳುತ್ತಾನೆ ಭಕ್ತಿಯಿಲ್ಲದ ಶ್ರವಣಾದಿಗಳು ಕೇವಲ ಶ್ರಮ ಶ್ರವಣಾದಿ-ಗಳಿಲ್ಲದ ಭಕ್ತಿ ಭ್ರಮ ಅದರಿಂದ ಶಿಷ್ಟೇಷ್ಟನೆಂದರಿದು ಭಕ್ತಿಪಾಶದಿಂದ ಹರಿಯನ್ನು ಕಟ್ಟಬೇಕೆನ್ನುತ್ತಾರೆ ದಾಸರಾಯರು.

***ಸದ್ಭಕ್ತಿಪಾಶದಲಿ***

ಭಕ್ತಿಪಾಶ ಸ್ವತಂತ್ರನಾದ ಸರ್ವಶಕ್ತನಾದ ಭಗವಂತನನ್ನು ಕಟ್ಟುವಷ್ಟು ದೃಢವಾಗಬೇಕಾ-ದರೆ ಅದು 'ಸದ್ಭಕ್ತಿಪಾಶ'ವಾಗಬೇಕು ಸದ್ಭಕ್ತಿ ಎಂದರೆ ನವವಿಧ ದ್ವೇಷರಹಿತ ನಿರ್ಮಲ ಭಕ್ತಿ ನಿಷ್ಕಾಮಭಕ್ತಿ

**ನವವಿಧ ದ್ವೇಷಗಳು**

೧ ಪರಮಾತ್ಮನಿಗೆ ಜೀವೈಕ್ಯವನ್ನು ಒಪ್ಪುವುದು

೨ ಪರಮಾತ್ಮ ನಿರ್ಗುಣ-ನಿರಾಕಾರನೆನ್ನುವುದು

೩ ಪರಮಾತ್ಮನ ಗುಣಗಳಲ್ಲಿ ನ್ಯೂನತೆ ಕಾಣುವುದು

೪ ಪರಮಾತ್ಮನಿಗೂ ಬ್ರಹ್ಮರುದ್ರಾದಿಗಳು ಸಮಾನರಿದ್ದಾರೆ ಎನ್ನುವುದು

೫. ಪರಮಾತ್ಮನಿಗಿಂತ ಉತ್ತಮರಿದ್ದಾರೆ ಎನ್ನುವುದು.

೬ ಪರಮಾತ್ಮನಿಗೂ ಅವನ ಶರೀರ, ಗುಣ, ಕ್ರಿಯೆ, ಅವಯವ, ಅವತಾರಗಳಿಗೂ ಭೇದವನ್ನು ಒಪ್ಪುವುದು

೭ ಪರಮಾತ್ಮನ ಅವತಾರಗಳ ಬಗ್ಗೆ ತಪ್ಪು ಕಲ್ಪನೆಗಳನ್ನಿಟ್ಟುಕೊಳ್ಳುವುದು

೮ ಪರಮಾತ್ಮನ ಭಕ್ತರನ್ನು ದ್ವೇಷಿಸುವುದು

೯ ಪರಮಾತ್ಮನ ಬಗ್ಗೆ ಹೇಳುವ ಶಾಸ್ತ್ರಗಳನ್ನು ನಿಂದಿಸುವುದು.

***ಕಟ್ಟುವರ ಭವಕಟ್ಟು ಬಿಡಿಸುವ***

ಹರಿಯ ವರ್ತನೆ ಬಲು ವಿಚಿತ್ರ ತನ್ನನ್ನು ಕಟ್ಟಿದವರನ್ನು ಬಿಡಿಸುತ್ತಾನೆ ಬಿಟ್ಟವರನ್ನು ಕಟ್ಟುತ್ತಾನೆ! ಇದು ವಿರೋಧಾಭಾಸ ವಸ್ತುತಃ ಇನಿಯನಿಗೆ ಇನಿಯಳ ಬಾಹುಪಾಶ ಬಂಧನ ಇಷ್ಟವಾಗುವಂತೆ ಭಗವಂತನಿಗೂ ಭಕ್ತನ ಭಕ್ತಿಪಾಶದ ಬಂಧನ ಬಹಳ ಇಷ್ಟವಾಗುತ್ತದೆ

ಈ ಭಕ್ತಿಯ ಕಟ್ಟು ನಿಜವಾಗಿ ಕಟ್ಟೇ ಅಲ್ಲ ಸ್ವತಂತ್ರನಾದ ಹರಿಗೆ ಯಾವ ಕಟ್ಟೂ ಇಲ್ಲ. ಆದರೆ ಭಕ್ತಿಯಿಂದ ಅವನನ್ನು ತನ್ನ ಹೃದಯದಲ್ಲಿ ಸದಾ ನೆನೆಯುತ್ತಿದ್ದರೆ ಅವನು ಅಲ್ಲಿಯೆ ನಿಲ್ಲುತ್ತಾನೆ ಬೇರೆಡೆಗೆ ಕದಲುವುದಿಲ್ಲ ಅಂದರೆ, ಸದಾ ದರ್ಶನ ನೀಡುತ್ತಾನೆ ಇದು

ಕೇವಲ ಕರುಣೆ ವಾತ್ಸಲ್ಯ ಹೊರತು ಇನ್ನೇನೂ ಅಲ್ಲ ಭಕ್ತ ಭಜಿಸಿ ಭಗವಂತನಿಗೆ ಏನೂ ಆಗಬೇಕಾಗಿಲ್ಲ

'ಭವಕಟ್ಟು' ಎಂದರೆ ಸಂಸಾರಬಂಧನ ಸಂಸಾರಬಂಧನಕ್ಕೊಳಗಾದವ ಮುಕ್ತಿ-ಮಂದಿರಕ್ಕೆ ನಡೆಯಲಾರ ಸಂಸಾರದಲ್ಲಿಯೆ ಕೊಳೆಯಬೇಕಾಗುತ್ತದೆ ಸದಾ ಜನನ-ಮರಣಚಕ್ರದಲ್ಲಿಸುತ್ತಿ ಪುಣ್ಯಪಾಪಗಳನ್ನುಗಳಿಸಿ ಸುಖದುಃಖಗಳನ್ನು ಉಣಬೇಕಾಗುತ್ತದೆ. ಜನನಮರಣರಹಿತವಾದ ಹರಿಮಂದಿರದಲ್ಲಿ ಸಿಗಬಹುದಾದ ನಿರ್ದುಃಖಾನಂದದಿಂದ ವಂಚಿತನಾಗುತ್ತಾನೆ ಈ ಭವದ ಕಟ್ಟನ್ನು ಭಕ್ತಿಯ ಕಟ್ಟಿನೊಳಗೆ ಸಿಕ್ಕಿದ ಭಗವಂತನೆ ಬಿಡಿಸಬೇಕು

*ಸಿಟ್ಟಿನವನಿವನಲ್ಲ*

ಭಕ್ತರಲ್ಲಿ ಎಂದೂ ಸಿಟ್ಟುಮಾಡುವುದಿಲ್ಲ ಹರಿ ಅವರ ಅಪರಾಧಗಳನ್ನು ಕ್ಷಮಿಸುತ್ತಾನೆ ಇದನ್ನೂ ಹಿಂದೆ,

> ಕೆಟ್ಟ ಮಾತುಗಳಿಂದ ಚೈದ್ಯನ
> ಪೊಟ್ಟೆಯೊಳಗಿಂಬಿಟ್ಟ ಬಾಣದ-
> ಲಿಟ್ಟ ಭೀಷ್ಮನವಗುಣಗಳೆಣಿಸಿದನೆ ಕರುಣಾಳು ॥

ಎಂದು ದಾಸರಾಯರು ವರ್ಣಿಸಿದ್ದಾರೆ.

> **ಕಣ್ಣಿಗೆವೆಯಂದದಲಿ, ಕೈ ಮೈ**
> **ತಿಣ್ಣಿಗೊದಗುವ ತೆರದಿ, ಪಲ್ಗಳು**
> **ಪಣ್ಣು ಫಲಗಳನಗಿದು ಜಿಹ್ವೆಗೆ ರಸವನೀವಂತೆ ।**
> **ಪುಣ್ಯ ಫಲವೀವಂದದಲಿ ನುಡಿ-**
> **ವೆಣ್ಣುನಾಣ್ಕಾಂಡದೊಳು ಲಕ್ಷ್ಮಣ-**
> **ನಣ್ಣನೊದಗುವ ಭಕ್ತರವಸರಕಮರಗಣಸಹಿತ ॥ ೨೭ ॥**

ಕಣ್ಣಿನ ರಕ್ಷಣೆಗೆ ರೆಪ್ಪೆಗಳು ಧಾವಿಸುವಂತೆ, ಮೈನವೆಯುಂಟಾದಾಗ ಕೈ ಧಾವಿಸುವಂತೆ, ಹಲ್ಲುಗಳು ಹಣ್ಣು ಹಂಪಲುಗಳನ್ನು ಅಗಿದು ಜಿಹ್ವೆಗೆ ರಸ ನೀಡುವಂತೆ, ಪುಣ್ಯ ತನ್ನ ಫಲವನ್ನು ನೀಡುವಂತೆ ಬ್ರಹ್ಮಾಂಡದಲ್ಲಿ ಎಲ್ಲೆಡೆ ಶ್ರೀರಾಮ ಭಕ್ತರ ಬಳಿಗೆ ಸಕಾಲಕ್ಕೆ ದೇವತಾಸಮೂಹ-ದೊಂದಿಗೆ ಬರುತ್ತಾನೆ

*ಕಣ್ಣಿಗೆವೆಯಂದದಲಿ*

ಕಣ್ಣು ಬಹಳ ಕೋಮಲವಾದ ಅಂಗ ಒಂದು ಸಣ್ಣ ಧೂಳಿನ ಕಣ ಬಿದ್ದರೂ ಸಹಿಸದು ಅದರ ರಕ್ಷಣೆಗೆ ಕಣ್ಣ ರೆಪ್ಪೆಗಳು ಧಾವಿಸುವುವು ಹಾಗೇ ಜೀವನೂ ಪರಮಾತ್ಮನ ರಕ್ಷಣೆ ಇಲ್ಲದಿದ್ದರೆ ಒಂದು ಕ್ಷಣವೂ ಇರಲಾರ ಹರಿಕಥಾಮೃತಸಾರದಲ್ಲಿ ಮುಂದೆ,

ಮತ್ತೆ ಚಿದ್ದೇಹದ ಒಳಗೆ ಎಂ-
ಬತ್ತು ಸಾವಿರದೇಳು ನೂರಿ-
ಪ್ಪತ್ತು ಐದು ನೃಸಿಂಹರೂಪದಲಿದ್ದು ಜೀವರಿಗೆ ।
ನಿತ್ಯದಲಿ ಹಗಲಿರುಳು ಬಪ್ಪಪ-
ಮೃತ್ಯುವಿಗೆ ತಾ ಮೃತ್ಯುವೆನಿಸುವ
ಭೃತ್ಯವತ್ಸಲ ಭಯವಿನಾಶನ ಭಾಗ್ಯಸಂಪನ್ನ ॥(೭-೧೫)

ಎಂದು ಹೇಳುವಂತೆ ಜೀವರಿಗೆ ಸ್ವರೂಪದೇಹದಲ್ಲಿ ನಿತ್ಯ ಹಗಲಿರುಳು ಬರುವ ಅಪಮೃತ್ಯು ಕಳೆಯುತ್ತಾನೆ, ನರಸಿಂಹ ಅದರಿಂದ ಜೀವಸ್ವರೂಪ ಅನಾದಿನಿತ್ಯ

ಶಿಖಿದೊಳುಮಾಮಹೇಶ್ವರ ನಾರಸಿಂಹ
ಸ್ವಾಮಿ ತನ್ನನುದಿನದಿ ನೆನೆವರ ಮೃತ್ಯು ಪರಿಹರಿಪ ॥ (೮-೧೬)

ಎನ್ನುವಂತೆ ಸ್ಥೂಲ ಶರೀರದಲ್ಲಿಯೂ ನಿಂತು ಮೃತ್ಯುಪರಿಹಾರಕನೆನಿಸಿದ್ದಾನೆ

ಕಣ್ಣಿಗೆ ರೆಪ್ಪೆ ಕೇವಲ ಹೊರಗಿಂದ ರಕ್ಷಣೆ ನೀಡುತ್ತದೆ ಶ್ರೀಹರಿ ಜೀವನಿಗೆ ಒಳಗೂ ರಕ್ಷಣೆ ನೀಡುತ್ತಾನೆ ಆದರೂ ಒಂದಿಷ್ಟು ತಡವಿಲ್ಲದೆ ರಕ್ಷಣೆ ನೀಡುವ ಅಂಶದಲ್ಲಿ ಇದು ದೃಷ್ಟಾಂತ ಕಣ್ಣು ದೂರದ ಎಲ್ಲ ವಸ್ತುಗಳನ್ನು ನೋಡುತ್ತಿದ್ದರೂ ತನಗೆ ಸದಾ ರಕ್ಷಣೆ ನೀಡುತ್ತ ಸಮೀಪದಲ್ಲಿಯೆ ಇರುವ ರೆಪ್ಪೆಯನ್ನು ನೋಡಲಾರದು. ಹಾಗೇ ಜೀವನೂ ಬಾಹ್ಯ ಪ್ರಪಂಚವೆಲ್ಲವನ್ನೂ ಕಾಣುತ್ತಿದ್ದರೂ ಒಳಗೇ ಇರುವ ತನ್ನ ರಕ್ಷಕನಾದ ನರಸಿಂಹನನ್ನು ಮಾತ್ರ ನೋಡಲಾರ

***ಕೈ ಮೈತಿಣ್ಣೆಗೊದಗುವ ತೆರದಿ***

ಮೈಯಲ್ಲಿ ತುರಿಕೆ ಉಂಟಾದಾಗ ತುರಿಸಲು ಕೈ ಧಾವಿಸುತ್ತದೆ ತುರಿಸಿಕೊಳ್ಳುವುದು ಬೇಡವೆಂದುಕೊಂಡರೂ ಕೈಯೆ ಸುಮ್ಮನಿರುವುದಿಲ್ಲ ಹಾಗೇ ಜೀವ ತನ್ನನ್ನು ತಾನೇ ರಕ್ಷಿಸಿಕೊಳ್ಳುವೆ, ದೇವರು ಏಕೆ ಎಂದು ಹೇಳಿಕೊಂಡರೂ ನರಸಿಂಹ ಅವನನ್ನು ರಕ್ಷಿಸದೆ ಬಿಡುವುದಿಲ್ಲ ಆದರಿಂದಲೆ ಜೀವ ಅನಾದಿನಿತ್ಯನೆನಿಸಿದ್ದಾನೆ

ಕಂಡೂಯನೇನ ಕರಯೋರಿವ ದುಃಖದುಃಖಮ್

ಎಂದು ಭಾಗವತ ಹೇಳುವಂತೆ ಕಜ್ಜಿ ತುರಿಸಿಕೊಂಡಾಗ ತತ್ಕಾಲ ಸುಖ ಕಂಡರೂ ಕೊನೆಯಲ್ಲಿ ದುಃಖವಿರುತ್ತದೆ ಹಾಗೆಯೆ ತಾಮಸರಿಗೆ ಹರಿ ಸಂಸಾರದಲ್ಲಿ ನೀಡುವ ಸುಖ ಕೊನೆಗೆ ತಮಸ್ಸಿನಲ್ಲಿ ಅಧಿಕ ದುಃಖಕ್ಕೆ ಕಾರಣವಾಗುವುದರಿಂದ ಅವರ ವಿಷಯದಲ್ಲಿಯೂ ದೃಷ್ಟಾಂತ ಒಪ್ಪುತ್ತದೆ

ಕಣ್ಣಿಗೆ ರೆಪ್ಪೆ ಸಮೀಪದಲ್ಲಿದ್ದು ರಕ್ಷಣೆ ನೀಡುವಂತೆ ಅರ್ಜುನನಿಗೆ ಕೃಷ್ಣ ಸದಾ ಜೊತೆಯಲ್ಲಿದ್ದು ರಕ್ಷಣೆ ನೀಡಿದ. ಮೈತಿಣ್ಣೆಗೆ ಕೈ ದೂರದಿಂದ ಧಾವಿಸಿ ಬರುವಂತೆ ಗಜೇಂದ್ರನ ರಕ್ಷಣೆಗೆ ಹರಿ ಗರುಡಾರೂಢನಾಗಿ ಹಾರಿ ಬಂದ

ಕಜ್ಜಿ ಮುಂತಾದ ತುರಿಕೆಯ ಹೊರತು ಬೇರೆ ಸಾಮಾನ್ಯ ನವೆಗೆ ಮೈತುರಿಸಿಕೊಂಡಾಗ ಹಿತವೇ ಆಗುತ್ತದೆ ಆಗ ಸಾತ್ವಿಕ ವಿಷಯದಲ್ಲಿಯೂ ದೃಷ್ಟಾಂತ ಹೊಂದಿಕೊಳ್ಳುತ್ತದೆ

ಅಥವಾ ಕಣ್ಣಿಗೆ ಅಪಾಯಬಾರದಂತೆ ಮೊದಲೆ ತಡೆಯುವುದು ರೆಪ್ಪೆ ಮೈನವೆ ಉಂಟಾದಾಗ ಅನಂತರ ಹೋಗಲಾಡಿಸುವುದು ಕೈ ಜೀವರಿಗೆ ಹರಿ ಸಾಧನಮಾರ್ಗದಲ್ಲಿ ಇದಿರಾಗುವ ಅಪಾಯವನ್ನು ಬಾರದಂತೆಯೂ ತಡೆಯುತ್ತಾನೆ, ಬಂದರೆ ಆಮೇಲೂ ಅದನ್ನು ಒರೆಸುತ್ತಾನೆ ಅದಕ್ಕೇ ಎರಡು ಉದಾಹರಣೆಗಳು

*ಪಲ್ಗಳು ಪಣ್ಣು ಫಲಗಳನಗಿದು*

ಹಣ್ಣುಗಳನ್ನು ಅಗಿದು ನಾಲಿಗೆಗೆ ರಸ ನೀಡುತ್ತವೆ ಹಲ್ಲುಗಳು ತಾವು ಸವಿಯುವುದಿಲ್ಲ ಹರಿಯೂ ಹಾಗೇ ಜೀವರ ಸಾಧನಶರೀರವನ್ನು ನಾನಾ ಬಗೆಯ ಉಪವಾಸ, ವ್ರತ, ಕ್ಲೇಶಗಳಿಗೆ ಒಳಪಡಿಸಿ ಶುಭಕರ್ಮಫಲರಸವನ್ನು ತೆಗೆದು ಜೀವರಿಗೆ ಉಣಿಸುತ್ತಾನೆ ತಾನು 'ಅನಶ್ನನ್' ಉಣ್ಣುವುದಿಲ್ಲ ಅದರಲ್ಲಿರುವ ಸೂಕ್ಷ್ಮವಾದ ಸ್ವಾಖ್ಯರಸವನ್ನು ಮಾತ್ರ ಸ್ವೀಕರಿಸುತ್ತಾನೆ ಹಿಂದೆ ಹೇಳಿದ ಪ್ರಾಪ್ತಾನಿಷ್ಟದ ಅಥವಾ ಅಪ್ರಾಪ್ತಾನಿಷ್ಟದ ಪರಿಹಾರ ಮಾತ್ರವಲ್ಲದೆ ಈಗ ಹೇಳುವ ಇಷ್ಟಾರ್ಥಪ್ರದಾನವೂ ಒಂದು ಬಗೆಯ ರಕ್ಷಣೆಯೆ

*ಪುಣ್ಯಫಲವೀವಂದದಲಿ*

ನಾವು ಮಾಡಿದ ಪುಣ್ಯ ನಮಗೆ ಸಕಾಲದಲ್ಲಿ ಫಲ ನೀಡುವಂತೆ ಹರಿಯೂ ನಮಗೆ ಸಕಾಲದಲ್ಲಿ ರಕ್ಷಣೆ ನೀಡುತ್ತಾನೆ. ಹಲ್ಲು ತಾನು ಸವಿಯದೆ ನಾಲಿಗೆಗೆ ಸವಿ ನೀಡುತ್ತಿದ್ದರೂ ಕೆಲವೊಮ್ಮೆ ನಾಲಿಗೆಯನ್ನೇ ಕಡಿಯಬಹುದು ಪುಣ್ಯ ಹಾಗೆ ಮಾಡುವುದಿಲ್ಲ ಪುಣ್ಯದಿಂದ ಎಂದೂ ದುಃಖ ಉಂಟಾಗುವುದಿಲ್ಲ

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ

'ಅಸತ್ಕರ್ಮದಿಂದ ಸುಖವಿಲ್ಲ, ಸತ್ಕರ್ಮದಿಂದ ದುಃಖವಿಲ್ಲ' ಎನ್ನುತ್ತದೆ ಭಗವದ್ಗೀತೆ

ವಸ್ತುತಃ ಹಲ್ಲು ನಾಲಿಗೆಯನ್ನು ಕಡಿಯುವುದೂ ಪುಣ್ಯ, ಸತ್ಫಲವನ್ನು ನೀಡುವುದೂ ಹರಿಯ ಅಧೀನ ಹರಿಯನ್ನು ಮರೆತು ವಿಷಯಸುಖವನ್ನು ಭಕ್ತ ಉಣಲು ಹೊರಟಾಗ ಭಕ್ತವತ್ಸಲನಾದ ಹರಿಕರುಣೆಯಿಂದಲೆ ಭಕ್ತನಿಗೆ ಅವನ ಅಸ್ವಾತಂತ್ರ್ಯವನ್ನು ನೆನಪಿಸುವು-ದಕ್ಕಾಗಿ ಹಲ್ಲು ನಾಲಿಗೆಯನ್ನು ಕಡಿಯುವಂತೆ ಮಾಡುತ್ತಾನೆ ಅದರಿಂದ ಹಲ್ಲು ನಾಲಿಗೆ ದೃಷ್ಟಾಂತ ಹರಿಯ ಕರುಣೆಯನ್ನೇ ತೋರುತ್ತದೆ

ಪುಣ್ಯ ತಾನೇ ಫಲ ಕೊಡುವುದಿಲ್ಲ, ನಿಜ ಆದರೆ ಪುಣ್ಯಕ್ಕೆ ಅನುಗುಣವಾಗಿಯೆ ಸುಖ ನೀಡುತ್ತಾನೆ ಹರಿ ಹೀಗೆ ಪುಣ್ಯ ಸುಖಕ್ಕೆ ಸಾಧನವಾದ್ದರಿಂದ ಪುಣ್ಯವೆ ಸುಖ ನೀಡು- ತ್ತದೆ ಎನ್ನುತ್ತೇವೆ ಶಬ್ದ ಅರ್ಥಜ್ಞಾನಕ್ಕೆ ಸಾಧನವಾದ್ದರಿಂದ ಶಬ್ದವೆ ಅರ್ಥವನ್ನು ಹೇಳುತ್ತದೆ ಎನ್ನುವಂತೆಯೆ ಇದು

ಅಥವಾ 'ಅಂದದಲಿ ಪುಣ್ಯಫಲವೀವ' ಎಂದು ಪ್ರತ್ಯೇಕವಾಕ್ಯವಿಟ್ಟುಕೊಳ್ಳಬೇಕು ಚೆನ್ನಾಗಿ ಪುಣ್ಯಫಲ ನೀಡುತ್ತಾನೆ ಹರಿ ಅದಕ್ಕೆ ದೃಷ್ಟಾಂತಗಳು ಹಿಂದೆ ಹೇಳಿದ ಕಣ್ಣರೆಪ್ಪೆಗಳು, ಕೈ ಮತ್ತು ಹಲ್ಲುಗಳು ಹರಿ ನಮ್ಮಿಂದ ಪುಣ್ಯಕರ್ಮ ಮಾಡಿಸುವಲ್ಲಿಯೂ ಅಂದವಿದೆ ಆ ಪುಣ್ಯಕರ್ಮದ ಫಲ ನೀಡುವಲ್ಲಿಯೂ ಅಂದವಿದೆ ಹರಿಯ ಅನುಗ್ರಹದಿಂದ ಪುಣ್ಯ ಕರ್ಮ. ಅದರಿಂದ ಪುಣ್ಯ ಆ ಪುಣ್ಯ ಮುಂದೆ ಬರಬಹುದಾದ ಪಾಪಗಳ ದಾಳಿಯನ್ನಿದಿರಿಸಿ ನಿಂತು ಪರಿಪುಷ್ಟವಾಗಿ ಪಕ್ವಗೊಂಡಾಗ ಹರಿಯ ಅನುಗ್ರಹದಿಂದ ಪುಣ್ಯಫಲ ಸಿಗುತ್ತದೆ

ಪುಣ್ಯ ಜಡವಲ್ಲ ಸುಂದರ ಸೂಕ್ಷ್ಮ ಜಡ ಶರೀರಯುಕ್ತವಾದ ಸಾತ್ವಿಕ ದಿವ್ಯ ಚೇತನವೆ ಪುಣ್ಯ ಅನುವ್ಯಾಖ್ಯಾನ ಭಕ್ತಿಪಾದದ ವಚನ—

ಕರ್ಮಾಣಿ ತಾನಿ ಚ ಪೃಥಕ್ ಚೇತನಾನ್ಯೇವ ಸರ್ವಶಃ ।
ಅಚೇತನಶರೀರಾಣಿ ಸ್ವಕರ್ಮಫಲಭಾಂಜಿ ಚ ॥

ಅದರಿಂದ ಪುಣ್ಯದಲ್ಲಿಯೂ ಅಂದವಿದೆ ಅದು ಫಲ ಕೊಡುವುದರಲ್ಲಿಯೂ ಅಂದವಿದೆ

ನ ಚ ಕರ್ಮ . ಅಚಿತ್ತನು ತದ್ಧಿ ಯತಃ

ಎಂಬಲ್ಲಿ ಕರ್ಮವನ್ನು ಜಡವೆಂದು ಹೇಳಿರುವುದು ಅಸ್ವತಂತ್ರ ಎಂಬ ಅಭಿಪ್ರಾಯದಿಂದ, ಅಥವಾ ಪರವಾದಿಗಳ ಪ್ರಕಾರ ಜಡವೆಂಬ ಅಭಿಪ್ರಾಯದಿಂದ

ಕರ್ಮಾನುಗುಣವಾಗಿ ಹರಿ ಫಲ ಕೊಡುವುದು ಅವನ ಕರುಣೆಯೆ ಇಲ್ಲದಿದ್ದರೆ ಅವನೇಕೆ ಕರ್ಮ ಮಾಡಿಸಬೇಕು? ಏಕೆ ಅದರ ಫಲ ನೀಡಬೇಕು? ಆತ ಪೂರ್ಣಾನಂದ, ಕೃತಕೃತ್ಯ ತಾನೆ?

***ನುಡಿವೆಣ್ಣನಾಣ್ಮಾಂಡದೊಳು***

ಶ್ರೀಹರಿ ಪುಣ್ಯಕರ್ಮ ಮಾಡಿಸುವುದು ನುಡಿವೆಣ್ಣಿನ ಮೂಲಕ. ವೇದಾದಿ ಸಕಲ ಶಾಸ್ತ್ರವಾಙ್ಮಯಕ್ಕೆ ಮುಖ್ಯಾಭಿಮಾನಿನಿಯಾದ ರಮಾದೇವಿಯ ಮೂಲಕ. ಹರಿ ಆ ನುಡಿವೆಣ್ಣಿನ ಆಣ್ಮ, ಪತಿ, ವಿಧಿನಿಷೇಧ ವಚನಗಳೆಲ್ಲ ಹರಿಯ ಆಜ್ಞೆ ಅವನ್ನು ರಮೆ ಶಾಸ್ತ್ರದ ಮೂಲಕ ಜೀವನಿಗೆ ತಿಳಿಸುತ್ತಾಳೆ ಅಂಡದೊಳು, ಅಂದರೆ ಬ್ರಹ್ಮಾಂಡದಲ್ಲಿ ನುಡಿವೆಣ್ಣಿ-ನಾಣ್ಮನಾದ ಹರಿ ಪುಣ್ಯಫಲವನ್ನು ಅಂದದಲ್ಲಿ ನೀಡುತ್ತಾನೆ ಎನ್ನುತ್ತಿದ್ದಾರೆ ದಾಸರಾಯರು ಬ್ರಹ್ಮಾಂಡದಲ್ಲಿರುವ ಬ್ರಹ್ಮಾದಿ ಸಕಲ ಚೇತನರಿಗೂ ವೇದದ ವಿಧಿನಿಷೇಧಗಳು ಅನ್ವಯಿ-ಸುತ್ತವೆ ಹರಿಯಾಜ್ಞೆಯಂತೆ ವರ್ತಿಸುವುದೆ ವಿಹಿತ, ಪುಣ್ಯಕರ್ಮ ಹರಿಯಾಜ್ಞೆಯ ಉಲ್ಲಂಘನೆಯೆ ನಿಷಿದ್ಧ, ಪಾಪಕರ್ಮ ಅಥವಾ ನುಡಿವೆಣ್ಣು ಎಂದರೆ ಸರಸ್ವತಿ ಅವಳ ಆಣ್ಮನಾದ ಬ್ರಹ್ಮನ ಅಂಡ, ಬ್ರಹ್ಮಾಂಡ ಅದರೊಳಗೆ ರುದ್ರಾದಿ ದೇವತೆಗಳೆಲ್ಲರಿಗೂ ವಿಧಿ ನಿಷೇಧಗಳಿವೆ ಬ್ರಹ್ಮವಾಯು ಮುಂತಾದ ಋಜುಗಳಿಗೂ ಅವರ ಪತ್ನಿಯರಿಗೂ ವಿಧಿ

ನಿಷೇಧಗಳು ಅನ್ವಯಿಸುವುದಿಲ್ಲ ಅವರು ಶರೀರಾಭಿಮಾನರಹಿತರು, ಮುಕ್ತರಂತೆಯೆ ಇರುವವರು, ಆದರೂ ಅವರು ಪುಣ್ಯಕರ್ಮ ಮಾಡುತ್ತಾರೆ, ಹರಿ ಅವರಿಗೆ ಪುಣ್ಯಫಲವನ್ನು ಅಂದದಲ್ಲಿ ನೀಡುತ್ತಾನೆ

ಅಥವಾ ಪುಣ್ಯ ಫಲನೀಡುವಂದದಲಿ, ಅಂದರೆ ಪುಣ್ಯವು ತನ್ನ ಫಲ ನೀಡುವಂತೆ ಪ್ರೇರಿಸುತ್ತ ಲಕ್ಷ್ಮಣನ ಅಣ್ಣ ಶ್ರೀರಾಮ ಅವಸರಕ್ಕೆ ಒದಗುತ್ತಾನೆ ಎನ್ನಬೇಕು

***ಲಕ್ಷ್ಮಣನ ಅಣ್ಣ***

ಲಕ್ಷ್ಮಣ ಅಣ್ಣ ರಾಮನಿಗೆ ವನವಾಸದಲ್ಲಿ ಮಾಡಿದ ಸೇವೆ ಎಂಥ ಪುಣ್ಯಕರ್ಮ! ಅದು ಅವನ ಯೋಗ್ಯತೆಗೇ ಮೀರಿತ್ತು ಅಂದದಲ್ಲಿ ಮಾಡಿದ ಆ ಸೇವೆಗೆ ಅಂದದಲ್ಲಿ ಫಲ ನೀಡಿದ ಶ್ರೀರಾಮ, ಕೃಷ್ಣನಾಗಿ ಅವನನ್ನು ಅಣ್ಣನನ್ನಾಗಿ ಹುಟ್ಟಿಸಿ ತಂದೆಯಂತೆ ಭಕ್ತಿವಾತ್ಸಲ್ಯಗಳನ್ನು ತೋರಿ ಆನಂದಪಡಿಸಿದ

***ಭಕ್ತರ ಅವಸರಕ್ಕೆ ಒದಗುವ***

ಅಗ್ರತಃ ಪೃಷ್ಠತಶ್ಚೈವ ಪಾರ್ಶ್ವಯೋಶ್ಚ ಮಹಾಬಲೌ ।
ಆಕರ್ಣಪೂರ್ಣಧನ್ವಾನೌ ರಕ್ಷೇತಾಂ ರಾಮಲಕ್ಷ್ಮಣೌ ॥

ಎಂಬಂತೆ ಲಕ್ಷ್ಮಣಸಮೇತನಾಗಿ ಅವಸರಕ್ಕೆ ಅಂದರೆ ಸಕಾಲಕ್ಕೆ ಬಂದೊದಗುತ್ತಾನೆ, ಲಕ್ಷ್ಮಣನಣ್ಣ ಅವಸರಕ್ಕೆ ಎಂದರೆ ಜೀವರ ಕರ್ಮ ಪರಿಪಕ್ವವಾಗುವ ಕಾಲದಲ್ಲಿ ಎಂದೂ ಅರ್ಥ ಸಾಧನಪೂರ್ತಿ ಮಾಡಿ ಚರಮ ಶರೀರದಲ್ಲಿದ್ದ ಮನುಷ್ಯ ಪಶು, ಪಕ್ಷಿ, ತೃಣ, ವನಸ್ಪತಿ ಮುಂತಾದ ಜೀವರನ್ನು ಹತ್ತು ಸಾವಿರ ವರ್ಷಕಾಲ ರಾಮರಾಜ್ಯದಲ್ಲಿ ಆನಂದ-ಪಡಿಸಿ ಕೊನೆಯಲ್ಲಿ

ಸಮಾಯಾತ ಸಮಾಯಾತ ಯೇ ಯೇ ಮೋಕ್ಷಪದೇಚ್ಛವಃ

ಎಂದು ಕರೆಕರೆದು ಅವರನ್ನು ಪರಂಧಾಮಕ್ಕೊಯ್ದ ಲಕ್ಷ್ಮಣನ ಅಣ್ಣ ಶ್ರೀರಾಮ

***ಅಮರಗಣಸಹಿತ***

ಜೀವನ ಸಾಧನಾನುಷ್ಠಾನವೆಂದೂ ಕೇವಲ ಜೀವನಿಂದ ನಡೆಯುವುದೇ ಇಲ್ಲ ಸದಾ ಹರಿ ಮಾಡಿಸುತ್ತಾನೆ ಹರಿಮಾತ್ರವೆ ಅಲ್ಲ, ಹರಿಯ ಪ್ರೇರಣೆಯಂತೆ ಲಕ್ಷ್ಮೀಬ್ರಹ್ಮಾದಿಗಳ ಒಂದು ದೊಡ್ಡ ಸಮೂಹವೆ ಉತ್ಸಾಹದಿಂದ ಕಟಿಬದ್ಧವಾಗಿ ನಿಂತಿರುತ್ತದೆ ಒಂದು ತೃಣ ಜೀವವನ್ನೂ ಕೂಡ ಅದರ ಸಾಧನಮಾರ್ಗದಲ್ಲಿ ಇಷ್ಟು ಮಂದಿ ದೇವಾಧಿದೇವತೆಗಳು ಸೇರಿ ಮುನ್ನಡೆಸುವಂತೆ ಮಾಡುತ್ತಾನೆ ಹರಿ ಅವನು ತಾನೊಬ್ಬನೆ ಇಚ್ಛಾಮಾತ್ರದಿಂದ ಈ ಕಾರ್ಯ ನಡೆಸಬಹುದಾಗಿತ್ತು ಆದರೆ ಅಮಿತ ವಾತ್ಸಲ್ಯ ಕರುಣೆಗಳಿಂದ ಆತ ಒಬ್ಬ ತೃಣ ಜೀವನಿಗೂ ಇಂಥ ಪ್ರಾಶಸ್ತ್ಯ ನೀಡುತ್ತಾನೆ!

**ಕೊಟ್ಟುದನು ಕೈಕೊಂಬರೆಕ್ಷಣ**
**ಬಿಟ್ಟಗಲ ತನ್ನವರ ದುರಿತಗ-**
**ಳಟ್ಟುವನು ದೂರದಲಿ ದುರಿತಾರಣ್ಯಪಾವಕನು ।**
**ಬೆಟ್ಟ ಬೆನ್ನಲಿ ಹೊರಿಸಿದವರೊಳು**
**ಸಿಟ್ಟು ಮಾಡಿದನೇನೊ ಹರಿ ಕಂ-**
**ಗೆಟ್ಟ ಸುರರಿಗೆ ಸುಧೆಯನುಣಿಸಿದ ಮುರಿದನಹಿತರನು ॥ ೨೮ ॥**

ಭಕ್ತರು ಕೊಟ್ಟುದನ್ನು ಹರಿ ಕೈಗೊಳ್ಳುತ್ತಾನೆ ತನ್ನವರನ್ನು ಅರೆಕ್ಷಣ ಬಿಟ್ಟು ಅಗಲುವುದಿಲ್ಲ ತನ್ನವರ ದುರಿತಗಳನ್ನು ದೂರದಲ್ಲಿ ಅಟ್ಟುತ್ತಾನೆ ದುರಿತಾರಣ್ಯಕ್ಕೆ ಪಾವಕನಂತಾಗುತ್ತಾನೆ ಬೆಟ್ಟವನ್ನು ಬೆನ್ನ ಮೇಲೆ ಹೊರಿಸಿದವರಲ್ಲಿ ಅವನು ಸಿಟ್ಟು ಮಾಡಿದನೇನು? ಇಲ್ಲ, ಅಷ್ಟು ಮಾತ್ರವಲ್ಲದೆ, ಕಂಗೆಟ್ಟ ಸುರರಿಗೆ ಸುಧೆಯನ್ನೆ ಉಣಿಸಿದ, ಅಹಿತರನ್ನು ಮುರಿದ

***ಕೊಟ್ಟುದನು ಕೈಕೊಂಬ***

ಭಕ್ತರಿಗೆ ತಮ್ಮಲಿರುವುದೆಲ್ಲ ಹರಿಯೆ ಕೊಟ್ಟಿರುವುದೆನ್ನುವ ಪ್ರಜ್ಞೆ ಇದೆ ಆದರೆ ತಿಳಿದೂ ತಿಳಿದೂ ಭಕ್ತರು ಅವನು ಕೊಟ್ಟಿದ್ದನ್ನು ಅವನಿಗೇ ಕೊಡುತ್ತಾರೆ ಅದಕ್ಕೆ ಹರಿ ಕೋಪಗೊಳ್ಳದೆ ಪ್ರೀತಿಯಿಂದಲೆ ಸ್ವೀಕರಿಸುತ್ತಾನೆ ಪ್ರೀತಿಯಾಗಲಿ ಎಂದು ಕೊಟ್ಟರೆ ಸ್ವತಃ ಪೂರ್ಣಾನಂದ-ನಾದರೂ ನಿತ್ಯತೃಪ್ತನಾದರೂ ಲೀಲೆಯಿಂದ ಆನಂದಪಡುತ್ತಾನೆ, ತೃಪ್ತಿಪಡುತ್ತಾನೆ ಇದು ಕೇವಲ ಭಕ್ತನಿಗೆ ಅನುಗ್ರಹ ಮಾಡುವುದಕ್ಕಾಗಿ, ಕರುಣೆಯ ವ್ಯಾಪಾರ

ಅಥವಾ ಭಕ್ತರು ಕೊಟ್ಟಿದ್ದನ್ನೆಲ್ಲ ಹರಿ ಸ್ವೀಕರಿಸುತ್ತಾನೆ ಸಾರ್ವಭೌಮನಾದ ಹರಿಗೆ 'ಒಂದು ದಳ ಶ್ರೀತುಳಸಿ, ಬಿಂದು ಗಂಗೋದಕ' ಕೊಟ್ಟರೂ ಕೋಪಿಸಿಕೊಳ್ಳದೆ 'ಪತ್ರಂ ಪುಷ್ಪಂ ಫಲಂ ತೋಯಂ' ಎಂದು ಭಗವದ್ಗೀತೆಯಲ್ಲಿ ತಾನೆ ಹೇಳಿದಂತೆ ಆದರದಿಂದ ಸ್ವೀಕರಿಸುತ್ತಾನೆ

ಅಥವಾ 'ಮನದೊಳಗೆ ಸುಂದರ ಪದಾರ್ಥವ ನೆನೆದು' ಕೊಟ್ಟರೂ ಸರಿಯೆ, ಆ ಕಾಲ್ಪನಿಕ ವಸ್ತುಗಳನ್ನೂ ಸ್ವೀಕರಿಸುತ್ತಾನೆ!' ಅಥವಾ ಭಕ್ತರಿಗೆ ತಾನು ಕೊಟ್ಟುದನ್ನು ಹರಿ ತಾನೆ ಅವರಿಂದ ಸ್ವೀಕರಿಸುತ್ತಾನೆ ಅಥವಾ ಭಕ್ತರೊಳಗೆ ನಿಂತು ತಾನು ತನಗೆ ಕೊಟ್ಟುದನ್ನು ತಾನೇ ಸ್ವೀಕರಿಸುತ್ತಾನೆ ಏಕೆ?

***ದುರಿತಗಳಟ್ಟುವನು ದೂರದಲಿ***

ಕೊಡಲು ಭಕ್ತರಿಗೆ ಅವರದೆಂದು ಏನೂ ಇಲ್ಲ ಅದಕ್ಕೇ ತಾನು ಅವರಿಗೆ ಮೊದಲಿಗೆ ಕೊಡುತ್ತಾನೆ—

ತೇನ ತ್ಯಕ್ತೇನ ಭುಂಜೀಥಾಃ

'ಅವನು ಕೊಟ್ಟಿದ್ದನ್ನು ಉಣ್ಣು' ಎನ್ನುತ್ತದೆ ಈಶೋಪನಿಷತ್ತು

ಅಂದರೆ ಕೊಟ್ಟಿದ್ದನ್ನು ಉಣಬೇಕು ಉಣುವುದಕ್ಕೆ ಮೊದಲು ಅವನಿಗೆ ಇತ್ತು ಪ್ರಸಾದವನ್ನು ಉಣಬೇಕು ಆಗ ದುರಿತಪರಿಹಾರ ಭಗವದ್ಗೀತೆ ಹೇಳುತ್ತದೆ—

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।

ಹೀಗೆ ಪಾಪಪರಿಹಾರ ಮಾಡಿಕೊಳ್ಳಲಿ ಭಕ್ತ ಎನ್ನುವ ಉದ್ದೇಶದಿಂದ ಏನೂ ಇಲ್ಲದ ಭಕ್ತನಿಗೆ ಎಲ್ಲವನ್ನೂ ಕೊಟ್ಟು ಕಾಸಿಗೆ ಕೈಯೊಡ್ಡಿ ಬೇಡುತ್ತಾನೆ ಕಾಸು ಕೊಟ್ಟರೆ ಆದರದಿಂದ ಸ್ವೀಕರಿಸಿ ಬೆಟ್ಟದಷ್ಟು ಪಾಪಪರಿಹಾರ ಮಾಡುತ್ತಾನೆ ಇದು ಕೇವಲ ಕರುಣೆ

ಹರಿ ತಾನೇ ಕೊಟ್ಟು ತಾನೇ ಒಯ್ಯುತ್ತಾನೆ ಅವನು ಕೊಟ್ಟಾಗ ನಾವು ಹಿಗ್ಗುತ್ತೇವೆ ಅವನು ಒಯ್ದಾಗ ಅಳುತ್ತೇವೆ ಪೂರ್ವ ಜನ್ಮದ ಪಾಪದಿಂದ ಕೊಡಲು ಮನಸ್ಸಾಗದೆ ಬಚ್ಚಿಟ್ಟರೆ ಆತ ಅಪಹರಿಸುತ್ತಾನೆ ಹೀಗೆ ವಸ್ತು ಕಳೆದು ಹೋದಾಗಲಾದರೂ 'ಕೃಷ್ಣಾರ್ಪಣ' ವೆನ್ನಲಿ ಎಂದು ನಿರೀಕ್ಷಿಸುತ್ತಾನೆ 'ಕೃಷ್ಣಾರ್ಪಣ' ವೆಂದರೆ ಸಾಕು, ಅವನು ಅದನ್ನು ಸ್ವೀಕರಿಸಿ ಪೂರ್ವ ಜನ್ಮದ ಪಾಪಗಳನ್ನು ಕಳೆಯುತ್ತಾನೆ ಪಾಪ್ಪೋಸು ಹೋದರೇನಾಯಿತು, ಪಾಪ ಓಸು ಹೋಯಿತು! ಹೀಗೆ ಕೊಟ್ಟರೂ ಪಾಪ ಕಳೆಯುತ್ತಾನೆ, ಕೊಡದಿದ್ದರೂ ಕಸಿದು ಪಾಪ ಕಳೆಯುತ್ತಾನೆ, ಎಂಥ ಕರುಣೆ!

ಎಲ್ಲವನ್ನೂ ಕೊಡುತ್ತಾನೆ, ಹರಿ ಅದರಲ್ಲಿ ಸ್ವಲ್ಪವನ್ನೆ ಅಂದರೆ, ಸ್ವಾಖ್ಯರಸವನ್ನೇ ಸ್ವೀಕರಿಸುತ್ತಾನೆ ಅದು ನಮಗೆ ಯೋಗ್ಯವಾದುದೂ ಅಲ್ಲ ಅದಕ್ಕೆ ಕೈಯೊಡ್ಡಿ ಬೇಡುತ್ತಾನೆ ಹರಿ ನಾವು ಕೊಡದಿದ್ದರೆ ಎಂಥ ಕಳ್ಳತನ, ದರೋಡೆಯ ಪಾಪ!—

ತಾನಪ್ರದಾಯೈತೇಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ

***ಅರೆ ಕ್ಷಣ ಬಿಟ್ಟಗಲ ತನ್ನವರ***

ಹಿಂದೆ ಹೇಳಿದೆ 'ಆಗಸದಪೋಲೆತ್ತ ನೋಡಿದರೂ' ಹಿಂದೆ ಮುಂದೆ ಎಡಬಲದಿ ಒಳಹೊರಗೆ ಇಂದಿರೇಶನಿದ್ದು ತನ್ನವರನ್ನು ಅರೆಕ್ಷಣ ಬಿಟ್ಟಗಲದೆ ಇರುತ್ತಾನೆ' 'ಒಡಲ ನೆಳಲಂದದಲಿ ನಮ್ಮೊಡನೆ ಒಂದರೆಕ್ಷಣ ಬಿಡದೆ ಬೆಂಬಲನಾಗಿ ತಿರುಗುತ್ತಾನೆ

ಈಗ 'ಅರೆಕ್ಷಣ ಬಿಟ್ಟಗಲ ತನ್ನವರ' ಎಂದು ತಿರುಗಿ ಹೇಳುವುದು ಹರಿಕರುಣೆಯನ್ನು ಎಷ್ಟು ಬಾರಿ ಕೊಂಡಾಡಿದರೂ ಸಾಲದೆನ್ನುವ ಅಭಿಪ್ರಾಯದಿಂದ

ವಸ್ತುತಃ ದಾನಕ್ಕಿಂತ ದೊಡ್ಡ ಧರ್ಮವಿಲ್ಲ ಎಲ್ಲ ಧರ್ಮವೂ ದಾನದ ಬೇರೆ ಬೇರೆ ಮುಖಗಳೇ ಆಗಿವೆ

ದಾನೇ ಸರ್ವಂ ಪ್ರತಿಷ್ಠಿತಮ್

ಎಂದು ಮಹಾನಾರಾಯಣೋಪನಿಷತ್ತು ಹೇಳಿದೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಚತುರ್ಮುಖ ಬ್ರಹ್ಮದೇವ, ಮಾನವ, ದಾನವರಿಗೆ ದದದ ಎಂದು ಮೂರು ಬಾರಿ ಏಕಾ-

ಕ್ಷರೋಪದೇಶಗೈದ ಬಳಿಕ 'ತಿಳಿಯಿತೇ?' ಎಂದ 'ತಿಳಿಯಿತು' ಎಂದರು 'ದಮ ಬೇಕು, ಅಹಂಕಾರ ಬಿಡಬೇಕು' ಎಂದರು ದೇವತೆಗಳು 'ದಾನ ಮಾಡಬೇಕು' ಎಂದರು ಮಾನವರು 'ದಯೆ ಬೇಕೆನ್ನುತ್ತಿದ್ದೀರಿ' ಎಂದರು ದಾನವರು ಬ್ರಹ್ಮನ ಈ ಉಪದೇಶವನ್ನೆ ದೇವತೆಗಳು ಇಂದಿಗೂ ಮೋಡದ ಗುಡುಗಿನ ಧ್ವನಿಯಲ್ಲಿ ಉಸುರುತ್ತಾರೆ—'ದ ದ ದ' ಎಂದು ಅಜ್ಞಾನಿಯಾದ ಮಾನವನಿಗೆ ಯಾಗಾದಿರೂಪದಲ್ಲಿ ದ್ರವ್ಯದಾನವೆ ಜ್ಞಾನಸಾಧನ ನಾವು ಕೊಟ್ಟ ದ್ರವ್ಯದಾನವನ್ನು ಹತ್ತಕ್ಕೆ ನೂರಾರು ಮಾಡಿ ಬಿತ್ತಿ ಬೆಳೆಸಿ ಮೋಕ್ಷಫಲದ ಅಮೃತರಸವನ್ನು ಹರಿ ಉಣಿಸುತ್ತಾನೆ ವಿಜಯದಾಸರು ಹೇಳುತ್ತಾರೆ—

ಚಿತ್ತ ಶುದ್ಧನಾಗಿ ಕರವೆತ್ತಿ ಬಲುದೀನನಾಗಿ
ಅತ್ತಲಿದ್ದ ಉದಕವು ಅತ್ತಲರ್ಪಿತವೆನಲು ।
ಚಿತ್ತಜಪಿತನು ಮೆಚ್ಚಿ ಚಿತ್ತದಲಿ ಒಪ್ಪಿಕೊಂಡು
ಹತ್ತಕ್ಕೆ ನೂರಾರು ಮಾಡಿ ಬಿತ್ತಿ ಬೆಳೆಸಿ ಉಣಿಸುವ ॥

ಮೋಕ್ಷದಲ್ಲಿ ಹರಿ ತನ್ನವರನ್ನು ಅರಗಳಿಗೆ ಬಿಟ್ಟಗಲನು ದುರಿತಗಳನ್ನು ದೂರದಲ್ಲಿ ಅಟ್ಟುವನು ದುರಿತಗಳಲ್ಲಿ ಸಂಚಿತ ಅಪರೋಕ್ಷಪ್ರಭಾವದಿಂದಲೆ ಕಳೆದಿರುತ್ತದೆ ಪ್ರಾರಬ್ಧ ಉಂಡು ಕಳೆದಿರುತ್ತದೆ ಆಗಾಮಿ ಲೇಪವಿಲ್ಲದಾಗುತ್ತದೆ

***ಬೆಟ್ಟ ಬೆನ್ನಲಿ ಹೊರಿಸಿದವರಲಿ ಸಿಟ್ಟು ಮಾಡಿದನೇನೊ***

ಜ್ಞಾನದಾನಂ ತು ದೇವಾನಾಂ ಫಲದಾನಂ ಚ ಕರ್ಮಣಾಮ್

ಮನುಷ್ಯರು ದ್ರವ್ಯದಾನ ಮಾಡುತ್ತಿದ್ದರೆ ದೇವತೆಗಳು ಜ್ಞಾನದಾನ ಮಾಡುತ್ತಾರೆ, ಕರ್ಮ-ಫಲದಾನ ಮಾಡುತ್ತಾರೆ

ಶ್ರೇಯಾನ್ ದ್ರವ್ಯಮಯಾದ್ ಯಜ್ಞಾದ್ ಜ್ಞಾನಯಜ್ಞಃ ಪರಂತಪ

ಎಂಬಂತೆ ಅತ್ಯುತ್ತಮ ದಾನವಾದ ಜ್ಞಾನದಾನದಲ್ಲಿ ಸದಾ ನಿರತರಾದ ದೇವತೆಗಳು ಪ್ರಾರಬ್ಧವಶಾತ್ ಹರಿಯಲ್ಲಿ ಅಪರಾಧ ಮಾಡಿದರೂ ಸಿಟ್ಟುಮಾಡುವುದಿಲ್ಲ, ಕ್ಷಮಿಸಿಬಿಡು-ತ್ತಾನೆ ಸಮುದ್ರಮಥನಕಾಲದಲ್ಲಿ ಮಂದರಪರ್ವತ ಕ್ಷೀರಸಾಗರದಲ್ಲಿ ಮುಳುಗುತ್ತಿದ್ದಾಗ ಈ ದೇವತೆಗಳು ಹರಿಯನ್ನು ಬೇಡಿ ಬೆಟ್ಟವನ್ನು ಬೆನ್ನಲ್ಲಿ ಹೊರಿಸಿದರು ಆದರೂ ಹರಿ ಕೋಪಿಸಿಕೊಳ್ಳಲಿಲ್ಲ, ಮಾತ್ರವಲ್ಲ, ಮುಂದೆ ಬಂದ ಅಮೃತವನ್ನು ಅಸುರರು ಅಪಹರಿಸಿ-ದಾಗ ಕಂಗೆಟ್ಟ ದೇವತೆಗಳಿಗೆ ಹರಿ ಸ್ತ್ರೀರೂಪದಿಂದ ಬಂದು ಕೈಯಾರೆ ಅಮೃತ ಉಣಿಸಿದ ಎಲ್ಲರೂ ಉಂಡ ಬಳಿಕ ಪುರುಷರೂಪನಾಗಿ ಅವರ ಅಹಿತರಾದ ದಾನವರನ್ನು ಮುರಿದ ಇದು ಉಪಲಕ್ಷಣ ದೇವೇಂದ್ರ ಗೋಕುಲ ಮುಳುಛುವಂತೆ ಮಳೆಗರೆದು ಕೃಷ್ಣನಿಂದ ಗೋವರ್ಧನ ಬೆಟ್ಟವನ್ನು ಹೊರಿಸಿದ ಬೆನ್ನಿನಲ್ಲಿ ಅಲ್ಲ, ಕೈಯಲ್ಲಿ ಹೊರಿಸಿದ ಆದರೆ ಕೃಷ್ಣ ಸಿಟ್ಟು ಮಾಡಲಿಲ್ಲ

ಕ್ಷಂತವ್ಯಮೇವ ಭವತಾ ಮಮ ಬಾಲ್ಯಮೀಶ

'ನನ್ನ ಹುಡುಗತನವನ್ನು ಕ್ಷಮಿಸು' ಎಂದು ಇಂದ್ರ ಕೇಳಿದಾಗ ಕೃಷ್ಣ ಹೇಳುತ್ತಾನೆ 'ಕ್ಷಾಂತಂ ಸದೈವ' 'ಸದಾ ಕ್ಷಮಿಸಿಯೇ ಇದ್ದೇನೆ' ಬಳಿಕ ಇಂದ್ರ ಬೇಡಿಕೊಳ್ಳುತ್ತಾನೆ—

ತ್ವಯಾ ಚ ನಿತ್ಯಂ ಸಂರಕ್ಷ್ಯ ಆಹವೇಷು ಮಹತ್ಸು ನಃ ।

'ಮಹಾಯುದ್ಧಗಳಲ್ಲಿ ಅರ್ಜುನನಿಗೆ ನೀನು ಬೆಂಗಾವಲಾಗಿ ಇದ್ದು ಅವನನ್ನು ಕಾಪಾಡಬೇಕು' ಕೃಷ್ಣ ಹಾಗೇ ಮಾಡಿದ ಅರ್ಜುನ ಬಂಧಮೋಹಕ್ಕೊಳಗಾಗಿ ಯುದ್ಧ ಮಾಡಲೊಲ್ಲದೆ, ಬಿಡಲೂ ಶಕ್ತನಾಗದೆ ಕಂಗೆಟ್ಟಾಗ ಗೀತಾಮೃತಪಾನ ಮಾಡಿಸಿದ ಅವನ ಕೈಯಿಂದಲೆ ಅಹಿತರಾದ ಕೌರವರ ಸೈನ್ಯವನ್ನು ಮುರಿದ ಇದೆಲ್ಲವೂ ಹರಿಯ ಮಹಾಕಾರುಣ್ಯದ ವಿಲಾಸ

**ಖೇದ ಮೋದ ಜಯಾಪಜಯ ಮೊದ-**
**ಲಾದ ದೋಷಗಳಿಲ್ಲ ಚಿನ್ಮಯ**
**ಸಾದರದಿ ತನ್ನಂಘ್ರಿಕಮಲವ ನಂಬಿ ತುತಿಸುವರ ।**
**ಕಾದುಕೊಂಡಿಹ ಪರಮಕರುಣಮ-**
**ಹೋದಧಿಯು ತನ್ನವರು ಮಾಡ್ದಪ-**
**ರಾಧಗಳ ನೋಡದಲೆ ಸಲಹುವ ಸರ್ವಕಾಮದನು ॥ ೨೯ ॥**

ದುಃಖ ಸುಖ ಜಯ ಅಪಜಯ ಮುಂತಾದ ದೋಷಗಳು ಹರಿಯಲ್ಲಿ ಇಲ್ಲ ಅವನು ಚಿನ್ಮಯ. ಆದರದಿಂದ ತನ್ನ ಪಾದಕಮಲವನ್ನು ನಂಬಿ ಸ್ತುತಿಸುವವರನ್ನು ಕಾದುಕೊಂಡಿರುತ್ತಾನೆ ಪರಮಕರುಣಾಸಮುದ್ರ ತನ್ನವರು ಮಾಡಿದ ಅಪರಾಧಗಳನ್ನು ನೋಡದೆಯೆ ಸಲಹುತ್ತಾನೆ, ಸರ್ವಾಭೀಷ್ಟದಾಯಕನೆನಿಸುತ್ತಾನೆ

***ಖೇದಮೋದಜಯಾಪಜಯ ಮೊದಲಾದ ದೋಷಗಳಿಲ್ಲ***

ಖೇದವೆಂದರೆ ದುಃಖ ಅದು ದೋಷ ಆದರೆ ಮೋದವೆಂದರೆ ಸುಖ ಅದು ಹೇಗೆ ದೋಷ? ಅಪಜಯ ದುಃಖಕ್ಕೆ ಕಾರಣವಾದ್ದರಿಂದ ದೋಷವೆನ್ನೋಣ. ಜಯ ಸುಖಕಾರಣವಾಗಿದೆ ಅದು ಹೇಗೆ ದೋಷ? ವಿಷಮಿಶ್ರಿತವಾದ ಅಮೃತದಂತೆ ದುಃಖಸಹಿತವಾದ ಸುಖ ಅನಿಷ್ಟವಾಗುವುದರಿಂದ ದೋಷವೆನ್ನೋಣವೆ?

ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್

ಎಂಬಂತೆ ಸುಖದುಃಖಗಳು ಒಂದೊಂದಾಗಿ ಬರುತ್ತವೆ ಹೊರತು ಮಿಶ್ರವಾಗಿ ಅಲ್ಲ

ಮೇಲಿನ ಪ್ರಶ್ನೆಗೆ ಸಮಾಧಾನ—ದುಃಖದ ಅನಂತರ ಬರುವ ಸುಖ ಹೇಗೆ ಬಹಳ ಸವಿಯಾಗಿರುವುದೋ ಹಾಗೇ ಸುಖದ ಅನಂತರ ಬರುವ ದುಃಖವೂ ಅಷ್ಟೇ

ಅಸಹನೀಯವಾಗುತ್ತದೆ ಈಗಿನ ದುಃಖ ತೀವ್ರವಾಗಿ ಅನುಭವಕ್ಕೆ ಬರಲು ಹಿಂದಿನ ಸುಖ ಕಾರಣ ಅದರಿಂದ ಆ ಸುಖವೂ ದೋಷವೇ ಆಗುತ್ತದೆ ದುರ್ಯೋಧನ ಕೊಟ್ಟಹಾಲಿನ ರುಚಿ ಕಂಡ ಮೇಲೆ ಬಾಲಕ ಅಶ್ವತ್ಥಾಮ ಹಿಟ್ಟು ಕಲಸಿದ ನೀರನ್ನು ಹಾಲೆಂದು ಕುಡಿಯಲು ನಿರಾಕರಿಸಿ ಅಳತೊಡಗಿದ ದುರ್ಯೋಧನ ಪಾಂಡವರ ವನವಾಸಕಾಲದಲ್ಲಿ ಹದಿಮೂರು ವರ್ಷ ಚಕ್ರವರ್ತಿಯಾಗಿ ಸಿಂಹಾಸನದಲ್ಲಿ ಮೆರೆದ ಬಳಿಕ ಕುರುಕ್ಷೇತ್ರ ರಣರಂಗದ ಧೂಳಿನಲ್ಲಿ ತೊಡೆಮುರಿದು ಬಿದ್ದಾಗ, ಭೀಮಸೇನ ಕಾಲಿಂದ ಅವನ ತಲೆಯ ಮೇಲೆ ತುಳಿದಾಗ, ನರಿನಾಯಿಗಳು ಹದ್ದುಗಳು ಕೈಯಿಂದ ಹಿಡಿದು ತಳ್ಳಿದರೂ ನಿರ್ಭಯ- ವಾಗಿ ಬಂದು ಮೈಯನ್ನು ಕಿತ್ತು ಹರಿದು ತಿನ್ನುತ್ತಿದ್ದಾಗ ಆ ಅಪಮಾನಕರವಾದ ಅಸಹ- ನೀಯವಾದ ಅವನ ಸ್ಥಿತಿ ಹೇಗಿರಬಹುದು? ಈಗ ಅವನು ಹಿಂದೆ ಅನುಭವಿಸಿದ ಆ ರಾಜ್ಯಸುಖ ದೋಷವೆ ಹೊರತು ಗುಣವಾಗಲಾರದು ಹೀಗೆ ಜಯವೂ ಕೂಡ.

ಅಥವಾ ಸುಖ-ದುಃಖ, ಜಯ-ಅಪಜಯ, ಲಾಭ-ನಷ್ಟ ಮುಂತಾದವುಗಳನ್ನು ದ್ವಂದ್ವಗಳಾಗಿ ತೆಗೆದುಕೊಳ್ಳಬೇಕು ಈ ದ್ವಂದ್ವಗಳು ಮಾನವನನ್ನು ಹಣ್ಣು ಮಾಡುತ್ತವೆ ಒಂದು ಕ್ಷಣ ನೆಮ್ಮದಿಯಿಂದ ಇರಲು ಬಿಡುವುದಿಲ್ಲ ಅದರಿಂದ ಅವು ದೋಷಗಳು ಆದರೆ ಈ ದೋಷಗಳು ಹರಿಯಲ್ಲಿ ಇಲ್ಲವೆಂದು ಹೇಳುವುದರಿಂದ ಪ್ರಕೃತದಲ್ಲಿ ಏನೂ ಉಪಯೋಗವಿಲ್ಲ ಇದು ಕರುಣಾಸಂಧಿ ಹರಿಯ ಕರುಣಾಶಾಲಿತ್ವವನ್ನು ಈ ಸಂಧಿಯಲ್ಲಿ ಹೇಳಬೇಕು ಪ್ರಾಯಃ ಈ ದೋಷಗಳಿದ್ದರೇ ಕರುಣೆ ಎಂಬುದು ಇರಲು ಸಾಧ್ಯ ಸುಖ-ದುಃಖದ್ವಂದ್ವದಲ್ಲಿ ಸಿಲುಕಿದವರೆ ಸುಖದುಃಖಗಳೆಂದರೆ ಏನೆಂದು ಅರಿತು ದುಃಖಿಗಳ ದುಃಖಪರಿಹಾರಕ್ಕೆ ಕರುಣೆಯಿಂದ ಧಾವಿಸುತ್ತಾರೆ ಅದರಿಂದ 'ಸುಖದುಃಖ ಮೊದಲಾದ ದೋಷಗಳಿಲ್ಲ'ವೆನ್ನುವುದರ ಬದಲು 'ಕ್ರೌರ್ಯ-ಹಿಂಸಾಚಾರ ಮುಂತಾದ ದೋಷಗಳಿಲ್ಲ' ವೆಂದಿದ್ದರೆ ಸೂಕ್ತವಾಗುತ್ತಿತ್ತು

ಇನ್ನೊಬ್ಬರ ದುಃಖ ಕಂಡಾಗ ಕಾರುಣ್ಯಸ್ವಭಾವದವನಾದ್ದರಿಂದ ತಾನು ದುಃಖಿಸು-ವುದು, ಇನ್ನೊಬ್ಬರ ಸುಖ ಕಂಡಾಗ ಪ್ರೀತಿ ತುಂಬಿದೆದೆಯಲ್ಲಿ ತಾನೂ ಸುಖಿಸುವುದು ಹಾಗೇ ಇನ್ನೊಬ್ಬರು ಜಯ ಪಡೆದಾಗ ಅಭಿಮಾನದಿಂದ ತನಗೇ ಜಯವಾದಂತೆ ಹಿಗ್ಗುವುದು, ಇನ್ನೊಬ್ಬರು ಪರಾಜಯ ಹೊಂದಿದಾಗ ತಾದಾತ್ಮ್ಯಭಾವದಿಂದ ತಾನೆ ಪರಾ-ಜಿತನಾದಂತೆ ಕುಗ್ಗುವುದು ಇವೇ ಖೇದ ಮೋದ ಜಯಾಪಜಯಗಳೆಂದಿಟ್ಟುಕೊಂಡರೆ ಇವು ಲೋಕದಲ್ಲಿ ಕರುಣೆ, ಪ್ರೀತಿ, ವಾತ್ಸಲ್ಯ, ಆದರಾಭಿಮಾನಗಳಂಥ ಸದ್ಗುಣವಿರು-ವಲ್ಲಿಯೆ ಕಂಡುಬರುವುದರಿಂದ ಅವುಗಳನ್ನು ಕರುಣಾಸಂಧಿಯಲ್ಲಿ ಬಣ್ಣಿಸಬೇಕಾಗಿತ್ತು ಅವುಗಳನ್ನು ದೋಷಗಳೆನ್ನುತ್ತ ಹರಿಯಲ್ಲಿ ಇಲ್ಲವೆಂದುದು ಏಕೆ ಎಂಬುದು ಸಮಸ್ಯೆಯೆ ಆಗಿಬಿಡುತ್ತದೆ

ವಸ್ತುತಃ ಮೇಲೆ ಹೇಳಿದ ಅರ್ಥದಲ್ಲಿ ಈ ಖೇದಮೋದ ಜಯಾಪಜಯ ಮೊದಲಾದವು ನಮ್ಮಲ್ಲಿ ಗುಣವೆನಿಸಿದರೂ ಭಗವಂತನಲ್ಲಿ ದೋಷವೆ ಆಗುವುವು ಇನ್ನೊಬ್ಬರ ದುಃಖದಿಂದ ತನಗೆ ದುಃಖವಾದರೆ, ಅದು ತನ್ನ ಅಶಕ್ತಿಯಿಂದ ಇನ್ನೊಬ್ಬರ ಪರಾಜಯದಿಂದ ತನಗೆ ಪರಾಜಯವಾದಂತೆ ಅದೂ ತನ್ನ ಅಶಕ್ತಿಯಿಂದಲೆ ಶಕ್ತಿ ಇದ್ದರೆ, ದುಃಖ ಅಪಜಯಗಳನ್ನು ಪರರಲ್ಲಿ ಬಾರದಂತೇ ಮಾಡಬಹುದಿತ್ತು ತಾನೆ? ಆದರಿಂದ ಅದನ್ನು ಭಗವಂತನಲ್ಲಿ ಗುಣವೆನ್ನಲಾಗದು ದುಃಖ ಏನಿದ್ದರೂ ದುಃಖವೆ ಅಪಜಯ ಅಪಜಯವೆ. ಅದರಿಂದ ಕರುಣೆಯಂಥ ಉತ್ತಮ ಗುಣ ಮೂಡಿದರೂ ಅದು ದೋಷವೆ

ದುಃಖವನ್ನು ಕಂಡಾಗ ಉಕ್ಕಿ ಬರುವ ಕರುಣೆ ಒಂದು ನಿಮಿತ್ತದಿಂದ ಬಂದಿರುತ್ತದೆ. ಆ ನಿಮಿತ್ತವಿಲ್ಲದಿದ್ದಾಗ ಇಲ್ಲವಾಗುತ್ತದೆ ಶಾಶ್ವತಕರುಣಾಮೂರ್ತಿಯಾದ ಭಗವಂತನಿಗೆ ಅದು ತಕ್ಕುದಲ್ಲ, ನಮಗೆ ಮಾತ್ರವೆ ಸರಿಯಾದೀತು

**ಭಗವಂತನಿಗೆ ಸಜ್ಜನರ ಮೇಲೆ ಕರುಣೆ ಶಾಶ್ವತ**

'ಶರಣಜನಮಂದಾರ ಶಾಶ್ವತ ಕರುಣಿ ಕಮಲಾಕಾಂತ ಕಾಮದ' ಎಂದು ಹಿಂದೆಯೆ ಹೇಳಿದೆ ಭಕ್ತರ ದುಃಖ ಕಂಡಾಗ ತಾನು ದುಃಖಗೊಂಡು ಕರುಣೆಯನ್ನು ಹರಿಸುವವನಲ್ಲ ಭಗವಂತ. ಅವನ ಕರುಣೆ ಉಕ್ಕಿ ಹರಿಯಬೇಕಾದರೆ ಜೀವರ ದುಃಖವನ್ನು ಕಾಣಬೇಕಾಗುತ್ತದೆ ಎಂದರೆ ದುಃಖ ಹೆಚ್ಚಿದಂತೆಲ್ಲ ಕರುಣೆ ಹೆಚ್ಚು ಹರಿಯಬೇಕಾಗುತ್ತದೆ ದುಃಖವೆ ಇಲ್ಲದ ಬ್ರಹ್ಮವಾಯುಗಳಲ್ಲಿ ಕರುಣೆಯೆ ಇಲ್ಲ. ದುಃಖರೂಪರಾದ ದೈತ್ಯರಲ್ಲಿ ಕರುಣೆ ಕೋಡಿಯಾಗಿ ಹರಿಯುತ್ತದೆ ಎನ್ನಬೇಕಾಗುತ್ತದೆ

'ದುಃಖಿಗಳಾದರೆ ಸಾಲದು, ಕರುಣೆಗೆ ಯೋಗ್ಯರಾಗಿರಬೇಕು, ದಾನವರು ಯೋಗ್ಯರಲ್ಲ ಅವರು ದುಃಖಪಡುವುದು ಅವರ ದುಷ್ಕರ್ಮದ ಫಲ ಆದರಿಂದ ಅವರ ಬಗ್ಗೆ ಹರಿಕರುಣೆಗೆ ಅವಕಾಶವಿಲ್ಲ' ಎಂದರೂ ಸರಿಯಾಗದು ದೇವತೆಗಳು ದುಃಖಪಡುವುದೂ ಅವರ ಪ್ರಾರಬ್ಧಕರ್ಮದ ಫಲವೆ ತಾನೆ? ಅದರಿಂದ ಅವರಲ್ಲಿಯೂ ಕರುಣೆ ಸಲ್ಲದು ಎಂದಾದೀತು. ದೇವತೆಗಳಿಗಿಂತ ಮಾನವರು, ಮಾನವರಿಗಿಂತ ತೃಣಜೀವರು ಹೆಚ್ಚು ದುಃಖಿಗಳು ಕರುಣಾಪಾತ್ರರು ಎಂದು ಅವರಲ್ಲಿಯೆ ಕರುಣಾಪ್ರವಾಹ ಪರಮಾವಧಿ ಹರಿಯಬೇಕಾದೀತು

ಅದರಿಂದ ಹೀಗೆ ಹೇಳಬೇಕು. ಸಜ್ಜನರು ಸುಖದಿಂದಿರಲಿ, ದುಃಖದಿಂದಿರಲಿ ಸದಾಕಾಲ ಅವರಲ್ಲಿ ಭಗವಂತನ ಕರುಣೆ ಹರಿಯುತ್ತದೆ. ಸಾತ್ವಿಕತೆ ಹೆಚ್ಚಿದಂತೆಲ್ಲ ಕರುಣೆಯೂ ಹೆಚ್ಚು, ಹೀಗೆ ತಾತ್ಕಾಲಿಕ ಖೇದಾದಿ ನಿಮಿತ್ತವನ್ನು ನೋಡದೆ ಸ್ವಾಭಾವಿಕವಾಗಿ ಜೀವಸ್ವರೂಪದಲ್ಲಿರುವ ಸಾತ್ವಿಕತೆಯನ್ನು ಸಾಧನೆಯನ್ನೂ ಪುರಸ್ಕರಿಸಿ ಭಗವಂತನ ಸ್ವಾಭಾವಿಕ ಕರುಣೆ ಹರಿಯುತ್ತದೆ ಎನ್ನುವುದು ಇಲ್ಲಿ ವಿವಕ್ಷಿತವಾಗಿದೆ ಬಂದ ದುಃಖದ

ಪರಿಹಾರಕ್ಕೆ ಬಯಸುವುದೂ ಕರುಣೆ. ದುಃಖ ಬಾರದಂತೆ ಬಯಸುವುದೂ ಕರುಣೆಯೆ ಬ್ರಹ್ಮವಾಯುಗಳಲ್ಲಿ ದುಃಖವೆಂದೂ ಬಾರದಿರಲೆಂದು ಬಯಸಿದುದು ದೊಡ್ಡ ಕರುಣೆ ನಮ್ಮಲ್ಲಿ ಬಂದ ದುಃಖದ ಪರಿಹಾರಕ್ಕೆ ಬಯಸುವುದು ಕರುಣೆ ಆದರಿಂದ ಖೇದಮೋದ ಮೊದಲಾದ ದೋಷಗಳಿಲ್ಲ ಎಂದಿದೆ

***ಚಿನ್ಮಯ***

'ಮೋದಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ' ಎಂದು ನಾಂದಿ ಸಂಧಿಯಲ್ಲಿ ಹೇಳಿದಂತೆ ಹರಿ ಚಿನ್ಮಯ. ಅವನಿಗೆ ಪಾಂಚಭೌತಿಕ ಶರೀರವಿಲ್ಲ ಹಿಂದೆ ಹೇಳಿದ ಈ ಅಂಶವನ್ನು ತಿರುಗಿ ಹೇಳುವ ಉದ್ದೇಶ ಇದು—

ಹರಿಯಲ್ಲಿ ಮಾತ್ರವಲ್ಲ ಅಪರೋಕ್ಷಜ್ಞಾನಿಗಳಲ್ಲಿಯೂ ಖೇದಮೋದ ಮೊದಲಾದ ದೋಷಗಳಿಲ್ಲ 'ಸ್ಥಿತಪ್ರಜ್ಞಸ್ಯ ಕಾ ಭಾಷಾ?' ಎಂಬ ಅರ್ಜುನನ ಪ್ರಶ್ನೆಗೆ ಉತ್ತರವಾಗಿ ಶ್ರೀಕೃಷ್ಣ ಗೀತೆಯಲ್ಲಿ ಇದನ್ನೇ ಹೇಳಿದ್ದಾನೆ ಆದರಿಂದ 'ಸಾಧವೋ ದೀನವತ್ಸಲಾಃ' ಎನ್ನು-ವಂತೆ ಸ್ವಾಭಾವಿಕ ಕರುಣೆ ಉಳ್ಳವರೆ ಜ್ಞಾನಿಗಳು ಭಗವಂತನಲ್ಲಿ ಏನು ಹೆಚ್ಚುಗಾರಿಕೆ? ಇದಕ್ಕೆ ಉತ್ತರ—'ಚಿನ್ಮಯ' ಎಂದು ಜ್ಞಾನಿಗಳಾದ ಬ್ರಹ್ಮಾದಿಗಳಾರೂ ಚಿನ್ಮಯರಲ್ಲ ಅವರಿಗೆ ಪ್ರಾಕೃತ ಶರೀರ ಅಂತಃಕರಣಗಳಿವೆ ಜೊತೆಗೆ ಪ್ರಾರಬ್ಧಕರ್ಮವೂ ಇದೆ ಅದ-ರಿಂದ ಕೆಲವೊಮ್ಮೆ ಅಸ್ವಾಭಾವಿಕವಾಗಿ ದುರ್ಜನರಲ್ಲಿ ಕರುಣೆ ಸಜ್ಜನರಲ್ಲಿ ನಿಷ್ಠುರತೆ ಕಂಡು-ಬರಬಹುದು ವೃಕಾಸುರನಂಥ ದುಷ್ಟನಿಗೆ ಅವನ ತಪಃಕ್ಲೇಶವನ್ನು ಕಂಡು ಕರುಣೆಯಿಂದ ಅವನು ಬಯಸಿದ ಶಿವ ವರವನ್ನು ಕೊಟ್ಟ 'ನೀನು ಯಾರ ತಲೆಯ ಮೇಲೆ ಕೈ ಇಡುವೆಯೊ ಅವನು ಸುಟ್ಟು ಬೂದಿಯಾಗುವನು' ಎಂದು ಅದು ಹಾವಿಗೆ ಹಾಲೆರೆದಂತಾಯಿತು ಆತ ಶಿವನನ್ನೆ ಸುಡಲು ಬಂದ ಇದು ಪ್ರಾರಬ್ಧದಿಂದಾಗಿ ಅಸ್ವಾಭಾವಿಕವಾಗಿ ಅಪಾತ್ರನಲ್ಲಿ ಹರಿದ ಕರುಣೆ ಅಂಬರೀಷರಾಜನಲ್ಲಿ ನಿಷ್ಕಾರಣವಾಗಿ ದುರ್ವಾಸಮುನಿ ಮುನಿದರು ಅದರ ಫಲವಾಗಿ ಅವರು ಒಂದು ವರ್ಷಕಾಲ ಅನ್ನ ನಿದ್ರೆಗಳಿಲ್ಲದೆ ಆತ್ಮರಕ್ಷಣೆಗಾಗಿ ಹದಿನಾಲ್ಕು ಲೋಕ ತಿರುಗಿ ತಿರುಗಿ ಕೊನೆಗೂ ರಾಜನಿಗೇ ಶರಣಾಗಬೇಕಾಯಿತು ಇದು ಪ್ರಾರಬ್ಧಕರ್ಮ ಚಿನ್ಮಯನಾಗಿದ್ದು ಪ್ರಾರಬ್ಧರಹಿತನಾದ ಭಗವಂತ ಸಜ್ಜನರ ಯೋಗ್ಯತೆ ಸಾಧನೆಗಳನ್ನು ನೋಡಿ ಅದಕ್ಕೆ 'ಅನುಗುಣವಾಗಿಯೆ ಸ್ವಾಭಾವಿಕವಾದ ಕರುಣೆಯನ್ನು ಹರಿಸುತ್ತಾನೆ

***ನಂಬಿ ತುತಿಸುವರ ಕಾದುಕೊಂಡಿಹ***

ನಂಬದೆ ಸ್ತುತಿಸುವವರು ಸರ್ವಥಾ ಸಾತ್ವಿಕರಲ್ಲ ನಂಬದೆ ಫಲದಾಸೆಯಿಂದ ಕೆಲವರು ಸ್ತುತಿಸುತ್ತಾರೆ ಅವರು ರಾಜಸರು. ನಂಬದೆ ಡಂಬಕ್ಕಾಗಿ ವಂಚನೆಗಾಗಿ ಸ್ತುತಿಸುವವರು ತಾಮಸರು ನಂಬಿ ಆದರದಿಂದ ಸ್ತುತಿಸುವವರು ಸಾತ್ವಿಕರು ಅವರಲ್ಲಿ ಭಗವಂತನಿಗೆ ಸ್ವಾಭಾವಿಕ ಕರುಣೆ ಇರುವುದರಿಂದ ಅವರನ್ನು ಸದಾ ಕಾದುಕೊಂಡಿರುತ್ತಾನೆ

ಭಕ್ತರು ಆದರದಿಂದ ತನ್ನನ್ನು ಸ್ತುತಿಸಬೇಕೆಂದು ಭಗವಂತ ಬಯಸುವುದಾದರೂ ಏಕೆ? ಸ್ತುತಿಸಿದರೆ ಒಲಿವ, ಇಲ್ಲದಿದ್ದರೆ ಮುನಿವನೆಂದರೆ ಅವನ ಕರುಣೆ ಸ್ತುತಿನಿಮಿತ್ತವಾಗಿ ಬಂದಿದ್ದು ಅಸ್ವಾಭಾವಿಕವಾಗುವುದಿಲ್ಲವೆ? ಎಂದರೆ, ಅದು ಸರಿಯಲ್ಲ ಭಗವಂತನನ್ನು ಸ್ತುತಿಸುವುದು ಭಕ್ತನ ಸ್ವಭಾವ ಸಾತ್ವಿಕ ಸ್ವಭಾವ ಇದು ವ್ಯಕ್ತವಾಗಬೇಕಷ್ಟೆ ಜ್ಞಾನಿಗಳಲ್ಲಿ ಇದು ಹೆಚ್ಚು ಹೆಚ್ಚು ವ್ಯಕ್ತವಾದಂತೆಲ್ಲ ಭಗವಂತನ ಕರುಣೆಯೂ ಹೆಚ್ಚಾಗಿ ಹರಿಯುತ್ತದೆ ಅಜ್ಞಾನಿಗಳಾದ ನಾವು ಸ್ತುತಿಸುವುದು ನಮ್ಮ ಸ್ವಾಭಾವಿಕ ಪ್ರವೃತ್ತಿಯಲ್ಲದಿದ್ದರೂ ಸ್ವಭಾವವನ್ನು ವ್ಯಕ್ತಗೊಳಿಸುವಲ್ಲಿ ಮಾಡುವ ಯತ್ನವೆ ಆಗಿದೆ ಭಕ್ತನ ಈ ಸ್ವಭಾವ ವ್ಯಕ್ತವಾಗಲೆಂದು ಕರುಣೆಯಿಂದ ಬಯಸುವ ಭಗವಂತ ಅದಕ್ಕಾಗಿ ಆತ ಸ್ತುತಿಸಲೆಂದು ಬಯಸುವುದು ಸ್ವಾಭಾವಿಕ ಅದರಿಂದ ಅವನಿಗೆ ಏನೂ ಆಗಬೇಕಾಗಿಲ್ಲ

***ಪರಮ ಕರುಣಾಮಹೋದಧಿ***

ಶ್ರೀಹರಿ ಎಲ್ಲ ಗುಣಗಳಿಂದ ಪೂರ್ಣ ಅವನ ಎಲ್ಲ ಗುಣಗಳೂ ಪೂರ್ಣ ಪೂರ್ಣ-ವಾದ ಆ ಅನಂತ ಗುಣಗಳಲ್ಲಿ ಕರುಣೆಯೂ ಒಂದು ಅದೂ ಸಮುದ್ರದಂತೆ ಅಪಾರ, ಪೂರ್ಣ ಸಮುದ್ರದಲ್ಲಿ ನೀರಿನ ಕಣಗಳೆಷ್ಟೆಂದು ಎಣಿಸಲು ಶಕ್ಯವಿಲ್ಲ ಹೇಗೋ ಹಾಗೆ ಹರಿಯ ಒಂದು ಗುಣದಲ್ಲಿರುವ ವೈಶಿಷ್ಟ್ಯಗಳು ಎಷ್ಟೆಂದು ಎಣಿಸಲು ಶಕ್ಯವಿಲ್ಲ

***ಅಪರಾಧಗಳ ನೋಡದಲೆ ಸಲಹುವ***

'ಸ್ಮರಿಸುವವರವರಾಧಗಳ ತಾ ಸ್ಮರಿಸ' 'ಮಹಾಪರಾಧಗಳೆಣಿಸಿದನೆ ಕರುಣಾಸಮುದ್ರ ಹರಿ' ಎಂದು ಹಿಂದೆಯೆ ಹರಿಯ ಕಾರುಣ್ಯಸ್ವಭಾವವನ್ನೂ ಕ್ಷಮಾಶೀಲತೆಯನ್ನೂ ಉದಾ-ಹರಣಸಹಿತವಾಗಿ ಹೇಳಿಯಾಗಿದೆ ಈಗ ಅದನ್ನೆ ಪುನರುಚ್ಚರಿಸಿದುದರ ಭಾವ ಇದು— ಕರುಣೆ ಕ್ಷಮಾಗುಣಗಳು ಎಲ್ಲ ಸಜ್ಜನರಲ್ಲಿಯೂ ಇವೆ ಅದರಲ್ಲಿಯೂ 'ತನ್ನವರು' ಎಂದ ಮೇಲೆ ಅವರ ತಪ್ಪನ್ನು ಯಾರಾದರೂ ಕ್ಷಮಿಸುವುದು ಸಾಮಾನ್ಯ ಹರಿಯೂ 'ತನ್ನವರು' ಮಾಡ್ದಪರಾಧಗಳ ನೋಡದಲೆ ಸಲಹುವನಂತೆ! ಏನು ವಿಶೇಷವಿದೆ ಎಂದು ನಮಗೆ ಅನಿಸಬಹುದು ಅದಕ್ಕೆ ಹಿಂದೆ ಹೇಳಿದಂತೆ ಅಪರಾಧಗಳನ್ನು ಸ್ಮರಿಸದಿರುವುದು, ಎಣಿಸ-ದಿರುವುದು ಮಾತ್ರವಲ್ಲದೆ ನೋಡದಿರುವುದೂ ಇನ್ನೊಂದು ವೈಶಿಷ್ಟ್ಯವೆಂದು ಇಲ್ಲಿ ಹೇಳಿದೆ ಸಜ್ಜನರು ತಮ್ಮವರು ಮಾಡುವ ಎಲ್ಲ ಅಪರಾಧ ಕ್ಷಮಿಸುತ್ತಾರೆ, ಆದರೆ 'ಆತತಾಯಿ' ಗಳಾಗಿ ಬಂದರೆ, ಬೆಂಕಿ ವಿಷ ಶಸ್ತ್ರಾದಿಗಳಿಂದ ಜೀವಕ್ಕೆ ಅಪಾಯ ಮಾಡಲು ಬಂದರೆ ಕ್ಷಮಿಸ-ಲಾರರು—

ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್

'ಆತತಾಯಿ ಬಂದರೆ ಕೊಲ್ಲಬಹುದು, ಏನೂ ಅಡ್ಡಿಯಿಲ್ಲ, ಏನೂ ವಿಚಾರಬೇಕಿಲ್ಲ' ಎನ್ನುತ್ತಾರೆ ಏಕೆಂದರೆ ಅವರನ್ನು ಕೊಂದರೆ ದೋಷವಿಲ್ಲ ಆದರೂ ಗುರುಹಿರಿಯರು ಆತತಾಯಿಗಳಾಗಿ ಬಂದಾಗ ಕೊಲ್ಲದೆ ಬಿಟ್ಟರೆ ಅಶ್ವಮೇಧಯಾಗದ ಫಲವಿದೆ ಅದರಾಸೆ-

ಯಿಂದ ಅವರನ್ನು ಸಜ್ಜನರು ಕೊಲ್ಲದೆ ಕ್ಷಮಿಸಿಬಿಡುವುದುಂಟು ಅಥವಾ ಕ್ಷಮಾಗುಣ ಭಗವಂತನಿಗೆ 'ಕ್ಷಮಾಪುಷ್ಪ'ವೆಂಬ ಒಂದು ಭಾವಪುಷ್ಪವಾಗಿ ಅತಿಪ್ರಿಯವಾಗುವುದೆಂದು ಸಜ್ಜನರು ತಮ್ಮಲ್ಲಿ ಕ್ಷಮಾಶೀಲತೆಯನ್ನು ಬೆಳೆಸಿಕೊಳ್ಳಬಹುದು ಅಂತೂ ಅಪರಾಧಗಳನ್ನು ನೋಡಿಯೆ, ಅಂದರೆ ಅಪರಾಧಗಳೆಂದು ಪರಿಗಣಿಸಿಯೆ, ಕ್ಷಮಿಸಿದರೆ ಭಗವದನುಗ್ರಹ-ವೆಂದು, ಕ್ಷಮಿಸುತ್ತಾರೆ ಸಜ್ಜನರು ಭಗವಂತ ಅಪರಾಧಗಳನ್ನು ನೋಡದಲೆ ಸಲಹುತ್ತಾನೆ, ಅಧರ್ಮಗೈದರೂ ಧರ್ಮವೆಂದು ಬಗೆಯುತ್ತಾನೆ

ಧರ್ಮೋ ಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ

ಎಂದು ಸದಾಚಾರಸ್ಮೃತಿಯಲ್ಲಿ ಹಾಗೇ ಹೇಳಿದೆ ಅರ್ಜುನ 'ನಾನೇನೂ ಆ ಕೃಷ್ಣನಂತೆ ಅಲ್ಲ ನಿನ್ನ ಮಕ್ಕಳನ್ನು ಕಾಪಾಡಬಲ್ಲೆ' ಎನ್ನುತ್ತ ಬ್ರಾಹ್ಮಣಪುತ್ರರ ರಕ್ಷಣೆಯನ್ನು ಪ್ರತಿಜ್ಞೆ ಮಾಡಿ ಅದನ್ನು ಪೂರೈಸಲಾಗದೆ ಅಗ್ನಿಪ್ರವೇಶಕ್ಕೆ ತೊಡಗಿದ ಕೃಷ್ಣ ಆ ಅಪರಾಧವನ್ನು 'ನೋಡದಲೆ' ಕ್ಷಮಿಸಿದ ಅವನನ್ನು ದೂರದ ಅನಂತಾಸನಕ್ಕೊಯ್ದು ಅಲ್ಲಿದ್ದ ಬ್ರಾಹ್ಮಣಪುತ್ರರನ್ನು ಕೊಟ್ಟು ಅವನ ಪ್ರಾಣ ಉಳಿಸಿದ, ಸಲಹಿದ

*ಸರ್ವಕಾಮದನು*

ಭಾರಭೃತ್ ಕಥಿತೋ ಯೋಗೀ ಯೋಗೀಶಃ ಸರ್ವಕಾಮದಃ

ಎಂದು ವಿಷ್ಣುಸಹಸ್ರನಾಮಗಳಲ್ಲಿ ಒಂದಾಗಿ ಬಂದಿರುವ 'ಸರ್ವಕಾಮದ' ನಾಮವನ್ನು ಹೇಳಿ ದಾಸರಾಯರು ತಮ್ಮ ಗ್ರಂಥ ವಿಷ್ಣುಸಹಸ್ರನಾಮಕ್ಕೂ ವ್ಯಾಖ್ಯಾನರೂಪವಾಗಿ ಹೊರಟಿದೆ ಎಂಬುದನ್ನು ಸೂಚಿಸುತ್ತಿದ್ದಾರೆ ಮತ್ತು ಗ್ರಂಥ ವಿಷ್ಣುಸಹಸ್ರನಾಮಪರನದ ಫಲವನ್ನೂ ಕೊಡಬಲ್ಲುದೆಂದೂ ಸೂಚಿಸುತ್ತಿದ್ದಾರೆ

**ಮೀನ ಕೂರ್ಮ ವರಾಹ ನರಪಂ-**
**ಚಾನನಾತುಳಶೌರ್ಯ ವಾಮನ**
**ರೇಣುಕಾತ್ಮಜ ರಾವಣಾದಿನಿಶಾಚರಧ್ವಂಸಿ ।**
**ಧೇನುಕಾಸುರಮಥನ ತ್ರಿಪುರವ**
**ಹಾನಿಗೈಸಿದ ನಿಪುಣ ಕಲಿಮುಖ**
**ದಾನವರ ಸಂಹರಿಸಿ ಧರ್ಮದಿ ಕಾಯ್ದ ಸುಜನರನು ॥ ೩೦ ॥**

ಶ್ರೀಹರಿ ಮತ್ಸ್ಯನಾದ, ಕೂರ್ಮನಾದ, ವರಾಹನಾದ, ನರಸಿಂಹನಾದ, ಅತುಲ-ಶೌರ್ಯದ ವಾಮನನಾದ, ರೇಣುಕೆಯ ಮಗನಾಗಿ ಪರಶುರಾಮನಾದ, ರಾಮನಾಗಿ ರಾವಣಾದಿ ರಾಕ್ಷಸರನ್ನು ಕೊಂದ, ಧೇನುಕಾಸುರನನ್ನು ಕೊಂದ ಕೃಷ್ಣನೂ ಅವನೆ ತ್ರಿಪುರವನ್ನು ಶಿವನಿಂದ ನಾಶಗೊಳಿಸಿದ ನಿಪುಣನಾದ ಬುದ್ಧನೂ ಅವನೆ ಕಲಿ ಮುಂತಾದ ದಾನವರನ್ನು ಸಂಹರಿಸಿ ಧರ್ಮದಿಂದ ಸುಜನರನ್ನು ಕಾಪಾಡಿದ ಕಲ್ಕಿಯೂ ಅವನೆ

**ಮತ್ಸ್ಯ**

ಈ ಮನ್ವಂತರದ ಅಧಿಪತಿಯಾದ ವೈವಸ್ವತಮನು ಮತ್ಸ್ಯನ ಅನುಗ್ರಹಪಾತ್ರ ಅವನ ಮೇಲೆ ಮತ್ಸ್ಯನ ಕರುಣೆ ಅಪಾರ ಆತ ಹಿಂದೆ ಚಾಕ್ಷುಷ ಮನ್ವಂತರದಲ್ಲಿ ಸತ್ಯವ್ರತನೆಂಬ ರಾಜ ಆತ ಕೃತಮಾಲಾ ನದಿಯಲ್ಲಿ ಮಿಂದು ತರ್ಪಣಕ್ಕಾಗಿ ಬೊಗಸೆಯಿಂದ ನೀರೆತ್ತಿದಾಗ ನೀರಲ್ಲಿ ಒಂದು ಬಂಗಾರದ ಬಣ್ಣದ ಸುಂದರವಾದ ಮೀನಿನ ಮರಿ ಕಂಡುಬಂದಿತು 'ನನ್ನನ್ನು ಕಾಪಾಡು, ನದಿಯಲ್ಲಿ ಬಿಡಬೇಡ' ಎಂದಿತು ರಾಜ ಅದನ್ನು ಕಮಂಡಲುವಿನಲ್ಲಿಟ್ಟ ಮರುದಿನವೆ ಅದಕ್ಕೆ ಕಮಂಡಲು ಸಾಲದಾಯಿತು ಕ್ರಮೇಣ ಶೀಘ್ರವಾಗಿ ಬೆಳೆಯುತ್ತ ಕೊಳಗದಲ್ಲಿ ಬಾವಿಯಲ್ಲಿ, ಕೆರೆಯಲ್ಲಿ, ಕೊನೆಗೆ ನದಿಯಲ್ಲಿಯೂ ಅವಕಾಶ ಸಾಲದಂತಾಯಿತು ಸಮುದ್ರಕ್ಕೆ ಬಿಟ್ಟ ರಾಜ ಆಗ ಅದ್ಭುತವಾದ ಆ ಮೀನು ಹೇಳಿತು, 'ರಾಜನೆ, ಇನ್ನು ಏಳು ದಿನವಾದೊಡನೆ ಮನ್ವಂತರಪ್ರಳಯವಾಗುತ್ತದೆ ಎಲ್ಲೆಡೆ ಜಲಮಯವಾಗುತ್ತದೆ ಒಂದು ಭೂರೂಪಿಯಾದ ನೌಕೆ ಬರುತ್ತದೆ ಅದರಲ್ಲಿ ಬೀಜಗಳನ್ನು ಔಷಧಿಗಳನ್ನು ಸಪ್ತರ್ಷಿಗಳನ್ನು ಇಟ್ಟುಕೊಂಡು ಶೇಷನಾಗನನ್ನು ಹಗ್ಗವಾಗಿ ಮಾಡಿ ನೌಕೆಯನ್ನು ನನ್ನ ಕೊಂಬಿಗೆ ಕಟ್ಟು, ಭೀಕರವಾದ ಪ್ರಳಯ ಸಮುದ್ರದಲ್ಲಿ ನೌಕೆ ಮುಳುಗದಂತೆ ಕಾಪಾಡುತ್ತ ನಾನು ವಿಹರಿಸುತ್ತೇನೆ ಎಂದಿತು ರಾಜ ಹಾಗೇ ಮಾಡಿದ ಪ್ರಳಯಕಾಲವಿಡೀ ಮತ್ಸ್ಯ ರಾಜನಿಗೆ ತತ್ವೋಪದೇಶಗೈದ ಅದೇ ಮತ್ಸ್ಯಪುರಾಣವಾಯಿತು ಪ್ರಳಯಸಮುದ್ರ ಬತ್ತಿತು ವೈವಸ್ವತಮನ್ವಂತರ ಪ್ರಾರಂಭವಾಯಿತು ರಾಜ ವೈವಸ್ವತ ಮನುವಾಗಿ ಮನ್ವಂತರದ ಅಧಿಪತಿಯೆನಿಸಿದ ಪ್ರಳಯ ಸಮುದ್ರದಲ್ಲಿ ಮಾತ್ರವಲ್ಲ ಸಜ್ಜನರ ಹೃದಯಸಮುದ್ರದಲ್ಲಿಯೂ ವಿಹರಿಸಿ ತತ್ವಜ್ಞಾನ ನೀಡುವ ಕರುಣಾಳು ಮತ್ಸ್ಯಮೂರ್ತಿ.

ಇದಕ್ಕೆ ಮೊದಲೂ ಒಮ್ಮೆ ಮತ್ಸ್ಯಾವತಾರವಾಗಿತ್ತು ಬ್ರಹ್ಮನ ಈ ದಿನಕ್ಕೆ ಹಿಂದಿನ ರಾತ್ರಿಯ ದಿನಪ್ರಳಯಕಾಲದಲ್ಲಿ ಬ್ರಹ್ಮ ನಿದ್ರೆ ಮಾಡಲು ಹೊರಟಾಗ ಅವನ ಮುಖದಿಂದ ಹೊರಗೆ ಬಂದ ವೇದಾಭಿಮಾನಿ ದೇವತೆಗಳನ್ನು ಹಯಗ್ರೀವಾಸುರ ಅಪಹರಿಸಿದ. ವೇದಾಭಿಮಾನಿಗಳಿಲ್ಲದೆ ಇದ್ದರೆ ವೇದ ನಮಗೆ ಇದ್ದೂ ಇಲ್ಲದಂತೆ! ಅದರ ಯಥಾರ್ಥಜ್ಞಾನ ಉಂಟಾಗಲಾರದು ಆಗ ಜಗತ್ತೇ ನಾಶವಾದೀತು ಏಕೆಂದರೆ ಜಗದ್ ವೃಕ್ಷದ ಎಲೆಗಳೇ ವೇದಗಳು 'ಛಂದಾಂಸಿ ಯಸ್ಯ ವರ್ಣಾನಿ' ಎಲೆಗಳಿಲ್ಲದೆ ಮರಕ್ಕೆ ಬದುಕು ಇಲ್ಲ ಅದರಿಂದ ಜಗದ್ರಕ್ಷಣೆಗಾಗಿ ಕರುಣಾಮಯನಾದ ಹರಿ ಮತ್ಸ್ಯನಾಗಿ ಬಂದು ಹಯಗ್ರೀವಾಸುರನನ್ನು ಕೊಂದು ವೇದಾಭಿಮಾನಿಗಳನ್ನು ತಂದ ವೇದಗಳನ್ನು ಕಾಪಾಡಿದ ಮೂಲೋಕವನ್ನು ಉಳಿಸಿದ ಹರಿ ಹಯಗ್ರೀವಾವತಾರದಲ್ಲಿ ಕೊಂದ ಹಯಗ್ರೀವ ಬೇರೆ, ಈತ ಬೇರೆ

**ಕೂರ್ಮ**

ಬ್ರಹ್ಮಾಂಡದ ಹೊರಗೆ ಜಲಾವರಣದಲ್ಲಿ ಇಡೀ ಬ್ರಹ್ಮಾಂಡವನ್ನು ಬೆನ್ನ ಮೇಲೆ ಹೊತ್ತು ನಿಂತಿರುವವ ಬ್ರಹ್ಮಾಂಡದಷ್ಟು ದೊಡ್ಡ ಕರುಣೆ ಉಳ್ಳವ ಕೂರ್ಮ.

ಬ್ರಹ್ಮಾಂಡದ ಒಳಗೆ ಘನೋದಕ ಸಮುದ್ರದಲ್ಲಿ ಹದಿನಾಲ್ಕು ಲೋಕಗಳನ್ನು ಕರುಣೆ-ಯಿಂದ ಆದಿಶೇಷ ಹೊರುತ್ತಾನೆ ಆ ಶೇಷನನ್ನು ಕರುಣೆಯಿಂದ ವಾಯುದೇವ ಕೂರ್ಮ-ರೂಪದಿಂದ ಹೊರುತ್ತಾನೆ ಆ ವಾಯುಕೂರ್ಮನನ್ನು ಕರುಣೆಯಿಂದ ಹೊರುತ್ತಿರು-ವವನೂ ಈ ವಿಷ್ಣುಕೂರ್ಮ.

ಕ್ಷೀರಸಮುದ್ರಮಥನಕಾಲದಲ್ಲಿ ದೇವಾಸುರರು ಸೋತು ನಿರ್ವಿಣ್ಣರಾಗಿರುವಾಗಲೆ ಮಂದರಗಿರಿ ಸಮುದ್ರದಾಳಕ್ಕೆ ಇಳಿಯತೊಡಗಿತು ಮಥನಕಾರ್ಯ ಇನ್ನು ಅಸಾಧ್ಯವೆನ್ನುವ ಪರಿಸ್ಥಿತಿ ಮೂಲೋಕಕ್ಕೆ ಶಾಂತಿಸುಖನೆಮ್ಮದಿಗಳನ್ನು ನೀಡಿ ಪೋಷಿಸುವ ಮಮತೆಯ ತಾಯಿ ಲೋಕಮಾತೆ ಮಹಾಲಕ್ಷ್ಮಿ ಮೂಲೋಕದಿಂದ ಮರೆಯಾಗಿದ್ದಾಳೆ ದಾರಿದ್ರ್ಯ, ದುರ್ಭಿಕ್ಷರೋಗಾದಿಗಳಿಂದ ಲೋಕ ಕಂಗೆಟ್ಟಿದೆ ಅದಕ್ಕೆ ಆ ತಾಯಿಯ ಪ್ರಾದುರ್ಭಾವ-ವಾಗಬೇಕಾಗಿದೆ ಮಜ್ಜಿಗೆಯೊಳಗಿನ ಬೆಣ್ಣೆಯಂತೆ ಹಾಲಿನ ಕಡಲಿಂದ ಅವಳು ಎದ್ದು ಬರಬೇಕಾಗಿದೆ ಇನ್ನೂ ಬರುತ್ತಿಲ್ಲವೆಂದು ಮಕ್ಕಳು ಕಳವಳಿಸುತ್ತಿದ್ದಾಗ ತಂದೆ ಶ್ರೀಹರಿ ಕರುಣೆಯಿಂದ ಕೂರ್ಮನಾಗಿ ಬಂದು ಬೆಟ್ಟವನ್ನೆತ್ತಿದ ಮಥನಕಾರ್ಯ ಮುನ್ನಡೆಯುವಂತೆ ಅನುಗ್ರಹಿಸಿದ

ದುರ್ವಾಸರು ಕೊಟ್ಟ ಹೂಮಾಲೆಯನ್ನು ದೇವೇಂದ್ರ ತಿರಸ್ಕರಿಸಿ ಆ ಮೂಲಕ ಹೂವಿನಲ್ಲಿರುವ ಲಕ್ಷ್ಮಿಗೆ ಅಪಚಾರ ಮಾಡಿದ್ದ ಆ ಅಪರಾಧಕ್ಕೆ ದುರ್ವಾಸಶಾಪದಿಂದ ಲಕ್ಷ್ಮಿ ಮೂಲೋಕದಿಂದ ಮರೆಯಾಗಿದ್ದಳು ತಿರುಗಿ ಅವಳನ್ನು ಆವಿರ್ಭಾವಗೊಳಿಸುವು-ದಕ್ಕಾಗಿ ದೇವತೆಗಳು ಸಮುದ್ರ ಮಥನ ಮಾಡುವಾಗ ಬೆಟ್ಟವನ್ನು ಕೂರ್ಮರೂಪಿ ಹರಿಯ ಬೆನ್ನ ಮೇಲೆ ಹೊರಿಸಿದರು. ಕರುಣಾಮಯನಾದ ಹರಿ ಕೋಪಗೊಳ್ಳದೆ ಹೊತ್ತ ಇದು ರೈವತಮನ್ವಂತರದಲ್ಲಿ ನಡೆಯಿತು ಆಗ ದಸ್ರನೆಂಬ ಅಶ್ವಿನೀದೇವ ಇಂದ್ರನಾಗಿದ್ದ

ಮುಂದೆ ವೈವಸ್ವತ ಮನ್ವಂತರದಲ್ಲಿ ಇಂದ್ರಪದವಿಗೆ ಬಂದ ಪುರಂದರನೂ ಇದೇ ಅಪರಾಧವನ್ನು ಮಾಡಿದ ಹರಿ ಅವನನ್ನೂ ಕ್ಷಮಿಸಿ ಕೋಪಮಾಡದೆ ಬೆಟ್ಟಕ್ಕೆ ಬೆನ್ನು ಕೊಟ್ಟು ನಿಂತ ಎಂಥ ಕರುಣೆ!

ಕೂರ್ಮ ಇಂದ್ರದ್ಯುಮ್ನ ರಾಜನಿಗೆ ತತ್ತ್ವೋಪದೇಶಗೈದ ಅದು ಕೂರ್ಮಪುರಾಣ-ವಾಯಿತು

**ವರಾಹ**

ಬ್ರಹ್ಮ ಸ್ವಾಯಂಭುವ ಮನುವಿಗೆ ಆಜ್ಞೆ ಮಾಡಿದ 'ಸೃಷ್ಟಿ ಮಾಡು' ಎಂದು 'ಎಲ್ಲಿ ಸೃಷ್ಟಿ ಮಾಡಲಿ? ಭೂಮಿ ಇಡೀ ನೀರಲ್ಲಿ ಮುಳುಗಿದೆ!' ಎಂದ ಮನು ಭೂಮಿ ತಾನಾಗಿಯೆ ಭಾರದಿಂದ ಘನೋದಕ ಸಮುದ್ರದಲ್ಲಿ ಮುಳುಗಿತ್ತು ಬ್ರಹ್ಮ ಹರಿಯನ್ನು ಪ್ರಾರ್ಥಿಸಿದಾಗ ಅವನ ನಾಸಾಪುಟದಿಂದ ಶ್ವೇತವರ್ಣದ ಅಂಗುಷ್ಠಪರಿಮಾಣದ ವರಾಹ ಅವತರಿಸಿದ

ಒಂದು ಕ್ಷಣದಲ್ಲಿ ಆನೆಯ ಗಾತ್ರಕ್ಕೆ ಬೆಳೆದ ನೀರನ್ನು ಹೊಕ್ಕು ತನ್ನ ಮಡದಿಯಾದ ಭೂದೇವಿಯನ್ನು ದಾಡೆಯ ಮೇಲೆ ಹೂವಿನಂತೆ ಎತ್ತಿಕೊಂಡು ಬರುತ್ತಿದ್ದಂತೆ, ದಾರಿಯಲ್ಲಿ ತಡೆದ ಆದಿ ಹಿರಣ್ಯಾಕ್ಷನನ್ನು ಕೋರೆದಾಡೆಯಿಂದಲೆ ತಿವಿದು ಕೊಂದ ಭೂಮಿಯನ್ನು ನೀರಿನ ಮೇಲೆ ಸುರಕ್ಷಿತವಾಗಿ ತಂದಿಟ್ಟ ಭೂದೇವಿಗೆ ತತ್ತೋಪದೇಶ ಮಾಡಿದ ಅದು ವರಾಹಪುರಾಣವಾಯಿತು

ಅನಂತ ಜೀವರಾಶಿ ಸಾಧನ ಶರೀರ ಪಡೆದು ಸಾಧನೆ ಮಾಡಬೇಕೆಂದು ಕಾದಿದ್ದಾಗ ಕರುಣೆಯಿಂದ ಸೃಷ್ಟಿಗಾಗಿ ಭೂಮಿಯನ್ನೆತ್ತಿದ ಭೂವರಾಹ

ಇನ್ನೊಮ್ಮೆ ಭೂಮಿ ನೀರಲ್ಲಿ ಮುಳುಗಿತು ಈ ಬಾರಿ ವಿಜಯನೆಂಬ ವೈಕುಂಠ ದ್ವಾರ-ಪಾಲಕನ ಆವೇಶದಿಂದ ಕೂಡಿದ ದಿತಿಪುತ್ರ ಹಿರಣ್ಯಾಕ್ಷ ಭೂಮಿಯನ್ನು ಬಲಾತ್ಕಾರದಿಂದ ನೀರಲ್ಲಿ ಮುಳುಗಿಸಿದ್ದ ಆಗ ಬ್ರಹ್ಮನ ಪ್ರಾರ್ಥನೆಯಂತೆ ನೀಲವರಾಹ ಪ್ರಾದುರ್ಭವಿಸಿ ನೀರೊಳಗೆ ಹೊಕ್ಕು ಭೂಮಿಯನ್ನು ಮೇಲೆತ್ತಿದ ದುಷ್ಟ ಹಿರಣ್ಯಾಕ್ಷನನ್ನು ಕೆನ್ನೆಗೆ ಹೊಡೆದು ಕೊಂದ ಭೂಮಿಯ ಮೇಲೆ ಹುಟ್ಟಿದ್ದ ಹುಟ್ಟಲಿದ್ದ ಸಕಲ ಜೀವರಾಶಿಯ ಮೇಲಿನ ಕರುಣೆಯ ಕಾರ್ಯ ಇದು

*ನರಸಿಂಹ*

ಹಿರಣ್ಯಕಶಿಪು ಬ್ರಹ್ಮನಲ್ಲಿ ತನಗೆ ನರನಿಂದಾಗಲಿ ಮೃಗದಿಂದಲಾಗಲಿ ಮರಣ ಬರ-ಕೂಡದು ಎಂದು ವರವನ್ನು ಕೇಳಿ ಪಡೆದಿದ್ದ ಅದಕ್ಕೆ ನರನಲ್ಲದ ಸಿಂಹವೂ ಅಲ್ಲದ, ಆದರೆ ನರನಂತೆ ಸಿಂಹದಂತೆ ಕಾಣುವ ನರಸಿಂಹರೂಪದಿಂದ ಬಂದು ಹರಿ ಹಿರಣ್ಯ- ಕಶಿಪುವನ್ನು ಕೊಲ್ಲುತ್ತಾನೆ ನರನಲ್ಲ ಏಕೆಂದರೆ ಪಂಚಾನನದಂತೆ ಅಂದರೆ ಸಿಂಹ- ದಂತೆ ಮುಖವಿದೆ ಸಿಂಹವಲ್ಲ ಏಕೆಂದರೆ ನರನಂತೆ ಮೈ ಇದೆ ಹೀಗೆ ಅದ್ಭುತವಾದ 'ನರಪಂಚಾ- ನನ' ನರಸಿಂಹರೂಪವನ್ನು ತಳೆದು ಹಿರಣ್ಯಕಶಿಪುವಿನ ಆಸ್ಥಾನಮಂಡಪವನ್ನು ಪ್ರವೇಶಿ- ಸುತ್ತಾನೆ ಎನ್ನುತ್ತದೆ ಹರಿವಂಶ ಆಸ್ಥಾನದ ಕಂಬದಿಂದ ಪ್ರಕಟನಾಗುತ್ತಾನೆ ಎನ್ನುತ್ತದೆ ಭಾಗವತ ಪ್ರಾಯಃ ಅದೃಶ್ಯನಾಗಿ ನರಸಿಂಹರೂಪದಿಂದ ಆಸ್ಥಾನಮಂಡಪವನ್ನು ಪ್ರವೇಶಿಸಿ ಕಂಬದಲ್ಲಿ ಪ್ರಕಟನಾಗುತ್ತಾನೆ ಭಾಗವತದ ಹಿರಣ್ಯಕಶಿಪು ಖಡ್ಗ ಹಿಡಿದು ಮುಷ್ಟಿಯಿಂದ ಕಂಬಕ್ಕೆ ಹೊಡೆಯುತ್ತಾನೆ ಬೇರೆ ಪುರಾಣಗಳಲ್ಲಿ ಕಾಲಿಂದ ಒದೆಯುತ್ತಾನೆ ಪ್ರಾಯಃ ಭಾಗವತದಲ್ಲಿಯೂ ಮುಷ್ಟಿಯಿಂದ ಖಡ್ಗ ಹಿಡಿದು ಕಾಲಿಂದ ಕಂಬಕ್ಕೆ ಹೊಡೆಯುತ್ತಾನೆ, ಅಂದರೆ ಒದೆಯುತ್ತಾನೆ

ಹಿರಣ್ಯಕಶಿಪು ಪ್ರಹ್ಲಾದನನ್ನು ಪೀಡಿಸಿದನೆಂದು ಸಿಟ್ಟಿನಿಂದ ನರಸಿಂಹ ಹಿರಣ್ಯಕಶಿಪು-ವಿನ ಎದೆಗುಂಡಿಗೆಯ ಬಿಸಿ ರಕ್ತವನ್ನು ಬೊಗಸೆಯಿಂದ ಎತ್ತಿ ಕುಡಿದ ಶ್ರೀವಾದರಾಜರು

ಹೇಳುತ್ತಾರೆ, ನರಸಿಂಹ ರಕ್ತವನ್ನು ಕುಡಿಯಲಿಲ್ಲ ಕುಡಿದಂತೆ ತೋರಿಕೊಂಡ, ರಕ್ತದಂತೊ-ಪ್ಪುವ ತಪಃಸಾರವನ್ನು ಹೀರಿದ

ವಕ್ಷೋನ್ನತಸ್ಥಾನವಂ ತೋಡಿ ಕಾಸಾರವಂ ಮಾಡುತ ।
ರಕ್ತದಂತೊಪ್ಪುವೋ ತತ್ತಪಃಸಾರ ಯಾವತ್ತು ತಾ ಪೀರುತ ॥

ಎನ್ನುತ್ತದೆ ಅವರ ಲಕ್ಷ್ಮೀನರಸಿಂಹಪ್ರಾದುರ್ಭಾವದಂಡಕ ಅದರಿಂದ ನರಸಿಂಹನ ಕೋಪ, ರಕ್ತದಾಹಗಳೆಲ್ಲ ತೋರಿಕೆಗೆ ವಸ್ತುತಃ ಪ್ರಹ್ಲಾದನಲ್ಲಿರುವ ಕರುಣೆ ವಾತ್ಸಲ್ಯಗಳೆ ಈ ಕೋಪರೂಪದಿಂದ ವ್ಯಕ್ತವಾಗಿವೆ 'ಕ್ರೋಧಃ ಕ್ಷಮಾತ್ಮಕೋ ಯಸ್ಯ' ಭೀಮಸೇನನೂ ದುಃಶಾಸನನ ಎದೆಬಗಿದು ರಕ್ತಪಾನದ ನೃಸಿಂಹಲೀಲೆ ತೋರಿದಾಗ 'ದಂತಾಂತರಂ ನ ಪ್ರವಿವೇಶ' ರಕ್ತ ಭೀಮನ ಹಲ್ಲಿಂದ ಆಚೆ ಬಾಯೊಳಗೆ ಹೋಗಲಿಲ್ಲ! ತೋರಿಕೆಗೆ ಭೀಮ ರಕ್ತಪಾನ ಮಾಡಿದ!

ನರಸಿಂಹನ ಕೋಪ ಶಿಶು ಪ್ರಹ್ಲಾದನನ್ನೂ ಕಾಪಾಡಿತು, ಜಯನೆಂಬ ತನ್ನ ಪಾರ್ಷದ-ನಿಗೆ ಅಸುರಜನ್ಮದಿಂದ ಮುಕ್ತಿಯನ್ನೂ ನೀಡಿತು ಅದರಿಂದ ಕ್ರೋಧ ಕ್ಷಮಾತ್ಮಕ ಎಂದುದು ಅರ್ಥಪೂರ್ಣವಾಗಿದೆ ನರಸಿಂಹನ ಈ ಅದ್ಭುತ ಕರುಣೆಯನ್ನು ಚಿತ್ರಿಸುತ್ತ ಪುರಂದರ-ದಾಸರು ಹಾಡಿದರು

ಕರೆದರೆ ಕಂಬದಿಂದ ಓ ಎಂದ ಹಣ್ಣು!
ಹಣ್ಣು ಕೊಂಬರೆ ಬರಿ, ಹರಿದಾಸರು!

ದಶಾವತಾರಪಂಕ್ತಿಯಲ್ಲಿ ಬರುವ ನರಸಿಂಹನಂತೆ ಕೇಶವಾದಿ ಚತುರ್ವಿಂಶತಿ ಮೂರ್ತಿಯಲ್ಲಿ ಇನ್ನೊಬ್ಬ ನರಸಿಂಹ ಬರುತ್ತಾನೆ

ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ

ಎಂದು ವಿಶ್ವಾದಿ ಸಹಸ್ರಮೂರ್ತಿಗಳಲ್ಲಿಯೂ ನರಸಿಂಹನೊಬ್ಬ ಬರುತ್ತಾನೆ ಇವರು ನರರಲ್ಲಿ ಅಂದರೆ ಚೇತನರಲ್ಲಿ ಸಿಂಹರು ಉತ್ತಮರು ಎಂಬ ಅರ್ಥದಲ್ಲಿ ನರಸಿಂಹರು ಅಂದರೆ ಪುರುಷೋತ್ತಮರು 'ಪುರುಷೋತ್ತಮ'ರೂ ಅಲ್ಲಿ ಬೇರೆಯೆ ಬರುತ್ತಾರೆ ಎನ್ನುವು-ದಾದರೆ ನರರಿಗೆ ಅಂದರೆ ಜೀವರಿಗೆ ಸಿಂಹ ಎಂದರೆ ಅಧಿಪತಿ ಜೀವೇಶ್ವರ ಎಂಬ ಅರ್ಥದಲ್ಲಿ ನರಸಿಂಹರು, ಹೊರತು, ಎಲ್ಲ ನರಸಿಂಹರೂ ಒಂದೇ ಆಕಾರ ಆಯುಧ-ಗಳುಳ್ಳವರಲ್ಲ ದಶಾವತಾರಿ ನರಸಿಂಹ,

ಅರಿದರಮಸಿಖೇಟೌ ಬಾಣಚಾಪೇ ಗದಾಂ ಸ-
ನ್ಮುಸಲಮಪಿ ಕರಾಭ್ಯಾಮಂಕುಶಂ ಪಾಶವರ್ಯಮ್ ।
ಕರಯುಗಳಧೃತಾಂತ್ರಸ್ರಗ್ ವಿಭಿನ್ನಾರಿವಕ್ಷೋ
ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥

ಎಂಬಂತೆ ಹತ್ತು ಆಯುಧಗಳನ್ನು ಹಿಡಿದವ ಚತುರ್ವಿಂಶತಿ ಮೂರ್ತಿ ನರಸಿಂಹ ನಾಲ್ಕು ಕೈಗಳಲ್ಲಿ ನಾಲ್ಕು ಆಯುಧಗಳನ್ನು ಹಿಡಿದಿದ್ದಾನೆ ಇದು ಸಜ್ಜನರ ರಕ್ಷಣೆಗಾಗಿ, ಕರುಣೆ-ಯಿಂದ

ನರಸಿಂಹಲೀಲೆ ಹಿರಣ್ಯಕನ ಹೊಟ್ಟೆ ಬಗಿಯುವುದರಲ್ಲಿ ಮಾತ್ರವೆ ಮುಗಿಯುವುದಿಲ್ಲ

'ಕೋಪಕಾಲೋ ಯುಗಾಂತಸ್ತೇ'

ಎಂದು ಭಾಗವತದ ರುದ್ರ ಹೇಳುವಂತೆ,

ಯದ್ರೋಷೋತ್ಕರದಕ್ಷನೇತ್ರಕುಟಿಲಪ್ರಾಂತೋತ್ಥಿತಾಗ್ನಿಸ್ಫುರತ್-
ಖದ್ಯೋತೋಪಮವಿಷ್ಫುಲಿಂಗಭಸಿತಾ ಬ್ರಹ್ಮೇಶಶಕ್ರೋತ್ಕರಾಃ

ಎಂದು ಶ್ರೀಮದಾಚಾರ್ಯರು ಹೇಳುವಂತೆ,

ತುದಿಯಲಾವನ ಕಡೆಗಣ್ಣ ಕೋಪದ ಕಿಚ್ಚು
ವಿಧಿರುದ್ರಮುಖ್ಯ ಸುರರ ಭಸುಮವ ಮಾಡಿತೋ

ಎಂದು ವಾದಿರಾಜರು ಹೇಳುವಂತೆ ಕಲ್ಪಾಂತ್ಯದಲ್ಲಿ ಬ್ರಹ್ಮಾಂಡಲಯಗೈವವನೂ ನರ-ಸಿಂಹನೆ ಆದರೆ ಇದೂ ಕರುಣೆಯ ಕಾರ್ಯವೆ ಜಯತೀರ್ಥರು ತತ್ವನಿರ್ಣಯಟೀಕಾ-ಮಂಗಳಪದ್ಯದಲ್ಲಿ ಹೇಳುತ್ತಾರೆ—

ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ ಕಲ್ಪಾವಸಾನೇ ಚ ಯಃ

ಎಲ್ಲ ಸಂಸಾರಿ ಜೀವರನ್ನು ಲಯಗೈದು, ಅಂದರೆ ಅವರ ಸ್ಥೂಲಶರೀರವನ್ನು ನಾಶಪಡಿಸಿ ಲಿಂಗಶರೀರದಲ್ಲಿ ಅವರನ್ನು ತನ್ನ ಹೊಟ್ಟೆಯಲ್ಲಿಟ್ಟುಕೊಂಡು ನಿದ್ದೆ ಬರಿಸುತ್ತಾನೆ ನರಸಿಂಹ ಬ್ರಹ್ಮನ ಪೂರ್ಣಾಯುಷ್ಯದಷ್ಟು ಕಾಲ ಜನನಮರಣಚಕ್ರದಲ್ಲಿ ಸಿಲುಕಿ ಶ್ರಮಪಟ್ಟ ಜೀವರಿಗೆ ಅಷ್ಟೇ ದೀರ್ಘವಾದ ಪ್ರಳಯಕಾಲದಲ್ಲಿ ಪೂರ್ಣ ಗಾಢನಿದ್ರೆ ಬರಿಸುತ್ತಾನೆ, ತಾಯ ಮಮತೆ ತೋರುತ್ತಾನೆ, ವಾದಿರಾಜರು ಹೇಳುತ್ತಾರೆ—

ಹೊಟ್ಟೆ ಎಂಬ ಹೊನ್ನ ತೊಟ್ಟಿಲೊಳಗಿಟ್ಟು
ವಿಟ್ಠಲ ಜೀವರ ನಿದ್ರೆಗೊಳಿಸುವನು

***ಅತುಳಶೌರ್ಯ ವಾಮನ***

ಅತುಳಶೌರ್ಯನಾದರೂ ವಿಷ್ಣು ವಾಮನನಾದ ಹಿರಣ್ಯಕಶಿಪುವನ್ನು ಸೀಳುವಾಗ ವಿಷ್ಣು ತೋರಿದ ನರಸಿಂಹಲೀಲೆಯನ್ನು ಕಣ್ಣಾರೆ ಕಂಡಿದ್ದ ಪ್ರಹ್ಲಾದ, 'ಪ್ರಭು, ನನ್ನ ಪ್ರೀತಿಯ ಮೊಮ್ಮಗ ಬಲಿಯೂ ಕೆಲವೊಮ್ಮೆ ನಿನ್ನನ್ನು ತಿರಸ್ಕರಿಸುತ್ತಾನೆ ಒಳ್ಳೆಯವನೆ ಆದರೆ ಅಸುರಾವೇಶದಿಂದ ಹಾಗೆ ಮಾಡುತ್ತಾನೆ ಆಗ ನರಸಿಂಹನಂಥ ಉಗ್ರರೂಪ ತೋರದೆ ಸೌಮ್ಯರೂಪದಿಂದ ಬಂದು ನಿಗ್ರಹಿಸು' ಎಂದು ಬೇಡಿದ ಅದರಿಂದ ಪ್ರಹ್ಲಾದನ ಮೇಲಿನ ಕರುಣೆಯಿಂದಲೆ ಅತುಳಶೌರ್ಯನಾದ ಹರಿ ಪುಟ್ಟ ವಾಮನರೂಪ ತಳೆದು ಬಂದ

ಬಲಿಯು ಮಾತ್ರ ಅಸುರಾವೇಶದಿಂದ ಸರ್ವಶಕ್ತನಾದ ಹರಿಯನ್ನು ತನ್ನ ಭಯದಿಂದ ಬ್ರಾಹ್ಮಣರೂಪ ತಳೆದು ಬಂದನೆಂದು ಹೇಳುತ್ತ ಅಪಮಾನಿಸುತ್ತಾನೆ ಆದರೂ ಪ್ರಹ್ಲಾದನ ಮೇಲಿನ ಕರುಣೆಯಿಂದಲೆ ಬಲಿಯನ್ನು ಹೊಗಳಿ ಕೈಯೊಡ್ಡಿ ಭೂದಾನವನ್ನು ಬೇಡಿ ರಕ್ತಪಾತವೆ ಇಲ್ಲದೆ ಮೂರು ಲೋಕವನ್ನು ಅಪಹರಿಸಿದ. ತ್ರಿವಿಕ್ರಮನಾಗಿ ಅತುಳಶೌರ್ಯ-ವನ್ನೇ ಮೆರೆದ ಬಲಿಯನ್ನು ಪಾತಾಳಕ್ಕೆ ತಳ್ಳಿದ

ಬಲಿನಿಗ್ರಹವೂ ಕರುಣೆಯ ಕಾರ್ಯವೆ ಬಲಿ ಅಹಂಕಾರದಿಂದ ಅನ್ಯಾಯವಾಗಿ ಇಂದ್ರನ ಪದವಿಯನ್ನು ಅಪಹರಿಸಿದ್ದ ಈ ದೌರ್ಜನ್ಯದಿಂದ ಇಂದ್ರನಿಗಂತೂ ಕಷ್ಟ ಜೊತೆಗೆ ಬಲಿಯೂ ಅನ್ಯಾಯಾರ್ಜಿತವಾದ ಸಂಪತ್ತಿನಿಂದ ಕಣ್ಣುಕುರುಡಾಗಿ ಅಧಃಪಾತ ಹೊಂದುವ ಅಪಾಯವಿದ್ದಿತು ಲೋಕವೂ ಈ ಅಹಂಕಾರಿಯ ದುರಾಡಳಿತದಿಂದ ನಾಶ- ಹೊಂದುವ ಭೀತಿ ಇದ್ದಿತು ಎಲ್ಲರ ಮೇಲಿನ ಕರುಣೆಯಿಂದ ಹರಿ ಬಲಿಯನ್ನು ನಿಗ್ರಹಿಸಿದ.

ಮೂಲೋಕವನ್ನು ಅಳೆಯುವ ನೆಪದಿಂದ ಬ್ರಹ್ಮಾಂಡಕಟಾಹವನ್ನು ಭೇದಿಸಿ ಲೋಕಪಾವನೆಯಾದ ಗಂಗೆಗೆ ಜನ್ಮವಿತ್ತುದು ಲೋಕದ ಸಮಸ್ತ ಪಾಪಿಜನರ ಮೇಲಿನ ಕರುಣೆಯಿಂದಲೆ ತಾನೆ!

***ರೇಣುಕಾತ್ಮಜ***

ಪರಶುರಾಮನ ತಾಯಿ ರೇಣುಕಾದೇವಿ ತಂದೆ ಜಮದಗ್ನಿ ಮಹರ್ಷಿ ರೇಣುಕೆಯ ಮಗನಾದ್ದರಿಂದ 'ರೇಣುಕಾತ್ಮಜ' ಎನ್ನಲಾಗಿದೆ

ರೇಣುಕೆ ಒಮ್ಮೆ ಗಂಧರ್ವರಾಜ ಚಿತ್ರರಥ ಅಪ್ಸರೆಯರೊಡನೆ ಜಲಕೇಳಿಯಾಡು-ತ್ತಿದ್ದುದನ್ನು ಕಂಡು ಮನಸ್ಸಿನಲ್ಲಿ ಉತ್ಸುಕಳಾದಳು ಈ ಅಪರಾಧಕ್ಕೆ ಮುನಿದು ಜಮದಗ್ನಿ ಅವಳ ತಲೆ ಕಡಿಯಲು ಪರಶುರಾಮನಿಗೆ ಆಜ್ಞಾಪಿಸಿದ ಒಡನೆ ಪರಶುರಾಮ ಎರಡು ಮಾತನಾಡದೆ ಕೊಡಲಿ ಎತ್ತಿ ತಾಯಿಯ ತಲೆ ಕಡಿದ ತಾಯಿಯೆಂಬ ಭಕ್ತಿಗೌರವ ತೋರದೆ ಹೆಣ್ಣೆಂದು ಕರುಣೆಯನ್ನು ತೋರದೆ ಮರಕಡಿಯುವಂತೆ ತಾಯಿ ತಲೆಕಡಿದವ ಪರಶು-ರಾಮ ಎಂಬುದನ್ನುಸೂಚಿಸುತ್ತದೆ 'ರೇಣುಕಾತ್ಮಜ' ಎಂಬ ನಾಮ ಪರಶುರಾಮ ಭಾರ್ಗವ ಮುಂತಾದ ನಾಮಗಳನ್ನು ಬಿಟ್ಟು 'ತಾಯ ತಲೆ ಕಡಿದವ' ನೆಂದು ಪರ್ಯಾಯವಾಗಿ ಹೇಳುವ ಈ ನಾಮವನ್ನೆ ಈ ಕರುಣಾಸಂಧಿಯ ಕೊನೆಯಲ್ಲಿ ಏಕೆ ಹೇಳಿದ್ದಾರೆ ದಾಸರಾಯರು?

ವಸ್ತುತಃ 'ರೇಣುಕಾತ್ಮಜ' ಎನ್ನುವಲ್ಲಿ ಪರಶುರಾಮನ ಕಾರುಣ್ಯಸ್ವಭಾವವನ್ನೆ ಸೂಚಿಸುತ್ತಿದ್ದಾರೆ ದಾಸರಾಯರು ಎನ್ನಬೇಕು ಏಕೆಂದರೆ ಮಗನಿಗೆ ತಾಯಿಗಿಂತಲೂ ತಂದೆ ಹೆಚ್ಚು

ಸಹಸ್ರಂ ತು ಪಿತೄನ್ ಮಾತಾ ಗೌರವೇಣಾತಿರಿಚ್ಯತೇ

'ಸಾವಿರ ತಂದೆಗಳಿಗಿಂತ ಒಬ್ಬಳು ತಾಯಿ ಮೇಲು'

ಎನ್ನುವ ಮಾತಿದೆ ನಿಜ ಆದರೆ ಸತ್ಯಧರ್ಮರು ಭಾಗವತ ಟೀಕೆಯಲ್ಲಿ ಹೇಳುತ್ತಾರೆ ಜನ್ಮದ ಅನುಬಂಧವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡಾಗ ತಂದೆಗಿಂತ ತಾಯಿ ಸಾವಿರ ಪಾಲು ಹೆಚ್ಚು ವಿದ್ಯಾದಿ ಅನುಬಂಧಗಳನ್ನು ಪರಿಗಣಿಸಿದಾಗ ತಾಯಿಗಿಂತ ತಂದೆಯೆ ಹೆಚ್ಚು ತಾಯಿ ಇಹಜನ್ಮದ ಶರೀರವನ್ನು ಮಾತ್ರ ಹೆತ್ತು ಹೊತ್ತು ಪೋಷಿಸುತ್ತಾಳೆ ತಂದೆ ಜನ್ಮ ನೀಡುವುದಲ್ಲದೆ ಜನ್ಮಜನ್ಮಾಂತರಕ್ಕೂ ಬೆಳಕಾಗಬಲ್ಲ ವಿದ್ಯೆ ನೀಡುತ್ತಾನೆ. ಈ ಅಭಿಪ್ರಾಯದಿಂದ ಮಹಾಭಾರತ ಮೋಕ್ಷಧರ್ಮದ ಪರಾಶರಗೀತೆಯಲ್ಲಿ ಹೇಳಿದೆ

ಪಿತಾ ಪರಂ ದೈವತಂ ಮಾನವಾನಾಂ
ಮಾತುರ್ವಿಶಿಷ್ಟಂ ಪಿತರಂ ವದಂತಿ ।
ಜ್ಞಾನಸ್ಯ ಲಾಭಂ ಪರಮಂ ವದಂತಿ
ಜಿತೇಂದ್ರಿಯಾರ್ಥಾಃ ಪರಮಾಪ್ನುವಂತಿ ॥

ತಂದೆ ಕೇವಲ ಜನ್ಮ ನೀಡಿ, ಉಪನಯನ-ಬ್ರಹ್ಮೋಪದೇಶ ಮಾಡದೆ, ವಿದ್ಯೆ ಕಲಿಸದೆ ಇದ್ದರೆ ಅಂಥ ತಂದೆಗಿಂತ ತಾಯಿ ಸಾವಿರಾರು ಪಾಲು ಮೇಲು ಉಪನಯನಾದಿಗಳನ್ನು ಮಾಡಿ ವಿದ್ಯೆ ಕಲಿಸಿದರೆ ತಂದೆ ತಾಯಿಗಿಂತ ಮೇಲೆನಿಸುತ್ತಾನೆ. ಪ್ರಕೃತ ಪರಶುರಾಮನಿಗೆ ಜನ್ಮನೀಡಿ ವಿದ್ಯೆಯನ್ನೂ ಹೇಳಿಕೊಟ್ಟ ಜಮದಗ್ನಿ ರೇಣುಕೆಗಿಂತ ಹೆಚ್ಚು ಗೌರವಾಸ್ಪದ-ನೆನಿಸುವುದು ಸಹಜ ಅದರಿಂದ ಜಮದಗ್ನಿ ಕರುಣೆಯಿಂದ ರೇಣುಕೆಗೆ ಶಿಕ್ಷೆ ನೀಡಿ ಅವಳ ಪಾಪ ಪರಿಹರಿಸಲು ಬಯಸಿದಾಗ ಈ ಕರುಣೆಯ ಕಾರ್ಯದಲ್ಲಿ ಮಗನಾದ ಪರಶುರಾಮ ತನ್ನ ಪಾಲಿನ ಕರ್ತವ್ಯ ಮಾಡಿದ್ದಾನೆ ತಂದೆ ಅದಕ್ಕೆ ಒಲಿದು 'ಮಗು, ನಿನ್ನ ಅಭೀಷ್ಟವೇನು? ಅದನ್ನು ಪೂರೈಸುತ್ತೇನೆ' ಎಂದು ಹೇಳುವುದು ನಿಶ್ಚಿತ. ಆಗ ನಾನು ತಾಯಿಗೆ ಜೀವದಾನ ಬೇಡುತ್ತೇನೆ ಆಗ ಅವರು ತಮ್ಮ ತಪೋಬಲದಿಂದ ತಾಯಿಯನ್ನು ಬದುಕಿಸುತ್ತಾರೆ ಇತ್ತ ತಂದೆಗೂ ಮನಃಸಮಾಧಾನ ಅತ್ತ ತಾಯಿಗೂ ಪಾಪಪರಿಹಾರ ಎಂದು ಕರುಣೆಯಿಂದಲೆ ಪರಶುರಾಮ ತಾಯಿಯ ತಲೆಕಡಿದ

ತಂದೆ ಜಮದಗ್ನಿ ಒಬ್ಬ ಬ್ರಾಹ್ಮಣೋತ್ತಮ 'ಬ್ರಾಹ್ಮಣೋ ಮಮ ದೇವತಾ' 'ವಿಪ್ರವಾಕ್ಯೋ ಜನಾರ್ದನಃ' ಎಂಬಂತೆ ವಿಪ್ರವಾಕ್ಯವನ್ನು ಹರಿ ಪ್ರೀತಿಯಿಂದಲೇ ನಡೆಸಿ-ಕೊಡುತ್ತಾನೆ ಇಲ್ಲದಿದ್ದರೆ ವಿಪ್ರವಾಕ್ಯಕ್ಕೆ ಬೆಲೆ ಇಲ್ಲದಂತಾಗಿ ಬಲಿಷ್ಠರಾದ ಕ್ಷತ್ರಿಯ, ವೈಶ್ಯ ಮುಂತಾದವರು ಅಧಿಕಾರ ಐಶ್ವರ್ಯಗಳ ಬಲದಿಂದ ವಿಪ್ರರನ್ನು ಪೀಡಿಸಬಹುದೆಂದು ಕರುಣೆಯಿಂದಲೆ ಅವರ ಮಾತನ್ನು ನಡೆಸುತ್ತಾನೆ ಅವರ ಮೇಲಿನ ಕರುಣೆಯಿಂದಲೆ ದುಷ್ಟ ಕ್ಷತ್ರಿಯರ ಸಂಹಾರಗೈದ ಪರಶುರಾಮ. ಆದರಿಂದ ಅವನು ಕಾರುಣ್ಯಮೂರ್ತಿ ಎಂಬ ಅಭಿಪ್ರಾಯದಿಂದ ವಾದಿರಾಜರು ಹೀಗೆ ಬೇಡಿದ್ದಾರೆ—

ಭಾರ್ಯಾಪರಾಧಕುಪಿತಾರ್ಯಾಜ್ಞಯಾ ಗಲಿತ-
ನಾರ್ಯಾತ್ಮಸೂಗಲತರೋ ।

ಕಾರ್ಯಾಽಪರಾಧಮವಿಚಾರ್ಯಾರ್ಯಮೌಘಜಯಿ
ವೀರ್ಯಾಮಿತಾ ಮಯಿ ದಯಾ ॥

'ಭಾರ್ಯೆಯ ಅಪರಾಧದಿಂದ ಕುಪಿತನಾದ ಆರ್ಯನ ಆಜ್ಞೆಯಿಂದ ವಸ್ತುತಃ ಅವನ ಮೇಲಿನ ಕರುಣೆಯಿಂದ ನಾರಿಯಾದ ತಾಯ ತಲೆಯನ್ನು ಏನೂ ವಿಚಾರವಿಲ್ಲದೆಯೆ ಮರಕಡಿದಂತೆ ಕಡಿದ ಓ ಪರಶುರಾಮನೆ! ನೀನು ಅದೇ ರೀತಿ ಪ್ರೀತಿಯಿಂದ ವಾತ್ಸಲ್ಯದಿಂದ ನನ್ನ ತಪ್ಪುಗಳನ್ನೂ ಏನೂ ವಿಚಾರಿಸದೆ ನನ್ನಲ್ಲಿ ಅಮಿತವಾದ ಕರುಣೆಯನ್ನು ಮಾಡು'

**ರಾವಣಾದಿನಿಶಾಚರಧ್ವಂಸಿ**

'ರಾವಣ' ಎಂದರೆ ಲೋಕವನ್ನು ಅಳುವಂತೆ ಮಾಡುವವ 'ರಾವಣೋ ಲೋಕ-ರಾವಣಃ' ಅವನನ್ನೂ ಅವನಂತೆ ಲೋಕಕಂಟಕರಾದ ಬೇರೆ ಎಲ್ಲ ರಾಕ್ಷಸರನ್ನೂ ರಾಮ ಕೊಂದುದು ಲೋಕದ ಮೇಲಿನ ಕರುಣೆಯಿಂದ ಸೀತೆಯನ್ನು ರಾವಣ ಕದ್ದೊಯ್ದುದರಿಂದ ತನ್ನ ಮೋಹದ ಮಡದಿಯಾದ ಸೀತೆಗಾಗಿ ರಾವಣನನ್ನು ಕೊಂದನೆಂದರೆ ಅದು ವಾಸ್ತವ-ವಲ್ಲ ಶ್ರೀಹರಿ ರಾಮಾವತಾರಕ್ಕೆ ಮುನ್ನ ದೇವತೆಗಳ ಮುಂದೆ ಹೀಗೆ ಹೇಳುತ್ತಾನೆ ವಾಲ್ಮೀಕಿ ರಾಮಾಯಣದಲ್ಲಿ

ಭಯಂ ತ್ಯಜತ ಭದ್ರಂ ವೋ ಹಿತಾರ್ಥಂ ಯುಧಿ ರಾವಣಮ್ ।
ಸಪುತ್ರಪೌತ್ರಂ ಸಾಮಾತ್ಯಂ ಸಮಂತ್ರಿಜ್ಞಾತಿಬಾಂಧವಮ್ ॥
ದಶವರ್ಷಸಹಸ್ರಾಣಿ ದಶವರ್ಷಾಯುತಾನಿ ಚ ।
ವತ್ಸ್ಯಾಮಿ ಮಾನುಷೇ ಲೋಕೇ ಪಾಲಯನ್ ಪೃಥಿವೀಮಿಮಾಮ್ ॥

'ದೇವತೆಗಳೆ, ಭಯಪಡಬೇಡಿ ನಿಮ್ಮ ಹಿತಕ್ಕಾಗಿ ನಾನು ದೇವತೆಗಳಿಗೂ ಋಷಿಗಳಿಗೂ ಪೀಡೆ ಉಂಟುಮಾಡುವ ಕ್ರೂರ ರಾವಣನನ್ನು ಪುತ್ರಪೌತ್ರಬಂಧುಬಾಂಧವಮಂತ್ರಿ ಮುಂತಾದ ಪರಿವಾರದೊಂದಿಗೆ ನಾಶಮಾಡಿ ಹನ್ನೊಂದು ಸಾವಿರ ವರ್ಷಕಾಲ ರಾಜ್ಯಭಾರ ಮಾಡಿ ಭೂಮಿಯನ್ನು ಪಾಲಿಸುತ್ತೇನೆ' ಆದರಿಂದ ಸೀತೆಗಾಗಿ ರಾಮ ರಾವಣನನ್ನು ಕೊಂದನೆಂಬುದು ನೆಪಮಾತ್ರ

ಶ್ರೀರಾಮ ಸೀತೆಗಾಗಿ ಕರುಣಾಜನಕವಾಗಿ ಅತ್ತುದೂ ದುಃಖದಿಂದಲ್ಲ ಕೇವಲ ಕರುಣೆಯಿಂದ ಒಮ್ಮೆ ಶುಕ್ರಾಚಾರ್ಯರು ತಪಸ್ಸಿನಲ್ಲಿದ್ದಾಗ ದೇವೇಂದ್ರ ಅಸುರರ ಮೇಲೆ ದಾಳಿ ಮಾಡಿದ. ಅವನ ಕೈಮೇಲಾಯಿತು ಶುಕ್ರಾಚಾರ್ಯರ ತಾಯಿ ಭೃಗುಮುನಿಯ ಪತ್ನಿ ದೇವೇಂದ್ರನನ್ನು ತನ್ನ ಪಾತಿವ್ರತ್ಯಪ್ರಭಾವದಿಂದ ಸ್ತಂಭಿಸಿದಳು ವಿಷ್ಣು ಅವನ ರಕ್ಷಣೆಗೆ ಬಂದಾಗ ಇಬ್ಬರನ್ನೂ ಜೊತೆಗೆ ತಪೋಜ್ವಾಲೆಯಿಂದ ಸುಡಲು ತೊಡಗಿದಳು ವಿಷ್ಣು ಸುದರ್ಶನಚಕ್ರದಿಂದ ಅವಳ ಶಿರಶ್ಛೇದಗೈದ ಭೃಗುಮುನಿ ಆಗ ಆಶ್ರಮದಲ್ಲಿರಲಿಲ್ಲ ಅವನು ಬಂದು ಎಲ್ಲವನ್ನೂ ತಿಳಿದಾಗ ದುಃಖದಿಂದ ಶಾಪವಿತ್ತ 'ಮಾನವನಾಗಿ ಹುಟ್ಟಿ ನೀನೂ ಪತ್ನೀವಿಯೋಗದಿಂದ ಶೋಕಿಸು' ಎಂದು ಭಕ್ತನಾದ ಮುನಿಯ ಮೇಲಿನ ಕರುಣೆಯಿಂದ

ಅವನ ಮಾತನ್ನು ನಡೆಸಿಕೊಡುವುದಕ್ಕಾಗಿ ಶ್ರೀರಾಮ ಕಲ್ಲೂ ಕರಗುವಂತೆ 'ಸೀತೆ! ಸೀತೆ!' ಎಂದು ಅತ್ತ

***ಧೇನುಕಾಸುರಮಥನ***

'ಧೇನು' ಗೋರೂಪಳಾದ ಭೂಮಿ, 'ಕ' ಬ್ರಹ್ಮ ಇವರಿಗಾಗಿ 'ಅಸುರಮಥನ' ಕಾರ್ಯ ಮಾಡಿದವ, ಭೂಭಾರದಿಂದ ನೊಂದ ಭೂದೇವಿ ಕಣ್ಣೀರಿಡುತ್ತ ಕ್ಷೀರಸಾಗರದ ಬಳಿಗೆ ಬಂದಾಗ ಅವಳ ಕಣ್ಣೀರೊರೆಸಲು ಬ್ರಹ್ಮನ ಪ್ರಾರ್ಥನೆಯಂತೆ ಹರಿ ಮಾಡಿದ ಅವತಾರವೆ ಕೃಷ್ಣಾವತಾರ ಅಥವಾ ಭೂಭಾರಭೂತರಾದ ಧೇನುಕ ಮುಂತಾದ ಅಸುರ-ರನ್ನು ನಾಶಮಾಡಿ 'ಪರಿತ್ರಾಣಾಯ ಸಾಧೂನಾಂ' ಎಂಬಂತೆ ಸಜ್ಜನರ ರಕ್ಷಣೆಗಾಗಿ ನಾನು ಪುನಃ ಅವತರಿಸುವೆನೆಂದು ಆಶ್ವಾಸನೆ ನೀಡಿ ಸಂತೈಸಿದ ಕರುಣಾಳು ಶ್ರೀಕೃಷ್ಣ

'ಜಾತಃ ಕಂಸವಧಾರ್ಥಾಯ' ಎಂಬಂತೆ 'ಕಂಸಾಸುರಮಥನ' ಎನ್ನಬೇಕಾಗಿತ್ತು ಧೇನುಕ ಕಂಸನ ಕಡೆಯ ಒಬ್ಬ ಅಸುರ ಮಾತ್ರ ಅವನನ್ನೇ ಏಕೆ ಇಲ್ಲಿ ಹೇಳಿದೆ?

ವಸ್ತುತಃ ಧೇನುಕನನ್ನು ಕೊಂದುದು ಬಲರಾಮ ಕೃಷ್ಣನನ್ನು 'ಧೇನುಕಾಸುರಮಥನ' ಎಂದುದು ಏಕೆ?

ಕೆಲವರ ಅಭಿಪ್ರಾಯದಂತೆ ಧೇನುಕನನ್ನು ಕೊಂದ ಬಲರಾಮನೆ ಹರಿಯ ಎಂಟನೆ ಅವತಾರ 'ರಾಮೋ ರಾಮಶ್ಚ ರಾಮಶ್ಚ' ಪರಶುರಾಮ, ಕೋದಂಡರಾಮ, ಬಲರಾಮ-ರೆಂದು ಹರಿಯ ಆರನೆ ಏಳನೆ ಎಂಟನೆ ಅವತಾರಗಳೆನ್ನುತ್ತಾರೆ ಇವರು ಶ್ರೀಕೃಷ್ಣ ಅವತಾರ-ವಲ್ಲ, ಮೂಲರೂಪವೆ ಎಂದೆನ್ನುತ್ತ ಮತ್ಸ್ಯಾದಿಗಳು ಯಾರೂ ಕೃಷ್ಣನಂತೆ ಪೂರ್ಣಶಕ್ತಿ ಉಳ್ಳವರಲ್ಲ, ಪರಶುರಾಮಬುದ್ಧರು ಜೀವರು, ಅವರಲ್ಲಿ ಹರಿಯ ಆವೇಶ ಮಾತ್ರವೆಂದೂ ಹೇಳುತ್ತಾರೆ ಇದು ಸರಿಯಲ್ಲ ಬಲರಾಮ ಶೇಷನ ಅವತಾರ ಅವನಲ್ಲಿ ಹರಿಯ ಶುಕ್ಲಕೇಶದ ಆವೇಶ ಮಾತ್ರ ಹೊರತು, ಅವನೆ ಹರಿಯ ಸ್ವರೂಪಾವತಾರವಲ್ಲ ಶ್ರೀಕೃಷ್ಣನೂ ಮತ್ಸ್ಯಾದಿ ಬೇರೆ ಎಲ್ಲ ಅವತಾರಗಳೂ ಹರಿಯ ಸ್ವರೂಪಾವತಾರಗಳು ಅವುಗಳ ನಡುವೆ ಬಲರಾಮನೆಂಬ ಒಂದು ಆವೇಶಾವತಾರವನ್ನು ಸ್ವರೂಪಾವತಾರವೆಂದು ಪರಿಗ್ರಹಿಸು-ವುದು 'ಪ್ರಾದುರ್ಭಾವವಿಪರ್ಯಾಸ' ಎಂಬ ಒಂದು ಬಗೆಯ ದೋಷವೆನಿಸುತ್ತದೆ ನವವಿಧ ದ್ವೇಷಗಳಲ್ಲಿ ಇದೂ ಒಂದು

ಇದಕ್ಕೆ ಸಮಾಧಾನವು ಬ್ರಹ್ಮಾಂಡಪುರಾಣದ ಕೃಷ್ಣಾಷ್ಟೋತ್ತರಶತನಾಮಸ್ತೋತ್ರದಲ್ಲಿ ಬರುವ,

ವತ್ಸಪಾದಹರೋಽನಂತೋ ಧೇನುಕಾಸುರಭಂಜನಃ

ಎಂಬ ಶ್ಲೋಕದಲ್ಲಿ ಸೂಚಿತವಾಗಿದೆ ಶ್ರೀಕೃಷ್ಣ 'ವತ್ಸಪಾದ ಹರ'ನೆನಿಸಿದ ಅಂದರೆ, ಶಿವವರದಿಂದ ಅವಧ್ಯನಾಗಿ ಕರುವಿನ ರೂಪದಿಂದ ಬಂದ ವತ್ಸಾಸುರನನ್ನು ಕೃಷ್ಣ ಹಿಂಗಾಲು

ಬಾಲಗಳಲ್ಲಿ ಹಿಡಿದೆತ್ತಿ ಬೀಸಿ ಬೇಲದ ಮರದ ತುದಿಗೆ ಎಸೆದು ಕೊಂದ ಉದುರಿದ ಬೇಲದ ಹಣ್ಣುಗಳನ್ನು ಗೋಪಬಾಲಕರಿಗೆ ಉಣಿಸಿದ ಇದೇ ರೀತಿ ಗಣಪತಿವರದಿಂದ ಅವಧ್ಯನಾಗಿ ಕತ್ತೆಯ ರೂಪದಿಂದ ಬಂದ ಧೇನುಕಾಸುರ ಒಂದು ತಾಳೆಯ ತೋಪಿನೊಳಗೆ ಬಲರಾಮನನ್ನು ಒದೆಯಲೆಂದು ಹಿಂಗಾಲುಗಳನ್ನೆತ್ತಿದ ಅದು ಬಲರಾಮನಿಗೆ ಅನುಕೂಲವೆ ಆಯಿತು ಆತ ಅಸುರನನ್ನು ಹಿಂಗಾಲುಗಳಲ್ಲಿಯೆ ಹಿಡಿದು ಎತ್ತಿ ಬೀಸಿ ತಾಳೆಮರದ ತುದಿಗೆ ಎಸೆದ ಉದುರಿದ ತಾಳೆಹಣ್ಣುಗಳನ್ನು ಗೋಪಬಾಲಕರಿಗೆ ಉಣಿಸಿದ ಹೀಗೆ ಕೃಷ್ಣ ಬಲರಾಮನಿಗೆ ಧೇನುಕನನ್ನು ಸಂಹರಿಸುವ ಕ್ರಮ ಹೇಳಿಕೊಟ್ಟು ಅವನಿಂದ ಸಂಹಾರ ಮಾಡಿಸಿದ ಮತ್ತು ಅವನಲ್ಲಿ ಅದಕ್ಕೆ ತಕ್ಕ ಶಕ್ತಿ ತುಂಬಲು ತಾನು ಶುಕ್ಲಕೇಶ-ರೂಪದಿಂದ ಆವೇಶಗೊಂಡು ಆ ಬಲಕಾರ್ಯವನ್ನು ಲೀಲಾಜಾಲವಾಗಿ ಮಾಡಿಸಿದ 'ಬಲರಾಮ' ಎಂಬ ಅವನ ಹೆಸರನ್ನು ಸಾರ್ಥಕವಾಗುವಂತೆ ಮಾಡಿದ ಅದರಿಂದ ಧೇನುಕಾಸುರನ ಸಂಹಾರ ಮಾಡಿದ ಯಶಸ್ಸು ಕೃಷ್ಣನಿಗೇ ಸೇರಬೇಕು ಬಲರಾಮ ನಿಮಿತ್ತ-ಮಾತ್ರ ಈ ಅಭಿಪ್ರಾಯದಿಂದ ಕೃಷ್ಣನಿಗೆ 'ವತ್ಸಪಾದಹರ' 'ಧೇನುಕಾಸುರಭಂಜನ' ನಾಮ-ಗಳನ್ನು ಜೊತೆಜೊತೆಯಾಗಿ ಹೇಳಲಾಗಿದೆ ಅದರಿಂದ ಹರಿಕಥಾಮೃತಸಾರದಲ್ಲಿಯೂ 'ಧೇನುಕಾಸುರಮಥನ' ಎಂದು ಕೃಷ್ಣನನ್ನು ಹೆಸರಿಸಲಾಗಿದೆ

ಕಂಸನನ್ನು ಬಿಟ್ಟು ಧೇನುಕನನ್ನು ಏಕೆ ಹೇಳಿದೆ ಎಂದರೆ ಧೇನುಕ ಕಂಸನ ಪರಿವಾರ-ದವ ಪರಿವಾರಸಮೇತನಾದ ಕಂಸಾಸುರನನ್ನು ಹೇಳುವ ಅಭಿಪ್ರಾಯ ಕೃಷ್ಣ ತನ್ನ ಸೋದರ ಮಾವನಾದ ರಾಜಾ ಕಂಸನನ್ನು ತಮಸ್ಸಿಗೆ ಕಳಿಸುವಾಗ ಪರಿವಾರಸಹಿತವಾಗೇ ಬೀಳ್ಕೊಟ್ಟ ಮೊದಲಿಗೆ ಸಾಕುತಾಯಿಯಾದ ಪೂತನೆಯನ್ನು ಕಳಿಸಿದ, ವಾಯುವಿಹಾರಕ್ಕೆ ತೃಣಾವರ್ತ-ನೆಂಬ ಗಾಳಿರೂಪದ ಅಸುರನನ್ನು ಕಳಿಸಿದ ಆಟವಾಡಲು ಬಕಾಸುರನೆಂಬ ಬಕಪಕ್ಷಿ-ಯನ್ನೂ ವತ್ಸಾಸುರನೆಂಬ ಕರುವನ್ನೂ ಕಳಿಸಿದ ಭಾರ ಹೊರಲು ಬಂಡಿ ಬೇಕೆಂದು ಶಕಟಾ-ಸುರನನ್ನೂ ವೃಷಭಾಸುರನೆಂಬ ಎತ್ತನ್ನೂ ಕಳಿಸಿದ ಮೈ ಒತ್ತಿಸಿಕೊಳ್ಳಲು ಚಾಣೂರ ಮುಷ್ಟಿಕ ಮುಂತಾದ ಮಲ್ಲರು ಬೇಕೆಂದು ಅವರನ್ನೂ ಕಳಿಸಿದ ಪಟ್ಟದಾನೆ ಕುವಲಯಾಪೀಡ, ಪಟ್ಟದ ಕುದುರೆ ಕೇಶಿದಾನವ, ಅಪಾರವಾದ ಸೇನೆಗಳ ರಾಜಮರ್ಯಾದೆಯೊಂದಿಗೇ ಕಂಸನನ್ನು ಕಳಿಸಿದ ಧೇನುಕನೆಂಬ ಕತ್ತೆಯೊಂದಿಗೆ ಅಗಸನನ್ನೂ ಕಳಿಸಿದ 'ಕಂಸಮಥನ' ಎಂದಿದ್ದರೆ ಈ ವಿಶೇಷಾರ್ಥ ಸಿಗುತ್ತಿರಲಿಲ್ಲ

ಇಷ್ಟು ದೊಡ್ಡದಾದ ಕಂಸನ ಪರಿವಾರದಲ್ಲಿ ಧೇನುಕನನ್ನೆ ಎತ್ತಿ ಹೇಳಲು ಕಾರಣವಿಲ್ಲ-ದಿಲ್ಲ ಆತ ಗಣಪತಿಯ ವರ ಪಡೆದು ಅವಧ್ಯನಾಗಿ ಚಿರಾಯುವಾಗಿದ್ದರೂ ನಿಜವಾಗಿ ಮೂರ್ಖನಾಗಿದ್ದ ಅದರಿಂದ ಕತ್ತೆಯ ರೂಪ ತಾಳಿ ಎಲ್ಲರನ್ನೂ ಒದೆಯಲು ತೊಡಗಿದ ಅವನ ಹೆಂಡತಿ ಮಕ್ಕಳು ಪರಿವಾರದವರೆಲ್ಲರೂ ಕತ್ತೆಯ ರೂಪದಿಂದ ಗೋಣೆತ್ತಿ ಕರ್ಕಶ ಧ್ವನಿ ಮಾಡುತ್ತ ಸಿಕ್ಕವರನ್ನೆಲ್ಲ ಒದೆಯುತ್ತ ತಾಳೆತೋಪಿನಲ್ಲಿ ಸಂಚರಿಸುತ್ತಿದ್ದರು ತೋಪನ್ನೆ

ತಮ್ಮ ಸಾಮ್ರಾಜ್ಯವನ್ನಾಗಿ ಮಾಡಿಕೊಂಡಿದ್ದರು ಗೋಪಬಾಲಕರಿಗೆ ಸಿಹಿಯಾದ ತಾಳೆ-ಹಣ್ಣುಗಳನ್ನು ಮೆಲ್ಲುವಾಸೆ ಆದರೆ ಕತ್ತೆಗಳು ಬಿಡುತ್ತಿರಲಿಲ್ಲ ಗಣಪತಿಯ ವರವನ್ನು ಹೀಗೆ ವ್ಯರ್ಥವಾಗಿ ದುರುಪಯೋಗ ಪಡಿಸಿಕೊಂಡ ಕತ್ತೆ ಈ ಧೇನುಕಾಸುರ ಹೀಗೆ ಕಂಸನ ಪರಿವಾರದವರೆಲ್ಲರೂ ದೇವತೆಗಳ ವರಗಳನ್ನು ದುರುಪಯೋಗ ಪಡಿಸಿಕೊಂಡವರೇ ಉದಾಹರಣರೂಪವಾಗಿ ಧೇನುಕನನ್ನು ಉಲ್ಲೇಖಿಸಲಾಗಿದೆ

### ತ್ರಿಪುರವ ಹಾನಿಗೈಸಿದ ನಿಪುಣ

ಇದು ಬುದ್ಧಾವತಾರಿಯ ಗುಣಗಾನ ತಾರಕಾಸುರನಿಗೆ ತಾರಾಕ್ಷ, ಕಮಲಾಕ್ಷ, ವಿದ್ಯು-ನ್ಮಾಲಿ ಮೂವರು ಮಕ್ಕಳು. ಅವರು ಮಹಾಮಾಯಾವಿಯಾದ ಮಯದಾನವನಿಂದ ಮೂರು ಮಾಯಾ ಸಂಚಾರಿ ಪಟ್ಟಣಗಳನ್ನು ನಿರ್ಮಿಸಿಕೊಂಡರು ತಾರಾಕ್ಷನದು ಬಂಗಾರದ ಪಟ್ಟಣ, ಸ್ವರ್ಗದಲ್ಲಿಯೆ ಹೆಚ್ಚಾಗಿ ಸಂಚರಿಸುತ್ತಿತ್ತು ಕಮಲಾಕ್ಷನದು ಬೆಳ್ಳಿಯ ಪಟ್ಟಣ, ಅಂತರಿಕ್ಷದಲ್ಲಿ ಸಂಚರಿಸುತ್ತಿತ್ತು ವಿದ್ಯುನ್ಮಾಲಿಯದು ಕಬ್ಬಿಣದ ಪಟ್ಟಣ, ಭೂಮಿಯಲ್ಲಿ ಸಂಚರಿಸುತ್ತಿತ್ತು ಮಯನ ಉಪದೇಶದಿಂದ ಮೂವರು ಅಸುರರೂ ಬಹುಕಾಲ ಧರ್ಮಮಾರ್ಗದಲ್ಲಿದ್ದರು ಅವರ ಪತ್ನಿಯರೂ ಪತಿವ್ರತೆಯರು ಏಕೆಂದರೆ ಮೂರು ಪಟ್ಟಣಗಳು ಒಂದೆಡೆ ಸೇರಬಾರದು ಅಧರ್ಮ ಆಚರಿಸಕೂಡದು ಮೂರು ಪಟ್ಟಣಗಳು ಒಂದೆಡೆ ಸೇರಿದಾಗ ಅವುಗಳನ್ನು ಒಂದೇ ಬಾಣದಿಂದ ಏಕಕಾಲದಲ್ಲಿ ಹೊಡೆದರೆ ಮಾತ್ರ ಅವು ನಾಶವಾಗುವುದು ಎಂದು ಬ್ರಹ್ಮನ ವರವಿದ್ದಿತು. ಅದರಿಂದ ತ್ರಿಪುರಾಸುರರು ಧರ್ಮಮಾರ್ಗದಲ್ಲಿಯೆ ಇದ್ದರು ಆದರೆ ಲೋಕಕಂಟಕರಾಗಿ ಸಂಚರಿಸಿ- ದರು ಅವರಿಗೆ ಅವರ ಪತ್ನಿಯರ ಪಾತಿವ್ರತ್ಯದ ಬಲವಿತ್ತು ಅದರಿಂದ ಅವರನ್ನು ಯಾರಿಗೂ ಕೊಲ್ಲಲು ಸಾಧ್ಯವಿರಲಿಲ್ಲ

ಮೂರು ಪಟ್ಟಣಗಳಲ್ಲಿಯೂ ಅಮೃತದ ಬಾವಿಗಳಿದ್ದವು ಅಸುರರು ಮೃತರಾದರೆ ಆ ಅಮೃತದಿಂದ ತಿರುಗಿ ಬದುಕಿ ಬರುತ್ತಿದ್ದರು

ಶಿವನ ರಥ ಆಕಾಶದಲ್ಲಿ ಸರಿಯಾದ ಸ್ಥಳದಲ್ಲಿ ಸ್ಥಿರವಾಗಿ ನಿಂತರೆ ಮಾತ್ರ ಮೂರು ಪಟ್ಟಣಗಳು ಒಂದೆಡೆ ಒಂದು ಸರಳ ರೇಖೆಯಲ್ಲಿ ಬಂದು ನಿಂತಾಗ ಬಾಣಪ್ರಯೋಗ ಮಾಡಬಹುದಿತ್ತು. ಆದರೆ ರಥ ಭಾರದಿಂದ ಕೆಳಗೆ ಕುಸಿಯುತ್ತಿತ್ತು

ಇಷ್ಟೆಲ್ಲ ಸಮಸ್ಯೆಗಳಿದ್ದರೂ ಶಿವನಿಂದ ತ್ರಿಪುರವ ಹಾನಿಗೈಸಿದ, ನಿಪುಣನಾದ ಶ್ರೀಹರಿ ಮೊದಲಿಗೆ ಬುದ್ಧಾವತಾರ ತಾಳಿ ಅಸುರಸ್ತ್ರೀಯರ ಮುಂದೆ ಬಂದು ಪಾತಿವ್ರತ್ಯ ಧರ್ಮವನ್ನು ತೆಗಳಿದ 'ಪತ್ನಿ' ಎಂದರೆ 'ಪತ್ಯುರ್ನೋ ಯಜ್ಞಸಂಯೋಗೇ' ಯಜ್ಞಕಾರ್ಯದಲ್ಲಿ ಪತಿಯೊಂದಿಗೆ ಇರುವವಳು ಯಜ್ಞವೆ ಪಾಪಕರವಾದ ಪಶುಹಿಂಸಾರೂಪವಾದುದು ಅದರಿಂದ ನೀವು ಪತಿಪತ್ನಿಭಾವಕ್ಕೆ ಮಹತ್ವ ನೀಡಬೇಡಿ ವ್ಯಭಿಚಾರ ಮಾಡಿದರೆ ದೋಷ-

ವಿಲ್ಲ ಎಂದ ಹೀಗಾಗಿ ತ್ರಿಪುರರಿಗೆ ಸತಿಯರ ಪಾತಿವ್ರತ್ಯ ಧರ್ಮದ ರಕ್ಷೆ ಇಲ್ಲವಾಯಿತು ಶಿವನ ರಥ ಕೆಳಗೆ ಕುಸಿಯದಂತೆ ಶ್ರೀಹರಿ ಎತ್ತಿನ ರೂಪದಿಂದ ಬಂದು ಕೊಂಬುಗಳಿಂದ ಎತ್ತಿ ಹಿಡಿದು ನಿಲ್ಲಿಸಿದ ಶಿವನ ಅಘೋರಾಸ್ತ್ರವೆಂಬ ಬಾಣದ ತುದಿಯಲ್ಲಿ ತಾನೆ ಬೆಂಕಿಯಾಗಿ ನಿಂತು ತ್ರಿಪುರಗಳನ್ನು ಸುಟ್ಟ ಹೀಗೆ ತ್ರಿಪುರದಹನ ಕಾರ್ಯ ಮಾಡಿ ಅದರ ಯಶಸ್ಸನ್ನು ಶಿವನಿಗಿತ್ತ ಶಿವ ಮೂರು ಪಟ್ಟಣಗಳನ್ನು ಭಗವಂತನ ತೇಜಸ್ಸಿಗೆ ಆಹುತಿಯಾಗಿ ನೀಡಿದ ದೀಪೋತ್ಸವ ಮಾಡಿದ. ಇದು ನಡೆದುದು ಕಾರ್ತಿಕದ ಹುಣ್ಣಿಮೆಯಂದು ಅದರಿಂದ ಅಂದು ದೀಪೋತ್ಸವ ಹೀಗೆ ವೇದ ಸುರಕ್ಷಿತವಾಗಿ ಉಳಿಯಿತು

***ಕಲಿಮುಖ ದಾನವರ ಸಂಹರಿಸಿ***

ಕಲಿಯುಗದ ಕೊನೆಯಲ್ಲಿ ವಿಷ್ಣುಯಶ ಸುಮತಿಯರೆಂಬ ಬ್ರಾಹ್ಮಣ ದಂಪತಿಗಳಲ್ಲಿ ಬ್ರಾಹ್ಮಣನಾಗಿ ಅವತರಿಸಿದ ಕಲ್ಕಿ ಲಕ್ಷ್ಮಿಯ ಅವತಾರಳಾದ ಪದ್ಮೆಯನ್ನು ವಿವಾಹವಾಗಿ ವಿಶ್ವಕರ್ಮನಿರ್ಮಿತವಾದ ಶಂಭಲನಗರದಲ್ಲಿ ರಾಜ್ಯವಾಳಿದ ಪರಶುರಾಮನಂತೆ ಕ್ಷಾತ್ರ ವೃತ್ತಿಯನ್ನು ಕೈಗೊಂಡ ಖಡ್ಗಚರ್ಮಗಳನ್ನು ಧರಿಸಿ ದೇವದತ್ತ ಎಂಬ ಕುದುರೆಯನ್ನೇರಿ ಅಸಂಖ್ಯ ಬ್ರಾಹ್ಮಣಸೇನೆಯೊಂದಿಗೆ ದಿಗ್ವಿಜಯಕ್ಕೆ ಹೊರಟು ದುಷ್ಟರಾಜರನ್ನು ಸಂಹರಿಸಿದ ಭಲ್ಲಾಟ ನಗರದಲ್ಲಿ ಶಯ್ಯಾಕರ್ಣ, ಪ್ರಯಾತಿ ಮತ್ತು ರಾಜಾ ಶಶಿಧ್ವಜರೊಡನೆ ಯುದ್ಧ ಮಾಡಿ ಅವರನ್ನು ಕೊಲ್ಲುತ್ತಾನೆ ಯಜ್ಞ ಮಾಡಿ ಕೃತಯುಗವನ್ನು ಪ್ರಾರಂಭಿಸುತ್ತಾನೆ ಗಂಗಾ-ಯಮುನಾಸಂಗಮಪ್ರದೇಶದಿಂದ ಹೊರಟು ಪರಂಧಾಮಕ್ಕೆ ತೆರಳುತ್ತಾನೆ ಕಲ್ಕಿಯಿಂದ ಹತರಾದ ದುಷ್ಟರಾಜರೆಲ್ಲರೂ ಕಲಿ ಮುಂತಾದ ದಾನವರೇ ಆಗಿದ್ದರು ಅದರಿಂದ ಕಲಿ-ಯನ್ನು ಕೊಂದುದರಿಂದ 'ಕಲ್ಕಿ' ಎಂಬ ಹೆಸರು ಸಾರ್ಥಕವಾಯಿತು

**ಶ್ರೀಮನೋರಮ ಶಮಲವರ್ಜಿತ**
**ಕಾಮಿತಪ್ರದ ಕೈರವದಳ-**
**ಶ್ಯಾಮ ಶಬಲ ಶರಣ್ಯ ಶಾಶ್ವತ ಶರ್ಕರಾಕ್ಷಸಖ ।**
**ಸಾಮಸನ್ನುತ ಸಕಲಗುಣಗಣ-**
**ಧಾಮ ಶ್ರೀಜಗನ್ನಾಥ ವಿಟ್ಠಲ**
**ನೀ ಮಹಿಯೊಳವತರಿಸಿ ಸಲಹಿದೆ ಸಕಲ ಸುಜನರನು ॥ ೩೧ ॥**

ಲಕ್ಷ್ಮೀರಮಣ, ದೋಷವರ್ಜಿತ, ಅಭೀಷ್ಟದಾಯಕ, ನೈದಿಲೆಯ ದಳದಂತೆ ನೀಲ-ವರ್ಣದವನೂ, ನಾನಾವರ್ಣಯುಕ್ತನೂ ಆಗಿರುವವ ಸಜ್ಜನರಿಗೆ ರಕ್ಷಣೆ ನೀಡುವವ, ಸದಾ ಏಕಪ್ರಕಾರ ಇರುವವ, ಶಾರ್ಕರಾಕ್ಷ್ಯಮುನಿಗಳಿಗೆ ಮಿತ್ರನಂತಿರುವವ, ಸಾಮವೇದ-ಪ್ರತಿಪಾದ್ಯ, ಸಕಲಗುಣನಿಕರ, ಇಂಥ ಶ್ರೀಜಗನ್ನಾಥವಿಟ್ಠಲನು ಈ ಮಹಿಯೊಳಗೆ ಅವತಾರ ಮಾಡಿ ಸಕಲ ಸುಜನರನ್ನೂ ಪೊರೆದ

**ಶ್ರೀಮನೋರಮ**

ಶ್ರೀದೇವಿಗೆ ಮನೋರಮ, ಅವಳ ಮನಸ್ಸಿಗೆ ರತಿ ನೀಡುವವ, ಹರಿ 'ಶ್ರೀಮನೋ-ಹರ' ಎಂದೂ ಒಂದು ಪಾಠವಿದೆ ಶ್ರೀದೇವಿಗೆ ಮಾತ್ರ ಮನಸೆಳೆವ ಪತಿಯಾಗಿದ್ದಾನೆ ಗೋಪಿಯರ ಮನವನ್ನು ಕದ್ದುದು, ಹದಿನಾರು ಸಾವಿರ ಸ್ತ್ರೀಯರನ್ನು ಮದುವೆಯಾಗಿ ರಮಿಸಿದುದು ಎಲ್ಲವೂ ಅವರಲ್ಲಿ ಅವರ ತಪಸ್ಸಿನ ಫಲವಾಗಿ ರಮಾವೇಶ ಬಂದಿದ್ದುದ-ರಿಂದ ಉಳಿದ ದೇವತೆಗಳಂತೆ ಹರಿ ಕಾಮವೆಂಬ ದೋಷಕ್ಕೆ ಸಿಕ್ಕಿ ಪರಸ್ತ್ರೀಯರನ್ನು ಬಯಸುವವನಲ್ಲ

**ಶಮಲವರ್ಜಿತ**

ಶಮಲವೆಂದರೆ ದೋಷ, ಕಾಮಾದಿದೋಷ ಕಾಮವರ್ಜಿತನೆಂದ ಮೇಲೆ ಸಕಲ-ದೋಷವರ್ಜಿತನೆ ಏಕೆಂದರೆ ಕಾಮದ ಬೆನ್ನಹಿಂದೆಯೆ ಎಲ್ಲದೋಷಪ್ರಾಪ್ತಿ 'ಕಾಮಾತ್ ಕ್ರೋಧೋಽಭಿಜಾಯತೇ' ಎಂದು ಮುಂತಾಗಿ ಭಗವದ್ಗೀತೆಯಲ್ಲಿ ಹೇಳುವಂತೆ ಕಾಮ ಒಂದಿದ್ದರೆ ಸಾಕು, ಅದಕ್ಕೆ ಅಡ್ಡಿಯಾಗುವವರಲ್ಲಿ ಕ್ರೋಧ ಸಹಜವಾಗಿ ಬರುತ್ತದೆ ಕ್ರೋಧದಿಂದ ಅಕಾರ್ಯಗಳಲ್ಲಿ ಮೋಹ ಉಂಟಾಗುತ್ತದೆ ಶಾಸ್ತ್ರಗಳ ವಿಧಿನಿಷೇಧ ಪ್ರಜ್ಞೆ ಮರೆಯಾಗುತ್ತದೆ ಧರ್ಮಾಧರ್ಮವಿವೇಕವಿಲ್ಲದಾಗುತ್ತದೆ ಅಧರ್ಮಾಚರಣೆಯ ಮೂಲಕ ಎಲ್ಲ ಅನರ್ಥಗಳಿಗೂ ದಾರಿಯಾಗುತ್ತದೆ

**ಕಾಮಿತಪ್ರದ**

ಸಕಲದೋಷವರ್ಜಿತನಾದವನೇ ಎಲ್ಲ ಅಭೀಷ್ಟವನ್ನೂ ಅಂದರೆ ಮೋಕ್ಷವನ್ನೂ ಕೊಡಬಲ್ಲ ಏಕೆಂದರೆ ಸ್ವತಃ ಜನನಮರಣಾದಿದೋಷರಹಿತನಾಗಿರುವವನೆ ಪರರಿಗೆ ಆ ದೋಷಗಳಿಂದ ಮುಕ್ತಿ ನೀಡಬಲ್ಲ ತನ್ನಲ್ಲಿಯೇ ದೋಷವಿದ್ದರೆ ಪರರ ದೋಷಗಳನ್ನು ಹೇಗೆ ಕಳೆಯಬಲ್ಲ?

'ಕೆಸರೊಳು ಮುಳುಗಿದವ, ಪರರ ಬಾಧಿಪ ಕೆಸರ ಬಿಡಿಸುವನೆ?' ಎಂದು ವಾದಿ-ರಾಜರು ಲಕ್ಷ್ಮೀಶೋಭಾನೆಯಲ್ಲಿ ಹೇಳಿದ್ದಾರೆ

**ಕೈರವದಳಶ್ಯಾಮ**

ಕಾಮಿತಪ್ರದನಾದ ಶ್ರೀಹರಿಯನ್ನು ಕಾಣಲು ದೂರ ಹೋಗ- ಬೇಕಾಗಿಲ್ಲ ನೈದಿಲೆ-ಯಂತೆ ನೀಲವರ್ಣದಿಂದ ಹೊಳೆಯುತ್ತ ನಮ್ಮ ಹೃದಯದಲ್ಲಿಯೆ ಆತ ಇರುತ್ತಾನೆ

ಶ್ಯಾಮೋ ಹೃದಿ ಸ್ಥಿತೋ ವಿಷ್ಣುಃ

ಎನ್ನುವ ಛಾಂದೋಗ್ಯ ಭಾಷ್ಯ ಹಾಗೇ ಹೇಳುತ್ತದೆ ಆದರಿಂದ ಹೃದಯದಲ್ಲಿಯೆ ಇರುವ ಅವನ ಈ ಶ್ಯಾಮ ಎಂಬ ರೂಪವನ್ನು ಸಾಧಕನು ಆರಾಧಿಸಬಹುದು

**ಶಬಲ**

'ಶಬಲ' ಎಂದರೆ ಮಿಶ್ರವರ್ಣದ್ದು ಅಂದರೆ ಶುದ್ಧವಲ್ಲದ್ದು ಮಾಯೆ ಎಂಬ ಒಂದು ಬಗೆಯ ಅವಿದ್ಯೆಯಿಂದ ಕೂಡಿದ್ದುದು ಅದುವೆ ಸಗುಣ ಬ್ರಹ್ಮ ಪರಮಾತ್ಮ ಬ್ರಹ್ಮವಿಷ್ಣು-ಮಹೇಶ್ವರರೂಪದವ ಎಂದು ಹೇಳುತ್ತದೆ ಮಾಯಾವಾದ ಆದರೆ ಅನಾದಿಕಾಲದಿಂದ ಅಶುದ್ಧವಾಗಿರುವ ಈ ಶಬಲ ಬ್ರಹ್ಮ ಎಂದಾದರೂ ಶುದ್ದವಾಗಿರುವುದುಂಟೆ? ತಾನು ಶುದ್ಧವಲ್ಲದಿದ್ದರೆ ಇನ್ನೊಬ್ಬನನ್ನು ಅದು ಹೇಗೆ ಶುದ್ಧೀಕರಿಸೀತು? ಅದರಿಂದ ಶ್ರೀಮದಾಚಾ-ರ್ಯರು ಛಾಂದೋಗ್ಯಭಾಷ್ಯದಲ್ಲಿ ಹೇಳುತ್ತಾರೆ 'ಶಬಲ' ಎಂದರೆ ನಾನಾ ಬಣ್ಣಗಳಿಂದ ಕೂಡಿದ ವಿಷ್ಣುವಿನ ಒಂದು ರೂಪ ಎಲ್ಲರ ಹೃದಯದಲ್ಲಿದೆ

ಶಬಲೋ ವಿಶ್ವರೂಪವಾನ್

'ಹೃದಯದಲ್ಲಿಯೆ ಇರುವ ಇನ್ನೊಂದು ರೂಪ ಶಬಲವೆನಿಸುತ್ತದೆ ಏಕೆಂದರೆ ಇದು ನಾನಾವರ್ಣದ್ದು'

**ಶರಣ್ಯ**

ಈ ಶ್ಯಾಮಶಬಲರೂಪಗಳು ಜೀವರ ಹೃದಯದಲ್ಲಿದ್ದು ಅವರಿಗೆ ಸದಾ ರಕ್ಷಣೆ ನೀಡುತ್ತವೆ ಅದರಿಂದ,

ಶ್ಯಾಮಾತ್ ಶಬಲಂ ಪ್ರಪದ್ಯೇ, ಶಬಲಾತ್ ಶ್ಯಾಮಂ ಪ್ರಪದ್ಯೇ

'ಹೃದಯದಲ್ಲಿರುವ ಶ್ಯಾಮರೂಪವನ್ನು ಉಪಾಸನೆ ಮಾಡಿ ಬಳಿಕ ಶಬಲರೂಪವನ್ನು ಉಪಾಸನೆ ಮಾಡಬೇಕು ಅಥವಾ ಶಬಲರೂಪವನ್ನು ಉಪಾಸನೆ ಮಾಡಿ ಶ್ಯಾಮರೂಪ-ವನ್ನು ಉಪಾಸನೆ ಮಾಡಲೂಬಹುದು' ಎಂದು ಛಾಂದೋಗ್ಯ ಉಪನಿಷತ್ತು ಈ ಎರಡೂ ರೂಪಗಳ ಉಪಾಸನೆಯನ್ನು ವಿಧಿಸಿದೆ

**ಶಾಶ್ವತ**

ಶಾಶ್ವತವಾಗಿ ರಕ್ಷಣೆ ನೀಡುವವನೂ ಹರಿ 'ಶತ' ಅಂದರೆ ಅಧಿಕವಾದ ಅಭಿವ್ಯಕ್ತ-ಸ್ವರೂಪ ಸುಖಉಳ್ಳವರು ಶಶವಂತರು ಅಂದರೆ ಮುಕ್ತರು ಅವರಿಗೂ ರಕ್ಷಣೆ ನೀಡು-ವವನು, ಶಾಶ್ವತ ಅದರಿಂದ ಸಂಸಾರದಲ್ಲಿ ಮಾತ್ರವಲ್ಲ, ಶಾಶ್ವತವಾದ ಮುಕ್ತಿಯಲ್ಲಿಯೂ ಶಾಶ್ವತ ರಕ್ಷಣೆ ನೀಡುವ 'ಶಾಶ್ವತ' ಶ್ರೀಹರಿ ಯಮಲೋಕದಲ್ಲಿ ಶ್ಯಾಮ, ಶಬಲ ಎಂಬ ಎರಡು ನಾಯಿಗಳಿವೆ ಅವು ಯಮಲೋಕಕ್ಕೆ ಹೋಗುವವರಿಗೆ ದಾರಿಯುದ್ದಕ್ಕೂ ರಕ್ಷಣೆ ನೀಡುತ್ತವೆ ಎಂದು ಋಗ್ವೇದಮಂತ್ರಗಳು ಹೇಳುತ್ತಿವೆ—

ಅತಿದ್ರವಸಾರಮೇಯೌ ಶ್ವಾನೌ
ಚತುರಕ್ಷೌ ಶಬಲೌ ಸಾಧುನಾ ಪಥಾ

ಅದರಿಂದ 'ಶ್ಯಾಮಾಯ ಸ್ವಾಹಾ, ಶಬಲಾಯ ಸ್ವಾಹಾ' ಎಂದು ಬಲಿಹರಣದಲ್ಲಿ ಎರಡು ಆಹುತಿಗಳನ್ನೂ ನೀಡುತ್ತೇವೆ ಈ ನಾಯಿಗಳು ಕೊಡುವ ರಕ್ಷಣೆ ಏನಿದ್ದರೂ ಅಲ್ಪ

ಕಾಲದ್ದು ಹರಿಯ ಶ್ಯಾಮಶಬಲರೂಪಗಳು ಕೊಡುವ ರಕ್ಷಣೆ ಶಾಶ್ವತ, ಮೋಕ್ಷದಲ್ಲಿಯೂ ಉಂಟು

*ಶರ್ಕರಾಕ್ಷಸಖ*

ಹೃದಯದಲ್ಲಿರುವ ವಿಷ್ಣುರೂವ ಉವಾಸನೆಯಂತೆ ಉದರದಲ್ಲಿರುವ ವಿಷ್ಣುರೂಪದ ಉವಾಸನೆಯೂ ಬೇಕು ಇದೂ ಜೀವರಿಗೆ ಶಾಶ್ವತರಕ್ಷಣೆ ನೀಡುವುದು

ಉದರಂ ಬ್ರಹ್ಮೇತಿ ಶಾರ್ಕರಾಕ್ಷ್ಯಾ ಉವಾಸತೇ

ಭಾಷ್ಯದಲ್ಲಿ ಇದಕ್ಕೆ ವಿವರಣೆ—

ಸೂಕ್ಷ್ಮದೃಷ್ಟಿಯುತಾ ಯೇ ತು ಮುನಯಃ ಶಾರ್ಕರಾಕ್ಷ್ಯಕಾಃ ।
ಉದರೇ ತೇ ಪರಂ ಬ್ರಹ್ಮ ವಾಸುದೇವಮುಪಾಸತೇ ॥

ಭಾಗವತದ ಶ್ರುತಿಗೀತೆಯೂ ಈ ಉವಾಸನೆಯನ್ನು ಹೊಗಳಿದೆ—

ಉದರಮುಪಾಸತೇ ಯರ್ಹಿ ವರ್ತ್ಮನಿ ಸೂಕ್ಷ್ಮದೃಶಃ

'ಸೂಕ್ಷ್ಮಜ್ಞಾನಸಂಪನ್ನರಾದ್ದರಿಂದ ಶಾರ್ಕರಾಕ್ಷ್ಯರೆನಿಸುವ ಕೆಲವು ಮುನಿಗಳು ಉದರದಲ್ಲಿರುವ ಉದರನಾಮಕನಾದ ವಾಸುದೇವನನ್ನು ಉವಾಸನೆಗೈಯುತ್ತಾರೆ'

ಛಾಂದೋಗ್ಯೋಪನಿಷತ್ತು ಈ ಶಾರ್ಕರಾಕ್ಷ್ಯರ ಬಗ್ಗೆ ಹೇಳುತ್ತದೆ—

'ಅಥ ಹೋವಾಚ ಜನಂ ಶಾರ್ಕರಾಕ್ಷ್ಯಂ, ಶಾರ್ಕರಾಕ್ಷ್ಯ'
ಕಂ ತ್ವಮಾತ್ಮಾನಮುವಾಸ್ಸೇ' ಇತಿ ।
ಆಕಾಶಮೇವ ಭಗವೋ ರಾಜನ್ನಿತಿ ಹೋವಾಚ'

ರಾಜ ಶಾರ್ಕರಾಕ್ಷ್ಯ ಮುನಿಗೆ ಕೇಳಿದ, 'ಶಾರ್ಕರಾಕ್ಷ್ಯ, ನೀನು ಯಾರನ್ನು ಉವಾಸನೆ ಮಾಡುವಿ? ಅವನು ಹೇಳಿದ 'ರಾಜನೇ, ನಾನು ಆಕಾಶವನ್ನು ಉವಾಸನೆ ಮಾಡುವೆನು'

ಇಲ್ಲಿ ಭಾಷ್ಯ ಹೇಳುತ್ತದೆ

ಆಕಾಶನಾಮಾ ಚಾದೀಪ್ತೇರ್ಮಧ್ಯದೇಹೋ ರಮಾಪತೇಃ

ಆಕಾಶದಂತೆ ಎಲ್ಲೆಡೆ ವ್ಯಾಪ್ತನಾಗಿ ಪ್ರಕಾಶಿಸುವುದರಿಂದ 'ವೈಶ್ವಾನರನಾಮಕ' ಭಗವಂತನ ಶರೀರದ ಮಧ್ಯಭಾಗಕ್ಕೆ ಆಕಾಶವೆಂದು ಹೆಸರು

ಹೀಗೆ ಶಾರ್ಕರಾಕ್ಷ್ಯಮುನಿಗಳು ಉದರದಲ್ಲಿರುವ ಹರಿಯ 'ಉದರ' 'ಆಕಾಶ' ಎಂಬ ಎರಡು ರೂಪಗಳ ಉಪಾಸನೆ ಮಾಡುತ್ತಾರೆ ಶಾರ್ಕರಾಕ್ಷ್ಯ ಎಂಬ ಶಬ್ದದ ನಿಷ್ಪತ್ತಿ ವಿಜಯಧ್ವಜೀಯದಲ್ಲಿ ಹೀಗೆ ಉಕ್ತವಾಗಿದೆ.

ಶರ್ಕರಾ ಕ್ಷುದ್ರಪಾಷಾಣೇ ಸುಸೂಕ್ಷ್ಮೇ ಖಂಡಿತೇ ಗುಡೇ

ಎಂಬ ಕೋಶಾನುಸಾರ ಶರ್ಕರಾ ಎಂದರೆ ಅತ್ಯಂತ ಸೂಕ್ಷ್ಮ. ಆದರಿಂದ 'ಶರ್ಕರಾ=ಅತ್ಯಂತ ಸೂಕ್ಷ್ಮವಾದ, ಅಕ್ಷ=ದೃಷ್ಟಿ ಉಳ್ಳವರು ಶರ್ಕರಾಕ್ಷರು. ಅವರಲ್ಲಿ ಪ್ರಖ್ಯಾತರಾದವರು ಶಾರ್ಕರಾಕ್ಷ್ಯರು'

ಛಲಾರೀಯದಲ್ಲಿಯೂ ಹೀಗೆ ಹೇಳಿದೆ—

ಶರ್ಕರ=ಸೂಕ್ಷ್ಮವಾದ, ಅಕ್ಷ=ಕಣ್ಣುಗಳು ಅಥವಾ ಇಂದ್ರಿಯಗಳುಳ್ಳವರು ಶರ್ಕರಾಕ್ಷರು. ಅವರಲ್ಲಿ ಪ್ರಖ್ಯಾತರು ಶಾರ್ಕರಾಕ್ಷ್ಯರು ಎಂಬ ಮುನಿಗಳು. ಈ ಶಾರ್ಕರಾಕ್ಷ್ಯ ಮುನಿಗಳಿಗೆ ಸಖನಂತಿರುವುದರಿಂದ ಶ್ರೀಹರಿ ಶಾರ್ಕರಾಕ್ಷ್ಯಸಖನೆನಿಸುತ್ತಾನೆ

ಎರಡೂ ಉಪನಿಷತ್ತುಗಳಲ್ಲಿ ಭಾಷ್ಯಗಳಲ್ಲಿ ಮತ್ತು ಭಾಗವತದ ಶ್ರುತಿಗೀತೆಯ ಟೀಕೆಗಳಲ್ಲಿ ಎಲ್ಲೆಡೆ 'ಶಾರ್ಕರಾಕ್ಷ್ಯ' ಶಬ್ದವೇ ಇದೆ. ಆದಕ್ಕೇ ವ್ಯುತ್ಪತ್ತಿಯನ್ನು ಹೇಳಿದೆ. ಆದರಿಂದ ಹರಿಕಥಾಮೃತಸಾರದಲ್ಲಿಯೂ 'ಶರ್ಕರಾಕ್ಷಸಖ' ಎಂಬುದನ್ನು 'ಶಾರ್ಕರಾಕ್ಷ್ಯಸಖ' ಎಂದು ತಿದ್ದಿಕೊಳ್ಳುವುದು ಯುಕ್ತ. ಆಗ ಭಾಮಿನಿಷಟ್ಪದಿ ಛಂದಸ್ಸೂ ಕೆಡುವುದಿಲ್ಲ

***ಸಾಮಸನ್ನುತ***

ಶಾರ್ಕರಾಕ್ಷ್ಯಮುನಿಗಳಂತೆ ಎಲ್ಲ ಉಪಾಸಕರೂ ಸಾಮಾದಿ ವೇದಮಂತ್ರಗಳಿಂದಲೆ ಸಾಮಗಾನಪ್ರಿಯನಾದ ಹರಿಯನ್ನು ಉಪಾಸನೆ ಮಾಡುತ್ತಾರೆ. ವೇದವೇದಾಂತಗಳ ಶ್ರವಣಮನನಗಳಾದ ಬಳಿಕವೇ ವೇದೋಕ್ತ ಗುಣಗಳನ್ನು ವೇದಮಂತ್ರಗಳಿಂದಲೇ ಉಪಾಸನೆ ಮಾಡಬೇಕಾಗುತ್ತದೆ. ಬಿಲ್ಲಿಗೆ ಬಾಣವನ್ನು ಹೂಡಿ ಗುರಿ ಇಟ್ಟು ಎಸೆದರೆ ಮಾತ್ರ ಬಾಣ ಗುರಿ ಸೇರುತ್ತದೆ, ಹಾಗೇ ವೇದಮಂತ್ರಪೂರ್ವಕವಾಗಿ ಮನಸ್ಸನ್ನು ಭಗವಂತನೆಡೆಗೆ ಕಳಿಸಿದರೆ ಮಾತ್ರ ಅದು ಭಗವಂತನಲ್ಲಿ ನೆಲೆ ನಿಲ್ಲುವುದು

ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ

***ಸಕಲಗುಣಧಾಮ***

ತನಗೆ ಉಪಾಸನೆಗೆ ಯೋಗ್ಯವಾದ ಕೆಲವೇ ಭಗವದ್ಗುಣಗಳನ್ನು ವಿಶೇಷವಾಗಿ ಉಪಾಸನೆ ಮಾಡಬೇಕು. ಜೊತೆಗೆ ಎಲ್ಲ ಗುಣಗಳನ್ನು ಸಾಮಾನ್ಯವಾಗಿ ಉಪಾಸನೆ ಮಾಡಬೇಕು. 'ಬ್ರಹ್ಮದೃಷ್ಟಿರುತ್ಕರ್ಷಾತ್' ಎಂಬ ಅಧಿಕರಣದಲ್ಲಿ ಬ್ರಹ್ಮಸೂತ್ರ ಭಗವಂತನನ್ನು ಗುಣಪೂರ್ಣನೆಂದು ಉಪಾಸಿಸುವ ಆವಶ್ಯಕತೆಯನ್ನು ಒತ್ತಿ ಹೇಳಿದೆ.

***ಶ್ರೀಜಗನ್ನಾಥವಿಟ್ಠಲ***

ಸೃಷ್ಟಿಕರ್ತನಾದ ಬ್ರಹ್ಮ ಅನಾದಿ ಪದಾರ್ಥವನ್ನು ಸೃಷ್ಟಿ ಮಾಡುವುದಿಲ್ಲ. ಲಯಕರ್ತನಾದ ರುದ್ರ ನಿತ್ಯ ಪದಾರ್ಥವನ್ನು ಲಯ ಮಾಡುವುದಿಲ್ಲ. ಪಾಲನಕರ್ತನಾದ ವಿಷ್ಣು ಅನಾದಿನಿತ್ಯ ಪದಾರ್ಥವನ್ನೂ ಅದು ಅನಾದಿನಿತ್ಯವಾಗಿರುವಂತೆ ಪಾಲನ ಮಾಡುತ್ತಾನೆ

ಜೊತೆಗೆ ಆ ಸೃಷ್ಟಿಕರ್ತ ಲಯಕರ್ತರನ್ನೂ ಪಾಲನ ಮಾಡುತ್ತಾನೆ ಹೀಗಾಗಿ ನಕಲ ಜಗತ್ತಿಗೂ ನಾಥ, ಒಡೆಯ, ಜಗನ್ನಾಥನಾದ ವಿಟ್ಠಲನೆ, ಇನ್ನಾರೂ ಅಲ್ಲ

***ಈ ಮಹಿಯೊಳವತರಿಸಿ ಸಲಹಿದ ಸುಜನರನು***

ಶಾರ್ಕರಾಕ್ಷ್ಯರಂಥ ಸೂಕ್ಷ್ಮ ಜ್ಞಾನಿಗಳು ಉಪನಿಷತ್ತಿನಲ್ಲಿ ವರ್ಣಿಸಿದಂತೆ ಅಧ್ಯಾತ್ಮ-ದಲ್ಲಿರುವ ಉದರ ಆಕಾಶ, ಶ್ಯಾಮ, ಶಬಲ ಮುಂತಾದ ರೂಪಗಳನ್ನು ಧ್ಯಾನಿಸಬಲ್ಲರು ಆದರೆ ಸ್ಥೂಲ ಬುದ್ಧಿಯ ಉಪಾಸಕರಲ್ಲಿ ಅಂಥ ಸಾಮರ್ಥ್ಯವಿಲ್ಲ ಅದರಿಂದ ಅವರಿಗಾಗಿ ಹರಿರಾಮಕೃಷ್ಣಾದಿ ಅವತಾರ ಮಾಡಿ ರಾಮಾಯಣ ಭಾರತಾದಿ ಚರಿತ್ರೆಗಳನ್ನು ಮಾಡಿತೋರುತ್ತಾನೆ ಸುಲಭವಾಗಿ ಧ್ಯಾನಿಸಲು ಅನುಕೂಲ ಮಾಡುತ್ತಾನೆ

ಸ್ಮೃತಿಕೀರ್ತನಪ್ರಣತಿಭಿರ್ವಿಮುಕ್ತಯೇ
ಸ್ವಜನಸ್ಯ ಯಾತ್ಯಯಮನೇಕರೂಪತಾಮ್

ಸ್ಮರಣ, ಸಂಕೀರ್ತನ, ನಮಸ್ಕಾರಗಳಿಂದ ಮೋಕ್ಷಸಾಧನೆ ಮಾಡಿಸುವ ದೃಷ್ಟಿಯಿಂದ ಹರಿ ಅನೇಕ ಅವತಾರ ಮಾಡುತ್ತಾನೆ ಇಲ್ಲದಿದ್ದರೆ ರಾವಣನನ್ನು ವಧಿಸಲು ಸರ್ವಶಕ್ತನಾದ ಹರಿ ರಾಮಾವತಾರ ಮಾಡಬೇಕೆ? ಸಮುದ್ರಕ್ಕೆ ಸೇತು ಕಟ್ಟಬೇಕೆ? ಕಪಿಗಳ ಸಹಾಯ ಪಡೆಯಬೇಕೆ? ಅದರಿಂದ ಮಹಿಯೊಳವತರಿಸುವುದು ಸಜ್ಜನರಿಂದ ಸುಲಭವಾಗಿ ತನ್ನ ಉಪಾಸನೆ ಮಾಡಿಸಿಕೊಂಡು ಅವರನ್ನು ಸಲಹುವುದಕ್ಕಾಗಿ ಅದರಿಂದಲೆ ಜಗನ್ನಾಥನಾದ ಹರಿ ವಿಟ್ಠಲನೆನಿಸಿದ

ವಿದಾ ಜ್ಞಾನೇನ ಠಾನ್ ಶೂನ್ಯಾನ್ ಲಾತಿ ಗೃಹ್ಣಾತಿ ಇತಿ ವಿಟ್ಠಲಃ

'ಜ್ಞಾನಶೂನ್ಯರಾದ ಸ್ಥೂಲಬುದ್ಧಿಯವರನ್ನೂ ಸೆಳೆದು ಉಪಾಸನಾಮಾರ್ಗಕ್ಕೆ ತಂದು-ಕೊಳ್ಳುತ್ತಾನೆ, ವಿಟ್ಠಲ'

'ವಿಠಲ' ಎಂದೂ ಒಂದು ಪಾಠವಿದೆ. ಅದು ಭಾಮಿನೀಷಟ್ಪದಿ ಛಂದಸ್ಸಿಗೆ ಸರಿ-ಹೋಗದು ಮೂರು ಮಾತ್ರೆಗಳ ಗಣವಾಗುವುದು. 'ವಿಟ್ಠಲ' ಎಂದು ನಾಲ್ಕು ಮಾತ್ರೆಗಳ ಗಣವೆ ಬೇಕು 'ಧಾಮ' 'ಶ್ರೀಜಗ'ನ್ನಾಥ ಎಂಬಲ್ಲಿ 'ಶ್ರೀ' 'ನ್ನಾ' ಎಂದು ಶಿಥಿಲದ್ವಿತ್ವವಿಟ್ಟು-ಕೊಂಡರೆ ಮೂರು ನಾಲ್ಕು ಮಾತ್ರೆಗಳ ಗಣಗಳು ಸಿಗುವುವು

ಅಥವಾ ಕರುಣಾಸಂಧಿಯ ಅಂತಿಮ ಮಂಗಳಾಚರಣೆಯ ರೂಪದಲ್ಲಿ ಬಂದ ಈ ಪದ್ಯ ಹರಿಯ ಕರುಣಾಸ್ವಭಾವವನ್ನೇ ತೋರುತ್ತದೆ

**ಶ್ರೀಮನೋರಮ**

ಶ್ರೀದೇವಿಗೆ ಹರಿ ಮನೋರಮನೆ ಹೊರತು ಹರಿಗೆ ಶ್ರೀದೇವಿಯಿಂದ ಏನೂ ಆಗ-ಬೇಕಾಗಿಲ್ಲ ಅವನು ಸ್ವರಮಣ ಕರುಣೆಯಿಂದಲೆ ಶ್ರೀದೇವಿಯನ್ನು ರಮಿಸುತ್ತಾನೆ.

**ಶಮಲವರ್ಜಿತ**

ಪ್ರಕೃತಿಯ ಸತ್ವರಜತಮಗಳಿಂದ ಬದ್ಧನಲ್ಲದಿರುವುದರಿಂದ ಸ್ವಾಭಾವಿಕವಾದ ಕರುಣೆಯನ್ನೆ ಮೆರೆಯುತ್ತಾನೆ ಹೊರತು ಅಸ್ವಾಭಾವಿಕವಾದ ರಜಸ್ತಮೋವಿಕಾರಗಳಿಂದ ರೋಷದ್ವೇಷಾದಿಗಳನ್ನು ಎಂದೂ ತೋರುವುದಿಲ್ಲ

**ಕಾಮಿತಪ್ರದ**

ಸಜ್ಜನರು ಹರಿಯಲ್ಲಿ ಜ್ಞಾನಭಕ್ತ್ಯಾದಿಗಳನ್ನಲ್ಲದೆ ಬೇರೇನನ್ನೂ ಬೇಡಬಾರದು ಆದರೂ ಕೆಲವೊಮ್ಮೆ ಪ್ರಾರಬ್ಧವಶದಿಂದ ವಿಷಯಸುಖಭೋಗವನ್ನು ಕಾಮಿಸುತ್ತಾರೆ ಹರಿ ಕರುಣೆಯಿಂದ ತುಚ್ಛವಾದ ಆ ವಿಷಯಭೋಗವನ್ನೂ ನೀಡಿ ರಮಿಸುತ್ತಾನೆ

**ಕೈರವದಳಶ್ಯಾಮ**

ನೈದಿಲೆಯಂತೆ ಶ್ಯಾಮವರ್ಣದಿಂದ ಹೊಳೆಯುತ್ತ ಹೃದಯದಲ್ಲಿ ಸದಾ ನೆಲೆಸಿ ನಮ್ಮನ್ನು ಕಾಪಾಡುತ್ತಾನೆ ಇಲ್ಲದಿದ್ದರೆ ಸರ್ವಶಕ್ತನಾದ ಆತ ಎಲ್ಲಿದ್ದರೂ ನಮ್ಮನ್ನು ರಕ್ಷಣೆ ಮಾಡಬಹುದಿತ್ತು ಹೃದಯದಲ್ಲಿ ನೆಲೆಸಬೇಕಾಗಿರಲಿಲ್ಲ

**ಶಬಲ**

ಹೃದಯದಲ್ಲಿ 'ಶಬಲ' ಎಂಬ ಇನ್ನೊಂದು ರೂಪದಿಂದಲೂ ನೆಲೆಸಿದ್ದಾನೆ ಇದು ಕರುಣೆಯಲ್ಲದೆ ಬೇರೇನೂ ಅಲ್ಲ ನಾನಾ ವರ್ಣಗಳಿಂದ ಮನೋಹರನಾಗಿಯೂ ಅಂತಶ್ಚಕ್ಷುವಿಗೆ ಮೈದೋರುತ್ತಾನೆ ವಾದಿರಾಜರು ಯುಕ್ತಿಮಲ್ಲಿಕೆಯಲ್ಲಿ ಶಬಲರೂಪವನ್ನು ಹೀಗೆ ಬಣ್ಣಿಸಿದ್ದಾರೆ

> ಚಿತ್ರಪ್ರಕಾಶಬಲತಃ ಶಬಲೋ ವಾಸ್ತು ನಃ ಪ್ರಭುಃ ।
> ಯತೋಽಸ್ಯ ಹಾಸೋ ಧವಲಸ್ತನುರ್ನೀಲಾಽಧರೋಽರುಣಃ ॥

'ಶ್ರೀಹರಿಯ ನಗು ಬಿಳಿ, ಮೈ ನೀಲ, ತುಟಿ ಕೆಂಪು ಹೀಗೆ ನಾನಾ ಬಣ್ಣಗಳಿಂದ ಹೊಳೆವ ಹರಿ ಶಬಲನೆನಿಸುತ್ತಾನೆ' ಹೀಗೆ ಪ್ರಸನ್ನನಾಗಿ ನಗುತ್ತ ಹೃದಯದಲ್ಲಿ ನಿಂತ ಹರಿ ಸಜ್ಜನರಿಗೆ ಕರುಣೆಯಿಂದ ಶ=ಸುಖವನ್ನೂ ಬಲ=ಬಲವನ್ನೂ ನೀಡುತ್ತಾನೆ

**ಶರಣ್ಯ**

ಉಪಾಸನೆಯ ನಡುವೆ ನಾವು ಆಗಾಗ ಹರಿಯನ್ನು ಮರೆಯಬಹುದು. ಅನೇಕ ಅಪರಾಧಗಳನ್ನೂ ಮಾಡಬಹುದು ಆದರೆ ಶತಾಪರಾಧಗಳನ್ನೂ ಮನ್ನಿಸಿ ನಮಗೆ ರಕ್ಷಣೆ ನೀಡುವ ಕರುಣೆ ಶ್ರೀಹರಿಯದು

**ಶಾಶ್ವತ**

ಕರುಣೆ ಪ್ರೀತಿ ವಾತ್ಸಲ್ಯಗಳಂಥ ಸದ್ಗುಣಗಳು ಹರಿಯಲ್ಲಿ ಸದಾ ಏಕಪ್ರಕಾರವಾಗಿವೆ

*ಶಾರ್ಕರಾಕ್ಷ್ಯಸಖ*

ಅಜ್ಞಾನಿಗಳು ಉದರಪೂಜೆ ಮಾಡುತ್ತಾರೆ. ಅಹಂಕಾರದಿಂದ ಹರಿಯನ್ನು ಮರೆತು ನಡೆಯುತ್ತ ಆಪತ್ತಿನಲ್ಲಿ ರಕ್ಷಕರಿಲ್ಲದೆ ಆಕಾಶದ ಕಡೆಗೆ ನೋಡುತ್ತಾರೆ. ಆದರೆ ಜ್ಞಾನಿಗಳು ಶಾರ್ಕರಾಕ್ಷ್ಯಮುನಿಗಳಂತೆ ಉದರದಲ್ಲಿ 'ಉದರ' ನಾಮಕನಾದ ಹರಿಯನ್ನು ಪೂಜಿಸುತ್ತಾರೆ. ಇಂಥ ಜ್ಞಾನಿಗಳಿಗೆ ಹರಿ ಸದಾ ಸಖನಾಗಿರುತ್ತಾನೆ. ಯಥೇಚ್ಛ ಅನ್ನ ನೀಡುತ್ತಾನೆ. ಸಂಪತ್ತು ಸಂತತಿ ಎಲ್ಲವನ್ನೂ ಕೊಡುತ್ತಾನೆ ಎಂದು ಛಾಂದೋಗ್ಯೋಪನಿಷತ್ತು ಹೇಳುತ್ತಿದೆ.

*ಸಾಮಸನ್ನುತ ಸಕಲಗುಣಗಣಧಾಮ*

'ಶ್ರೀಮನೋರಮ' ಎಂದು ಶ್ರೀದೇವಿಗೂ, 'ಶಮಲವರ್ಜಿತ ಕಾಮಿತಪ್ರದ' ಎಂದು ನಿರ್ದೋಷರಾದ ಬ್ರಹ್ಮಾದಿ ದೇವತೆಗಳಿಗೂ, 'ಶಾರ್ಕರಾಕ್ಷ್ಯಸಖ' ಎಂದು ಜ್ಞಾನಿಗಳಾದ ಋಷಿಮುನಿಗಳಿಗೂ ಹರಿ ಕರುಣೆದೋರುವುದನ್ನು ವರ್ಣಿಸಿ ಈಗ 'ಸಾಮಸನ್ನುತ ಸಕಲ-ಗುಣಗಣಧಾಮ' ಎಂಬ ವಿಶೇಷಣದಿಂದ ಸಕಲಗುಣಗಳನ್ನೂ ಸಾಮಗಾನದಿಂದ ಹಾಡಿ-ಹೊಗಳುವ ಗಂಧರ್ವಾದಿಗಳಿಗೂ ಕರುಣೆದೋರುವುದನ್ನು ಬಣ್ಣಿಸುತ್ತಿದ್ದಾರೆ. ಹರಿಯ ಗುಣಗಳು ವಾಙ್ಮನಸುಗಳಿಗೆ ಗೋಚರವಾಗದವುಗಳು. ಆದರೂ ಸಾಮಸನ್ನುತನಾಗಿ ಪ್ರಸನ್ನನಾಗುತ್ತಾನೆ. ಇದು ಕರುಣೆ.

*ಶ್ರೀಜಗನ್ನಾಥವಿಟ್ಠಲ*

ಶ್ಯಾಮ, ಶಬಲ ಎಂಬ ಎರಡು ಉಪನಿಷತ್‌ಪ್ರತಿಪಾದ್ಯ ಭಗವದ್ರೂಪಗಳನ್ನೂ, ಶಾರ್ಕರಾಕ್ಷ್ಯರೆಂಬ ಉಪನಿಷತ್‌ಪ್ರತಿಪಾದ್ಯರಾದ ಜ್ಞಾನಿಗಳನ್ನೂ 'ಶಾಶ್ವತ' ಎಂಬ ವಿಷ್ಣು-ಸಹಸ್ರನಾಮದ ಒಂದು ನಾಮವನ್ನೂ ಈ ಪದ್ಯದಲ್ಲಿ ಉಲ್ಲೇಖಿಸುತ್ತ ಸಕಲಶ್ರುತಿಸ್ಮೃತಿಗಳ ಭಾಷ್ಯಟೀಕಾದಿ ಗ್ರಂಥಗಳ ರಹಸ್ಯಪ್ರಮೇಯಗಳನ್ನು ತಿಳಿಸುವ ಮೇರುಕೃತಿಯಾದ ಈ ಹರಿಕಥಾಮೃತಸಾರ ಗ್ರಂಥವನ್ನು ತನ್ನ ಮೂಲಕ ಸಜ್ಜನರಿಗೆ ಕರುಣಿಸಿದ ಶ್ರೀಜಗನ್ನಾಥ-ವಿಟ್ಠಲನ ಕರುಣೆ ಅಪಾರವೆ ಸರಿ ಎಂದು ದಾಸರಾಯರು ಇಲ್ಲಿ ಸೂಚಿಸುತ್ತಿದ್ದಾರೆ.

॥ ಶ್ರೀಕೃಷ್ಣಾರ್ಪಣಮಸ್ತು ॥

# ವ್ಯಾಪ್ತಿ ಸಂಧಿ

॥ ಹರಿಃ ಓಂ ॥

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥

ಪುರುಷರೂಪತ್ರಯ ಪುರಾತನ
ಪುರುಷ ಪುರುಷೋತ್ತಮ ಕ್ಷರಾಕ್ಷರ
ಪುರುಷಪೂಜಿತಪಾದ ಪೂರ್ಣಾನಂದಜ್ಞಾನಮಯ ।
ಪುರುಷಸೂಕ್ತಸುಮೇಯ ತತ್ತತ್-
ಪುರುಷಹೃತ್‌ಪುಷ್ಕರನಿಲಯ ಮಹ
ಪುರುಷಜಾಂಡಾಂತರದಿ ಬಹಿರದಿ ವ್ಯಾಪ್ತ ನಿರ್ಲಿಪ್ತ ॥ ೧ ॥

ಶ್ರೀಹರಿ 'ಪುರುಷ'ನೆನಿಸಿದ್ದಾನೆ ಮೂರು ರೂಪಗಳುಳ್ಳವನು ಪುರಾಣಪುರುಷ ಪುರುಷೋತ್ತಮ ಕ್ಷರ ಅಕ್ಷರ ಪುರುಷರು ಎಲ್ಲರೂ ಇವನ ಪಾದಪೂಜೆ ಮಾಡುವವರು ಪೂರ್ಣಜ್ಞಾನಆನಂದಸ್ವರೂಪವನು ಈತ ಪುರುಷಸೂಕ್ತಪ್ರತಿಪಾದ್ಯ ಎಲ್ಲ ಜೀವರುಗಳ ಹೃದಯಕಮಲದಲ್ಲಿ ನೆಲೆಸಿದವ ಮಹಾಪುರುಷ ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪ್ತನಾದವ ಆದರೂ ನಿರ್ಲಿಪ್ತ

ಅನುವ್ಯಾಖ್ಯಾನದಲ್ಲಿ ಬ್ರಹ್ಮದೃಷ್ಟ್ಯಧಿಕರಣದಲ್ಲಿ ಶ್ರೀಮದಾಚಾರ್ಯರು ಹೇಳುತ್ತಾರೆ.

> ಆಧಿವ್ಯಾಧಿನಿಮಿತ್ತೇನ ವಿಕ್ಷಿಪ್ತಮನಸೋಽಪಿ ತು ।
> ಧ್ಯೇಯೈವ ಬ್ರಹ್ಮತಾ ನಿತ್ಯಂ ವಿಷ್ಣೋರ್ಭಕ್ತ್ಯಾ ನಿರಂತರಮ್ ॥

'ಆಧಿವ್ಯಾಧಿನಿಮಿತ್ತದಿಂದ ಮನಸ್ಸು ಎಷ್ಟೇ ವಿಕ್ಷಿಪ್ತವಾಗಿದ್ದರೂ ಕೇವಲ 'ಆತ್ಮ' ಸ್ವಾಮಿ, ಪ್ರಭು ಎಂದು ಉಪಾಸನೆ ಮಾಡುತ್ತಿದ್ದರೂ ಶ್ರೀಹರಿಯ ದೇಶಕಾಲಗುಣಪೂರ್ಣತ್ವವೆಂಬ ಮಹಾಗುಣವನ್ನು ಭಕ್ತಿಯಿಂದ ನಿರಂತರ ಧ್ಯಾನಿಸಲೇಬೇಕು'

ಆದಕ್ಕೆ ಮೊದಲಿಗೆ ಹರಿಯ 'ವ್ಯಾಪ್ತಿ'ಯನ್ನೇ ಅಂದರೆ ದೇಶಕಾಲಗುಣಪೂರ್ಣತ್ವ-ವನ್ನೇ ಈ ಸಂಧಿಯಲ್ಲಿ ವರ್ಣಿಸುತ್ತಾರೆ ದಾಸರಾಯರು

**ಪುರುಷ**

'ಪುರು' ಪೂರ್ಣವಾದ 'ಷ' ಷಡ್ಗುಣ ಉಳ್ಳವನೆ 'ಪುರುಷ', ಎಲ್ಲ ಗುಣಗಳೂ ಈ ಷಡ್ಗುಣಗಳಲ್ಲಿಯೆ ಅಂತರ್ಗವಾಗುವುದರಿಂದ ಪುರುಷನೆಂದರೆ ಪೂರ್ಣಗುಣ,

ಸರ್ವವ್ಯಾಪ್ತ ಹಾಗೂ ನಿತ್ಯ 'ಪುರು' ಪೂರ್ಣವಾದ 'ಷ' ಚೇಷ್ಟೆಉಳ್ಳವ, ಎಂದರೆ ಸರ್ವ-ಕರ್ತ ಶ್ರೀಹರಿ ಆದರಿಂದಲೂ ಪುರುಷನೆನಿಸುತ್ತಾನೆ

**ರೂಪತ್ರಯ**

ಹರಿ ಸರ್ವಕರ್ತ ಹೇಗೆ? ಬ್ರಹ್ಮಾಂಡಶರೀರಿಯಾದ ಪುರುಷ ಚತುರ್ಮುಖ ಬ್ರಹ್ಮ ಅವನೆ ಸೃಷ್ಟಿಕರ್ತ, ಲೋಕಪಿತಾಮಹನೆಂದು ಪ್ರಸಿದ್ಧ ಎಂಬ ಸಂದೇಹ ಬಂದರೆ ಸಮಾಧಾನ 'ರೂಪತ್ರಯ' ಎಂಬಲ್ಲಿ ಇದೆ ಬ್ರಹ್ಮನನ್ನು ಹುಟ್ಟಿಸಿ ಅವನಲ್ಲಿ ಅಂತರ್ಯಾಮಿ- ಯಾಗಿದ್ದು ಅವನಿಂದ ಸೃಷ್ಟಿಕಾರ್ಯ ಮಾಡಿಸುವವನು ಬ್ರಹ್ಮರೂಪದ ಬ್ರಹ್ಮನಾಮಕನಾದ ಶ್ರೀಹರಿಯೆ ವೈಕುಂಠದಲ್ಲಿದ್ದು ಸ್ಥಿತಿಕಾರ್ಯ ಮಾಡುವ ವಿಷ್ಣುರೂಪನು ಶ್ರೀಹರಿಯೆ ರುದ್ರನಲ್ಲಿ ರುದ್ರನಾಮಕನಾಗಿದ್ದು ಅವನಿಂದ ಲಯಕಾರ್ಯ ಮಾಡಿಸುವ ನರಸಿಂಹನೂ ಶ್ರೀಹರಿಯೆ ಹೀಗೆ ರೂಪತ್ರಯ ಉಳ್ಳವ ಶ್ರೀಹರಿ

ಬ್ರಹ್ಮಾಂಡಶರೀರಿಗಳಾಗಿ ಬ್ರಹ್ಮಾಂಡದಲ್ಲಿ ವ್ಯಾಪಿಸಿ ಇಬ್ಬರು 'ಪುರುಷ' ರಿದ್ದಾರೆ ಒಬ್ಬ ಶ್ರೀಹರಿ, ಇನ್ನೊಬ್ಬ ಚತುರ್ಮುಖ ಬ್ರಹ್ಮ ಆ ಪುರುಷನಿಂದ ಈ ಪುರುಷನ ಉತ್ಪತ್ತಿ ಅವನಿಂದಲೆ ಇವನ ವ್ಯಾಪಾರ ಬ್ರಹ್ಮಾಂಡ ಹುಟ್ಟುವ ಮೊದಲೂ ಮಹತ್ತತ್ತ್ವಶರೀರನಾಗಿ ಬ್ರಹ್ಮ ಹುಟ್ಟಿದ್ದ ಆಗ ಅವನನ್ನು ಸೃಜಿಸಿದವನೂ ಇನ್ನೊಬ್ಬ ಪುರುಷ ಅವನೂ ಶ್ರೀಹರಿಯೆ ಬ್ರಹ್ಮಾಂಡ ಹುಟ್ಟಿದ ಬಳಿಕ ಅದರಲ್ಲಿ ಬ್ರಹ್ಮನನ್ನೂ ಎಲ್ಲ ಜೀವರನ್ನೂ ಹುಟ್ಟಿಸಿ ಅವರ ಹೃದಯಕಮಲಗಳಲ್ಲಿ 'ಪುರುಷ' ರೂಪದಿಂದ ಶ್ರೀಹರಿ ಪ್ರವೇಶಿಸಿದ್ದಾನೆ ಹೀಗೆ ಹರಿಯ 'ಪುರುಷ' ರೂಪಗಳೂ ಮೂರು ಆದರಿಂದ ರೂಪತ್ರಯ ಉಳ್ಳವನು ಶ್ರೀಹರಿ

ಸ್ಥಿತಿಕಾರ್ಯ ನಡೆಸುವ ವಿಷ್ಣುರೂಪನೂ, ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿ ನಾರಾಯಣ, ವಾಸುದೇವ, ವೈಕುಂಠ ಎಂಬ ಮೂರು ರೂಪಗಳುಳ್ಳವ

ಲೋಕತ್ರಯನಿಯಾಮಕನಾಗಿ ಮೂರು ರೂಪ. ಜಾಗ್ರದಾದಿ ಅವಸ್ಥಾತ್ರಯನಿಯಾ-ಮಕನಾಗಿ ಮೂರು ರೂಪ ಇತ್ಯಾದಿ ನಾನಾ ಬಗೆಗಳಿಂದಲೂ ಹರಿ ಮೂರು ರೂಪದವ.

**ಪುರಾತನ ಪುರುಷ**

ಈ ಎಲ್ಲ ರೂಪತ್ರಯಗಳೂ ಸೃಷ್ಟಿಕಾಲದಲ್ಲಿ ಮಾತ್ರ ಇವೆ ಲಯಕಾಲದಲ್ಲಿ ಇಲ್ಲ ಆದರಿಂದ ಅನಿತ್ಯ ಸರ್ವಕಾಲ ವ್ಯಾಪ್ತವಲ್ಲ ಎನ್ನುವ ಶಂಕೆಗೆ ಸಮಾಧಾನ 'ಪುರಾತನ ಪುರುಷ' ಎಂದು 'ಪುರ್ ಅಗ್ರಗಮನೇ' ಎಂಬ ಧಾತುವಿಟ್ಟುಕೊಂಡರೆ, ಸೃಷ್ಟಿಗಿಂತ ಪೂರ್ವದಲ್ಲಿಯೂ ಪ್ರಳಯಸಮುದ್ರದಲ್ಲಿ 'ಶೂನ್ಯ' ನಾಮಕನಾಗಿ ಆಲದೆಲೆಯ ಮೇಲೆ ಮಲಗಿದ ಪುರಾತನ ಪುರುಷ ನಾರಾಯಣನೆ

'ನಾರಾಯಣೋ ವಾ ಇದಮಗ್ರ ಆಸೀತ್'

ಇತ್ಯಾದಿ ಶ್ರುತಿಗಳು ಹೀಗೆ ಒಕ್ಕೊರಲಿನಿಂದ ಸಾರುತ್ತಿವೆ

**ಪುರುಷೋತ್ತಮ**

ಲಯಮೂರ್ತಿ ಎಂದು ಪ್ರಸಿದ್ಧನಾದ ಶಿವನೇ ಸೃಷ್ಟಿಗಿಂತ ಮೊದಲು ಇದ್ದ 'ಪುರಾತನ ಪುರುಷ' ನಲ್ಲವೆ? ಎಂದರೆ ಭಗವದ್ಗೀತೆ ಹೇಳುತ್ತದೆ

ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥

'ಲೋಕತ್ರಯಾಂತರ್ಗತನಾಗಿದ್ದು ಲೋಕನಾಶವಾಗುವಾಗಲೂ ನಾಶರಹಿತನಾದವನು ಪರಮಾತ್ಮನೆನಿಸಿದ ಪುರುಷೋತ್ತಮನೊಬ್ಬನೆ ಅವನು ಕ್ಷರ, ಅಕ್ಷರ ಪುರುಷರಿಗಿಂತ ಬೇರೆ ಅಂದರೆ ಬ್ರಹ್ಮರುದ್ರಾದಿ ಕ್ಷರಪುರುಷರಿಗಿಂತಲೂ ಅಕ್ಷರಳೆನಿಸಿದ ಲಕ್ಷ್ಮಿಗಿಂತಲೂ ಬೇರೆ'

ಆದರಿಂದ ಲೋಕದೊಳಗೆ ಲಯಕಾರಕ ಶಿವ ಲೋಕಕ್ಕೆ ಲಯವಾದಾಗ ಲೋಕದೊಳಗಿರುವ ಶಿವನಿಗೂ ಲಯ ಉಂಟು

**ಕ್ಷರಾಕ್ಷರಪೂಜಿತಪಾದ**

ಗೀತಾ ಶ್ಲೋಕದಲ್ಲಿ 'ಅವ್ಯಯ ಈಶ್ವರಃ' ಎಂದಿರುವುದರಿಂದ 'ಈಶ್ವರ' ನೆನಿಸಿರುವ ಶಿವನೆ ಲಯಕಾರಕನಾಗಿರಬಹುದು ಎನ್ನಕೂಡದು

ಬ್ರಹ್ಮಾ ಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ ಕ್ಷರಾಃ

ಇತ್ಯಾದಿ ಶ್ರುತಿವಾಕ್ಯಗಳು ಶಿವನಿಗೂ ದೇಹಲಯ ಉಂಟೆನ್ನುತ್ತಿವೆ ಅವನನ್ನು ಕ್ಷರಪುರುಷರಲ್ಲಿಯೆ ಸೇರಿಸುತ್ತಿವೆ ಆದರಿಂದ ಕ್ಷರಾಕ್ಷರ ಪುರುಷಪೂಜಿತಪಾದನಾದ ಶ್ರೀಹರಿಯೆ ಲಯಕಾರಕ

**ಪೂರ್ಣಾನಂದಜ್ಞಾನಮಯ**

ಕ್ಷರಾಕ್ಷರಪುರುಷರು ಹರಿಯ ಪಾದವನ್ನು ಸೇವಿಸುವುದು ಹೇಗೆ? 'ಅಶರೀರಃ ಪ್ರಜ್ಞಾತ್ಮಾ' ಎಂಬಂತೆ ಹರಿ ಶರೀರರಹಿತ ಅವನ ಪಾದಸೇವೆ ಎನ್ನುವುದು ಅರ್ಥವಿಲ್ಲದ್ದು ಎಂಬ ಆಕ್ಷೇಪಕ್ಕೆ ಸಮಾಧಾನ 'ಪೂರ್ಣಾನಂದಜ್ಞಾನಮಯನಾಗಿ ಕ್ಷರಾಕ್ಷರಪೂಜಿತಪಾದನಾಗಿದ್ದಾನೆ' ಎಂದು. ಪ್ರಾಕೃತಶರೀರವಿಲ್ಲದಿದ್ದರೂ ಅಪ್ರಾಕೃತಜ್ಞಾನಾನಂದಮಯ ಶರೀರ ಪಾದ ಅವನಿಗೆ ಉಂಟು.

**ಪುರುಷಸೂಕ್ತಸುಮೇಯ**

ಜ್ಞಾನಕ್ಕೆ ಆನಂದಕ್ಕೆ ಕಣ್ಣುಕೈಕಾಲು ಇರುವುದುಂಟೆ? ಎನ್ನಬಾರದು ಜ್ಞಾನಆನಂದಗಳು ಎರಡು ಬಗೆಯವು ಪ್ರಾಕೃತವಾದ ಜಡವಾದ ಅಂತಃಕರಣದಲ್ಲಿ ಮೂಡುವವುಗಳು ಮತ್ತು ಚೇತನಸ್ವರೂಪದಲ್ಲಿಯೆ ಇರುವವುಗಳು, ಎಂದು ಜಡವಾದವುಗಳಿಗೆ ಕಣ್ಣು ಕೈಕಾಲು ಮುಂತಾದ ಆಕಾರವಿಲ್ಲದಿದ್ದರೂ ಚೇತನಸ್ವರೂಪಭೂತ ಜ್ಞಾನಾನಂದಗಳಿಗೆ ಆಕಾರ ಉಂಟು ಇದು ಪುರುಷಸೂಕ್ತಮಂತ್ರದ ಆಧಾರದಿಂದ 'ಸು' ಚೆನ್ನಾಗಿ 'ಮೇಯ'

ಅನುಮೇಯ, ಊಹಿಸಿ ತಿಳಿಯಲು ಸಾಧ್ಯ ಏಕೆಂದರೆ 'ಸಹಸ್ರಶೀರ್ಷಾ ಪುರುಷಃ ಸಹಸ್ರಾ-ಕ್ಷಃ ಸಹಸ್ರಪಾತ್' ಪುರುಷನಿಗೆ ಸಾವಿರಾರು ತಲೆಕಣ್ಣುಕಾಲುಗಳೆಂದು ಬಣ್ಣಿಸಿದ ಪುರುಷ ಸೂಕ್ತವೆ, 'ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠತ್' ಎಂದಿದೆ 'ಭೂಮಿ' ಎಂದರೆ ಪ್ರಕೃತಿ ಪ್ರಕೃತಿಯ ಆಚೆ ಇದ್ದಾನೆ ಪ್ರಕೃತಿಯಿಂದಾದ ಶರೀರವಿಲ್ಲ ಎಂದರ್ಥ ಅರ್ಥಾತ್ ಅಪ್ರಾಕೃತವಾದ ಜ್ಞಾನಾನಂದಮಯವಾದ ಶರೀರವಿದೆ ಎಂದು ತಾನೆ ಹೇಳಿದಂತಾಗುತ್ತದೆ? 'ಆದಿತ್ಯವರ್ಣಂ ತಮಸಃ ಪರಸ್ತಾತ್' 'ಅಪ್ರಾಕೃತವಾದ ಉದಿಸುವ ಸೂರ್ಯನಂಥ ಹೊಂಬಣ್ಣವಿದೆ' ಎಂದರೆ ಏನರ್ಥ? ಅಪ್ರಾಕೃತ ಬಣ್ಣವಿರಬೇಕೆಂದರೆ ಅಪ್ರಾಕೃತ ಶರೀರ-ವಿರಬೇಕು ತಾನೆ? ಹೀಗೆ ಜ್ಞಾನಾನಂದಮಯವಾದ ಶರೀರವನ್ನು ಊಹಿಸಿ ತಿಳಿಯುವುದು ಸುಲಭವೇ ಇದೆ

ಹಿಂದೆ ಹೇಳಿದ ಎಲ್ಲ ಮಹಿಮೆಗಳೂ ಪುರುಷಸೂಕ್ತದಿಂದ 'ಸು' ಚೆನ್ನಾಗಿ 'ಮೇಯ' ತಿಳಿದುಬರುತ್ತದೆ 'ವಿರಾಜೋ ಅಧಿ ಪೂರುಷಃ' 'ಅತೋ ಜ್ಯಾಯಾಂಶ್ಚ ಪೂರುಷಃ' ಎಂದು ಸಹಸ್ರಶೀರ್ಷನಾದ ಪುರುಷನನ್ನು ಪುರುಷೋತ್ತಮನೆಂದು ಹೊಗಳಿದೆ 'ಯಜ್ಞೇನ ಯಜ್ಞಮಯಜಂತ ದೇವಾಃ' ಎಂದು ಕ್ಷರಾಕ್ಷರ ಪುರುಷರೆನಿಸಿದ ದೇವತೆಗಳು ಈ ಪುರುಷನ ಪಾದಸೇವೆ ಮಾಡುವುದನ್ನೂ ಹೇಳಿದೆ

ಸಹಸ್ರಶೀರ್ಷನಾಗಿ ಬ್ರಹ್ಮಾಂಡವನ್ನು ವ್ಯಾಪಿಸಿದ ಹರಿಯೆ ತನ್ನ ಅಚಿಂತ್ಯಶಕ್ತಿಯಿಂದ 'ದಶಾಂಗುಲ' ವಾದ ಅಂದರೆ ಚೋಟುದ್ದದ ಹೃದಯದಲ್ಲಿ ಸಣ್ಣವನಾಗಿಯೂ ಇರುತ್ತಾನೆ ಎನ್ನುತ್ತದೆ, ಪುರುಷಸೂಕ್ತ ಈ ಹೇಳಿಕೆಗೆ ವಾಮನನ ತ್ರಿವಿಕ್ರಮರೂಪವು ನಿದರ್ಶನವಾಗ-ಬಲ್ಲುದು ಪುಟ್ಟ ವಾಮನಮೂರ್ತಿಯೆ ಅರೆಕ್ಷಣದಲ್ಲಿ ತ್ರಿವಿಕ್ರಮನಾಗಿ ಬ್ರಹ್ಮಾಂಡವನ್ನು ವ್ಯಾಪಿಸಿ ನಿಂತ ತಾನೆ ಆ ವಿರಾಟ್ ಪುರುಷ ಎಂಬುದನ್ನು ಪ್ರತ್ಯಕ್ಷ ತೋರಿಸಿದ ಗಂಗೆಯನ್ನು ಪಡೆದು ಕ್ಷರಪುರುಷರಲ್ಲೆಲ್ಲ ಶ್ರೇಷ್ಠನಾದ ಬ್ರಹ್ಮನಿಂದ ಕಾಲು ತೊಳೆಸಿಕೊಂಡ ಆ ಪಾದೋ-ದಕವನ್ನು ಮೂಲೋಕದ ಎಲ್ಲ ಸಜ್ಜನರೂ ತಲೆಯಲ್ಲಿ ಧರಿಸಿದರು ಅದರಿಂದ ಕ್ಷರಾಕ್ಷರ-ಪುರುಷಪೂಜಿತವಾದನೆನಿಸಿದ ಹೀಗೆ ಗಂಗಾಜನಕನಾದ ಪರಮಪುರುಷನಾದ ಹರಿ ಪುರುಷಸೂಕ್ತಸುಮೇಯನಾದ್ದರಿಂದ ಇಂದಿಗೂ ನಾವು ಹರಿಗೆ ಅಭಿಷೇಕ ಮಾಡುವಾಗ ಪುರುಷಸೂಕ್ತ ಪಠಿಸುತ್ತೇವೆ ಅಭಿಷೇಕ ಮಾತ್ರವಲ್ಲದೆ ಷೋಡಶೋಪಚಾರಗಳನ್ನೂ ಪುರುಷಸೂಕ್ತದ ಷೋಡಶ ಋಚೆಗಳಿಂದ ಅರ್ಪಿಸುತ್ತೇವೆ

***ತತ್ತತ್‌ಪುರುಷಹೃತ್ಪುಷ್ಕರನಿಲಯ***

ಹೃತ್ಪುಷ್ಕರ ಎಂದರೆ ಹೃದಯಕಮಲ ಪುರುಷಸೂಕ್ತಸುಮೇಯನು ಕೇವಲ ಬ್ರಹ್ಮಾಂ-ಡವ್ಯಾಪಿ ಪುರುಷನೆನ್ನಕೂಡದು 'ಅತ್ಯತಿಷ್ಠದ್ ದಶಾಂಗುಲಮ್' ಎಂಬುದರಿಂದ ದಶಾಂ-ಗುಲಪರಿಮಿತ ಹೃದಯದಲ್ಲಿಯೂ ಆತ ಅಧಿಷ್ಠಿತನೆಂದು ಪುರುಷಸೂಕ್ತ ಹೇಳುತ್ತಿದೆ ಇದರಿಂದ ಆಕಾಶಾದಿಗಳಂತೆ ಪರಮಾತ್ಮನೂ ಎಲ್ಲೆಡೆ ವ್ಯಾಪಿಸಿದ ಮಾತ್ರಕ್ಕೆ ಏನು ಮಹತ್ವ

ಬಂದಿತೆಂಬ ಶಂಕೆಗೆ ಉತ್ತರವಾಗಿ ಪರಮಾತ್ಮ ಅನಂತ ಸೂಕ್ಷ್ಮರೂಪಗಳಿಂದಲೂ ನಿಯಾಮಕನಾಗಿ ಎಲ್ಲೆಡೆ ವ್ಯಾಪಿಸಿದ್ದಾನೆ ಎನ್ನುವುದು ವಿಶೇಷ- ವೆಂದು ಹೇಳಿದಂತಾಯಿತು

**ಮಹಪುರುಷ**

ಮಹಾಪೌರುಷಶಾಲಿಯಾದ್ದರಿಂದ ಶ್ರೀಹರಿ ಮಹಾಪುರುಷ. ಸರ್ವಶಕ್ತನಾದ ಅವನಿಗೆ ಹೋಲಿಸಿದರೆ ಬ್ರಹ್ಮಾದಿಗಳೆಲ್ಲರೂ ಕೇವಲ ಅಬಲೆಯರು, ಸ್ತ್ರೀಯರು ಎನ್ನಬೇಕು ವಿಷ್ಣುಪುರಾಣ ಹಾಗೇ ಹೇಳಿದೆ

ಸ ಏವ ವಾಸುದೇವೋಽಯಂ ಸಾಕ್ಷಾತ್ ಪುರುಷ ಉಚ್ಯತೇ ।
ಸ್ತ್ರೀಪ್ರಾಯಮಿತರತ್ ಸರ್ವಂ ಜಗದ್ ಬ್ರಹ್ಮಪುರಃಸರಮ್ ॥

**ಅಜಾಂಡಾಂತರದಿ ಬಹಿರದಿ ವ್ಯಾಪ್ತ**

ಪುರುಷರಿಗೆ ಪುರುಷ ಮಹಾಪುರುಷನಾದ ಶ್ರೀಹರಿ ಸ್ತ್ರೀಯರಲ್ಲಿ ಸ್ತ್ರೀರೂಪದಿಂದ ಇರುವುದು ಶಕ್ಯವೆ? ಸಾಧಾರಣ ಪುರುಷರಲ್ಲಿ ಕೆಲವು ಸ್ತ್ರೀಲಕ್ಷಣಗಳು ಕಂಡುಬಂದರೆ ಅಸಂಭವವೆನಿಸಲಾರದು ಆದರೆ ಮಹಾಪುರುಷನಲ್ಲಿ ಅದು ಅಸಂಭವ ಎಂಬ ಶಂಕೆ ಬಂದರೆ 'ಅಜಾಂಡ'ದ ಬ್ರಹ್ಮಾಂಡದ ಅಂತರದಿ ಬಹಿರದಿ ಒಳಗೆ ಹೊರಗೆ ಎಲ್ಲೆಡೆ ಇದ್ದಾನೆ ಎಂದಿದೆ ಅಂದರೆ ಚೇತನರ ಹೃದಯಕಮಲಗಳಲ್ಲಿ ಮಾತ್ರವಲ್ಲದೆ ಜಡವಾದ ಅಣು-ರೇಣುತೃಣಕಾಷ್ಠಗಳಲ್ಲಿಯೂ ಬೆಂಕಿ ನೀರು ಗಾಳಿಗಳಲ್ಲಿಯೂ ಆಯಾ ರೂಪಗಳಿಂದ ನೆಲೆಸಿದ್ದಾನೆ 'ಚೇತನಶ್ಚೇತನಾನಾಂ' ಎಂಬಂತೆ ಪರಮಚೇತನ ಹರಿ ಚೇತನ- ಗಳಿಗೆ ಚೇತನನೆನಿಸಿದವನಾದರೂ ಜಡಪದಾರ್ಥಗಳಲ್ಲಿ ಕೇವಲ ಜಡ ಆಕಾರದಲ್ಲಿರುತ್ತಾನೆ ಎಂದರೆ ಅಂಥ ಅಚಿಂತ್ಯ ಶಕ್ತಿಯವನು ಸ್ತ್ರೀಯರಲ್ಲಿ ಸ್ತ್ರೀರೂಪದಿಂದ ಇರಲಾರನೆ? ಎಂಬ ಅಭಿಪ್ರಾಯದಿಂದ 'ಬ್ರಹ್ಮಾಂಡದ ಒಳಗೆ ಜಡವಾದ ಕಲ್ಲು ಮಣ್ಣು ನೀರು ಬೆಂಕಿ ಗಾಳಿಗಳಲ್ಲಿ ಅವೇ ರೂಪಗಳಿಂದ ಇರುವುದು ಮಾತ್ರವಲ್ಲ ಬ್ರಹ್ಮಾಂಡದ ಹೊರಗೆ ಅವ್ಯಾಕೃತಾಕಾಶ-ದಲ್ಲಿಯೂ ಅಪರಿಮಿತವಾಗಿ ವ್ಯಾಪಿಸಿದ್ದಾನೆ' ಎಂದಿದೆ 'ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠತ್ ದಶಾಂಗುಲಮ್' ಎಂಬ ಮಂತ್ರಕ್ಕೆ ಇದೂ ಇನ್ನೊಂದು ಅರ್ಥ

**ನಿರ್ಲಿಪ್ತ**

ಹರಿ ಪುರುಷರಲ್ಲಿ ಪುರುಷರೂಪದಿಂದ ಸ್ತ್ರೀಯರಲ್ಲಿ ಸ್ತ್ರೀರೂಪದಿಂದ ಇದ್ದರೂ ಪುರುಷರಲ್ಲಿ ಕಾಣಬಹುದಾದ ಗಡಸುತನ ಮುಂತಾದ ದೋಷಗಳೂ ಸ್ತ್ರೀಯರಲ್ಲಿ ಕಾಣ-ಬಹುದಾದ ದೌರ್ಬಲ್ಯ ಮುಂತಾದವೂ ಹರಿಯಲ್ಲಿ ಕಂಡುಬರಲಾರವು ಸ್ತ್ರೀಪುರುಷರ ಉತ್ತಮ ಗುಣಗಳು ಮಾತ್ರ ಅವನಲ್ಲಿ ಇರುತ್ತವೆ ಅವು ಅವನ ಸ್ವಭಾವಭೂತವಾದವು ಹೊರತು ಸ್ತ್ರೀಪುರುಷರ ಗುಣದೋಷಗಳ ಲೇಪ ಅವನಿಗಿಲ್ಲ ಚೇತನರ ಜನನ-

ಮರಣಗಳು ಪುಣ್ಯಪಾಪಗಳು ಯಾವುವೂ ಅವನಿಗೆ ಅಂಟುಕೊಳ್ಳುವುದಿಲ್ಲ ಹೀಗೆ ಎಲ್ಲೆಡೆ ಇದ್ದೂ ಇಲ್ಲದಂತೆ ನಿರ್ಲಿಪ್ತನಾಗಿ ವ್ಯಾಪ್ತನಾಗಿರುವುದೇ ಹರಿಯ ವೈಶಿಷ್ಟ್ಯ

**ಸ್ತ್ರೀನಪುಂಸಕ ಪುರುಷ ಭೂ ಸಲಿ-**
**ಲಾನಲಾನಿಲ ಗಗನ ಮನ ಶಶಿ**
**ಭಾನು ಕಾಲ ಗುಣ ಪ್ರಕೃತಿಯೊಳಗೊಂದು ತಾನಲ್ಲ।**
**ಏನು ಇವನ ಮಹಾಮಹಿಮೆ ಕಡೆ-**
**ಗಾಣರಜಭವಶಕ್ರಮುಖರು ನಿ-**
**ಧಾನಿಸಲು ಮಾನವರಿಗಳವಡುವುದೆ ವಿಚಾರಿಸಲು ॥ ೨ ॥**

ಶ್ರೀಹರಿಯು ಸ್ತ್ರೀ, ನಪುಂಸಕ, ಪುರುಷ, ಭೂಮಿ, ಜಲ, ಬೆಂಕಿ, ಗಾಳಿ, ಆಕಾಶ, ಮನಸ್ಸು, ಚಂದ್ರ, ಸೂರ್ಯ, ಕಾಲ, ಗುಣ, ಪ್ರಕೃತಿಯೊಳಗೆ ಇದ್ದಾನೆ ಆದರೆ ಅವು ಒಂದೂ ತಾನಲ್ಲ ಏನು ಇವನ ಮಹಾಮಹಿಮೆ! ಬ್ರಹ್ಮರುದ್ರಇಂದ್ರಾದಿಗಳೂ ಕೊನೆ-ಗಾಣರು ಅದರಿಂದ ಎಷ್ಟು ನಿಧಾನಿಸಿ ನೋಡಿದರೂ ಮಾನವರಿಗೆ ಅವನ ಮಹಿಮೆ ವಿಚಾರಿಸಲು ಅಳವಡುವುದೆ?

**ಜೀವೇಶ್ವರಭೇದ-ಜಡೇಶ್ವರ ಭೇದ**

ಪರಬ್ರಹ್ಮನು ಪ್ರಪಂಚದಲ್ಲಿ ಎಲ್ಲೆಡೆ ವ್ಯಾಪಿಸಿದ್ದಾನೆ ಎನ್ನುವ ಮಾತಿಗೆ ಕೆಲವರು ವಿವರಣೆ ಕೊಡುತ್ತಾರೆ 'ಪರಬ್ರಹ್ಮ ಜೀವರಲ್ಲಿ ಜೀವರೂಪನಾಗಿ ಜಡದಲ್ಲಿ ಜಡರೂಪನಾಗಿ ವ್ಯಾಪಿಸಿದ್ದಾನೆ, ಮಣ್ಣಿನ ಮಡಕೆಯಲ್ಲಿ ಮಣ್ಣೇ ವ್ಯಾಪಿಸಿರುವಂತೆ ಮಣ್ಣು ಮಡಕೆಗಳು ಹೇಗೆ ಬೇರೆಯಲ್ಲವೋ, ಮಣ್ಣೇ ಮಡಕೆಯಾಗಿ ಹೇಗೆ ಪರಿಣಮಿಸುತ್ತದೋ ಹಾಗೇ ಪರಬ್ರಹ್ಮ ಜಡಜೀವರೂಪನಾಗಿ ಪರಿಣಮಿಸುತ್ತಾನೆ' ಎಂದು

ಆದರೆ ಭಾಗವತ ಅಷ್ಟಮಸ್ಕಂಧದ ಗಜೇಂದ್ರಸ್ತೋತ್ರದಲ್ಲಿ—

ನ ವೈ ನ ದೇವಾಸುರಮರ್ತ್ಯತಿರ್ಯಜ್
ನ ಸ್ತ್ರೀ ನ ಷಂಡೋ ನ ಪುಮಾನ್ನ ಜಂತುಃ।
ನಾಯಂ ಗುಣಃ ಕರ್ಮ ನ ಸನ್ನಚಾಸನ್
ನಿಷೇಧಶೇಷೋ ಜಯತಾದಶೇಷಃ ॥

'ಶ್ರೀಹರಿ, ದೇವ, ಅಸುರ, ಮನುಷ್ಯ, ಪ್ರಾಣಿ, ಸ್ತ್ರೀ, ನಪುಂಸಕ, ಪುರುಷ ಮುಂತಾದ ಯಾವ ಜಂತುವೂ ಅಲ್ಲ ಗುಣಕರ್ಮರೂಪನೂ ಅಲ್ಲ, ಪೃಥಿವಿ ಅಪ್ ಮುಂತಾದ ಪಂಚ-ಭೂತಸ್ವರೂಪನೂ ಅಲ್ಲ ಹೀಗೆ ಪೂರ್ಣನಾದ ಶ್ರೀಹರಿ ಅಪೂರ್ಣವಾದ ಈ ವಸ್ತು ಒಂದೂ ಅಲ್ಲ' ಎಂದು ಹೇಳಿದೆ

ಭಾಗವತತಾತ್ಪರ್ಯದಲ್ಲಿ ಹೇಳಿದ ಪದ್ಮಪುರಾಣವಚನವೂ ಹೀಗಿದೆ—

ಕಾಲೋ ವಸ್ತುಸ್ವಭಾವಶ್ಚ ಪ್ರಕೃತಿಃ ಪ್ರಾಣ ಏವ ಚ ।
ಮನಶ್ಚ ಪಂಚಭೂತಾನಿ ವಿಕಾರಸ್ತ್ರಿಗುಣಾ ಅಪಿ ॥
ನ ಸ್ವರೂಪಂ ಹರೇರೇತತ್ ತಥಾಪ್ಯೇಷು ಹರಿಃ ಸ್ಥಿತಃ ॥

'ಕಾಲ, ವಸ್ತುಗಳ ಸ್ವಭಾವ, ಪ್ರಕೃತಿ, ಮುಖ್ಯಪ್ರಾಣ, ಮನಸ್ಸು ಪಂಚಭೂತಗಳು, ಬ್ರಹ್ಮಾಂಡ ಮತ್ತು ತ್ರಿಗುಣಗಳು ಯಾವುವೂ ಹರಿಯ ಸ್ವರೂಪವಲ್ಲ ಆದರೂ ಈ ಕಾಲಾದಿಗಳಲ್ಲಿಯೂ ಕಾಲಾದ್ಯಭಿಮಾನಿಗಳಲ್ಲಿಯೂ ಹರಿಯ ವಿಶೇಷ ಸನ್ನಿಧಾನವಿದೆ' ಹೀಗೆ ಜೀವಜಡ-ಗಳಲ್ಲಿರುವ ಹರಿಗೆ ಜೀವಜಡರಿಂದ ಭೇದವು ಇದೆ

**ಶ್ರೀಹರಿಯ ಮಹಾಮಹಿಮೆ**

ಶ್ರೀಹರಿ ಜೀವಜಡದಲ್ಲಿ ಇರುತ್ತಾನೆ ಅವುಗಳಿಗಿಂತ ಬೇರೆಯಾಗಿದ್ದಾನೆ ಎಂದರೆ ಅದೇನು ಮಹಾಮಹಿಮೆ? ಬ್ರಹ್ಮರುದ್ರಇಂದ್ರಾದಿ ದೇವತೆಗಳೂ ಅದನ್ನು ಅರಿಯರೆನ್ನು-ವುದು ಹೇಗೆ? ಎಂಬ ಪ್ರಶ್ನೆ ಸಹಜ ಆದರೆ ಶ್ರೀಹರಿ ಜೀವಜಡಗಳಲ್ಲಿ ಜೀವ, ಜಡ ಆಕಾರನಾಗೇ ಪ್ರವೇಶಿಸುತ್ತಾನೆ ಅಂದರೆ ಸ್ತ್ರೀಯಲ್ಲಿ ಸ್ತ್ರೀಯಾಗಿ, ಪುರುಷನಲ್ಲಿ ಪುರುಷನಾಗಿ, ಜಡದಲ್ಲಿ ಜಡಾಕಾರನಾಗಿ ಪ್ರವೇಶಿಸುತ್ತಾನೆ! ಇದನ್ನು ತಿಳಿಯುವುದು ಬಲು ಕಷ್ಟ ನಮ್ಮ ಕಲ್ಪನೆಗೆ ನಿಲುಕದು, ಏಕೆ, ಬ್ರಹ್ಮರುದ್ರಾದಿಗಳಿಗೂ ಪೂರ್ತಿ ತಿಳಿಯಲಾಗದು

ಮಾಂ ತು ವೇದ ನ ಕಶ್ಚನ

ಎಂಬ ಮಾತಿಗೆ ಗೀತಾವಿವೃತಿಯಲ್ಲಿ 'ಬ್ರಹ್ಮಾದಿರತಿಶಕ್ತೋಽಪಿ ಕಿಂಚಿದೇವ ವೇತ್ತಿ ನ ಸರ್ವಥೇತಿ ಭಾವಃ' 'ಬ್ರಹ್ಮಾದಿಗಳು ಅತ್ಯಂತ ಸಮರ್ಥರಾದರೂ ಭಗವಂತನ ಮಹಿಮೆ-ಯನ್ನು ಸ್ವಲ್ಪವೇ ತಿಳಿಯಬಲ್ಲರು, ಪೂರ್ತಿಯಲ್ಲ' ಎಂದಿದೆ

**ಶ್ರೀಹರಿಗೆ ಸ್ತ್ರೀರೂಪ ಉಂಟೆ?**

'ನೈನಂ ವಾಚಾ ಸ್ತ್ರಿಯಂ ಬ್ರುವನ್'

'ಭಗವಂತನನ್ನು ಸ್ತ್ರೀ ಎನ್ನುವವನು ಸಮರ್ಪಕವಾಗಿ ಹೇಳುತ್ತಿಲ್ಲ' ಎಂದು ಐತರೇಯೋ-ಪನಿಷತ್ತು ಹೇಳಿದ ಮಾತ್ರಕ್ಕೇ 'ಆತ ಸ್ತ್ರೀಯಲ್ಲ ಪುರುಷನೆಂ'ದೂ ಹೇಳುವಂತಿಲ್ಲ, ಏಕೆಂದರೆ,

ಪುಮಾಂಸಂ ನ ಬ್ರುವನ್ನೇನಂ ವದನ್ ವದತಿ ಕಶ್ಚನ

'ಹರಿಯನ್ನು ಪುರುಷನೆನ್ನುವವನೂ ಸಮರ್ಪಕವಾಗಿ ಹೇಳುತ್ತಿಲ್ಲ' ಎಂದೂ ಅದೇ ಉಪ-ನಿಷತ್ತು ಹೇಳುತ್ತದೆ. ಹಾಗಾದರೆ ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ, ನಪುಂಸಕ ಎನ್ನೋಣ! ತತ್ ಸತ್ ಬ್ರಹ್ಮ ಎಂದು ಮುಂತಾಗಿ ನಪುಂಸಕಲಿಂಗದ ಶಬ್ದಗಳೇ ವೇದ, ಉಪನಿಷತ್ತು ಬ್ರಹ್ಮಸೂತ್ರಗಳಲ್ಲಿ ಮುಖ್ಯವಾಗಿ ಕಾಣುತ್ತವೆ! ಎಂದರೆ ಇದನ್ನೂ ಉಪನಿಷತ್ತು ಒಪ್ಪುವುದಿಲ್ಲ—

ನೈನಮಸ್ತ್ರೀಪುಮಾನ್ ಬ್ರುವನ್
'ಹರಿಯನ್ನು ಸ್ತ್ರೀಯೂ ಅಲ್ಲದ ಪುರುಷನೂ ಅಲ್ಲದ ನಪುಂಸಕ ಎನ್ನುವವನೂ ಸಮರ್ಥಕವಾಗಿ ಹೇಳುತ್ತಿಲ್ಲ' ಎನ್ನುತ್ತಿದೆ ಹಾಗಾದರೆ ನಿರಾಕಾರನೆನ್ನೋಣ ನಿರಾಕಾರನಾದ ಭಗವಂತನನ್ನು ಗಂಡೋ, ಹೆಣ್ಣೋ, ನಪುಂಸಕನೋ ಎಂದು ಸುಮ್ಮನೆ ವಾದವಿವಾದಗಳಿಗೆ ಏಕೆ ಗುರಿಮಾಡಬೇಕು? ಎಂದರೆ ಈ ವಾದವನ್ನೂ ವೇದ ಒಪ್ಪುತ್ತಿಲ್ಲ

ಸ್ತ್ರಿಯಃ ಸತೀಸ್ತಾ ಉಭೇ ಪುಂಸ ಆಹುಃ
'ಹರಿ ಸ್ತ್ರೀಯೂ ಹೌದು ಪುರುಷನೂ ಹೌದು!' ಎಂದು ವೇದ ಹೇಳುತ್ತಿದ್ದೆ 'ಸಹಸ್ರಶೀರ್ಷಾ ಪುರುಷಃ' ಸಾವಿರ ತಲೆ ಉಳ್ಳವ ಪುರುಷ ಎನ್ನುತ್ತ ನಿರಾಕಾರವಾದವನ್ನೂ ತಳ್ಳಿಹಾಕುತ್ತಿದೆ

ಆದ್ದರಿಂದ ಉಪನಿಷತ್ತಿಗೆ ಹೀಗೆ ಅರ್ಥ ಹೇಳಬೇಕು 'ಭಗವಂತ ಸ್ತ್ರೀ ಎನ್ನುವವನು ಸಮರ್ಥಕವಾಗಿ ಹೇಳುತ್ತಿಲ್ಲ ಎಂದರೆ ಭಗವಂತ ಕೇವಲ ಸ್ತ್ರೀಯಲ್ಲ ಪುರುಷನೂ ಆಗಿದ್ದಾನೆ ಮತ್ತು ಲೌಕಿಕ ಸಾಧಾರಣ ಸ್ತ್ರೀಯಂತೆ ಅಲ್ಲ, ಅಸಾಧಾರಣ ಸ್ತ್ರೀಯಾಗಿದ್ದಾನೆ ಎಂದರ್ಥ ಹಾಗೇ ಭಗವಂತ ಪುರುಷ ಎನ್ನುವವನು ಸಮರ್ಥಕವಾಗಿ ಹೇಳುತ್ತಿಲ್ಲ ಎಂದರೆ ಭಗವಂತ ಕೇವಲ ಪುರುಷನಲ್ಲ ಸ್ತ್ರೀಯೂ ಆಗಿದ್ದಾನೆ ಮತ್ತು ಲೌಕಿಕ ಸಾಧಾರಣ ಪುರುಷನಲ್ಲ, ಅಲೌಕಿಕ ಅಸಾಧಾರಣ ಪುರುಷನಾಗಿದ್ದಾನೆ ಎಂದರ್ಥ ಭಗವಂತ ನಪುಂಸಕ ಎನ್ನುವವನು ಸಮರ್ಥಕವಾಗಿ ಹೇಳುತ್ತಿಲ್ಲ ಎಂದರೆ ಭಗವಂತನಿಗೆ ನಪುಂಸಕ ರೂಪವೆ ಇಲ್ಲ, ಅದರಿಂದ ಅಸಮರ್ಥಕ ಎಂದೇ ಅರ್ಥ

**ಭಗವಂತ ನಪುಂಸಕನಲ್ಲ**

ಭಗವಂತನಲ್ಲಿ ಸರ್ವಶಬ್ದಸಮನ್ವಯ ಮಾಡಬೇಕಾಗಿರುವುದರಿಂದ ಸ್ತ್ರೀಲಿಂಗ ಶಬ್ದಗಳ ಸಮನ್ವಯಕ್ಕಾಗಿ ಸ್ತ್ರೀರೂಪವನ್ನೂ ಪುಲ್ಲಿಂಗಶಬ್ದಸಮನ್ವಯಕ್ಕಾಗಿ ಪುರುಷರೂಪ- ಗಳನ್ನೂ ಒಪ್ಪುವುದಾದರೆ ನಪುಂಸಕಶಬ್ದಸಮನ್ವಯಕ್ಕಾಗಿ ನಪುಂಸಕರೂಪಗಳನ್ನೂ, ಒಪ್ಪಬೇಕಾಗುತ್ತದೆ ಎಂಬ ಆಕ್ಷೇಪಕ್ಕೆ ಅವಕಾಶ ಉಂಟು

ಸ್ತ್ರೀನಪುಂಸಕಪುರುಷಭೂಸಲಿಲಾನಲಾನಿಲ
ಎಂದು ಮುಂತಾಗಿ ಎಲ್ಲೆಡೆ ಆಯಾ ರೂಪದಿಂದ ಪ್ರವೇಶಿಸುವುದು ಹರಿಯ ಮಹಾಮಹಿಮೆ ಎಂದಮೇಲೆ ನಪುಂಸಕನಲ್ಲಿ ನಪುಂಸಕರೂಪದಿಂದಲೆ ಹರಿ ಪ್ರವೇಶಿಸಬೇಕು ತಾನೆ? ಅದರಿಂದಲೂ ಹರಿಗೆ ನಪುಂಸಕ ರೂಪ ಒಪ್ಪಬೇಕೆಂಬ ಆಕ್ಷೇಪ ಬರುತ್ತದೆ ಆದರೆ ಐತರೇಯ ಭಾಷ್ಯದಲ್ಲಿ ಹೇಳಿದ ಪ್ರಕಾರ ಹರಿಗೆ ನಪುಂಸಕ ರೂಪವಿಲ್ಲ ಇದೆ ಎನ್ನಲೂ ಯಾವ ಪ್ರಮಾಣವೂ ಇಲ್ಲ ನಪುಂಸಕ ಶಬ್ದದಿಂದ ಕರೆದ ಮಾತ್ರಕ್ಕೆ ನಪುಂಸಕತ್ವ ಬರುವುದಿಲ್ಲ ಸಂಸ್ಕೃತದಲ್ಲಿ ಪುಲ್ಲಿಂಗ ರಾಕ್ಷಸ ಶಬ್ದಕ್ಕೆ ಸಮಾನಾರ್ಥಕವಾದ 'ರಕ್ಷಸ್' ಎಂಬ ನಪುಂಸಕ ಲಿಂಗದ ಶಬ್ದವೂ ಇದೆ ರಾವಣನನ್ನು 'ರಕ್ಷಸ್' ಶಬ್ದದಿಂದಲೂ ರಾಮಾಯಣದಲ್ಲಿ

ಅನೇಕ ಕಡೆ ಕರೆದಿದೆ ರಾವಣ ನಪುಂಸಕನೇ? ಅದರಿಂದ ನಪುಂಸಕ ಶಬ್ದಸಮನ್ವಯಕ್ಕಾಗಿ ನಪುಂಸಕತ್ವವನ್ನು ಒಪ್ಪುವುದೂ ಅನಾವಶ್ಯಕ ಲೌಕಿಕ ಸ್ತ್ರೀಪುರುಷರಂತೆ ಅನುರಾಗದ ಸೆಳೆತಕ್ಕೆ ಬಲಿಯಾಗುವವನಲ್ಲ ಎಂಬ ಮಹಿಮೆಯನ್ನು ಹೇಳಲು ನಪುಂಸಕ ಶಬ್ದಗಳಿವೆ

ವಿಷ್ಣೋರ್ನಪುಂಸಕಾಕಾರೋ ನೈವಾಸ್ತಿ ಕ್ವಚನ ಪ್ರಭೋ ।
ತಥಾಪ್ಯರಾಗಾಕೃಷ್ಟತ್ವಾತ್ ತಚ್ಛಬ್ದೈರಪಿ ಕಥ್ಯತೇ ॥

ಎಂದು ಗರುಡಪುರಾಣವಚನ ಇದನ್ನೇ ಹೇಳಿದೆ

ನಪುಂಸಕತ್ವವೆಂಬುದು ಒಂದು ದೋಷ ಅದು ಹರಿಯಲ್ಲಿ ಇಲ್ಲ ಮುಕ್ತಿಯೋಗ್ಯ-ರಾದ ಸಾತ್ವಿಕ ಜೀವರಲ್ಲಿಯೂ ಇಲ್ಲ ಅಯೋಗ್ಯ ಜೀವರಲ್ಲಿ ಆ ದೋಷವಿರಬಹುದು ಆದರೆ ಅವರಲ್ಲಿ ಹರಿ ಸ್ತ್ರೀರೂಪದಿಂದಲೋ ಪುರುಷರೂಪದಿಂದಲೋ ಬಿಂಬಮೂರ್ತಿ-ಯಾಗಿರುತ್ತಾನೆ. ಹೊರತು ನಪುಂಸಕ ರೂಪದಿಂದಲ್ಲ

**ಹರಿಯ ಸ್ತ್ರೀರೂಪಗಳು**

ಅಸುರರು ಬಲಿಷ್ಠರು, ಉನ್ನತವಾದ ಕಶ್ಯಪ ವಂಶಜರು, ವೇದಾಧ್ಯಯನಸಂಪನ್ನರು, ಇಂಥವರೂ ಓರ್ವ ಹೆಣ್ಣಿನ ಕಡೆಗಣ್ಣ ನೋಟಕ್ಕೆ ಬಲಿಯಾಗಿ, ಆಕೆ ತಾನು ಮೋಸಗಾರಳು, ನಂಬಬೇಡಿರೆಂದು ಸಾರಿ ಹೇಳುತ್ತಿದ್ದರೂ ಸಮುದ್ರಮಥನದ ಮುಖ್ಯ ಉದ್ದೇಶವಾಗಿದ್ದು ತಮ್ಮ ಕೈಗೇ ಬಂದಿದ್ದ ಅಮೃತವನ್ನು ಅವಳ ಕೈಗಿತ್ತು ತಮ್ಮ ಶತ್ರುಗಳಾದ ದೇವತೆಗಳಿಗೆ ಸಿಗುವಂತೆ ಮಾಡಿ, ಮುಂದೆ ಅಮೃತಪಾನದಿಂದ ಬಲಿಷ್ಠರಾದ ಆ ದೇವತೆಗಳ ಕೈಯಿಂದ ಹೊಡೆಸಿಕೊಂಡು ದಿಕ್ಕೆಟ್ಟು ಓಡಿದರು ಎಂದು ಎಲ್ಲರೂ ನಗಬೇಕು, ಅಸುರರು ಹೀಗೆ ಬಲು ಹೀನಾಯವಾದ ಸೋಲನ್ನು ಅನುಭವಿಸಬೇಕು ಅವರ ಕೊಬ್ಬಿಗೆ ಶಾಸ್ತಿಯಾಗಬೇಕು ಎಂದು ಹರಿ ಮೋಹಿನಿರೂಪ ತಳೆದ ಅಸುರರನ್ನು ವಂಚಿಸಿ ದೇವತೆಗಳಿಗೆ ಅಮೃತ ಉಣಿಸಿದ ಈ ಮೋಹಿನಿರೂಪ ಎಷ್ಟು ಮೋಹಕವಾಗಿತ್ತೆಂದರೆ ಸಾಕ್ಷಾತ್ ಲಕ್ಷ್ಮಿಯೆ ಕಂಡು ಬೆರಗಾದಳು

ಶ್ವೇತಾಚಲ ಮಾಹಾತ್ಮ್ಯ ಹೇಳುವಂತೆ ಹರಿ ಮೋಹಿನಿರೂಪದಿಂದ ಭಸ್ಮಾಸುರನನ್ನು ನಾಶಪಡಿಸಿ ಶಿವನನ್ನು ಕಾಪಾಡಿದ ಭಾಗವತದಲ್ಲಿ ಬ್ರಹ್ಮಚಾರಿರೂಪವೆಂದಿದೆ ಕಲ್ಪಭೇದ-ದಿಂದ ವಿರೋಧ ಪರಿಹರಿಸಬೇಕು

ಐತರೇಯೋಪನಿಷತ್ತಿನಲ್ಲಿ ಹರಿಯ ಅರ್ಧನಾರೀನಾರಾಯಣರೂಪದ ವರ್ಣನೆ ಇದೆ ನಾರಾಯಣಾದಿ ಪಂಚಪುರುಷರೂಪನು ನಾರಾಯಣಾದಿ ಪಂಚ ಸ್ತ್ರೀರೂಪಗಳಿಂದ ಕೂಡಿ ಅರ್ಧನಾರೀನಾರಾಯಣನಾಗುತ್ತಾನೆ ಅಧಿದೈವದಲ್ಲಿ ದೇವತೆಗಳು ತಮ್ಮ ಪತ್ನಿಯ-ರೊಂದಿಗೆ ಅರ್ಧನಾರೀನರರೂಪದಿಂದ ಬಂದು ಅವನ ರಥವನ್ನು ಕುದುರೆಗಳಾಗಿ ಹೊತ್ತು

ಎಳೆದು ರಥೋತ್ಸವ ನಡೆಸುತ್ತಾರೆ ಅಧ್ಯಾತ್ಮದಲ್ಲಿಯೂ ನಮ್ಮ ಈ ದೇಹವೆ ವಿಷ್ಣುವಿನ ರಥ ಕಣ್ಣುಗಳಲ್ಲಿ ಸೂರ್ಯ, ಸೂರ್ಯಪತ್ನಿಯರು, ಕಿವಿಗಳಲ್ಲಿ ಚಂದ್ರ, ಚಂದ್ರಪತ್ನಿಯರು, ಹೀಗೆ ಎಲ್ಲ ಇಂದ್ರಿಯಾಭಿಮಾನಿಗಳು ಆಯಾ ಇಂದ್ರಿಯಗಳಲ್ಲಿ ತಮ್ಮ ಪತ್ನಿಯರೊಂದಿಗೆ ಅರ್ಧನಾರೀನರರೂಪದಿಂದ ಇದ್ದು ಈ ದೇಹರಥವನ್ನು ಎಳೆಯುತ್ತಾರೆ ಅವರನ್ನು ರಥಕ್ಕೆ ಕಟ್ಟುವ ಹಗ್ಗ ವಾಗಭಿಮಾನಿನಿ ಉಮೆ ಸಾರಥಿ ಮನೋಭಿಮಾನಿ ಮಹಾಬಲಶಾಲಿಯಾದ ಶಿವ ಹರಿವಾಯುಗಳು ರಥವೇರುತ್ತಾರೆ ನಿತ್ಯ ರಥೋತ್ಸವ ನಡೆಯುತ್ತದೆ

ಬೃಹತೀಸಹಸ್ರಮಂತ್ರದಲ್ಲಿ ಮೂವತ್ತಾರು ಸಾವಿರ ಸ್ವರಗಳು ಮೂವತ್ತಾರು ಸಾವಿರ ವ್ಯಂಜನಗಳು ಅವುಗಳಲ್ಲಿ ನಿಯಾಮಕವಾಗಿ ಹರಿಯ ಅಷ್ಟೇ ಪುರುಷರೂಪಗಳೂ ಸ್ತ್ರೀರೂಪಗಳೂ ಇವೆ ಇದೇ ರೀತಿ ಪುರುಷಾಯುಷ್ಯವಾದ ನೂರು ವರ್ಷಗಳಲ್ಲಿ ಮೂವ-ತ್ತಾರು ಸಾವಿರ ಹಗಲುಗಳೂ ಅಷ್ಟೇ ರಾತ್ರಿಗಳೂ ಇವೆ ಅವುಗಳಿಗೆ ಅಭಿಮಾನಿಗಳಾಗಿ ಸೂರ್ಯನ ಅಷ್ಟೇ ರೂಪಗಳೂ ಇವೆ. ಆ ಸೂರ್ಯನ ರೂಪಗಳಲ್ಲಿ ಹರಿಯ ಮೂವತ್ತಾರು ಸಾವಿರ ಪುರುಷ ರೂಪ ಮತ್ತು ಸ್ತ್ರೀರೂಪಗಳಿವೆ ಕೆಲವೊಮ್ಮೆ ವ್ಯಂಜನಾಕ್ಷರಗಳಲ್ಲಿರುವ ಹರಿಯ ಸ್ತ್ರೀರೂಪಗಳು ಹಗಲುಗಳಲ್ಲಿರುವ ಪುರುಷರೂಪಗಳನ್ನೂ, ರಾತ್ರಿಗಳಲ್ಲಿರುವ ಸ್ತ್ರೀರೂಪಗಳು ಸ್ವರಾಕ್ಷರಗಳಲ್ಲಿರುವ ಪುರುಷರೂಪಗಳನ್ನೂ ಸೇರಿ ರಮಿಸುತ್ತವೆ. ಕೆಲವೊಮ್ಮೆ ಹಗಲುಗಳಲ್ಲಿರುವ ಪುರುಷರೂಪಗಳು ರಾತ್ರಿಗಳಲ್ಲಿರುವ ಸ್ತ್ರೀರೂಪಗಳನ್ನೂ, ಸ್ವರಾಕ್ಷರ-ಗಳಲ್ಲಿರುವ ಪುರುಷರೂಪಗಳು ವ್ಯಂಜನಾಕ್ಷರಗಳಲ್ಲಿರುವ ಸ್ತ್ರೀರೂಪಗಳನ್ನೂ ಸೇರಿ ರಮಿಸುತ್ತವೆ ಇನ್ನು ಕೆಲವೊಮ್ಮೆ ಹಗಲಿನ ಪುರುಷ ರೂಪಗಳನ್ನೂ ಸ್ತ್ರೀರೂಪಗಳನ್ನಾಗಿಯೂ ರಾತ್ರಿಯ ಸ್ತ್ರೀರೂಪಗಳನ್ನು ಪುರುಷರೂಪಗಳನ್ನಾಗಿಯೂ ಮಾಡಿ ಪರಸ್ಪರ ಸೇರಿಸಿ ರಮಿಸುತ್ತಾನೆ ಹರಿ ಈ ಎಲ್ಲ ವಿವರಗಳು ಅರ್ಧನಾರೀನಾರಾಯಣತಂತ್ರವೆಂಬ ಗ್ರಂಥದಲ್ಲಿ ಇವೆ ಎನ್ನುತ್ತಾರೆ ಶ್ರೀಮದಾಚಾರ್ಯರು

ಗಾಯತ್ರೀಪ್ರತಿಪಾದ್ಯ ಗಾಯತ್ರೀನಾಮಕ ಪರಮಾತ್ಮನ ಆರು ರೂಪಗಳನ್ನು ಛಾಂದೋಗ್ಯೋಪನಿಷತ್ತಿನಲ್ಲಿ ವರ್ಣಿಸಲಾಗಿದೆ. ಆ ಆರು ರೂಪಗಳಲ್ಲಿ ಸ್ತ್ರೀರೂಪವಾದ ಹಯಗ್ರೀವಮೂರ್ತಿ ಮೊದಲನೆಯದು ಭೂತನಾಮಕವಾದ ಮತ್ಸ್ಯಾದಿ ಅವತಾರ ಎರ-ಡನೆಯದು ವಾಕ್ಕಿನಲ್ಲಿರುವ ಸ್ತ್ರೀರೂಪ ಹಯಗ್ರೀವ ಮೂರ್ತಿ ಮೂರನೆಯದು ಪೃಥ್ವಿ-ಯಲ್ಲಿರುವ ಪೀತವರ್ಣದ ಸ್ತ್ರೀರೂಪ ನಾಲ್ಕನೆಯದು. ಜೀವರಲ್ಲಿ ವ್ಯಾಪ್ತನಾದ ಶರೀರ-ನಾಮಕ ರೂಪ ಐದನೆಯದು ಜೀವರ ಹೃದಯದಲ್ಲಿ ಹೃದಯನಾಮಕವಾಗಿರುವ ರೂಪ ಆರನೆಯದು

ಎಲ್ಲ ಸ್ತ್ರೀಜೀವರಲ್ಲಿ ಬಿಂಬಮೂರ್ತಿಯಾಗಿ ಸ್ತ್ರೀರೂಪದಿಂದಲೂ ಎಲ್ಲ ಪುರುಷರಲ್ಲಿ ಬಿಂಬಮೂರ್ತಿಯಾಗಿ ಪುರುಷರೂಪದಿಂದಲೂ ಹರಿ ಇದ್ದಾನೆ

ಎಲ್ಲ ಸ್ತ್ರೀಲಿಂಗಗಳ ಶಬ್ದಗಳೂ ಸ್ತ್ರೀರೂಪಿಯಾದ ಹರಿಯ ನಾಮಗಳು ಎಲ್ಲ ಪುಲ್ಲಿಂಗಶಬ್ದಗಳೂ ಪುರುಷರೂಪನಾದ ಹರಿಯ ನಾಮಗಳು

**ಜಡದಲ್ಲಿ ಜಡರೂಪನಾಗಿ ಭಗವಂತ**

ಬ್ರಹ್ಮಾದಿ ಜೀವರೊಳಗೆ ಅವರ ಬಿಂಬಮೂರ್ತಿಯಾಗಿ ಭಗವಂತನಿರುವಂತೆ ಮಹ-ದಾದಿ ಜಡತತ್ವಗಳೊಳಗೂ ಅವುಗಳ ಬಿಂಬಮೂರ್ತಿಯಾಗಿ ಅವನಿರುತ್ತಾನೆ ಅಂದರೆ, ಜಡರೂಪದಿಂದಿರುತ್ತಾನೆ, ಪೃಧಿವೀತತ್ವದಲ್ಲಿ ಪೃಧಿವೀರೂಪದಿಂದ, ಅಪ್‌ತತ್ವ- ದಲ್ಲಿ ಅಪ್‌ರೂಪದಿಂದ ಇತ್ಯಾದಿ ಈ ರೂಪಗಳು ಹರಿಯ ಸ್ವರೂಪಭೂತವಾಗಿದ್ದು ಆಯಾ ಜಡತತ್ವಗಳ ಆಕಾರದಲ್ಲಿ ಅವೇ ಹೆಸರುಗಳಿಂದ ಇರುತ್ತವೆ ಆದರೆ ಜ್ಞಾನಾನಂದ-ಮಯವಾಗೇ ಇರುತ್ತವೆ ಹಾಗೇ ವರ್ಣಗಳು ಕಾಲ, ಅವ್ಯಾಕೃತಾಕಾಶ ಇವುಗಳೊಳಗೂ ಚಿನ್ಮಯ ವರ್ಣಕಾಲ ಅವ್ಯಾಕೃತಾಕಾಶರೂಪದಿಂದ ಬಿಂಬಮೂರ್ತಿಯಾಗಿ ಇರುತ್ತಾನೆ, ಸರ್ವಂ ವಿಷ್ಣುಮಯಂ ಜಗತ್!

**ಗಂಧ ರಸ ರೂಪ ಸ್ಪರಿಶ ಶ-**
**ಬ್ದೊಂದು ತಾನಲ್ಲದರದರ ಪೆಸ-**
**ರಿಂದೆ ಕರೆಸುತ ಜೀವರಿಗೆ ತರ್ಪಕನು ತಾನಾಗಿ ।**
**ಪೊಂದಿಕೊಂಡಿಹ ಪರಮ ಕರುಣಾ-**
**ಸಿಂಧು ಶಾಶ್ವತ ಮನವೆ ಮೊದಲಾ-**
**ದಿಂದ್ರಿಯಗಳೊಳಗಿದ್ದು ಭೋಗಿಸುತಿಹನು ವಿಷಯಗಳ ॥ ೩ ॥**

ಶ್ರೀಹರಿಯು ಅನ್ನದಲ್ಲಿರುವ ಗಂಧ, ರಸ, ರೂಪ, ಸ್ಪರ್ಶ, ಶಬ್ದ ಒಂದೂ ತಾನಲ್ಲ ಆದರೂ ಅದರದರ ಹೆಸರಿನಿಂದ ಕರೆಸಿಕೊಳ್ಳುತ್ತ ಜೀವರಿಗೆ ತರ್ಪಕನು ತಾನೇ ಆಗಿ ಹೊಂದಿಕೊಂಡಿರುತ್ತಾನೆ ಪರಮಕರುಣಾನಿಧಿ, ಶಾಶ್ವತ, ಮನವೆ ಮೊದಲಾದ ಇಂದ್ರಿಯಗಳೊಳಗಿದ್ದು ವಿಷಯಗಳನ್ನು ಭೋಗಿಸುತ್ತಿರುವನು

***ಗಂಧ ರಸ ರೂಪ ಸ್ಪರಿಶ ಶಬ್ದೊಂದು ತಾನಲ್ಲ***

ಸರ್ವಕರ್ಮಾ ಸರ್ವಗಂಧಃ ಸರ್ವರಸಃ

ಎಂದು ಛಾಂದೋಗ್ಯ ಹೇಳುವಂತೆ ಶ್ರೀಹರಿ ಸರ್ವಗಂಧಾದಿರೂಪನಾಗಿದ್ದಾನೆ ಅವನಲ್ಲಿ ಸ್ವರೂಪಭೂತವಾದ ಸರ್ವಗಂಧರಸಾದಿಗಳಿವೆ ಗಂಧಗಳ ಪೈಕಿ ದುರ್ಗಂಧವಿಲ್ಲ ಎಲ್ಲ ಬಗೆಯ ಸುಗಂಧಗಳಿವೆ

ತಾನಿ ಚಾಸ್ಯ ಸುದಿವ್ಯಾನಿ ಸುಗಂಧಾನಿ ಸುಭಾಂತಿ ಚ

ಎಂದು ಭಾಗವತ ದಶಮಸ್ಕಂಧತಾತ್ಪರ್ಯದಲ್ಲಿ ಹೇಳುವಂತೆ ಸರ್ವವಿಧ ಸುಗಂಧ ಉಳ್ಳವನು ಶ್ರೀಹರಿ ರಸಗಳು ಮಧುರ, ಆಮ್ಲ, ಲವಣ, ಕಟು, ತಿಕ್ತ, ಕಷಾಯ ಆರೂ ಹರಿಯಲ್ಲಿ ಇವೆ ರೂಪವೆಂದರೆ ಬಣ್ಣ ಶುಕ್ಲ, ನೀಲ, ಪೀತ, ರಕ್ತ, ಹರಿತ, ಕಪಿಶ, ಚಿತ್ರ ಎಂಬ ಏಳೂ ಬಣ್ಣಗಳು ಹರಿಯಲ್ಲಿ ಇವೆ ಉದಾ–ವಾಸುದೇವ, ವಾಮನ, ಧನ್ವಂತರಿ, ಹಯಗ್ರೀವಾದಿ ರೂಪಗಳು ಬಿಳಿಬಣ್ಣದವುಗಳು ರಾಮಕೃಷ್ಣವೇದವ್ಯಾಸಾದಿಗಳು ಕೃಷ್ಣವರ್ಣ ಕಪಿಲದತ್ತಾತ್ರೇಯಾದಿಗಳು ಹಳದಿ ಪರಶುರಾಮಾದಿಗಳು ಕೆಂಪು

ನಭಃಸ್ಪೃಶಂ ದೀಪ್ತಮನೇಕವರ್ಣಮ್

ಎಂದು ಭಗವದ್ಗೀತೆ ಹೇಳುವಂತೆ ಅರ್ಜುನನು ಕಂಡ ವಿಶ್ವರೂಪ ಚಿತ್ರವರ್ಣದ್ದು

ಉಷ್ಣ, ಶೀತ, ಮೃದು, ಕಠಿನ ಎಂದು ಸ್ಪರ್ಶ ನಾಲ್ಕು ಬಗೆ ಅವೆಲ್ಲವೂ ಹರಿಯಲ್ಲಿ ಇವೆ ಶಬ್ದಗಳಲ್ಲಿ ವರ್ಣಾತ್ಮಕ ಶಬ್ದಗಳು, ಅಂದರೆ ಅಕಾರಾದಿ ಕ್ಷಕಾರದ ವರೆಗಿನ ಐವತ್ತೊಂದು ಅಕ್ಷರಗಳು ದ್ರವ್ಯರೂಪವಾಗಿರುವುದರಿಂದ ಅವು ಯಾವ ದ್ರವ್ಯದ ಗುಣವೂ ಅಲ್ಲ ವೀಣಾ, ವೇಣು, ಮೃದಂಗಾದಿ ಧ್ವನಿಗಳು ನಾವು ಮುಖದಿಂದ ಹೊರಡಿಸುವ ಅಳು, ನಗು ಮುಂತಾದವುಗಳ ಧ್ವನಿಗಳು, ಪ್ರಾಣಿಪಕ್ಷಿಗಳ ಕೂಗುಗಳು ಇವೆಲ್ಲವೂ ಧ್ವನ್ಯಾತ್ಮಕ ಶಬ್ದಗಳು, ಆಕಾಶಾದಿ ಪಂಚಭೂತಗಳಲ್ಲಿಯೂ ಇವೆ ಅದೇ ರೀತಿ ಹರಿಯಲ್ಲಿಯೂ ಅವನ ಸ್ವರೂಪಭೂತವಾದ ಧ್ವನಿಗಳಿವೆ ಅವನು ಶಬ್ದರೂಪನೇ ಆಗಿದ್ದಾನೆ ಆದರೂ ಗಂಧರಸರೂಪಸ್ಪರ್ಶಶಬ್ದ ಒಂದೂ ತಾನಲ್ಲ! ಏಕೆಂದರೆ ಪ್ರಾಕೃತಗಂಧಾದಿರೂಪನಲ್ಲ ಅಪ್ರಾಕೃತ ಸಚ್ಚಿದಾನಂದಮಯ ಗಂಧಾದಿರೂಪನಾಗಿದ್ದಾನೆ

ಅಪಾರ್ಥಿವೋ ಹರೇರ್ಗಂಧೋ ನ ತೃಪ್ತಿಶ್ಚಾಪ್ಯಬಾತ್ಮಿಕಾ

ಎಂದು ಬೃಹದಾರಣ್ಯಕಭಾಷ್ಯದಲ್ಲಿ ಹೇಳಿದೆ ಪ್ರಳಯಕಾಲದಲ್ಲಿ ಆಲದೆಲೆಯ ಮೇಲೆ ಮಲಗುವ ಶ್ರೀಹರಿಯ ಮೈಯ ಸುಗಂಧವನ್ನು ಮಹಾಲಕ್ಷ್ಮಿ ಅನುಭವಿಸುತ್ತಾಳೆ ಅಧರಾಮೃತರಸವನ್ನು ಸವಿಯುತ್ತಾಳೆ ಕಣ್ಣಿಗೆ ಹಬ್ಬ ಉಂಟುಮಾಡುವ ಮೈಬಣ್ಣಗಳನ್ನು ಕಾಣುತ್ತಾಳೆ ಬೆಚ್ಚಗಿನ ಮೆದುವಾದ ಬಿಗಿಯಪ್ಪುಗೆಯನ್ನು ಅನುಭವಿಸುತ್ತಾಳೆ

ಏನೇ, ಹರಿಣಾಕ್ಷಿ! ಮೋಹನೆ! ಗಜಗಮನೆ!<br>
ಧ್ಯಾನವ್ಯಾತಕೆ ನಿನಗೆಂದ!<br>
ಶ್ರೀನಾಥ ಸತಿಯ ಮೊಗ ನೋಡಿ ನಸುನಕ್ಕು<br>
ನಾನಾ ಪರಿಯಲ್ಲಿ ನುಡಿಸಿದ ॥

ಎಂದು ವಾದಿರಾಜರು ವೈಕುಂಠವರ್ಣನೆಯಲ್ಲಿ ಹೇಳುವಂತೆ ಲಯಕಾಲದಲ್ಲಿ ಆಲದೆಲೆಯ ಮೇಲೆ ಹುಸಿ ಮುನಿಸಿಂದ ದೂರನಿಂತ ರಮೆಯನ್ನು ನಾರಾಯಣ 'ನುಡಿಸಿ'ದ! ಈ ಎಲ್ಲ ಗಂಧರಸಶಬ್ದಾದಿಗಳು ಪ್ರಳಯಕಾಲದವುಗಳು ಆ ಕಾಲದಲ್ಲಿ ಪಂಚಭೂತಗಳಿಲ್ಲ, ಬೇರೆ

ತತ್ವಗಳೂ ಇಲ್ಲ ಎಲ್ಲವೂ ಲಯ ಹೊಂದಿರುತ್ತವೆ ಆದರಿಂದ ಹರಿಯ ಸ್ವರೂಪಭೂತ-ವೆನ್ನಬೇಕು ಹೊರತು ಪ್ರಾಕೃತ ಗಂಧಾದಿಗಳೊಳಗಿರುವ ಹರಿಯ ಗಂಧಾದಿಗಳು ಪ್ರಾಕೃತಗಂಧಾದಿಗಳಲ್ಲ ಎನ್ನುವ ಅಭಿಪ್ರಾಯದಿಂದ 'ಗಂಧರಸರೂಪಸ್ಪರ್ಶಶಬ್ದ ಒಂದೂ ತಾನಲ್ಲ' ಎನ್ನುತ್ತಿದ್ದಾರೆ ದಾಸರಾಯರು

***ಆದರದರ ಪೆಸರಿಂದ ಕರೆಸುತ***

ಹರಿಯ ಅಪ್ರಾಕೃತ ಗಂಧರಸಾದಿಗಳು ನಾವು ನಿತ್ಯಕಾಣುವ ಪ್ರಾಕೃತಗಂಧರಸಾದಿ-ಗಳಲ್ಲಿ ಅಂತರ್ಗತವಾಗಿದ್ದು ನಿಯಾಮಕವಾಗಿವೆ ಅವುಗಳಿಗೇ 'ಗಂಧ' 'ರಸ' ಮುಂತಾದ ನಾಮಗಳು ಮುಖ್ಯವಾಗಿ ಸಲ್ಲುತ್ತವೆ ಅವುಗಳಿಂದ ಕೂಡಿದ ಪ್ರಾಕೃತ ಗಂಧರಸಾದಿಗಳಿಗೆ ಅಮುಖ್ಯವಾಗಿ ಸಲ್ಲುತ್ತವೆ ಆದರೂ ಲೋಕದಲ್ಲಿ ಪ್ರಾಕೃತ ಗಂಧಾದಿಗೇ ಈ ಹೆಸರು ಪ್ರಸಿದ್ಧ ಆದರಿಂದ 'ಆದರದರ ಪೆಸರಿಂದ ಹರಿ ಕರೆಸಿಕೊಳ್ಳುತ್ತಾನೆ' ಎಂದಿದೆ

***ಜೀವರಿಗೆ ತರ್ಪಕನು ತಾನಾಗಿ ಪೊಂದಿಕೊಂಡಿಹ***

ಪ್ರಾಕೃತ ಗಂಧರಸಾದಿಗಳು ಜೀವರಿಗೆ ತರ್ಪಕ, ಸುಖದಾಯಕ ಎಂಬುದು ಅನುಭವ-ಸಿದ್ಧವಾಗಿದೆ ಆದರೆ ವಸ್ತುತಃ ಹರಿಯೆ ತನ್ನ ಗಂಧರಸಾದಿ ರೂಪಗಳಿಂದ ಪ್ರಾಕೃತ ಗಂಧರಸಾದಿಗಳಲ್ಲಿ ಇದ್ದು ಅವುಗಳ ಮೂಲಕ ಜೀವರಿಗೆ ಸುಖದುಃಖಾದಿಗಳನ್ನು ಕೊಡುತ್ತಾನೆ ಆದರಿಂದ ಅವನೇ ತರ್ಪಕ

***ಮನವೆ ಮೊದಲಾದಿಂದ್ರಿಯಗಳೊಳಗಿದ್ದು ಭೋಗಿಸುತಿಹನು ವಿಷಯಗಳ***

ಶ್ರೀಹರಿ ಮನಸ್ಸು, ಶ್ರೋತ್ರ, ಚಕ್ಷು, ತ್ವಕ್, ರಸನ, ಘ್ರಾಣ ಎಂಬ ಆರು ಜ್ಞಾನೇಂದ್ರಿಯ-ಗಳಲ್ಲಿ ತದಾಕಾರನಾಗಿ ತನ್ನಾಮಕನಾಗಿ ಪ್ರೇರಕನಾಗಿ ಇದ್ದು ಆಲೋಚಿಸುವುದು, ಕೇಳುವುದು, ನೋಡುವುದು ಮುಂತಾದ ಕ್ರಿಯೆಗಳನ್ನು ಮಾಡುತ್ತ ವಿಷಯಪದಾರ್ಥಗಳನ್ನು ಭೋಗಿಸುತ್ತಾನೆ ಅದು ಜೀವರ ಹಿತಕ್ಕಾಗಿಯೆ ಹೊರತು ಪೂರ್ಣಕಾಮನಾದ ಅವನಿಗೆ ಈ ಭೋಗದಿಂದ ಏನೂ ಆಗಬೇಕಾಗಿಲ್ಲ ಅವನು ಸುಖವನ್ನು ಉಣದಿದ್ದರೆ ಜೀವರಿಗೆ ಸುಖವಾಗದು ಅದಕ್ಕೇ ಅವನು ಆ ಸುಖದಲ್ಲಿರುವ ತನ್ನದೆ ಆದ ಸುಖವನ್ನು ಲೀಲೆಯಿಂದ ಉಣುತ್ತಾನೆ ಭಗವದ್ಗೀತೆ ಇದನ್ನೇ ಹೇಳುತ್ತಿದೆ—

> ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
> ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥

'ಶ್ರೀಹರಿ ಕಿವಿ, ಕಣ್ಣು, ತ್ವಕ್, ನಾಲಿಗೆ, ಘ್ರಾಣ, ಮನಸ್ಸುಗಳನ್ನು ತಮ್ಮ ತಮ್ಮ ವಿಷಯಗಳಲ್ಲಿ ಪ್ರವೃತ್ತಿ ಮಾಡುವಂತೆ ಪ್ರೇರಿಸಿ ಆ ಮೂಲಕ ಶಬ್ದಾದಿ ವಿಷಯಗಳನ್ನು ಭೋಗಿಸುವನು'

ಇಲ್ಲಿ ಶ್ರೋತ್ರಾದಿ ಇಂದ್ರಿಯಗಳು ಉಕ್ತವಾಗಿವೆ ದಾಸರಾಯರು 'ಮನವೆ ಮೊದ-ಲಾದ' ಇಂದ್ರಿಯಗಳೆಂದಿದ್ದಾರೆ. ಏಕೆಂದರೆ ಶ್ರೋತ್ರಾದಿ ಇಂದ್ರಿಯಗಳ ಪ್ರವೃತ್ತಿಗೆ ಮನಸ್ಸು

ಆವಶ್ಯಕ ಮನಸ್ಸಿಲ್ಲದಿದ್ದರೆ ಅವುಗಳಿಂದ ಯಾವ ಕಾರ್ಯವೂ ನಡೆಯದು ನಾವು ಅನ್ಯಮನಸ್ಕರಾಗಿದ್ದರೆ ಶ್ರೋತ್ರಾದಿಗಳು ನಮಗೆ ಏನೂ ತಿಳಿಸಲಾರವು ಹೀಗೆ ಮನಸ್ಸು ಮುಖ್ಯ ಮತ್ತು ಕೇಳುವುದು, ನೋಡುವುದು ಮುಂತಾದ ಕ್ರಿಯೆಗಳಿಂದಾಗುವ ಸುಖ ದುಃಖಗಳನ್ನೂ ಮನಸ್ಸೇ ಕೊಡಬೇಕು ಅದರಿಂದಲೂ ಮನಸ್ಸು ಮುಖ್ಯವೆಂಬ ವಿವಕ್ಷೆ ಇದ್ದುದರಿಂದ 'ಮನವೆ ಮೊದಲಾದ' ಎಂದಿದ್ದಾರೆ

**ಪರಮಕರುಣಾಸಿಂಧು**

ಸರ್ವಗಂಧಾದಿರೂಪಶ್ಚ ಭೋಕ್ತಾ ಚೈಷಾಂ ಸದೈವ ಹಿ

'ಸರ್ವಗಂಧಾದಿರೂಪನೂ ಸರ್ವಗಂಧಾದಿಭೋಕ್ತನೂ ಸದಾ ಶ್ರೀಹರಿಯೆ' ಎಂದು ಛಾಂದೋಗ್ಯ ಭಾಷ್ಯ ಹೇಳುವಂತೆ ಹರಿ ತಾನೇ ವಿಷಯನಾಗುತ್ತಾನೆ, ತಾನೇ ಅನುಭವಿಸು-ತ್ತಾನೆ ಏಕೆ? ಎಂದರೆ ಇದು ಅವನ ಸ್ವಭಾವವೆನ್ನಬಹುದು

ದೇವಸ್ಯೈಷಃ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ?

ಎಂದು ಮಾಂಡೂಕೋಪನಿಷತ್ತು ಹೇಳುತ್ತಿದೆ ಆದರೂ ಜೀವರಿಗೆ ಅದರಿಂದ ಪ್ರಯೋಜನವಿದೆ

ಅಲ್ಪಶಕ್ತಿಗಳುಣ್ಣಲರಿಯದಲಿರಲು ಉಣಗಲಿಸಿದನು ಸರ್ವರಿಗೆ

ಎಂದು ಮುಂದೆ ದತ್ತಸ್ವಾತಂತ್ರ್ಯಸಂಧಿಯಲ್ಲಿ ಹೇಳುವಂತೆ ಉಣಲು ಬಾರದ ಜೀವರಿಗೆ ಉಣಲು ಕಲಿಸುತ್ತಿದ್ದಾನೆ ಶ್ರೀಹರಿ ತಾಯಿ ಮಗುವಿನ ಕೈಹಿಡಿದು ಮೆಲ್ಲನೆ ನಡೆಯುತ್ತ ಮಗುವಿಗೆ ನಡೆಯಲು ಕಲಿಸುವಂತೆ ಇದು ಲಕ್ಷ್ಮೀಬ್ರಹ್ಮಾದಿ ಮಹಾಶಕ್ತಿಶಾಲಿಗಳಾದ ಚೇತನರೂ ಶ್ರೀಹರಿಗೆ ಶಿಶುಗಳಂತೆ ಅನ್ನದೊಳಗಿರುವ ತನ್ನ ಸ್ವರೂಪಭೂತಗಂಧ-ರಸಾದಿಗಳನ್ನು ಬಿಂಬನಾದ ಅವನು ಉಂಡರೆ ಪ್ರತಿಬಿಂಬರಾದ ಆ ಲಕ್ಷ್ಮೀಬ್ರಹ್ಮಾದಿಗಳಿಗೆ ಅವರವರ ತತ್ವಸ್ವರೂಪವಾದ ಗಂಧರಸಾದಿಗಳನ್ನು ಉಣಲು ಶಕ್ಯವಾಗುತ್ತದೆ ಲಕ್ಷ್ಮಿಗೆ ಅನ್ನದೊಳಗಿನ ಅವ್ಯಕ್ತತತ್ವದಲ್ಲಿರುವ ಅವ್ಯಕ್ತಾತ್ಮಕ ಗಂಧರಸಾದಿಗಳನ್ನು ಉಣಿಸುತ್ತಾನೆ, ಬ್ರಹ್ಮವಾಯುಗಳಿಗೆ ಮಹದಾತ್ಮಕ, ರುದ್ರಶೇಷಗರುಡರಿಗೆ ಅಹಂಕಾರಾತ್ಮಕ ಎಂದು ಮುಂತಾಗಿ ಎಲ್ಲ ತತ್ವದೇವತೆಗಳಿಗೂ ಆಯಾ ತತ್ವಾತ್ಮಕ ಗಂಧರಸಾದಿಗಳನ್ನು ಉಣಿಸಿ ಕೊನೆಯಲ್ಲಿ ನಮಗೆ ಪಾಂಚಭೌತಿಕ ಗಂಧರಸಾದಿಗಳನ್ನು ಉಣಿಸುತ್ತಾನೆ ಗೋಪಾಲ-ದಾಸರು ಒಂದು ಸುಳಾದಿಯಲ್ಲಿ ಹೇಳಿದ್ದಾರೆ.

ಒಂದು ರಸ ಬಿಂದು ಉದರದಿ ಬಿದ್ದರೆ
ಇಂದಿರೆಗುಂಟಲ್ಲಿ ವಿರಿಂಚಿಶಿವರಿಗುಂಟು
ಚಂದದಿ ಗರುಡಶೇಷೇಂದ್ರಾದಿ ಸುರರೆಲ್ಲ
ಹೊಂದಿರುವರು ತಮ್ಮ ತತ್ವದ ರಸ
ಇಂದಿರೇಶ ವಿಭಾಗಮಾಡಿ ತರತಮ-

ದಿಂದಲೆ ಆರಾರ ಭಾಗ ಪೊಂದಿಸಿ ಈವ
ಇಂದಿರೆಗವ್ಯಕ್ತ ರಸದಲ್ಲೆ ಅಭಿಮಾನ
ಮಂದಜಜನಿತಗೆ ಮಹತತ್ವರಸವಿನ್ನು
ಇಂದುಮೌಳಿಗೆ ಅಹಂಕಾರರಸದಲ್ಲಿ
ಇಂದ್ರಾದಿ ಸುರರಿಗೆ ವೈಕಾರಿಕ ರಸ
ತಂದುಕೊಡುವ ತೈಜಸರಸ ತರತಮ-
ದಿಂದ ಭೌತಿಕರಸ ಬಪ್ಪುದು ಮನುಜರಿಗೆ .
ಸುಂದರ ಮೂರುತಿ ಗೋಪಾಲವಿಟ್ಠಲ
ಬಂಧುವಾದನು ಸಾಧುಜೀವರ್ಗೆ ॥

ಹೀಗೆ ಹರಿ ವಿಷಯಗಳನ್ನು ಭೋಗಿಸುವುದು ಸಾಧು ಜೀವರ ಮೇಲಿನ ಬಂಧು-ವಾತ್ಸಲ್ಯದಿಂದಲೆ, ನಿರ್ವ್ಯಾಜ ಕರುಣೆಯಿಂದಲೆ, ಅದರಿಂದ ಅವನು ಪರಮ ಕರುಣಾ-ಸಿಂಧುವೇ ಸರಿ

**ಶಾಶ್ವತ**

ಶ್ರೀಹರಿಯೂ ವಿಷಯಗಳನ್ನು ಭೋಗಿಸುತ್ತಾನೆ ಜೀವರೂ ಭೋಗಿಸುತ್ತಾರೆ ಆದರೆ ಜೀವರಿಗೆ ಆನಂದವೃದ್ಧಿಯಾಗುತ್ತದೆ ಹರಿಗೆ ಆನಂದವೃದ್ಧಿ ಮೊದಲೇ ಇರುತ್ತದೆ ಪರ-ಮಾವಧಿ ಆನಂದವೃದ್ಧಿ ಇದ್ದರೂ ತಿರುಗಿ ಭೋಗಿಸಿ ಆನಂದವನ್ನು ವೃದ್ಧಿಗೊಳಿಸುತ್ತಾನೆ ಇದು ಅಚಿಂತ್ಯ ಶಕ್ತಿ ಹೀಗೆ ಹರಿ ವಿಷಯಭೋಗ ಮಾಡುವುದಕ್ಕೆ ಮೊದಲೂ, ಮಾಡು-ವಾಗಲೂ ಸದಾ ಒಂದೇ ರೀತಿಯಾಗಿರುತ್ತಾನೆ ಜೀವರು ಒಂದೇ ರೀತಿಯಾಗಿರುವುದಿಲ್ಲ ಒಂದೇ ರೀತಿಯಾಗಿರುವುದರಿಂದ ಹರಿ ಶಾಶ್ವತನೆನಿಸುತ್ತಾನೆ

**ಶ್ರವಣ ನಯನ ಘ್ರಾಣ ತ್ವಗ್ ರಸ-**
**ನಿವುಗಳು ವಾಕ್ ಪಾಣಿಪಾದಾ-**
**ದ್ಯವಯವಗಳಲಿ ತದ್ಗುಣಗಳಲಿ ತತ್ಪತಿಗಳೊಳಗೆ ।**
**ಪ್ರವಿತತನು ತಾನಾಗಿ ಕೃತಿಪತಿ**
**ವಿವಿಧ ಕರ್ಮವ ಮಾಡಿ ಮಾಡಿಸಿ**
**ಭವಕೆ ಕಾರಣನಾಗಿ ತಿರುಗಿಸುತಿಹನು ತಿಳಿಸದಲೆ ॥ ೪ ॥**

ಜೀವರ ಶ್ರೋತ್ರ, ಚಕ್ಷು, ಘ್ರಾಣ, ತ್ವಕ್, ರಸನೆ ಇವುಗಳಲ್ಲಿಯೂ ವಾಕ್, ಪಾಣಿ, ಪಾದ ಮುಂತಾದ ಅವಯವಗಳಲ್ಲಿಯೂ ಅವುಗಳ ಗುಣಗಳಲ್ಲಿಯೂ ಅವುಗಳ ಒಡೆಯರಾದ ತತ್ವಾಭಿಮಾನಿ ದೇವತೆಗಳೊಳಗೂ ಅಸುರರೊಳಗೂ ಕೃತಿಪತಿ ಪ್ರದ್ಯುಮ್ನ

ವ್ಯಾಪಿಸಿದ್ದು ತನ್ನ ಬಗ್ಗೆ ಏನೂ ತಿಳಿಸದಲೆ ನಾನಾ ಬಗೆಯ ಕರ್ಮಗಳನ್ನು ಮಾಡಿ ಮಾಡಿಸಿ ಜೀವರ ಸಂಸಾರಕ್ಕೆ ಕಾರಣನಾಗಿ ಅವರನ್ನು ನಾನಾ ಯೋನಿಗಳಲ್ಲಿ ತಿರುಗಿಸುತ್ತಾನೆ

***ಶ್ರವಣ ನಯನ ಘ್ರಾಣ ತ್ವಗ್ ರಸನಿವುಗಳಲಿ ಪ್ರವಿತತನು***

'ಪ್ರವಿತತ' ಎಂದರೆ 'ಪ್ರ' ಚೆನ್ನಾಗಿ 'ವಿ' ವಿಶೇಷವಾಗಿ, 'ತತ' ವ್ಯಾಪ್ತ, ಚೆನ್ನಾಗಿ ವಿಶೇಷವಾಗಿ ವ್ಯಾಪ್ತ ಕಾಲ ಆಕಾಶ ಮುಂತಾದವುಗಳಂತೆ ಸುಮ್ಮನೆ ವ್ಯಾಪ್ತನಾಗಿದ್ದು ತನ್ನ ರಕ್ಷಣೆಗೆ ಇನ್ನೊಬ್ಬರ ಆಸರೆ ಬೇಡದೆ ಸ್ವತಂತ್ರವಾಗಿ, ಬೇರೆಯವರ ರಕ್ಷಣೆಗಾಗಿ ವ್ಯಾಪಿಸಿದವ ಶ್ರೀಹರಿ ಎಂದು ವ್ಯಾಪ್ತಿಸಂಧಿಯಲ್ಲಿ ಹೇಳುತ್ತಿದ್ದಾರೆ ದಾಸರಾಯರು ಅವನು ನಿಯಾಮಕನಾಗಿ ವ್ಯಾಪಿಸಿರುವುದು ನಮ್ಮ ಅನುಭವಕ್ಕೂ ಬರುತ್ತದೆ ನಮ್ಮ ಜ್ಞಾನೇಂದ್ರಿಯಕರ್ಮೇಂದ್ರಿಯಗಳ ವಿಷಯದಲ್ಲಿ ಇಂದ್ರಿಯಗಳು ಜಡಪದಾರ್ಥಗಳು ಅವು ಸ್ವತಃ ಏನೂ ಮಾಡಲಾರವು ಇದ್ದಿಲೂ ಸುಡುತ್ತದೆ, ಸ್ವತಃ ಅಲ್ಲ, ಅದರೊಳಗೆ ಬೆಂಕಿ ವ್ಯಾಪಿಸಿದರೆ ಸುಡುತ್ತದೆ ಹಾಗೇ ಇಂದ್ರಿಯಗಳಲ್ಲಿ ಶ್ರೀಹರಿ 'ಪ್ರವಿತತ'ನಾದ್ದರಿಂದ ಅವು ಕೆಲಸ ಮಾಡುತ್ತವೆ ಜ್ಞಾನೇಂದ್ರಿಯಗಳಾದ್ದರಿಂದ ಜ್ಞಾನಕಾರ್ಯ ಮಾಡುತ್ತವೆ ಕಿವಿ ಕೇಳುತ್ತದೆ, ಕಣ್ಣು ಕಾಣುತ್ತದೆ, ಮೂಗು ಮೂಸುತ್ತದೆ, ಚರ್ಮ ಮುಟ್ಟುತ್ತದೆ, ನಾಲಿಗೆ ಸವಿಯುತ್ತದೆ

***ವಾಕ್ ಪಾಣಿ ಪಾದಾದ್ಯವಯವಗಳಲಿ ಪ್ರವಿತತನು***

ಮುಖ, ಕೈ, ಕಾಲು, ಮಲಮೂತ್ರವಿಸರ್ಜನಾಂಗ, ಜನನೇಂದ್ರಿಯಗಳೆಂಬ ಅವಯವಗಳಲ್ಲಿ ಹರಿ ವ್ಯಾಪಿಸಿದ್ದಾನೆ ಅಂದರೆ ಕಣ್ಣಿಗೆ ಕಾಣುವ ಅವಯವಗಳಲ್ಲಿರುವ ಅತಿ ಸೂಕ್ಷ್ಮವಾದ ಕಣ್ಣಿಗೆ ಕಾಣದ ಇಂದ್ರಿಯಗಳಲ್ಲಿ ವ್ಯಾಪಿಸಿದ್ದಾನೆ ಅದರಿಂದ ಮುಖ ಮಾತನಾಡುತ್ತದೆ ಕೈ ಎತ್ತಿಕೊಳ್ಳುತ್ತದೆ ಕಾಲು ನಡೆಯುತ್ತದೆ. ಮಲಮೂತ್ರದ್ವಾರಗಳು ವಿಸರ್ಜಿಸುತ್ತವೆ ಜನನೇಂದ್ರಿಯ ರಮಿಸುತ್ತದೆ ಅದರಿಂದ ಇವು ಕರ್ಮೇಂದ್ರಿಯಗಳು

***ತದ್ಗುಣಗಳಲಿ ಪ್ರವಿತತ***

ಕಣ್ಣು ನೋಡುತ್ತದೆ ನೋಡುವುದು ಕಣ್ಣಿನ ಗುಣ ಕಿವಿ ಕೇಳುತ್ತದೆ ಕೇಳುವುದು ಕಿವಿಯ ಗುಣ ಹೀಗೆ ಪಂಚಜ್ಞಾನೇಂದ್ರಿಯಗಳ ಮತ್ತು ಪಂಚ ಕರ್ಮೇಂದ್ರಿಯಗಳ ಗುಣಗಳು ಅಂದರೆ ವ್ಯಾಪಾರಗಳು ಹರಿಯ ಅಧೀನ ಅವನು ಇಂದ್ರಿಯಗಳಲ್ಲಿಯೂ ಇದ್ದಾನೆ ಮಾತ್ರವಲ್ಲ ಅವು ಮಾಡುವ ಕೆಲಸಗಳಲ್ಲಿಯೂ ಇದ್ದಾನೆ!

ಅಥವಾ ಕಣ್ಣು ರೂಪವನ್ನು ನೋಡುತ್ತದೆ, ಕಿವಿ ಶಬ್ದವನ್ನು ಕೇಳುತ್ತದೆ ರೂಪಶಬ್ದಗಳು ಕಣ್ಣುಕಿವಿಗಳ ಕಾರ್ಯವ್ಯಾಪ್ತಿಯಲ್ಲಿ ಬರುವ ಪಂಚಮಹಾಭೂತಗಳ ಗುಣಗಳು ಗುಣಗಳಲ್ಲಿಯೂ ಹರಿ ವ್ಯಾಪಿಸಿದ್ದರಿಂದ ಇಂದ್ರಿಯಗಳಿಗೆ ಅವು ಗೋಚರವಾಗುವುವು

***ತತ್ವತಿಗಳೊಳಗೆ ಪ್ರವಿತತ***

ತತ್ವತಿಗಳೆಂದರೆ ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯಗಳ ಒಡೆಯರು ಅಭಿಮಾನಿಗಳಾದ ದೇವತೆಗಳು ಮತ್ತು ಅಸುರರು ಹಾಗೇ ರೂಪಶಬ್ದಮುಂತಾದ ಗುಣಗಳಿಗೆ ಅಭಿಮಾನಿಗಳಾದ ದೇವತೆಗಳು ಮತ್ತು ಅಸುರರು

ಶ್ರೋತ್ರೇಂದ್ರಿಯಕ್ಕೆ ಅಭಿಮಾನಿಗಳು ಚಂದ್ರ, ಮಿತ್ರ, ಯಮ, ವರುಣ, ಕುಬೇರರೆಂಬ ದೇವತೆಗಳು ಸಾಲ್ವ ಅಭಿಮಾನಿಯಾದ ಅಸುರ ಕಣ್ಣಿಗೆ ಸೂರ್ಯ ದೇವತೆ, ಬಾಣ ಅಸುರ ಮೂಗಿಗೆ ಅಶ್ವಿನಿಗಳು ದೇವತೆಗಳು ದ್ವಾಪರ ಅಸುರ ಚರ್ಮಕ್ಕೆ ಮುಖ್ಯಪ್ರಾಣನ ಪುತ್ರನಾದ ಪ್ರಾಣ ದೇವತೆ ಹಿಡಿಂಬ ಅಸುರ ರಸನೆಗೆ ವರುಣ ದೇವತೆ ನಮುಚಿ-ಇಲ್ವಲರು ಅಸುರರು. ವಾಗಿಂದ್ರಿಯಕ್ಕೆ ಅಗ್ನಿದೇವತೆ, ವಾತಾಪಿ ಅಸುರ ಪ್ರಾಣೇಂದ್ರಿಯಕ್ಕೆ ದಕ್ಷಪ್ರಜಾಪತಿ ದೇವತೆ, ಧೇನುಕ-ಕೇಶಿಗಳು ಅಸುರರು ಪಾದಕ್ಕೆ ಜಯಂತ ದೇವತೆ ಮಾಸ-ತೃಣಾವರ್ತರು ಅಸುರರು ವಿಸರ್ಜನಾಂಗಕ್ಕೆ ಯಮ-ಮಿತ್ರರು ದೇವತೆಗಳು ಲವಣ ಅಸುರ ಜನನಾಂಗಕ್ಕೆ ಸ್ವಾಯಂಭುವ ಮನು, ಧುಂಧುಮಾರ ಅಸುರ

ಶಬ್ದಕ್ಕೆ ಬೃಹಸ್ಪತಿ ಆಹಂಕಾರಿಕ ಪ್ರಾಣ ಮತ್ತು ಉಮಾದೇವಿಯರು ದೇವತೆಗಳು ಹಂಸ ಅಸುರ ಸ್ಪರ್ಶಕ್ಕೆ ಅಪಾನ ಮತ್ತು ವಾರುಣೀದೇವಿಯರು ದೇವತೆಗಳು, ಡಿಭಿಕ ಅಸುರ ರೂಪಕ್ಕೆ ವ್ಯಾನ ಮತ್ತು ಸುವರ್ಣೀದೇವಿಯರು ದೇವತೆಗಳು, ಪೌಂಡ್ರಕ ಅಸುರ ರಸಕ್ಕೆ ಉದಾನ ಮತ್ತು ಸುವರ್ಣಿದೇವಿಯರು ದೇವತೆಗಳು, ಕೂಪಕರ್ಣ ಅಸುರ ಗಂಧಕ್ಕೆ ಸಮಾನ ಮತ್ತು ವಾರುಣಿಯರು ದೇವತೆಗಳು, ದುಃಶಾಸನ ಮತ್ತು ವೃಷಸೇನರು ಅಸುರರು

ಇಂದ್ರಿಯಗಳು ಕೆಲವೊಮ್ಮೆ ಹಿತಕರವಾದ ಅನುಭವ ನೀಡುತ್ತವೆ, ಹಿತಕರವಾದ ಕರ್ಮ ಮಾಡುತ್ತವೆ ಕೆಲವೊಮ್ಮೆ ಅಹಿತಕರ ಅನುಭವ ನೀಡುತ್ತವೆ ಅಹಿತಕರ ಕರ್ಮ ಮಾಡುತ್ತವೆ ದೇವತೆಗಳೂ ಅಸುರರೂ ಅಭಿಮಾನಿಗಳಾಗಿರುವುದು ಇದಕ್ಕೆ ಕಾರಣ ದೇವತೆಗಳ ಪ್ರೇರಣೆಯಿಂದ ಹಿತಕರ ಅನುಭವ ಹಿತಕರ ಕರ್ಮಗಳು ಅಸುರರ ಅಥವಾ ಅಸುರಾವಿಷ್ಟರಾದ ದೇವತೆಗಳ ಪ್ರೇರಣೆಯಿಂದ ದುರ್ಗಂಧ ವಿಕೃತರೂಪ ನಿಷಿದ್ಧ ರಸ ಮುಂತಾದವುಗಳ ಅಸಹ್ಯ ಅನುಭವ, ಹಿಂಸಾದಿ ನಿಷಿದ್ಧ ಕರ್ಮಗಳು. ಮೇಲುನೋಟಕ್ಕೆ ರಮ್ಯವಾಗಿದ್ದರೂ ಕೊನೆಯಲ್ಲಿ ಅಹಿತಕರವಾದ ನಿಷಿದ್ಧ ಅನುಭವಕರ್ಮಗಳು ಈ ದೇವತೆಗಳಾಗಲಿ ಅಸುರರಾಗಲಿ ಸ್ವತಂತ್ರರಲ್ಲ ಹರಿ ಅವರೊಳಗೂ ವ್ಯಾಪ್ತನಾಗಿದ್ದು ಅವರ ಸ್ವಭಾವಗಳನ್ನು ವ್ಯಕ್ತಗೊಳಿಸಿ ಅವರಿಂದ ನಮ್ಮ ಇಂದ್ರಿಯಗಳಲ್ಲಿ ಆಯಾ ವ್ಯಾಪಾರ ಮಾಡಿಸುತ್ತಾನೆ, ನಮ್ಮ ಕರ್ಮಾನುಗುಣವಾಗಿ.

***ವಿವಿಧ ಕರ್ಮವ ಮಾಡಿ ಮಾಡಿಸಿ***

ವಿವಿಧ ಕರ್ಮವೆಂದರೆ ಕಾಯಿಕ, ವಾಚಿಕ, ಮಾನಸಿಕಗಳಾದ, ಸಂಚಿತ ಪ್ರಾರಬ್ಧ ಕ್ರಿಯಮಾಣ ಆಗಾಮಿಗಳಾದ, ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಗಳು. ಪ್ರವೃತ್ತ ನಿವೃತ್ತ

ಕರ್ಮಗಳು ಇವೆಲ್ಲವನ್ನೂ ಪೂರ್ವ ಕರ್ಮಾನುಗುಣವಾಗಿ ಎಲ್ಲ ಜೀವರಿಂದಲೂ ಹರಿ ಮಾಡಿಸುತ್ತಾನೆ, ಮಾಡಿಸುವುದಕ್ಕಾಗಿ ತಾನೂ ಮಾಡುತ್ತಾನೆ ಬ್ರಹ್ಮವಾಯುಗಳೂ ಇದಕ್ಕೆ ಹೊರತಲ್ಲ ಯದ್ಯಪಿ ಅವರು ಋಜುಯೋಗಿಗಳು ಯೋಗ ಋಜುವೆನಿಸಬೇಕಾದರೆ ಅದು ವಕ್ರವಾಗಿರಬಾರದು ವಕ್ರವಾಗುವುದೆಂದರೆ ಕಾಮನೆಗಳನ್ನಿಟ್ಟುಕೊಂಡು ಹರಿಪೂಜೆ ಮಾಡುವುದು

ಯೋಗಸ್ಯ ವಕ್ರತಾ ನಾಮ ಕಾಮೇನ ಹರಿಪೂಜನಮ್

ಬ್ರಹ್ಮವಾಯುಗಳು ಜ್ಞಾನಭಕ್ತಿಹರ್ಯನುಗ್ರಹ ಹೊರತು ಇನ್ನೇನೂ ಬಯಸುವುದಿಲ್ಲ

ಜ್ಞಾನಭಕ್ತೀ ಹರೇಸ್ತುಷ್ಟಿಂ ವಿನಾ ವಿಷ್ಣೋರಪಿ ಕ್ವಚಿತ್, ನಾಕಾಂಕ್ಷ್ಯಮ್

ನಿರ್ಣಯದಲ್ಲಿ ಭೀಮಸೇನನ ಬಗ್ಗೆ ಹೀಗೆ ಹೇಳುತ್ತ 'ನ ಕಾಮ್ಯಕರ್ಮಕೃತ್' 'ಕಾಮ್ಯ-ಕರ್ಮ ಮಾಡುವುದೇ ಇಲ್ಲ' ಎಂದಿದ್ದಾರೆ ಶ್ರೀಮದಾಚಾರ್ಯರು

ಆದರೂ ಬ್ರಹ್ಮವಾಯುಗಳ ಪದವಿಗಳು, ಅವರು ಆ ಪದವಿಗಳಿಗಾಗಿ ಮಾಡಿದ ಕಾಮ್ಯ ಕರ್ಮದ ಫಲವಾಗಿಯೆ ಬಂದವುಗಳು ಅವರು ಆ ಪದವಿಗಳಲ್ಲಿದ್ದು ಅನುಭವಿ-ಸುವ ಅಪಾರವಾದ ಆನಂದವೂ ಅವರ ಸುಖಪ್ರಾರಬ್ಧದ ಫಲ, ಕಾಮ್ಯಕರ್ಮ ಫಲ. 'ಕಾಮ್ಯಕರ್ಮ ಮಾಡುವುದಿಲ್ಲ' ಎನ್ನುವ ಮಾತಿಗೆ ಯಾವತ್ತೂ ನಿವತ್ತ ಕರ್ಮವನ್ನೇ ಮಾಡುತ್ತಾರೆ ಎಂದರ್ಥವಲ್ಲ ಅವರು ಪದವಿಗಳನ್ನು ಬಯಸುವುದಾಗಲೀ ಸುಖವನ್ನು ಅನುಭವಿಸುವುದಾಗಲೀ ಕೇವಲ ಹರಿಪ್ರೀತಿಗಾಗಿ ಅದರಿಂದ ಅವರು ಋಜುಯೋಗಿ-ಗಳು ಉದಾ– ಶ್ರೀಮದಾಚಾರ್ಯರು ಪರಮಾನ್ನ ಸೇವಿಸುವಾಗ ಹರಿಪ್ರೀತಿಯಾಗಲಿ ಎನ್ನುತ್ತಾರೆ

ಪರಮಥ ಪರಮಾನ್ನಂ ಪ್ರಾಪ್ತಮೇವಾಪ್ರಯಾಸಂ
ಪ್ರಭುರಿಹ ಬುಭುಜೇऽಸೌ ವೇದವಾದಪ್ರವೀಣಃ ।
ಅಜಿತಪರಮಭಕ್ತಃ ಸಂತತಂ ಮನ್ಯಮಾನಃ
ಸಕಲಜಗದಧೀಶಃ ಪ್ರೀಯತಾಂ ಶೌರಿರಿತ್ಥಮ್ ॥

ಎಂದು ಸುಮಧ್ವವಿಜಯದಲ್ಲಿ ಹೇಳಿದೆ ವೇದವ್ಯಾಸರ ಆಜ್ಞೆಯಂತೆ ಅವರ ಪ್ರೀತಿಗಾಗಿ ಭೀಮಸೇನ ಹಿಡಿಂಬೆಯ ಸಂಗ ಮಾಡಿದ, ಇತ್ಯಾದಿ

*ಭವಕೆ ಕಾರಣನಾಗಿ ತಿರುಗಿಸುತಿಹನು*

ಇಂದ್ರಿಯಗಳಿಂದ ಅವುಗಳ ಅಭಿಮಾನಿಗಳಾದ ದೇವಾಸುರರ ಮೂಲಕ ಬಂಧಕ-ಕರ್ಮ ಮಾಡಿ ಮಾಡಿಸಿ ಜೀವರನ್ನು ಕರ್ಮಬದ್ಧರನ್ನಾಗಿಸಿ ಕರ್ಮಾನುಸಾರ ನಾನಾ ಯೋನಿಗಳಲ್ಲಿ ತಿರುಗಿಸುತ್ತಾನೆ ಜೀವರು ಅಸಹಾಯಕರಾಗಿ ತಿರುಗುತ್ತಾರೆ ಪರಸ್ಪರ ಜಗಳಾಡುವ ಅನೇಕ ಹೆಂಡಿರನ್ನು ಕಟ್ಟಿಕೊಂಡ ಗೃಹಸ್ಥನಂತೆ ಈ ಇಂದ್ರಿಯಗಳ ಸೆಳೆತದಲ್ಲಿ ಬಿದ್ದು ಜೀವರು ತೊಳಲಾಡುತ್ತಾರೆ—

ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನಂತಿ

ಅಥವಾ ಶರೀರಗಳಲ್ಲಿರಿಸಿ ಪುಣ್ಯ, ಪಾಪಕರ್ಮಗಳಲ್ಲಿ ತಿರುಗಿಸುತ್ತಾನೆ ಅಂದರೆ ತೊಡಗಿಸುತ್ತಾನೆ 'ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ'

ಅಥವಾ ಪುಣ್ಯಪಾಪಕರ್ಮಗಳನ್ನು ಮಾಡಿಸಿ ಸ್ವರ್ಗನರಕಭೂಮಿಗಳಲ್ಲಿ ತಿರುಗಿಸು-ತ್ತಾನೆ ಅಥವಾ ಜನನಮರಣಚಕ್ರಗಳಲ್ಲಿ ತಿರುಗಿಸುತ್ತಾನೆ

***ತಿಳಿಸದಲೆ***

ಇಂದ್ರಿಯಗಳು ಹೊರಗೆ ಎಲ್ಲವನ್ನೂ ನೋಡುತ್ತವೆ ತಮ್ಮನ್ನೇ ತಾವು ನೋಡುವುದಿಲ್ಲ ತಮ್ಮೊಳಗಿರುವ ಭಗವಂತನನ್ನು ಸರ್ವಥಾ ನೋಡುವುದಿಲ್ಲ

'ಪರಾಂಚಿ ಖಾನಿ ವ್ಯತೃಣಾತ್ ಸ್ವಯಂಭೂಃ
ತಸ್ಮಾತ್ ಪರಾಕ್ ಪಶ್ಯತಿ ನಾಂತರಾತ್ಮನ್'

ಎಂದು ಕಾಠಕೋಪನಿಷತ್ತು ಹೇಳುತ್ತದೆ ಅದರಿಂದ ಭಗವಂತ ತಾನೇ ಮೈದೋರಬೇಕು ತನ್ನ ಬಗ್ಗೆ ತಿಳಿಸಬೇಕು, ತಿಳಿಸುವುದಿಲ್ಲ ಎಲ್ಲ ಕಡೆ 'ಪ್ರವಿತತ' ವ್ಯಾಪಿಸಿದ್ದಾನೆ ಎಲ್ಲಿಯೂ ಕಾಣಿಸುವುದಿಲ್ಲ, ತನ್ನ ಬಗ್ಗೆ ತಿಳಿಸುವುದಿಲ್ಲ ನಮ್ಮ ಕಣ್ಣಿನ ತೇಜಸ್ಸು ಹೊರಗೆ ಎಲ್ಲೆಡೆ ವ್ಯಾಪಿಸಿದರೂ ಕಣ್ಣಿಗೆ ಕಾಣಿಸುವುದಿಲ್ಲ ಹಾಗೆ ಅವನು ತಿಳಿಸಿದರೆ ತಿಳಿದವರು ಕಾಣುತ್ತಾರೆ

'ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ದಿವೀವ ಚಕ್ಷುರಾತತಮ್ ॥' —ಋಗ್ವೇದ
'ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ' —ಗೀತಾ

**ವಿದ್ಯೆ ತಾನೆಂದೆನಿಸಿಕೊಂಬನಿ**
**ರುದ್ಧದೇವನು ಸರ್ವಜೀವರ**
**ಬುದ್ಧಿಯೊಳು ನೆಲೆಸಿದ್ದು ಕೃತಿಪತಿ ಬುದ್ಧಿಯೆನಿಸುವನು ।**
**ಸಿದ್ಧಿಯೆನಿಸುವ ಸಂಕರುಷಣ ಪ್ರ-**
**ಸಿದ್ಧಿನಾಮಕ ವಾಸುದೇವನ**
**ಪದ್ಯರೂಪ ಚತುಷ್ಟಯಗಳರಿತವನೆ ಪಂಡಿತನು ॥ ೬ ॥**

ಅನಿರುದ್ಧದೇವನು ಸರ್ವಜೀವರ ವಿದ್ಯೆ ತಾನು ಎಂದೆನಿಸಿಕೊಳ್ಳುತ್ತಾನೆ ಸರ್ವಜೀವರ ಬುದ್ಧಿಯಲ್ಲಿ ನೆಲೆಸಿದ್ದು ಕೃತಿಪತಿ ಪ್ರದ್ಯುಮ್ನನು ಬುದ್ಧಿ ಎನಿಸುತ್ತಾನೆ ಸಂಕರ್ಷಣನು ಸರ್ವ-ಜೀವರ ಸಿದ್ಧಿಯೆನಿಸುತ್ತಾನೆ, ಮತ್ತು ವಾಸುದೇವನು ಸರ್ವಜೀವರ ಪ್ರಸಿದ್ಧಿನಾಮಕನಾಗಿ-ದ್ದಾನೆ ಶ್ರೀಹರಿಯ ಈ ಅನವದ್ಯವಾದ ಅಂದರೆ ನಿರ್ದುಷ್ಟವಾದ ನಾಲ್ಕು ರೂಪಗಳನ್ನು ಹೀಗೆ ಅರಿತವನೆ ಜ್ಞಾನಿ ಎನಿಸುತ್ತಾನೆ.

**ವಿದ್ಯೆ ತಾನೆಂದೆನಿಸಿಕೊಂಬ ಅನಿರುದ್ಧದೇವನು**

ವಿದ್ಯೆ ಎಂದರೆ ಓದಿ ಕಲಿತು ಸಂಪಾದಿಸಿದ ಜ್ಞಾನ ಹದಿನೆಂಟು ವಿದ್ಯೆಗಳಿವೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ಕಲ್ಪ ವ್ಯಾಕರಣ, ಛಂದಸ್ಸು ನಿರುಕ್ತ ಜ್ಯೋತಿಷ್ಯ, ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರ ಆಯುರ್ವೇದ, ಧನು-ರ್ವೇದ, ಗಾಂಧರ್ವವೇದ, ಸ್ಥಾಪತ್ಯವೇದಗಳೆಂದು ಇವುಗಳನ್ನು ಯಥಾಶಕ್ತಿ ನಿರಂತರ ಶ್ರವಣ ಮಾಡಬೇಕು ಅನಿರುದ್ಧನನ್ನು ನೆನೆದರೆ ಅಧ್ಯಯನಕ್ಕೆ ನಿರೋಧ-ಅಡೆತಡೆ ಉಂಟಾಗದು ಅದರಿಂದ ವಿದ್ಯೆಗೆ ನಿಯಾಮಕನಾದ ಅನಿರುದ್ಧ ತಾನೆ 'ವಿದ್ಯೆ' ಎನಿಸುತ್ತಾನೆ

**ಕೃತಿಪತಿ ಬುದ್ಧಿಯೆನಿಸುವನು**

ಬುದ್ಧಿ ಎಂದರೆ ಕಲಿಯದೇ ಬಂದ ಸ್ವಾಭಾವಿಕವಾದ ಜಾಣತನ ಇದು ಎರಡು ಬಗೆ ಇರಬಹುದು ಸುಬುದ್ಧಿ ದುರ್ಬುದ್ಧಿ ಎಂದು

ಬುದ್ಧಿಶ್ಚ ಪತ್ನೀ ಸಾ ದ್ವಿರೂಪಾ ಖಗೇಂದ್ರ

ಎಂದು ಗರುಡಪುರಾಣ ಹೇಳುವಂತೆ ಜೀವನನ್ನು ನೆರಳಿನಂತೆ ಬೆನ್ನುಬಿಡದೆ ಅನುಸರಿಸಿ ಪ್ರತಿಜನ್ಮದಲ್ಲಿಯೂ ಅವನ ಜೊತೆಗಿರುವ ಹೆಂಡತಿಯರು ಈ ಸುಬುದ್ಧಿದುರ್ಬುದ್ಧಿಗಳು ಸತ್ಯ, ಅಹಿಂಸೆ, ಪರೋಪಕಾರ, ಭೂತದಯೆ ಮುಂತಾದ ಧರ್ಮಾಚರಣೆಗೆ ಸುಬುದ್ಧಿ ಸಹಧರ್ಮಿಣಿ ಹಿಂಸೆ, ಕ್ರೌರ್ಯ, ಅಸತ್ಯಾದಿ ಅಧರ್ಮಾಚರಣೆಗೆ ದುರ್ಬುದ್ಧಿ ಎಂಬ ಹೆಂಡತಿ ಜೊತೆಗೆ ಇರುತ್ತಾಳೆ ಈ ಇಬ್ಬರು ಹೆಂಡತಿಯರ ಸಂಗದಿಂದ ಜೀವ ಸತ್ಕರ್ಮ-ದುಷ್ಕರ್ಮಗಳೆಂಬ ಸಂತತಿಯನ್ನು ಪಡೆಯುತ್ತಾನೆ ಪ್ರದ್ಯುಮ್ನನೆ ಬುದ್ಧಿಗೆ ಪ್ರವರ್ತಕ ಭಕ್ತಿಯಿಂದ ನೆನೆದರೆ ಸುಬುದ್ಧಿ ಕೊಡುತ್ತಾನೆ ನೆನೆಯದಿದ್ದರೆ ದುರ್ಬುದ್ಧಿ ನೀಡುತ್ತಾನೆ ಅದರಿಂದ ಕೃತಿದೇವಿಯ ಪತಿಯಾದ ಪ್ರದ್ಯುಮ್ನ 'ಬುದ್ಧಿ' ಎನಿಸುತ್ತಾನೆ

**ಸಿದ್ಧಿ ಎನಿಸುವ ಸಂಕರ್ಷಣ**

ಸಿದ್ಧಿ ಎಂದರೆ ಕಾರ್ಯಸಿದ್ಧಿ ಬುದ್ಧಿಬಲದಿಂದ ವಿದ್ಯೆ, ಕಾರ್ಯಸಿದ್ಧಿ ಮಾಡಿಕೊಡು-ತ್ತದೆ ಕಾರ್ಯಸಿದ್ಧಿ ಸಂಕರ್ಷಣನ ಸ್ಮರಣೆಯಿಂದಾಗುತ್ತದೆ

ಸಂಕರ್ಷಣನ್ನ ನೆನೆದರೆ ಸಂತಾನಾಭಿವೃದ್ಧಿಯು

ಎಂದು ವಾದಿರಾಜರು ಹೇಳುವಂತೆ ಸಂತಾನ, ಸಂಪತ್ತು ಮುಂತಾದ ಸಕಲವೂ ಸಿದ್ಧಿಸುವುದು ಸಂಕರ್ಷಣನ ಅಧೀನವಾದ್ದರಿಂದ ಸಂಕರ್ಷಣ 'ಸಿದ್ಧಿ' ಎನಿಸುತ್ತಾನೆ

**ಪ್ರಸಿದ್ಧಿನಾಮಕ ವಾಸುದೇವ**

ಕಾರ್ಯಸಿದ್ಧಿಯಿಂದ ಪ್ರಸಿದ್ಧಿ, ಅಂದರೆ ಯಶಸ್ಸು ಕೀರ್ತಿ ಇದಕ್ಕೆ ನಿಯಾಮಕ ವಾಸು-ದೇವ

ಆವನಂಗುಷ್ಠವ ತೊಳೆದ ಗಂಗಾದೇವಿ ಪಾವನಳೆನಿಸಿ ಮೆರೆಯಳೆ?
ಜೀವನ ನೇರುವ ಪಾಪವ ಕಳೆವಳು ಈ ವಾಸುದೇವಗೆ ಎಣೆಯುಂಟೆ?

ಎಂದು ವಾದಿರಾಜರು ಲಕ್ಷ್ಮೀಶೋಭನಪದದಲ್ಲಿ ಹೇಳುವಂತೆ, ವಾಸುದೇವ ಬ್ರಹ್ಮನನ್ನು ಹೆತ್ತ ತಂದೆ, ಬ್ರಹ್ಮ ಆ ತಂದೆಯ ಕಾಲ ಅಂಗುಷ್ಠವನ್ನು ತೊಳೆದ ಆ ನೀರು ಗಂಗೆಯಾಗಿ ಹರಿದು ಮೂಲೋಕದ ಪಾಪವನ್ನು ಕಳೆದಳು 'ಗಂ-ಗಾ' ಪಾಪವನ್ನು ಬಹು ಚೆನ್ನಾಗಿ ತೊಲಗಿಸುವವಳು ನೂರಾರು ಯೋಜನಗಳಷ್ಟು ದೂರದಿಂದಲೂ 'ಗಂಗೇ ಗಂಗೇ' ಎಂದು ಕೂಗಿ ಕರೆದರೆ ಸಾಕು ಇಂಥ ಕೀರ್ತಿಯುಳ್ಳ ಗಂಗೆಯನ್ನು ಹೆತ್ತವ ವಾಸುದೇವ ಅವನ ಕೀರ್ತಿ ಇನ್ನೇನು!

ತಸ್ಮೈ ಸುಭದ್ರಶ್ರವಸೇ ನಮೋ ನಮಃ

ಅದರಿಂದ ಪ್ರಸಿದ್ಧಿಗೆ ನಿಯಾಮಕನಾದ ವಾಸುದೇವ 'ಪ್ರಸಿದ್ಧಿ' ನಾಮಕನಾಗಿದ್ದಾನೆ

**ಅಥವಾ**

### ವಿದ್ಯೆ ತಾನೆಂದೆನಿಸಿಕೊಂಬ ಅನಿರುದ್ಧದೇವನು

ವಿದ್ಯೆ ಎಂದರೆ ಜ್ಞಾನ, ಜೀವನ ಸ್ವರೂಪಭೂತ ಜ್ಞಾನ ಜ್ಞಾನವೆ ಜೀವನ ಸ್ವರೂಪ ಶರೀರ ಅದು ಇನ್ನೂ ಪೂರ್ಣ ವ್ಯಕ್ತವಾಗಿಲ್ಲ ಸಂಸಾರಾವಸ್ಥೆಯಲ್ಲಿ ಸಾಧನ ಮಾಡಿ ಮೋಕ್ಷ-ದಲ್ಲಿ ಅದನ್ನು ವ್ಯಕ್ತಗೊಳಿಸಬೇಕು ತಕ್ಕ ಸಾಧನೆ ಮಾಡಿಸಿ ಆ ಮೂಲಕ ವ್ಯಕ್ತಗೊಳಿಸುವ ಕಾರ್ಯ ಪಾಲನಮೂರ್ತಿಯಾದ ಅನಿರುದ್ಧನದು ಅವರವರಿಗೆ ಯೋಗ್ಯವಾದ ಸಾಧನೆ ಮಾಡಿಸುವುದೇ ಪಾಲನೆ ಅದರಿಂದ ಅನಿರುದ್ಧ 'ವಿದ್ಯೆ' ಎನಿಸುತ್ತಾನೆ

### ಕೃತಿಪತಿ ಬುದ್ಧಿ ಎನಿಸುವನು

ಬುದ್ಧಿ ಎಂದರೆ ಬುದ್ಧಿತತ್ತ್ವ ವಿದ್ಯಾಸ್ವರೂಪನಾದ ಜೀವನನ್ನು ಪ್ರಾಕೃತವಾದ ಬುದ್ಧಿತತ್ತ್ವ ಮುಂತಾದ ಇಪ್ಪತ್ತನಾಲ್ಕು ತತ್ತ್ವಗಳು ಲಿಂಗಶರೀರದ ರೂಪದಿಂದ ಆವರಿಸಿವೆ ಲಿಂಗಶರೀರದಲ್ಲಿ ನಿಯಾಮಕನಾಗಿ ಪ್ರದ್ಯುಮ್ನನಿದ್ದಾನೆ ಅವನು ಸೃಷ್ಟಿಕಾರಕ ಮೂರ್ತಿ ಜೀವನಿಗೆ ಸ್ಥೂಲಶರೀರಪ್ರಾಪ್ತಿಯೆ ಸೃಷ್ಟಿ ಈ ಸೃಷ್ಟಿಗೆ ಲಿಂಗಶರೀರ ಆವಶ್ಯಕ ಅದರಿಂದ ಲಿಂಗಶರೀರದಲ್ಲಿದ್ದು ಪ್ರದ್ಯುಮ್ನ ಜೀವನನ್ನು ಒಂದು ಸ್ಥೂಲಶರೀರದಿಂದ ಇನ್ನೊಂದಕ್ಕೆ ಒಯ್ಯುತ್ತಾನೆ ಅದರಿಂದ 'ಬುದ್ಧಿ' ಎನಿಸಿದ ಲಿಂಗಶರೀರಕ್ಕೆ ನಿಯಾಮಕನಾದ ಕೃತಿಪತಿ ಪ್ರದ್ಯುಮ್ನ 'ಬುದ್ಧಿ' ಎನಿಸುತ್ತಾನೆ

### ಸಿದ್ಧಿ ಎನಿಸುವ ಸಂಕರ್ಷಣ

ಮುಷ್ಟಿಸೃಷ್ಟಿಯ ಆದಿಯಲ್ಲಿ ಲಿಂಗಶರರದ ಮೇಲೆ ಸೂಕ್ಷ್ಮವಾದ ಅನಿರುದ್ಧಶರೀರದ ಆವರಣ ಬರುತ್ತದೆ ಅದರಿಂದಲೆ ಸ್ಥೂಲಶರೀರಸಂಯೋಗವಿಯೋಗರೂಪ ಜನನ-

ಮರಣರೂಪವಾದ ಸಂಸಾರಸಿದ್ಧಿ ಅದರಿಂದ ಜ್ಞಾನಸಿದ್ಧಿ, ಅದರಿಂದ ಮೋಕ್ಷಸಿದ್ಧಿ ಹೀಗೆ ಎಲ್ಲ ಸಿದ್ಧಿಗೆ ನಿಯಾಮಕ ಅನಿರುದ್ಧಶರೀರದಲ್ಲಿರುವ ಸಂಕರ್ಷಣ 'ಸಿದ್ಧಿ' ಎನಿಸುತ್ತಾನೆ

**ಪ್ರಸಿದ್ಧಿನಾಮಕ ವಾಸುದೇವ**

ಅನಿರುದ್ಧಶರೀರ 'ಸಿದ್ಧಿ' ಎನಿಸಿದಾಗ ಸ್ಥೂಲಶರೀರ 'ಪ್ರಸಿದ್ಧಿ' ಎನಿಸಲೇಬೇಕು ಸ್ಥೂಲ ಶರೀರದಿಂದಲೆ ಮುಖ್ಯವಾಗಿ ಸಕಲ ಅಭೀಷ್ಟಸಿದ್ಧಿ ಸ್ಥೂಲಶರೀರದಲ್ಲಿನಿಂತು ಜೀವನಿಗೆ ಮೋಕ್ಷಸಿದ್ಧಿರೂಪವಾದ ಪ್ರಸಿದ್ಧಿ ತಂದುಕೊಡುವವನು ವಾಸುದೇವ ಅದರಿಂದ ಅವನೆ 'ಪ್ರಸಿದ್ಧಿ' ನಾಮಕ

**ಅಥವಾ**

***ವಿದ್ಯೆ ತಾನೆಂದೆನಿಸಿಕೊಂಬ ಅನಿರುದ್ಧದೇವನು***

ವಿದ್ಯೆ ಎಂದರೆ ಜ್ಞಾನ, ಭಗವದ್ಗೀತೆಯಲ್ಲಿಸಾತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯ ಜ್ಞಾನವನ್ನುಹೇಳಿದೆ ಅವುಗಳಲ್ಲಿಸಾತ್ವಿಕಜ್ಞಾನವೆ ಮೋಚಕ ರಾಜಸತಾಮಸಗಳು ಬಂಧಕ ಪಾಲನಮೂರ್ತಿಯಾದ ಅನಿರುದ್ಧನನ್ನು ಭಜಿಸಿದರೆ ಅವನು ಸಾತ್ವಿಕ ಜ್ಞಾನ ನೀಡಿ ಮೋಕ್ಷಕ್ಕೆ ಒಯ್ಯುತ್ತಾನೆ ಭಜಿಸದಿದ್ದರೆ ರಾಜಸತಾಮಸಜ್ಞಾನಗಳನ್ನು ನೀಡಿ ನಿತ್ಯ ಸಂಸಾರದಲ್ಲಿಯೋ ತಮಸ್ಸಿನಲ್ಲಿಯೋ ಹಾಕುತ್ತಾನೆ ಅದರಿಂದ ಅನಿರುದ್ಧ ತಾನು 'ವಿದ್ಯೆ' ಎನಿಸುತ್ತಾನೆ

***ಕೃತಿಪತಿ ಬುದ್ಧಿ ಎನಿಸುವನು***

ಬುದ್ಧಿಎಂದರೆ ವಿವೇಚನಾಶಕ್ತಿ ಕರ್ತವ್ಯದ ಮಾರ್ಗವನ್ನುನಿರ್ಧರಿಸುವ ಶಕ್ತಿ ಇದೂ ಭಗವದ್ಗೀತೆ ಹೇಳುವಂತೆ ಸಾತ್ವಿಕ, ರಾಜಸ, ತಾಮಸ ಎಂದು ಮೂರು ಬಗೆ ಸಾತ್ವಿಕರಲ್ಲಿ ಸಾತ್ವಿಕ, ರಾಜಸರಲ್ಲಿ ರಾಜಸ, ತಾಮಸರಲ್ಲಿ ತಾಮಸವಾಗಿರುವ ಈ ಬುದ್ಧಿಶಕ್ತಿ ಜೀವರಿಗೆ ಹುಟ್ಟಿನಿಂದಲೇ ಬಂದಿರುತ್ತದೆ ಹುಟ್ಟುಗುಣ ಅದು ಹುಟ್ಟಿಸುವ ಕೃತಿಪತಿ ಪ್ರದ್ಯುಮ್ನನ ಅಧೀನ ಅದರಿಂದ 'ಬುದ್ಧಿ' ಎನಿಸುತ್ತಾನೆ ಪ್ರದ್ಯುಮ್ನ

***ಸಿದ್ಧಿ ಎನಿಸುವ ಸಂಕರ್ಷಣ***

ಸಿದ್ಧಿ ಎಂದರೆ ಯೋಗಜನ್ಯವಾದ ಅಷ್ಟೈಶ್ವರ್ಯಸಿದ್ಧಿ ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ ಪ್ರಾಕಾಮ್ಯ, ಈಶಿತ್ವ, ವಶಿತ್ವ—ಇವೇ ಅಷ್ಟಸಿದ್ಧಿಗಳು ಅಣಿಮಾ ಎಂದರೆ ಪರಮಾಣುವಿನಂತೆ ಸಣ್ಣ ಸೂಕ್ಷ್ಮರೂಪ ತಾಳುವುದು ಅಥವಾ ಆಕಾಶದಂತೆ ವ್ಯಾಪ್ತವಾದ ಅವ್ಯಕ್ತವಾದ ರೂಪ ತಾಳುವುದು ಮಹಿಮಾ ಎಂದರೆ ಸ್ಥೂಲವಾದ ದೊಡ್ಡ ರೂಪ ಗರಿಮಾ ಬೆಟ್ಟದಷ್ಟುಭಾರವಾಗುವುದು ಲಘಿಮಾ ಹತ್ತಿಯಂತೆ ಹಗುರಾಗುವುದು ಪ್ರಾಪ್ತಿ ಇನ್ನೊಬ್ಬರ ಕಣ್ಣು ಕೈಕಾಲುಗಳಿಂದ ತಾನು ಕಾರ್ಯ ಮಾಡುವುದು ಪ್ರಾಕಾಮ್ಯ ವಿಷಯಪದಾರ್ಥವಿಲ್ಲದೆಯೂ ವಿಷಯಸುಖ ಪಡೆಯುವುದು ಈಶಿತ್ವ ಅಧಿಕಶಕ್ತಿ ಪಡೆಯುವುದು ವಶಿತ್ವ ವಿಷಯಾಸಕ್ತಿಯ ಬಂಧನಕ್ಕೊಳಗಾಗದಿರುವುದು

ಪ್ರಾಕಾಶ್ಯವೆಂದು ಇನ್ನೊಂದು ಸಿದ್ಧಿ ಇದೆ ವೇದಾದಿಗಳನ್ನು ಓದದೆಯೆ ಯೋಗಬಲ-ದಿಂದ ಪದಾರ್ಥವನ್ನು ತಿಳಿಯುವುದು, ಅಶ್ರುತ ಪ್ರತಿಭೆ, ಪ್ರಾಕಾಶ್ಯವೆನಿಸುವುದು ಇದನ್ನು ಪ್ರಾಪ್ತಿಯ ಜೊತೆಗೇ ಸೇರಿಸಿ ಪರಿಗಣಿಸುವುದರಿಂದ ಸಿದ್ಧಿಗಳು ಎಂಟೇ ಅಥವಾ ಮಹಿಮೆ-ಯೊಂದಿಗೆ ಗರಿಮೆಯನ್ನು ಒಂದಾಗಿ ಇಟ್ಟುಕೊಂಡು ಪ್ರಾಕಾಶ್ಯವನ್ನು ಬೇರೆಯಾಗಿ ಪರಿಗಣಿಸಿ ಎಂಟು ಸಿದ್ಧಿಗಳೆನ್ನುವುದುಂಟು

ಭಾಗವತ ಏಕಾದಶ ಸ್ಕಂಧದಲ್ಲಿ ಇನ್ನೂ ಹದಿನೆಂಟು ಸಿದ್ದಿಗಳು ಬೇರೆ ಉಕ್ತವಾಗಿವೆ ಮನೋವೇಗ, ಬಯಸಿದ ರೂಪ, ಪರಕಾಯಪ್ರವೇಶ, ಸ್ವಚ್ಛಂದಮರಣ, ದೇವತೆ-ಗಳೊಂದಿಗೆ ವಿಹರಿಸುವುದು, ತಾನು ಸಂಕಲ್ಪಿಸಿದಂತೆ ಎಲ್ಲ ಸಿದ್ಧಿಸುವುದು, ಈ ಆರು 'ಪ್ರಾಪ್ತಿ' ಎಂಬ ಸಿದ್ಧಿಯಲ್ಲಿ ಸೇರುವವುಗಳು ದೂರಶ್ರವಣ, ದೂರದರ್ಶನ, ತ್ರಿಕಾಲಜ್ಞಾನ, ಪರಚಿತ್ತಾಭಿಜ್ಞತೆ ಇವು ನಾಲ್ಕು ಪ್ರಾಕಾಶ್ಯದಲ್ಲಿ ಸೇರುವವುಗಳು ತನ್ನ ಇಚ್ಛೆಯಂತೆ ಎಲ್ಲ ಪ್ರಾಣಿಗಳೂ ಮನುಷ್ಯರೂ ವರ್ತಿಸುವುದು, ಶೀತೋಷ್ಣಾದಿದ್ವಂದ್ವವನ್ನು ಸಹಿಸುವುದು, ಅಗ್ನಿಸ್ತಂಭ, ಜಲಸ್ತಂಭ, ಸೂರ್ಯಸ್ತಂಭ, ಶಸ್ತ್ರಾಸ್ತ್ರಾದಿಸ್ತಂಭ, ಯಾರಿಂದಲೂ ಪರಾಜಯ-ವಾಗದಿರುವುದು ಇವು ಏಳು ಈಶಿತ್ವಗಳು ವಿಷಯಭೋಗವಿಲ್ಲದೆ ಸುಖಪಡೆಯುವುದು ಎನ್ನುವ ಪ್ರಾಕಾಮ್ಯ ಇವೇ ಅಷ್ಟಾದಶ ಸಿದ್ಧಿಗಳು

ಸಂಕರ್ಷಣಮೂರ್ತಿಯಲ್ಲಿ ಈ ಎಲ್ಲ ಸಿದ್ದಿಗಳೂ ಪರಿಪೂರ್ಣವಾಗಿ ಇವೆ ಎಂದು ಯೋಗಿ ಅವುಗಳನ್ನು ಧ್ಯಾನಿಸಿ ತನ್ನಲ್ಲಿ ಅವು ಬರಲಿ ಎಂದು ಬಯಸಿದರೆ ಒಡನೆ ಆ ಸಿದ್ಧಿ-ಗಳು ಅವನ ಯೋಗ್ಯತಾನುಸಾರ ಅವನಿಗೆ ಲಭಿಸುವುವು 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂಬ ಶ್ರುತಿ ಹಾಗೇ ಹೇಳುತ್ತದೆ ಹೀಗೆ ಸಿದ್ಧಿಕಾರಕನಾದ್ದರಿಂದ ಸಂಕರ್ಷಣ 'ಸಿದ್ಧಿ' ಎನಿಸುತ್ತಾನೆ

**ಪ್ರಸಿದ್ಧಿನಾಮಕ ವಾಸುದೇವ**

ಪ್ರಸಿದ್ಧಿ ಎಂದರೆ ಯೋಗಸಿದ್ಧಿಗಿಂತಲೂ ಮಿಗಿಲಾದ ಮೋಕ್ಷಾನಂದ ಸಿದ್ಧಿ ಇದು ನಾಲ್ಕು ಬಗೆ ಸಾಯುಜ್ಯ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಎಂದು ವಾಸುದೇವನ ಅಂಗಗಳಲ್ಲಿಯೆ ನೆಲೆಸಿ ಸ್ವರೂಪಾನಂದ ಅನುಭವಿಸುವುದು ಸಾಯುಜ್ಯ ಇದು ತತ್ವ-ದೇವತೆಗಳಿಗೆ ಮಾತ್ರ ಲಭ್ಯ ವಾಸುದೇವನ ಅಂತಃಪುರದಲ್ಲಿಯೆ ವಾಸ ಮಾಡುತ್ತ ಸ್ವರೂ-ಪಾನಂದ ಅನುಭವಿಸುವುದು ಸಾಲೋಕ್ಯ ವೈಕುಂಠಾದಿ ಲೋಕಗಳಿಗೆ ಸಮೀಪ ಪ್ರದೇಶ-ಗಳಲ್ಲಿ ವಿಹರಿಸುವುದು ಸಾಮೀಪ್ಯ ಸತ್ಯಲೋಕಾದಿಗಳಲ್ಲಿ ಹರಿಯಂತೆ ಚತುರ್ಭುಜ, ಶಂಖಚಕ್ರಾದಿಯುಕ್ತರಾಗಿ ವಿಹರಿಸುವುದೇ ಸಾರೂಪ್ಯ ಮೋಕ್ಷ ಎಂದು ವಾದಿರಾಜರು ವೈಕುಂಠ ವರ್ಣನೆಯಲ್ಲಿ ಹೇಳುತ್ತಾರೆ ಹೀಗೆ ಮೋಕ್ಷರೂಪವಾದ ಪ್ರಸಿದ್ಧಿಗೆ ನಿಯಾಮಕ-ನಾಗಿದ್ದು 'ಪ್ರಸಿದ್ಧಿ' ನಾಮಕನಾಗಿರುವವನು ವಾಸುದೇವ

**ಅನವದ್ಯರೂಪಚತುಷ್ಟಯ**

ಈ ನಾಲ್ಕು ರೂಪಗಳೂ ಅನವದ್ಯ, ದೋಷರಹಿತ ವಿದ್ಯಾ, ಬುದ್ಧಿ ಸಿದ್ಧಿ ಪ್ರಸಿದ್ಧಿಗಳಲ್ಲಿ ದೋಷಗಳಿರಬಹುದು ಅವು ಪರಮಾತ್ಮನ ಸ್ವರೂಪಗಳಲ್ಲ ಕೇವಲ ಪ್ರತಿಮೆಗಳು ಅವುಗಳೊಳಗೆ ಅವುಗಳ ಹೆಸರಿನಿಂದ ಇರುತ್ತಾನೆ ಆತ

ವಿದ್ಯಾವಿದ್ಯೇ ಮಮ ತನೂ ವಿದ್ಧ್ಯುದ್ಧವ ಶರೀರಿಣಾಮ್

ಎಂದು ಭಾಗವತ ಹೇಳಿದಾಗ ತಾತ್ಪರ್ಯದಲ್ಲಿ ಹೀಗೆ ವಿವರಣೆ ನೀಡಲಾಗಿದೆ

ವಿದ್ಯಾವಿದ್ಯೇ ಮಮ ತನೂ ಪ್ರತಿಮಾವತ್ ಸದೋದಿತೇ ।
ಸದಾ ತದ್ವ್ಯತಿರಿಕ್ತಸ್ಯ ನಿತ್ಯಜ್ಞಾನಸುಖಾತ್ಮನಃ ॥

'ಪರಮಾತ್ಮನಿಗೆ ವಿದ್ಯೆ, ಅವಿದ್ಯೆ ಮುಂತಾದುವು ಪ್ರತಿಮೆಯಂತೆ ಅವನು ಅವುಗಳಿಗಿಂತ ಸದಾ ಬೇರೆಯೆ ಆಗಿರುತ್ತಾನೆ ನಿತ್ಯಜ್ಞಾನಾನಂದಸ್ವರೂಪನಾಗಿರುತ್ತಾನೆ ಹೀಗೆ ತಿಳಿದವನೆ ನಿಜವಾಗಿ ಜ್ಞಾನಿ ಎನಿಸುತ್ತಾನೆ'

**ತನುಚತುಷ್ಟಯಗಳೊಳು ನಾರಾ-**
**ಯಣನು ಹೃತ್ಕಮಲಾಖ್ಯ ಸಿಂಹಾ-**
**ಸನದೊಳನಿರುದ್ಧಾದಿ ರೂಪಗಳಿಂದ ಶೋಭಿಸುತ ।**
**ತನಗೆ ತಾನೇ ಸೇವ್ಯ ಸೇವಕ-**
**ನೆನಿಸಿ ಸೇವಾಸಕ್ತ ಸುರರೊಳ-**
**ಗನವರತ ನೆಲೆಸಿದ್ದು ಸೇವೆಯ ಕೊಂಬನವರಂತೆ ॥ ೭ ॥**

ಜೀವರ ನಾಲ್ಕು ಶರೀರಗಳಲ್ಲಿ ಹೃತ್ಕಮಲವೆಂಬ ಸಿಂಹಾಸನದಲ್ಲಿ ನಾರಾಯಣ ಅನಿರುದ್ಧಾದಿ ರೂಪಗಳಿಂದ ಶೋಭಿಸುತ್ತ ತನಗೆ ತಾನೇ ಸೇವ್ಯನೂ ಸೇವಕನೂ ಎನಿಸುತ್ತಾನೆ ನಾಲ್ಕು ಶರೀರಗಳಲ್ಲಿರುವ ಸೇವಾಸಕ್ತ ಸುರರಲ್ಲಿಯೂ ಸದಾ ನೆಲೆಸಿದ್ದು ಅವರಂತೆ ತಾನೂ ಸೇವೆಯನ್ನು ಕೈಗೊಳ್ಳುತ್ತಾನೆ

**ತನುಚತುಷ್ಟಯಗಳೊಳು**

ಜೀವ ಲಿಂಗನಿರುದ್ಧ ಸ್ಥೂಲ ಕ-
ಳೇವರಗಳೊಳು ವಿಶ್ವ ತುರಗ-
ಗ್ರೀವ ಮೂಲೇಶಾಚ್ಯುತತ್ರಯ ಹಂಸಮೂರ್ತಿಗಳ ।

ಎಂದು ಮುಂದೆ ಪಂಚತನ್ಮಾತ್ರಾಸಂಧಿಯಲ್ಲಿ ಜೀವಸ್ವರೂಪಶರೀರ, ಲಿಂಗಶರೀರ, ಅನಿರುದ್ಧಶರೀರ, ಸ್ಥೂಲಶರೀರ ಹೀಗೆ ನಾಲ್ಕು ಶರೀರಗಳಲ್ಲಿ ಬೇರೆ ಬೇರೆ ಭಗವದ್ರೂಪ-ಗಳ ಸನ್ನಿಧಾನ ಉಕ್ತವಾಗಿದೆ ವರ್ಣಪ್ರಕ್ರಿಯಾಸಂಧಿಯಲ್ಲಿಯೂ,

ನಾರಸಿಂಹ ಸ್ವರೂಪದೊಳಗೆ ಶ-
ರೀರನಾಮದಿ ಕರೆಸುವನು ಹದಿ-
ನಾರು ಕಳೆಗಳನುಳ್ಳ ಲಿಂಗದಿ ಪುರುಷನಾಮಕನು ।
ತೋರುವನು ಅನಿರುದ್ಧದೊಳು ಶಾಂ-
ತೀರಮಣನನಿರುದ್ಧರೂಪದಿ
ಪ್ರೇರಿಸುವ ಪ್ರದ್ಯುಮ್ನ ಸ್ಥೂಲಕಳೇವರದೊಳಿದ್ದು ॥

ಎಂಬಲ್ಲಿ ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲ ಎಂಬ ನಾಲ್ಕು ಶರೀರಗಳಲ್ಲಿಯೇ ನಾಲ್ಕು ಭಗವದ್ರೂಪಗಳನ್ನು ಹೇಳಿದೆ ಅದೇ ರೀತಿ ಇಲ್ಲಿಯೂ 'ತನುಚತುಷ್ಟಯ'ವೆಂದರೆ ಅವೇ ನಾಲ್ಕು ಶರೀರಗಳು ಅವುಗಳಲ್ಲಿ ನಾರಾಯಣನ ಅನಿರುದ್ಧಾದಿ ರೂಪಗಳು ಉಕ್ತವಾಗಿವೆ

ಆದರೆ ಅಲ್ಲಿ ಹೇಳಿದಂತೆ ಇಲ್ಲಿ 'ನಾಲ್ಕು ಶರೀರಗಳಲ್ಲಿ ಕ್ರಮವಾಗಿ ನಾಲ್ಕು ಭಗವದ್ರೂಪಗಳು' ಎನ್ನಬೇಕಾಗಿಲ್ಲ ಹಾಗೇನೂ ಸ್ಪಷ್ಟವಾಗಿ ಹೇಳಿಲ್ಲ 'ನಾಲ್ಕು ಶರೀರಗಳಲ್ಲಿಯೂ ಅನಿರುದ್ಧಾದಿ ಎಲ್ಲ ರೂಪಗಳಿವೆ' ಎನ್ನಬಹುದು ಏಕೆಂದರೆ ಅಲ್ಲಿ ಬೇರೆಬೇರೆಯಾಗಿ ನಿಯಾಮಕನಾಗಿ ನೆಲೆಸಿದ ರೂಪಗಳು ಪ್ರಸ್ತುತವಾಗಿವೆ ಇಲ್ಲಿ ತನಗೆ ತಾನೇ ಸೇವ್ಯನೂ ಸೇವಕನೂ ಆಗಿ ಲೀಲೆ ನಡೆಸುವ ರೂಪಗಳು ಪ್ರಸ್ತುತವಾಗಿವೆ

***ತನಗೆ ತಾನೇ ಸೇವ್ಯ ಸೇವಕನೆನಿಸಿ***

ಹರಿ ಸ್ವತಂತ್ರ, ಸರ್ವಶಕ್ತ, ಪೂರ್ಣಾನಂದಮಯ, ಸ್ವರಮಣ ಅವನಿಗೆ ಇನ್ನೊಬ್ಬರಿಂದ ಸೇವೆ ಬೇಕಾಗಿಲ್ಲ ಇನ್ನೊಬ್ಬರಿಂದ ಸುಖ ಬರಬೇಕಾಗಿಲ್ಲ ಆದರಿಂದ ಲೀಲೆಯಿಂದ ತನಗೆ ತಾನೇ ಸೇವೆ ಮಾಡುತ್ತಾನೆ ತಾನೆ ಸೇವೆ ಕೈಗೊಳ್ಳುತ್ತಾನೆ ತನ್ನನ್ನು ಅಪ್ಪಿಕೊಂಡು ತಾನೆ ಸುಖಿಸುತ್ತಾನೆ ತನ್ನನ್ನು ಕಂಡು ತಾನೆ ಮೈಮರೆಯುತ್ತಾನೆ ತನ್ನನ್ನು ಉಂಡು ತಾನೆ ರಸ ಸವಿಯುತ್ತಾನೆ ಆದರೆ ಇದಕ್ಕಾಗಿ ಲೀಲೆಯಿಂದ ಬೇರೆ ಬೇರೆ ರೂಪಗಳನ್ನು ತಾಳುತ್ತಾನೆ

ಉದಾಹರಣೆಗೆ ನೀರಲ್ಲಿ ಅನಿರುದ್ಧರೂಪದಿಂದ, ಅನ್ನದಲ್ಲಿ ನಾರಾಯಣರೂಪದಿಂದ ಇದ್ದು ನೀರು ಉಣ್ಣುವ ನಮ್ಮ ಹೊಟ್ಟೆಯನ್ನು ತಂಪಾಗಿಸುತ್ತಾನೆ ನಮ್ಮ ಶರೀರದ ಪ್ರಾಣವಾಯುವಿನಲ್ಲಿ ಸಂಕರ್ಷಣರೂಪದಿಂದಲೂ ಪ್ರಾಣವಾಯುವಿನ ಸಂಯೋಗದಿಂದ ಜ್ವಲಿಸುವ ಜಾರರಾಗ್ನಿಯಲ್ಲಿ ಪ್ರದ್ಯುಮ್ನರೂಪದಿಂದಲೂ ಇದ್ದು, ನಮಗೆ ಉಣಲು ಶಕ್ತಿ ನೀಡಿ ನಾವು ಉಣ್ಣುವ ಅನ್ನನೀರುಗಳನ್ನು ವಸ್ತುತಃ ಅವನೇ ಉಂಡು ತೃಪ್ತನಾಗುತ್ತಾನೆ ಅಂದರೆ ಪ್ರದ್ಯುಮ್ನಸಂಕರ್ಷಣರೂಪಗಳಿಂದ ಅನಿರುದ್ಧನಾರಾಯಣರೂಪಗಳನ್ನು ಸೇರಿ ಒಂದಾಗಿ ಭೋಜನದ ಸುಖವನ್ನು ವ್ಯಕ್ತಪಡಿಸಿಕೊಳ್ಳುತ್ತಾನೆ ಹೃತ್ಕಮಲವೆಂಬ ಸಿಂಹಾಸನದಲ್ಲಿ ಕುಳಿತ ಬಿಂಬನೊಂದಿಗೆ ಸೇರಿ ಒಂದಾಗಿ ತೃಪ್ತನಾಗುತ್ತಾನೆ ಈ ಅಭಿಪ್ರಾಯದಿಂದ ಅನಿರುದ್ಧಾದಿ ರೂಪಗಳು ಹೃತ್ಕಮಲಾಖ್ಯ ಸಿಂಹಾಸನದಲ್ಲಿ ಶೋಭಿಸುತ್ತವೆ ಎಂದಿದೆ ಹೀಗೆ

ಹರಿ ತನಗೆ ತಾನೇ ಸೇವ್ಯ ಅಂದರೆ ಭೋಜ್ಯನಾಗುತ್ತಾನೆ ತನಗೆ ತಾನೇ ಸೇವಕ ಎಂದರೆ ಭೋಕ್ತನೂ ಆಗುತ್ತಾನೆ ಐತರೇಯೋಪನಿಷತ್‌ಭಾಷ್ಯ ಹೀಗೆ ಹೇಳಿದೆ—

ಸಂಕರ್ಷಣಶ್ಚ ಪ್ರದ್ಯುಮ್ನಸ್ತತ್ರ ಭೋಕ್ತೃಷು ಸಂಸ್ಥಿತೌ ।
ಭೋಕ್ತೃಶಕ್ತಿಪ್ರದೌ ನಿತ್ಯಂ ಭೋಕ್ತಾರೌ ಚ ವಿಶೇಷತಃ ॥
ನಾರಾಯಣಾನಿರುದ್ಧೌ ತೌ ಭೋಗ್ಯವಸ್ತುಷು ಸಂಸ್ಥಿತೌ ।
ತರ್ಪಕೌ ಸರ್ವಲೋಕಾನಾಂ ತಸ್ಮಾದ್ ಭೋಗ್ಯೌ ನ ಚರ್ವ್ಯತಃ ॥

ಪಶುಗಳ ಬೆನ್ನ ಮೇಲೇರಿ ಮಾನವ ಸವಾರಿ ಮಾಡುತ್ತಾನೆ ಆಗ ವಸ್ತುತಃ ಪಶುಗಳಲ್ಲಿ ನಾರಾಯಣ ಅನಿರುದ್ಧರು ಇದ್ದು ಹೊರುತ್ತಾರೆ ಮಾನವನಲ್ಲಿ ಸಂಕರ್ಷಣಪ್ರದ್ಯುಮ್ನರು ಇದ್ದು ಸವಾರಿ ಮಾಡುತ್ತಾರೆ ಹೀಗೆ ಹರಿ ತನಗೆ ತಾನೇ ಸೇವ್ಯ ಹೊರುವ ಸೇವೆಯನ್ನು ಕೊಳ್ಳುವವನು, ಮತ್ತು ತನಗೆ ತಾನೇ ಸೇವಕ, ಹೊರುವವನೂ ಆಗಿರುತ್ತಾನೆ ಇದನ್ನೂ ಐತರೇಯ ಭಾಷ್ಯ ಹೇಳಿದೆ—

ನಾರಾಯಣಾನಿರುದ್ಧೌ ತು ತಥಾನ್ಯಪಶುಷು ಸ್ಥಿತೌ ।
ವೃಷಭಾಶ್ವಾದಿರೂಪೇಣ ತೃಪ್ತಿದಾವಖಿಲಸ್ಯ ಚ ॥
ವಾಹನೋವಾನಹಾದೀನಾಮಾರೋಢಾರೋ ನರಾದಯಃ ।
ಯತಃ ಸಂಕರ್ಷಣಶ್ಚೈವ ಪ್ರದ್ಯುಮ್ನಸ್ತೇಷು ಸಂಸ್ಥಿತೌ ॥

'ಎರಡು ಭಗವದ್ರೂಪಗಳು ಹೊರುತ್ತವೆ ಇನ್ನೆರಡು ಸವಾರಿ ಮಾಡುತ್ತವೆ' ಎಂದ ಮಾತ್ರಕ್ಕೆ ಭಗವದ್ರೂಪಗಳಲ್ಲಿ ವಸ್ತುತಃ ವೈಲಕ್ಷಣ್ಯವಿದೆ ಎಂದು ಮಾತ್ರ ತಿಳಿಯಬಾರದು ವೈಲಕ್ಷಣ್ಯ ತೋರಿಕೆಗೆ ಮಾತ್ರ. ಭಗವಂತ ಎಲ್ಲಿ ಹೆಚ್ಚಾಗಿ ತನ್ನ ಸದ್ಗುಣಗಳನ್ನು ಅಭಿವ್ಯಕ್ತಗೊಳಿಸುವನೋ ಅಲ್ಲಿ ಮಹತ್ವ ಬಂದಿರುತ್ತದೆ ಎಲ್ಲಿ ಕಡಿಮೆಯಾಗಿ ಅಭಿವ್ಯಕ್ತಗೊಳಿಸುವನೋ ಅಲ್ಲಿ ಅಲ್ಪತೆ ಇರುತ್ತದೆ ಈ ವೈಲಕ್ಷಣ್ಯ ವಾಸ್ತವವೆ

***ಸೇವಾಸಕ್ತ ಸುರರೊಳಗನವರತ ನೆಲೆಸಿದ್ದು***

'ಸೇವಾಸಕ್ತ' ಸುರರೆಂದರೆ ಭಗವಂತನ ಸೇವೆಯಲ್ಲಿ ಬಹಳ ಆಸಕ್ತರಾಗಿರುವ ತತ್ವಾಭಿಮಾನಿಗಳೂ, ಲೋಕಪಾಲಕರೂ ಆದ ದೇವತೆಗಳು ಅವರಿಗೆ ಭಗವಂತನ ಸೇವೆಯಲ್ಲಿ ಎಷ್ಟು ಆಸಕ್ತಿ ಎಂದರೆ, ಉದಾಹರಣೆಗಾಗಿ, ಐತರೇಯೋಪನಿಷತ್ತು ಹೀಗೆ ಹೇಳುತ್ತದೆ—

ತತ್ವಾಭಿಮಾನಿಗಳು ಹರಿಯನ್ನು ಬೇಡಿದರು 'ನಮಗೆ ಅನ್ನ ಉಣಲು ಒಂದು ಸ್ಥಾನ ನೀಡು' ಎಂದು ಹರಿ ಗೋಶರೀರವನ್ನು ನಿರ್ಮಾಣ ಮಾಡಿಕೊಟ್ಟ, ದೇವತೆಗಳು ಅದನ್ನು ಹೊಕ್ಕು ನೋಡಿ, 'ಇದು ಸಾಲದು' ಎಂದರು ಹರಿ ಅಶ್ವಶರೀರವನ್ನು ನಿರ್ಮಿಸಿಕೊಟ್ಟ ಅದೂ ಸಾಲದೆಂದರು ದೇವತೆಗಳು ಏಕೆಂದರೆ ತಾವು ಎತ್ತು, ಕುದುರೆ ಮುಂತಾದ ಪ್ರಾಣಿಗಳ ಶರೀರದಲ್ಲಿದ್ದರೆ ಆ ಶರೀರದ ಮೂಲಕ ಉಣಬಹುದಷ್ಟೆ ಉಣ್ಣುವ ಮೂಲಕ

ಮಾಡಬಹುದಾದ ಹರಿಸೇವೆ ಅಲ್ಲಿ ಆಗುವುದಿಲ್ಲ ಎಂದು ಅವರಿಗೆ ಅತೃಪ್ತಿ ಕೊನೆಗೆ ಹರಿ ಮಾನವಶರೀರ ನಿರ್ಮಿಸಿಕೊಟ್ಟ 'ಇದು ಚೆನ್ನಾಗಿದೆ' ಎಂದರು ದೇವತೆಗಳು ಏಕೆಂದರೆ ಮಾನವಶರೀರದಲ್ಲಿದ್ದರೆ ಪ್ರಾಣಾಗ್ನಿಹೋತ್ರ ವೈಶ್ವಾನರಯಜ್ಞವಾಗುವಂತೆ ಉಣಲು ಸಾಧ್ಯವಿದೆ ಆ ಮೂಲಕವೂ ಹರಿಸೇವೆ ಮಾಡಲು ಅವಕಾಶವಿದೆ ಹೀಗೆ ಚೆನ್ನಾಗಿ ಹರಿಸೇವೆ ಮಾಡುವ ಉದ್ದೇಶದಿಂದ ದೇವತೆಗಳು ಪ್ರಾರ್ಥಿಸಿದ ಕಾರಣ ಮಾನವರಿಗೆ ಮಾನವಶರೀರ ದೊರಕಿದೆ ಅವರಿಗೂ ಹರಿಸೇವೆ ಮಾಡಲು ಅವಕಾಶ ದೊರಕಿದೆ ಇದರಿಂದ ತತ್ವಾಭಿಮಾನಿಗಳಿಗೆ ಹರಿಸೇವೆಯಲ್ಲಿ ಎಷ್ಟು ಆಸಕ್ತಿ ಎಂಬುದನ್ನು ಊಹಿಸಬಹುದು ಇದನ್ನೂ ಐತರೇಯಭಾಷ್ಯ ಹೇಳಿದೆ—

ಪೂರ್ವಸೃಷ್ಟಂ ಪುಮಾಕಾರಂ ಬ್ರಹ್ಮಣೋಽದಾತ್ ಪುನರ್ಹರಿಃ ।
ತದ್ ದೃಷ್ಟ್ವೈವಾಲಮಿತ್ಯೂಚುಃ ॥

ಇನ್ನೊಂದು ಉದಾಹರಣೆ—ಪರಮಾತ್ಮನ ಆರಾಧನೆ ಮಾಡಲು ಬಯಸಿದ ಬ್ರಹ್ಮನಿಗೆ ಪೂಜಾಸಾಧನಗಳು ಸ್ಮರಣೆಗೆ ಬಾರದಿದ್ದುದರಿಂದ ದುಃಖ ಉಂಟಾಗಿ ದೇಹತ್ಯಾಗ ಮಾಡಬೇಕೆನಿಸಿತು ಎಂದು ಬೃಹದಾರಣ್ಯಕ ಭಾಷ್ಯ ಹೇಳಿದೆ—

ಇಚ್ಛತೋ ವಿಷ್ಣುಯಜನಂ ಬ್ರಹ್ಮಣಃ ಸಾಧನಾಸ್ಮೃತೇಃ ।
ಶ್ರಮಾತ್ ತಾಪಾಚ್ಚ ದೇಹಂ ತಂ ತ್ಯಕ್ತುಮಿಚ್ಛಾ ಬಭೂವ ಹ ॥

ಸರ್ವಶಕ್ತನಾದ ಬ್ರಹ್ಮನಿಗೆ ಇದೊಂದು ಲೀಲೆಮಾತ್ರವೆ ಆಗಿದ್ದರೂ ಪರಮಾತ್ಮನ ಆರಾಧನೆಯಲ್ಲಿ ಅವನಿಗೆ ಎಷ್ಟು ಆಸಕ್ತಿ ಎನ್ನುವುದು ಇದರಿಂದ ಸ್ಪಷ್ಟವಾಗುವುದು.

ಇನ್ನೊಂದು ಉದಾಹರಣೆ—ಬ್ರಹ್ಮನ ಹಣೆಯಿಂದ ರುದ್ರ ಜನಿಸಿದೊಡನೆ ಮಗುವಿನಂತೆ ಅಳುತ್ತ ನನಗೆ ಹೆಸರೇನು ಸ್ಥಾನವೇನು ಎಂದು ಕೇಳಿದ ಹೀಗೆ ರೋದನ ಮಾಡಿದ್ದರಿಂದ ರುದ್ರ ಎಂದು ಅವನಿಗೆ ಹೆಸರಾಯಿತು ಎಂದು ಭಾಗವತ ಹೇಳಿದೆ—

ಯದರೋದೀಃ ಸುರಶ್ರೇಷ್ಠ ಸೋದ್ವೇಗ ಇವ ಬಾಲಕಃ ।
ತತಸ್ತ್ವಾಮಭಿಧಾಸ್ಯಂತಿ ನಾಮ್ನಾ ರುದ್ರ ಇತಿ ಪ್ರಜಾಃ ॥

ಒಂದು ಉತ್ತಮವಾದ ಪದವಿಯನ್ನು ಪಡೆದು ಅದನ್ನು ಭಗವಂತನ ಪ್ರತಿನಿಧಿಯಾಗಿ ಆಳಿ ಆ ಮೂಲಕ ಭಗವಂತನ ಸೇವೆ ಮಾಡಿ ನಾಮಗೋತ್ರಾದ್ಯುಚ್ಚಾರಣಪೂರ್ವಕ ಅಭಿವಾದನ ಮಾಡುವ ಸಲುವಾಗಿ ಪದವಿಯನ್ನೂ ನಾಮವನ್ನೂ ಶಿವ ಬಯಸಿದ್ದಾನೆ

ಅದರಿಂದ ಅವನಿಗೆ ಹರಿಸೇವೆಯಲ್ಲಿ ಎಷ್ಟು ಆಸಕ್ತಿ ಎನ್ನುವುದು ಸ್ಪಷ್ಟವಾಗುತ್ತದೆ ಹೀಗೇ ಶೇಷಗರುಡಇಂದ್ರಾದಿ ದೇವತೆಗಳೂ ಹರಿಸೇವಾಸಕ್ತರು

ಸೇವಾಸಕ್ತರಾದ ಈ ದೇವತೆಗಳಲ್ಲಿಯೂ ಅವರ ಹೃತ್‌ಕಮಲವೆಂಬ ಸಿಂಹಾಸನದಲ್ಲಿ ನಾರಾಯಣ ವಾಸ ಮಾಡುತ್ತಾನೆ ತನಗೆ ತಾನೇ ಸೇವ್ಯ ಸೇವಕನೆನಿಸಿ ಅವರಂತೆಯೆ ಸೇವೆ ಕೈಗೊಳ್ಳುತ್ತಾನೆ ಇಷ್ಟುವ್ಯತ್ಯಾಸ ದೇವತೆಗಳಲ್ಲಿ ಒಬ್ಬ ಒಬ್ಬನಿಗೆ ಸೇವ್ಯನಾದರೆ ಇನ್ನೊಬ್ಬನಿಗೆ ಸೇವಕನಾಗಿರುತ್ತಾನೆ ಶ್ರೀಹರಿ ಹಾಗಲ್ಲ ಅವನು ಎಲ್ಲರಿಗೂ ಸೇವ್ಯ ಯಾರಿಗೂ ಸೇವಕನಲ್ಲ ಆದರೆ ತನಗೆ ತಾನೇ ಸೇವ್ಯನೂ ಹೌದು, ಸೇವಕನೂ ಹೌದು ಸೇವ್ಯನಲ್ಲಿದ್ದು ಸೇವ್ಯ ಸೇವಕನಲ್ಲಿದ್ದು ಸೇವಕ ಸೇವ್ಯನಿಗೆ ಸೇವೆ ಕೊಳ್ಳುವ ಸಾಮರ್ಥ್ಯವಿಲ್ಲ ಸೇವಕನಿಗೆ ಸೇವೆ ಮಾಡುವ ಸಾಮರ್ಥ್ಯವಿಲ್ಲ ಅದಕ್ಕೇ ಈ ಲೀಲೆ

ಅಥವಾ ಸೇವಾ ಅಸಕ್ತರೆಂದು ಬಿಡಿಸಬೇಕು ಸುರರು ದೇವತೆಗಳೂ ದೇವಸ್ವಭಾವದ ಸಜ್ಜನರೂ ಇತರರು ತಮಗೆ ಮಾಡುವ ಸೇವೆಯಲ್ಲಿ ಅಸಕ್ತರು, ವಿಷಯಪದಾರ್ಥಸೇವನೆ-ಯಲ್ಲಿಯೂ ಅಸಕ್ತರು

ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ

ಎಂದು ಭಗವದ್ಗೀತೆ ಹೇಳುವಂತೆ ಭಗವಂತನನ್ನು ಹೊರತು ಬೇರೆ ಕಡೆ ಅವರಿಗೆ ಆಸಕ್ತಿಯೇ ಇಲ್ಲ,

ಯದಿ ರಚಿತಧಿಯಂ ಮಾಂ ವಿದ್ಧಿ ಲೋಕಾವವಿದ್ಧಂ
ಜಗತಿ ನ ಗಣಯೇಯಂ ತ್ವತ್ಪರಾನುಗ್ರಹೇಣ

ಎಂದು ಶಿವ ಭಾಗವತದಲ್ಲಿ ತನ್ನ ಅನಾಸಕ್ತಿಯನ್ನು ಹೇಳಿಕೊಳ್ಳುತ್ತಾನೆ

ಪ್ರವರ್ಧತಾಂ ಭಕ್ತಿರಲಂ ಕ್ಷಣೇಕ್ಷಣೇ

ಎಂದು ಜ್ಞಾನಭಕ್ತಿವೈರಾಗ್ಯಗಳನ್ನೆ ಹನುಮಂತ ಶ್ರೀರಾಮನಲ್ಲಿ ಬೇಡುತ್ತಾನೆ ಆದರೆ ಶ್ರೀಹರಿ ಸೇವಾ ಅಸಕ್ತರಾದ ಇಂಥ ಸುರರಲ್ಲಿ ಅನವರತ ನೆಲೆಸಿದ್ದು ಸತ್ಯಲೋಕಕೈಲಾಸಗಳಂಥ ಪದವಿಯಲ್ಲಿ ಅವರನ್ನಿರಿಸುತ್ತಾನೆ ಎಲ್ಲ ದೇವತೆಗಳಿಂದ ಅವರಿಗೆ ಸೇವೆ ಮಾಡಿಸಿ ಅವರು ಆ ಸೇವೆಯನ್ನು ಕೊಳ್ಳುವಾಗ ಅವರಂತೆ ತಾನೂ ಆ ಸೇವೆಯನ್ನು ಕೊಳ್ಳುತ್ತಾನೆ

ಮಮಾನ್ನಂ ಸರ್ವಜೀವಾಸ್ತು ಭೋಗ್ಯಾ ಮಮ ಯತಃ ಸದಾ ।

ಎಂದು ತೈತ್ತಿರೀಯ ಭಾಷ್ಯ ಹೇಳುವಂತೆ ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ತಮಗಿಂತ ಕೆಳಗಿನ ದೇವತೆಗಳಿಂದ ಸದಾ ಸೇವೆ ಕೈಗೊಳ್ಳುತ್ತಾರೆ ಅವರೊಳಗೆ ನೆಲೆಸಿದ್ದು ಆ ಎಲ್ಲ ಸೇವೆಗಳನ್ನು ಹರಿ ತಾನು ಕೊಳ್ಳುತ್ತಾನೆ

ಅಥವಾ ಸೇವಾಸಕ್ತನಾದ ಶ್ರೀಹರಿ ಸುರರೊಳಗೆ ನೆಲೆಸಿದ್ದು ಅವರಂತೆ ಸೇವೆಯನ್ನು ಕೈಗೊಳ್ಳುತ್ತಾನೆ ಶ್ರೀಹರಿ ಸೇವಾ ಆಸಕ್ತನೂ ಹೌದು ಸೇವಾ ಅಸಕ್ತನೂ ಹೌದು ಸ್ವರಮ-ಣನಾದ್ದರಿಂದ ಅನ್ಯರ ಸೇವೆಯನ್ನು ಕೊಳ್ಳುವುದರಲ್ಲಿ ಅಸಕ್ತ ಲೀಲೆಯಿಂದ ತನಗೆ ತಾನೇ ಮಾಡುವ ಸೇವೆಯನ್ನು ಕೊಳ್ಳುವುದರಲ್ಲಿ ಆಸಕ್ತ ಅದರಿಂದ ಸೇವಾಸಕ್ತನಾದರೂ ಸೇವೆ-

ಯನ್ನು ಕೊಂಬ, ಸೇವಾನಕ್ತನಾದ್ದರಿಂದಲೆ ಸೇವೆಯನ್ನು ಕೊಂಬ ಎನ್ನುವುದು ಎರಡೂ ಸಮಂಜಸವೆ

**ಜಾಗರಸ್ವಪ್ನಂಗಳೊಳು ವರ**
**ಭೋಗಿಶಯನನು ಬಹುಪ್ರಕಾರ ವಿ-**
**ಭಾಗಗೈಸಿ ನಿರಂಶಜೀವರ ಚಿಚ್ಛರೀರವನು ।**
**ಭೋಗವಿತ್ತು ಸುಷುಪ್ತಿಕಾಲದಿ**
**ಸಾಗರವ ನದಿ ಕೂಡುವಂತೆ ವಿ-**
**ಯೋಗರಹಿತನು ಅಂಶಗಳನೇಕತ್ರವೈದಿಸುವ ॥ ೮ ॥**

ಜಾಗರಸ್ವಪ್ನಗಳಲ್ಲಿ ನಿರಂಶಜೀವರ ಚಿನ್ಮಯಶರೀರವನ್ನು ಬಹುಪ್ರಕಾರ ವಿಭಾಗ ಮಾಡಿ ಭೋಗಗಳನ್ನು ನೀಡಿ ಸುಷುಪ್ತಿ ಕಾಲದಲ್ಲಿ, ಸಾಗರವನ್ನು ನದಿಗಳು ಬಂದು ಸೇರುವಂತೆ, ಜೀವರ ಅಂಶಗಳನ್ನು ಏಕತ್ರ ಕೂಡುವಂತೆ ಮಾಡುತ್ತಾನೆ ಶೇಷಶಯನ ಶ್ರೀಹರಿ ಏಕೆಂದರೆ ಅವನು ವಿಯೋಗರಹಿತ

*ಜಾಗರಸ್ವಪ್ನಂಗಳೊಳು*

ಜೀವನಿಗೆ ಪ್ರತಿದಿನ ಮೂರು ಅವಸ್ಥೆಗಳು ಜಾಗ್ರತ್, ಸ್ವಪ್ನ, ಸುಷುಪ್ತಿ, ಎಚ್ಚರದ ಕನಸಿನ ಮತ್ತು ಗಾಢನಿದ್ರೆಯ ಅವಸ್ಥೆಗಳು

ಜಾಗ್ರದವಸ್ಥೆಯಲ್ಲಿ ನಮ್ಮ ಇಂದ್ರಿಯಗಳಲ್ಲಿ ಚಟುವಟಿಕೆ ಇರುತ್ತದೆ ಸ್ವಪ್ನಾವಸ್ಥೆಯಲ್ಲಿ ಇಂದ್ರಿಯಗಳು ಸುಮ್ಮನಾಗುತ್ತವೆ ಮನಸ್ಸು ಮಾತ್ರ ಎಚ್ಚರವಿದ್ದು ಕನಸು ಕಾಣುತ್ತದೆ ಸುಷುಪ್ತಿಯಲ್ಲಿ ಮನಸ್ಸೂ ಸುಮ್ಮನಾಗುತ್ತದೆ, ಏಕೆ?

*ಚಿಚ್ಛರೀರವನು ಬಹುಪ್ರಕಾರ ವಿಭಾಗಗೈಸಿ*

ಶರೀರ ಇಂದ್ರಿಯ ಮನಸ್ಸುಗಳಲ್ಲಿ ಜೀವನ ಅಂಶಗಳು ವ್ಯಾಪಿಸುತ್ತವೆ, ಇದ್ದಲಿನಲ್ಲಿ ಬೆಂಕಿಯಂತೆ, ಹಾಲಿನಲ್ಲಿ ನೀರಿನಂತೆ

ಚಿದಚಿನ್ಮಿಶ್ರಮೇವೈತನ್ಮನೋ ಯಾವಚ್ಚ ಸಂಸೃತಿಃ

ಸಂಸಾರದಲ್ಲಿ ಯಾವಾಗಲೂ ಜಾಗರಸ್ವಪ್ನಗಳಲ್ಲಿ ಮನಸ್ಸು ಜೀವನ ಅಂಶದಿಂದ ಮಿಶ್ರವಾಗಿಯೆ ಇರುತ್ತದೆ' ಎಂದಿದೆ ಅನುವ್ಯಾಖ್ಯಾನ (೩-೨-೫)

ಚಿನ್ಮಾತ್ರಾಣೀಂದ್ರಿಯಾಣ್ಯಾಹುರ್ಮುಕ್ತಾನಾಮನ್ಯದೈವ ತು ।
ತಾನ್ಯೇವ ಜಡಯುಕ್ತಾನಿ ಹ್ಯಭಿನ್ನಾನಿ ಸ್ವರೂಪತಃ ॥

'ಮುಕ್ತಾತ್ಮರ ಇಂದ್ರಿಯಗಳು ಕೇವಲ ಚಿನ್ಮಯವಿರುತ್ತದೆ. ಸಂಸಾರಿಗಳ ಸ್ವರೂಪೇಂದ್ರಿಯಗಳು ಜಡ ಇಂದ್ರಿಯಗಳಿಂದ ಮಿಶ್ರವಾಗಿರುತ್ತವೆ' ಎಂದು ಭಾಗವತ ತಾತ್ಪರ್ಯ(೨-೨-೨೪) ಹೇಳಿದೆ

ಇದು ಹೇಗೆ ಸಾಧ್ಯ? ಜೀವರು ಎರಡು ಬಗೆ, ಕೆಲವರು ಸಾಂಶರು, ಕೆಲವರು ನಿರಂಶರು ದೇವತೆಗಳೂ ಅಸುರರೂ ಸಾಂಶರು ಪ್ರತ್ಯೇಕ ಕಣ್ಣು ಕೈಕಾಲು ಮುಂತಾದ ಸರ್ವಾಂಗಪೂರ್ಣವಾದ ಅಂಶಗಳಿಂದ ಹೊರಗೆ ಬರಬಲ್ಲರು ಮಾನವರ ಇಂದ್ರಿಯ-ಗಳಲ್ಲಿ ಅವರು ಅಂಶಗಳಿಂದ ನಿಂತು ನಿಯಂತ್ರಿಸುತ್ತಾರೆ ಬೇರೆ ಅಂಶಗಳಿಂದ ತಾವೂ ಮನುಷ್ಯಪಶುಪಕ್ಷಿಮುಂತಾದ ಯೋನಿಗಳಲ್ಲಿ ಕರ್ಮಾನುಸಾರವಾಗಿ ಹುಟ್ಟುತ್ತಾರೆ ಕೆಲವು ಅಂಶಗಳಿಂದ ಸ್ವರ್ಗಾದಿ ಲೋಕಗಳಲ್ಲಿ ಕೆಲವು ಅಂಶಗಳಿಂದ ನಮ್ಮ ಇಂದ್ರಿಯಗಳಲ್ಲಿ, ಇನ್ನು ಕೆಲವು ಅಂಶಗಳಿಂದ ಪಂಚಭೂತಗಳಲ್ಲಿ ನಿಯಾಮಕರಾಗಿರುತ್ತಾರೆ ಇವೇ ಆಧಿ ದೈವಿಕ ಆಧ್ಯಾತ್ಮಿಕ ಮತ್ತು ಆಧಿಭೌತಿಕ ರೂಪಗಳು ಈ ದೇವಾಸುರರನ್ನು ಬಿಟ್ಟರೆ ಉಳಿದ ಮನುಷ್ಯರು ನಿರಂಶರು ಅವರಿಗೆ ಸರ್ವಾಂಗಪರಿಪೂರ್ಣವಾದ ಒಂದೇ ಚಿನ್ಮಯ ಶರೀರ-ವಿರುತ್ತದೆ ಅದೂ ಬಾಹ್ಯ ಶರೀರದ ಹೃದಯದಲ್ಲಿ ಪರಮಾಣುವಿಗಿಂತಲೂ ಸೂಕ್ಷ್ಮವಾಗಿ ಇರುತ್ತದೆ ಆದರೆ ಪ್ರಕಾಶದಿಂದ ಶರೀರ ಇಂದ್ರಿಯ ಮನಸ್ಸುಗಳನ್ನೆಲ್ಲಾ ವ್ಯಾಪಿಸುತ್ತದೆ, ಒಂದು ಸಣ್ಣ ದೀಪವೂ ಪ್ರಕಾಶದಿಂದ ಇಡೀ ಕೋಣೆಯನ್ನು ವ್ಯಾಪಿಸುವಂತೆ ಈ ಪ್ರಕಾಶ ಚಿನ್ಮಯ ಶರೀರದ ಅಂಶ ಆದರೆ ಅದು ಆ ಶರೀರವನ್ನು ಬಿಟ್ಟು ದೂರ ಹೋಗಲಾರದು ದೂರ ಹೋಗಬಲ್ಲ ಅಂಶಗಳು ಸಾಂಶ ಜೀವರಿಗೆ ಇರುವಂತೆ ಈ ನಿರಂಶ ಜೀವರಿಗೆ ಇಲ್ಲ

ಜೀವರು ಸಾಂಶರೆ ಇರಲಿ, ನಿರಂಶರೆ ಇರಲಿ, ಅವರ ಶರೀರದಲ್ಲಿ ಅವರಿಗೆ ಕೇವಲ ಪ್ರಕಾಶದಿಂದಲೆ ವ್ಯಾಪ್ತಿ ಆಯಾ ಜಡ ಇಂದ್ರಿಯಗಳಲ್ಲಿ ಆಯಾ ಚಿನ್ಮಯ ಇಂದ್ರಿಯಗಳ ಪ್ರಕಾಶವೆ ಹರಡಿರುತ್ತದೆ ಅಂದರೆ ಜಡ ಚಕ್ಷುರಿಂದ್ರಿಯದಲ್ಲಿ ಜೀವಸ್ವರೂಪಭೂತವಾದ ಚಿನ್ಮಯ ಚಕ್ಷುರಿಂದ್ರಿಯದ ಪ್ರಕಾಶವೇ ತುಂಬಿರುತ್ತದೆ ವ್ಯತ್ಯಾಸವಾಗುವುದಿಲ್ಲ ಸಾಂಶ ಜೀವರಲ್ಲಿಯೂ 'ಅವರ ಜಡ ಚಕ್ಷುರಿಂದ್ರಿಯದಲ್ಲಿರುವ ಚೈತನ್ಯಾಂಶಕ್ಕೆ ಪ್ರತ್ಯೇಕ ಕಣ್ಣು ಕೈಕಾಲು ಇರುವುದಿಲ್ಲ' ಎನ್ನುತ್ತದೆ, ಐತರೇಯ ಭಾಷ್ಯ—

ನಹಿ ಜೀವಸ್ಯಾಕ್ಷಿಣಿ ಪೃಥಕ್ ಶಿರೋಬಾಹ್ವಾದಿಕಂ ವಿದ್ಯತೇ ।

'ಜೀವನ ಜಡಚಕ್ಷುರಿಂದ್ರಿಯದಲ್ಲಿ ಜೀವನಿಗೆ ಪ್ರತ್ಯೇಕ ತಲೆ ಕೈಕಾಲು ಇಲ್ಲ'

ಆದರಿಂದ ಈ ಪ್ರಕಾಶವ್ಯಾಪ್ತಿ ಹೀಗೆ ವ್ಯವಸ್ಥಿತವಾಗಿ ನಡೆಯುವುದು ನಾಗಶಯನನಾದ ನಾರಾಯಣನ ಲೀಲೆ ಅವನು ಸಾಂಶರಲ್ಲಿ ಮಾತ್ರವಲ್ಲ ನಿರಂಶರಲ್ಲಿಯೂ ಈ ವಿಭಾಗದ ಲೀಲೆ ನಡೆಸುತ್ತಾನೆ—

> ಅಚ್ಛೇದ್ಯಸ್ಯಾಪಿ ಜೀವಸ್ಯ ವಿಭಾಗಂ ಬಹುಧಾ ಹರಿಃ ।
> ಕೃತ್ವಾ ಭೋಗಾನ್ ಪ್ರದಾಯ್ಯೆವ ಚೈಕ್ಯಮಾಪಾದಯೇತ್ ಪುನಃ ॥

'ನಿರಂಶನಾದ ಪ್ರಯುಕ್ತ ಅಚ್ಛೇದ್ಯನೆನಿಸಿದ ಜೀವನನ್ನೂ ಕೂಡ ಸರ್ವಶಕ್ತನಾದ ಹರಿ ಪ್ರಕಾಶರೂಪದಿಂದ, ಬಹುವಾಗಿ ವಿಭಾಗ ಮಾಡಿ ನಾನಾ ಭೋಗಗಳನ್ನಿತ್ತು ತಿರುಗಿ ಒಂದುಗೂಡಿಸುತ್ತಾನೆ' ಎನ್ನುತ್ತದೆ, ಅನುವ್ಯಾಖ್ಯಾನ (೨-೩-೨೬)

**ಭೋಗವಿತ್ತು**

ಜಾಗರದಲ್ಲಿ ವಿಶ್ವಮೂರ್ತಿ ಶ್ರೀಹರಿ ಬಾಹ್ಯ ಶರೀರದ ಬಲಗಣ್ಣಿನಲ್ಲಿ ಇದ್ದು ಹೃದಯದಲ್ಲಿರುವ ಜೀವನ ಚಿನ್ಮಯಶರೀರದ ಪ್ರಕಾಶಗಳನ್ನು ಸೆಳೆದು ಹೊರತಂದು ಶರೀರ ಇಂದ್ರಿಯ ಮನಸ್ಸುಗಳಲ್ಲೆಲ್ಲ ವ್ಯವಸ್ಥಿತವಾಗಿ ಅಂದರೆ ಹಿಂದೆ ಹೇಳಿದಂತೆ ಜಡಕಣ್ಣಿನಲ್ಲಿ ಚಿನ್ಮಯ ಕಣ್ಣಿನ ಪ್ರಕಾಶ, ಜಡ ನಾಲಿಗೆಯಲ್ಲಿ ಚಿನ್ಮಯ ನಾಲಿಗೆಯ ಪ್ರಕಾಶ, ಜಡ ಕೈಕಾಲು-ಗಳಲ್ಲಿ ಚಿನ್ಮಯ ಕೈಕಾಲುಗಳ ಪ್ರಕಾಶ, ಹೀಗೆ ತುಂಬಿಸಿ ಆಯಾ ಜ್ಞಾನ ಕರ್ಮೇಂ-ದ್ರಿಯಗಳಿಂದ ಜ್ಞಾನಕರ್ಮಗಳನ್ನು ನಡೆಸುತ್ತಾನೆ ಸುಖದುಃಖಗಳನ್ನು ಅವುಗಳಿಗೆ ಅನು-ಸಾರವಾಗಿ ಉಣಿಸುತ್ತಾನೆ ಚಿನ್ಮಯಪ್ರಕಾಶವಿಲ್ಲದಿದ್ದರೆ ಈ ಜಡ ಇಂದ್ರಿಯಗಳು ಸ್ತಬ್ಧ-ವಾಗುತ್ತವೆ, ಏನೂ ಕೆಲಸ ಮಾಡಲಾರವು ಕೆಂಡ ಆರಿದರೆ ಆ ಇದ್ದಿಲು ಹೇಗೆ ಸುಡು-ವುದಿಲ್ಲವೋ ಹಾಗೆ

ಸ್ವಪ್ನಾವಸ್ಥೆಯಲ್ಲಿ ವಿಶ್ವಮೂರ್ತಿ ಶರೀರದಲ್ಲೆಲ್ಲ ಹರಡಿದ ಚೈತನ್ಯ ಪ್ರಕಾಶಗಳನ್ನು ಸೆಳೆದು ತಂದು ಮನಸ್ಸಿನಲ್ಲಿ ಇರಿಸಿ ಅದನ್ನು ಕಂಠದಲ್ಲಿರುವ ತೈಜಸಮೂರ್ತಿಯ ವಶಕ್ಕೆ ಕೊಟ್ಟು ತಾನು ಆ ತೈಜಸನೊಡನೆ ಸೇರಿ ಒಂದಾಗುತ್ತಾನೆ ಎರಡು ದೀಪಗಳು ಸೇರಿ ಒಂದಾಗುವಂತೆ ಆಗ ತೈಜಸ ಮೂರ್ತಿ ಮನಸ್ಸಿನಲ್ಲಿ ಅನಾದಿ ಕಾಲದಿಂದ ಬಂದು ಸೇರಿರುವ ನಾನಾ ಬಗೆಯ ಸಂಸ್ಕಾರದಿಂದ ಗಜತುರಗಾದಿ ನಾನಾ ಪ್ರಾಣಿವಸ್ತುಗಳನ್ನು ಕ್ಷಣಾರ್ಧದಲ್ಲಿ ನಿರ್ಮಿಸಿ ತೋರುತ್ತಾನೆ, ಕ್ಷಣಾರ್ಧದಲ್ಲಿ ಲಯಗೈಯುತ್ತಾನೆ ಜೀವನ ಕರ್ಮಾನುಸಾರ ಒಳ್ಳೆಯ

ಅಥವಾ ಕೆಟ್ಟ ಕನಸನ್ನು ತೋರಿಸುತ್ತಾನೆ ಕನಸಿನಲ್ಲಿ ಕಾಣುವ ವಸ್ತುವೆಲ್ಲವೂ ಸತ್ಯವೆ ಆದರೆ ಅದು ಬಾಹ್ಯ ವಸ್ತುವಲ್ಲ ಮನಸಿನಲ್ಲಿಯೆ ಹುದುಗಿದ ಸಂಸ್ಕಾರದ ಮೂರ್ತ ರೂಪ 'ವಾಸನಾಮಯ' ಎನ್ನುತ್ತಾರೆ ವಾಸನಾಮಯ ಪದಾರ್ಥವನ್ನೇ, ಶರೀರದ ಒಳಗೇ ಕನಸಿನಲ್ಲಿ ತೋರಿಸುತ್ತಾನೆ, ಸಾಮಾನ್ಯವಾಗಿ

ಬಹಿಃ ಕುಲಾಯಾದಮೃತಶ್ಚರಿತ್ವಾ

ಎಂಬ ಬೃಹದಾರಣ್ಯಕ ವಚನಕ್ಕೆ ಭಾಷ್ಯದಲ್ಲಿ ಹೀಗೆ ವಿವರಣೆ ಇದೆ—

ವಾಸನಾರೂಪಕಾನ್ ಪ್ರಾಯಸ್ತ್ವಂತರೇವ ಪ್ರದರ್ಶಯೇತ್

'ಸ್ವಪ್ನದಲ್ಲಿ ಪ್ರಾಯಃ ಒಳಗೇ, ಪ್ರಾಯಃ ವಾಸನಾಮಯ ಪದಾರ್ಥವನ್ನೇ ತೋರಿಸುತ್ತಾನೆ' 'ಪ್ರಾಯಃ' ಎಂದುದರಿಂದ ಕೆಲವೊಮ್ಮೆ ಶರೀರದಿಂದ ಹೊರಗೆ ವಾಸನಾಮಯವಲ್ಲದ ಪದಾರ್ಥವನ್ನೂ ಹರಿ ತೋರಿಸಬಹುದು ಕೆಲವರು ಕನಸಿನಲ್ಲಿ ಎದ್ದು ಬಂದು ಓಡಾಡು-ವುದನ್ನು ವಾಹನ ಚಲಿಸುವುದು ಮುಂತಾದುದನ್ನೂ ಕಾಣುತ್ತೇವೆ. ಮಹಾಭಾರತದಲ್ಲಿ ಶ್ರೀಕೃಷ್ಣ ಅರ್ಜುನನನ್ನು ಕನಸಿನಲ್ಲಿ ಕೈಲಾಸಕ್ಕೆ ಒಯ್ದು ಶಿವನಿಂದ ಅಸ್ತ್ರಮಂತ್ರ ಉಪದೇಶ ಕೊಡಿಸಿದನಂತೆ ಇಲ್ಲಿ ಅರ್ಜುನ ಸ್ವಪ್ನದಲ್ಲಿ ಕಂಡ ಶಿವ, ಕೈಲಾಸ, ಮಂತ್ರೋಪದೇಶಗಳು ವಾಸನಾಮಯವಾದ ಆಂತರಪದಾರ್ಥಗಳಲ್ಲ

ಸಾಧಾರಣ ಕನಸುಗಳಲ್ಲಿಯೂ ಕಾಣುವ ಎಲ್ಲ ಪದಾರ್ಥಗಳೂ ವಾಸನಾಮಯ-ವೆನ್ನುವಂತಿಲ್ಲ ಏಕೆಂದರೆ ಜಡ ವಸ್ತುಗಳನ್ನು ವಾಸನಾಮಯವಾಗಿ ಹರಿ ಸೃಷ್ಟಿಸಲಿ, ಚೇತನ-ರನ್ನು ಹಾಗೆ ಸೃಷ್ಟಿಸುವುದಾಗುವುದು ಸರ್ವಕರ್ತನಾದ ಹರಿಯೂ ಚೇತನರನ್ನು ಸ್ವರೂಪ-ದಿಂದ ಸೃಷ್ಟಿಸುವುದಿಲ್ಲ ಇಲ್ಲದಿದ್ದರೆ ಶ್ರೀಕೃಷ್ಣ ಅರ್ಜುನನಿಗೆ ಸ್ವಪ್ನದಲ್ಲಿ ವಾಸನಾಮಯ ಶಿವನನ್ನು ಸೃಷ್ಟಿಸಿ ವಾಸನಾಮಯ ಮಂತ್ರೋಪದೇಶವನ್ನು ಕೊಡಿಸಬಹುದಿತ್ತು. ಹಾಗೆ ಕೊಡಿಸಿದ್ದರೆ ಬಾಹ್ಯವಾದ ಮಂತ್ರದಲ್ಲಿ ಶಕ್ತಿ ತುಂಬುತ್ತಿರಲಿಲ್ಲ

ಆದರಿಂದ ಸ್ವಪ್ನದಲ್ಲಿ ಜೀವನನ್ನು ಆನೆ ಕುದುರೆ ಮುಂತಾದ ನಾನಾ ಆಕಾರದ ಸ್ವಾಪ್ನ ಶರೀರಗಳಲ್ಲಿ ಅವೇ ಆಕಾರಗಳಲ್ಲಿ ಅಂಶಗಳಾಗಿ ವಿಭಾಗಿಸಿ ಭೋಗಗಳನ್ನು ನೀಡುತ್ತಾನೆ ಯಾರಿಗೆ? ಎಂದರೆ, ಯಾವ ಜೀವನ ಅಂಶ ವಿಭಾಗವಾಗುವುದೋ ಅವನಿಗೆ ಎಂದರೂ ತಪ್ಪಿಲ್ಲ, ಬೇರೆ ಜೀವರಿಗೆ ಎಂದರೂ ತಪ್ಪಿಲ್ಲ ಅರ್ಜುನ ಮಲಗಿದ್ದಾಗ ಕೃಷ್ಣ ಅವನ ಒಂದಂಶ ವಿಭಾಗ ಮಾಡಿ ಹೊರಗೆ ತಂದು ಕೈಲಾಸದರ್ಶನದ ಭೋಗ ಕೊಡಿಸಿದ್ದಾನೆ

ಬೇರೆ ಜೀವರಿಗೂ ಭೋಗ ನೀಡಬಹುದು ಉದಾ–ಧರ್ಮರಾಜನಿಗೆ ನರಕದರ್ಶನ ಮಾಡಿಸುವಾಗ ತತ್ಕಾಲದಲ್ಲಿ ನರಕದ ದುರ್ಗಂಧ ವಾತಾವರಣವನ್ನು ಕೃತಕವಾಗಿ ನಿರ್ಮಿಸಿದ್ದು ಮಾತ್ರವಲ್ಲದೆ,

ತಾತ್ಕಾಲಿಕಸೃಷ್ಟಸ್ವಾಪ್ನವ್ಯಾಘ್ರಾದಿಜೀವವತ್
ಕಾಂಶ್ಚಿಜ್ಜೀವಾನ್ ಭೀಮಾದಿರೂಪೇಣ ಸೃಷ್ಟ್ವಾ
ತನ್ಮುಖೇನಾರ್ತಸ್ವರಾದೀನಾಂ ಕಾರಿತತ್ವಾತ್ . ॥

'ಸ್ವಪ್ನದಲ್ಲಿ ಹುಲಿ ಆನೆ ಮುಂತಾದ ಜೀವರನ್ನು ಸೃಷ್ಟಿ ಮಾಡುವಂತೆ ಕೆಲವು ಜೀವರನ್ನು ಭೀಮಾದಿರೂಪದಿಂದ ಸೃಷ್ಟಿಸಿ ಅವರ ಮುಖದಿಂದ ಆರ್ತಧ್ವನಿಯನ್ನೂ ಹೊರಡಿಸಿ' ಧರ್ಮರಾಜನಿಗೆ ದುಃಖಕೊಟ್ಟಿದ್ದಾನೆ ಶ್ರೀಹರಿ.

ಸ್ವಾಪ್ನಗಜತುರಗಾದಿಗಳನ್ನು ಸೃಷ್ಟಿಸುವುದೆಂದರೆ ನಿರ್ಜೀವ ಗಜಾದಿ ಶರೀರಗಳನ್ನು ಮಾತ್ರ ಸೃಷ್ಟಿಸುವುದೂ ಅಲ್ಲ ಗಜಾದಿ ಚೇತನರನ್ನು ಸ್ವರೂಪದಿಂದ ಸೃಷ್ಟಿಸುವುದೂ ಅಲ್ಲ. ವಾಸನಾಮಯ ಶರೀರದಿಂದ ಚೇತನ ಸೃಷ್ಟಿ ಹಾಗೇ ಹೇಳಿದ್ದಾರೆ ವಾದಿರಾಜರು ಯುಕ್ತಿ-ಮಲ್ಲಿಕಾ ಭೇದಸೌರಭ(ಶ್ಲೋಕ ೬೯೭)ದಲ್ಲಿ

ಸಂಧ್ಯೇ ಸೃಷ್ಟಿರಿತಿ ಪ್ರೋಕ್ತೇಃ ಸ್ವಾಪ್ನವ್ಯಾಘ್ರಗಜಾದಯಃ ।
ಸರ್ವೇ ಸತ್ಯಾಶ್ಚೇತನಾಶ್ಚ ತತ್ಸ್ವಪ್ನೋಽನಲ್ಪಜೀವವಾನ್ ॥

'ಸಂಧ್ಯೇ ಸೃಷ್ಟಿರಾಹ ಹಿ' ಎಂಬ ಸೂತ್ರದಲ್ಲಿ ಸ್ವಾಪ್ನಪದಾರ್ಥಸೃಷ್ಟಿಯನ್ನು ಹೇಳಿದ್ದರಿಂದ ಜಾಗರದಲ್ಲಿಸೃಷ್ಟವಾದ ಗಜಾದಿಗಳು ಹೇಗೆ ಚೇತನಭರಿತವಾಗಿ ಸತ್ಯವಾಗಿವೆಯೋ ಹಾಗೇ ಸ್ವಪ್ನದಲ್ಲಿ ಸೃಷ್ಟವಾದ ಗಜಾದಿಗಳೂ ಭಗವಂತನಿಂದ ಸೃಷ್ಟವಾಗಿರುವುದರಿಂದ ಚೇತನ-ಭರಿತ, ಸತ್ಯವೆ ಆಗಿವೆ. ಇಷ್ಟೇ ವ್ಯತ್ಯಾಸ, ಜಾಗರ ಗಜಾದಿಗಳು ಸ್ಥೂಲವಸ್ತೂಪಾದಾನಕಗಳು, ಬಹುಕಾಲ ಸ್ಥಾಯಿಗಳು ಸ್ವಾಪ್ನಗಜಾದಿಗಳು ವಾಸನಾನಿರ್ಮಿತವಾಗಿದ್ದು ಅಲ್ಪಕಾಲ ಸ್ಥಾಯಿಗಳು' ಎಂದು ಸುರೋತ್ತಮತೀರ್ಥರ ವ್ಯಾಖ್ಯಾನವಿದೆ

ಆದರಿಂದ ಅಚ್ಛೇದ್ಯರಾದ ಗಜತುರಗಾದಿ ನಿರಂಶ ಜೀವರನ್ನು ಬಹುವಾಗಿ ವಿಭಾಗ ಮಾಡಿ ಬೇರೆ ಜೀವರಿಗೆ ಸ್ವಪ್ನದಲ್ಲಿ ತೋರಿಸಿ ಸುಖದುಃಖಾದಿ ಭೋಗವನ್ನು ಹರಿ ನೀಡು-ತ್ತಾನೆ

ಪ್ರಕಾಶರೂಪಂ ಚಿದ್ದೇಹಂ ಜೀವಾನಾಂ ಚ ನಿರಂಶಿನಾಮ್ ।
ಭಿತ್ವಾ ಭಿತ್ವಾ ಬಹಿರ್ನೀತ್ವಾ ಸ್ವಪ್ನಭೋಗಾಂಶ್ಚ ಭಾವಯನ್ ॥
ಪುನಃ ಸಂಯೋಜಯತ್ಯೇಷ ತೈಜಸೋಽನಂತಶಕ್ತಿಮಾನ್ ॥

'ನಿರಂಶ ಜೀವರ ಪ್ರಕಾಶರೂಪವಾದ ಸ್ವರೂಪದೇಹವನ್ನು ಬಹುವಾಗಿ ಭಾಗಮಾಡಿ ಹೊರಗೆ ತಂದು, ಸ್ವಪ್ನಭೋಗವನ್ನು ನೀಡಿ, ಪುನಃ ಆ ಭಾಗಗಳನ್ನು ಒಟ್ಟುಸೇರಿಸುತ್ತಾನೆ ಅನಂತಶಕ್ತಿ ಉಳ್ಳ ತೈಜಸ' ಎನ್ನುವ ತತ್ವಸಾರವಚನ 'ಭಿತ್ವಾ ಭಿತ್ವಾ' ಅನೇಕ ಭಾಗಗಳಾಗಿ ವಿಭಾಗ ಮಾಡಿ ಎಂದು ಸ್ಪಷ್ಟ ಹೇಳಿದೆ

**ಸುಷುಪ್ತಿಕಾಲದಿ**

ಸ್ವಪ್ನಾವಸ್ಥೆಯಲ್ಲಿ ಬಾಹ್ಯೇಂದ್ರಿಯಗಳಿಗೆ ಉಪರತಿ ಇದ್ದರೂ ಮನಸ್ಸುಸಕ್ರಿಯವಾಗಿರು-ತ್ತದೆ ಅದರಲ್ಲಿ ಚೇತನಮನಸ್ಸಿನ ಪ್ರಕಾಶ ತುಂಬಿರುತ್ತದೆ. ಎಲ್ಲ ಇಂದ್ರಿಯಗಳ ಪ್ರಕಾಶವೂ ಇರುತ್ತದೆ. ಹೀಗಾಗಿ ಮನಸ್ಸು ಒಂದೇ ಕನಸಿನಲ್ಲಿ ನೋಡುತ್ತದೆ, ಕೇಳುತ್ತದೆ, ನುಡಿಯುತ್ತದೆ, ಎಲ್ಲ ಕೆಲಸಗಳನ್ನು ಮಾಡುತ್ತದೆ ತೈಜಸಮೂರ್ತಿ ಆ ಮನಸಿನೊಳಗಿನ ಚೇತನಪ್ರಕಾಶವನ್ನು ಸೆಳೆದುತಂದು ಹೃದಯದಲ್ಲಿರುವ ಪ್ರಾಜ್ಞಮೂರ್ತಿಯ ಬಳಿ ಇರುವ ಜೀವನ ಸ್ವರೂಪ-ಶರೀರದಲ್ಲಿ ಸೇರಿಸಿ ತಾನೂ ಆ ಪ್ರಾಜ್ಞನಲ್ಲಿ ಸೇರಿ ಒಂದಾಗುತ್ತಾನೆ ಪ್ರಾಜ್ಞ ಜೀವನನ್ನು ಆಲಿಂಗಿಸಿ ಅವನ ಸ್ವರೂಪಭೂತವಾದ ಆನಂದದಲ್ಲಿ ಒಂದು ಅಲ್ಪ ಅಂಶವನ್ನು ವ್ಯಕ್ತ-ಗೊಳಿಸಿ ಸುಖನಿದ್ರೆ ಬರಿಸುತ್ತಾನೆ

**ವಿಯೋಗರಹಿತನು**

ಜಾಗರಸ್ವಪ್ನಸುಷುಪ್ತಿಗಳಲ್ಲಿ ವಿಶ್ವತೈಜಸಪ್ರಾಜ್ಞರೂಪನಾಗಿ ಜೀವನನ್ನು ತನ್ನ ಬಳಿ ಇರಿಸಿಕೊಂಡು ಸದಾ ಕಾಪಾಡುತ್ತಾನೆ ಶ್ರೀಹರಿ ಜೀವಪರಮಾತ್ಮರಿಗೆ ವಿಯೋಗ ಎಂದೂ ಇಲ್ಲ

**ಸಾಗರವ ನದಿ ಕೂಡುವಂತೆ**

ವಾಯುದೇವ ಸಮುದ್ರದಲ್ಲಿರುವ ಆಯಾ ನದಿಗಳ ನೀರನ್ನು ಸೂರ್ಯಕಿರಣದ ಸಹಾಯದಿಂದ ಮೋಡದ ರೂಪದಿಂದ ಒಯ್ದು ಆಯಾ ನದೀಪಾತ್ರದಲ್ಲಿಯೆ ಮಳೆ ಸುರಿಸುತ್ತಾನೆ ತಿರುಗಿ ನದಿಗಳು ಸಾಗರದಲ್ಲಿ ತಮ್ಮ ನೀರನ್ನೇ ಹೋಗಿ ಸೇರುತ್ತವೆ, ಹೊರತು ಒಂದು ನದಿಯ ನೀರು ಇನ್ನೊಂದು ನದಿಯನ್ನು ಸೇರುವುದಿಲ್ಲ ಹಾಗೆಯೆ ಜೀವನ

ಚಿನ್ಮಯಶರೀರದಿಂದ ಹೊರಟ ಆಯಾ ಚಿನ್ಮಯ ಇಂದ್ರಿಯಪ್ರಕಾಶಗಳು ಆಯಾ ಜಡ ಇಂದ್ರಿಯಗಳನ್ನು ನೇರಿ ಜಾಗರದಲ್ಲಿ ಎಲ್ಲ ಚಟುವಟಿಕೆಗಳನ್ನು ನಡೆಸಿ ಸ್ವಪ್ನಸುಷುಪ್ತಿಗಳಲ್ಲಿ ತಿರುಗಿ ಆಯಾ ಚಿನ್ಮಯ ಇಂದ್ರಿಯಗಳಲ್ಲಿಯೆ ನೇರುತ್ತವೆ ಒಂದು ಇಂದ್ರಿಯ ಪ್ರಕಾಶ ಇನ್ನೊಂದು ಇಂದ್ರಿಯದಲ್ಲಿ ನೇರುವುದಿಲ್ಲ

ಅಥವಾ ಹರಿಯ ಉದರವೆ ಸಾಗರ ಅಲ್ಲಿ ಲೆಕ್ಕವಿಲ್ಲದಷ್ಟು ಜೀವನದಿಗಳಿವೆ ಅಸೃಜ್ಯಾವಸ್ಥೆಯಿಂದ ಈಚೆಗೆ ಬಂದಾಗ ಆ ಜೀವರು ಸುಷುಪ್ತಿಯಿಂದ ಎದ್ದು ಬಂದಂ-ತಾಗುವುದು ಆದರೆ ಸುಷುಪ್ತಿಯಿಂದ ನೇರವಾಗಿ ಎಚ್ಚರಕ್ಕೆ ಬರುವುದಿಲ್ಲ ಸ್ವಪ್ನಾವಸ್ಥೆಗೆ ಬರಬೇಕು ಸ್ವಪ್ನದಂತೆ ಅನಿತ್ಯವಾದ ವಿಷಯಸುಖಭೋಗವಿರುವುದರಿಂದ ಸಂಸಾರವೂ ಒಂದು ಸ್ವಪ್ನವೆ ಇದಕ್ಕೆ ನಿಯಾಮಕ ತೈಜಸಮೂರ್ತಿ ಎಂಬತ್ತನಾಲ್ಕು ಲಕ್ಷ ಯೋನಿಗಳಲ್ಲಿ ಜೀವ- ಪ್ರಕಾಶವನ್ನು ಇವನು ವಿಭಾಗಗೈಸುತ್ತಾನೆ ಯೋಗ್ಯತಾ ಪೂರ್ವಕರ್ಮಾನುಸಾರ ಕರ್ಮ ಮಾಡಿಸಿ ಸುಖದುಃಖಭೋಗ ನೀಡುತ್ತಾನೆ ಅಪರೋಕ್ಷ ಬಂದಾಗ ಜೀವನ್ಮುಕ್ತ್ಯವಸ್ಥೆ ಇದು ಜಾಗರ ಪ್ರಾರಬ್ಧಾನುಸಾರ ಅನೇಕ ಜನ್ಮವೆತ್ತಿ ಪರಮಾತ್ಮ ದರ್ಶನದ ಬೆಳಕಿನಲ್ಲಿ 'ಬಹುಚಿತ್ರಜಗದ್ ಬಹುಧಾಕರಣ' ರೂಪವಾದ ಹರಿಯ ಕ್ರೀಡೆಯನ್ನು ಕಂಡು ಜೀವ ಆನಂದಿಸುತ್ತಾನೆ ಈ ಅವಸ್ಥೆಗೆ ನಿಯಾಮಕ ವಿಶ್ವಮೂರ್ತಿ ಇನ್ನು ಮುಂದಿನ ಅವಸ್ಥೆ ಮುಕ್ತಿ ಇದೂ ಸುಷುಪ್ತಿಯೆ ಸುಷುಪ್ತಿಗೇ ಸಮಾನ

ಸ್ವರ್ಗಃ ಸುಷುಪ್ತಿರಿತ್ಯಾಖ್ಯಾ ಮುಕ್ತೇರಪಿ ಯತಃ ಸಮಾ

'ಸ್ವರ್ಗ' 'ಸುಷುಪ್ತಿ' ಎಂಬ ಹೆಸರುಗಳು ಮುಕ್ತಿಗೂ ಸಲ್ಲುತ್ತವೆ ಎಂದು ಬೃಹದ್ಭಾಷ್ಯ ಹೇಳು-ತ್ತಿದೆ ಮುಕ್ತಿ ಪರಮಾತ್ಮಪ್ರಾಪ್ತಿರೂಪವಾದ್ದರಿಂದ ಜೀವನದಿಗಳು ಪರಮಾತ್ಮನೆಂಬ ಸಾಗರವನ್ನೆ ನೇರಿದಂತಾಗುವುದು. ಇದನ್ನೇ ಷಟ್ಪ್ರಶ್ನೋಪನಿಷತ್ತು ಹೇಳಿದೆ—

ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ
ಪ್ರಾಪ್ಯಾಸ್ತಂ ಗಚ್ಛಂತಿ, ಭಿದ್ಯೇತೇ ತಾಸಾಂ ನಾಮರೂಪೇ

'ಹರಿಯುವ ನದಿಗಳು ಸಮುದ್ರದ ಕಡೆಗೆ ಹರಿಯುತ್ತ ಸಮುದ್ರವನ್ನು ನೇರಿ, ಜನರಿಗೆ ಕಾಣಿಸದಿದ್ದರೂ ಸಮುದ್ರದಲ್ಲಿರುವ ಆ ನದಿಗಳ ಗಂಗಾಯಮುನಾದಿ ನಾಮಗಳೂ ರೂಪಗಳೂ ಪ್ರತ್ಯೇಕವಾಗಿ ಇದ್ದೇ ಇರುತ್ತವೆ'

**ಭಾರ್ಯರಿಂದೊಡಗೂಡಿ ಕಾರಣ**
**ಕಾರ್ಯವಸ್ತುಗಳಲ್ಲಿ ಪ್ರೇರಕ**
**ಪ್ರೇರ್ಯರೂಪಗಳಿಂದ ಪಟತಂತುಗಳವೋಲಿದ್ದು**
**ಸೂರ್ಯಕಿರಣಗಳಂತೆ ತನ್ನಯ**
**ವೀರ್ಯದಿಂದಲಿ ಕೊಡುತ ಕೊಳುತಿಹ-**
**ನಾರ್ಯರಿಗೆ ಈತನ ವಿಹಾರವು ಗೋಚರಿಪುದೇನೋ? ॥ ೯ ॥**

ಶ್ರೀಹರಿ ತನ್ನ ಪತ್ನಿಯರಾದ ಶ್ರೀಭೂದುರ್ಗೆಯರೊಂದಿಗೆ ಕಾರಣ ಕಾರ್ಯವಸ್ತುಗಳಲ್ಲಿ ಪ್ರೇರಕ ಪ್ರೇರ್ಯ ರೂಪಗಳಿಂದ ಬಟ್ಟೆನೂಲುಗಳಂತಿದ್ದು ಸೂರ್ಯಕಿರಣಗಳಂತೆ ಸ್ವಶಕ್ತಿಯಿಂದ ಕೊಡುತ್ತ ಕೊಳ್ಳುತ್ತ ಇರುತ್ತಾನೆ ಅನಾರ್ಯರಿಗೆ ಈತನ ವಿಹಾರ ಗೋಚರಿಸುವುದೇನು?

**ಭಾರ್ಯರಿಂದೊಡಗೂಡಿ:**

ಶ್ರೀಹರಿಗೆ ಭಾರ್ಯೆ ಮಹಾಲಕ್ಷ್ಮಿ ಒಬ್ಬಳೆ ಆದರೆ ಅವಳ ಅಭಿಮಾನ ಪಾತ್ರವಾದ ಬ್ರಹ್ಮಾಂಡ ತ್ರಿಗುಣಾತ್ಮಕವಾದ ಪ್ರಕೃತ್ಯಾದಿ ತತ್ವಗಳಿಂದಾದುದು ಸತ್ವ ರಜ ತಮ ಎಂಬ ಮೂರು ಗುಣಗಳಲ್ಲಿ ಶ್ರೀ ಭೂ ದುರ್ಗಾ ಎಂಬ ಮೂರು ರೂಪಗಳಿಂದ ಅವಳು ನಿಯಾಮಕಳಾಗಿ ನೆಲೆಸಿದ್ದಾಳೆ ಈ ಮೂರು ರೂಪಗಳ ವಿವಕ್ಷೆಯಿಂದ 'ಭಾರ್ಯರಿಂದೊಡಗೂಡಿ' ಎಂದು ಬಹುವಚನವಿದೆ ಶ್ರೀ ಭೂದುರ್ಗೆಯರೊಂದಿಗೆ ವಿಷ್ಣು ಬ್ರಹ್ಮ ರುದ್ರ ಎಂಬ ಮೂರು ರೂಪಗಳಿಂದ ಶ್ರೀಹರಿ ತ್ರಿಗುಣಗಳಲ್ಲಿ ನೆಲೆಸಿದ್ದಾನೆ

**ಕಾರಣಕಾರ್ಯವಸ್ತುಗಳಲ್ಲಿ**

ಕಾರಣಗಳು ತ್ರಿಗುಣಾತ್ಮಕವಾದ ಪ್ರಕೃತಿ ಮಹತ್ತತ್ವ ಅಹಂಕಾರ ತನ್ಮಾತ್ರಗಳು. ಅವುಗಳಿಂದ ಕ್ರಮವಾಗಿ ಮಹದಾದಿ ತತ್ವಗಳಿಗೆ ಉಪಚಯ ಅಹಂಕಾರದಿಂದ ಪಂಚ ಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ಮನಸ್ಸುಗಳಿಗೂ ಉಪಚಯ ಅದರಿಂದ ಪ್ರಕೃತ್ಯಾದಿಗಳು ಕಾರಣಗಳು, ಮಹದಾದಿಗಳು ಕಾರ್ಯಗಳು ಅಂದರೆ ಪ್ರಕೃತಿ ಕಾರಣ, ಮಹತ್ತತ್ವಕಾರ್ಯ ಮಹತ್ತತ್ವಕಾರಣ, ಅಹಂಕಾರ ಕಾರ್ಯ ಹೀಗೆ ಪ್ರಕೃತಿಯಿಂದ ತೊಡಗಿ ಪಂಚಭೂತಗಳವರೆಗೆ ಇರುವ ಕಾರಣ ಕಾರ್ಯಗಳೆಲ್ಲವೂ ತ್ರಿಗುಣಾತ್ಮಕವಾಗಿದ್ದು ಶ್ರೀಭೂದುರ್ಗಾ ಸಮೇತ ವಿಷ್ಣು ಬ್ರಹ್ಮ ರುದ್ರಾತ್ಮಕನಾದ ಶ್ರೀಹರಿಯ ಸನ್ನಿಧಾನ ಪಾತ್ರಗಳಾಗಿವೆ

ಕಾರಣಗಳೆಂದರೆ ಪ್ರವೃತ್ತಿ ಕಾರಣಗಳೂ ಹೌದು ಚೇತನರ ಪ್ರವೃತ್ತಿಗೆ ಪ್ರಕೃತ್ಯಾದಿ ತತ್ವಗಳೂ ಇಂದ್ರಿಯ ಮನಸುಗಳೂ ಕಾಲ ಅವ್ಯಾಕೃತಾಕಾಶ ವೇದಾದಿಗಳೆಲ್ಲವೂ ಕಾರಣಗಳು ಜೀವ ಸ್ವಭಾವ ಅನಾದಿಕರ್ಮಗಳೂ ಕಾರಣಗಳು ಚೇತನರ ಉತ್ಪತ್ತಿಗೂ ಮೇಲಿನ ಎಲ್ಲ ತತ್ವಗಳೂ ಕಾರಣಗಳು ತತ್ವಾಭಿಮಾನಿಗಳೂ ಚೇತನ ಪ್ರವೃತ್ತಿಗೆ ಕಾರಣರು, ಚೇತನರ ಉತ್ಪತ್ತಿಗೂ ಕಾರಣರು ಚೇತನ ಪ್ರವೃತ್ತಿಗೆ ಚೇತನ ಕರ್ತನಾದ್ದರಿಂದ ಅವನೂ ಕಾರಣನೆ

ಹೀಗೆ ಎಲ್ಲ ಜೀವರೂ ಜಡಗಳೂ ಪರಸ್ಪರವಾಗಿ ಕಾರ್ಯಕಾರಣಭಾವ ಸಂಬಂಧದಿಂದ ಒಂದು ಇನ್ನೊಂದರೊಡನೆ ಗಾಢವಾಗಿ ಹೆಣೆದುಕೊಂಡಿವೆ ಯಾವುದೂ ಏಕಾಕಿಯಾಗಿ ಸ್ವತಂತ್ರವಾಗಿ ಇರಲಾರದು. ಈ ಅಸ್ವತಂತ್ರ ಪದಾರ್ಥಗಳು ಅಂಧಪಂಗು ನ್ಯಾಯದಿಂದ, ಅಂದರೆ ಕುರುಡ ನೋಡಲಾರ, ನಡೆಯಬಲ್ಲ ಹೆಳವ ನಡೆಯಲಾರ, ನೋಡಬಲ್ಲ ಇಬ್ಬರೂ ಜೊತೆಗೆ ನೇರಿದರೆ ನೋಡಿ ನಡೆಯುವ ಕಾರ್ಯ ಇಬ್ಬರೂ ನಡೆಸಬಲ್ಲರು ಹಾಗೇ ಜೀವಜಡಗಳು ಎನ್ನುತ್ತಾರೆ, ದೇವರನ್ನೊಪ್ಪದ ಸಾಂಖ್ಯ ದರ್ಶನಕಾರರು ಆದರೆ ಅಸ್ವತಂತ್ರ ಜೀವಜಡಗಳು ಸ್ವತಃ ಜೊತೆ ಸೇರಲಾರವು ಸೇರಿಸಲು ಸ್ವತಂತ್ರನಾದ ಒಬ್ಬ ದೇವ ಬೇಕು ಅವನೆ ಶ್ರೀಹರಿ. ಅವನು ಸತ್ವರಜ ತಮರೂಪ ತ್ರಿಗುಣಾತ್ಮಕವಾದ ಜಡಗಳಲ್ಲಿಯೂ ಸಾತ್ವಿಕ ರಾಜಸ ತಾಮಸ ಜೀವರಲ್ಲಿಯೂ ಶ್ರೀಭೂದುರ್ಗಾ ಸಮೇತನಾಗಿ ಇದ್ದು ಅನ್ಯೋನ್ಯ ಕಾರಣಕಾರ್ಯ ಸಂಬಂಧದಿಂದ ಬೆಸೆದಿದ್ದಾನೆ ಇಲ್ಲದಿದ್ದರೆ ಎಲ್ಲವೂ ಅತಂತ್ರವಾಗಿ ನಶಿಸಿಹೋಗುತ್ತಿತ್ತು

**ಪ್ರೇರಕ ಪ್ರೇರ್ಯ ರೂಪಗಳಿಂದ :**

ಕಾರಣ ಕಾರ್ಯಗಳಲ್ಲಿ ಪ್ರೇರಕ ಪ್ರೇರ್ಯ ರೂಪಗಳಿಂದ ಇರುವವನು ಶ್ರೀಹರಿಯೆ ಪ್ರೇರಕವಾದ ಕಾರಣದಲ್ಲಿ ಪ್ರೇರಕ ರೂಪದಿಂದ ಇದ್ದಾನೆ ಪ್ರೇರ್ಯವಾದ ಪ್ರವೃತ್ತಿರೂಪ ಕಾರ್ಯದಲ್ಲಿದ್ದು ತಾನೆ ಪ್ರೇರ್ಯನಾಗಿದ್ದಾನೆ ಪ್ರೇರಕನೂ ಅವನೆ ಪ್ರೇರ್ಯನೂ ಅವನೆ. ಅವನ ಈ ಲೀಲೆಯಿಂದ ಪ್ರೇರಕ ಪ್ರೇರಕವೆನಿಸುತ್ತದೆ ಪ್ರೇರ್ಯ, ಪ್ರೇರ್ಯವೆನಿಸುತ್ತದೆ ಶ್ರೀಹರಿ ಕಾರಣ ಕಾರ್ಯಗಳಲ್ಲಿ ಪ್ರತ್ಯೇಕ ರೂಪಗಳಿಂದ ಇರಬೇಕಾಗಿರಲಿಲ್ಲ ಎರಡು ವಸ್ತುಗಳಲ್ಲಿ ಕಾರಣ ಕಾರ್ಯ ಸಂಬಂಧ ಉಂಟು ಮಾಡುವ ಕಾರ್ಯಕ್ಕೆ ಅವನು ದೂರದ ವೈಕುಂಠದಲ್ಲಿಯೋ ಬ್ರಹ್ಮಾಂಡದ ಹೊರಗೋ ಇರಬಹುದಾಗಿತ್ತು ಸರ್ವಶಕ್ತನಾದ ಅವನಿಗೆ ವಸ್ತುಗಳು ದೂರವಿದ್ದರೆ ಸಮಸ್ಯೆ ಏನಿಲ್ಲ ವಸ್ತುಗಳೆ ಇಲ್ಲದಿದ್ದರೂ ಸಮಸ್ಯೆ ಇಲ್ಲ, ಹಾಗೇ ಬ್ರಹ್ಮಾಂಡಸೃಷ್ಟಿ ಮಾಡಬಲ್ಲ. ಆದರೂ ಸ್ವೇಚ್ಛೆಯಿಂದಲೆ ಬ್ರಹ್ಮಾಂಡದಲ್ಲಿ ಎಲ್ಲೆಡೆ ವ್ಯಾಪಿಸಿದ್ದಾನೆ ಆಕಾಶದಂತೆ ಒಂದೇ ರೂಪದಿಂದಲೂ ಅಲ್ಲ 'ಬಹು ಸ್ಯಾಂ ಪ್ರಜಾಯೇಯ' ನಾನು ಅನಂತರೂಪ ತಾಳುವೆನೆಂದು ಅವನ ಸಂಕಲ್ಪ ಅನಂತ ರೂಪಗಳೂ ಶ್ರೀಭೂದುರ್ಗಾ ಸಹಿತ ವಿಷ್ಣು ಬ್ರಹ್ಮ ಶಿವಾತ್ಮಕವೆ ಆಗಿರುತ್ತವೆ

**ಪಟತಂತುಗಳವ್ಪೋಲಿದ್ದು :**

ಬಟ್ಟೆ ನೂಲುಗಳು ಪಟತಂತುಗಳು ಇವು ಕಾರ್ಯ ಕಾರಣಗಳು ನೂಲುಗಳು ಕಾರಣ ಬಟ್ಟೆ ಕಾರ್ಯ ಬಟ್ಟೆಯಲ್ಲಿ ನೂಲು ಎಲ್ಲೆಡೆ ವ್ಯಾಪಿಸಿದೆ 'ಅಧಶ್ಚ ಮೂಲಾನ್ಯನು ಸಂತತಾನಿ' ನೂಲುಗಳೂ ಪರಸ್ಪರ ಹೆಣೆದುಕೊಂಡಿವೆ. ನೂಲುಗಳನ್ನು ಬೇರೆ ಬೇರೆ ಮಾಡಿದರೆ ಬಟ್ಟೆ ಇಲ್ಲ ನೂಲೇ ಬಟ್ಟೆ, ಬಟ್ಟೆಯೆ ನೂಲು ಆದರೆ ನೂಲಿನ ಕೆಲಸ ಬಟ್ಟೆಯಿಂದಾಗದು ಬಟ್ಟೆಯ ಕೆಲಸ ನೂಲಿಂದಾಗದು ಶ್ರೀಹರಿಯ ರೂಪಗಳೂ ಈ 'ಪಟತಂತುಗಳವ್ಪೋಲಿ' ರುತ್ತವೆಯೆ? ಎಂದರೆ ಇದು ಆಕಾರದ ದೃಷ್ಟಿಯಿಂದ ಹೇಳಿದ ಮಾತು. ನೂಲಿನಲ್ಲಿ ನೂಲಿನ ಆಕಾರದಿಂದ

ಇದ್ದು ಬಳಿಕ ನೂಲು ಬಟ್ಟೆಯಾಗುವಾಗ ತಾನೂ ಬಟ್ಟೆಯ ಆಕಾರದಲ್ಲಿ ಬಟ್ಟೆಯಲ್ಲಿ ಇರುತ್ತಾನೆ ಹಿಂದಿನ ನೂಲಿನ ಆಕಾರದ ರೂಪಕ್ಕೂ ಬಟ್ಟೆಯಾಕಾರದ ರೂಪಕ್ಕೂ ಭೇದವಿಲ್ಲ ಮಾತ್ರವಲ್ಲ, ಆ ರೂಪಗಳ ಶಕ್ತಿಸಾಮರ್ಥ್ಯಗಳಲ್ಲಿಯೂ ವ್ಯತ್ಯಾಸವಿಲ್ಲ ಕಾರಣಕಾರ್ಯಭಾವ ಸಂಬಂಧವೂ ಇಲ್ಲ ಒಂದು ರೂಪದಿಂದ ಇನ್ನೊಂದು ಲೀಲೆಯಿಂದ ಹೊರಬರುತ್ತದಷ್ಟೆ ನೂಲು ಬಟ್ಟೆಗಳಲ್ಲಿ ಕಾರಣಕಾರ್ಯಭಾವ ಸಂಬಂಧವಿರುವಂತೆ ಈ ರೂಪಗಳು ನೋಡಿ ಕೊಳ್ಳುತ್ತವೆ

ಈ ರೀತಿಯಾಗಿ ಅನೇಕ ರೂಪ ತಾಳುವುದು ಶ್ರೀಹರಿಗೆ ಒಂದು ವಿಹಾರ ಉಪಾಸಕರಿಗೆ ಉಪಾಸನೆಯ ಸೌಲಭ್ಯ ಮಹಾಲಕ್ಷ್ಮಿಯ ಕಣ್ಣಿಗೆ ಹಬ್ಬ, ಅವಳ ಅಭಿಮಾನ ಪಾತ್ರ ನಮ್ಮ ಈ ಬ್ರಹ್ಮಾಂಡ ಅದರೊಳಗಿನ ಕಣಕಣವೂ ಅವಳಿಗೆ ಪ್ರಿಯ ಅದರೊಳಗೆ ತನ್ನ ಪ್ರಣಯ ಸರ್ವಸ್ವವಾದ ಶ್ರೀಹರಿಯ ರೂಪಗಳ ದರ್ಶನ-

ಸೋಽಯಂ ವಿಹಾರ ಇಹ ಮೇ ತನುಭೃತ್ ಸ್ವಭಾವ
ಸಂಭೂತಯೇ ಭವತಿ ಭೂತಿಕೃದೇವ ಭೂತ್ಯಾಃ।

**ಸೂರ್ಯಕಿರಣಗಳಂತೆ:**

ಸೂರ್ಯನ ಕಿರಣಗಳು ಸೂರ್ಯೋದಯ ಕಾಲದಲ್ಲಿ ಸೂರ್ಯ ಮಂಡಲದಿಂದ ಹೊರಗೆ ಬರುವಂತೆ, ಸೂರ್ಯಾಸ್ತದಲ್ಲಿ ತಿರುಗಿ ಅಲ್ಲಿಗೇ ಹೋಗಿ ಲೀನವಾಗುವಂತೆ ಪ್ರೇರಕ ರೂಪಗಳಿಂದ ಪ್ರೇರ್ಯ ರೂಪಗಳು ಸೃಷ್ಟಿಕಾಲದಲ್ಲಿ ಹೊರಬಂದು ಕೊನೆಗೆ ಲಯ ಕಾಲದಲ್ಲಿ ಅಲ್ಲಿಯೇ ಲೀನವಾಗುತ್ತವೆ

**ಕೊಡುತ ಕೊಳುತಿಹ:**

ಸೃಷ್ಟಿ ಕಾಲದಲ್ಲಿ ತನ್ನ ಉದರದಿಂದ ಪ್ರಪಂಚವನ್ನು ಹೊರಗೆ ಹಾಕುತ್ತಾನೆ, ಲಯ ಕಾಲದಲ್ಲಿ ತಿರುಗಿ ಉದರದೊಳಗೆ ಸೇರಿಸಿಕೊಳ್ಳುತ್ತಾನೆ

ಪ್ರೇರಕ ರೂಪಗಳಿಂದ ಪ್ರೇರ್ಯರೂಪಗಳನ್ನು ಹೊರಗೆ ತಂದು ಪ್ರೇರ್ಯ ವಸ್ತುಗಳಲ್ಲಿ ಇರಿಸುತ್ತಾನೆ, ಜೀವರ ಸ್ವಭಾವದಲ್ಲಿರುವ ಪ್ರೇರಕ ರೂಪದಿಂದ ಪ್ರೇರ್ಯವಾದ ಪ್ರವೃತ್ತಿ ಉಂಟುಮಾಡುವಾಗ ಆ ಪ್ರವೃತ್ತಿಯೊಳಗೆ ತನ್ನ ಪ್ರೇರ್ಯರೂಪ ಇಟ್ಟಿರುತ್ತಾನೆ ಪ್ರವೃತ್ತಿಯಾದ ಬಳಿಕ ತಿರುಗಿ ಅದರಲ್ಲಿರುವ ಪ್ರೇರ್ಯ ರೂಪ ಪ್ರೇರಕ ರೂಪದಲ್ಲಿ ಸೇರಿ ಒಂದಾಗುತ್ತದೆ ನಮ್ಮ ಅನುಭವದಲ್ಲಿ ಈ ರೂಪಗಳ ಲೀಲೆ ಕಾಣುವುದಿಲ್ಲ ಜೀವ ಸ್ವಭಾವದಿಂದಲೆ ಪೂರ್ವಕರ್ಮಾನುಸಾರ ಪ್ರವೃತ್ತಿ ಹುಟ್ಟಿತೆಂದುಕೊಳ್ಳುತ್ತೇವೆ ಸೂರ್ಯಕಿರಣಗಳು ನಾಲ್ಕು ತಿಂಗಳ ಕಾಲ ಮಳೆ ನೀಡಿ ಎಂಟು ತಿಂಗಳ ಕಾಲ ಆ ಮಳೆ ನೀರನ್ನು ಹೀರಿಕೊಳ್ಳುತ್ತವೆ ಇದೂ ನಮಗೆ ಕಾಣುವುದಿಲ್ಲ ಸೂರ್ಯಕಿರಣಗಳು ಶರೀರದ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಹರಡಿದ್ದು ಶರೀರವನ್ನು ಕಾಪಾಡುತ್ತವೆ ಮರಣ ಕಾಲದಲ್ಲಿ ಹೊರಟುಹೋಗಿ ಶರೀರಪಾತಕ್ಕೆ

ಕಾರಣವಾಗುತ್ತವೆ ಸೂರ್ಯಕಿರಣಗಳು ಹೃದಯದಲ್ಲಿ ಸದ್ಬುದ್ಧಿಯನ್ನು ಪ್ರಚೋದಿಸಿ ಕಾಪಾಡುತ್ತವೆ. ವಿನಾಶ ಕಾಲದಲ್ಲಿ ದುರ್ಬುದ್ಧಿ ನೀಡುತ್ತವೆ-

ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್।

ಉದಾಹರಣೆಗೆ ದ್ರೌಪದೀವಸ್ತ್ರಾಪಹಾರಕ್ಕೆ ದುಃಶಾಸನನ ಜೀವಯೋಗ್ಯತೆ ಮತ್ತು ಪ್ರಾಚೀನ ದುಷ್ಕರ್ಮಗಳು ಕಾರಣ ಅವುಗಳಲ್ಲಿ ಪ್ರೇರಕ ರೂಪದಿಂದ ಇದ್ದು ದುರ್ಬುದ್ಧಿಯನ್ನು ಪ್ರೇರಿಸಿದ್ದ ಶ್ರೀಕೃಷ್ಣ ವಸ್ತ್ರಾಪಹರಣ ಪ್ರವೃತ್ತಿ ಇದರ ಕಾರ್ಯ ಈ ಪ್ರವೃತ್ತಿಯಲ್ಲಿ ಪ್ರೇರ್ಯ ರೂಪದಿಂದ ಇದ್ದು ಅದನ್ನು ಸಾಧಿಸಿದ ಇದೇ ರೀತಿ, ದ್ರೌಪದಿ ಮೊರೆ ಇಡುವಾಗ ದ್ರೌಪದಿಯ ಜೀವಯೋಗ್ಯತೆ ಪ್ರಾಚೀನ ಸುಕರ್ಮಗಳಲ್ಲಿ ಪ್ರೇರಕರೂಪದಿಂದ ನಿಂತು 'ಹಾ ಕೃಷ್ಣ ದ್ವಾರಕಾವಾಸಿನ್!' ಎಂಬ ಮೊರೆಯಲ್ಲಿ ಪ್ರೇರ್ಯರೂಪದಿಂದ ನಿಂತುಸುಬುದ್ಧಿ ನೀಡಿ ಅದನ್ನು ಸಾಧಿಸಿದ ಆದರ ಫಲವಾಗಿ ಕಾರಣವಾದ ವಸ್ತುವಿನಲ್ಲಿ ಪ್ರೇರಕರೂಪದಿಂದ ನಿಂತು ಕಾರ್ಯವಾದ ಸೀರೆಯಲ್ಲಿ ಪ್ರೇರ್ಯರೂಪದಿಂದ ಇದ್ದು ಅಕ್ಷಯಾಂಬರ ಸೃಷ್ಟಿಯಿಂದ ದ್ರೌಪದಿಯ ಮಾನರಕ್ಷಣೆ ಮಾಡಿದ ಅದರಿಂದ ಜೂಜಿನ ಸಮಯದಲ್ಲಿ ಹಸ್ತಿನಾವತಿಯಲ್ಲಿ ಪ್ರತ್ಯಕ್ಷವಾಗಿ ಶ್ರೀಕೃಷ್ಣನಿರಲಿಲ್ಲ, ಆದರೆ ಅಕ್ಷಯಾಂಬರ ಸೃಷ್ಟಿಯಿಂದ ಅವನು ಶಿಷ್ಟರಿಗೆ ಗೋಚರಿಸಿದ್ದ!

**ಅನಾರ್ಯರಿಗೆ ಗೋಚರಿಪುದೇನೋ**

ಅನಾರ್ಯರೆಂದರೆ ಅಶಿಷ್ಟರು, ನಾಸ್ತಿಕರು ಮೇಲೆ ಹೇಳಿದ ಹರಿ ಲೀಲೆಗಳು ಶ್ರದ್ಧಾಳುಗಳಾದ ಶಿಷ್ಟರಿಗೆ ಪದೇ ಪದೇ ಅನುಭವ ಗೋಚರವಾಗುವುವು ಇದೆಲ್ಲ ಮೂಢನಂಬಿಕೆಯೆಂದು ನಂಬಿದ ಅನಾರ್ಯರಿಗೆ ಎಂದೂ ಗೋಚರವಾಗುವುದಿಲ್ಲ ಅವರ ಮುಂದೆ ಇದನ್ನು ಹೇಳಕೂಡದು ಪರಮ ಭಗವದ್ಭಕ್ತರಿದನಾದರದಿ ಕೇಳುವುದು ವೇದಮಂತ್ರ ಹೀಗೆ ಹೇಳುತ್ತದೆ-

ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾಂ ಶೇವ ಧಿಷ್ಟೇಽಹಮಸ್ಮಿ।
ಅನಾರ್ಯಕಾಯಾನೃಜವೇ ಶಠಾಯ ನ ಮಾಂ ಬ್ರೂಯಾ ಋಜವೇ ಬ್ರೂಹಿ ನಿತ್ಯಂ।
(ಸಂಹಿತೋಪನಿಷದ್ ಬ್ರಾಹ್ಮಣ)

'ಅನಾರ್ಯರಿಗೆ ಕಪಟಿಗಳಿಗೆ ಧೂರ್ತರಿಗೆ ನನ್ನನ್ನು ಉಪದೇಶಿಸಬೇಡವೆಂದು ವಿದ್ಯೆ ಬ್ರಾಹ್ಮಣನನ್ನು ಬೇಡುತ್ತದೆ.'

ಅಶಿಷ್ಟರಾದವರನ್ನು ವೇದ ಅನಾರ್ಯರೆಂದು ಕರೆದಿದೆ ಅದೇ ಹೆಸರಿನಿಂದ ದಾಸರಾಯರೂ ಕರೆದಿದ್ದಾರೆ ತನ್ನ ಈ ಶ್ರೀಹರಿಕಥಾಮೃತಸಾರ ವೇದತುಲ್ಯವೆಂದು ಸೂಚಿಸಿದ್ದಾರೆ

**ಜನಕ ತನ್ನಾತ್ಮಜಗೆ ವರ ಭೂ**
**ಷಣ ದುಕೂಲವ ತೊಡಿಸಿ ತಾ ವಂ**
**ದನೆಯ ಕೈಕೊಳುತವನ ಹರಸುತ ಹರುಷ ಬಡುವಂತೆ।**
**ವನರುಹೇಕ್ಷಣ ಪೂಜ್ಯ ಪೂಜಕ**
**ನೆನಿಸಿ ಪೂಜಾಸಾಧನ ಪದಾ**
**ರ್ಥನು ತನಗೆ ತಾನಾಗಿ ಫಲಗಳನೀವ ಭಜಕರಿಗೆ ॥ ೧೦ ॥**

ತಂದೆ ಮಗನಿಗೆ ಒಳ್ಳೆಯ ಒಡವೆ ವಸ್ತ್ರಗಳನ್ನು ತೊಡಿಸಿ ನಮಸ್ಕಾರ ಮಾಡಿಸಿಕೊಂಡು ಹರಸುತ್ತ ಸಂತೋಷಪಡುವಂತೆ ಕಮಲಾಕ್ಷ ಶ್ರೀಹರಿ ಪೂಜ್ಯ ಪೂಜಕರಿಬ್ಬರೂ ತಾನೇ ಆಗಿ ಪೂಜೆಯೂ ಪೂಜಾ ಸಾಧನ ಪದಾರ್ಥವೂ ತನಗೆ ತಾನೇ ಆಗಿ ಭಕ್ತರಿಗೆ ಫಲಗಳನ್ನು ನೀಡುತ್ತಾನೆ

**ಜನಕ ತನ್ನಾತ್ಮಜಗೆ:**

ಹಿಂದಿನ ಪದ್ಯದಲ್ಲಿ ಪ್ರಪಂಚದ ಎಲ್ಲ ಜೀವಜಡವಸ್ತುಗಳೂ ಪರಸ್ಪರ ಕಾರ್ಯ ಕಾರಣಭಾವ ಸಂಬಂಧದಿಂದಲೋ ಪ್ರೇರ್ಯ ಪ್ರೇರಕಭಾವ ಸಂಬಂಧದಿಂದಲೋ ಗಾಢವಾಗಿ ಹೆಣೆದುಕೊಂಡಿದ್ದು ಯಾವುದೂ ಏಕಾಂಗಿಯಾಗಿ ಸ್ವತಂತ್ರವಾಗಿ ಇರಲಾರದು ಪ್ರವೃತ್ತಿಯನ್ನೂ ಮಾಡಲಾರದು ಹೀಗೆ ಎಲ್ಲವೂ ಪರಸ್ಪರ ಬೆಸೆದುಕೊಂಡಿರುವುದು ಸರ್ವಶಕ್ತನಾದ ಹರಿಯ ವ್ಯಾಪಾರ ಎಂದಿದೆ ಇದು ಅವನಿಂದ ಕೇವಲ ಯಾಂತ್ರಿಕವಾಗಿ ನಡೆಯುವುದೇ? ಅವನ ಶಕ್ತಿ ಕೇವಲ ಅಯಸ್ಕಾಂತದ ಚುಂಬಕ ಶಕ್ತಿಯೆ? ಸೂರ್ಯನ ಗುರುತ್ವಾಕರ್ಷಣ ಶಕ್ತಿಗೆ ಒಳಪಟ್ಟು ಗ್ರಹಗಳೆಲ್ಲ ವ್ಯವಸ್ಥಿತವಾಗಿ ಸುತ್ತುವಂತೆ, ವಿದ್ಯುತ್ತು ಬೃಹದ್ ಯಂತ್ರದೊಳಗೆ ಪ್ರವೇಶಿಸಿ ಅದ್ಭುತವಾದ ಕಾರ್ಯಗಳನ್ನು ಮಾಡುವಂತೆಯೆ ಭಗವಂತನೂ ಎಲ್ಲ ಜೀವಜಡಗಳಲ್ಲಿ ವ್ಯಾಪಿಸಿ ಯಾಂತ್ರಿಕವಾಗಿಯೆ ಕಾರ್ಯಭಾರ ನಡೆಸುವನೆ? ಈ ಪ್ರಶ್ನೆಗೆ ಈ ಪದ್ಯದಲ್ಲಿ ಸಮಾಧಾನವಿದೆ ಪರಮಾತ್ಮ ಜೀವಾತ್ಮರೊಳಗಿನ ಸಂಬಂಧ ತಂದೆ ಮಕ್ಕಳ ಬಾಂಧವ್ಯರೂಪದ್ದು ಹೆತ್ತ ತಂದೆಗೆ ಮಗನನ್ನು ಕಂಡಾಗ ಆನಂದ ತಾನಿತ್ತ ವಸ್ತ್ರ ಒಡವೆಗಳನ್ನು ಮಗ ತೊಟ್ಟು ಬಂದರೆ ಮಹಾ ಆನಂದ ಭಕ್ತಿಯಿಂದ ಆತ ನಮಿಸಿದರಂತೂ ಆಗುವ ಆನಂದಕ್ಕೆ ಪಾರವಿಲ್ಲ ಎದೆ ತುಂಬಿ ಆಶೀರ್ವಾದಗಳ ಮಳೆಗರೆಯುತ್ತಾನೆ ಹಾಗೇ ಭಗವಂತನೂ ಸಜ್ಜನರನ್ನು ಭಕ್ತರನ್ನು ಮಕ್ಕಳೆಂದು ಪ್ರೀತಿಯಿಂದ ಕಂಡು ಆನಂದಿಸುತ್ತಾನೆ. 'ಚರ ಬ್ರಹ್ಮ ವೈಷ್ಣವ' ಎಂಬಂತೆ ಜ್ಞಾನಿಗಳು ಅವನಿಗೆ ಉತ್ತಮವಾದ ಪ್ರತಿಮೆಗಳು ಅವರು ಒಡವೆ ವಸ್ತ್ರಾದಿಗಳಿಂದ ತಮ್ಮನ್ನು ಸಿಂಗರಿಸಿಕೊಂಡರೆ ನೋಡಿ ಮಹಾ ಆನಂದಪಡುತ್ತಾನೆ ಅದಕ್ಕೇ ಅವರಿಗೆ ಸಂಪತ್ತನ್ನು ನೀಡುತ್ತಾನೆ ಅವರು ಅದನ್ನು ಅನುಭವಿಸಿ 'ಸಕಲ ಜಗದಧೀಶಃ ಪ್ರೀಯತಾಂ ಶೌರಿಃ' ಎನ್ನುತ್ತ ನಮಿಸಿದರೆ ಅಪಾರ ಅನುಗ್ರಹದ ಹೊಳೆಯನ್ನೆ ಹರಿಸುತ್ತಾನೆ

**ವರಭೂಷಣ ದುಕೂಲವ ತೊಡಿಸಿ:**

ಅಣುಜೀವ ಸ್ವರೂಪಕ್ಕೆ ಆವರಕವಾಗಿ ಅನೇಕ ಸೂಕ್ಷ್ಮ ಸ್ಥೂಲ ನಾನಾ ವರ್ಣದ ಸುಂದರ ಶರೀರಗಳನ್ನು ವಸ್ತ್ರಗಳಂತೆ ಭಗವಂತ ತೊಡಿಸುತ್ತಾನೆ ಶುಭ್ರ ವಸ್ತ್ರ ಧರಿಸಿಯೆ ದೇವರಪೂಜೆ ಮಾಡಬೇಕು ಅದಕ್ಕೆ ನಿರ್ಮಲವಾದ ಸತ್ಕುಲ ಪ್ರಸೂತವಾದ ಸಾಧನ ಶರೀರವನ್ನು ನೀಡುತ್ತಾನೆ 'ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ' ಹಳೇ ಬಟ್ಟೆಯನ್ನು ತ್ಯಜಿಸಿ ಹೊಸ ಬಟ್ಟೆ ಧರಿಸುವಂತೆ ಒಂದು ಶರೀರ ಮುದಿಯಾದರೆ ಇನ್ನೊಂದು ಹೊಸ ತರುಣ ಶರೀರ ನೀಡುತ್ತಾನೆ ಹೊಸ ಶರೀರ ಬಂದಾಗ ಭಕ್ತ ಆ ಶರೀರದಿಂದ ಇನ್ನೂ ಚೆನ್ನಾಗಿ ಭಗವಂತನ ಆರಾಧನೆ ಮಾಡುತ್ತಾನೆ, ಜೀವ ಇದು ಭಗವಂತನಿಗೆ ಪ್ರಿಯವೆನಿಸುತ್ತದೆ 'ಭೂಷಣಕೆ ಭೂಷಣ ಇದು ಭೂಷಣ ವಿಶಾಲ ಕರ್ಣಕೆ ಭೂಷಣ ವಿಷ್ಣು ಕಥೆಯು' ಎಂದು ಪುರಂದರದಾಸರು ಹೇಳುವಂತೆ ಜ್ಞಾನಭಕ್ತಿ ವೈರಾಗ್ಯಗಳೆ ನಿಜವಾದ ಭೂಷಣಗಳು ಅವುಗಳನ್ನು ಭಕ್ತರಿಗೆ ಹರಿ ತಾನೇ ಕೊಟ್ಟು, ಕಂಡು, ತಾನೇ ಮೆಚ್ಚಿಕೊಳ್ಳುತ್ತಾನೆ. ಪಾಂಡವರು ಮಹಾಜ್ಞಾನಿಗಳೆಂದು, ಭಕ್ತರೆಂದು, ಮೆಚ್ಚಿ 'ಮಮ ಪ್ರಾಣಾ ಹಿ ಪಾಂಡವಾಃ' ಎನ್ನುತ್ತಾನೆ

**ತಾ ವಂದನೆಯ ಕೈಕೊಳುತ:**

ತಂದೆ ಮಗನಿಂದ ವಂದನೆ ಮಾಡಿಸಿಕೊಂಡು, 'ಮಗು! ನೀನು ನನ್ನ ಬಂಗಾರ! ಬಹುಕಾಲ ಸುಖವಾಗಿ ಬಾಳಪ್ಪ' ಎಂದು ಹರಸುತ್ತಾನೆ ಮಗನ ವಂದನೆಯನ್ನು ಸಂತೋಷದಿಂದ ಸ್ವೀಕರಿಸುತ್ತಾನೆ ಶ್ರೀಹರಿಯು ಹಾಗೇ ಭಕ್ತನಿಂದ ವಂದನೆ ಮಾಡಿಸಿಕೊಂಡು ಮೋಕ್ಷವನ್ನು ಅನುಗ್ರಹಿಸುತ್ತಾನೆ ಅದಕ್ಕೆ ಸಾಧನ ಶರೀರವೆಂಬ ವಸ್ತ್ರವನ್ನೂ ಜ್ಞಾನಾದಿ ಒಡವೆಗಳನ್ನೂ ತೊಡಿಸುತ್ತಾನೆ. ಅವುಗಳಿಂದ ಉಪಾಸನೆ ಮಾಡಿಸಿ ಆ ಉಪಾಸನೆಗೆ ತಾನೇ ಮೆಚ್ಚಿಕೊಳ್ಳುತ್ತಾನೆ ತಂದೆ ಮಗನನ್ನು ಅಪ್ಪುವಂತೆ ಹರಿಯೂ ಭಕ್ತನನ್ನು ಅಪ್ಪುತ್ತಾನೆ, ಮೋಕ್ಷ ಸುಖ ನೀಡುತ್ತಾನೆ

**ಹರಸುತ ಹರುಷ ಬಡುವಂತೆ:**

'ಆತ್ಮಾ ವೈ ಪುತ್ರನಾಮಾಸಿ' ಎನ್ನುವಂತೆ ತಂದೆ ಮಗನ ಏಳಿಗೆಯನ್ನು ತನ್ನ ಏಳಿಗೆ ಎಂದೇ ತಿಳಿಯುತ್ತಾನೆ ಹರಸಿ ಹರ್ಷ ಬಡುತ್ತಾನೆ ಶ್ರೀಹರಿಯೂ ಹಾಗೆಯೆ 'ಜ್ಞಾನೀತ್ವಾತ್ಮೈವ ಮೇ ಮತಂ' ಎನ್ನುತ್ತಾನೆ ಜ್ಞಾನಿಯ ಸುಖವನ್ನು ತನ್ನ ಸುಖವೆಂದೇ ಭಾವಿಸುತ್ತಾನೆ. ಅರ್ಜುನನ ವಧೆಗಾಗಿ ಕರ್ಣನಲ್ಲಿದ್ದ ಶಕ್ತ್ಯಾಯುಧ ಘಟೋತ್ಕಚನನ್ನು ಆಹುತಿ ತೆಗೆದುಕೊಂಡಾಗ ಶ್ರೀಕೃಷ್ಣ ಕುಣಿದಾಡಿದನಂತೆ! ಅರ್ಜುನನನ್ನು ತಬ್ಬಿಕೊಂಡು ಶಂಖನಾದ ಮಾಡಿ ಚೆನ್ನಾಗಿ ನಕ್ಕನಂತೆ! ಇದು ಕೇವಲ ನಟನೆಯಲ್ಲ. ಲೀಲೆ, ಲೀಲೆಯಿಂದಲೆ ಸದಾ ವ್ಯಕ್ತವೆ ಆಗಿರುವ ಆನಂದವನ್ನು ಪುನಃ ವ್ಯಕ್ತಗೊಳಿಸುತ್ತಾನೆ, ಕುಣಿಯುತ್ತಾನೆ

**ವನರುಹೇಕ್ಷಣ:**

ಕಮಲದ ಕಣ್ಣಿನವ, ಶ್ರೀಹರಿ ಅರಳಿದ ಕಮಲದಂಥ ಸುಂದರಕಣ್ಣಿನಿಂದ ಭಕ್ತನನ್ನು

ನೋಡುವುದರಿಂದ ಭಕ್ತ ಬದುಕುತ್ತಾನೆ ಭಕ್ತನನ್ನು ಹಾಗೆ ನೋಡುವುದರಿಂದ ಭಗವಂತನ ಕಣ್ಣುಗಳೂ ಕಮಲದಂತೆ ಅರುಳುತ್ತವೆ

**ಪೂಜ್ಯ ಪೂಜಕನೆನಿಸಿ**

ತಂದೆ ಮಗನನ್ನು ಪೂಜಿಸುತ್ತಾನೆ, ಮಗ ತಂದೆಯನ್ನು ಪೂಜಿಸುತ್ತಾನೆ ಕಿರಿಯರು ಹಿರಿಯರಿಗೆ ಭಕ್ತಿಯಿಂದ ಮಾಡಿದ ಸತ್ಕಾರವೇ ಪೂಜೆ ಎಂದಿಲ್ಲ ಹಿರಿಯರು ಕಿರಿಯರಿಗೆ ವಾತ್ಸಲ್ಯದಿಂದ ಸತ್ಕರಿಸಿದರೆ ಅದೂ ಪೂಜೆಯೆ ತಂದೆ ಮಗನಿಗೆ ವಾತ್ಸಲ್ಯದಿಂದ ವಸ್ತ್ರಾಲಂಕಾರ ನೀಡಿ ಪೂಜಿಸುತ್ತಾನೆ ಮಗ ಭಕ್ತಿಯಿಂದ ಅವುಗಳನ್ನು ಧರಿಸಿ ತಂದೆಯನ್ನು ನಮಿಸುವ ಮೂಲಕ ಪೂಜಿಸುತ್ತಾನೆ ಶ್ರೀಹರಿ ಇಬ್ಬರಲ್ಲಿಯೂ ಇದ್ದು ಪೂಜ್ಯನೂ ಪೂಜಕನೂ ತಾನೇ ಆಗುತ್ತಾನೆ ಪೂಜ್ಯ ಪೂಜಕರಿಬ್ಬರಿಗೂ ಆನಂದ ನೀಡುತ್ತಾನೆ

**ಪೂಜಾ ಸಾಧನ ಪದಾರ್ಥನು ತನಗೆ ತಾನಾಗಿ**

ಶ್ರೀಹರಿ ಪೂಜ್ಯ ಪೂಜಕರಲ್ಲಿ ಮಾತ್ರವಲ್ಲದೆ ಪೂಜೆಯಲ್ಲಿಯೂ ಪೂಜಾಸಾಧನ ಪದಾರ್ಥದಲ್ಲಿಯೂ ಇರುತ್ತಾನೆ ಪೂಜ್ಯ, ಪೂಜಕ, ಪೂಜೆ, ಪೂಜಾಸಾಧನ, ಇವೆಲ್ಲವುಗಳಲ್ಲಿಯೂ ಆಯಾ ರೂಪಗಳಿಂದ ಇದ್ದು ತನಗೆ ತಾನೇ ಪೂಜೆ ಮಾಡಿಕೊಳ್ಳುತ್ತಾನೆ ಅವನು ಇನ್ನಾರಿಗೂ ಪೂಜೆ ಮಾಡುವುದಿಲ್ಲ ಸ್ವರಮಣನಾದ್ದರಿಂದ ತನ್ನನ್ನು ತಾನೇ ಪೂಜಿಸಿಕೊಂಡು ಆನಂದಿಸುತ್ತಾನೆ

**ಫಲಗಳನೀವ ಭಜಕರಿಗೆ:**

ತಂದೆ ಕೊಟ್ಟ ವಸ್ತ್ರಾಲಂಕಾರಗಳನ್ನು ಮಗ ಧರಿಸಿದರೇ ತಂದೆಗೆ ಒಳ್ಳೆಯ ತೃಪ್ತಿ ಧರಿಸದಿದ್ದರೆ ಅಷ್ಟೇ ಬೇಸರ ಮಗ ವಸ್ತ್ರಾಲಂಕಾರಗಳನ್ನು ಧರಿಸುವುದೇ ಪೂಜೆ ಅದೇ ರೀತಿ ಭಕ್ತ ಭಗವಂತ ನೀಡಿದ ಸುಖವನ್ನು ಧರ್ಮಕ್ಕೆ ವಿರೋಧ ಬಾರದಂತೆ ಉಂಡು ಅದನ್ನು ಹರಿಗೆ ಸುಲಭ ಪೂಜೆಯಾಗಿ ಅರ್ಪಿಸಿದರೆ ಹರಿ ಅಷ್ಟಕ್ಕೇ ಒಲಿದು ಎಲ್ಲ ಅಭೀಷ್ಟ ಫಲಗಳನ್ನೂ ನೀಡುತ್ತಾನೆ 'ಈ ಪರಿಯಲರಿತುಂಬ ನರ ನಿತ್ಯೋಪವಾಸಿ !' ಎಂದು ಬಗೆದು ಮೋಕ್ಷಾದಿ ಸುಖ ಉಣಿಸುತ್ತಾನೆ

ನ ಋತೇ ತ್ವತ್ ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ।

'ನೀನಿಲ್ಲದೆ ಪ್ರಪಂಚದಲ್ಲಿ ಏನೂ ಕಾರ್ಯ ನಡೆಯದು ನಿನ್ನ ಪೂಜೆಯನ್ನು ನೀನೇ ಮಾಡು' -ಎಂದು ವೇದ ಹೇಳುತ್ತಿದ್ದರೂ ಜೀವನಿಗೆ ಭಗವಂತನ ಪೂಜೆಯಲ್ಲಿ ಅಸ್ವತಂತ್ರವಾದ ಕರ್ತೃತ್ವವಿದ್ದೇ ಇದೆ ಏನೂ ಅರಿಯದ ಶಿಶುವಿನಿಂದ ತಂದೆ ನಮಸ್ಕಾರ ಮಾಡಿಸಿಕೊಂಡು ಹರಸುತ್ತಾನೆ ಆಗ ಶಿಶುವಿಗೆ ಕರ್ತೃತ್ವವಿದ್ದೇ ಇದೆ ಗೀತಾಭಾಷ್ಯದಲ್ಲಿ-

ಸ್ವವಂದನಂ ಯಥಾ ಪಿತ್ರಾ ಕಾರಿತಂ ಶಿಶುಕರ್ತೃಕಂ।

ಎನ್ನುವಂತೆ ಜೀವನಿಗೆ ಕರ್ತೃತ್ವವಿರುವುದರಿಂದಲೆ ಅವನಿಗೆ ಅವನ ಕರ್ಮಾನುಸಾರ ಶ್ರೀಹರಿ ಫಲಗಳನ್ನು ನೀಡುತ್ತಾನೆ ಎನ್ನುವುದನ್ನು 'ಭಜಕರಿಗೆ' ಎಂಬ ಪದದಿಂದ ಸೂಚಿಸಿದ್ದಾರೆ ದಾಸರಾಯರು ಜೀವರು ಭಗವಂತನನ್ನು ಭಜಿಸಬೇಕು, ಭಜಕರೆನಿಸಬೇಕು ಭಜಿಸುವುದೆಂದರೆ 'ಭಜ ಸೇವಾಯಾಂ' ಭಗವಂತನನ್ನು ಸೇವಿಸುವುದು ಅದು 'ಶ್ರವಣಂ ಕೀರ್ತನಂ ವಿಷ್ಣೋಃ' ಎಂಬಂತೆ ಒಂಭತ್ತು ಬಗೆಯಿಂದ ಸಾಧ್ಯವಿದೆ

**ತಂದೆ ಬಹು ಸಂಭ್ರಮದಿ ತನ್ನಯ**
**ಬಂಧುಬಳಗವ ನೆರಹಿ ಮದುವೆಯ**
**ನಂದನಗೆ ತಾ ಮಾಡಿ ಮನೆಯೊಳಗಿಡುವ ತೆರನಂತೆ।**
**ಇಂದಿರಾಧವ ತನ್ನ ಇಚ್ಛೆಗ**
**ಳಿಂದ ಗುಣಗಳ ಚೇತನಕೆ ಸಂ**
**ಬಂಧಗೈಸಿ ಸುಖಾಸುಖಾತ್ಮಕ ಸಂಸೃತಿಯೊಳಿಡುವ ॥ ೧೧ ॥**

ತಂದೆ ಬಹಳ ಸಂಭ್ರಮದಲ್ಲಿ ತನ್ನ ಬಂಧುಬಳಗವನ್ನು ಕೂಡಿಸಿ ಮಗನಿಗೆ ಮದುವೆ ಮಾಡಿ ಮನೆಯೊಳಗೆ ಇಡುವ ರೀತಿಯಿಂದ ಇಂದಿರಾರಮಣನೂ ತನ್ನ ಇಚ್ಛೆಗಳಿಂದ ಪ್ರಕೃತಿಯ ಗುಣಗಳನ್ನು ಚೇತನಕ್ಕೆ ಸಂಬಂಧಗೊಳಿಸಿ ಸುಖ ಅಸುಖರೂಪವಾದ ಸಂಸಾರದಲ್ಲಿ ಇಡುತ್ತಾನೆ

**ಮದುವೆಯ ನಂದನಗೆ ತಾ ಮಾಡಿ**

ಹಿಂದಿನ ಪದ್ಯದಲ್ಲಿ ಶ್ರೀಹರಿ ಜೀವನಿಗೆ ಜನನ ಮರಣ ರೂಪವಾದ ಸಂಸಾರಾವಸ್ಥೆಯಲ್ಲಿ ವಸ್ತ್ರಾಭರಣಾದಿರೂಪದ ಭೋಗ ಭಾಗ್ಯಗಳನ್ನು ನೀಡಿ ತಾನು ಸಂತೋಷಪಡುವನು ಎಂದಿದೆ ಈಗ ಪ್ರಶ್ನೆ - ಅನಿಷ್ಟವಾದ ದುಃಖಮಯವಾದ ಈ ಸಂಸಾರಾವಸ್ಥೆಯನ್ನು ಶ್ರೀಹರಿ ಜೀವನಿಗೆ ಏಕೆ ನೀಡಬೇಕು? ನೀಡಿ, ಅದರ ಮಧ್ಯದಲ್ಲಿ ಅತ್ಯಲ್ಪವಾದ ವೈಷಯಿಕ ಸುಖ ನೀಡಲು ಏಕೆ ಓಡಿ ಬರಬೇಕು?

'ಅಲ್ಪಾಸ್ಥಿರ ಸುಖ ಖ ದ್ಯೋತಿಕಾಸು ದ್ಯೋತಮಾನಾಸ್ವಪಿ'

'ಕಾರಿರುಳ ಕಗ್ಗತ್ತಲೆಯಲ್ಲಿ ಮಿನುಗುವ ಮಿಣುಕು ಹುಳದಂತೆ ಸಂಸಾರ ಸುಖ'

ಎಂದು ತತ್ತ್ವೋದ್ಯೋತ ಟೀಕಾ ವಚನವಿದೆ ಹರಿ ಏಕೆ ಹೀಗೆ ಮಾಡುತ್ತಾನೆ?

ದಾಸರಾಯರು ಹೇಳುತ್ತಾರೆ, ಈ ಸಂಸಾರಾವಸ್ಥೆ ಅನಿಷ್ಟವಲ್ಲ ಮದುವೆಯಂತೆ ಸುಖಾಸುಖಾತ್ಮಕ ಮದುವೆಯ ಬಂಧನ ಸುಖಕ್ಕೂ ಕಾರಣ, ದುಃಖಕ್ಕೂ ಕಾರಣ 'ಹೆಂಡತಿ! ಪ್ರಾಣ ಹಿಂಡುತಿ' ಎನ್ನದೆ ವೈವಾಹಿಕ ಜೀವನವನ್ನು ಸುಖಮಯವಾಗಿ ಮಾಡಿಕೊಳ್ಳುವುದು ಒಂದು ಕಲೆ ಈ ಕಲೆಯಲ್ಲಿ ನಿಷ್ಣಾತನಾದವನು 'ಸಂಸಾರವೆಂಬಂಧ ಭಾಗ್ಯವಿರಲಿ' ಎನ್ನುತ್ತಾನೆ

'ಹರಿಯ ಕರುಣದೊಳಾದ ಭಾಗ್ಯವ ಹರಿ ಸಮರ್ಪಣೆ ಮಾಡಿ ಬದುಕಿರೊ'

ಎಂದು ಪುರಂದರದಾಸರು ಹೇಳುವಂತೆ ಹೆಂಡತಿ ಮಕ್ಕಳು ಧನಕನಕ ಮುಂತಾದುವನ್ನು ಚೆನ್ನಾಗಿ ಕಾಪಾಡುತ್ತ ಹರಿಗೆ ಸಮರ್ಪಣೆ ಮಾಡುತ್ತಾನೆ

'ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸಂನಿವೇದಯೇತ್'

ಎಂಬ ವಿಧಿಯನ್ನು ಅನುಸರಿಸಿ ಬಾಳುತ್ತಾನೆ

ಜನನ ಮರಣಗಳೂ ಅನಿಷ್ಟವಲ್ಲ ಜನನವೆಂದರೆ ಹೊಸ ಶರೀರ ಪ್ರಾಪ್ತಿ ಹೊಸಬಟ್ಟೆ ಹಾಕಿಕೊಂಡಂತೆ ಅದರಿಂದ ಹುಟ್ಟುಹಬ್ಬ ಆಚರಿಸುತ್ತೇವೆ ಮರಣವೂ ಜೀರ್ಣ ಶರೀರವನ್ನು ಬಿಡುವುದು ಹಳೆ ಬಟ್ಟೆ ಒಗೆದಂತೆ ಮುಂದೆ ಹೊಸಬಟ್ಟೆ ಸಿಗುವಾಗ ಹಳೆಬಟ್ಟೆಗೆ ಏಕೆ ಅಳಬೇಕು? 'ವಾಸಾಂಸಿ ಜೀರ್ಣಾನಿ ಯಥಾ ವಿಹಾಯ' ಎಂದು ಭಗವದ್ಗೀತೆ ಇದನ್ನೇ ಹೇಳಿದೆ ಅಧರ್ಮಮಯವಾದ ಬಾಳನ್ನು ಬಾಳುವವನಿಗೆ, 'ವ್ಯಾಧ ಮಾ ಜೀವ ಮಾ ಮರ' ಎನ್ನುವಂತೆ ಬದುಕಿದ್ದರೂ ದುಃಖ, ಸತ್ತಮೇಲೂ ದುಃಖ

**ಗುಣಗಳ ಚೇತನಕೆ ಸಂಬಂಧಗೈಸಿ**

ಗುಣಗಳ ಸಂಬಂಧ ಒಂದು ಮದುವೆ ಜೀವಚೇತನ ಗಂಡೇ ಇರಲಿ ಹೆಣ್ಣೇ ಇರಲಿ ಅದಕ್ಕೆ ಗುಣಗಳೆಂಬ ಹೆಣ್ಣುಗಳ ಸಂಬಂಧವಿದ್ದೇ ಇದೆ. ಪ್ರಕೃತಿಯ ಸತ್ವರಜತಮವೆಂಬ ಮೂರುಗುಣಗಳೆಂಬ ಹೆಣ್ಣುಗಳನ್ನು ತಂದು ಚೇತನಕ್ಕೆ ಮದುವೆ ಮಾಡುತ್ತಾನೆ, ಶ್ರೀಹರಿ.

ಸತ್ವಗುಣ ಸುಖ ಉಂಟು ಮಾಡುತ್ತದೆ ಅದರಿಂದ ಅದು 'ಗುಣ'ವೆನಿಸುವುದು ಸಹಜ

ರಜೋಗುಣ ತಮೋಗುಣಗಳೂ ದುಃಖ ಅಜ್ಞಾನಗಳಿಗೆ ಕಾರಣವಾಗಿದ್ದರೂ ಬಂಧಕವಾಗಿವೆ, ಬಿಡಿಸಲಾಗದ ಗಂಟು ಅದು, ಬಿಡಿಸಿಕೊಳ್ಳಲಾರವು ಬಂಧಕವಾದ ಹಗ್ಗಕ್ಕೆ ಸಂಸ್ಕೃತದಲ್ಲಿ 'ಗುಣ' ಎನ್ನುತ್ತೇವೆ ಹೀಗೆ ರಜತಮೋಗುಣಗಳೂ ಗುಣಗಳೆ

ಸತ್ವಗುಣ ಸುಬುದ್ಧಿಯನ್ನು ರಜತಮಗಳು ದುರ್ಬುದ್ಧಿಯನ್ನು ಉಂಟು ಮಾಡುವುದರಿಂದ ಗುಣಗಳನ್ನೇ ಸುಬುದ್ಧಿ ದುರ್ಬುದ್ಧಿಗಳೆಂದು ಕರೆದು,

ಬುದ್ಧಿಶ್ಚ ಪತ್ನೀ ಸಾ ದ್ವಿರೂಪಾ ಖಗೇಂದ್ರ

ಎಂದು ಎಲ್ಲ ಜೀವರಿಗೂ ಸುಬುದ್ಧಿ ದುರ್ಬುದ್ಧಿಗಳೆಂದು ಇಬ್ಬರು ಪತ್ನಿಯರು ಎಂದಿದೆ ಗಾರುಡ ಬ್ರಹ್ಮಕಾಂಡ

ಗುಣಗಳ 'ಸಂಬಂಧ' ಎಂದರೆ 'ಸಂ' ಬಿಗಿಯಾದ 'ಬಂಧ' ಬಂಧನ ಶ್ರೀಹರಿ ಜೀವನಿಗೆ ಶ್ರುತಿಸ್ಮೃತಿಗಳಲ್ಲಿ ಅನೇಕ ಆಜ್ಞೆಗಳನ್ನು ಮಾಡಿದ್ದಾನೆ, ಎತ್ತಿಗೆ ಮೂಗುದಾರದಂತೆ, ಈ ಆಜ್ಞೆಗಳು ತಂತಿಬದ್ಧರು ಜೀವರು ಎನ್ನುತ್ತದೆ ಉಪನಿಷತ್ತು ದತ್ತಸ್ವಾತಂತ್ರ್ಯವನ್ನು ನೀಡಿದ್ದಾನೆ ಅದನ್ನು

ಸದುಪಯೋಗ ಪಡಿಸಿಕೊಂಡು ಅವನ ಆಜ್ಞೆಯಂತೆ ಸತ್ಕರ್ಮ ಮಾಡಿದರೆ ಒಲಿಯುತ್ತಾನೆ ದುಷ್ಕರ್ಮ ಮಾಡಿದರೆ ಮುನಿಯುತ್ತಾನೆ ಈ ಬಗೆಯಾದ ಬಂಧನ ವೈವಾಹಿಕ ಜೀವನದಲ್ಲಿಯೂ ಉಂಟು ಗೃಹಸ್ಥಧರ್ಮವನ್ನು ಅವನು ಕಟ್ಟುನಿಟ್ಟಾಗಿ ಪಾಲಿಸಬೇಕು

**ತನ್ನ ಇಚ್ಛೆಗಳಿಂದ**

ಚೇತನಕ್ಕೆ ಗುಣಸಂಬಂಧ ಬಂಧಕವೇನೋ ಹೌದು ಆದರೆ ಅದು ಕೇವಲ ನಿಮಿತ್ತ ಮಾತ್ರ ಹರಿಯ ಇಚ್ಛೆಗಳು ಅಂದರೆ ಆಜ್ಞೆಗಳು, ವಿಧಿನಿಷೇಧಗಳೆ ವಾಸ್ತವವಾಗಿ ಬಂಧಕವಾಗಿವೆ ಒಬ್ಬನ ಸಾಧನೆ ಪೂರ್ತಿಯಾಗದೆ ಅವನ ಸ್ವಾಭಾವಿಕ ಗುಣವ್ಯಕ್ತವಾಗ ಬಾರದೆಂಬ ಹರಿಯ ಇಚ್ಛೆ ಬಂಧಕವಾಗಿದೆ ವ್ಯಕ್ತವಾಗದಿರಲು ಜೀವನ ಅನಾದಿ ಲಿಂಗ ಶರೀರ ನಿಮಿತ್ತ ಮಾತ್ರವಾಗಿದೆ

**ಸುಖಾಸುಖಾತ್ಮಕ ಸಂಸೃತಿ**

ಸಂಸಾರ 'ಸುಖ' ದಂತೆ ಕಾಣುತ್ತದೆ 'ಅಸುಖಾತ್ಮಕ' ವಾಗಿದೆ ಸಾಂಸಾರಿಕ ಸುಖ ಮೇಲುನೋಟಕ್ಕೆ ಮಾತ್ರ ಸುಖ ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ ಹೇಗೋ ಹಾಗೆ ಆಟಕ್ಕೆ ಇಳಿದರೆ ಅಸುಖಾತ್ಮಕವೇ ಆಗಿದೆ

ಸಂಸಾರ 'ಸುಖ' ಮತ್ತು 'ಅಸುಖ' ಆತ್ಮಕವಾಗಿದೆ

'ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ'

'ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯ ಪಂಕ್ತಿಃ'

ಎಂಬಂತೆ ಸುಖದುಃಖಗಳೆರಡೂ ಉಂಟು ಸಂಸಾರದಲ್ಲಿ ಸುಖವನ್ನು ಶ್ರೀಹರಿ ಕೊಡುವುದು ತನ್ನಲ್ಲಿ ಪ್ರೀತಿ ಮಾಡಲಿ ಭಕ್ತಿ ಮಾಡಲಿ ಎಂದು ದುಃಖ ನೀಡುವುದು ವಿಷಯ ವೈರಾಗ್ಯ ಬರಲಿ ಎಂದು ದುಃಖಕ್ಕೆ ಮಾನವ ತಾನು ಕಾರಣನಲ್ಲ ಎನ್ನುತ್ತಾನೆ 'ನಾನೇನ ಮಾಡಿದೆನೋ ರಂಗಯ್ಯ!' ಎನ್ನುತ್ತಾನೆ ಹಾಗಾದರೆ ಸುಖವನ್ನು ನೀನು ಮಾಡುತ್ತಿಲ್ಲ ನಾನೇ ಎರಡಕ್ಕೂ ಕರ್ತ ಎನ್ನುತ್ತಾನೆ ಶ್ರೀಹರಿ ಹೀಗೆ ಜ್ಞಾನವನ್ನು ನೀಡುತ್ತಾನೆ ಅದರಿಂದ ಜ್ಞಾನ ಭಕ್ತಿ ವೈರಾಗ್ಯ ಸಂಪಾದನೆಗೆ ಈ ಸಂಸಾರ ಸುಖದುಃಖಾತ್ಮಕವಾಗಿ ಅಪೇಕ್ಷಣೀಯವೆ ಆಗಿದೆ ಹೇಯವಲ್ಲ

ಸಂಸಾರ ವಸ್ತುತಃ ಸುಖಕರವಾಗಿದ್ದು ಅಸುಖಕರವೆಂದು ಮಾನವ ತಿಳಿಯುತ್ತಾನಷ್ಟೆ ಅದರಿಂದ ಸುಖಾಸುಖಾತ್ಮಕ ವಸ್ತುತಃ ಚಿಪ್ಪು, ಬೆಳ್ಳಿಯೆಂದು ತಿಳಿಯುತ್ತಾನೆ ಅದು ಶುಕ್ತಿರಜತ ವಸ್ತುತಃ ಹಗ್ಗ, ಹಾವೆಂದು ತಿಳಿಯುತ್ತಾನೆ. ಅದು ರಜ್ಜು ಸರ್ಪ ಹಾಗೇ ಇದು ಈ ಸಂಸಾರವನ್ನು ಹರಿ ಕೊಟ್ಟುದು ಮೋಕ್ಷಸುಖ ಸಾಧನವಾಗಿ ಮಾಡಿಕೊಳ್ಳಲಿ ಎಂದು ಅದಕ್ಕೇ ಸಾಧನ ಶರೀರವನ್ನು ಕೊಡುತ್ತಾನೆ ಅದರಿಂದ ಸಂಸಾರ ಮೋಕ್ಷ ಸುಖಕರ ಹೇಸಿಗೆ ಸಂಸಾರ ಎನ್ನಕೂಡದು ಐತರೇಯೋಪನಿಷತ್ತು ಸ್ತ್ರೀಪುರುಷರ ಶುಕ್ಲ ಶೋಣಿತಗಳಿಗೆ ಜಿಗುಪ್ಸೆ ಪಡಬಾರದು ಎನ್ನುತ್ತದೆ 'ರತಿಕಾಲೇ ಮುಖಂ ಸ್ತ್ರೀಣಾಂ ಶುದ್ಧಂ' ಅಧರಾಮೃತ ಅಪವಿತ್ರವಲ್ಲ!

**ಇಂದಿರಾಧವ** :

ಇಂದಿರೆ, ಮಹಾಲಕ್ಷ್ಮಿ ಪ್ರಕೃತಿಗೆ ಅಭಿಮಾನಿನಿ ಎಲ್ಲ ಜೀವರೂ ಅವಳ ಮಕ್ಕಳು ಆ ತಾಯಿ ಎಲ್ಲರನ್ನೂ ತನ್ನ ಉಡಿಯಲ್ಲಿಟ್ಟುಕೊಂಡು ಕಾಪಾಡುತ್ತಾಳೆ ಪ್ರಕೃತಿಯ ಆವರಣಗಳಿಂದ ಅವರನ್ನು ಸುತ್ತಿ ಸುತ್ತಿಟ್ಟು ಬಹುಜತನದಿಂದ ನೋಡಿಕೊಳ್ಳುತ್ತಾಳೆ ಅವರ ಸ್ವರೂಪ ಸುಖ ಅಭಿವ್ಯಕ್ತಿಯಾಗುವವರೆಗೂ ಕಾದು ಅಭಿವ್ಯಕ್ತಿಯಾದೊಡನೆ ಎಲ ಆವರಣಗಳನ್ನು ತೆಗೆದೊಗೆದು ತನ್ನೊಳಗೆ ಸದಾ ಇಟ್ಟುಕೊಂಡು ಸುಖನೀಡುತ್ತಾಳೆ ಅಂದರೆ, ಸಂಸಾರಾವಸ್ಥೆಯಲ್ಲಿ ತನ್ನಿಂದ ಅಭಿಮನ್ಯುಮಾನವಾದ ಪ್ರಕೃತಿಯ ಮಡಿಲಲ್ಲಿ ಜೀವವನ್ನಿಟ್ಟು, ಮೋಕ್ಷದಲ್ಲಿ ತನ್ನ ಸ್ವರೂಪವೆ ಆಗಿರುವ ಮುಕ್ತಿಲೋಕದಲ್ಲಿ ಇಟ್ಟುಕೊಳ್ಳುತ್ತಾಳೆ ಅವಳ ಪತಿ ಶ್ರೀಹರಿ ಎಂದ ಮೇಲೆ ಅವನು ಜೀವರಿಗೆ ಸಂಸಾರವನ್ನು ಮೋಕ್ಷವನ್ನು ಕರುಣಿಸುವುದು ಸಹಜವೆ

**ಸಂಸೃತಿಯೊಳಿಡುವ** :

ಸಂಸೃತಿ ಎಂದರೆ ಸಂಸಾರ ಇಲ್ಲಿ ಸ್ಥೂಲದೇಹ ಅದುಮನೆ ಗುಣಗಳ ಸಂಬಂಧವೆಂದರೆ ಲಿಂಗದೇಹಬಂಧ, ಅದರಲ್ಲಿರುವ ಸತ್ವ ರಜಸ್ತಮೋಗುಣಗಳ ಬಂಧ ಇದು ವಿವಾಹ ಗುಣ ಸಂಬಂಧ ರೂಪವಾದ ಈ ವಿವಾಹ ಇಂದು ನಿನ್ನೆಯದಲ್ಲ, ಅನಾದಿ ಆದರೂ ಅವನಿಚ್ಛೆಯಿಂದಲೆ ಅನಾದಿಕಾಲದಿಂದ ಇದೆ ಅದರಿಂದ ಮದುವೆ 'ಮಾಡಿದ' ನೆಂದಿದೆ ಸ್ಥೂಲದೇಹ ಹಾಗೆ ಅನಾದಿಯಲ್ಲ ಹರಿ ಕಾಲಕಾಲಕ್ಕೆ ಬೇರೆ ಬೇರೆ ಸ್ಥೂಲದೇಹ ಕೊಡುತ್ತಾನೆ ಒಂದು ಮನೆ ಹಳೆಯದಾದರೆ ಇನ್ನೊಂದು ಹೊಸಮನೆ ನವದ್ವಾರಗಳಿಂದ ಶೋಭಿಸುವ ಅರಮನೆ ಅಲ್ಲಿರುವ ಹೃದಯ ಸಿಂಹಾಸನದಲ್ಲಿ ಅವನೆ ಇರುತ್ತಾನೆ ಅವನ ಪಾದಮೂಲದಲ್ಲಿ ಮುಖ್ಯಪ್ರಾಣ ಅವನ ಪಾದ ಮೂಲದಲ್ಲಿ ಜೀವಸುರಕ್ಷಿತವಾಗಿ ಇರುತ್ತಾನೆ ಅವನಿಗೆ ಈ ಲಿಂಗದೇಹವಾಗಲಿ, ಸ್ಥೂಲದೇಹವಾಗಲಿ ಅನಿಷ್ಟವಲ್ಲ ಶ್ರೀಹರಿ ಪ್ರೀತಿಯಿಂದ ಕೊಟ್ಟಿರುವುದು ಅದನ್ನು ಮೋಕ್ಷಸಾಧನವಾಗಿ ಮಾಡಿಕೊಂಡರೆ ಅವನಿಗೆ ಇನ್ನಷ್ಟು ಪ್ರೀತಿ

**ತೃಣಕೃತಾಲಯದೊಳಗೆ ಪೊಗೆ ಸಂ**
**ದಣಿಸಿ ಪ್ರತಿ ಛಿದ್ರದಲಿ ಪೊರಮ**
**ಟ್ಟನಲನಿರವನು ತೋರಿ ತೋರದಲಿಪ್ಪ ತೆರನಂತೆ।**
**ವನಜಾಂಡದೊಳಖಿಲ ಜೀವರ**
**ತನುವಿನೊಳಹೊರಗಿದ್ದು ಕಾಣಿಸ**
**ದನಿಮಿಷೇಶನು ಸಕಲಕರ್ಮವ ಮಾಳ್ಪನವರಂತೆ** ॥ ೧೨ ॥

ಹುಲ್ಲಿನ ಮನೆಯಲ್ಲಿ ಹೊಗೆ ತುಂಬಿದರೆ ಛಿದ್ರಗಳ ಮೂಲಕ ಹೊರಗೆ ಬಂದು ಒಳಗಿನ ಬೆಂಕಿಯ ಅಸ್ತಿತ್ವವನ್ನು ತೋರಿ ತೋರದಂತೆ ಇರುತ್ತದೆ ಇದೇ ರೀತಿ ದೇವೇಶನಾದ ಶ್ರೀಹರಿ

ಬ್ರಹ್ಮಾಂಡದೊಳಗೆ ಎಲ್ಲ ಜೀವರ ಶರೀರದ ಒಳಗೆ ಹೊರಗೆ ಎಲ್ಲೆಡೆ ಕಾಣಿಸದಂತೆ ಇದ್ದು ಅವರಂತೆ ಸಕಲ ಕರ್ಮಗಳನ್ನು ಮಾಡುತ್ತಾನೆ

ಹಿಂದಿನ ಪದ್ಯದಲ್ಲಿ 'ಸುಖಾಸುಖಾತ್ಮಕ ಸಂಸೃತಿಯೊಳಿಡುವ' ಸತ್ಕರ್ಮ ದುಷ್ಕರ್ಮಗಳನ್ನು ಮಾಡಿಸಿ ಸುಖದುಃಖಗಳನ್ನು ನೀಡುತ್ತಾನೆ ಹರಿ ಎಂದಿದೆ ಈಗ ಈ ಪದ್ಯದಲ್ಲಿ ಜೀವ ಕೆಲವೊಮ್ಮೆ ಸತ್ಕರ್ಮ ಮಾಡಿ ಸುಖ ಪಡೆಯುತ್ತಾನೆ ದುಷ್ಕರ್ಮ ಮಾಡಿ ದುಃಖ ತಂದು ಕೊಳ್ಳುತ್ತಾನೆ ಏಕೆ? ಯಾವಾಗಲೂ ಸತ್ಕರ್ಮವನ್ನೇ ಮಾಡಿ ಸುಖವನ್ನೇ ಏಕೆ ಪಡೆಯುವುದಿಲ್ಲ? ಅವನು ಅಸ್ವತಂತ್ರ ಸ್ವತಂತ್ರನಾದ ಪ್ರೇರಕ ಶ್ರೀಹರಿ ಪ್ರೇರಿಸಿದಂತೆ ಆತ ಕರ್ಮಗಳನ್ನು ಮಾಡುತ್ತಾನೆ ಹರಿಯೂ ಅವನ ಸ್ವರೂಪಯೋಗ್ಯತೆಗೆ ಅನುಗುಣವಾಗಿಯೇ ಪ್ರೇರಿಸುತ್ತಾನೆ ಈ ಸತ್ಯಾಂಶವನ್ನು ತಿಳಿಯುವುದು ಕಷ್ಟವೇನಲ್ಲ ಆದರೆ ಕೆಲವರು ತಿಳಿಯುವುದಿಲ್ಲ ಅದು ಅವರ ಯೋಗ್ಯತೆ ಎನ್ನುತ್ತಿದ್ದಾರೆ, ದಾಸರಾಯರು.

**ತೃಣಕೃತಾಲಯದೊಳಗೆ ಹೊಗೆ**

ಇಲ್ಲಿ ದೇಹವನ್ನು ಹುಲ್ಲಿನ ಮನೆಗೆ ಹೋಲಿಸಲಾಗಿದೆ ಮನೆಯ ಮೇಲಿನ ಹುಲ್ಲಿನ ಹೊದ್ದಿಕೆ ಶರೀರದಲ್ಲಿ ಸಪ್ತಧಾತುಗಳು ಛಿದ್ರಗಳೆ ಮನಸ್ಸು ಜ್ಞಾನೇಂದ್ರಿಯ ಕರ್ಮೇಂದ್ರಿಯ ಗಳು ಹೊಗೆಯೆ ಜೀವರ ಶರೀರದಲ್ಲಿ ನಡೆಯುವ ಕರ್ಮ ಶರೀರದ ಸಪ್ತ ಧಾತುಗಳ ಆವರಣದೊಳಗೆ ಹೃದಯದಲ್ಲಿ ಜೀವ ವಾಸ ಮಾಡುತ್ತಾನೆ ಜೊತೆಗೆ ಪ್ರೇರಕನಾಗಿ ಹರಿಯೂ ಇರುತ್ತಾನೆ ಜೀವಯೋಗ್ಯತಾನುಗುಣವಾಗಿ ಹರಿ ಪ್ರೇರಿಸಿದಂತೆ ಕರ್ಮ ಉದ್ಭವಿಸಿ ಶರೀರದೊಳಗೆ ಹೊರಗೆ ಅಂದರೆ ಅಂತಃಕರಣ ದಲ್ಲಿಯೂ ಬಾಹ್ಯ ಇಂದ್ರಿಯಗಳಲ್ಲಿಯೂ ವ್ಯಾಪಿಸುತ್ತದೆ ಅಂತಃಕರಣದಲ್ಲಿ ಮಾನಸಿಕ ಕರ್ಮ ಬಾಹ್ಯ ಇಂದ್ರಿಯಗಳಲ್ಲಿ ವಾಚಿಕ ಕಾಯಿಕ ಕರ್ಮಗಳು ಇದನ್ನು ಹುಲ್ಲಿನ ಮನೆಯೊಳಗೆ ಹೊರಗೆ ವ್ಯಾಪಿಸುವ ಹೊಗೆಗೆ ಹೋಲಿಸಲಾಗಿದೆ

ದೂರದ ಬೆಟ್ಟದಲ್ಲಿರುವ ಹೊಗೆ ಬೆಟ್ಟದಲ್ಲಿ ಬೆಂಕಿಯ ಅಸ್ತಿತ್ವವಿರುವುದನ್ನು ಸೂಚಿಸುತ್ತದೆ ಅದನ್ನೇ ಉದಾಹರಣೆಯಾಗಿ ಕೊಡಬಹುದಾಗಿತ್ತು ಆದರೆ ತೃಣಕೃತಾಲಯದ, ಹುಲ್ಲಿನ ಮನೆಯ ದೃಷ್ಟಾಂತ ನೀಡಲಾಗಿದೆ ಏಕೆಂದರೆ ನಮ್ಮ ಶರೀರ ಬೆಟ್ಟದಂತೆ ಸ್ಥಿರವಲ್ಲ ಶಾಶ್ವತವಲ್ಲ ಹುಲ್ಲಿನ ಮನೆಯಂತೆ ಜೋರಾಗಿ ಗಾಳಿ ಬೀಸಿದರೆ ಹಾರಿಹೋಗುತ್ತದೆ ನೆರೆ ನೀರಲ್ಲಿ ಕೊಚ್ಚಿ ಹೋಗುತ್ತದೆ ಬೆಂಕಿಯಲ್ಲಿ ಸುಟ್ಟು ಹೋಗುತ್ತದೆ ಮಣ್ಣಿಗೆ ಸೇರಿ ಮಣ್ಣಾಗುತ್ತದೆ ಆದರೂ ಋಷಿ ಮುನಿಗಳು ತಪಸ್ಸು ಮಾಡುವ ಪಾವನ ಸ್ಥಳ ಹುಲ್ಲಿನ ಮನೆ ನಮ್ಮ ಪವಿತ್ರವಾದ ಸಾಧನ ಶರೀರಕ್ಕೆ ಸರಿಯಾದ ಉದಾಹರಣೆ ಬೆಟ್ಟದಲ್ಲಿ ಬೆಂಕಿ ಬಳಿಗೆ ಹೋದರೆ ಸಾಕು ಕಣ್ಣಿಗೆ ಕಾಣುತ್ತದೆ ಆದರೆ ಶರೀರದಲ್ಲಿ ನೆಲೆಸಿರುವ ಹರಿ ಹಾಗಲ್ಲ ಅಂತರಂಗದಲ್ಲಿ ಕಾಣಬೇಕು ಹೊರಗೆ ಅರಸುವುದಕ್ಕಿಂತ ಒಳಗೇ ಹುಡುಕಬೇಕು, ಅಂತರ್ಮುಖಿಗಳಾಗಬೇಕು ಇದನ್ನು ಹುಲ್ಲಿನ ಮನೆಯ ಒಳಗೇ ಕಾಣಬೇಕಾಗುವ ಬೆಂಕಿಯ ಉದಾಹರಣೆಯೆ ಹೆಚ್ಚು ಸಮರ್ಥವಾಗಿ ತಿಳಿಸಬಲ್ಲುದು

ಹುಲ್ಲಿನ ಮನೆಯೊಳಗೆ ಹೊರಗೆ ವ್ಯಾಪಿಸಿದ ಹೊಗೆಯೂ ಸಾಧಾರಣ ಹೊಗೆಯಲ್ಲ, ಹೋಮ ಧೂಮ ಅದು ಮೋಕ್ಷಸಾಧನಭೂತವಾದ ಪವಿತ್ರಕರ್ಮದ ಸಂಕೇತವಾಗಿದೆ ತ್ರಿಕರಣಜನ್ಯವಾದ ಈ ಕರ್ಮ ಶರೀರದ ಒಳಗೂ ಹೊರಗೂ ವ್ಯಾಪಿಸಿ ಕರ್ಮಪ್ರೇರಕನಾದ ಹರಿಯ ಅಸ್ತಿತ್ವವನ್ನು ಸೂಚಿಸುತ್ತದೆ

ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ।

'ವಿಷ್ಣುವಿನ ಕರ್ಮಗಳನ್ನು ನೋಡಿರಿ ಅವುಗಳಿಂದಲೇ ಜೀವರ ಎಲ್ಲ ಕರ್ಮಗಳೂ ನಡೆಯುತ್ತಿವೆ.'

**ಅನಲನಿರವನು ತೋರಿ ತೋರದಲಿಪ್ಪ ತೆರನಂತೆ:**

'ಹೊಗೆ ಬೆಂಕಿಯ ಅಸ್ತಿತ್ವವನ್ನು ತೋರಿಯೂ ತೋರದಂತೆ ಇರುತ್ತದೆ' ಎಂದರೇನು? ಬೆಂಕಿ ತನ್ನನನ್ನು ತಾನು ತೋರಿಯೂ ತೋರದಂತೆ ಇರುತ್ತದೆ ಎಂದರೆ ಒಪ್ಪಬಹುದು ಹುಲ್ಲಿನ ಮನೆಯೊಳಗಿರುವ ಬೆಂಕಿ ಒಳಗೆ ಹೋದರೆ ತೋರುತ್ತದೆ ಹೊರಗೇ ನಿಂತರೆ ತೋರುವುದಿಲ್ಲ ಮನೆಯೊಳಗೆ ಹೊರಗೆ ತುಂಬಿದ ಹೊಗೆ ತೋರಿ ತೋರದಂತಿರಲು ಸಾಧ್ಯವೆ? ದೂರದಿಂದಲೂ ತೋರುತ್ತದೆ ತಾನೆ? ಹೀಗೆ ಅಭಿಪ್ರಾಯ ಹೇಳಬೇಕು-

ಹೊಗೆ ಬೆಂಕಿಯನ್ನು ನಮ್ಮ ಊಹೆಗೆ ಒಳಗಣ್ಣಿಗೆ ತೋರಿ ಹೊರಗಣ್ಣಿಗೆ ತೋರದೆ ಇರುತ್ತದೆ ಹಾಗೇ ಶರೀರದೊಳಗೆ ಹರಿಯ ಅಸ್ತಿತ್ವವಿರುವುದನ್ನು ಅವನು ಜೀವರಿಗೆ ಮಾಡುವ ಪ್ರೇರಣೆ ಒಳಗಣ್ಣಿಗೆ ತೋರಿಸಿ ಹೊರಗೆ ತೋರದಿರುತ್ತದೆ ಏಕೆಂದರೆ ಸಕಲ ಕರ್ಮವ ಮಾಳ್ಪನವರಂತೆ ! ಹರಿಯ ಕರ್ಮ ಜೀವರ ಕರ್ಮದಂತೆಯೆ ಇರುವುದರಿಂದ, ಜೀವರೆ ಮಾಡಿದಂತಿರುವುದರಿಂದ ಹರಿಯ ಅಸ್ತಿತ್ವವನ್ನು ಹರಿಯ ಕರ್ಮ ತೋರಿ ತೋರದಂತೆಯೆ ಇರುತ್ತದೆ

ಅಥವಾ ಹೊಗೆ ಎಲ್ಲರಿಗೂ ಹೊಗೆಯಾಗಿಯೆ ಕಾಣುವುದಿಲ್ಲ ಹುಲ್ಲಿನ ಮನೆಯ ಮೇಲೆ ಹೊಗೆ ಹಬ್ಬಿದ್ದರೆ ಕೆಲವರು ಮಂಜು ಕವಿದಿದೆ ಎಂದು ತಿಳಿಯಬಹುದು ಅವರಿಗೆ ಹೊಗೆ ಬೆಂಕಿಯನ್ನು ತೋರದು ಹಾಗೇ ಕೆಲವರಿಗೆ ಹರಿಯ ಕರ್ಮ ಜೀವರ ಕರ್ಮವೆಂದೇ ತೋರುವುದು ಅವರಿಗೆ ಹರಿಯ ಕರ್ಮ ಹರಿಯನ್ನು ಸರ್ವಥಾ ತೋರದು ಯಾರು ಹರಿಯ ಕರ್ಮವನ್ನು ಯಥಾರ್ಥವಾಗಿ ತಿಳಿಯುವರೋ ಅವರಿಗೆ ಮಾತ್ರ ತೋರೀತು ಹೀಗೆ ತೋರಿ ತೋರದೆ ಇರುತ್ತದೆ

ಅಥವಾ ಹೊಗೆ ಎಂದರೆ ಹೋಮಧೂಮ ವಿವಕ್ಷಿತ ಅದು ಯಾಗಾಗ್ನಿಯ ಅಸ್ತಿತ್ವವನ್ನು ತೋರುತ್ತದೆ, ಯಾಗವೆಂದರೇನು, ಅದರ ಮಹತ್ವವೇನು ಎಂದು ತಿಳಿದವರಿಗೆ ಮಾತ್ರ ಇದರಲ್ಲಿ ನಂಬಿಕೆ ಇಲ್ಲದವರಿಗೆ ಯಾಗ ಹೋಮ ಎಂದರೆ ತುಪ್ಪ ಹವಿಸ್ಸುಗಳ ಅಪವ್ಯಯವೆಂದೇ ತೋರುತ್ತದೆ ಬೆಂಕಿ ಬರಿ ಬೆಂಕಿಯಾಗಿ ತೋರುತ್ತದೆ ಅದೇ ರೀತಿಯಲ್ಲಿ ಜೀವರ

ಕರ್ಮಹರಿಯಿಂದ ಪ್ರೇರಿತವೆಂದು ತಿಳಿದವರಿಗೆ ಜೀವರ ಕರ್ಮ ಹರಿಯ ಅಸ್ತಿತ್ವವನ್ನು ತೋರುತ್ತದೆ ಅದನ್ನು ನಂಬದವರಿಗೆ ತೋರದು

ಅಥವಾ ಹೊಗೆ ಎಂದರೆ ಹರಿಯು ಜೀವನಲ್ಲಿದ್ದು ಮಾಡುವ ಕರ್ಮವೆಂದಿಟ್ಟುಕೊಂಡರೆ ಬೆಂಕಿ ಜೀವನ ಸ್ವರೂಪ ಯೋಗ್ಯತೆ ಜೀವಯೋಗ್ಯತೆಗೆ ಅನುಗುಣವಾಗಿಯೆ ಹರಿ ಜೀವರನ್ನು ಪ್ರೇರಿಸುತ್ತಾನೆ ಅದರಿಂದ ಹೊಗೆ ಬೆಂಕಿಯ ಅಸ್ತಿತ್ವವನ್ನು ತಿಳಿಸುವಂತೆ ಹರಿ ಜೀವನಲ್ಲಿ ಮಾಡುವ ಕರ್ಮ ಆ ಜೀವನ ಯೋಗ್ಯತೆ ಏನೆಂಬುದನ್ನು ತೋರಿಸು- ತ್ತದೆ ತಾನು ತನ್ನನ್ನು ಮಾತ್ರ ತೋರಿಸದು ಜ್ಞಾನಿಗಳಿಗೆ ಮಾತ್ರ ತೋರುತ್ತದೆ ಅಜ್ಞಾನಿಗಳಿಗೆ ತೋರದು ಎಂದೂ ಹೇಳಬಹುದು

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ

'ವಿಷ್ಣುವಿನ ಕರ್ಮವನ್ನು ಜ್ಞಾನಿಗಳು ಮಾತ್ರ ಕಾಣಬಲ್ಲರು ಅಜ್ಞಾನಿಗಳಲ್ಲ ' ಅದರಿಂದ ಜ್ಞಾನಿಗಳಿಗೆ ಜೀವಯೋಗ್ಯತೆಯನ್ನು ತೋರಿ ಅಜ್ಞಾನಿಗಳಿಗೆ ತೋರದೆ ಇರುತ್ತದೆ ವಿಷ್ಣುವಿನ ಕರ್ಮ

**ಅಖಿಲ ಜೀವರ ತನುವಿನೊಳ ಹೊರಗಿದ್ದು ಕಾಣಿಸದೆ**

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ದಿವೀವ ಚಕ್ಷುರಾತತಂ॥

ಆಕಾಶದಲ್ಲಿ ನಮ್ಮ ದೃಷ್ಟಿಯನ್ನು ಹರಿಸಿದರೆ ಚಕ್ಷುರಿಂದ್ರಿಯ ಪ್ರಕಾಶ ಆಕಾಶದಲ್ಲೆಲ್ಲ ವ್ಯಾಪಿಸುತ್ತದೆ ಅದು ಎಲ್ಲವನ್ನೂ ಕಾಣುತ್ತದೆ ಅದನ್ನು ಯಾರೂ ಕಾಣಲಾರರು ಅದು ಎಲ್ಲವನ್ನು ಕಾಣುವುದರಿಂದ ಅದು ಇದೆ ಎಂಬುದು ನಿಶ್ಚಿತ ಹಾಗೇ ಹರಿಯೂ ಜೀವರ ಶರೀರದಲ್ಲಿ ಒಳಗೆ ಹೊರಗೆ ಕಾಣಿಸದೇ ಇರುತ್ತಾನೆ ಜ್ಞಾನಿಗಳು ಮಾತ್ರ ಅವನನ್ನು ಕಾಣಬಲ್ಲರು

**ಅನಿಮಿಷೇಶನು ಸಕಲ ಕರ್ಮವ ಮಾಳ್ಪನವರಂತೆ**

'ನ ಹಿ ಸರ್ವಸ್ಯ ಕರ್ತಾ ನಾನ್ಯೋಽಸ್ತಿ ಕರ್ತಾ' 'ಅವನೆ ಎಲ್ಲಕ್ಕೂ ಸ್ವತಂತ್ರಕರ್ತಾ ಇನ್ನೊಬ್ಬ ಸ್ವತಂತ್ರ ಕರ್ತನಿಲ್ಲ' ಎಂಬ ಉಪನಿಷತ್ತಿನ ಸಂದೇಶವಿದು ಜೀವರು ಕರ್ಮವನ್ನು ಏಕೆ, ಹೇಗೆ ಮಾಡಬೇಕೆಂದು ಅರಿಯರು ಅರಿತರೂ ಮಾಡಲು ಸಂಕಲ್ಪಿಸರು ಸಂಕಲ್ಪಿಸಿದರೂ ಮಾಡಿ ಪೂರೈಸರು ಪೂರೈಸಿದರೂ ಫಲ ಕಾಣರು ಹೆಜ್ಜೆ ಹೆಜ್ಜೆಗೂ ಎಡವಿ ಬಿದ್ದು ಸ್ವತಃ ಏಳಲಾಗದ ಅಶಕ್ತರು ಅಸ್ವತಂತ್ರರು ಅದಕ್ಕೆ ಸರ್ವಶಕ್ತ ಸ್ವತಂತ್ರನಾದ ಹರಿಯೆ ಜೀವರ ಒಳಗೆ ಹೊರಗೆ ಕಾಣಿಸದಂತೆ ಅವರಂತೆಯೆ ಇದ್ದು ಕರ್ಮ ಮಾಡಿ ಮಾಡಿಸುತ್ತಾನೆ. ಇದಕ್ಕೆ ಸರ್ವಜ್ಞ ಸರ್ವಶಕ್ತರಾದ ಲಕ್ಷ್ಮೀಬ್ರಹ್ಮಾದಿಗಳೂ ಹೊರತಲ್ಲ ಹರಿಯ ಪ್ರೇರಣೆ ಇಲ್ಲದಿದ್ದರೆ ಅವರೆಲ್ಲರೂ ನಿಶ್ಚೇಷ್ಟರಾಗಿ ಬಂಡೆಗಲ್ಲಿನಂತೆ ಆದಾರು!'

**ಪಾದಪದಗಳಡಿಗೆರೆಯೆ ಸಲಿಲವ**
**ತೋದು ಕೊಂಬೆಗಳುಬ್ಬಿ ಪುಷ್ಪ**
**ಸ್ವಾದು ಫಲವೀವಂದದಲಿ ಸರ್ವೇಶ್ವರನು ಜನರಾ ।**
**ರಾಧನೆಯ ಕೈಗೊಂಡು ಬ್ರಹ್ಮಭ**
**ವಾದಿಗಳ ನಾಮದಲಿ ಫಲವಿ**
**ತ್ತಾದರಿಸುವನು ತನ್ನ ಮಹಿಮೆಯ ತೋರಗೊಡ ಜಗಕೆ ॥ ೧೩ ॥**

ಮರಗಳ ಬುಡಕ್ಕೆ ನೀರೆರೆದರೆ ಕೊಂಬೆಗಳು ತೋದು ಉಬ್ಬಿ ಹೂವನ್ನೂ ಸ್ವಾದುವಾದ ಫಲವನ್ನೂಕೊಡುವಂತೆ ಸರ್ವೇಶ್ವರ ಹರಿಯೂ ಜನರು ಮಾಡುವ ಆರಾಧನೆಯನ್ನು ಕೈಗೊಂಡು ಬ್ರಹ್ಮಭವ ಮೊದಲಾದವರ ನಾಮದಲ್ಲಿ ತಾನೆ ಫಲವಿತ್ತು ಆದರಿಸುತ್ತಾನೆ ಜಗತ್ತಿಗೆ ತನ್ನ ಮಹಿಮೆಯನ್ನು ತೋರಗೊಡಲಾರ

ಹಿಂದಿನ ಪದ್ಯದಲ್ಲಿ ಶ್ರೀಹರಿ ಜೀವರ ಶರೀರದ ಒಳಗೆ ಹೊರಗೆ ವ್ಯಾಪಿಸಿ ಶುಭಾಶುಭ ಕರ್ಮಗಳನ್ನು ಮಾಡಿಸುತ್ತಾನೆ ಎಂದಿದೆ ಈಗ ಈ ಪದ್ಯದಲ್ಲಿ ಆ ಕರ್ಮಗಳಿಗೆ ಫಲ ನೀಡುವ ಬಗೆಯನ್ನು ಬಣ್ಣಿಸುತ್ತಾರೆ

***ಪಾದಪಗಳಡಿಗೆರೆಯೆ ಸಲಿಲವ***

ಮರಗಳಿಗೆ ನೀರನ್ನು ಬುಡಕ್ಕೇ ಎರೆಯಬೇಕು ಬರಿ ಕೊಂಬೆಗಳಿಗೆ ಎರೆದು ಫಲವಿಲ್ಲ ನೀರು ಕರ್ಮದ ಸಂಕೇತ ಪ್ರತಿಕರ್ಮದ ಕೊನೆಯಲ್ಲಿ ಕೃಷ್ಣಾರ್ಪಣವೆನ್ನುತ್ತ ನೀರು ಬಿಡುವುದು ವಿಹಿತವಾದ್ದರಿಂದ,

'ತಸ್ಮಿನ್ನಪೋ ಮಾತರಿಶ್ವಾ ದಧಾತಿ'

'ಸರ್ವಜೀವರಕರ್ಮಗಳನ್ನೂ ವಾಯುದೇವ ಹರಿಗೆ ಅರ್ಪಿಸುತ್ತಾನೆ - ಎಂಬ ಈಶಾವಾಸ್ಯೋಪನಿಷದ್‌ವಾಣಿ 'ಅಪ್' ಶಬ್ದದಿಂದ ಕರ್ಮವನ್ನು ಹೇಳಿದೆ ಮರವೂ ಇಲ್ಲಿ ಜಗದ್‌ವೃಕ್ಷ ವಿವಕ್ಷಿತವಾಗಿದೆ ಅದರ ಮೂಲಕ ಆಧಾರ ಶ್ರೀಹರಿ ಕೊಂಬೆಗಳು ಬ್ರಹ್ಮರುದ್ರ ಮುಂತಾದ ದೇವತೆಗಳು ಎಂದು ಕಾಠಕೋಪನಿಷತ್ತು ಭಗವದ್ಗೀತೆಯೂ ಹೇಳುತ್ತಿವೆ

ಊರ್ಧ್ವ ಮೂಲೋಽವಾಕ್‌ಶಾಖ ಏ ಷೋಽಶ್ವತ್ಥಃ ಸನಾತನಃ । (ಕಾಠ ಉ )
ಊರ್ಧ್ವಮೂಲಮಧಃಶಾಖಂ ಅಶ್ವತ್ಥಂ ಪ್ರಾಹು ರವ್ಯಯಂ । ( ಗೀತಾ 15-1)

ಜಗದ್ ವೃಕ್ಷದ ಕೊಂಬೆಯಂಥ ಬ್ರಹ್ಮಾದಿಗಳ ಆರಾಧನೆಯ ಉದ್ದೇಶದಿಂದ ಕರ್ಮ ಮಾಡಿದರೂ ಅದನ್ನು ಜಗದ್‌ವೃಕ್ಷದ ಮೂಲಕ್ಕೇ ಅರ್ಪಿಸಬೇಕು ಅಂದರೆ ಹರಿಗೇ ಕೃಷ್ಣಾರ್ಪಣವೆನ್ನುತ್ತ ಅರ್ಪಿಸಬೇಕು ಹೊರತು ಬ್ರಹ್ಮಾದಿಗಳಿಗೆ ಅರ್ಪಿಸಿ ಫಲವಿಲ್ಲ ಏಕೆಂದರೆ ಕೊಂಬೆ ನೀರನ್ನು ಹೇಗೆ ಉಣಲಾರದೋ ಹಾಗೆ ಕರ್ಮವನ್ನು ಬ್ರಹ್ಮಾದಿಗಳು ಸ್ವೀಕರಿಸಲು

ಶಕ್ತರಾಗುವುದಿಲ್ಲ ಕರ್ಮಕ್ಕೆ ಫಲವನ್ನು ಕೊಡುತ್ತಾರೆ ನಿಜ ಆದರೆ ಅದು ಸ್ವತಃ ಅಲ್ಲ ಹರಿ ಪ್ರೇರಣೆಯಿಂದಲೇ ಕೊಡುತ್ತಾರೆ ಏಕೆಂದರೆ ಅವರು ಅಸ್ವತಂತ್ರರು ಸ್ವತಂತ್ರವಾಗಿ ಫಲಕೊಡಲು ಶಕ್ತರಲ್ಲ

ಮರದ ಬುಡಕ್ಕೆ ನೀರೆರೆದರೆ ಬೇರು ನೀರುಣ್ಣುತ್ತದೆ ಜಗದ್‌ವೃಕ್ಷಕ್ಕೆ ಹರಿ ಬೇರಿನಂತೆ ಹಾಗೆಂದ ಮಾತ್ರಕ್ಕೆ ಹರಿ ಜಗದ್‌ವೃಕ್ಷದ ಒಂದು ಭಾಗವಾಗಿದ್ದಾನೆ ಎಂದು ಮಾತ್ರ ತಿಳಿಯಬಾರದು 'ನಹಿ ದೃಷ್ಟಾಂತೇ ಸರ್ವಸಾಮ್ಯಂ' ದೃಷ್ಟಾಂತದಲ್ಲಿ ಪೂರ್ತಿಸಾಮ್ಯವಿದೆ ಎಂದು ಗ್ರಹಿಸಬಾರದು ಜಗದ್‌ವೃಕ್ಷಕ್ಕೆ ಅದರ ಭಾಗವಾದ ಬೇರು ಜಗಪ್ರಕೃತಿ ಹೊರತು ಹರಿಯಲ್ಲ ಹರಿ ಮರದ ಬುಡದ ಮಣ್ಣಿನಂತೆ ಅದಕ್ಕೆ ಆಧಾರನಾಗಿರುತ್ತಾನೆ ರತ್ನದ ಹಾರದೊಳಗಿನ ದಾರ ರತ್ನಗಳಿಗೆ ಆಧಾರವಾಗುವಂತೆ ಹರಿ ಜಗದ್ ವೃಕ್ಷದೊಳಗೆ ಅಂತರ್ಯಾಮಿಯಾಗಿ ವ್ಯಾಪಿಸಿಯೂ ಆಧಾರನೆನಿಸುತ್ತಾನೆ ಹೊರತು ಮಣ್ಣುಗಡಿಗೆಯಾಗುವಂತೆ ಬೀಜವೃಕ್ಷವಾಗುವಂತೆ ಹರಿ ಜಗತ್ತಾಗಿ ಪರಿಣಮಿಸುವುದಿಲ್ಲ ಭಾಗವತದಲ್ಲಿ,

ಯಥಾ ತರೋರ್ಮೂಲ ನಿಷೇಚನೇನ<br>
ತೃಪ್ಯಂತಿ ತತ್‌ಸ್ಕಂಧಭುಜೋಪಶಾಖಾಃ।<br>
ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ<br>
ತಥೈವ ಸರ್ವಾರ್ಹಣಮಚ್ಯುತೇಜ್ಯಾ ॥ (ಭಾಗ 4 31 14)

ಬೇರು ನೀರುಂಡಾಗ ಕೊಂಬೆಗಳು ತೃಪ್ತಿಹೊಂದುವಂತೆ, ಹೊಟ್ಟೆ ಅನ್ನ ಉಂಡಾಗ ಕೈಕೊಲು ಪುಷ್ಟಿಹೊಂದುವಂತೆ ಹರಿಯ ಆರಾಧನೆಯಿಂದ ಲೋಕವೆ ನಲಿಯುತ್ತದೆ ಎಂದು ಉದಾಹರಣೆ ನೀಡಿದ್ದರಿಂದ ಆ ಅಭಿಪ್ರಾಯದಿಂದ ಹರಿಯನ್ನು ಮರದ ಬೇರಿಗೆ ಹೋಲಿಸಲಾಗಿದೆ

ವಸ್ತುತಃ ಬೇರು ಎಂದು ಸ್ಪಷ್ಟ ಹೇಳಿಲ್ಲ 'ಪಾದಪಗಳ ಅಡಿಗೆ' ಎಂದು ಹೇಳಿದೆ ಮರದ ಬುಡದ ಮಣ್ಣಿಗೆ ನೀರೆರೆದರೆ ಮರದ ಕೊಂಬೆಗೆ ಅದು ತಲುಪುತ್ತದೆ ಎಂದೇ ವಿವಕ್ಷಿತವಾಗಿದೆ

**ಕೊಂಬೆಗಳುಬ್ಬಿ ಪುಷ್ಪ ಸ್ವಾದು ಫಲವೀವಂದದಲಿ**

ಮರದ ಬುಡಕ್ಕೆ ನೀರೆರೆದರೆ ಕೊಂಬೆಗಳು ಸೊಂಪಾಗಿ ಬೆಳೆದು ಹೂ ಹಣ್ಣುಗಳನ್ನು ಕೊಡುತ್ತವೆ ಮೇಲುನೋಟಕ್ಕೆ ಕೊಂಬೆಗಲೇ ಕೊಡುತ್ತಿವೆ ವಸ್ತುತಃ ಬೇರು ಕೊಂಬೆಗಳ ಮೂಲಕಕೊಡುತ್ತಿದೆ ಹಾಗೇ ಬ್ರಹ್ಮರುದ್ರಾದಿಗಳನ್ನು ಪೂಜಿಸಿದಾಗ ಅವರೇ ಫಲ ಕೊಡುವಂತೆ ಕಾಣುತ್ತದೆ ವಸ್ತುತಃ ಅವರ ಮೂಲಕ ಶ್ರೀಹರಿ ಫಲ ಕೊಡುತ್ತಿದ್ದಾನೆ ಅಜ್ಞರಾದ ಜನರು ಇದನ್ನು ಅರಿಯದೆ ಬ್ರಹ್ಮರುದ್ರಾದಿಗಳನ್ನೆ ಪೂಜಿಸುತ್ತಾರೆ ಆದರೂ ಫಲ ಸಿಗುತ್ತದೆ ಹೇಗೆ? ಬ್ರಹ್ಮರುದ್ರಾದಿಗಳಿಗೆ ಮಾಡಿದ ಪೂಜೆ ಹರಿಯನ್ನೇ ಹೋಗಿ ಸೇರುತ್ತದೆ, ಆಗಸದಿಂದ ಬಿದ್ದ ಮಳೆ ನೀರೆಲ್ಲವೂ ಸಮುದ್ರವನ್ನೇ ಸೇರುವಂತೆ

ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ।
ಸರ್ವದೇವ ನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ॥

'ಸ್ವಾದುಫಲ' ಎನ್ನುವುದು ಅಭಿಪ್ರಾಯಗರ್ಭಿತವಾಗಿದೆ ಮರದ ಬುಡಕ್ಕೆ ಬರಿ ನೀರೆರೆಯುತ್ತೇವೆ ಅದಕ್ಕೆ ಮರ ಸ್ವಾದು ಫಲ ನೀಡುತ್ತದೆ ಹಾಗೇ ನಾವು ಹರಿಗೆ ಇನ್ನೇನೂ ಕೊಡಬೇಕಾಗಿಲ್ಲ ಅವನ ಪ್ರೇರಣೆಯಿಂದ ನಾವು ಮಾಡಿದ ಕರ್ಮವನ್ನು ಅವನಿಗೇ ಅರ್ಪಿಸಿದರಾಯಿತು ಧರ್ಮ ಅರ್ಥ ಕಾಮ ಮೋಕ್ಷ ಎಂದು ಸ್ವಾದುವಾದ ಫಲಗಳನ್ನೇ ಕೊಡುತ್ತಾನೆ

ಮರಕ್ಕೆ ನಿರ್ಮಲ ನೀರನ್ನೇ ಎರೆಯಬೇಕಾಗಿಲ್ಲ ಕೊಚ್ಚೆ ನೀರನ್ನೆರದರೂ ಅದು ಮುನಿಸಿಕೊಳ್ಳದೆ ಸ್ವೀಕರಿಸಿ ಸ್ವಾದು ಫಲವನ್ನೇ ನೀಡುತ್ತದೆ ಹಾಗೇ ನಾವು ಪಾಪಕರ್ಮವನ್ನು ಸಮರ್ಪಿಸಿದರೂ ಹರಿ ಸ್ವಾದುವಾದ ಪುರುಷಾರ್ಥಗಳನ್ನೇ ನೀಡುತ್ತಾನೆ

**ಸರ್ವೇಶ್ವರನು ಜನರಾರಾಧನೆಯ ಕೈಗೊಂಡು.**

ಮಳೆ ನೀರು ಹರಿದು ಸಾಗರವನ್ನು ಸೇರುವುದು ಅದರ ಸ್ವಭಾವ ಹಾಗೇ ಬ್ರಹ್ಮಾದಿಗಳಿಗೆ ಸಲ್ಲಿಸಿದ ಪೂಜೆ ಹರಿಯನ್ನು ಸೇರುವುದು ಅದರ ಸ್ವಭಾವ ಏಕೆಂದರೆ ಪೂಜಕನಲ್ಲಿ ಬಿಂಬನಾಗಿ ನಿಂತು ಪೂಜಿಸುವವನು ಅವನೆ ಪೂಜ್ಯನಲ್ಲಿ ಬಿಂಬನಾಗಿ ನಿಂತು ಪೂಜಿಸಿಕೊಳ್ಳುವವನೂ ಅವನೆ

ನ ಋತೇ ತ್ವತ್ ಕ್ರಿಯತೇ ಕಿಂಚನಾರೇ
ಮಹಾ ಮರ್ಕಂ ಮಘವನ್ ಚಿತ್ರಮರ್ಚ।

ಏಕೆಂದರೆ ಪೂಜಕನಲ್ಲಿ ಪೂಜಿಸಲು ಶಕ್ತಿ ಇಲ್ಲ ಪೂಜ್ಯನಲ್ಲಿ ಪೂಜಿಸಿಕೊಳ್ಳುವ ಶಕ್ತಿ ಇಲ್ಲ ಮರದ ಕೊಂಬೆಗೆ ನೀರೆರೆದರೂ ಅದನ್ನು ಕುಡಿವ ಶಕ್ತಿ ಅದಕ್ಕಿಲ್ಲ! ಅದರಿಂದ ಶ್ರೀಹರಿ ತಾನು ತನಗೆ ಮಾಡಿದ ಪೂಜೆ ತನ್ನನ್ನೇ ಸೇರಬೇಕು ತಾನೆ?

**ಬ್ರಹ್ಮಭವಾದಿಗಳ ನಾಮದಲಿ ಫಲವಿತ್ತಾದರಿಸುವನು:**

ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ।

ಎಂಬಂತೆ ಬ್ರಹ್ಮರುದ್ರಾದಿನಾಮಗಳು ಮುಖ್ಯವಾಗಿ ಹರಿಗೇ ಸಲ್ಲುತ್ತವೆ ಅದರಿಂದ 'ಬ್ರಹ್ಮಣೇ ಸ್ವಾಹಾ ಬ್ರಹ್ಮಣ ಇದಂ ನ ಮಮ' ಎಂದು ಮುಂತಾಗಿ ಬ್ರಹ್ಮರುದ್ರಾದಿ ನಾಮದಿಂದ ಸಲ್ಲಿಸುವ ಪೂಜೆ ಬ್ರಹ್ಮ ರುದ್ರಾದಿ ನಾಮಕನಾದ ಹರಿಗೇ ಸಲ್ಲುವುದರಿಂದ ಅವನು ಸಂತುಷ್ಟನಾಗುತ್ತಾನೆ ಇದು ಅವನ ಲೀಲೆ ಹೀಗೆ ಅವನು ಸಂತುಷ್ಟನಾದರೆ ಬ್ರಹ್ಮರುದ್ರಾದಿಗಳೂ ಸಂತುಷ್ಟರಾಗುವರು ಫಲಕೊಡಲು ಮುಂದಾಗುವರು ಹರಿ ಅವರಿಂದ ಫಲಕೊಡಿಸುತ್ತಾನೆ

ಲಭತೇ ಚ ತತಃ ಕಾಮಾನ್ ಮಯ್ಯೈವ ವಿಹಿತಾನ್ ಹಿ ತಾನ್॥ (ಗೀತಾ 7 22)

ಪ್ರತ್ಯಕ್ಷದಲ್ಲಿ ಬ್ರಹ್ಮರುದ್ರಾದಿಗಳೆ ಫಲಕೊಟ್ಟಂತೆ ಕಾಣುವುದರಿಂದ ಅಜ್ಞರು ಅವರನ್ನೆ ಶ್ರದ್ಧೆಯಿಂದ ಆರಾಧಿಸುತ್ತಾರೆ ಹರಿಯೂ ಅವರ ಮೂಲಕ ಫಲ ಕೊಡಿಸಿ ಜನರ ಆ ಶ್ರದ್ಧೆಯನ್ನು ಇನ್ನೂ ದೃಢವಾಗುವಂತೆ ಮಾಡುತ್ತಾನೆ

ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ। (ಗೀತಾ 7 21)

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನ ತು ಮಾಮಭಿಜಾನಂತಿ ತತ್ವೇನಾತಶ್ಚ್ಯವಂತಿ ತೇ ॥ (ಗೀತಾ 9 24)

ಬೇರು ನೀರುಂಡರೂ ಅದು 'ಸ್ವತಃ ಫಲಕೊಡುವುದಿಲ್ಲ ಕೊಂಬೆಗಳ ಮೂಲಕವೆ ಕೊಡುತ್ತದೆ ಹಾಗೇ ಹರಿಯೂ ಜನರ ಆರಾಧನೆಯನ್ನು ಸ್ವೀಕರಿಸಿ ಬ್ರಹ್ಮರುದ್ರಾದಿಗಳ ಮೂಲಕವೆ ಫಲಕೊಡಿಸುತ್ತಾನೆ ಶಕ್ತಿ ಇದ್ದರೂ ಸ್ವತಃ ಕೊಡುವುದಿಲ್ಲ

ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ (ಮಹಾಭಾ ತಾ. ನಿ 26 52)

- ಅರ್ಜುನನಿಗೆ ಪಾಶುಪತಾಸ್ತ್ರವನ್ನು ತಾನೇ ಉಪದೇಶಿಸದೆ ಕನಸಿನಲ್ಲಿ ಅವನನ್ನು ಕೈಲಾಸಕ್ಕೆ ಒಯ್ದು ಶಿವನಿಂದ ಉಪದೇಶ ಕೊಡಿಸಿದ

ಹರಿಯನ್ನು ಬಿಟ್ಟು ಬ್ರಹ್ಮಾದಿ ದೇವತೆಗಳನ್ನೇ ಆರಾಧಿಸುವ ಹಿರಣ್ಯಕಶಿಪು ಮುಂತಾದವರಿಗೂ ಆ ದೇವತೆಗಳ ಮೂಲಕ ಫಲ ಕೊಡಿಸುತ್ತಾನೆ ಹರಿ ಹರಿ ಭಕ್ತರಾದ ಅರ್ಜುನನಂಥವರಿಗೂ ಆ ದೇವತೆಗಳ ಮೂಲಕವೆ ಫಲಕೊಡಿಸುತ್ತಾನೆ ಎಂದರೆ ಬೇಗನೆ ಒಲಿಯುವ ಆ ದೇವತೆಗಳನ್ನೇ ಆರಾಧಿಸಬಾರದೆ? ಎಂಬ ಪ್ರಶ್ನೆಗೆ ಭಗವದ್ಗೀತೆ ಹೀಗೆ ಹೇಳಿದೆ-

ಅಂತವತ್ತು ಫಲಂ ತೇಷಾಂ ತದ್ ಭವತ್ಯಲ್ಪಮೇಧಸಾಂ । (ಗೀತಾ 7 23)

ಅನ್ಯ ದೇವತೆಗಳ ಆರಾಧನೆಯಿಂದ ಸಿಗುವ ಫಲ ಅಲ್ಪ ಹರಿಯನ್ನು ಅಷ್ಟೇ ಆರಾಧಿಸಿದರೂ ಅನಂತ ಫಲ

**ತನ್ನ ಮಹಿಮೆಯ ತೋರಗೊಡ ಜಗಕೆ :**

ತಮೃತೇ ಪರಮಾತ್ಮಾನಂ ಕಃಪಶ್ಯೇತಾಮಿತಂ ಪ್ರಭುಂ ।

'ಅವನ ಅನುಗ್ರಹವಿಲ್ಲದೆ ಅವನನ್ನು ಯಾರೂ ಕಾಣಲಾರರು' ಏಕೆಂದರೆ ಅವನು ಸ್ವಭಾವತಃ ಅವ್ಯಕ್ತ ಎಂದು ಬ್ರಹ್ಮಸೂತ್ರಭಾಷ್ಯ (3-2-27) ದಲ್ಲಿ ಹೇಳಿದೆ ಸ್ವಭಾವತಃ ಅವಕ್ತನಾದವನು ತನ್ನ ಅಚಿಂತ್ಯಶಕ್ತಿಯಿಂದ ಜ್ಞಾನಿಗಳಿಗೆ ಮಾತ್ರ ವ್ಯಕ್ತನಾಗುತ್ತಾನೆ ಬೇರೆ ದೇವತೆಗಳು ಸ್ವಭಾವತಃ ವ್ಯಕ್ತರು ದಿವ್ಯಶಕ್ತಿಯಿಂದ ಅದೃಶ್ಯರಾಗಿರುತ್ತಾರೆ ಅದರಿಂದ ಹರಿ ತನ್ನ ಮಹಿಮೆಯನ್ನು ಅಜ್ಞಲೋಕಕ್ಕೆ ತೋರಗೊಡ, ಜೀವರ ಶರೀರದಲ್ಲಿ ತನ್ನ ಈ ಬಗೆಯ ವ್ಯಾಪ್ತಿಯನ್ನು ಜೀವರಿಗೇ ತೋರುವುದಿಲ್ಲ

**ಶ್ರುತಿತತಿಗಳಿಗೆ ಗೋಚರಿಸದ**
**ಪ್ರತಿಮಜಾನಂದಾತ್ಮನಚ್ಯುತ**
**ವಿತತ ವಿಶ್ವಾಧಾರ ವಿದ್ಯಾಧೀಶ ವಿಧಿಜನಕ।**
**ಪ್ರತಿ ದಿವಸ ಚೇತನರೊಳಗೆ ಪ್ರಾ**
**ಕೃತ ಪುರುಷನಂದದಲಿ ಸಂಚರಿ**
**ಸುತ ನಿಯಮ್ಯ ನಿಯಾಮಕನು ತಾನಾಗಿ ಸಂತೈಪ ॥ ೧೪ ॥**

ಶ್ರೀಹರಿ ಶ್ರುತಿಸಮೂಹಗಳಿಗೆ ಗೋಚರಿಸದ ಅಪ್ರತಿಮ ಅಜ ಆನಂದ ಆತ್ಮನಾಗಿದ್ದಾನೆ ಅಚ್ಯುತನೆನಿಸಿದ್ದಾನೆ ವ್ಯಾಪ್ತನಾಗಿದ್ದು ವಿಶ್ವಕ್ಕೆ ಆಧಾರ, ವಿದ್ಯೆಗಳಿಗೆ ಅಧೀಶ ಬ್ರಹ್ಮನಿಗೆ ಜನಕನೂ ಆಗಿದ್ದಾನೆ ಆದರೂ ಪ್ರತಿದಿವಸ ಚೇತನರೊಳಗೆ ಪ್ರಾಕೃತ ಪುರುಷನಂತೆ ಸಂಚರಿಸುತ್ತ ನಿಯಮ್ಯನೂ ನಿಯಾಮಕನೂ ತಾನೇ ಆಗಿ ಸಂತೈಸುತ್ತಾನೆ

**ಶ್ರುತಿತತಿಗಳಿಗೆ ಗೋಚರಿಸದ ಅಪ್ರತಿಮ**

ಹಿಂದಿನ ಪದ್ಯದಲ್ಲಿ ಹೀಗೆ ಹೇಳಿದೆ- ಅಜ್ಞಜನರು ಬ್ರಹ್ಮರುದ್ರಾದಿ ದೇವತೆಗಳನ್ನು ಕೊಂಡಾಡುವಂತೆ ಕಾಣುವ ಶ್ರುತಿಗಳ ಶ್ರುತಿಗೆ ಅನುಸಾರವಾದ ಸ್ಮೃತಿಗಳ ಮೂಲಕ ಆ ದೇವತೆಗಳನ್ನು ಆರಾಧಿಸುತ್ತಾರೆ ಹಾಗೆ ಮಾಡಿದರೆ ಮಾತ್ರ ಫಲ ಅವರಿಗೆ ಲಭ್ಯವಾಗುವುದು ಶ್ರುತಿ ವಿರುದ್ಧವಾದ ಶೈವ ಬೌದ್ಧ ಮುಂತಾದ ಸ್ಮೃತಿಗಳಿಂದ ಆರಾಧಿಸಿದರೆ ಫಲವಿಲ್ಲ ಕೆಲವೊಮ್ಮೆ ಫಲ ಕಂಡರೂ ಅದು ಕಾಕತಾಲೀಯ ಈ ಶ್ರುತಿ ಹಾಗೂ ಶ್ರುತ್ಯನುಸಾರಿ ಸ್ಮೃತಿಗಳಲ್ಲಿ ಮುಖ್ಯ ಪ್ರತಿಪಾದ್ಯ ಹರಿಯೆ ಅಲ್ಲಿ ಕಂಡು ಬರುವ ಬ್ರಹ್ಮ ರುದ್ರಾದಿ ನಾಮಗಳಿಂದಲೂ ಮುಖ್ಯವಾಗಿ ಕರೆಸಲ್ಪಡುವವನು ಅವನೆ ಇದು ಬ್ರಹ್ಮಸೂತ್ರ ನಿರ್ಣಯ ಅದರಿಂದ ಶ್ರುತಿತತಿಗಳಲ್ಲಿ ಬ್ರಹ್ಮರುದ್ರಾದಿ ನಾಮಗಳಿಂದ ಕರೆಸಿಕೊಳ್ಳುತ್ತ ಬ್ರಹ್ಮರುದ್ರಾದಿ ದೇವತಾಧಿಷ್ಠಾನಗಳಲ್ಲಿ ಆ ಮಂತ್ರಗಳ ಮೂಲಕ ಆರಾಧಿತನಾದ ಹರಿ ಬ್ರಹ್ಮ ರುದ್ರಾದಿಗಳ ಮೂಲಕವೆ ಫಲ ನೀಡುತ್ತಾನೆ ಇದನ್ನೆ ಹಿಂದಿನ ಪದ್ಯದಲ್ಲಿ-

'ಬ್ರಹ್ಮ ಭವಾದಿಗಳ ನಾಮದಲಿ ಫಲವಿತ್ತಾದರಿಸುವನು'

ಎಂದಿದೆ ಹೀಗೆ ಹರಿ ಸಕಲ ಶ್ರುತಿ ತತಿಗಳಲ್ಲಿ ಪ್ರತಿಪಾದ್ಯನಾಗಿದ್ದಾನೆ ಬ್ರಹ್ಮರುದ್ರಾದಿ ಯಾವ ದೇವತೆಯೂ ಸಕಲ ಶ್ರುತಿಪ್ರತಿಪಾದ್ಯನಲ್ಲ. ಈ ವಿಷಯದಲ್ಲಿ ಹರಿ ಅಪ್ರತಿಮ ಅಂದರೆ ಅವನಿಗೆ ಸಮರಿಲ್ಲ ಇಷ್ಟೇ ಅಲ್ಲ ಎಲ್ಲ ಶ್ರುತಿ ಸ್ಮೃತಿಗಳು ಸೇರಿದರೂ ಹರಿಯ ಒಂದು ಗುಣವನ್ನಾದರೂ ಪೂರ್ತಿಯಾಗಿ ವರ್ಣಿಸಲು ಶಕ್ತವಾಗುವುದಿಲ್ಲ ಪೂರ್ತಿಯಾಗಿ ಅವನೆಂದೂ ಶ್ರುತಿತತಿಗಳಿಗೆ ಗೋಚರಿಸುವವನಲ್ಲವೆಂದ ಮೇಲೆ ಅವನು ಅಪ್ರತಿಮನೆಂದು ಬೇರೆ ಏನು ಹೇಳಬೇಕು?

**ಅಜ ಆನಂದ ಆತ್ಮನು**

ಹರಿಯ ಗುಣಗಳ ಅಲ್ಪ ಪರಿಚಯಕ್ಕೆ ಇಷ್ಟು ಸಾಕು- ಅವನು ಜನನ ರಹಿತನಾದ್ದರಿಂದ 'ಅಜ' ಆನಂದಸ್ವರೂಪನಾದ್ದರಿಂದ 'ಆನಂದ' 'ಜಗದೊಡೆಯ ನಾದ್ದರಿಂದ 'ಆತ್ಮ' ಜನನ ಮರಣಾದಿ ಸಕಲ ದುಃಖದೂರನಾಗಿ ಅಜನೆನಿಸಿದ್ದರಿಂದಲೆ ನಿರ್ದುಃಖಾನಂದ ಸ್ವರೂಪನಾಗಿ ಆನಂದನೆನಿಸಿದವ ಶ್ರೀಹರಿ ಬೇರೆ ಎಲ್ಲರೂ ದುಃಖಿಗಳು ದುಃಖಿಗಳಾದ ಸರ್ವರಿಗೂ ಸ್ವಾಮಿಯಾಗಿ ಆತ್ಮನೆನಿಸಿದ್ದಾನೆ ಹೀಗೆ ನಿರ್ದುಃಖ ಆನಂದಸ್ವರೂಪನಾದ ಆ ಸ್ವಾಮಿಯನ್ನು ವೇದ ವರ್ಣಿಸಲು ಹೋಗಿ ಸೋತಿದೆ ಎನ್ನುತ್ತಿದೆ, ತೈತ್ತಿರೀಯೋಪನಿಷತ್ತು-

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ।
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ॥

ಅದರಿಂದ ಶ್ರುತಿತತಿಗಳಿಗೆ ಗೋಚರಿಸದ ಅಪ್ರತಿಮ ಶ್ರೀಹರಿ

ವೇದವಾಕ್ಯಗಳು ಮಾತ್ರವಲ್ಲ, ವೇದದ ಪ್ರತಿಯೊಂದು ಶಬ್ದವೂ ಅಕ್ಷರವೂ ಸ್ವರವೂ ಹರಿಯನ್ನು ಕೊಂಡಾಡಲು ಪೂರ್ತಿಯತ್ನ ಮಾಡಿ ಸೋಲುತ್ತಿದೆ ಉದಾಹರಣೆಗೆ 'ಅ' ಎಂಬ ಅಕ್ಷರ ಅಜ, ಜನನಾದಿ ದೋಷರಹಿತನೆಂದು ಹರಿಯನ್ನು ಹೊಗಳುತ್ತದೆ 'ಆ' ಎಂಬ ಅಕ್ಷರ ಆನಂದಮಯನೆಂದು ಗುಣಗಾನ ಮಾಡುತ್ತದೆ ಹೀಗೇ ಎಲ್ಲ ಐವತ್ತೊಂದು ಅಕ್ಷರಗಳೂ ಅದರಿಂದ ವಾಕ್ಯ ಸಮನ್ವಯ ಮಾತ್ರವಲ್ಲದೆ, ಪದ ವರ್ಣಸ್ವರ ಸಮನ್ವಯವೂ ಶ್ರೀಹರಿಯಲ್ಲಿಯೆ ಎಂದ ಮೇಲೆ ಅವನು ಅಪ್ರತಿಮನೆ ಸರಿ!

**ಅಚ್ಯುತ**

'ಅಚ್ಯುತ' ಎಂದರೆ ಚ್ಯುತಿರಹಿತ ಹರಿಯಲ್ಲಿ ಅವನ ಯಾವ ಮಹಿಮೆಗೂ ಎಂದೂ ಒಂದಿಷ್ಟೂ ಚ್ಯುತಿಯೇ ಇಲ್ಲ ಅದರಿಂದಲೆ ಆತ ಶ್ರುತಿತತಿಗಳಿಗೆ ಪೂರ್ತಿಯಾಗಿ ಗೋಚರಿಸದವನು ಎಂದಿದೆ ಚ್ಯುತಿ ಇದ್ದಿದ್ದರೆ ಅವನ ಮಹಿಮೆ ಅನಂತವಲ್ಲ, ಸೀಮಿತವೆ ಎಂದಾಗುತ್ತಿತ್ತು ಸೀಮಿತವಾದ ಮಹಿಮೆಯನ್ನು ಪೂರ್ತಿಯಾಗಿ ಪ್ರತಿಪಾದಿಸಲು ಶ್ರುತಿತತಿಗಳು ಶಕ್ತವಾಗುತ್ತಿದ್ದುವು

**ವಿತತ**

ಅಜ ಆನಂದ ಮುಂತಾದ ರೂಪಗಳಿಂದ ಬಿಡಿಯಾಗಿಯೂ ನಾರಾಯಣಾದಿ ರೂಪಗಳಿಂದ ಇಡಿಯಾಗಿಯೂ ವೇದವಾಕ್ಯ ಪದ ಸ್ವರ ವರ್ಣಗಳಿಂದ ಪ್ರತಿಪಾದ್ಯನಾಗುವುದು ಮಾತ್ರವಲ್ಲದೆ ಅಜ ಭವಾದಿ ದೇವತಾ ನಾಮಗಳಿಂದಲೂ ಅವನೆ ಪ್ರತಿಪಾದ್ಯನಾಗುತ್ತಿದ್ದಾನೆ ಹೀಗಿದ್ದರೂ ಪೂರ್ತಿಯಾಗಿ ಶ್ರುತಿತತಿಗಳಿಗೆ ಗೋಚರಿಸದಿರಲು ಕಾರಣ ಇದು- ಆತ ವಿತತನಾಗಿದ್ದಾನೆ ದೇಶ ಕಾಲಗುಣಗಳಿಂದ ವ್ಯಾಪ್ತನಾಗಿದ್ದಾನೆ, ಹೊರತು ಒಂದು ದೇಶಕ್ಕೆ ಒಂದು ಕಾಲಕ್ಕೆ ಕೆಲವು ಗುಣಗಳಿಗೆ ಮಾತ್ರ ಎಂದೂ ಸೀಮಿತನಲ್ಲ

**ವಿಶ್ವಾಧಾರ**

ವಿಶ್ವಕ್ಕೇ ಆಧಾರ ಶ್ರೀಹರಿ ಸಮಸ್ತಜಗದಾಧಾರ 'ವಿಶ್ವ' ಎಂದರೆ ಅಂತರ್ಯಾಮಿಯಾಗಿ ಸರ್ವತ್ರ ಪ್ರವಿಷ್ಟನಾದ ಸರ್ವಗುಣಪೂರ್ಣನೂ ಆದ ವಾಯುದೇವನೂ ಹೌದು-

ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭೋಽಗ್ನಿ-
ರ್ಯಮೋ ವರುಣರುದ್ರೇಂದ್ರಾಃ॥

ಇಂಥ ವಾಯುವಿಗೂ ಆಧಾರನಾಗಿದ್ದು, ವಾಯು ಜಗತ್ತಿಗೆ ಆಧಾರನಾಗಿರುವಂತೆ ಮಾಡಿರುವ ಶ್ರೀಹರಿ ವಿಶ್ವಾಧಾರ ಇವನ ಮಹಿಮೆಗೆ ಪಾರ ಉಂಟೆ?

**ವಿದ್ಯಾಧೀಶ.**

ಸಕಲ ವೇದ ವಿದ್ಯೆಗಳಿಗೂ ಪ್ರತಿಪಾದ್ಯ ದೇವತೆ, ಪ್ರತಿಪಾದಕ ಗುರು, ನಿಯಾಮಕದೈವ ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅಧೀಶ ಶ್ರೀಹರಿಯೆ ಮತ್ತು,

ಯಾ ದೇವೀ ಸರ್ವಭೂತೇಷು ವಿದ್ಯಾರೂಪೇಣ ಸಂಸ್ಥಿತಾ।
ನಮಸ್ತಸ್ಯೈ ನಮೋ ನಮಃ॥

ಎಂದು ದುರ್ಗಾಸಪ್ತಶತಿಯಲ್ಲಿ ಬರುವ ಮೂರು ಪಾದಗಳ ಒಂದು ಮಂತ್ರದಲ್ಲಿ 'ವಿದ್ಯೆ' ಎನಿಸಿದವಳು ಮಹಾಲಕ್ಷ್ಮಿ ಆ ವಾಯುವಿಗಿಂತ ಕೋಟಿ ಪಾಲು ಮಿಗಿಲಾದವಳು ಈ ಲಕ್ಷ್ಮಿ ಅವಳಿಗೂ ಈತ ಅಧೀಶನೆಂದ ಮೇಲೆ ಇವನ ಸದ್ಗುಣಗಳಿಗೆ ಸೀಮೆಯುಂಟೆ?

**ವಿಧಿಜನಕ**

'ವಿಧಿ' ಎಂದರೆ ಜೀವರಿಗೆ ಕರ್ತವ್ಯ ಕರ್ಮವನ್ನು ವಿಧಿಸುವುದು ಇದು ವೇದವು ಮಾಡುವ ಕಾರ್ಯ ವೇದ ಪರಮಾತ್ಮನನ್ನು ಹೊಗಳುತ್ತದೆ ಅವನನ್ನು ಹೊಗಳಲು ಜೀವರಿಗೆ ವಿಧಿಸುತ್ತದೆ 'ಶ್ರುತಿ ಸ್ಮೃತೀ ಹರೇರಾಜ್ಞೇ' ಎಂಬಂತೆ ವೇದವಿಧಿ ಹರಿಯೇ ಮಾಡುವ ವಿಧಿ ವಿಧಿಗೆ ಜನಕ ಅವನೆ ಬ್ರಹ್ಮಾದಿ ಸಮಸ್ತ ಜೀವರಿಗೆ ವಿಧಿ ಜನಕನಾದ ಹರಿಯ ಸಾರ್ವಭೌಮ ಮಹಿಮೆಗೆ ಕೊನೆಯುಂಟೆ? ವಿಧಿ ಎಂದರೆ ಚತುರ್ಮುಖ ಬ್ರಹ್ಮನೂ ಹೌದು ಸೃಷ್ಟಿಕರ್ತನೆನಿಸಿದ ಬ್ರಹ್ಮನಿಗೂ ಸೃಷ್ಟಿಕರ್ತನೆಂದ ಮೇಲೆ ಅವನ ಸೃಷ್ಟಿಕರ್ತೃತ್ವವೆಂಬ ಒಂದು ಗುಣಕ್ಕೂ ಸೀಮೆಯುಂಟೆ? ಅದರಿಂದಲೆ ಆತ ಶ್ರುತಿತತಿಗಳಿಗೆ ಅಗೋಚರ, ಅಪ್ರತಿಮ

**ಪ್ರಾಕೃತ ಪುರುಷನಂದದಲಿ**

ಮಹಾತ್ಮರಾದ ಪಾಂಡವರೂ ವನವಾಸದ ಕಷ್ಟ ಅನುಭವಿಸಿದರು ಅನುಭವಿಸುತ್ತಿದ್ದಾಗ ಮಾರ್ಕಂಡೇಯ ಮುನಿ ಬಂದು ರಾಮೋಪಾಖ್ಯಾನ ಮುಂತಾದ ಕಥೆಗಳನ್ನು ಹೇಳಿ ನಿಮಗೆ ರಾಜ್ಯಮಾತ್ರ ಹೋಯಿತು ರಾಮನಿಗೆ ರಾಜ್ಯ ಹೋದುದು ಮಾತ್ರವಲ್ಲ, ಹೆಂಡತಿಯನ್ನೂ ರಾವಣ ಅಪಹರಿಸಿದ ಎಂದು ಹೇಳುತ್ತ ಸಂತೈಸಿದರು ಇದಕ್ಕಾಗಿಯೇ ಶ್ರೀಹರಿ ರಾಮನಾಗಿ

ಅವತರಿಸಿದ ಪ್ರಾಕೃತ ಪುರುಷನಂತೆ ಅಜ್ಞ ಮಾನವನಂತೆ ರಾಜ್ಯವನ್ನು ಹೆಂಡತಿಯನ್ನು ಕಳೆದುಕೊಂಡು ಚೇತನರೊಳಗೆ ಸಂಚರಿಸಿದ, ಕಾಡು ಮೇಡುಗಳಲ್ಲಿ ಅಲೆದ ಈ ಅಲೆದಾಟವೂ ಎಂದಾದರೊಮ್ಮೆ ಅಲ್ಲ, ಪ್ರತಿದಿವಸ ನಡೆಯುತ್ತಿದೆ!

**ಪ್ರತಿದಿವಸ ಸಂಚರಿಸುತ.**

ಹರಿಯ ಎಲ್ಲ ಅವತಾರಗಳೂ ಪ್ರತಿ ನಾನ್ನೂರ ಮೂವತ್ತೆರಡು ಕೋಟಿ ವರ್ಷಗಳಲ್ಲಿ ಒಂದು ಬಾರಿ ತಪ್ಪದೆ ನಡೆಯುತ್ತವೆ ಮನುಷ್ಯ ಮಾನದಲ್ಲಿ ಇದೇನೋ ಸುದೀರ್ಘಕಾಲವೆ ಆದರೆ ಬ್ರಹ್ಮಮಾನದಲ್ಲಿ ಇದು ಕೇವಲ ಒಂದು ಹಗಲು ಹೀಗೆ ಪ್ರತಿದಿವಸ, ಅಂದರೆ ಪ್ರತಿ ಹಗಲು ಶ್ರುತಿತತಿಗಳಿಗೆ ಗೋಚರಿಸದ ಅಪ್ರತಿಮ ಹರಿ ಪ್ರಾಕೃತ ಪುರುಷರಂತೆ ಚೇತನರೊಳಗೆ, ಅಂದರೆ ದೇವಮಾನವಾದಿ ಜೀವರ ನಡುವೆ ಅವತರಿಸಿ ಸಂಚರಿಸುತ್ತಾನೆ ಏಕೆ? ಪಾಂಡವರಂಥ ಧರ್ಮಾತ್ಮರು ಕಷ್ಟ ಅನುಭವಿಸುವಾಗ ಅವರನ್ನು ಸಂತೈಸುವುದಕ್ಕಾಗಿ ಇಲ್ಲದಿದ್ದರೆ ಆನಂದಮಯನಿಗೆ ಇದೆಲ್ಲ ಏಕೆ?

**ನಿಯಮ್ಯ ನಿಯಾಮಕನು ತಾನಾಗಿ ಸಂತೈಪ:**

ರಾವಣನ ಹಿಂಸಾಚಾರವನ್ನು ಹತ್ತಿಕ್ಕಲು ರಾಮ ಅವನಿಗೆ ಯಮನಂತೆ ಬಂದು ನಿಯಾಮಕನಾಗುತ್ತಾನೆ ತಾನೆ ಇನ್ನೊಂದು ರೂಪದಿಂದ ರಾವಣನಲ್ಲಿಯೂ ಇದ್ದು ನಿಯಮ್ಯನಾಗುತ್ತಾನೆ ನಿಯಮ್ಯನಾಗಿ ದುಃಖ ಅನುಭವಿಸುವುದಿಲ್ಲ ಕಾದ ಕಬ್ಬಿಣ ಹಿಡಿದು ಬಡಿದಾಗ ಏಟು ಕಬ್ಬಿಣಕ್ಕೆ ಹೊರತು ಬೆಂಕಿಗೆ ಅಲ್ಲ ಕಬ್ಬಿಣ ಏಟನ್ನು ಸ್ವೀಕರಿಸಬೇಕಾದರೆ ಒಳಗೆ ಬೆಂಕಿ ಬೇಕಷ್ಟೆ. ಹಾಗೇ ರಾವಣ ನಿಯಮ್ಯನಾಗಿ ರಾಮನ ಬಾಣಕ್ಕೆ ಬಲಿಯಾಗಲು ಅವನೊಳಗೆ ರಾಮ ಇನ್ನೊಂದು ರೂಪದಿಂದ ನಿಯಮ್ಯನಾಗಿರಬೇಕಾಗುತ್ತದೆ ಇದು ಕೇವಲ ಲೀಲೆ ಮುಂದೆ ಈ ವ್ಯಾಪ್ತಿ ಸಂಧಿಯ ಇಪ್ಪತ್ತೇಳನೆ ನುಡಿಯಲ್ಲಿ ದಾಸರಾಯರು ಇದನ್ನು ಸ್ಪಷ್ಟಪಡಿಸುತ್ತಾರೆ

ಅಥವಾ ಚೇತನರಿಗೆ ಕ್ಷಣಕ್ಷಣದಲ್ಲಿ ನಾನಾ ಕಷ್ಟಗಳು ಬರುತ್ತವೆ ಏಕೆಂದರೆ ಚೇತನರೊಳಗೆ ಹರಿ ಪ್ರಾಕೃತ ಪುರುಷನಂತೆ ಇದ್ದು ಪ್ರತಿದಿನ ಅಂದರೆ ಮನುಷ್ಯಮಾನದ ಪ್ರತಿದಿನದಲ್ಲಿಯೂ ಸಾಂಸಾರಿಕ ವ್ಯವಹಾರಗಳಲ್ಲಿ ಸಂಚರಿಸುತ್ತಾನೆ ಕಷ್ಟಗಳನ್ನು ಆಹ್ವಾನಿಸುತ್ತಾನೆ ಶಕ್ತಿ ಇದ್ದೂ ಪರಿಹರಿಸುವುದಿಲ್ಲ ತಾನು ಉಣ್ಣುವುದಿಲ್ಲ ಚೇತನರಿಗೆ ಉಣಿಸುತ್ತಾನೆ ಕಷ್ಟಗಳು ಆಧ್ಯಾತ್ಮಿಕ ಆಧಿ ದೈವಿಕ ಆಧಿ ಭೌತಿಕ ಎಂದು ಮೂರು ಬಗೆ. ಮಾನಸಿಕ ಶಾರೀರಿಕ ಆಧಿವ್ಯಾಧಿ ದುಃಖಗಳು ಆಧ್ಯಾತ್ಮಿಕವೆನಿಸುತ್ತವೆ ಅತಿವೃಷ್ಟಿ ಅನಾವೃಷ್ಟಿ ಮುಂತಾದ ಪ್ರಕೃತಿ ವಿಕೋಪಗಳು ಆಧಿದೈವಿಕ ರೋಗಾಣುಗಳು, ವಿಷಕ್ರಿಮಿಗಳು, ಹಿಂಸ್ರ ಮೃಗಪಕ್ಷಿಗಳು ಕಳ್ಳಕಾಕರು ಮುಂತಾದವು ಆಧಿಭೌತಿಕ ಇವುಗಳನ್ನು ನಿಯಂತ್ರಣದಲ್ಲಿಇಟ್ಟುಕೊಳ್ಳಲು, ಅವುಗಳ ಮೇಲೆ ತಾವು ನಿಯಾಮಕರಾಗಿರಲು ಚೇತನರು ಬಯಸುತ್ತಾರೆ ಆಗುತ್ತಿಲ್ಲ ಅವು ತಮಗೆ ನಿಯಮ್ಯವಾಗಿರಲೆಂದು ಬಯಸುತ್ತಾರೆ. ಹಾಗಾಗುತ್ತಿಲ್ಲ ಶ್ರೀಹರಿ ಕರುಣೆ ದೋರಿದರೆ ತಾನು

ಈ ತಾವತ್ರಯಗಳೊಳಗೆ ನಿಯಮ್ಯನಾಗಿ ಕುಳಿತು ನಿಯಾಮಕರಾದ ಚೇತನರಲ್ಲಿ ನಿಯಾಮಕ ರೂಪದಿಂದಲೂ ನೆಲೆಸಿದ್ದು ಆ ರೂಪಕ್ಕೆ ತಾನೆ ನಿಯಮ್ಯನಾಗುತ್ತಾನೆ ಅದರ ಫಲವಾಗಿ ತಾಪತ್ರಯಗಳು ನಿಯಂತ್ರಣಕ್ಕೊಳಗಾಗುತ್ತವೆ ಚೇತನರಿಗೆ ಮನಃಶಾಂತಿ ದೊರಕುತ್ತದೆ ಹೀಗೆ ಸಂತೈಸುತ್ತಾನೆ, ಶ್ರೀಹರಿ

**ಮನ ವಿಷಯದೊಳಗಿರಿಸಿ ವಿಷಯವ**
**ಮನದೊಳಗೆ ನೆಲೆಗೊಳಿಸಿ ಬಲು ನೂ**
**ತನವಿದು ಸಮೀಚೀನವಿದುಪಾದೇಯವೆಂದರುಪಿ।**
**ಕನಸಿಲಾದರು ತನ್ನ ಪಾದದ**
**ನೆನವನೀಯದೆ ಸರ್ವರೊಳಗಿ**
**ದ್ದನುಭವಿಸುವನು ಸ್ಥೂಲವಿಷಯವ ವಿಶ್ವನೆಂದೆನಿಸಿ ॥ ೧೫ ॥**

ಶ್ರೀಹರಿ ಜೀವರ ಮನಸ್ಸನ್ನು ವಿಷಯ ಪದಾರ್ಥದೊಳಗಿರಿಸಿ, ವಿಷಯ ಪದಾರ್ಥವನ್ನು ಮನಸಿನೊಳಗೆ ನೆಲೆಗೊಳಿಸಿ 'ಇದು ಬಲು ಹೊಸತು, ಇದು ಬಲು ಚಂದ, ಇದು ಬೇಕು' ಎನ್ನುವ ಭಾವನೆಯನ್ನುಂಟುಮಾಡಿ ಕನಸಿನಲ್ಲಾದರೂ ತನ್ನ ಸ್ವರೂಪದ ಸ್ಮರಣೆ ನೀಡದೆ ಎಲ್ಲರೊಳಗಿದ್ದು ವಿಶ್ವನೆಂದೆನಿಸಿ ಸ್ಥೂಲ ವಿಷಯ ಪದಾರ್ಥವನ್ನು ಅನುಭವಿಸುತ್ತಾನೆ

**ಮನ ವಿಷಯದೊಳಗಿರಿಸಿ:**

ನಮ್ಮ ಮನಸ್ಸು ಎಚ್ಚರದಲ್ಲಿದ್ದರೆ ಮಂಗನಂತೆ ಚಂಚಲ ಸ್ವಭಾವದ್ದು ಮಂಗ ಮರದಿಂದ ಮರಕ್ಕೆ ಹಾರುವಂತೆ, ದುಂಬಿ ಹೂವಿಂದ ಹೂವಿಗೆ ಹಾರುವಂತೆ ವಿಷಯ ಪದಾರ್ಥಗಳನ್ನು ಅರಸುತ್ತ ಅವಿಶ್ರಾಂತವಾಗಿ ತಿರುಗುತ್ತದೆ ಕೊನೆಗೆ ಸೋತು ನಿದ್ದೆಯಲ್ಲಿ ನಿಷ್ಕ್ರಿಯವಾಗಿ ಸುಮ್ಮನಿರುತ್ತದೆ ಈ ಎಚ್ಚರ ಮತ್ತು ನಿದ್ದೆಯ ಸ್ಥಿತಿಗಳು ವಸ್ತುತಃ ಮನಸ್ಸಿಗಲ್ಲ, ಜೀವನಿಗೆ, ಜೀವನ ಚಿನ್ಮಯ ಮನಸ್ಸಿಗೆ. ಅವನ್ನು ತಂದುಕೊಡುವವನು ಬಿಂಬರೂಪಿಯಾದ ಶ್ರೀಹರಿಯೆ

ಶ್ರೀಹರಿ 'ವಿಶ್ವ' ಎಂಬ ರೂಪದಿಂದ ನಮ್ಮ ಬಲಗಣ್ಣಿನಲ್ಲಿ ಕುಳಿತು ನಮ್ಮ ಚಿನ್ಮಯ ಹಾಗೂ ಜಡ ಮನಸ್ಸುಗಳಿಗೆ ಎಚ್ಚರದ ಅವಸ್ಥೆ ನೀಡುತ್ತಾನೆ ಏಕೆ? ಎಂದರೆ ಈ ಎಚ್ಚರದ ಅವಸ್ಥೆಯಲ್ಲಿ ಅವನು ನಮ್ಮ ಮನಸ್ಸಿನ ಮೂಲಕ ಸ್ಥೂಲ ವಿಷಯ ಪದಾರ್ಥಗಳನ್ನು ಅನುಭವಿಸುತ್ತಾನೆ ಮಾಂಡೂಕ ಭಾಷ್ಯದಲ್ಲಿ ಇದು ಸ್ಪಷ್ಟವಿದೆ-

ಸ್ಥೂಲಭೋಗಾನಿಂದ್ರಿಯೈಃ ಸ ಶುಭಾನ್ ಭುಂಕ್ತೇ ನ ಚಾಶುಭಾನ್।

ಜೀವ ಸೋತಾಗ ಕರುಣೆಯಿಂದ ವಿಶ್ವ ಬಲಗಣ್ಣಿನಿಂದ ಹೊರಟು ಕಂಠದ ಮಾರ್ಗವಾಗಿ ಹೃದಯಕ್ಕೆ ಬಂದು ಪ್ರಾಜ್ಞನಲ್ಲಿ ಲೀನನಾಗುತ್ತಾನೆ ಜೀವನಿಗೆ ಇದೇ ನಿದ್ರೆ, ವಿಶ್ರಾಂತಿ

ಎಚ್ಚರದ ಅವಸ್ಥೆ ಎಂದರೇನು? ನಾವು ಮಲಗಿರುವಾಗ ನಮ್ಮ ಮನಸ್ಸು ಮಲಗಿ ನಿಷ್ಕ್ರಿಯವಾಗಿರುತ್ತದೆ ಎದ್ದಾಗ ಎದ್ದು ಸಕ್ರಿಯವಾಗುತ್ತದೆ ವಸ್ತುತಃ ಮನಸ್ಸು ಜಡ ಸ್ವತಃ ಕಲ್ಲಿನಂತೆ ಏನೂ ಕ್ರಿಯೆ ಇಲ್ಲ ನಿಜ ಹೇಳಬೇಕೆಂದರೆ ಕ್ರಿಯಾಶೀಲವಾದ ಜೀವನ ಚಿನ್ಮಯ ಮನಸ್ಸೂ ತತ್ವಾಭಿಮಾನಿಗಳ ಮತ್ತು ಶ್ರೀಹರಿಯ ಪ್ರವೇಶವಿಲ್ಲದಿದ್ದರೆ ಕಲ್ಲಿನಂತೆ ನಿಷ್ಕ್ರಿಯವಾದೀತು

ಹೃದಯದಲ್ಲಿರುವ ಬಿಂಬರೂಪನಾದ ಶ್ರೀಹರಿಯ ಪ್ರಾಜ್ಞರೂಪದಿಂದ ವಿಶ್ವರೂಪ ಪ್ರಾದುರ್ಭವಿಸಿ ಜೀವನೊಂದಿಗೆ ಬಾಹ್ಯಸ್ಥೂಲಶರೀರದ ಬಲಗಣ್ಣಿಗೆ ಬರುತ್ತಿದ್ದಂತೆ ಪ್ರಾಜ್ಞನ ಮನಸ್ಸೂ ಜೊತೆಗೇ ಬರುತ್ತದೆ. ಬಂದು, ಬಲಗಣ್ಣಿನಲ್ಲಿರುವ ಜೀವನ ಚಿನ್ಮಯ ಮನಸ್ಸಿನೊಳಗೆ ನೇರಿ ವ್ಯಾಪಿಸುತ್ತದೆ ಇದ್ದಲಿನೊಳಗೆ ಬೆಂಕಿ ನೇರಿ ವ್ಯಾಪಿಸುವಂತೆ ಕಪ್ಪಾದ ಇದ್ದಿಲು ಆಗ ಕೆಂಪಾಗಿ ಹೊಳೆವಂತೆ ಜೀವನ ನಿಷ್ಕ್ರಿಯವಾದ ಚಿನ್ಮಯ ಮನಸ್ಸು ಆಗ ಸಕ್ರಿಯವಾಗಿ ಜಡಮನಸ್ಸಿನೊಳಗೆ ನೇರಿ ಅದನ್ನು ಸಕ್ರಿಯಗೊಳಿಸುತ್ತದೆ ಈಗ ಈ ಜಡಮನಸ್ಸು ವಿಷಯ ಪದಾರ್ಥಗಳನ್ನು ಅರಸಿ ಹೊಗಿ ಅವುಗಳಲ್ಲಿ ದುಂಬಿ ಹೂವುಗಳಲ್ಲಿ ನೆಲೆ ನಿಲ್ಲುವಂತೆ ನಿಲ್ಲುತ್ತವೆ ಇದು ವಸ್ತುತಃ ಜಡವಾದ ಮನಸ್ಸಿನ ಸ್ವಂತ ವ್ಯಾಪಾರವಲ್ಲ ಅದರೊಳಗೆ ನೇರಿರುವ ಚಿನ್ಮಯ ಮನಸ್ಸಿನ ವ್ಯಾಪಾರ ಅದರಿಂದ ಹರಿಯೆ ಮನಸ್ಸನ್ನು ವಿಷಯದೊಳಗೆ ಇರಿಸುತ್ತಾನೆ ಎನ್ನುತ್ತಾರೆ ದಾಸರಾಯರು

ಶ್ರೀಅಡವಿ ಆಚಾರ್ಯರು ಷೋಡಶಿ ಗ್ರಂಥದಲ್ಲಿ ಈ ಪ್ರಕ್ರಿಯೆಯನ್ನು ಸುಂದರವಾಗಿ ಬಣ್ಣಿಸಿದ್ದಾರೆ – 'ಶ್ರೀಹರಿಗೆ ಮನಸ್ಸಿನಿಂದ ವಿಹರಿಸಲು ಬಯಕೆ ಮೂಡಿದಾಗ ಬಿಂಬನಾದ ಪ್ರಾಜ್ಞನ ಮನೋರೂಪ ಅನಿರುದ್ಧಮೂರ್ತಿ ಬ್ರಹ್ಮಾದಿ ಪುಷ್ಕರ ಪರ್ಯಂತ ದೇವತೆಗಳೊಂದಿಗೆ ಜೀವಸ್ವರೂಪ ಮನಸ್ಸನ್ನೂ ಜೊತೆಗೊಯ್ದು ಜೀವ ಬಾಹ್ಯ ಮನಸ್ಸಿನಲ್ಲಿ ಪ್ರವೇಶಿಸುತ್ತಾನೆ '

ಶ್ರೀಹರಿಯ ಶರೀರದ ಪ್ರತಿಯೊಂದು ಅಂಗವೂ, ಆಯಾ ಅಂಗದ ಆಕಾರದಲ್ಲಿದ್ದರೂ ಸ್ವಯಂ ಸರ್ವಾಂಗಪರಿಪೂರ್ಣವಾದ ಒಂದು ಶರೀರವೆ ಆಗಿರುತ್ತದೆ ಇದನ್ನು ನವನಾರೀಕುಂಜರನ್ಯಾಯ ಅಥವಾ ಪಂಚನಾರೀತುರಗನ್ಯಾಯ ವೆಂದು ತಿಳಿಯಬೇಕು ಅದರಿಂದ ಪ್ರಾಜ್ಞಮೂರ್ತಿಯ ಮನಸ್ಸು ಅನಿರುದ್ಧ ಮೂರ್ತಿ ಅವನು ಪ್ರಾಜ್ಞನ ಶರೀರದಲ್ಲಿ ಮನಸ್ಸಿನ ಆಕಾರದಲ್ಲಿರುತ್ತಾನೆ, ಆದರೆ ಸ್ವಯಂ ಕಣ್ಣು ಕೈಕಾಲು ಉಳ್ಳ ಶರೀರರೂಪನೆ ಆಗಿರುತ್ತಾನೆ ಇದೇ ರೀತಿ ರಮಾಬ್ರಹ್ಮಾದಿ ಪುಷ್ಕರಾಂತ ತತ್ವದೇವತೆಗಳಿಗೂ ಜೀವನ ಮನಸ್ಸಿನಲ್ಲಿ ಮನಸ್ಸಿನಾಕಾರದ ರೂಪಗಳಿವೆ. ಇವೆಲ್ಲವೂ ಜೀವನ ಚಿನ್ಮಯ ಮನಸ್ಸಿನೊಳಗೆ ಪ್ರವೇಶಿಸುತ್ತವೆ ಆ ಚಿನ್ಮಯ ಮನಸ್ಸು ಬಾಹ್ಯ ಜಡಮನಸ್ಸಿನೊಳಗೆ ಪ್ರವೇಶಿಸುತ್ತದೆ ಆಗ ಬಾಹ್ಯ ಜಡ ಮನಸ್ಸು ಎಚ್ಚರಗೊಂಡು ವಿಷಯ ಪದಾರ್ಥಗಳ ಕಡೆಗೆ ಹಾರಾಡಲು ತೊಡಗುತ್ತದೆ ವಸ್ತುತಃ ಮೊದಲೂ ಜೀವನ ಮನಸ್ಸಿನಲ್ಲಿ ಹರಿಯ ಹಾಗೂ ರಮಾಬ್ರಹ್ಮಾದಿಗಳ ಮನೋರೂಪಗಳು ಸುಮ್ಮನೆ ನಿಷ್ಕ್ರಿಯವಾಗಿ ಇದ್ದೇ ಇರುತ್ತದೆ ಆದರೆ ಈಗ ಹೊಸದಾಗಿ ಬಂದ

ಮನೋರೂಪಗಳು ಹಿಂದೆ ಇದ್ದ ಮನೋರೂಪಗಳೊಂದಿಗೆ ಸೇರಿ ಒಂದಾದಾಗ ಬಾಹ್ಯ ಮನಸ್ಸಿನಲ್ಲಿ ಕ್ರಿಯೆ ಪ್ರಾರಂಭವಾಗುತ್ತದೆ ನಾನಾ ಬಗೆಯ ಭಾವಗಳು ಮನಸ್ಸಿನಲ್ಲಿ ಉದಿಸುತ್ತವೆ ಈ ಭಾವಗಳು, ಹತ್ತಾರು, ನೂರಾರು, ಸಾವಿರಾರು ಸಮುದ್ರದಲ್ಲಿ ಸಣ್ಣ ದೊಡ್ಡ ಅಸಂಖ್ಯ ತೆರೆಗಳು ಎಡೆಬಿಡದೆ ಎದ್ದು ಮರೆಯಾಗುವಂತೆ 'ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾ ಅಶ್ರದ್ಧಾ ಧೃತಿಃ ಅಧೃತಿಃ' ಎಂದು ಮುಂತಾಗಿ ಉಪನಿಷತ್ತಿನಲ್ಲಿ ಹೇಳುವ ಮನೋವೃತ್ತಿಗಳು ಎದ್ದೇಳುತ್ತವೆ ಆಗ ಶ್ರೀಹರಿಯ, ಬ್ರಹ್ಮಾದಿಗಳ ರೂಪಗಳೂ ಜೀವನ ಚಿನ್ಮಯ ವೃತ್ತಿಗಳೂ ಅವೇ ಆಕಾರದಲ್ಲಿ ಉದಿಸಿ ಆ ಮನೋವೃತ್ತಿಗಳಲ್ಲಿ ಪ್ರವೇಶಿಸುತ್ತವೆ ವಿಷಯ ಪದಾರ್ಥಗಳಲ್ಲಿಯೂ ಹರಿಯ ಮತ್ತು ಬ್ರಹ್ಮಾದಿಗಳ ರೂಪಗಳೂ ಆಯಾ ಪದಾರ್ಥಗಳ ಆಕಾರದಲ್ಲಿ ಇರುತ್ತವೆ ಮನಸ್ಸಿನೊಳಗಿರುವ ರೂಪಗಳು ಮನಸ್ಸಿನೊಂದಿಗೇ ವಿಷಯಪದಾರ್ಥಗಳೊಳಗಿರುವ ರೂಪಗಳ ಬಳಿಗೆ ಬಲುಸಂಭ್ರಮ ದಿಂದ ಧಾವಿಸುತ್ತವೆ ಉದಾ ಹೊಟ್ಟೆ ಹಸಿದಾಗ ಮನಸ್ಸು ಅನ್ನದ ಕಡೆಗೆ ಧಾವಿಸುತ್ತದೆ ಮನಸಿನೊಳಗಿರುವ ರೂಪಗಳೂ ವಿಷಯ ಪದಾರ್ಥಗಳೊಳಗಿರುವ ರೂಪಗಳೂ ವಸ್ತುತಃ ಒಂದೇ ದೀಪಕ್ಕೂ ಅದರ ಪ್ರಕಾಶಕ್ಕೂ ಭೇದವಿಲ್ಲದಿದ್ದರೂ 'ದೀಪದ ಪ್ರಕಾಶ' ಎಂದು ಭೇದ ವ್ಯವಹಾರ ಮಾಡುವಂತೆ ಪ್ರಕೃತದಲ್ಲಿ ಲೀಲೆಯಿಂದ ರೂಪಗಳು ಬೇರೆಯಾಗಿ ಒಂದನ್ನೊಂದು ಕೂಡಿ ಆಲಿಂಗಿಸಿ ಆನಂದಪಟ್ಟು ಹಿಂತಿರುಗಿ ಬರುತ್ತವೆ ಒಂದು ದೀಪ ಹತ್ತಾಗಿ ತಿರುಗಿ ಒಂದೇ ಆಗುವಂತೆಯೆ ಇದು ಈ ಲೀಲೆ ಜೀವನಿಗೆ ವಿಷಯ ಸುಖಾನುಭವದ ತೃಪ್ತಿ ನೀಡುವುದಕ್ಕಾಗಿ ಬಿಂಬ ಕ್ರಿಯಾಧೀನ ತಾನೆ ಪ್ರತಿಬಿಂಬ ಕ್ರಿಯೆ! ಇದನ್ನು ದಾಸರಾಯರು ಸಂಕ್ಷೇಪವಾಗಿ 'ಮನ ವಿಷಯ ದೊಳಗಿರಿಸಿ' ಎಂದಿದ್ದಾರೆ

**ವಿಷಯವ ಮನದೊಳಗೆ ನೆಲೆಗೊಳಿಸಿ:**

ಕೆಲವೊಮ್ಮೆ ಹೊಟ್ಟೆ ಹಸಿಯದಿದ್ದರೂ ತಿಂಡಿ ತಿನ್ನುವ ಚಪಲ! ಆಗ ತಿಂಡಿ ಮುಂತಾದ ವಿಷಯ ಪದಾರ್ಥಗಳೊಳಗಿರುವ ರೂಪಗಳೆ ಅಯಸ್ಕಾಂತದಂತೆ ಮನಸಿನೊಳಗಿರುವ ರೂಪಗಳನ್ನು ಸೆಳೆದು ಬರಮಾಡಿಕೊಂಡು ಆಲಿಂಗಿಸಿ ಸುಖ ನೀಡುತ್ತವೆ ಇದನ್ನು 'ವಿಷಯವ ಮನದೊಳಗೆ ನೆಲೆಗೊಳಿಸಿ' ಎಂದಿದ್ದಾರೆ

ಅಥವಾ, ಮನಸಿನೊಳಗಿರುವ ಹರಿಯ ಮತ್ತು ಬ್ರಹ್ಮಾದಿಗಳ ರೂಪಗಳು ವಿಷಯದಲ್ಲಿರುವ ಅವರ ರೂಪಗಳೊಂದಿಗೆ ಸೇರಿ ಒಂದಾಗುವುದರಿಂದಲೇ 'ಮನಸ್ಸು ವಿಷಯದಲ್ಲಿ' ಎಂದರೂ ಸರಿಯೆ, 'ವಿಷಯ ಮನಸಿನಲ್ಲಿ' ಎಂದರೂ ಸರಿಯೆ ಎಂಬ ಅಭಿಪ್ರಾಯದಿಂದ ಎರಡನ್ನು ಸೇರಿಸಿ ಹೇಳುತ್ತಾರೆ 'ಮನ ವಿಷಯದೊಳಗಿರಿಸಿ ವಿಷಯವ ಮನದೊಳಗೆ ನೆಲೆಗೊಳಿಸಿ' ಎಂದು

**ಬಲುನೂತನವಿದು . ·**

ಶ್ರೀಹರಿಯ ರೂಪಗಳು ಕೇವಲ ಸಚ್ಚಿದಾನಂದಮಯ, ಅನಂತಸೌಂದರ್ಯದ ಖನಿ,

ನಿತ್ಯನೂತನ, ನಿತ್ಯಸಮೀಚೀನ, ಅಂದರೆ ನಿರ್ದುಷ್ಟ ಮತ್ತು ಉಪಾದೇಯ, ಸದಾ ಬೇಕೆನಿಸುವಂತಹವು ಆಲಿಂಗಿಸಿಕೊಳ್ಳುವಂಥವುಗಳು ಅವುಗಳ ಚೆಲುವು ಆಕರ್ಷಣೆ ಎಂದೂ ಮಾಸುವುದಿಲ್ಲ ಅವುಗಳ ಆವೇಶವಾದಾಗ ವಿಷಯ ಪದಾರ್ಥಗಳೂ, ಕಾದ ಕಬ್ಬಿಣದ ಗುಂಡು ಕೆಂಪಾಗಿ ಹೊಳೆವಂತೆ, ಸುಂದರವಾಗಿ ಆಕರ್ಷಕವಾಗಿ ಕಾಣುತ್ತವೆ, ಕಾಣುವಂತೆ ಮಾಡುತ್ತಾನೆ, ಶ್ರೀಹರಿ

**ಕನಸಿಲಾದರು ತನ್ನ ಪಾದದ ನೆನೆವನೀಯದೆ**

ಉತ್ತಮರ ಸ್ವರೂಪವನ್ನು 'ಪಾದ' ಶಬ್ದದಿಂದ ಹೇಳುತ್ತೇವೆ, ಶ್ರೀಪಾದರು, ಪಿತೃಪಾದರು, ಭಗವತ್ಪಾದರು, ಎಂದು ಮುಂತಾಗಿ ಸರ್ವೋತ್ತಮನಾದ ಹರಿಯ ಸ್ವರೂಪವನ್ನು ದಾಸರಾಯರು 'ತನ್ನ ಪಾದ' ಎಂದಿದ್ದಾರೆ ವಿಷಯ ಭೋಗಕಾಲದಲ್ಲಿ ಮೇಲುನೋಟಕ್ಕೆ ಹೊರಮನಸ್ಸೇ ಹೊರಗೆ ಹಾರಾಡುತ್ತದೆ ಹೊರಮನಸ್ಸಿಗೇ ವಿಷಯಪದಾರ್ಥದ ಆಕರ್ಷಣೆ ಎನಿಸಬಹುದು ತತ್ವೋಪದೇಶ ಶ್ರವಣ ಮಾಡುವಾಗ ನಮ್ಮ ಮನಸ್ಸು ಎಲ್ಲಿಯೋ ಹೋಗಿರುತ್ತದೆ 'ನಾನೇನು ಮಾಡಲಿ, ಹಾಳು ಮನಸ್ಸು ! ಎಲ್ಲಿಗೋ ಹೋಗುತ್ತದೆ ವಿಷಯ ಪದಾರ್ಥಗಳು ಬಲಾತ್ಕಾರವಾಗಿ ಅದನ್ನು ಸೆಳೆಯುತ್ತಿವೆ' ಎನ್ನುತ್ತೇವೆ ವಸ್ತುತಃ ನಮ್ಮ ಪೂರ್ವ ಕರ್ಮಾನುಸಾರವಾಗಿ ಹರಿಯ ಮತ್ತು ಬ್ರಹ್ಮಾದಿಗಳ ರೂಪಗಳೇ ಹೀಗೆ ಬೇಕಾದಲ್ಲಿಗೆ ಹೋಗುತ್ತಿರುವುದು ನಮ್ಮ ಗಮನಕ್ಕೆ ಬರುವುದಿಲ್ಲ ಇದನ್ನು ಕೇವಲ ಶಾಸ್ತ್ರದಿಂದಲೇ ತಿಳಿಯಬೇಕು ಬೇರೆ ಉಪಾಯದಿಂದ ಹರಿ ತನ್ನ ಈ ಲೀಲೆಯನ್ನು ನಮಗೆ ಕನಸಿನಲ್ಲಾದರೂ ತೋರಗೊಡಲಾರ

**ಅನುಭವಿಸುವನು ಸ್ಥೂಲವಿಷಯವ**

ಸ್ಥೂಲ ವಿಷಯವೆಂದರೆ ಇಲ್ಲಿ ಗುಡ್ಡ ಬೆಟ್ಟದಂಥ ದೊಡ್ಡ ವಸ್ತು, ಧೂಳಿನ ಸಣ್ಣಕಣಗಳಿಗಿಂತ ವಿಲಕ್ಷಣ ಎಂದರ್ಥವಲ್ಲ ಮಾಂಡೂಕೋಪನಿಷತ್ತಿನಲ್ಲಿ ಜೀವರಿಗೆ ಕನಸಿನಲ್ಲಿ ಕಾಣುವ ಸೂಕ್ಷ್ಮವಾದ ಮಾನಸ ವಾಸನಾಮಯ ಪದಾರ್ಥಗಳನ್ನು ಹರಿಯ 'ತೈಜಸ' ಎಂಬ ಮೂರ್ತಿ ನಿರ್ಮಿಸಿ ಜೀವರಿಗೆ ತೋರಿ, ತಾನು ಅನುಭವಿಸುತ್ತಾನೆ ಎಂದು ಹೇಳಿ, ವಿಶ್ವ ಸ್ಥೂಲವಾದ ಪದಾರ್ಥಗಳನ್ನು ಅನುಭವಿಸುತ್ತಾನೆ ಎಂದಿದೆ ಅದರಿಂದ ಕನಸಿನಲ್ಲಿ ಕಾಣುವ ಗುಡ್ಡಬೆಟ್ಟಗಳಂಥಹ ಪದಾರ್ಥಗಳೂ ಸೂಕ್ಷ್ಮವಾಸನಾಮಯವಾದ್ದರಿಂದ ಸೂಕ್ಷ್ಮ ಪದಾರ್ಥಗಳೆನಿಸುತ್ತವೆ. ಎಚ್ಚರವಾದಾಗ ಕಣ್ಣಿಗೆ ಕಾಣುವ, ಅಥವಾ ಕಾಣದ ಸಣ್ಣ ಪದಾರ್ಥಗಳೂ ಕೂಡ ಸ್ಥೂಲವೆ ಜಾಗ್ರದವಸ್ಥೆಯಲ್ಲಿ ನಾವು ತಿಳಿಯುವ, ಅನುಭವಿಸುವ ಎಲ್ಲ ಪದಾರ್ಥಗಳೂ ಸ್ಥೂಲವೆನಿಸುತ್ತವೆ ಅವುಗಳ ಅನುಭವ ಶ್ರೀಹರಿಯ 'ವಿಶ್ವ' ಮೂರ್ತಿಯ ವ್ಯಾಪಾರ ಅವನು ಸರ್ವರೊಳಗಿದ್ದು ಸ್ಥೂಲ ವಿಷಯವನ್ನು ಅನುಭವಿಸುತ್ತಾನೆ ಆದರೆ ಎಲ್ಲರಂತಲ್ಲ

'ಶುಭಾನ್ ಭುಂಕ್ತೇ ನ ಚಾಶುಭಾನ್'

ಎಂದು ಮಾಂಡೂಕ ಭಾಷ್ಯದಲ್ಲಿ ಹೇಳಿದಂತೆ ಶುಭವನ್ನೇ ಅನುಭವಿಸುತ್ತಾನೆ, ಅಂದರೆ ವಿಷಯ ಪದಾರ್ಥಗಳೊಳಗಿರುವ ತನ್ನದೆ ಆದ ಆನಂದಮಯ ಸ್ವಾಖ್ಯರಸವನ್ನೇ ಆಲಿಂಗಿಸಿ ಅನುಭವಿಸುತ್ತಾನೆ ಪ್ರಾಕೃತವಾದ ಆ ವಿಷಯ ಪದಾರ್ಥಗಳನ್ನು ಜೀವನಿಗೇ ಉಣಿಸುತ್ತಾನೆ ಅದರಿಂದ ವಿಶ್ವ 'ಸ್ಥೂಲಭುಕ್' ಹೌದು, 'ಅನಶ್ನನ್' ಹೌದು ಉಣ್ಣುವವನೂ ಹೌದು ಉಣದವನೂ ಹೌದು

**ವಿಶ್ವನೆಂದೆನಿಸಿ**

ಕನಸಿನಲ್ಲಿ ಸೂಕ್ಷ್ಮವಾದ ಪದಾರ್ಥಗಳನ್ನು ಶ್ರೀಹರಿ ತೈಜಸನೆಂದೆನಿಸಿ ಅನುಭವಿಸುತ್ತಾನೆ. ಎಚ್ಚರದಲ್ಲಿ ಸ್ಥೂಲವಾದ ಪದಾರ್ಥಗಳನ್ನು ವಿಶ್ವನೆಂದೆನಿಸಿ ಅನುಭವಿಸುತ್ತಾನೆ ವಿಶ್ವ, ಜೀವನ ಬಾಹ್ಯವಾದ ಮನ ಇಂದ್ರಿಯಗಳಲ್ಲಿ ಮತ್ತು ಸ್ಥೂಲ ಪದಾರ್ಥಗಳಲ್ಲಿ ಇರುವ ತನ್ನ ರೂಪಗಳ ಮೂಲಕ ಅನುಭವಿಸುತ್ತಾನೆ ತೈಜಸ ಜೀವನ ಬಾಹ್ಯವಾದ ಮನಸ್ಸಿನಲ್ಲಿ ಮತ್ತು ಸ್ವಾಪ್ನ ಪದಾರ್ಥಗಳಲ್ಲಿರುವ ತನ್ನ ರೂಪಗಳ ಮೂಲಕ ಅನುಭವಿಸುತ್ತಾನೆ ಏಕೆಂದರೆ ಇಂದ್ರಿಯಗಳು ಆಗ ನಿಷ್ಕ್ರಿಯವಾಗಿರುತ್ತವೆ ಸ್ಥೂಲಪದಾರ್ಥಗಳನ್ನು ಗ್ರಹಿಸುವುದಿಲ್ಲ ಈ ವ್ಯತ್ಯಾಸವನ್ನು ತೋರಿಸಲು 'ಸ್ಥೂಲ' ಎಂದರೆ ಇಂದ್ರಿಯ ಗೋಚರವಾದ ಪದಾರ್ಥಗಳನ್ನು ವಿಶ್ವ ಅನುಭವಿಸುತ್ತಾನೆ ಎಂದಿದ್ದಾರೆ ಜೊತೆಗೆ ಸೂಕ್ಷ್ಮವಾದ ಪದಾರ್ಥಗಳನ್ನು ತೈಜಸ ಅನುಭವಿಸುತ್ತಾನೆ ಎಂದೂ ಇಟ್ಟುಕೊಳ್ಳಬೇಕು

**ಸರ್ವರೊಳಗಿದ್ದು ಅನುಭವಿಸುವನು**

ಶ್ರೀಹರಿ ಕೇವಲ ರಾಜಸ ತಾಮಸರಲ್ಲಿ ಮಾತ್ರವಲ್ಲದೆ ಸಾತ್ವಿಕರಲ್ಲಿಯೂ ಸರ್ವರೊಳಗೆ ಇದ್ದು ಅವರ ಮನಸ್ಸನ್ನು ವಿಷಯದೊಳಗಿರಿಸಿ ವಿಷಯವನ್ನು ಮನಸಿನೊಳಗಿರಿಸಿ ವಿಷಯವನ್ನು ತೋರಿ ಬಲುನೂತನ ಸುಂದರ ಎಂದರುಹಿ ತಾನು ಅದನ್ನು ಅನುಭವಿಸುತ್ತಾನೆ ಅವನ ಈ ಲೀಲೆಯನ್ನು ನಾವು ವಿಷಯಭೋಗ ಕಾಲದಲ್ಲಿ ಅನುಸಂಧಾನ ಮಾಡುತ್ತಿದ್ದರೆ 'ಈ ಪರಿಯಲರಿತುಂಬ ನರ ನಿತ್ಯೋಪವಾಸಿ' ಎಂಬಂತೆ ನಮ್ಮ ವಿಷಯಭೋಗ ಶ್ರೀಹರಿಯ ಆರಾಧನೆಯೆ ಆಗುತ್ತದೆ ಅದರಿಂದ ಅಂತಃಕರಣ ಶುದ್ಧಿ, ಮೋಕ್ಷಸಾಧನೆ

ತ್ವಯೋಪಭುಕ್ತಸ್ರಗ್ಗಂಧ ವಾಸೋಽಲಂಕಾರ ಚರ್ಚಿತಾಃ।
ಉಚ್ಛಿಷ್ಟಭೋಜನೋ ದಾಸಾಸ್ತವ ಮಾಯಾಂ ಜಯೇಮಹಿ॥

ಎಂಬ ಭಾಗವತವಚನದಲ್ಲಿ 'ಉಪಭುಕ್ತ ಉಚ್ಛಿಷ್ಟ' ಎಂದರೆ ನಿತ್ಯದ ದೇವತಾರ್ಚನೆಯಲ್ಲಿ ಸಮರ್ಪಿತವಾಗುವ ನೈವೇದ್ಯಪ್ರಸಾದ ಮಾತ್ರವೆ ಅಲ್ಲ, ಅದನ್ನು ಉಣ್ಣುವಕಾಲದಲ್ಲಿಯೂ

ಮೇಲಿನ ಅನುಸಂಧಾನದಿಂದ ಸಮರ್ಪಿತವಾಗುವ ಅನ್ನವೂ ಹೌದು ಅದರಿಂದ ಹರಿಕಥಾಮೃತಸಾರದ ಈ ಪದ್ಯ ಕೇವಲ ವಿಷಯಾಸಕ್ತರಾದ ರಾಜಸ ತಾಮಸರ ಬಗ್ಗೆ ಹೇಳುತ್ತಿಲ್ಲ ಸಾತ್ವಿಕರೂ ಸೇರಿದಂತೆ ಎಲ್ಲ ಜನರ ಬಗ್ಗೆ, ಅವರ ವಿಷಯ ಭೋಗದ ಬಗ್ಗೆ ಹೇಳುತ್ತಿದೆ ಇಷ್ಟೇ ವ್ಯತ್ಯಾಸ, ಸಾತ್ವಿಕರು ಅನುಸಂಧಾನ ಮಾಡಿ ಭೋಜನದಿಂದ ಉಪವಾಸದ ಫಲ ಪಡೆಯುತ್ತಾರೆ ತಾಮಸರು ಹಾಗೆ ಮಾಡದೆ ಅದೇ ಭೋಜನದಿಂದ ಪಾಪಭಾಗಿಗಳಾಗುತ್ತಾರೆ-

'ಭುಂಜತೇ ತೇ ತ್ವಘಂ ಪಾಪಾಃ ಯೇ ಪಚಂತ್ಯಾತ್ಮ ಕಾರಣಾತ್'

ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನೆ ಹಾಗೆ ಹೇಳುತ್ತಾನೆ

**ತೋದಕನು ತಾನಾಗಿ ಮನ ಮೊದ-**
**ಲಾದ ಕರಣದೊಳಿದ್ದು ವಿಷಯವ-**
**ನೈದುವನು ನಿಜಪೂರ್ಣ ಸುಖಮಯ ಗ್ರಾಹ್ಯಗ್ರಾಹಕನು।**
**ವೇದವೇದ್ಯನು ತಿಳಿಯದವನೋ-**
**ಪಾದಿ ಭುಂಜಿಸುತೆಲ್ಲರೊಳಗಾ-**
**ಹ್ಲಾದ ಬಡುವನು ಭಕ್ತವತ್ಸಲ ಭಾಗ್ಯಸಂಪನ್ನ ॥ ೧೬ ॥**

ಶ್ರೀಹರಿ ಅಂತರ್ಯಾಮಿ ತಾನಾಗಿ ಮನಸ್ಸೇ ಮೊದಲಾದ ಇಂದ್ರಿಯ ಇಂದ್ರಿಯಾಭಿ ಮಾನಿಗಳಲ್ಲಿದ್ದು ಆ ಮೂಲಕ ವಿಷಯ ಪದಾರ್ಥಗಳನ್ನು ಹೊಂದುತ್ತಾನೆ ಸ್ವರೂಪಭೂತ ಪೂರ್ಣಾನಂದಮಯನಾಗಿದ್ದರೂ ತಾನೇ ಗ್ರಾಹ್ಯನೂ ಗ್ರಾಹಕನೂ ಆಗುತ್ತಾನೆ ಹೀಗೆ ವೇದ ಗಳಲ್ಲಿ ವೇದ್ಯನಾಗಿದ್ದಾನೆ ಏನೂ ತಿಳಿಯದವನಂತೆ ಎಲ್ಲರೊಳಗೆ ವಿಷಯಭೋಗ ಮಾಡುತ್ತ ಆಹ್ಲಾದಪಡುತ್ತಾನೆ ಈ ಎಲ್ಲ ಲೀಲೆ ಏಕೆ ಎಂದರೆ ಅವನು ಭಕ್ತವತ್ಸಲ, ಭಾಗ್ಯಸಂಪನ್ನ

**ತೋದಕನು ತಾನಾಗಿ:**

'ತೋದಕ' ಎಂದರೆ ಪ್ರೇರಕ ಕುದುರೆಗೆ ಚಾಟಿ ಏಟು ಕೊಟ್ರೆ ಒಡನೆ ಅದು ಓಡಲು ತೊಡಗುತ್ತದೆ ಇಂದ್ರಿಯಗಳೂ ಕುದುರೆಗಳಂತೆ ಅವುಗಳನ್ನು ಓಡಿಸುವವನು ಜೀವ ಎಂದು ಪ್ರಸಿದ್ಧಿ ಆದರೆ ಇದು ಸುಳ್ಳು ಇಂದ್ರಿಯಗಳು ಅವನ ವಶದಲ್ಲಿ ಇಲ್ಲ ನಿಜವಾಗಿ ತೋದಕ, ಪ್ರೇರಕ ಶ್ರೀಹರಿಯೆ ಅವನ ದಿವ್ಯವಾದ ವಾಗಾದಿ ಇಂದ್ರಿಯಗಳಿಂದ ಇಂದ್ರಿಯಾಭಿಮಾನಿಗಳು ಹುಟ್ಟಿ ಜೀವರ ಇಂದ್ರಿಯಗಳಲ್ಲಿ ಇದ್ದು ಅಲ್ಲಿಯೆ ಇರುವ ಅವನ ವಾಗಾದಿ ಇಂದ್ರಿಯ

ರೂಪಗಳನ್ನು ಸೇವಿಸುತ್ತಾರೆ ಅವನಿಂದ ಜೀವರ ಇಂದ್ರಿಯಗಳ ನಿಯಮನಕ್ಕೆ ತಕ್ಕ ಪ್ರೇರಣೆ ಪಡೆಯುತ್ತಾರೆ

ಶ್ರೀಹರಿಯ ವಾಗಿಂದ್ರಿಯದಿಂದ ಪೃಥಿವ್ಯಭಿಮಾನಿ ಧರಾದೇವಿಯೂ ಅಗ್ನಿಯೂ ಜನಿಸಿದರು ಘ್ರಾಣೇಂದ್ರಿಯದಿಂದ ಅಂತರಿಕ್ಷಾಭಿಮಾನಿ ಗಣಪತಿಯೂ ವಾಯುದೇವನೂ ಹುಟ್ಟಿದರು ಚಕ್ಷುರಿಂದ್ರಿಯದಿಂದ ದ್ಯುಲೋಕಾಭಿಮಾನಿ ದೇವನೂ ಸೂರ್ಯನೂ ಹುಟ್ಟಿದರು ಶ್ರೋತ್ರೇಂದ್ರಿಯದಿಂದ ದಿಗಭಿಮಾನಿ ದೇವತೆಗಳೂ ಚಂದ್ರನೂ ಜನಿಸಿದರು ಮನಸ್ಸಿನಿಂದ ಜಲಾಭಿಮಾನಿಗಳೂ ವರುಣನೂ ಹುಟ್ಟಿದರು ಆದರಿಂದ ಅಗ್ನಿ ವಾಯು ಸೂರ್ಯ ಚಂದ್ರ ವರುಣರು ಜೀವರ ವಾಕ್, ಘ್ರಾಣ ಚಕ್ಷು ಶ್ರೋತ್ರ ಮನಸ್ಸುಗಳಲ್ಲಿ ನಿಂತು ಪ್ರೇರಿಸುತ್ತಾರೆ ಅವರಿಗೆ ಪ್ರೇರಕತ್ವಶಕ್ತಿ ನೀಡಿದವನು ವಾಕ್ ಘ್ರಾಣ ಚಕ್ಷು ಶ್ರೋತ್ರ ಮನಸ್ ಎಂದು ಕರೆಯಲ್ಪಡುವ ಬೇರೆ ಬೇರೆ ರೂಪಗಳುಳ್ಳ ಶ್ರೀಹರಿಯೆ ಆದರಿಂದ ಅವನು ತೋದಕ

**ಮನಮೊದಲಾದ ಕರಣದೊಳಿದ್ದು.**

ಅಗ್ನಿ ವಾಯು ಮುಂತಾದವರು ಮುಖದಲ್ಲಿ ರಸಭರಿತವಾದ ಅನ್ನವನ್ನೂ ಘ್ರಾಣದಲ್ಲಿ ಸುಗಂಧವನ್ನೂ, ಚಕ್ಷುಸ್ಸಿನಲ್ಲಿ ಉಜ್ವಲವಾದ ಬೆಳಕನ್ನೂ, ಶ್ರೋತ್ರೇಂದ್ರಿಯದಲ್ಲಿ ಮಧುರ ಧ್ವನಿಯನ್ನೂ, ಮನಸ್ಸಿನಲ್ಲಿ ಶ್ರದ್ಧಾಭಕ್ತಿಗಳನ್ನೂ ಶ್ರೀಹರಿಗೆ ಸಮರ್ಪಿಸುವುದರಿಂದ ಶ್ರೀಹರಿ ಮನ ಮೊದಲಾದ ಇಂದ್ರಿಯಗಳಲ್ಲಿಯೆ ಇದ್ದು ಆಯಾ ವಿಷಯ ಪದಾರ್ಥಗಳನ್ನು ಸ್ವೀಕರಿಸುತ್ತಾನೆ 'ಮುಖ ಮೊದಲಾದ' ಎನ್ನದೆ 'ಮನ ಮೊದಲಾದ' ಎಂದುದು ಇಂದ್ರಿಯಗಳಲ್ಲಿ ಮನವೆ ಪ್ರಧಾನ ಎಂಬ ಅಭಿಪ್ರಾಯದಿಂದ

**ನಿಜಪೂರ್ಣ ಸುಖಮಯ**

ಶ್ರೀಹರಿ ಆನಂದಮಯ ಅವನ ಆನಂದಕ್ಕೆ ಪಾರವೆ ಇಲ್ಲ ಅಪರಿಮಿತ. ಕಾಲದ ಮಿತಿಯೂ ಇಲ್ಲ ಅನಾದಿನಿತ್ಯ ಹೀಗಾಗಿ ಅದು ಪೂರ್ಣ ಎನಿಸುತ್ತದೆ ಆ ಆನಂದವೂ 'ನಿಜ' ಅಂದರೆ ಸ್ವರೂಪಭೂತ ತನ್ನ ಸ್ವರೂಪದಲ್ಲಿಯೆ ಇರುವಂಥದ್ದು. ಹೊರಗಿಂದ ಬರುವುದಲ್ಲ, ವಿಷಯಾನುಭವದಿಂದ ಲಭ್ಯವಾಗುವುದಲ್ಲ ಹೀಗೆ ಅನಾದಿ ನಿತ್ಯ ಅಪರಿಮಿತ ಸ್ವರೂಪಭೂತ ಆನಂದ ಸಾಗರನೆನಿಸಿದ ಶ್ರೀಹರಿ ವಿಷಯ ಸುಖವನ್ನು ಎಂದೂ ಬಯಸುವುದಿಲ್ಲ ಆದರೂ ವಿಷಯ ಪದಾರ್ಥಗಳನ್ನು ಹೊಂದುತ್ತಾನೆ ಭೋಗಿಸುತ್ತಾನೆ, ಅಂದರೆ ಅದರೊಳಗಿರುವ ಸ್ವಾತ್ಯುರಸವನ್ನು ಸವಿಯುತ್ತಾನೆ ಆಗ ವಿಷಯ ಪದಾರ್ಥ ಗ್ರಾಹ್ಯ ಅವನು ಗ್ರಾಹಕ ಎನಿಸುತ್ತಾನೆ ಇದೆಲ್ಲ ಲೀಲೆ

**ಗ್ರಾಹ್ಯ ಗ್ರಾಹಕನು**

ವಿಷಯ ಪದಾರ್ಥಗಳು ಗ್ರಾಹ್ಯವೆನಿಸುವವು ಇಂದ್ರಿಯಗಳೂ ಅವುಗಳ ಮೂಲಕ ಜೀವರೂ ಗ್ರಾಹಕರು ಎಂದು ಪ್ರಸಿದ್ಧಿ ಆದರೆ ಇದು ವಿಷಯ ಪದಾರ್ಥ ಇಂದ್ರಿಯ ಜೀವರುಗಳಲ್ಲಿ ಹರಿ ಪ್ರವಿಷ್ಟನಾದ್ದರಿಂದಲೆ ಸಾಧ್ಯವಾಗಿದೆ ಹರಿ ವಿಷಯ ಪದಾರ್ಥದಲ್ಲಿ ಪ್ರವಿಷ್ಟನಾಗಿ ಇಂದ್ರಿಯಗಳನ್ನೂ ಜೀವರನ್ನೂ ಆಕರ್ಷಿಸುವುದರಿಂದ ಅವು ಗ್ರಾಹ್ಯವೆನಿಸುತ್ತವೆ ಅವನಿಲ್ಲದಿದ್ದಲ್ಲಿ ಶವದಂತೆ ಅಸಹ್ಯವೆನಿಸುತ್ತವೆ, ಏನೂ ಆಕರ್ಷಣೆ ಇರುವುದಿಲ್ಲ 'ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋಽಭವತಿ ಆತ್ಮನಸ್ತು ಕಾಮಾಯ ಪತಿಃ ಪ್ರಿಯೋಽ ಭವತಿ' ಎಂದು ಮುಂತಾಗಿ ಬೃಹದಾರಣ್ಯಕೋಪನಿಷತ್ತು ಇದನ್ನು ವರ್ಣಿಸಿದೆ ಇದೇ ರೀತಿ ಇಂದ್ರಿಯಗಳಲ್ಲಿ 'ನಿಷುಸೀದ ಗಣಪತೇ ಗಣೇಷು' ಎಂಬಂತೆ ಅವನು ಇಲ್ಲದಿದ್ದರೆ ಇಂದ್ರಿಯಗಳ ಗ್ರಾಹಕತ್ವಶಕ್ತಿ ವ್ಯಕ್ತವಾಗದು ಜೀವರಲ್ಲಿಯೂ,

> ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ
> ವಿಮೂಢಾ ನಾನು ಪಶ್ಯಂತಿ ಪಶ್ಯಂತಿ ಜ್ಞಾನ ಚಕ್ಷುಷಃ।

ಎಂದು ಭಗವದ್ಗೀತೆ ಹೇಳುವಂತೆ ಹರಿ ವಿಷಯ ಸುಖಗ್ರಾಹಕನಾಗಿದ್ದು ಜೀವರ ಗ್ರಾಹಕತ್ವ ಶಕ್ತಿ ವ್ಯಕ್ತ ಮಾಡುತ್ತಾನೆ ಉಂಡು ಉಣಿಸುತ್ತಾನೆ, ಶ್ರೀಹರಿ

**ತಿಳಿಯದವನೋಽಪಾದಿ ಭುಂಜಿಸುತ**

ಇಂದ್ರಿಯಾಭಿಮಾನಿ ದೇವತೆಗಳಲ್ಲಿಯೂ ಪ್ರೇರಕನಾಗಿ ನಿಂತು ಅವರ ಮೂಲಕ ವಿಷಯ ಪದಾರ್ಥಗಳನ್ನು ಇಂದ್ರಿಯಾಂತರ್ಗತನಾದ ಹರಿ ತರಿಸಿಕೊಳ್ಳುತ್ತಾನೆ ಆದರೆ ಮೇಲುನೋಟಕ್ಕೆ ದೇವತೆಗಳೆ ತಂದು ಕೊಡುತ್ತಾರೆ, ಹರಿ ಏನೂ ತಿಳಿಯದವನಂತೆ ಅವರು ತಂದುಕೊಡುವ ಆ ಪದಾರ್ಥಗಳನ್ನು ಉಣ್ಣುತ್ತಾನೆ ತಂದೆಯನ್ನು ಮಕ್ಕಳು ಸೇವಿಸುವಂತೆ ಇದು ಉದಾ ಹರಿಯ ವಾಗಿಂದ್ರಿಯದಿಂದ ಹುಟ್ಟಿದ ಅಗ್ನಿ ಅಲ್ಲಿಯೆ ಇದ್ದು ಅಲ್ಲಿಯೆ ಮುಖದಲ್ಲಿ ಹುಟ್ಟಿದ ಪೃಥಿವಿಯಿಂದ ಆಹಾರ ಪದಾರ್ಥಗಳನ್ನು ತನ್ನಿ ತನ್ನಿ ಎನ್ನುತ್ತ ತರಿಸುತ್ತಾನೆ ತನ್ನಿ, ಇನ್ನೂ ತನ್ನಿ, ನಾನು ಪಾಕ ಮಾಡಿ ನನ್ನ ತಂದೆಯಾದ 'ವಾಕ್' ನಾಮಕ ಹರಿಗೆ ಉಣಿಸುತ್ತೇನೆ ಎನ್ನುತ್ತಾನೆ ಬಂದ ಆಹಾರ ಪದಾರ್ಥಗಳನ್ನು ಮುಖದಲ್ಲಿಯೆ ಚೆನ್ನಾಗಿ ಪಚನ ಮಾಡಿ ರುಚಿಕರವಾಗುವಂತೆ ಮಾಡಿ ತನ್ನ ತಂದೆಯಾದ ವಾಕ್ ನಾಮಕ ಹರಿಗೆ ಭಕ್ತಿಯಿಂದ ಸಮರ್ಪಿಸುತ್ತಾನೆ ಪ್ರತಿಯೊಬ್ಬ ಜೀವನ ಶರೀರದಲ್ಲಿಯೂ ಈ ಅನ್ನಾರಾಧನೆ ಹೀಗೇ ನಡೆಯುತ್ತದೆ ವಸ್ತುತಃ ಅಗ್ನಿಯಲ್ಲಿ ಪ್ರೇರಕನಾಗಿ ಕುಳಿತು ತನಗೆ ತಾನೇ ಅನ್ನಪಚನ ಮಾಡಿ ಉಣಿಸುವವನು ಹರಿಯೆ ಆದರೂ

ಏನೂ ಅರಿಯದವನಂತೆ ಇದ್ದು ತನ್ನ ಬಳಿಗೆ ಬಂದ ಅನ್ನವನು ಉಂಡು ಸವಿಯುತ್ತಾನೆ ಇದು ಲೀಲೆ

**ಆಹ್ಲಾದ ಬಡುವನು:**

ಹುಟ್ಟಿದವನು ಸಾಯದೆ ಇನ್ನೊಮ್ಮೆ ಹುಟ್ಟುವುದಿಲ್ಲ ಸತ್ತವನು ಹುಟ್ಟದೆ ಇನ್ನೊಮ್ಮೆ ಸಾಯುವುದಿಲ್ಲ ಹಾಗೇ ಆನಂದವಿಲ್ಲದವನು ಭೋಜನದಿಂದ ಆನಂದ ಹೊಂದಬಲ್ಲ ಮೊದಲೆ ಭೋಜನದಿಂದ ಆನಂದ ತೃಪ್ತಿಗಳನ್ನು ಹೊಂದಿರುವವನು ತಿರುಗಿ ಭೋಜನದಿಂದ ಆನಂದ ಪಡಲಾರ ಆದರೆ ಅಚಿಂತ್ಯ ಶಕ್ತಿ ಉಳ್ಳ ಹರಿಗೆ ಈ ಯಾವ ನಿಯಮವೂ ಹತ್ತುವುದಿಲ್ಲ ಅವನು ಸದಾಪೂರ್ಣವಾದ ಭೋಜನದ ಆನಂದಾನುಭವ ಉಳ್ಳವನೆ ಆದರೂ ಭೋಜನದಿಂದ ಆನಂದಪಡುತ್ತಾನೆ ಇದು ಲೀಲೆ

**ಭಕ್ತವತ್ಸಲ.**

ಈ ಎಲ್ಲ ಲೀಲೆಗಳು ಏಕೆ? ಪೂರ್ಣಾನಂದನಾಗಿರುವವನು ಸುಮ್ಮನೆ ತನ್ನೊಳಗಿರುವ ಆನಂದವನ್ನು ಸವಿಯುತ್ತಿರಬಾರದೆ? ಪ್ರೇರಕನಾಗಿ ವಿಷಯ ಪದಾರ್ಥಗಳಲ್ಲಿ ಇಂದ್ರಿಯ ಇಂದ್ರಿಯಾಭಿಮಾನಿಗಳಲ್ಲಿ ಜೀವರಲ್ಲಿ ಇದ್ದು ಏನೂ ತಿಳಿಯದವನಂತೆ ವಿಷಯ ಸುಖ ಪಡೆದು ಅನುಭವಿಸುವುದೇಕೆ? ಎಂದರೆ, ಆತ ಭಕ್ತವತ್ಸಲ ಬಿಂಬನಾದ್ದರಿಂದ ಪ್ರತಿಬಿಂಬರಾದ ಭಕ್ತರಿಗೆ ಭೋಜನದ ಸುಖ ಉಣಿಸುವ ಉದ್ದೇಶದಿಂದಲೆ ಆತ ಉಣ್ಣುತ್ತಾನೆ ನಾವು ನಡೆದರೆ ನಮ್ಮ ನೆರಳೂ ನಡೆಯುವಂತೆ ಹರಿ ಉಂಡರೆ ನಾವೂ ಉಣಬಲ್ಲೆವು ಎಂದು

***ಭಾಗ್ಯಸಂಪನ್ನ*·**

ನಿಗಮಗೋಚರ ಪುರಂದರ ವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯ ಉಂಟೆ?

ಎಂದು ಪುರಂದರದಾಸರು ಹೇಳುವಂತೆ ಭಕ್ತವಾತ್ಸಲ್ಯದಿಂದ ರಮಾಬ್ರಹ್ಮಾದಿಗಳನ್ನು ಪರಿವಾರವಾಗಿ ಮಾಡಿಕೊಂಡು ಅವರಿಂದ ಸೇವೆ ಸ್ವೀಕರಿಸುತ್ತ ಭಾಗ್ಯವಂತನೆನಿಸಿಕೊಂಡವ ಶ್ರೀಹರಿ-

ದೊರೆಯತನದಲಿ ನೋಡೆ ಧರಣಿ ದೇವಿಯ ರಮಣ
ಸಿರಿಯತನದಲಿ ನೋಡೆ ಶ್ರೀಕಾಂತನು
ಹಿರಿಯತನದಲಿ ನೋಡೆ ನರಸಿಜೋದ್ಭವನಯ್ಯ ॥

**ವೇದವೇದ್ಯನು**

ವೇದವೆಂದರೆ ಸಂಹಿತಾ ಬ್ರಾಹ್ಮಣ ಆರಣ್ಯಕ ಉಪನಿಷತ್ತುಗಳೆಂದು ನಾಲ್ಕು ಭಾಗವಾಗಿರುವ ಸಮಗ್ರ ವೈದಿಕ ವಾಙ್ಮಯ

ನಿಷುಸೀದ ಗಣಪತೇ ಗಣೇಷು ಚಿತ್ರಮರ್ಚ।

ಎಂದು ಋಗ್ವೇದ ಸಂಹಿತೆಯಲ್ಲಿ 'ಇಂದ್ರಿಯಗಣಗಳಲ್ಲಿದ್ದು ನಿನ್ನನ್ನು ನೀನೆ ಉಪಚರಿಸಿಕೊಳ್ಳು' ಎಂದು ಪ್ರಾರ್ಥಿಸುವ ಮಂತ್ರವಿದೆ 'ಮನ ಮೊದಲಾದ ಕರಣದೊಳಿದ್ದು ವಿಷಯವನೈದುವನು' ಎನ್ನುವುದು ಈ ಮಂತ್ರಕ್ಕೆ ಭಾಷ್ಯದಂತಿದೆ

ಐತರೇಯೋಪನಿಷತ್ತಿನಲ್ಲಿ-

ಅಥಾತೋ ವಿಭೂತಯೋऽಸ್ಯ ಪುರುಷಸ್ಯ।
ತಸ್ಯ ವಾಚಾ ಸೃಷ್ಟೌ ಪೃಥಿವೀ ಚಾಗ್ನಿಶ್ಚ।

ಎಂದು ಮುಂತಾಗಿ ಇಂದ್ರಿಯಗಳಲ್ಲಿ ಭುಂಜಿಸುತೆಲ್ಲರೊಳಗಾಹ್ಲಾದ ಬಡುವ ಹರಿಯ ವರ್ಣನೆ ಬರುತ್ತದೆ-

ವಿಷ್ಣುವಿನ ಮುಖ ಮತ್ತು ವಾಗಿಂದ್ರಿಯಗಳಿಂದ ಪೃಥಿವಿ ಅಗ್ನಿಗಳು ಹುಟ್ಟಿದರು ಪೃಥಿವಿಯಲ್ಲಿ ಬೆಳೆಯುವ ಆಹಾರ ಪದಾರ್ಥಗಳನ್ನು ಅಗ್ನಿ ಪಾಕ ಮಾಡಿ ರುಚಿಕರವಾಗಿ ಮಾಡುತ್ತಾನೆ 'ಇನ್ನೂ ತನ್ನಿ, ಇನ್ನೂ ತನ್ನಿ, ಪಾಕಮಾಡಿ ಹರಿಗೆ ಅರ್ಪಿಸುತ್ತೇನೆ' ಎನ್ನುತ್ತಾನೆ ಪಾಕ ಮಾಡಿ ತಂದೆಯಾದ 'ವಾಕ್' ನಾಮಕ ಹರಿಗೆ ಸಮರ್ಪಿಸಿ ಉಪಚರಿಸುತ್ತಾನೆ

ಘ್ರಾಣೇಂದ್ರಿಯ ಪ್ರಾಣವಾಯುಗಳಿಂದ ಅಂತರಿಕ್ಷಾಭಿಮಾನಿ ಗಣಪತಿ ಭೂತ ವಾಯು ಮುಖ್ಯವಾಯುಗಳು ಹುಟ್ಟಿದರು ವಿಷ್ಣು ಪ್ರೀತ್ಯರ್ಥ ಕರ್ಮ ಮಾಡಲೆಂದು ಗಣಪತಿ ಅವಕಾಶ ಕೊಡುತ್ತಾನೆ ವಿಷ್ಣು ಪೂಜಾಕರ್ಮ ಸಾಮರ್ಥ್ಯವನ್ನು ವೇದಪರನ ಶ್ರವಣಾದಿಗಳನ್ನು ಉಂಟು ಮಾಡುತ್ತಾನೆ ಭೂತವಾಯು ಘ್ರಾಣೇಂದ್ರಿಯದಲ್ಲಿರುವ ಘ್ರಾಣನಾಮಕ ಹರಿಗೆ ಸುಗಂಧ ಸಮರ್ಪಿಸುತ್ತಾನೆ ಮುಖ್ಯವಾಯು ಇವೆಲ್ಲಕ್ಕೂ ಆವಶ್ಯಕವಾದ ಶ್ರದ್ಧಾಭಕ್ತಿಯ ಮನೋಭಾವ ಉಂಟು ಮಾಡಿ ಶ್ರದ್ಧೆಯ ಭಕ್ತಿಯ ರಸವನ್ನು ಹರಿಗೆ ಅರ್ಪಿಸುತ್ತಾನೆ

ಹೀಗೆ ಇಂದ್ರಿಯಗಣ ನಾಯಕನಾದ ಹರಿಯ ಭಾಗ್ಯವನ್ನು ವೇದ ಮುಕ್ತಕಂಠದಿಂದ ಹೊಗಳುತ್ತದೆ

**ನಿತ್ಯ ನಿಗಮಾತೀತ ನಿರ್ಗುಣ**
**ಭೃತ್ಯವತ್ಸಲ ಭಯವಿನಾಶನ**
**ಸತ್ಯಕಾಮ ಶರಣ್ಯ ಶಾಮಲ ಕೋಮಲಾಂಗ ಸುಖಿ ।**
**ಮತ್ತನಂದದಿ ಮರ್ತ್ಯರೊಳಹೊರ-**
**ಗೆತ್ತ ನೋಡಲು ಸುತ್ತುತಿಪ್ಪನು**
**ಅತ್ಯಧಿಕ ಸಂತೃಪ್ತ ತ್ರಿಜಗದ್‌ವ್ಯಾಪ್ತ ಪರಮಾಪ್ತ ॥ ೧೭ ॥**

ಶ್ರೀಹರಿ ನಿತ್ಯ, ವೇದಗಳಿಗೂ ಪೂರ್ತಿ ನಿಲುಕದವ, ಗುಣತ್ರಯರಹಿತ, ಭಕ್ತವತ್ಸಲ, ಭಯನಿವಾರಣ, ಬಯಸಿದುದನ್ನೆಲ್ಲಪಡೆಯಬಲ್ಲವ, ಸರ್ವರಕ್ಷಕ, ನೀಲಕೋಮಲಾಂಗ, ಸುಖಶಾಲಿ, ಮತ್ತನಂತೆ ಮರ್ತ್ಯರ ಒಳಗೆ ಹೊರಗೆ ಎಲ್ಲಿ ನೋಡಿದರೂ ಸುತ್ತುತ್ತಿರುವ, ಅತ್ಯಧಿಕ ಆನಂದದಿಂದ ಸಂತೃಪ್ತ, ಮೂಲೋಕಗಳಲ್ಲಿ ವ್ಯಾಪ್ತ, ಪರಮ ಆಪ್ತ

**ನಿತ್ಯ**

ನಿತ್ಯ ಎಂದರೆ ಎಲ್ಲ ಕಾಲಗಳಲ್ಲಿ ಇರುವವ, ಸರ್ವಕಾಲವ್ಯಾಪ್ತ ವ್ಯಾಪ್ತಿಸಂಧಿಯಲ್ಲಿ ಭಗವಂತನ ಸರ್ವದೇಶವ್ಯಾಪ್ತಿಯಂತೆ ಸರ್ವಕಾಲವ್ಯಾಪ್ತಿಯನ್ನೂ ಸರ್ವಗುಣವ್ಯಾಪ್ತಿಯನ್ನೂ ಹೇಳುವುದು ಸಂಗತವಾಗುತ್ತದೆ ಅದರಿಂದ ಈ ಪದ್ಯದಲ್ಲಿ ಮೂರನ್ನೂ ಹೇಳುತ್ತಿದ್ದಾರೆ

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ

ಎಂದು ಕಠೋಪನಿಷತ್ತು ಹೇಳುವಂತೆ ನಿತ್ಯಪದಾರ್ಥ ನಿತ್ಯವಾಗಿರುವುದು ಹರಿಯ ಅಧೀನ ಅದರಿಂದ ಅವನು ನಿತ್ಯ ಮಾತ್ರವೆ ಅಲ್ಲ, ನಿತ್ಯಗಳಿಗೆ ನಿತ್ಯ ನಿತ್ಯ ಪದಾರ್ಥಗಳು ನಿತ್ಯವಾದ ಕಾಲಪ್ರವಾಹದಲ್ಲಿಇವೆ ಕಾಲಪ್ರವಾಹ ಅವುಗಳಿಗೆ ಆಧಾರ ಹರಿಯೂ ಕಾಲ-ಪ್ರವಾಹದಲ್ಲಿದ್ದಾನೆ, ಆದರೆ ಅದು ಅವನಿಗೆ ಆಧಾರವಲ್ಲ ಅವನೆ ಅದಕ್ಕೆ ಆಧಾರ ಅದರಿಂದ ಕಾಲಪ್ರವಾಹದ ಪ್ರಭಾವವಾದ ಜರಾಮರಣಾದಿಗಳು ಅವನನ್ನು ಬಾಧಿಸುವುದಿಲ್ಲ ನಿತ್ಯ ತರುಣನಾಗಿರುತ್ತಾನೆ ಕಾಲಪ್ರವಾಹದಲ್ಲಿಸಿಲುಕಿದ ಜಡಪದಾರ್ಥಗಳಂತೆ ಸ್ವರೂಪನಾಶ ಹೊಂದುವುದಿಲ್ಲ ಸಂಸಾರಿ ಚೇತನರಂತೆ ಶರೀರನಾಶವನ್ನು ಹೊಂದುವುದಿಲ್ಲ ಹೀಗೆ ನಾಲ್ಕು ಬಗೆಯ ನಾಶಗಳೂ ಇಲ್ಲದಿರುವುದರಿಂದ ಅವನು ನಿತ್ಯ ಲಕ್ಷ್ಮೀಬ್ರಹ್ಮಾದಿಗಳಲ್ಲಿ ಯಾವುದಾದರೊಂದು ಬಗೆಯ ನಾಶವಿದ್ದೇ ಇರುತ್ತದೆ ಶ್ರೀಹರಿ ವಿಷ್ಣುಸಹಸ್ರನಾಮಸ್ತೋತ್ರ ಹೇಳುವಂತೆ, 'ಅಮೃತಃ ಶಾಶ್ವತಃ ಸ್ಥಾಣುಃ' 'ಅನೀಶಃ ಶಾಶ್ವತಃ ಸ್ಥಿರಃ' ಸದಾ ಒಂದೇ ರೀತಿ-ಯಾಗಿದ್ದು ನಾಶರಹಿತನಾಗಿರುತ್ತಾನೆ

**ನಿಗಮಾತೀತ**

ಶಬ್ದಾತಿಗಃ ಶಬ್ದಸಹಃ ಶಿಶಿರಃ ಶರ್ವರೀಕರಃ

ಎಂದು ವಿಷ್ಣುಸಹಸ್ರನಾಮಸ್ತೋತ್ರ ಹೇಳುವಂತೆ ವಿಷ್ಣುವಿನ ಮಹಿಮೆ ಅಪಾರವಾಗಿದ್ದು ಅನಂತ ವೇದಗಳೂ ಕೂಡ ಅದನ್ನು ಪೂರ್ತಿ ಹೇಳಲು ಶಕ್ತವಾಗಲಾರವು

ಏತಾವಾನಸ್ಯ ಮಹಿಮಾ? ಅತೋ ಜ್ಯಾಯಾಂಶ್ಚ ಪೂರುಷಃ?

ಹರಿಯ ಮಹಿಮೆ ಇಷ್ಟೆಯೆ? ಇನ್ನೂ ಇದೆ ಹೇಳಿ ಮುಗಿಸಲು ಶಬ್ದಗಳು ಸಾಲವು ಎನ್ನುತ್ತದೆ ಪುರುಷಸೂಕ್ತ

'ಯತೋ ವಾಚೋ ನಿವರ್ತಂತೇ' 'ಅಪ್ರಾಪ್ಯ ಮನಸಾ ಸಹ'

'ಭಗವಂತನ ಮಹಿಮೆ- ಗಳ ಎಲ್ಲೆ ಮಾತಿಗೂ ಮನಸಿಗೂ ನಿಲುಕದುದು' ಎಂದು ತೈತ್ತಿರೀಯೋಪನಿಷತ್ತೂ ಸಾರುತ್ತಿದೆ

ಆದರಿಂದ ಭಗವಂತನ ಗುಣವ್ಯಾಪ್ತಿಗೆ ಸೀಮೆ ಇಲ್ಲ ಅನಂತವಾದ ದೇಶಕಾಲಗುಣ-ವ್ಯಾಪ್ತಿಗಳೆ ಅವನ ಲಕ್ಷಣ ಬೇರೆ ಯಾರಲ್ಲಿಯೂ ಅದು ಇಲ್ಲ ದೇಶಕಾಲವ್ಯಾಪ್ತಿಗಳಾದರೂ ಕಾಲಾಕಾಶಾದಿಗಳಲ್ಲಿರಬಹುದು, ಗುಣವ್ಯಾಪ್ತಿಯೂ ಲಕ್ಷ್ಮೀಬ್ರಹ್ಮಾದಿಗಳಲ್ಲಿರಬಹುದು, ಆದರೆ ಇವು ಭಗವಂತನಲ್ಲಿರುವ ಮೂರು ವ್ಯಾಪ್ತಿಗಳ ಮುಂದೆ ಏನೂ ಅಲ್ಲ ಆದರಿಂದ ವೇದಗಳು ಅವನ್ನು ಕೊಂಡಾಡಲು ತೊಡಗಿ ಕೊನೆಗಾಣದೆ 'ಇನ್ನೂ ಇದೆ!' ಎನ್ನುತ್ತ ಸುಮ್ಮನಾಗುತ್ತವೆ

ವೇದಗಳು ವಸ್ತುತಃ ಭಗವಂತನ ಮಾತುಗಳೆ ಭಗವಂತನೆ ತನ್ನ ಮಹಿಮೆಗಳನ್ನು ಕೊಂಡಾಡಿ ಕೊಂಡಾಡಿ ಶಬ್ದಗಳು ಸಾಲದೆ ಸುಮ್ಮನಾಗುತ್ತಾನೆ ಅಮಿತಶಕ್ತನಾದ ಆತ ತನ್ನ ಶಕ್ತಿಯನ್ನು ಪೂರ್ತಿ ಹೇಳಿದನೆಂದರೆ ಶಕ್ತಿ ಇಂತಿಷ್ಟೆ ಎಂದು ಮಿತಿಯೆ ಬಂದೀತು ಅಮಿತ-ಶಕ್ತನೆನ್ನುವುದೇ ಅರ್ಥಶೂನ್ಯವಾದೀತು

*ನಿರ್ಗುಣ*

ಗುಣಭೃನ್ನಿರ್ಗುಣೋ ಮಹಾನ್

ಎಂದು ವಿಷ್ಣುಸಹಸ್ರನಾಮಸ್ತೋತ್ರ ಹೇಳುವಂತೆ ಭಗವಂತ ನಿರ್ಗುಣ ಅದ್ವೈತಿಗಳು ಹೇಳುವಂತೆ ನಿರ್ಗುಣನಲ್ಲ ಜ್ಞಾನಾನಂದಾದಿ ಗುಣಗಳೂ ಇಲ್ಲವೆಂದಲ್ಲ ಪ್ರಕೃತಿಯ ಸತ್ವರಜಸ್ತಮೋಗುಣಗಳು ಅವನಲ್ಲಿಲ್ಲ ಎಂಬ ಅರ್ಥದಲ್ಲಿ ಅವನು ನಿರ್ಗುಣ

ಏಕೋ ದೇವಃ ಸರ್ವಭೂತೇಷು ಗೂಢಃ
ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ
ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥

ಎಂದು ಶ್ವೇತಾಶ್ವತರೋಪನಿಷತ್ತು ಹೇಳಿದೆ ಇಲ್ಲಿ ನಿರ್ಗುಣ ಎಂದರೆ, ಯಾವ ಗುಣವೂ ಇಲ್ಲದವನೆಂದಿಟ್ಟುಕೊಂಡರೆ, 'ಸ್ವತಂತ್ರನಾದ ದೇವ, ಎಲ್ಲರೊಳಗೆ ನಿಗೂಢವಾಗಿ ನೆಲೆಸಿದವ, ಸರ್ವವ್ಯಾಪಿ, ಎಲ್ಲರ ಅಂತರ್ಯಾಮಿ, ಕರ್ಮಾಧಿಪತಿ, ಎಲ್ಲರಿಗೆ ಆಶ್ರಯ, ಎಲ್ಲರ ಎಲ್ಲ ಕರ್ಮಗಳಿಗೆ ಸಾಕ್ಷಿ, ಅದ್ವಿತೀಯ, ಸರ್ವಜ್ಞ ಎಂದು ಪುನಃಪುನಃ ಗುಣಗಳನ್ನು

ಕೊಂಡಾಡಿ 'ನಿರ್ಗುಣಃ' ಈ ಗುಣಗಳೆಲ್ಲವೂ ಸುಳ್ಳು ಎಂದು ಕೊನೆಗೆ ಹೇಳಿದರೆ ವೇದದ ಮಾತುಗಳಿಗೆ ಏನು ಬೆಲೆ ಇದ್ದೀತು? ಸುಳ್ಳೇ ಆದರೆ ಆ ಗುಣಗಳನ್ನು ಏಕೆ ಹೇಳಬೇಕು? ಆದರಿಂದ ನಿರ್ಗುಣ ಎಂದರೆ ತ್ರಿಗುಣವರ್ಜಿತ ಎಂಬುದೊಂದು ದೊಡ್ಡ ಗುಣ, ಭಗವಂತನಲ್ಲಿಯೆ ಇರುವಂಥದ್ದು ಬ್ರಹ್ಮಾದಿಗಳಲ್ಲಿ ಯಾರಲ್ಲಿಯೂ ಇಲ್ಲ ಸರ್ವವ್ಯಾಪಿ ಸರ್ವಭೂತಾಂತರಾತ್ಮನಾದರೂ ನಿರ್ಗುಣ, ಗುಣತ್ರಯರಹಿತ ಎನ್ನುವುದು ಸರ್ವಶಕ್ತನಾದ ಭಗವಂತನಲ್ಲಿ ಮಾತ್ರ ಶಕ್ಯ ಇಲ್ಲದಿದ್ದರೆ ಸರ್ವವಸ್ತುಗಳು ತ್ರಿಗುಣಮಯ, ಎಲ್ಲರ ಹೃದಯಗಳೂ ತ್ರಿಗುಣಬದ್ಧವಾಗಿರುವಾಗ ಅಲ್ಲಿರುವ ಭಗವಂತನಿಗೆ ಗುಣತ್ರಯಸಂಬಂಧವಾಗದೆ ಇದ್ದೀತೆ?

ತ್ರಿಮೂರ್ತಿಗಳು ತ್ರಿಗುಣಪ್ರವರ್ತಕರು, ವಿಷ್ಣು ಸತ್ವಗುಣಕ್ಕೆ ಪ್ರವರ್ತಕ ಎಂದಮೇಲೆ ವಿಷ್ಣುವಿಗೆ ಸತ್ವಗುಣಸಂಬಂಧ, ಬ್ರಹ್ಮನಿಗೆ ರಜೋಗುಣಸಂಬಂಧ, ರುದ್ರನಿಗೆ ತಮೋಗುಣಸಂಬಂಧವನ್ನು ಹೇಳಬೇಕು ತಾನೆ? ನಿಜ ಆದರೆ, ಬ್ರಹ್ಮರುದ್ರರು ಸ್ವತಃ ರಜಸ್ತಮೋಗುಣಗಳಿಂದ ಬದ್ಧರೇ ಆಗಿದ್ದು ತಮ್ಮೊಳಗೆ ನಿಯಾಮಕನಾಗಿ ನಿಂತಿರುವ ವಿಷ್ಣುವಿನ ಬಲದಿಂದ ಆ ಗುಣಗಳನ್ನು ಆಳುತ್ತಾರೆ ವಿಷ್ಣು ಸತ್ವಗುಣದಿಂದ ಬದ್ಧನಾಗದೆ ಸ್ವಶಕ್ತಿಯಿಂದ ಅದನ್ನು ಆಳುತ್ತಾನೆ ಆದರಿಂದ ಸತ್ವಗುಣಸಂಬಂಧವಿದ್ದೂ ಆತ ನಿರ್ಗುಣನೆನಿಸಿದ್ದಾನೆ 'ಗುಣಭೃನ್ನಿರ್ಗುಣೋ ಮಹಾನ್' ಎಂದು ವಿಷ್ಣುಸಹಸ್ರನಾಮಸ್ತೋತ್ರ ಹಾಗೇ ಹೇಳುತ್ತದೆ ಗುಣಗಳನ್ನು ಆಳುವುದಕ್ಕಾಗಿ ಅವುಗಳನ್ನು ತನ್ನಲ್ಲಿಟ್ಟುಕೊಂಡು 'ಗುಣಭೃತ್' ಎನಿಸಿಯೆ ಆ ಗುಣಗಳ ಪ್ರಭಾವಕ್ಕೊಳಗಾಗದೆ ನಿರ್ಗುಣನೆನಿಸಿ ಮಹಾನ್ ಎನಿಸಿದ್ದಾನೆ ಎಂದು

### ಭೃತ್ಯವತ್ಸಲ

ಹೀಗೆ ಗುಣತ್ರಯರಹಿತನಾದ ಹರಿಗೆ ಭೃತ್ಯರಿಂದೇನಾಗಬೇಕಿಲ್ಲ ಗುಣತ್ರಯಬದ್ಧರಿಗೆ ಮಾತ್ರ ಗುಣಮಯವಾದ ಪ್ರಾಕೃತಶರೀರವಿದ್ದು ಶರೀರಕ್ಕೆ ಅನುಕೂಲರಾದವರಲ್ಲಿ ಪ್ರೀತಿ, ವಾತ್ಸಲ್ಯ, ಪ್ರತಿಕೂಲರಲ್ಲಿ ಕೋಪತಾಪಗಳು ಸಹಜ ಅಪ್ರಾಕೃತ ಶರೀರಿಯಾದ ಭಗವಂತನ ಶರೀರಕ್ಕೆ ಉಪಕಾರ ಅಪಕಾರಗಳಿಲ್ಲ, ಅನುಕೂಲಪ್ರತಿಕೂಲರಿಲ್ಲ, ಆದರೂ ಭೃತ್ಯರಲ್ಲಿ ಭಕ್ತರಲ್ಲಿ ಭಗವಂತ ಪ್ರೀತಿವಾತ್ಸಲ್ಯ ತೋರುತ್ತಾನೆ ಅದು ಅವನ ದೊಡ್ಡ ಗುಣ, ಸ್ವಭಾವಸಹಜವಾದ ಸದ್ಗುಣ ಆದರಿಂದ ವಿಷ್ಣುಸಹಸ್ರನಾಮಸ್ತೋತ್ರ ಹೇಳುತ್ತದೆ—

ಮಾಧವೋ ಭಕ್ತವತ್ಸಲಃ

### ಭಯವಿನಾಶನ

ಜೀವರಿಗೆ ಸಂಸಾರದಲ್ಲಿ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂದು ಮೂರು ಬಗೆಯ ಭಯ ತಪ್ಪಿದ್ದಲ್ಲ ಅವನ್ನು ಕೊಡುವವನೂ ಭಗವಂತನೆ ಕಳೆಯುವವನೂ ಭಗವಂತನೆ ಕೊಟ್ಟು ಎಚ್ಚರಿಸಿ ಮೋಕ್ಷಸಾಧನ ಮಾಡಿಸುತ್ತಾನೆ ತಡೆಯಲಾರದೆ ದೈನ್ಯದಿಂದ ಕೂಗಿ ಕರೆದರೆ ಒಡನೆ ಬಂದು ಪರಿಹರಿಸುತ್ತಾನೆ

ಕಡೆಯಲ್ಲಿ ಮೋಕ್ಷವಿತ್ತು ಎಲ್ಲ ಭಯಗಳನ್ನು ಶಾಶ್ವತವಾಗಿ ಪರಿಹರಿಸುತ್ತಾನೆ ಇದನ್ನೂ ವಿಷ್ಣುಸಹಸ್ರನಾಮಸ್ತೋತ್ರ ಹೇಳುತ್ತದೆ

ಭಯಕೃದ್ ಭಯನಾಶನಃ

*ಸತ್ಯಕಾಮ*

ತನಗೂ ತನ್ನ ಭಕ್ತರಿಗೂ ಸಂಸಾರಭಯವಿರಕೂಡದೆಂದೇ ಭಗವಂತನ ಬಯಕೆ ಈ ಬಯಕೆ ಎಲ್ಲ ದೇವತೆಗಳಿಗೂ ಇದೆ ಆದರೆ ಅವರು ಅದನ್ನು ಈಡೇರಿಸಿಕೊಳ್ಳಲು ಭಗವಂತನ ಮೊರೆ ಹೋಗುತ್ತಾರೆ ಭಗವಂತ ತಾನೇ ಈಡೇರಿಸಿಕೊಳ್ಳುತ್ತಾನೆ ಅದರಿಂದ ಅವನು ಸತ್ಯಕಾಮ, ಕಾಮನೆಯನ್ನು ಈಡೇರಿಸಿಕೊಳ್ಳುವಲ್ಲಿ ಸಮರ್ಥ, ಸ್ವತಂತ್ರ ಇದನ್ನೂ ವಿಷ್ಣುಸಹಸ್ರನಾಮಸ್ತೋತ್ರ ಹೇಳಿದೆ—

ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ ।

*ಶರಣ್ಯ*

ಶರಣುಹೊಂದಲು ಯೋಗ್ಯ ವಿಷ್ಣುಚಕ್ರ ಬೆನ್ನಟ್ಟಿ ಬಂದಾಗ ದುರ್ವಾಸಮುನಿ ಎಲ್ಲಿಯೂ ರಕ್ಷಕರನ್ನು ಕಾಣದೆ ವಿಷ್ಣುಭಕ್ತ ಅಂಬರೀಷ ರಾಜನನ್ನೆ ಶರಣು ಹೊಂದಬೇಕಾಯಿತು ತನ್ನ ಭಕ್ತನ ಮೂಲಕ ವಿಷ್ಣು ಮುನಿಗೆ ಅಭಯ ನೀಡಿದ ಸುಖ ನೀಡಿದ ಸುರೇಶನಾದ ಹರಿಯೆ ಶರಣಾಗತನಿಗೆ ಸುಖನೀಡಬಲ್ಲ ಹೊರತು ಇನ್ನಾರೂ ಅಲ್ಲ ವಿಷ್ಣುಸಹಸ್ರನಾಮಸ್ತೋತ್ರ ಇದನ್ನೂ ಹೇಳುತ್ತದೆ—

ಸುರೇಶಃ ಶರಣಂ ಶರ್ಮ

*ಶ್ಯಾಮಲ ಕೋಮಲಾಂಗ ಸುಖಿ*

ಎಲ್ಲರ ಭಯಪರಿಹಾರ ಮಾಡಿ ರಕ್ಷಣೆ ನೀಡುವ ನರಸಿಂಹನ ವಜ್ರಕಾಯ ಬಲು ಕಠಿನ ಅಭೇದ್ಯವಾದ ಅಸುರನೆದೆ ಬಗಿವ ಅವನ ಉಗುರೂ ವಜ್ರಾಯುಧಸಮಾನವಿರಬೇಕು ಎಂದು ಊಹಿಸಿದರೆ ತಪ್ಪಿಲ್ಲ ಆದರೂ ಅಚಿಂತ್ಯ ಶಕ್ತಿಯಿಂದ ಅವನ ಶರೀರ ಹೂವಿನಂತೆ ಕೋಮಲವೂ ಹೌದು ನೈದಿಲೆಯಂತೆ ನೀಲವಾಗಿ ಕೋಮಲವಾಗಿ ಹೊಳೆವ ದಿವ್ಯಶರೀರ ಆತನದು. ಕಾಠಿನ್ಯದ ಪರಮಾವಧಿಯ ಜೊತೆಗೇ ಮಾರ್ದವದ ಪರಮಾವಧಿಯೂ ಅಲ್ಲಿ ಇದೆ ಕೋಮಲಾಂಗವೆ ಹೇಳುತ್ತದೆ, ಅವನು ಸುಖಿ ಎಂದು ಶ್ರಮಜೀವಿಗಳ ಮೈ ಕಠಿನ, ಸುಖಜೀವಿಗಳ ಮೈ ಕೋಮಲ ಹರಿಗೆ ಇಚ್ಛಾಮಾತ್ರದಿಂದಲೆ ಶ್ರಮವಿಲ್ಲದೆ ಎಲ್ಲ ನಡೆಯುವುದರಿಂದ ಸುಖಿಯೆ

*ಮತ್ತನಂದದಿ ಮರ್ತ್ಯರೊಳಹೊರಗೆ*

ಎಲ್ಲ ಮರ್ತ್ಯರ ಒಳಗೂ ಹೊರಗೂ ಹಿಂದೆ, ಮುಂದೆ ಎಡಬಲಗಳಲ್ಲಿ ಸದಾ ಎಚ್ಚರದಿಂದ ಕಾಪಾಡುತ್ತಿದ್ದರೂ ಮದ್ಯಪಾನ ಮಾಡಿ ಮದವೇರಿದವನಂತೆ ಆನಂದತುಂದಿಲನಾಗೇ

ಇರುತ್ತಾನೆ ಮದವೇರಿದವನಂತೆಯೆ ನಿರ್ಭೀತನಾಗಿರುತ್ತಾನೆ, ಯಾವ ಪ್ರಯೋಜನಾಪೇಕ್ಷೆ ಇಲ್ಲದೆ, ಮದವೇರಿದವನಂತೆಯೆ ಪ್ರವೃತ್ತಿ ಮಾಡುತ್ತಾನೆ

**ಎತ್ತ ನೋಡಲು ಸುತ್ತುತಿಪ್ಪನು**

ಭಗವಂತನ ವ್ಯಾಪ್ತಿ ವಿಚಿತ್ರ ಆಕಾಶದಂತೆ ನಿಶ್ಚಲನಾಗಿ ವ್ಯಾಪಿಸಿರುವುದಿಲ್ಲ ಅನಂತ ರೂಪಗಳಿಂದ ಜೀವರ ಒಳಹೊರಗೆ ಎತ್ತ ನೋಡಿದರೂ ಸಂಚರಿಸುತ್ತಿರುತ್ತಾನೆ

ರಾಮಃ ಪುರಸ್ತಾತ್ ಪರತೋಽಪಿ ರಾಮೋ
ರಾಮಃ ಪರಂ ದಿಕ್ಷು ವಿದಿಕ್ಷು ರಾಮಃ ।

ಅಲ್ಲಿ ನೋಡಲು ರಾಮ ಇಲ್ಲಿ ನೋಡಲು ರಾಮ
ಎಲ್ಲೆಲ್ಲಿ ನೋಡಿದರೆ ಅಲ್ಲಿ ಶ್ರೀರಾಮ ।

**ಅತ್ಯಧಿಕ ಸಂತೃಪ್ತ**

ಅನಂತ ಜೀವರನ್ನು ಕಾಪಾಡಲು ಅನಂತಾನಂತ ರೂಪ ತಳೆದು ಒಳಗೂ ಹೊರಗೂ ಸುತ್ತಲೂ ಏಕೆ ಸುತ್ತಬೇಕು? ಮತ್ತು ಅದರಿಂದ ಅವನಿಗೇನಾಗಬೇಕು? ಆತ ಸಂತೃಪ್ತ ತಾನೆ? ಆನಂದತುಂದಿಲನೆ ತಾನೆ? ನಿಜ, ಆತ ಅತ್ಯಧಿಕ ಸಂತೃಪ್ತನಾಗಿದ್ದಾನೆ ಆನಂದೋ-ದ್ರೇಕದಿಂದ, ಲೀಲೆಯಿಂದ ಹಾಗೆ ಮಾಡುತ್ತಾನೆ, ಮತ್ತನಂತೆಯೆ, ಆನಂದದಿಂದ ಮದ-ವೇರಿದವನು ನಗುವುದು ಕುಣಿಯುವುದು ಮುಂತಾದುದನ್ನು ಮಾಡುವಂತೆ

**ತ್ರಿಜಗದ್ವ್ಯಾಪ್ತ**

ಅತ್ಯಧಿಕ ಸಂತೃಪ್ತನಾದ್ದರಿಂದಲೆ ಮೂಲೋಕಗಳಲ್ಲಿ ಅನಂತಾನಂತರೂಪಗಳಿಂದ ವ್ಯಾಪ್ತನಾಗಿದ್ದಾನೆ ಲಯಕಾಲದಲ್ಲಿ ಸುಟ್ಟು ಬೂದಿಯಾಗುವ ಮೂಲೋಕಗಳೊಳಗಿದ್ದು ತಾನು ಸುಡದೆ ಅತ್ಯಧಿಕ ಸಂತೃಪ್ತನಾಗಿಯೆ ಇರುತ್ತಾನೆ ಭಗವದ್ಗೀತೆ ಹೇಳುತ್ತದೆ—

ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ।

**ಪರಮಾಪ್ತ**

ಲಕ್ಷ್ಮೀಬ್ರಹ್ಮಾದಿಗಳೂ ತ್ರಿಜಗದ್ವ್ಯಾಪ್ತರಾಗಿದ್ದಾರೆ ಅವರೂ ಒಳಹೊರಗೆ ಎಲ್ಲೆಡೆ ಸಂಚರಿಸುತ್ತ ಜಗತ್ತನ್ನು ಕಾಪಾಡುತ್ತಾರೆ ಆಪ್ತರಾಗಿರುತ್ತಾರೆ ಆಪ್ತರು ಮಾತ್ರವಲ್ಲ, ಪರಮಾಪ್ತರೂ ಆಗಿರುತ್ತಾರೆ

ಹರೌ ರುಷ್ಟೇ ಗುರುಸ್ತ್ರಾತಾ

ಹರಿ ಮುನಿದರೂ ಗುರುಗಳಾದ ಲಕ್ಷ್ಮೀಬ್ರಹ್ಮಾದಿಗಳು ಕಾಪಾಡುತ್ತಾರೆ ಆದರೂ ಹರಿ ಅವರಿಗಿಂತಲೂ ಹೆಚ್ಚಿನ ಆಪ್ತ ಏಕೆಂದರೆ ಅವರು ಆಪ್ತರೆನಿಸಿದುದು ಹರೀಚ್ಛೆಯಿಂದ ಆತ ತಾನು ಆಪ್ತನಾಗಿ ಕಾಪಾಡುವುದು ಮಾತ್ರವಲ್ಲದೆ ಅವರಿಂದಲೂ ಆ ಕಾರ್ಯ ಮಾಡಿ ಅತ್ಯಂತ ಪರಮಾಪ್ತನೆನಿಸಿದ್ದಾನೆ

ಪವಿ ಹರಿನ್ಮಣಿ ವಿದ್ರುಮದ ಸ
ಚ್ಛವಿಗಳಿಂದದಿ ರಾಜಿಸುತ ಮಾ
ಧವ ನಿರಂತರ ದೇವದಾನವ ಮಾನವರೊಳಿದ್ದು।
ತ್ರಿವಿಧ ಗುಣ ಕರ್ಮ ಸ್ವಭಾವವ
ಪವನ ಮುಖ ದೇವಾಂತರಾತ್ಮಕ
ದಿವಸ ದಿವಸದಿ ವ್ಯಕ್ತ ಮಾಡುತಲವರೊಳಿದ್ದುಣಿವ ॥ ೧೮ ॥

'ಮಾಧವನು ವಜ್ರಕಾಂತಿಯಿಂದ, ನೀಲಮಣಿಯ ಕಾಂತಿಯಿಂದ ಮತ್ತು ಹವಳದ ಕಾಂತಿಯಿಂದ ರಾರಾಜಿಸುತ್ತ ನಿರಂತರವಾಗಿ ದೇವ ದಾನವ ಮಾನವರೊಳಗಿದ್ದು ಅವರ ಮೂರು ಬಗೆಯ ಗುಣಗಳನ್ನೂ, ಮೂರು ಬಗೆಯ ಕರ್ಮಗಳನ್ನೂ, ಮೂರು ಬಗೆಯ ಸ್ವಭಾವಗಳನ್ನೂ ದಿವಸ ದಿವಸದಲ್ಲಿ ವ್ಯಕ್ತಗೊಳಿಸುತ್ತ ಅವರೊಳಗೆ ವಾಯು ಮುಂತಾದ ದೇವತೆಗಳ ಅಂತರಾತ್ಮನಾಗಿ ಇದ್ದು ಸುಖ ದುಃಖಗಳನ್ನು ಉಣಿಸುತ್ತಾನೆ '

ಈ ಪದ್ಯದಲ್ಲಿ ಶ್ರೀಹರಿ ತ್ರಿವಿಧ ಜೀವರಲ್ಲಿ ಹೇಗೆ ವ್ಯಾಪಿಸಿ ಅವರಿಗೆ ಯೋಗ್ಯವಾದ ಗತಿಗಳನ್ನು ನೀಡುತ್ತಾನೆ ಎಂದು ವಿವರಿಸಿದೆ

ಇಲ್ಲಿ ಸಾಮಾನ್ಯವಾಗಿ 'ದೇವ ಮಾನವ ದಾನವರೊಳಿದ್ದು' ಎಂದು ಪಾಠ ಕಾಣುತ್ತದೆ ಕೆಲವೆಡೆ ಮಾತ್ರ 'ದೇವದಾನವ ಮಾನವರೊಳಿದ್ದು' ಎಂಬ ಪಾಠವಿದೆ ಮೊದಲನೆ ಪಾಠವಿಟ್ಟುಕೊಂಡರೆ ಸಾತ್ವಿಕರಲ್ಲಿ ಶ್ರೀಹರಿ ವಜ್ರದಂತೆ ಬಿಳಿಯಾದ ಕಾಂತಿಯಿಂದ ಹೊಳೆಯುತ್ತ ನೆಲೆಸಿದ್ದಾನೆ ರಾಜಸರಲ್ಲಿ ಇಂದ್ರನೀಲ ಮಣಿಯ ಕಪ್ಪಾದ ಕಾಂತಿಯಿಂದ ಹೊಳೆಯುತ್ತಾನೆ ತಾಮಸರಲ್ಲಿ ಹವಳದಂಥ ಕೆಂಬಣ್ಣದಿಂದ ಬೆಳಗುತ್ತಾನೆ ಎಂದಾಗುವುದು ಎರಡನೆ ಪಾಠದಲ್ಲಿ ತಾಮಸರಲ್ಲಿ ಇಂದ್ರನೀಲ ಕಾಂತಿಯಿಂದ ಮತ್ತು ರಾಜಸರಲ್ಲಿ ಹವಳದ ಕೆಂಬಣ್ಣದಿಂದ ಹೊಳೆಯುತ್ತಾನೆ ಯಾವುದಕ್ಕೂ ಸ್ಪಷ್ಟ ಪ್ರಮಾಣದ ಆಧಾರವನ್ನು ವ್ಯಾಖ್ಯಾನಕಾರರು ಕೊಟ್ಟಿಲ್ಲ ರಾಜಸರು ಪ್ರತಿಬಿಂಬರಾಗಿದ್ದು ಕೆಂಬಣ್ಣದವರಾದರೆ ಅವರೊಳಗೆ ಬಿಂಬನಾಗಿ ಇರುವ ಶ್ರೀಹರಿ ಕೆಂಬಣ್ಣದವನೆನ್ನಬೇಕಾಗುತ್ತದೆ ತಾಮಸರಲ್ಲಿ ಅವರಿಗೆ ಬಿಂಬಭೂತನಾಗಿ ಕಪ್ಪಾದ ಕಾಂತಿಯವನಾಗಿದ್ದರೆ, ತಾಮಸರು ಕಪ್ಪು ಎಂದಂತಾಗುವುದು

ಭಾಗವತ ( 10.4 20) ದಲ್ಲಿ,

ಸತ್ವಂ ತ್ರಿಲೋಕಸ್ಥಿತಯೇ ಸ್ವಮಾಯಯಾ
ಬಿಭರ್ಷಿ ಶುಕ್ಲಂ ಖಲು ವರ್ಣಮಾತ್ಮನಃ।
ಸರ್ಗಾಯ ರಕ್ತಂ ರಜಸೋಪಬೃಂಹಿತಂ
ಕೃಷ್ಣಂ ತು ವರ್ಣಂ ತಮಸಾ ಜನಾತ್ಯಯೇ॥

'ಶ್ರೀಹರಿ, ನೀನು ಜಗದ್ರಕ್ಷಣೆಗೆ ನಿನ್ನಲ್ಲಿ ಸತ್ವಗುಣದ ಬಿಳಿ ಬಣವನ್ನೂ, ಸೃಷ್ಟಿಗೆ ರಜೋಗುಣದ ಕೆಂಬಣ್ಣವನ್ನೂ, ಲಯಕ್ಕೆ ತಮೋಗುಣದ ಕಪ್ಪುಬಣ್ಣವನ್ನೂ ವ್ಯಕ್ತಮಾಡಿಕೊಳ್ಳುವಿ' ಎಂದು ವಸುದೇವ ಶ್ರೀಕೃಷ್ಣನನ್ನು ಸ್ತೋತ್ರ ಮಾಡುತ್ತಾನೆ ಇದರಿಂದ ಸಾತ್ವಿಕರಿಗೆ ಬಿಂಬನಾಗಿ ಬಿಳಿ ಬಣ್ಣವನ್ನು ರಾಜಸರಿಗೆ ಬಿಂಬನಾಗಿ ಕೆಂಬಣ್ಣವನ್ನೂ ತಾಮಸರಿಗೆ ಬಿಂಬನಾಗಿ ಕಪ್ಪುಬಣ್ಣವನ್ನೂ ತೋರುತ್ತಾನೆ ಎಂದು ಊಹಿಸಬೇಕಾಗುತ್ತದೆ

ಆದರೂ ಪವನ ಮುಖ ದೇವಾಂತರಾತ್ಮಕ ಎಂದಿದೆ ಅಂತರಾತ್ಮಕ ಎಂದು ಕ ಪ್ರತ್ಯಯ ಸ್ವಾರ್ಥ, ಅಂತರಾತ್ಮ ಎಂದರ್ಥ ಶ್ರೀಹರಿ ಜೀವರಿಗೆ ನೇರವಾಗಿ ಬಿಂಬನಲ್ಲ ಅವನ ಪ್ರತಿಬಿಂಬರು ವಾಯು ಮುಂತಾದ ದೇವತೆಗಳು ಅವರಿಗೆ ಪ್ರತಿಬಿಂಬರು ಸಾತ್ವಿಕ ರಾಜಸ ತಾಮಸ ಜೀವರು ಇದರಿಂದ ರಾಜಸ ತಾಮಸರಿಗೆ ಈ ದೇವತೆಗಳು ಬಿಂಬರೆಂದರೆ ಅವರಂತೆ ಕೆಂಪು ಕಪ್ಪು ಬಣ್ಣದವರಾಗಬೇಕಾಗುತ್ತದೆ ಸಾತ್ವಿಕರಾದ ಈ ದೇವತೆಗಳು ಬಿಳಿ ಎಂದೇ ಹೇಳುವಂತಿಲ್ಲ ಸಾತ್ವಿಕರಲ್ಲಿ ಬಿಳಿ ಬಣ್ಣದಿಂದ, ರಾಜಸರಲ್ಲಿ ಕೆಂಬಣ್ಣದಿಂದ, ತಾಮಸರಲ್ಲಿ ಕಪ್ಪುಬಣ್ಣದಿಂದ ಸಾತ್ವಿಕರೇ ಅಂತರಾತ್ಮರಾಗಿ ಬಿಂಬಭೂತರಾಗಿರುತ್ತಾರೆ ಎನ್ನಬೇಕು

ವಾಯುಬ್ರಹ್ಮರು ಸಕಲಗುಣ ಪರಿಪೂರ್ಣರೆನ್ನುವಾಗ ಅವರಲ್ಲಿ ಎಲ್ಲ ಬಣ್ಣಗಳೂ ಇವೆ ಎಂದಂತಾಗುತ್ತದೆ ಇದರಲ್ಲಿ ವಿರೋಧವಿಲ್ಲ. ಅಚಿಂತ್ಯಶಕ್ತಿಯಿಂದ ಕೂಡುತ್ತದೆ

ಸುಮಧ್ವವಿಜಯದಲ್ಲಿಯೂ ವೈಕುಂಠ ಲೋಕದಲ್ಲಿರುವ ಮುಕ್ತರನ್ನು ವರ್ಣಿಸುತ್ತ ಹೀಗೆ ಹೇಳಿದೆ-

ಅರುಣ ಪ್ರಭಾಶ್ಚ ತರುಣಾಭ್ರರುಚೋ
ವಿಚರಂತಿ ನಾಥರುಚಯಃ ಪುರುಷಾಃ (11-21)

'ನಾಥರುಚಯಃ' ಅಂದರೆ ಶ್ರೀಹರಿಯ ಬಣ್ಣದಂತೆ ಕೆಲವರು ಉದಿಸುವ ಸೂರ್ಯನಂಥ ಕೆಂಬಣ್ಣದ ಕಾಂತಿಯಿಂದಲೂ ಇನ್ನು ಕೆಲವರು ಶ್ರೀಹರಿಯ ಬಣ್ಣದಂತೆಯೆ ಕಪ್ಪಾದ ಮೋಡದಂಥ ಕಾಂತಿಯಿಂದಲೂ ಹೊಳೆಯುತ್ತ ವಿಹರಿಸುತ್ತಾರೆ ಎಂದಿದೆ

ಅರುಣಾಶ್ಮ ವರ್ಣತನವಸ್ತನವಃ ಶುಭಹಾರ
ಸನ್ನಿಭರುಚೋಽತ್ರ ಪರಾಃ॥
ಹರಿನೀಲ ನೀಲರುಚಯೋಽಪ್ಯಪರಾಃ
ಪ್ರಕಟೀಭವಂತಿ ವಿವಿಧಾಭರಣಾಃ (11 28)

'ಕೆಲವು ಸ್ತ್ರೀಯರು ಪದ್ಮರಾಗಮಣಿಯಂತೆ ಕೆಂಬಣ್ಣದ ಕಾಂತಿಯವರು ಇನ್ನು ಕೆಲವು ಸ್ತ್ರೀಯರು ಮುತ್ತಿನ ಹಾರದಂತೆ ಬಿಳಿಯಾಗಿರುವವರು ಮತ್ತೆ ಕೆಲವರು ಇಂದ್ರನೀಲಮಣಿಯಂಥ ಕಪ್ಪು ಬಣ್ಣದವರು ಎಲ್ಲರೂ ನಾನಾ ಆಭರಣಗಳಿಂದ ಅಲಂಕೃತರು ಎಂದಿದೆ

ಇಲ್ಲಿ ಎಲ್ಲರೂ ಎಲ್ಲ ಬಣ್ಣದವರು ಎನ್ನದೆ ಸಾತ್ವಿಕರಲ್ಲಿಯೆ ಕೆಲವರು ಕೆಂಪು, ಕೆಲವರು ಬಿಳಿ, ಕೆಲವರು ಕಪ್ಪು ಎಂದಿದೆ

ರುದ್ರಶೇಷರು ಬಿಳಿ, ಗರುಡ ಪಂಚವರ್ಣದವ ಅಷ್ಟದಿಕ್ಪಾಲಕರು ಬೇರೆ ಬೇರೆ ವರ್ಣದವರು ಇವರೆಲ್ಲರೂ ಚರಮ ಶರೀರಿಗಳಾದ್ದರಿಂದ ಮೋಕ್ಷದಲ್ಲಿಯೂ ಅದೇ ರೀತಿ ಬೇರೆ ಬೇರೆ ಬಣ್ಣದವರೇ ಅದರಿಂದ ಸಾತ್ವಿಕರೆಲ್ಲರೂ ಬಿಳಿಯೆಂದಾಗಲೀ, ಸಾತ್ವಿಕರು ಬಿಳಿಯೆ ಎಂದಾಗಲಿ ಹೇಳುವಂತಿಲ್ಲ 'ಸಾತ್ವಿಕರು ಬಿಳಿ' ಎಂದೇನೂ ಹರಿಕಥಾಮೃತಸಾರ ಹೇಳುತ್ತಿಲ್ಲ ತ್ರಿವಿಧ ಜೀವರಲ್ಲಿ ಶ್ರೀಹರಿ ಅವರಿಗೆ ಬಿಂಬನಾಗಿ, ಅವರವರ ಬಣ್ಣಗಳನ್ನು ವ್ಯಕ್ತಮಾಡುವುದಕ್ಕಾಗಿ ತಾನೂ ಅವರಂತೆ ಬಣ್ಣ ವ್ಯಕ್ತಮಾಡಿಕೊಳ್ಳುತ್ತಾನೆ ಸಾತ್ವಿಕರಲ್ಲಿ ಬಿಳಿ, ರಾಜಸರಲ್ಲಿ ಕೆಂಪು, ತಾಮಸರಲ್ಲಿ ಕಪ್ಪು ಬಣ್ಣದವನಾಗಿರುತ್ತಾನೆ ಎನ್ನುವ ಕ್ರಮವಿವಕ್ಷಿತವಲ್ಲ ಇದನ್ನು ಸೂಚಿಸುವುದಕ್ಕಾಗಿಯೋ ಏನೋ, ದಾಸರಾಯರು ಕ್ರಮ ವ್ಯತ್ಯಾಸ ಮಾಡಿ ದೇವ ಮಾನವ ದಾನವರೊಳಿದ್ದು ಎಂದು ಹೇಳಿರಬಹುದು

ಅಥವಾ ಸಾತ್ವಿಕರ ಲಿಂಗಶರೀರ ಸತ್ವಪ್ರಚುರವಾಗಿದ್ದು ಬಿಳಿಯೇ ಆಗಿರುತ್ತದೆ ಏಕೆಂದರೆ ಸತ್ವಗುಣ ಬಿಳಿ, ಹೀಗೆಯೆ ರಾಜಸತಾಮಸರ ಲಿಂಗಶರೀರಗಳು ಕೆಂಪು, ಕಪ್ಪು ಈ ಅಭಿಪ್ರಾಯದಲ್ಲಿ ದೇವ ಮಾನವ ದಾನವರೊಳಿದ್ದು ಎಂಬ ಪಾಠವೆ ಯುಕ್ತ

ಸ್ಥೂಲ ಶರೀರದಲ್ಲಿ ಜೀವರ ಕರ್ಮಾನುಸಾರ ಯಾವ ಬಣ್ಣವೂ ಬರಬಹುದು, ಕ್ರಮ ವಿವಕ್ಷಿತವಲ್ಲ ಎಂದು ಸೂಚಿಸಲು ದೇವ ದಾನವ ಮಾನವ ಎಂಬ ಪಾಠವೂ ಸರಿಯೆ

**ತ್ರಿವಿಧ ಗುಣಕರ್ಮ ಸ್ವಭಾವವ**

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ
ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಂ॥

ವೇದಾಭಿಮಾನಿನಿ ಅಂಭೃಣಿದೇವಿ ಹೇಳುತ್ತಾಳೆ- 'ಜೀವರಲ್ಲಿ ಮೂರು ಸ್ವಭಾವದವರಿರುತ್ತಾರೆ ಕೆಲವರು ವೇದದ ಉಪದೇಶಗಳಿಗೆ ವಿಪರೀತವಾಗಿಯೆ ವರ್ತಿಸುತ್ತಾರೆ ಕೆಲವರು ವೇದದ ಉಪದೇಶವನ್ನು ಕೇಳುವಲ್ಲಿ ಆಸಕ್ತಿ ತೋರದೆ ಬದುಕಿರುವಷ್ಟು ಕಾಲ ಕೇವಲ ಉಸಿರಾಡುತ್ತಾರಷ್ಟೆ ಇನ್ನುಕೆಲವರು ವೇದದ ಉಪದೇಶಗಳನ್ನು ಶ್ರದ್ಧೆಯಿಂದ ಕೇಳಿ ಅದರಂತೆ ನಡೆಯುತ್ತಾರೆ ' ಇಲ್ಲಿ ತಾಮಸ ರಾಜಸ ಸಾತ್ವಿಕರ ಮೂರು ಬಗೆಯ ಗುಣಸ್ವಭಾವಗಳನ್ನು ಸ್ಪಷ್ಟವಾಗಿ ಹೇಳಿದೆ

ಭಗವದ್ಗೀತೆಯಲ್ಲಿ ತ್ರಿವಿಧ ಗುಣ ಸ್ವಭಾವಗಳನ್ನು ವಿವರವಾಗಿ ಬಣ್ಣಿಸಿದೆ-

'ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ'

'ದೇಹಿಗಳಲ್ಲಿ ಸ್ವಾಭಾವಿಕವಾಗಿ ತ್ರಿವಿಧವಾದ ಗುಣಸ್ವಭಾವಗಳಿವೆ' ಎಂದಿದೆ ಇಲ್ಲಿ

'ದೇಹಿ' ಗಳಲ್ಲಿ ಎಂದ ಮಾತ್ರಕ್ಕೆ ಇದು ದೇಹದ ಗುಣಸ್ವಭಾವದಿಂದಾಗಿ ಅನಾಭ್ಯಾವಿಕವಾಗಿ ಬಂದಿದೆ ಎನ್ನಲಾಗದು ದೇಹವೆಂದರೆ ಜಡದೇಹ ಉಳ್ಳವರೆಂದೇ ಅರ್ಥವಲ್ಲ ಚೇತನ ಸ್ವರೂಪ ಭೂತವಾದ ಚಿನ್ಮಯ ದೇಹವೂ ದೇಹವೆ ಅದನ್ನು ಒಪ್ಪದಿದ್ದವರು ಜೀವಸ್ವಭಾವತ್ರೈವಿಧ್ಯವನ್ನು ಒಪ್ಪದಿರುವುದು ಸಹಜ ಆದರೂ ಅನಾದಿ ಕಾಲದಿಂದಲೂ ಬ್ರಹ್ಮಾದಿ ದೇವತೆಗಳು ಸಾತ್ವಿಕ ಕರ್ಮವನ್ನೇ ಆಚರಿಸುವುದು, ಕಲ್ಯಾದಿ ದೈತ್ಯರು ತಾಮಸ ಕರ್ಮವನ್ನೇ ಆಚರಿಸುವುದು ಆ ಸಾತ್ವಿಕ ತಾಮಸ ಶರೀರ ಪ್ರಯುಕ್ತವಾಗಿ ಎನ್ನುವುದಾದರೆ ಅನಾದಿ ಕಾಲದಿಂದ ಕೆಲವರಿಗೆ ಸಾತ್ವಿಕ ಶರೀರವೆ ಏಕೆ ಬರುತ್ತಿದೆ? ಕೆಲವರಿಗೆ ತಾಮಸ ಶರೀರವೆ ಏಕೆ ಬರುತ್ತಿದೆ? ಅದರಿಂದ ಜೀವಸ್ವರೂಪದಲ್ಲಿಯೇ ವೈಲಕ್ಷಣ್ಯಗಳಿವೆ ಎನ್ನಬೇಕು ಇಲ್ಲದಿದ್ದರೆ ಕೆಲವರಿಗೆ ಅನಾದಿಕಾಲದಿಂದ ಸಾತ್ವಿಕ ಶರೀರ ಕೊಟ್ಟು ಸತ್ಕರ್ಮ ಮಾಡಿಸಿ ಸುಖ ನೀಡುವುದು, ಕೆಲವರಿಗೆ ಅನಾದಿಕಾಲದಿಂದ ತಾಮಸ ಶರೀರಕೊಟ್ಟು ದುಷ್ಕರ್ಮ ಮಾಡಿಸಿ ದುಃಖ ಕೊಡುವುದು ಭಗವಂತನಲ್ಲಿ ಪಕ್ಷಪಾತ ಧೋರಣೆ ಎನ್ನಬೇಕಾದೀತು

**ಅವರೊಳಿದ್ದು ಉಣಿಪ**

ತ್ರಿವಿಧಜೀವರಲ್ಲಿ ಇದ್ದು ಅವರವರಿಗೆ ಯೋಗ್ಯವಾದ ಸುಖ, ಸುಖದುಃಖ ಮಿಶ್ರ ಮತ್ತು ದುಃಖಗಳನ್ನು ಉಣಿಸುತ್ತಾನೆ ಶ್ರೀಹರಿ-

ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್
ಅನ್ಯಮನ್ಯಮತಿನೇನೀಯಮಾನಃ।
ಏಧಮಾನದ್ವಿಳುಭಯಸ್ಯ ರಾಜಾ
ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್॥

'ಕ್ರೂರವಾದ ತಾಮಸರನ್ನು ದಂಡಿಸುತ್ತಾನೆ ಉತ್ತಮರಾದ ಸಾತ್ವಿಕರನ್ನು ಮೇಲೆತ್ತುತ್ತಾನೆ ಮಧ್ಯಮರಾದ ರಾಜಸರನ್ನು ಸಂಸಾರ ಚಕ್ರದಲ್ಲಿ ಸದಾ ತಿರುಗಿಸುತ್ತಾನೆ' - ಎನ್ನುತ್ತದೆ, ಋಗ್ವೇದ ಇದನ್ನು ಯಾರೂ ವ್ಯತ್ಯಾಸ ಮಾಡುವಂತಿಲ್ಲ ರಾಹು ದೈತ್ಯ ಸಾವಿರಾರು ವರ್ಷ ತಪಸ್ಸು ಮಾಡಿ ಅಮೃತಪಾನದ ವರ ಪಡೆದರೂ ಅಮೃತಪಾನವೇನೋ ಆಯಿತು ಒಡನೆ ಶ್ರೀಹರಿಯ ಚಕ್ರದಿಂದ ಶಿರಶ್ಛೇದವೂ ಆಯಿತು ಆತ ಮರಣವನ್ನೇ ಹೊಂದಿದ ಹೀಗೆ ತಾಮಸರು ಮೋಕ್ಷ ಬಯಸಿದರೆ ಎಷ್ಟು ಮಾತ್ರಕ್ಕೂ ಅದು ಲಭಿಸಲಾರದು ಏಕೆಂದರೆ, ಜೀವರು ತಾವಾಗಿ ತಮ್ಮ ಸುಖದುಃಖ ಗಳನ್ನು ಉಣ್ಣುವುದಿಲ್ಲ ಅದರಲ್ಲಿದ್ದು ಹರಿ ದಿವಸ ದಿವಸ ಅವರ ಗುಣಕರ್ಮ ಸ್ವಭಾವಗಳನ್ನು ವ್ಯಕ್ತ ಮಾಡಿ ಅವುಗಳಿಗೆ ಅನುಗುಣವಾಗಿ ವೈಷಯಿಕ ಸುಖದುಃಖಗಳನ್ನು ಉಣ್ಣಿಸುತ್ತಾನೆ ಇದು ಮೋಕ್ಷ ಪರ್ಯಂತವೂ ನಡೆಯುತ್ತದೆ ಬಳಿಕ ಸ್ವರೂಪದಲ್ಲಿಯೆ ಇರುವ ಅಭಿವ್ಯಕ್ತ ಸುಖದುಃಖಗಳನ್ನು ಉಣಿಸುತ್ತಾನೆ

**ಅಣು ಮಹತ್ತಿನೊಳಿಪ್ಪ ಘನ ಪರ**
**ಮಾಣುವಿನೊಳಡಗಿಸುವ ಸೂಕ್ಷ್ಮವ**
**ಮುಣುಗಿಸುವ ತೇಲಿಸುವ ಸ್ಥೂಲಗಳವನ ಮಾಯವಿದು॥**
**ದನುಜರಕ್ಕಸರೆಲ್ಲರಿವನೊಳು**
**ಮುನಿದು ಮಾಡುವುದೇನುಲೂಖಲ**
**ವನಿಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿವ ॥ ೧೯॥**

ಶ್ರೀಹರಿ ಅಣುವಿನಲ್ಲಿಯೂ ಮಹತ್ತಿನಲ್ಲಿಯೂ ಇರುತ್ತಾನೆ ಮಹತ್ತನ್ನು ಅಣುವಿನಲ್ಲಿ ಅಡಗಿಸುತ್ತಾನೆ ಸಣ್ಣ ಪದಾರ್ಥಗಳನ್ನು ನೀರಲ್ಲಿ ಮುಳುಗಿಸುತ್ತಾನೆ ದೊಡ್ಡ ಪದಾರ್ಥಗಳನ್ನು ತೇಲಿಸುತ್ತಾನೆ ಇದು ಅವನ ಮಾಯೆ ದಾನವರು ರಾಕ್ಷಸರು ಎಲ್ಲರೂ ಇವನಲ್ಲಿ ಮುನಿದು ಮಾಡುವುದೇನು? ಒರಳು ಒನಕೆಗಳು ಧಾನ್ಯದ ಕಾಳುಗಳನ್ನು ಕುಟ್ಟುವಂತೆ ಎಲ್ಲರನ್ನೂ ಅವನೆ ಸಂಹರಿಸುತ್ತಾನೆ

**ಅಣುಮಹತ್ತಿನೊಳಿಪ್ಪ:**

ಶ್ರೀಹರಿಯ ವ್ಯಾಪ್ತಿ ಅಣುವಾದ ಪಿಂಡಾಂಡದಲ್ಲಿಯೂ ಮಹತ್ತಾದ ಬ್ರಹ್ಮಾಂಡದಲ್ಲಿಯೂ ಒಂದೇ ತೆರನಾಗಿದೆ ಏಕೆಂದರೆ ಅವನು,

ಅಣೋರಣೀಯಾನ್ ಮಹತೋ ಮಹೀಯಾನ್

ಅವನ ಪ್ರತಿಯೊಂದು ರೂಪವೂ ಏಕಕಾಲದಲ್ಲಿ ಅಣುವಿಗಿಂತ ಅಣುವೂ ಆಗಿದೆ ಮಹತ್ತಿಗಿಂತ ಮಹತ್ತೂ ಆಗಿದೆ ಒಮ್ಮೆ ಶ್ವೇತದ್ವೀಪದಲ್ಲಿ ಶ್ರೀಹರಿ ನಿದ್ರೆಯ ನಟನೆ ಮಾಡುತ್ತಿದ್ದಾಗ ಬಲಿಚಕ್ರವರ್ತಿ ಅವನ ಬ್ರಹ್ಮಾಂಡದಂಥ ಕಿರೀಟವನ್ನು ಕದ್ದೊಯ್ದ ಗರುಡ ಅವನನ್ನು ಬೆನ್ನಟ್ಟಿಹೋಗಿ ಕಿರೀಟವನ್ನು ಕಿತ್ತುಕೊಂಡು ಹಿಂತಿರುಗಿ ಬರುವಾಗ ದಾರಿಯಲ್ಲಿ ಗೋಮಂತಪರ್ವತದಲ್ಲಿ ವಿಹರಿಸುತ್ತಿದ್ದ ಬಾಲಗೋಪಾಲನನ್ನು ಕಂಡು ಅವನ ತಲೆಯಲ್ಲಿಯೆ ಆ ಕಿರೀಟವನ್ನಿಟ್ಟ ಅದು ಸರಿಯಾಯಿತು ಇದು ಹರಿಯ ಅಚಿಂತ್ಯಶಕ್ತಿಗೆ ಭಾಗವತ ಕೊಟ್ಟಿರುವ ಉದಾಹರಣೆ ಆದರಿಂದ ಹರಿ ಅಚಿಂತ್ಯಶಕ್ತಿಯಿಂದ ಅಣುವಿನಲ್ಲಿ ಅಣುವಾಗಿಯೂ ಮಹತ್ತಿನಲ್ಲಿ ಮಹತ್ತಾಗಿಯೂ ವ್ಯಾಪಿಸಿದ್ದಾನೆ ಕೇವಲ ಆಕಾಶದಂತೆ ವ್ಯಾಪಿಸಿಲ್ಲ ಆಕಾಶ ಸ್ವಾಭಾವಿಕವಾಗಿ ಎಲ್ಲೆಡೆ ವ್ಯಾಪಿಸಿ ಅಣುವಿನಲ್ಲಿ ತನ್ನ ಅಣುವಾದ ಒಂದು ಭಾಗವನ್ನು ಮಾತ್ರ ತುಂಬಿಸುತ್ತದೆ ತಾನು ಪೂರ್ತಿಯಾಗಿ ಅದರೊಳಗೆ ಅಡಗುವುದಿಲ್ಲ ಹರಿ ಹಾಗಲ್ಲ ಎಲ್ಲೆಡೆ ವ್ಯಾಪಿಸುತ್ತಲೆ ಅಣುವಿನೊಳಗೆ ಪೂರ್ತಿಯಾಗಿ ಅಡಗಿಯೂ ಇರುತ್ತಾನೆ ಇದು ಹೇಗೆ ಸಾಧ್ಯ ಎಂದರೆ ತಾನು ಅಣುವಾಗುತ್ತಾನೆ 'ಅಣುಮಹತ್ತಿನೊಳಿಪ್ಪ' ಎಂದರೆ ಇನ್ನೊಂದು ಅರ್ಥ-'ತಾನು, ಅಣುವಾಗಿದ್ದೂ ಮಹತ್ತಿನೊಳಗೆ ಇರುತ್ತಾನೆ, ಮಹತ್ತಾಗಿಯೆ ಎಂದು ನಿಯಮವಿಲ್ಲ'

ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ
ನಮೋ ಯುವಭ್ಯೋ ನಮ ಆಶಿನೇಭ್ಯಃ

ಎಂಬ ವೇದ ಮಂತ್ರ ಹೇಳುವಂತೆ ಸಣ್ಣ ದೊಡ್ಡ ಅನೇಕ ರೂಪಗಳಿಂದ ಎಲ್ಲೆಡೆ ವ್ಯಾಪಿಸುತ್ತಾನೆ ದೊಡ್ಡ ರೂಪದಷ್ಟೇ ಸಣ್ಣರೂಪವೂ ವ್ಯಾಪಿಸುತ್ತದೆ ಏಕೆಂದರೆ ಸಣ್ಣ ದೊಡ್ಡ ರೂಪಗಳಿಗೆ ಭೇದ ಒಂದಿಷ್ಟೂ ಇಲ್ಲ ಇದಕ್ಕೆ ಉದಾಹರಣೆಯನ್ನು ಶ್ರೀಕೃಷ್ಣ ತೋರಿದ್ದಾನೆ ಅರ್ಜುನನ ಸಾರಥಿಯಾಗಿ ಕುರುಕ್ಷೇತ್ರದ ರಣರಂಗದ ನಡುವೆ ಒಂದು ರಥದೊಳಗೆ ಕುಳಿತಿದ್ದರೂ ತಾನು ಭೂಮಿ ಅಂತರಿಕ್ಷಗಳನ್ನೆಲ್ಲ ವ್ಯಾಪಿಸಿದವನೆನ್ನಲು ವಿಶ್ವರೂಪದರ್ಶನ ಮಾಡಿಸಿದ

ಇದು ಶ್ರೀಹರಿಯ ವ್ಯಾಪ್ತಿಯ ಒಂದು ವೈಖರಿ ವ್ಯಾಪ್ತಿ ಸಂಧಿಯಲ್ಲಿ ಇದನ್ನು ದಾಸರಾಯರು ಈ ಅರ್ಥಗರ್ಭಿತವಾದ ಒಂದು ಸಣ್ಣಮಾತಿನಿಂದಲೇ ತಿಳಿಸುತ್ತಿದ್ದಾರೆ

**ಘನ ಪರಮಾಣುವಿನೊಳಡಗಿಸುವ**

ಹರಿ ಅಚಿಂತ್ಯಶಕ್ತಿಯಿಂದ ಅಣು ಮಹತ್ತಿನಲ್ಲಿ ವ್ಯಾಪಿಸಿರುವುದು ಮಾತ್ರವಲ್ಲದೆ ಅಲ್ಲಿ ತನ್ನ ಅಚಿಂತ್ಯಶಕ್ತಿಯನ್ನು ಮೆರೆಯುತ್ತಾನೆ ನೋಡುವ ಕಣ್ಣಿದ್ದರೆ ನಮಗೆ ತೋರಿ ಬೆರಗುಗೊಳಿಸುತ್ತಾನೆ ಉದಾ ಬಲು ದೊಡ್ಡದಾದ ಆಲದಮರ ಅತಿ ಸೂಕ್ಷ್ಮವಾದ ಬೀಜದೊಳಗೆ ಅಡಗಿದೆ ಈ ವಿಶಾಲವಾದ ಜಗದ್‌ವೃಕ್ಷ ಅತಿಸೂಕ್ಷ್ಮವಾದ ಪ್ರಕೃತಿಯಲ್ಲಿ ಅವ್ಯಕ್ತವಾಗಿದ್ದು ಸೃಷ್ಟಿಕಾಲದಲ್ಲಿ ಅಲ್ಲಿಂದಲೇ ಬಂದು ಲಯಕಾಲದಲ್ಲಿ ಅಲ್ಲಿಯೆ ಸೇರಿಹೋಗುತ್ತದೆ-

ಯಂ ವೈ ಸೋಮ್ಯೈತಮಣಿಮಾನಂ ನ ನಿಭಾಲಯಸೇ
ಅಸ್ಯ ಸೋಮ್ಯೈಷೋಽಣಿಮ್ನ ಏವಂ ಮಹಾನ್ ನ್ಯಗ್ರೋಧಸ್ತಿಷ್ಠತಿ॥ - ಛಾಂದೋಗ್ಯ

ಪರಮಾಣು ಪ್ರದೇಶದಲ್ಲಿ ಅನಂತ ಜೀವರಾಶಿಗಳಿವೆ ಇದೆಲ್ಲವೂ ಹರಿಯ ಅಚಿಂತ್ಯಶಕ್ತಿಗೆ ಉದಾಹರಣೆಗಳು ಕುದುರೆ ಬಾಲದ ಕೂದಲಿನ ತುದಿಯ ಸಹಸ್ರಾಂಶಕ್ಕಿಂತ ಸೂಕ್ಷ್ಮನಾದ ಜೀವ ಮೋಕ್ಷದಲ್ಲಿ ಆಜಾನುಬಾಹು ಪುರುಷಪ್ರಮಾಣಕ್ಕೆ ಬೆಳೆಯುತ್ತಾನೆ. ವಸ್ತುತಃ ಅದು ಅವನ ನಿಜಸ್ವರೂಪ ಸಂಸಾರಾವಸ್ಥೆಯಲ್ಲಿ ಅವನಿಗೆ ಸೂಕ್ಷ್ಮಾತಿಸೂಕ್ಷ್ಮ ಆಕಾರವನ್ನು ಹರಿ ಅಚಿಂತ್ಯಶಕ್ತಿಯಿಂದ ನೀಡಿರುತ್ತಾನೆ ನೀಡಿ ಪರಮಾಣುವಿನಲ್ಲಿ ಘನವನ್ನು ಅಡಗಿಸುತ್ತಾನೆ ತನ್ನ ಪುಟ್ಟ ಬಾಯೊಳಗೆ ಬ್ರಹ್ಮಾಂಡ ಅಡಗಿಸಿಕೊಳ್ಳುತ್ತಾನೆ

**ಸೂಕ್ಷ್ಮವ ಮುಣುಗಿಸುವ ತೇಲಿಸುವ ಸ್ಥೂಲಗಳ.**

ಸೂಕ್ಷ್ಮವಾದ ಮಳಲಿನ ಕಣ ನೀರಲ್ಲಿ ಮುಳುಗುತ್ತದೆ ದೊಡ್ಡ ಭಾರದ ಮರದ ದಿಮ್ಮಿ ತೇಲುತ್ತದೆ ಸಣ್ಣ ದೋಣಿ ಮುಗುಚಿ ಬಿದ್ದು ನೀರು ಪಾಲಾಗುತ್ತದೆ ದೊಡ್ಡ ಹಡಗು ನಿರಾತಂಕವಾಗಿ ತೇಲುತ್ತದೆ ಇದು ಹರಿಯ ಅಚಿಂತ್ಯಶಕ್ತಿ

ನೀರ ಮೇಲೆ ಹಾಕಿದ ವಸ್ತು ತಾನು ಹೊರಚೆಲ್ಲುವ ನೀರಿಗಿಂತ ಕಡಿಮೆ ಭಾರದ್ದಾಗಿದ್ದರೆ ತೇಲುತ್ತದೆ, ಹೆಚ್ಚು ಭಾರದ್ದಾಗಿದ್ದರೆ ಮುಳುಗುತ್ತದೆ ಇಲ್ಲಿ ವಸ್ತು ಸಣ್ಣದೊ ದೊಡ್ಡದೊ ಎಂಬ ಪ್ರಶ್ನೆಯೆ ಇರುವುದಿಲ್ಲ ಇದು ವೈಜ್ಞಾನಿಕವಾದ ಆರ್ಕಿಮಿಡೀಸನ ತತ್ವ. ಅಚಿಂತ್ಯಶಕ್ತಿ ಏನಲ್ಲ, ನಿಜ ಆದರೂ ದೊಡ್ಡ ಭಾರದ ಬಂಡೆಗಲ್ಲುಗಳನ್ನು ಕಪಿಗಳು ರಾಮೇಶ್ವರ ಸೇತುವಿನಲ್ಲಿ ನೀರಿಗೆ ಎಸೆದರೆ ಅವು ತೇಲಿದವು ಇದು ಶ್ರೀರಾಮನ ಅಚಿಂತ್ಯಶಕ್ತಿ ಎನ್ನಲೇಬೇಕು

ಸೂಕ್ಷ್ಮವಾದ ತೃಣಾದಿ ಜೀವರಾಶಿ ಸಂಸಾರ ಸಾಗರದಲ್ಲಿ ಮುಳುಗಿ ದುಃಖಿಸಿದರೆ ಮಹತ್ತಾದ ಬ್ರಹ್ಮಾದಿ ಜೀವರಾಶಿ ತೇಲುತ್ತದೆ ತೇಲುತ್ತ ತಾನೂ ಸಮುದ್ರ ದಾಟುತ್ತದೆ, ತೃಣಾದಿ ಜೀವರಾಶಿಯನ್ನೂ ಎತ್ತಿ ದಾಟಿಸುತ್ತದೆ ಅದಕ್ಕೆ ಅಂಥಶಕ್ತಿಯನ್ನು ಹರಿ ನೀಡುತ್ತಾನೆ ಇದಕ್ಕೆ ಉದಾಹರಣೆ- ಶ್ರೀಮದಾಚಾರ್ಯರು ಮಹಾವೇಗದ ಗಂಗಾಪ್ರವಾಹದಲ್ಲಿ ಈಜಿ ದಾಟಿದರು, ತಮ್ಮ ಕಾಲನ್ನು ಬಲವಾಗಿ ಹಿಡಿದುಕೊಂಡ ಶಿಷ್ಯರನ್ನೂ ದಾಟಿಸಿದರು.

**ಅವನ ಮಾಯವಿದು:**

ಇಂದ್ರೋ ಮಾಯಾಭಿಃ ಪುರುರೂಪ ಈಯತೇ

ಎಂದು ಶ್ರುತಿ ಹರಿಯ ಮಾಯೆಯನ್ನು ಕೊಂಡಾಡುತ್ತದೆ ಇಲ್ಲಿ ಮಾಯೆ ಎಂದರೆ ಕಪಟ ವಂಚನೆ ಇಂದ್ರಜಾಲವೆಂದು ಗ್ರಹಿಸಿದರೆ ಇದು ಹರಿನಿಂದೆಯಾದೀತು ಹರಿಸ್ತುತಿಯಾಗದು ಅದರಿಂದ ಭಗವಂತನ ಪ್ರಜ್ಞೆಯೆ ಮಾಯೆ ಎಲ್ಲವೂ ಅವನ ಪ್ರಜ್ಞೆಯದೇ ವಿವಿಧ ಆವಿಷ್ಕಾರವಾಗಿದೆ ಅದಕ್ಕೆ ಅಸಾಧ್ಯ ಯಾವುದೂ ಇಲ್ಲ

ಕೋ ನು ಮೇಽತಿತರೇನ್ಮಾಯಾಂ?

ಎಂದು ಭಾಗವತದಲ್ಲಿ ವಿಷ್ಣು ಮಾಯೆಯನ್ನು ಯಾರೂ ಮೀರಲಾರರು ಎಂದಿದೆ. ಅದರಿಂದ ಜಗತ್ತು ಭಗವಂತನ ಮಾಯೆ ಮಾಯಾಮಾತ್ರಮಿದಂ ದ್ವೈತಂ ಎಂದು ಶ್ರುತಿ ಉದ್ಘೋಷಿಸುತ್ತಿದೆ

**ದನುಜ ರಕ್ಕಸರೆಲ್ಲರಿವನೊಳು ಮುನಿದು ಮಾಡುವುದೇನು?**

ಮಾಯಾವಿಗಳಾದ ದಾನವರು ರಾಕ್ಷಸರು ಹರಿಯ ಅಮೋಘ ಪ್ರಜ್ಞೆಯನ್ನೂ ಅಚಿಂತ್ಯಶಕ್ತಿಯನ್ನೂ ಕಂಡು ಸಹಿಸಲಾರದೆ ಮುನಿದು ಆಡಿಕೊಳ್ಳುತ್ತಾರೆ-

'ಈ ಅಚಿಂತ್ಯಶಕ್ತಿ ಎನ್ನುವುದು ಸುಳ್ಳು. ತರ್ಕಬದ್ಧವಲ್ಲದ ಅಪ್ರಬುದ್ಧ ವಿಚಾರಗಳನ್ನು ಹೇಳಿ 'ಇದರಲ್ಲಿ ತರ್ಕ ಮಾಡಬೇಡಿ ಹರಿಯ ಅಚಿಂತ್ಯಶಕ್ತಿ ತರ್ಕಕ್ಕೆ ನಿಲುಕುವಂಥದ್ದಲ್ಲ' ಎನ್ನುವುದು ಬರಿ ಮೋಸ ಸ್ವರೂಪತಃ ಮಹತೋ ಮಹೀಯನಾಗಿ ಆಕಾಶದಂತೆ ಸರ್ವವ್ಯಾಪಕನಾದ ವಿಷ್ಣು ಸ್ವರೂಪ ತಃ ಅಣೋರಣೀಯನೂ ಆಗಿದ್ದಾನೆ ಎಂಬುದು ಅತ್ಯಂತ ಅಸಂಗತ ಸರ್ವವ್ಯಾಪಕವಾದ ಆಕಾಶ ಪರಮಾಣುವಿನಂತೆ ಸಣ್ಣದಾಗು ವುದುಂಟೆ? ಸಣ್ಣ ಸಣ್ಣ ವಸ್ತುಗಳೊಳಗೆ ತುಂಬಿಕೊಂಡ ಮಹಾ ಆಕಾಶವೆ ಆ ವಸ್ತುಗಳೊಳಗೆ ಸಣ್ಣ ಪರಿಮಾಣದಲ್ಲಿ

ಗೋಚರವಾಗುತ್ತದೆ ಹಾಗೇ ವಿಷ್ಣು ಸಣ್ಣ ಸಣ್ಣ ಜಡ ಶರೀರದಲ್ಲಿ ಹುಟ್ಟಿದಾಗ ಸಣ್ಣವನಾಗುತ್ತಾನೆ ಸ್ವರೂಪತಃ ಅಣುತ್ವ, ಸ್ವರೂಪತಃ ಮಹತ್ವ ಎನ್ನುವುದು ಪರಸ್ಪರ ವಿರುದ್ಧ ಆದರೂ ಅಚಿಂತ್ಯಶಕ್ತಿಯಿಂದ ವಿಷ್ಣುವಿನಲ್ಲಿ ಕೂಡುತ್ತವೆ ಎನ್ನುವುದಾದರೆ ಈ ಅಚಿಂತ್ಯ ಶಕ್ತಿಯಿಂದಲೇ ಸುಖದುಃಖಗಳೆರಡೂ ಪೂರ್ಣವಾಗಿ ಹರಿಯಲ್ಲಿ ಇವೆ ಎಂದೇಕೆ ಹೇಳಬಾರದು?

ಅಥವಾ ಜೀವ ಪರಮಾತ್ಮರಿಗೆ ಐಕ್ಯ ಹೇಳೋಣ ದುಃಖಿಯಾದ ಜೀವನಿಗೂ ಪೂರ್ಣಾನಂದನಾದ ಪರಮಾತ್ಮನಿಗೂ ಐಕ್ಯ ವಿರುದ್ಧವಾದರೂ ಪರಮಾತ್ಮನ ಅಚಿಂತ್ಯಶಕ್ತಿಯಿಂದ ಕೂಡುತ್ತದೆ ಎಂದೇಕೆ ಹೇಳಬಾರದು?

ಆದ್ದರಿಂದಲೇ ವಿಶಿಷ್ಟಾದ್ವೈತದಲ್ಲಿ ಸ್ವರೂಪತಃ ವ್ಯಾಪ್ತರಾದ ಲಕ್ಷ್ಮೀನಾರಾಯಣರಿಗೆ ಶರೀರದಿಂದ ಔಪಾಧಿಕವಾಗಿ ಅಣುತ್ವ ಬರುತ್ತದೆ ಎನ್ನಲಾಗಿದೆ

ಇನ್ನು, ಮಾಯೆ ಎಂದರೂ ತಮ್ಮ ಆಸುರೀ ಮಾಯೆಯಂಥಹುದೇ, ಕ್ಷುದ್ರವಾದ ಕಪಟವಿದ್ಯೆ, ವಿಷ್ಣುವಿನದು, ಹೊರತು ಬೇರೇನಲ್ಲ'

ಭವಿಷ್ಯೋತ್ತರ ವೇಂಕಟೇಶ ಮಹಾತ್ಮ್ಯದಲ್ಲಿ ಋಷಭಾಸುರ ಶ್ರೀಹರಿಯ ಮುಂದೆ ಸ್ಪರ್ಧೆಗೆ ನಿಂತು ಹರಿಯ ದಶಾವತಾರ ರೂಪಗಳನ್ನು ಗರುಡವಾಹನತ್ವಾದಿಗಳನ್ನು ಮಾಯೆಯಿಂದ ಪ್ರದರ್ಶಿಸಿ ಕೊನೆಯಲ್ಲಿ ಹರಿಯ ಸುದರ್ಶನ ಚಕ್ರದಿಂದ ಶಿರಶ್ಛೇದ ಹೊಂದುತ್ತಾನೆ

ಹೀಗೆ ಅಸುರರು ಅಸುರಾರಿಗೆ ಮುನಿದು ಮಾಡುವುದೇನು? ತಮ್ಮ ಶಿರಶ್ಛೇದವನ್ನು ತಾವೇ ತಂದುಕೊಳ್ಳುತ್ತಾರಷ್ಟೆ ಹರಿಗೆ ಏನೂ ಚ್ಯುತಿ ಇಲ್ಲ

**ಉಲೂಖಲ ವನಿಕೆಗಳು ಧಾನ್ಯಗಳ ಹಣಿವಂದದಲಿ:**

ಒರಳಿನಲ್ಲಿ ಧಾನ್ಯದ ಕಾಳುಗಳನ್ನು ಹಾಕಿ ಒನಕೆಯಿಂದ ಕುಟ್ಟಿದರೆ ಕಾಳುಗಳು ಮುನಿದು ಮಾಡುವುದೇನು? ಹೊಟ್ಟು ಕಳಚಿಕೊಂಡು ಶಕ್ತಿಗುಂದುತ್ತವೆ ಮೊಳಕೆಯೊಡೆಯುವುದಿಲ್ಲ ಕ್ರಿಮಿಕೀಟಗಳ ಆಕ್ರಮಣಕ್ಕೆ ಒಳಗಾಗುತ್ತವೆ ದನುಜ ರಕ್ಕಸರೂ ಹಾಗೇ ಮುಖ್ಯಪ್ರಾಣನ ಗದಾಪ್ರಹಾರದಿಂದ ಸ್ಥೂಲಸೂಕ್ಷ್ಮ ಶರೀರಗಳನ್ನು ಕಳಚಿಕೊಂಡು ಸ್ವರೂಪ ಶರೀರದಲ್ಲಿ ಬೆತ್ತಲೆಯಾಗಿ ನಿಂತು ನರಕದ ಪೆಟ್ಟುಗಳನ್ನು ಅನಂತಕಾಲದವರೆಗೂ ಉಣ ಬೇಕಾಗುವುದು

**ಧಾನ್ಯಗಳ ಹಣಿವಂದದಲಿ ಸಂಹರಿಪ**

ಒನಕೆ ಧಾನ್ಯಗಳನ್ನು ಕುಟ್ಟಿ ಪುಡಿ ಮಾಡುವುದಿಲ್ಲ ಹೊಟ್ಟಿನ ಹೊದಿಕೆಯನ್ನು ಮಾತ್ರ ತೆಗೆಯುತ್ತದೆ ಆದರೂ ರಕ್ಷಾಕವಚ ರೂಪದ ಆ ಹೊದಿಕೆ ಹೋಯಿತೆಂದರೆ ಧಾನ್ಯ ಸತ್ತಂತೆಯೆ ಹಾಗೇ ದಾನವರಿಗೆ ಲಿಂಗ ಭಂಗದಿಂದ ಸ್ವರೂಪ ಶರೀರ ನಾಶವಾಗುವುದಿಲ್ಲ ಹರಿ ನಾಶ ಮಾಡುವುದಿಲ್ಲ ಅದು ಅನಾದಿ ನಿತ್ಯ ಅನಾದಿ ನಿತ್ಯವಾಗಿರುವಂತೆಯೆ ನೋಡಿಕೊಳ್ಳುತ್ತಾನೆ ಆದರೂ ಇದು ನಾಶವೆ

ದಾಸರಾಯರು ಕೊಟ್ಟಿರುವ ಒರಳಿನ ದೃಷ್ಟಾಂತ ವೇದೋಕ್ತ ವೇದದಲ್ಲಿ ಶ್ರೀಹರಿ ತಾನೇ ಅಸುರರಿಗೆ ಈ ಎಚ್ಚರ ನೀಡಿದ್ದಾನೆ-

ಅಭೀದಮೇಕಮೇಕೋ ಅಸ್ಮಿ ನಿಃಷಾಳ್
ಅಭೀ ದ್ವಾ ಕಿಮು ತ್ರಯಃ ಕರಂತಿ।
ಖಲೇ ನ ಪರ್ಷಾನ್ ಪ್ರತಿಹನ್ಮಿ ಭೂರಿ
ಕಿಂ ಮಾಂ ನಿಂದಂತಿ ಶತ್ರವೋಽನಿಂದ್ರಾಃ॥ -(ಋಗ್ವೇದ 10 48 7)

ಇದರ ಅರ್ಥಾನುವಾದ ಬ್ರಹ್ಮಾಂಡಪುರಾಣದಲ್ಲಿ ಬಂದಿದೆ-

ಇದಂ ಜಗತ್ ಸರ್ವಮಧೇದೃಶಾನಿ
ಭೂರೀಣೀ ವಾ ಮಾಮಭಿಯಾಂತಿ ಸಂಖ್ಯೇ।
ಧಾನ್ಯಾನಿ ಯದ್ವತ್ ಖಲಗಾನಿ ಮರ್ತ್ಯಃ
ಸಂಚೂರ್ಣಯಿಷ್ಯಾಮ್ಯಹಮೇಕ ಏವ।

'ಈ ದುರ್ಜನರ ಆಟೋಪಕ್ಕೆ ನಾನು ಮಣಿಯುವುದಿಲ್ಲ ಅವರ ಒಂದು ಇಡಿ ಪ್ರಪಂಚವೇ ನನ್ನ ಮೇಲೇರಿ ಬರಲಿ, ಎರಡು, ಏಕೆ, ಮೂರು ಬಂದರೂ ನನ್ನನ್ನು ಏನೂ ಮಾಡಲಾರವು ಧಾನ್ಯದ ಕಾಳುಗಳನ್ನು ಒರಳಿನಲ್ಲಿ ಒನಕೆ ಕುಟ್ಟುವಂತೆ ಕುಟ್ಟುವೆನು'

ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ
ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ।

ಎಂದು ಶ್ರುತಿಯಲ್ಲಿ ಭಗವಂತನಿಗೆ ಅಣುಮಹತ್ತಾಗುವ ಶಕ್ತಿ ಏಕ ಅನೇಕವಾಗುವ ಶಕ್ತಿ ಮುಂತಾದ ವಿವಿಧ ಶಕ್ತಿ ಸ್ವಾಭಾವಿಕವಾಗಿದೆ ಎಂದು ಹೇಳಿರುವಾಗ ಪ್ರಮಾಣಸಿದ್ಧವಾದ ಈ ಮಹಿಮೆಗಳನ್ನು ಶುಷ್ಕತರ್ಕದಿಂದ ಅಲ್ಲಗಳೆಯಬಾರದು ಕೂಡಿಸಬೇಕು ಹೇಗೆ? ಬ್ರಹ್ಮಸೂತ್ರ (2 1 29) ಹೇಳುತ್ತದೆ-

ಓಂ ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ಓಂ

ಅಚಿಂತ್ಯಶಕ್ತಿ ಶ್ರೀಹರಿಗೆ ಒಬ್ಬನಿಗೇ ಇರುತ್ತದೆ ಆದರಿಂದ ಆತ ಸ್ವತಂತ್ರನಾಗಿದ್ದು, ಅಣುವೂ ಆಗಬಲ್ಲ, ಮಹತ್ತೂ ಆಗಬಲ್ಲ, ಎಲ್ಲ ವಿರುದ್ಧವಾದ, ಆದರೆ ಪ್ರಮಾಣಸಿದ್ಧವಾದ ಗುಣಧರ್ಮಗಳನ್ನು ಅವಿರೋಧವಾಗಿ ಮೈಗೂಡಿಸಿಕೊಳ್ಳಬಲ್ಲ ಶ್ವೇತಾಶ್ವತರೋಪನಿಷತ್ತು ಹಾಗೆ ಹೇಳುತ್ತದೆ-

ವಿಚಿತ್ರಶಕ್ತಿಃ ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ।
ಏಕೋ ವಶೀ ಸರ್ವಭೂತಾಂತರಾತ್ಮಾ ಸರ್ವಾನ್ ದೇವಾನೇಕ ಏವಾನುವಿಷ್ಟಃ॥

**ದೇವ ಮಾನವ ದಾನವರು ಎಂ**
**ದೀವಿಧದಲಾವಾಗಲಿಪ್ಪರು**
**ಮೂವರೊಳಗಿವಗಿಲ್ಲ ಸ್ನೇಹೋದಾಸಿನ ದ್ವೇಷ।**
**ಜೀವರಧಿಕಾರಾನುಸಾರದ**
**ಲೀವ ಸುಖ ಸಂಸಾರ ದುಃಖವ**
**ತಾವುಣದಲವರವರಿಗುಣಿಸುವ ನಿರ್ಗತಾಶನನು** ॥ ೨೦ ॥

ದೇವತೆಗಳು ಮಾನವರು ದಾನವರು ಎಂದು ಈ ರೀತಿಯಲ್ಲಿ ಚೇತನರು ಮೂರು ಬಗೆಯಾಗಿ ಯಾವಾಗಲೂ ಇರುತ್ತಾರೆ ಮೂವರೊಳಗೂ ಶ್ರೀಹರಿಗೆ ಸ್ನೇಹವಾಗಲಿ ಉದಾಸೀನವಾಗಲಿ, ದ್ವೇಷವಾಗಲಿ ಇಲ್ಲ ಜೀವರ ಯೋಗ್ಯತಾನುಸಾರ ಅವರಿಗೆ ಕ್ರಮವಾಗಿ ಸುಖ, ಸುಖದುಃಖಮಿಶ್ರ ಮತ್ತು ದುಃಖ ಕೊಡುತ್ತಾನೆ ತಾನು ಉಣದಲೆ ಅವರವರಿಗೆ ಉಣಿಸುತ್ತಾನೆ ಏಕೆಂದರೆ ಅವನು ಕರ್ಮಫಲ ಉಣದವನು

**ದೇವ ಮಾನವ ದಾನವರು.**

'ದೇವ ಋಷಿ ಪಿತೃಪ ನರಾಃ' ದೇವತೆಗಳು ಋಷಿಗಳು ಪಿತೃಗಳು ಚಕ್ರವರ್ತಿಗಳು ಮತ್ತು ಮನುಷ್ಯೋತ್ತಮರು ಎಂದು ಐದು ಬಗೆಯ ಮುಕ್ತಿಯೋಗ್ಯ ಸಾತ್ವಿಕ ಚೇತನರ ವರ್ಗವನ್ನು ಹೇಳುವ ಶಬ್ದ 'ದೇವ' ಎಂದು

ಸ್ವರ್ಗ ಪ್ರಚುರರು ಭೂಪ್ರಚುರರು ನಿರಯಪ್ರಚುರರು ಎಂದು ಮೂರು ಬಗೆಯಾದ ನಿತ್ಯ ಸಂಸಾರಿ ರಾಜಸ ಚೇತನರು ಮನುಷ್ಯ ಮಧ್ಯಮರು 'ಮಾನವರು'

ದೈತ್ಯರು ರಾಕ್ಷಸರು ಪಿಶಾಚರು ಮನುಷ್ಯಾಧಮರು ಎಂದು ನಾಲ್ಕು ಬಗೆಯಾದ ತಮೋಯೋಗ್ಯ ತಾಮಸಚೇತನರು 'ದಾನವರು'.

ಈ ಮೂರು ವಿಭಾಗದಲ್ಲಿಯೂ ಮುಂದುಮುಂದಿನವರು ಸ್ವರೂಪ ಯೋಗ್ಯತೆಯಲ್ಲಿ ಕಡಿಮೆಯವರು.

**ಈ ವಿಧದಲಾವಾಗಲಿಪ್ಪರು**

ಈ ವಿಧದಲ್ಲಿ ಯಾವಾಗಲೂ ಇರುತ್ತಾರೆ? ಅಂದರೆ ಸುಪ್ತವಾಗಿ ಎಲ್ಲ ಚೇತನರ ಸ್ವಭಾವ ಹೀಗೆ ಯಾವಾಗಲೂ ಇರುತ್ತದೆ ಸಂಸಾರಾವಸ್ಥೆಯಲ್ಲಿ ಇನ್ನೂ ವ್ಯಕ್ತವಾಗಿರುವುದಿಲ್ಲ ಲಿಂಗಭಂಗವಾಗುವಾಗ ವ್ಯಕ್ತವಾಗಿರುತ್ತದೆ ನಿತ್ಯಸಂಸಾರಿಗಳಿಗೂ ಲಿಂಗಭಂಗ ಉಂಟು ಆಗ ಅವರಿಗೂ ಸ್ವರೂಪಯೋಗ್ಯತೆ ವ್ಯಕ್ತವಾಗುವುದೆಂದು ಶ್ರೀವಾದಿರಾಜರು ಶ್ರೀಸತ್ಯಧರ್ಮರು ಮುಂತಾದವರು ಪ್ರತಿಪಾದಿಸಿದ್ದಾರೆ

ಅಥವಾ ಈ ವಿಧದಲ್ಲಿಯೇ ಯಾವಾಗಲೂ ಇರುತ್ತಾರೆ ಸ್ವರೂಪ ಯೋಗ್ಯತೆ ಬದಲಾಗುವುದಿಲ್ಲ ಮಾನವ ಸ್ವರೂಪದಿಂದ ದೇವನಾಗಲಾರ ದೇವ ಸ್ವರೂಪದಿಂದ ಮಾನವನಾಗಲಾರ ಮಾನವ ದೇವಲೋಕದಲ್ಲಿ ಜನಿಸಿ ದೇವಶರೀರಧಾರಿಯಾಗಬಹುದು ದೇವ ಮಾನವನಾಗಿ ಅವತರಿಸಬಹುದು ಸ್ವಭಾವದಲ್ಲಿ ವ್ಯತ್ಯಾಸವಾಗಲಾರದು ಶ್ರೀರಾಘವೇಂದ್ರರು ಮಾನವರಾಗಿ ಹುಟ್ಟಿದರೂ 'ದೇವಸ್ವಭಾವೋ ದಿವಿಜದ್ರುಮೋಽಯಂ' ಎಂಬಂತೆ ದೇವಸ್ವಭಾವದವರಾಗಿದ್ದವರು ಪ್ರಹ್ಲಾದ ಅಸುರನಾಗಿ ಹುಟ್ಟಿದರೂ 'ರಹಿತಾಸುರೋಽಸುರಃ' ಅಸುರಸ್ವಭಾವವಿಲ್ಲದ ಅಸುರನಾಗಿದ್ದ

ಅಥವಾ, ಈ ವಿಧದಲ್ಲಿ ಯಾವಾಗಲೂ ಚೇತನರು ಸೃಷ್ಟಿಯಲ್ಲಿ ಇರುತ್ತಾರೆ ಅಂದರೆ

'ಧಾತಾ ಯಥಾಪೂರ್ವಮಕಲ್ಪಯತ್'

ಎಂಬಂತೆ ಪ್ರತಿಕಲ್ಪದಲ್ಲಿಯೂ ದೇವತೆಗಳು ಮಾನವರು ದಾನವರು ಎಂದು ಮೂರು ಬಗೆಯ ಶರೀರಗಳಲ್ಲಿ ಚೇತನರಿರುತ್ತಾರೆ ಸತ್ಕರ್ಮದಿಂದ ದೇವಶರೀರ ದುಷ್ಕರ್ಮದಿಂದ ದಾನವಶರೀರ ಉದಾಸೀನ ಕರ್ಮದಿಂದ ಮಾನವ ಶರೀರಗಳು ಬರುತ್ತವೆ ಹೊರತು, ಸ್ವರೂಪಯೋಗ್ಯತಾಧೀನವಾಗಿ ಅಲ್ಲ ಏಕೆಂದರೆ ಸ್ವರೂಪ ಇನ್ನೂ ವ್ಯಕ್ತವಾಗಿರುವುದಿಲ್ಲ

**ಮೂವರೊಳಗಿವಗಿಲ್ಲ ಸ್ನೇಹೋದಾಸಿನ ದ್ವೇಷ**

ಶ್ರೀಹರಿಗೆ ಮೂರು ವಿಧದ ಚೇತನ ರಲ್ಲಿಯೂ ನಿಷ್ಪಕ್ಷಪಾತ ದೃಷ್ಟಿಯೆ ಇರುತ್ತದೆ

ಓಂ ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ಓಂ

ಎಂದು ಬ್ರಹಸೂತ್ರದಲ್ಲಿ ಹೇಳುವಂತೆ ಶ್ರೀಹರಿ ಯಾರಲ್ಲಿಯೂ ವೈಷಮ್ಯ ತೋರುವುದಿಲ್ಲ ಕ್ರೌರ್ಯದಿಂದಲೂ ವರ್ತಿಸುವುದಿಲ್ಲ ಎಲ್ಲರಲ್ಲಿಯೂ ಸಮಾನವಾಗಿ ನಡೆದುಕೊಳ್ಳುತ್ತಾನೆ

'ಪ್ರಣತರನು ಕಾಯ್ದಿಹನು' 'ದುರ್ಜನರ ಸೇವೆಯನೊಲ್ಲ' ಎಂದು ಹೇಳಿದಂತೆ ಅವನಿಗೆ ಯಾರು ಮಣಿಯುವರೋ ಅವರನ್ನುಕಾಪಾಡುತ್ತಾನೆ ದುರ್ಜನರನ್ನು ಹಿಂಸಿಸುತ್ತಾನೆ ಅವರು ಸೇವೆ ಮಾಡಲು ಬಂದರೂ ಸ್ವೀಕರಿಸಲೊಲ್ಲ ಎಂದು ವೈಷಮ್ಯ ತೋರುತ್ತಿರುವುದು ನಿಜವೆ ತಾನೆ? ಇಲ್ಲದಿದ್ದರೆ ಅವನನ್ನು ಭಕ್ತರು ಏಕೆ ಭಜಿಸುತ್ತಾರೆ? ಎಂಬ ಪ್ರಶ್ನೆಗೆ ಪ್ರಶ್ನೆಯಲ್ಲಿಯೆ ಉತ್ತರ ಅಡಗಿದೆ ಅವನಿಗೆ ಸೇವೆ ಬೇಕೆನ್ನುವುದಾದರೆ ದುರ್ಜನರ ಸೇವೆಯನ್ನು ಏಕೆ ಒಲ್ಲ? 'ಏಧಮಾನ ದ್ವಿಟ್' ಎಂಬುದು ವೇದವೆ ಅವನಿಗಿತ್ತ ಬಿರುದು. ಯೋಗ್ಯತೆಯನ್ನು ಮೀರಿ ಯಾರೂ ಅವನ ಸೇವೆ ಮಾಡಿ ಪುಣ್ಯ ಕಟ್ಟಿಕೊಳ್ಳಲು ಅವನು ಯಾರಿಗೂ ಅವಕಾಶ ಕೊಡುವುದಿಲ್ಲ ಕೊಟ್ಟರೂ ಅವರು ಮಾಡುವ ಅಧಿಕ ಪುಣ್ಯವನ್ನು ಹೇಗೋ ಕಸಿದುಕೊಳ್ಳುತ್ತಾನೆ

ಸ್ನೇಹವಿಲ್ಲದಿದ್ದರೆ ದ್ವೇಷವೋ ಉದಾಸೀನವೋ ಇರಬೇಕು

ದ್ವೇಷವಿಲ್ಲದಿದ್ದರೆ ಸ್ನೇಹವೋ ಉದಾಸೀನವೋ ಇರಬೇಕು

ಉದಾಸೀನವಿಲ್ಲದಿದ್ದರೆ ಸ್ನೇಹವೋ ದ್ವೇಷವೋ ಇರಬೇಕು
ಮೂರು ಇಲ್ಲವೆಂದರೆ ದೇವರು ಬರಿ ಕಲ್ಲಾಗಿರಬೇಕು!

ಹೀಗೆ ಹೇಳಬಾರದು ತನಗೆ ಉಪಕಾರದ ಅಪೇಕ್ಷೆ ಇದ್ದಾಗ ಉಪಕಾರ ಮಾಡುವವನಲ್ಲಿ ಸ್ನೇಹ, ಮಾಡದೆ, ಅಪಕಾರ ಮಾಡುವವನಲ್ಲಿ ದ್ವೇಷ ಸಹಜ ಉಪಕಾರ ಅಪಕಾರವೆರಡನ್ನೂ ಮಾಡದವನಲ್ಲಿ ಉದಾಸೀನತೆ ಸಹಜ ಶ್ರೀಹರಿ ಸರ್ವಶಕ್ತ, ಪೂರ್ಣಕಾಮ ಅವನಿಗೆ ಯಾರೂ ಉಪಕಾರ ಮಾಡಬೇಕಾಗಿಲ್ಲ ಯಾರೂ ಅಪಕಾರ ಮಾಡಲು ಶಕ್ತನಲ್ಲ ಯಾರನ್ನೂ ಸುಮ್ಮನೆ ಅವರ ಪಾಡಿಗೆ ಬಿಟ್ಟುಬಿಡುವುದೂ ಇಲ್ಲ 'ತೇನ ವಿನಾ ತೃಣಮಪಿ ನ ಚಲತಿ' ಅದರಿಂದ ಸ್ನೇಹವಾಗಲಿ, ದ್ವೇಷವಾಗಲಿ, ಉದಾಸೀನವಾಗಲಿ ಅವನಿಗೆ ಇಲ್ಲ

**ಜೀವರಧಿಕಾರಾನುಸಾರದಲಿ**

ಶ್ರೀಹರಿ ಎಲ್ಲರಿಂದಲೂ ಕರ್ಮ ಮಾಡಿಸುತ್ತಾನೆ ತಕ್ಕ ಫಲವನ್ನು ಕೊಡುತ್ತಾನೆ ವೈಷಮ್ಯ ಮಾಡುವುದಿಲ್ಲ

ಕೆಲವರಿಂದ ಸತ್ಕರ್ಮಮಾಡಿಸಿ ಸುಖನೀಡುತ್ತಾನೆ ಕೆಲವರಿಂದ ದುಷ್ಕರ್ಮ ಮಾಡಿಸಿ ದುಃಖನೀಡುತ್ತಾನೆ ಕೆಲವರಿಂದ ಸತ್ಕರ್ಮ, ದುಷ್ಕರ್ಮಗಳೆರಡನ್ನೂ ಸಮನಾಗಿ ಮಾಡಿಸಿ ಸುಖದುಃಖ ಮಿಶ್ರಫಲವನ್ನೇ ನೀಡುತ್ತಾನೆ, ಹರಿ ಇವು ವೈಷಮ್ಯವಲ್ಲವೆ? ಎಂದರೆ ಸಮಾಧಾನ- 'ಜೀವರಧಿಕಾರಾನುಸಾರದಲಿ ಈವ' ಅನಾದಿ ಜೀವ ಯೋಗ್ಯತಾನುಸಾರ ಅನಾದಿಯಿಂದ ಕೆಲವು ಜೀವರಲ್ಲಿ ಪ್ರಾಚೀನ ಸತ್ಕರ್ಮಪರಂಪರೆಯೆ ಇರುತ್ತದೆ ಅದಕ್ಕನುಗುಣವಾಗಿ ಸತ್ಕರ್ಮ ಮಾಡಿಸಿ ಸುಖ ನೀಡುತ್ತಾನೆ ಕೆಲವು ಜೀವರಲ್ಲಿ ದುಷ್ಕರ್ಮ ಪರಂಪರೆ, ಇನ್ನು ಕೆಲವರಲ್ಲಿ ಮಿಶ್ರ, ಫಲವೂ ಹಾಗೇ

ಹಾಗಾದರೆ ಹರಿಗೆ ಸ್ವಾತಂತ್ರ್ಯವೆ ಇಲ್ಲವೆ? ಜೀವಯೋಗ್ಯತಾನುಸಾರ ಅನಾದಿ ಪ್ರಾಚೀನ ಕರ್ಮ, ಅದಕ್ಕನುಸಾರ ಈಗಿನ ಕರ್ಮ, ಅದಕ್ಕೆ ತಕ್ಕ ಫಲ ಹರಿ ಸ್ವತಂತ್ರವಾಗಿ ಏನೂ ಮಾಡುವುದಿಲ್ಲ! ಎಂದರೆ, ಈ ಮೂರೂ ಹರಿಯ ಅಧೀನ ತನ್ನ ಅಧೀನವಾದ ವಸ್ತುಗಳಿಗೆ ಅನುಸಾರವಾಗಿ ಪ್ರವೃತ್ತಿಮಾಡಿದರೆ ಸ್ವಾತಂತ್ರ್ಯ ಇಲ್ಲವೆಂದಾಗುವುದಿಲ್ಲ ಎನ್ನಬೇಕು

ಮೂರೂ ಹರಿಯ ಅಧೀನವಿರುವಾಗ ಕೆಲವು ಜೀವರಲ್ಲಿ ಮೂರೂ ಒಳ್ಳೆಯದು, ಕೆಲವರಲ್ಲಿ ಮೂರೂ ಕೆಟ್ಟದಾಗಿ ಇರುವಂತೆ ಹರಿ- ಏಕೆ ಮಾಡಿದ? ಇದು ವೈಷಮ್ಯವಲ್ಲವೆ, ಎಂದರೆ, ಜೀವಯೋಗ್ಯತೆಗೆ ಅನನುಗುಣವಾಗಿ ತನ್ನಿಷ್ಟಾನುಸಾರವ ಕರ್ಮ ಮಾಡಿಸಿ ಫಲನೀಡಿದರೆ ಮಾತ್ರ ದೋಷವಾಗುತ್ತದೆ ಹಾಗೆ ಮಾಡುವುದಿಲ್ಲ

ಯೋಗ್ಯತೆಯನ್ನೆ ಏಕೆ ಬದಲಿಸಬಾರದು? ರಾವಣಾದಿಗಳನ್ನು ಏಕೆ ಹರಿ ಕೊಲ್ಲಬೇಕು? ಅವನಿಗೆ ಸದ್ಬುದ್ಧಿಕೊಡಬಾರದಿತ್ತೆ? ಯೋಗ್ಯತೆಯನ್ನೇ ಬದಲಿಸಬಾರದಿತ್ತೇ? ಬದಲಿಸಲು ಶಕ್ತಿ ಇಲ್ಲದಿದ್ದರೆ ಅವನು ದೇವರಲ್ಲ ಶಕ್ತಿ ಇದ್ದು ಬದಲಿಸದಿದ್ದರೂ ವೈಷಮ್ಯ ನೈರ್ಘೃಣ್ಯ

ದೋಷಗಳಿಗೆ ಪಕ್ಕಾಗುವುದರಿಂದ ಅವನು ದೇವರಲ್ಲ! ಈ ಪ್ರಶ್ನೆಗೆ ಸಮಾಧಾನ - ಅವನು ಸ್ವತಂತ್ರ ಅವನ ಇಚ್ಛೆ ಹಾಗಿದೆ ಅವನನ್ನು ಕೇಳಲು ನಾವು ಯಾರು! ಅವನು ತನ್ನ ಸಂಕಲ್ಪಾನುಸಾರ ಪರಸ್ಪರ ಅತ್ಯಂತ ವಿಲಕ್ಷಣವಾದ ಅನಂತ ಜೀವ ಯೋಗತೆಗಳನ್ನು ಅನಾದಿಕಾಲದಿಂದ ಏನೂ ವ್ಯತ್ಯಾಸ ಮಾಡದೆ ಸ್ವಶಕ್ತಿಯಿಂದ ಹಾಗೇ ಕಾಪಾಡಿಕೊಂಡು ಬಂದಿರುವುದು ಅವನ ಅಪಾರ ಮಹಿಮೆಯೆ ಅಲ್ಲವೆ?

**ತಾ ಉಣದಲೆ ಅವರವರಿಗುಣಿಸುವ!**

'ವಿಪಿನದಿ ಶಬರಿಯೆಂಜಲನುಂಡ' 'ಋಷಿಪತ್ನಿಯರು ಕೊಟ್ಟನ್ನ ತಾ ಭುಂಜಿಸಿದ' ಎಂದು ಮುಂತಾಗಿ ಹೇಳುವ ದಾಸರಾಯರು 'ತಾ ಉಣದಲೆ' ಎನ್ನುತ್ತಿದ್ದಾರೆ! ಎಂದು ಆಕ್ಷೇಪಿಸಕೂಡದು. ಅವರೆ ಮುಂದೆ,

ಕಾದ ಕಬ್ಬಿಣ ಹಿಡಿದು ಬಡೆಯಲು
ವೇದನೆಯು ಲೋಹಗಳಿಗಲ್ಲದೆ
ಆದುದೇನೈ ಅನಳಗಾ ವ್ಯಥೆ ಏನು ಮಾಡಿದರೂ?

-ಎಂದು ಉದಾಹರಣೆ ಕೊಟ್ಟು ಶ್ರೀಹರಿ ದುಷ್ಕರ್ಮ ಫಲವಾದ ದುಃಖವನ್ನು ತಾನು ಉಣ್ಣುವುದಿಲ್ಲ, ಅದನ್ನು ಜೀವನಿಗೇ ಉಣಿಸುತ್ತಾನೆ ಎನ್ನುತ್ತಾರೆ ಸತ್ಕರ್ಮಫಲ ರಸವನ್ನು ಮಾತ್ರ, ಸ್ವಯಂ ಪೂರ್ಣಾನಂದನಾದರೂ ಲೀಲೆಯಿಂದ ಉಣ್ಣುತ್ತಾನೆ, ಉಂಡು ಉಣ್ಣಿಸುತ್ತಾನೆ.

'ಚತುರವಿಧ ರಸ ರೂಪ ತಾನಾಗಿ ಮನಕೆ ಬಂದಂತುಂಡುಣಿಸಿ' ಎಂಬಂತೆ ಆತ ತನ್ನ ಸ್ವರೂಪಾನಂದವನ್ನೆ ತಾನು ಉಣ್ಣುತ್ತಾನೆ ಪ್ರಾಕೃತ ಸುಖವನ್ನು ಜೀವರಿಗೆ ಉಣಿಸುತ್ತಾನೆ

***ನಿರ್ಗತಾಶನನು***·

'ಅನಶ್ನನ್ನನ್ಯೋ ಅಭಿಚಾಕಶೀತಿ'

'ಅನ್ಯೋ ನಿರನ್ನೋऽಪಿ ಬಲೇನ ಭೂಯಾನ್'

ಎಂದು ಶ್ರುತಿಸ್ಮೃತಿಗಳು ಸಾರುವುದರಿಂದ ಹರಿ ಉಣುವುದಿಲ್ಲ

'ಯಥಾತರೋರ್ಮೂಲ ನಿಷೇಚನೇನ

ತೃಪ್ಯಂತಿ ತತ್‌ಸ್ಕಂಧ ಭುಜೋಪಶಾಖಾಃ'

'ಪಾದಪಗಳಡಿಗೆರೆಯೆ ನಲಿಲವ
ತೋದು ಕೊಂಬೆಗಳುಬ್ಬಿ'
ಎಂಬಂತೆ ಜೀವರಿಗೆ ಉಣಿಸುವುದಕ್ಕಾಗಿ ಉಣುವುದನ್ನೂ ಬಿಡುವುದಿಲ್ಲ!

**ಎಲ್ಲಿ ಕೇಳಿದರಲ್ಲಿ ನೋಡಿದ**
**ರಲ್ಲಿ ಬೇಡಿದರಲ್ಲಿ ನೀಡಿದ**
**ರಲ್ಲಿ ಓಡಿದರಲ್ಲಿಯಾಡಿದರಲ್ಲಿ ಇರುತಿಹನು।**
**ಬಲ್ಲಿದರಿಗತಿ ಬಲ್ಲಿದನು ಸರಿ**
**ಯಿಲ್ಲ ಇವಗಾವಲ್ಲಿ ನೋಡಲು**
**ಖುಲ್ಲ ಮಾನವರೊಲ್ಲನ ಪ್ರತಿಮಲ್ಲ ಜಗಕೆಲ್ಲ ॥ ೨೧ ॥**

ಶ್ರೀ ಹರಿ ಎಲ್ಲಿ ಕೇಳಿದರೂ ಅಲ್ಲಿ ಇರುತ್ತಾನೆ ಎಲ್ಲಿ ನೋಡಿದರೂ, ಎಲ್ಲಿ ಬೇಡಿದರೂ, ಎಲ್ಲಿ ನೀಡಿದರೂ ಎಲ್ಲಿ ಓಡಿದರೂ, ಎಲ್ಲಿ ಆಡಿದರೂ ಅಲ್ಲಿ ಇರುತ್ತಾನೆ ಅವನು ಬಲ್ಲಿದರಿಗೆ ಅತಿಬಲ್ಲಿದ. ಅವನಿಗೆ ಸಮಾನ ಎಲ್ಲಿ ನೋಡಿದರೂ ಇಲ್ಲ ಖೂಳ ಮಾನವರನ್ನು ಅವನು ಒಲ್ಲ ಜಗತ್ತಿಗೆಲ್ಲ ಇವನು ಅಪ್ರತಿಮಲ್ಲ

1 ಸಜ್ಜನರು ಅವನ ಪ್ರೀತಿಗೋಸ್ಕರ ಶ್ರವಣಾದಿ ಸತ್ಕರ್ಮ ಆಚರಿಸಬೇಕು ಏಕೆಂದರೆ,

**ಎಲ್ಲಿ ಕೇಳಿದರೂ ಅಲ್ಲಿ ಇರುತಿಹನು.**

ಎಲ್ಲಿ ಹರಿಕಥಾಶ್ರವಣ ಮಾಡುವರೋ ಅಲ್ಲಿ ಹರಿ ಇದ್ದು ಆ ಸತ್ಕರ್ಮವನ್ನು ಮಾಡಿ ಮಾಡಿಸಿ ಫಲನೀಡುವನು ಹೃದಯದಲ್ಲಿ ನಿಂತು ಪರಮ ಮಂಗಳಕರನಾದ ಆತ ಎಲ್ಲ ಅಮಂಗಲಗಳನ್ನು ದೂರ ಮಾಡುವನು

ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ।
ಹೃದ್ಯಂತಃಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಂ ( ಭಾಗ 1.2 18)

ಎಂದು ಭಾಗವತ ಹೇಳಿದೆ 'ಸಂಕೋಚ್ಯ ಸರ್ವಕರ್ಮಾಣಿ ಶ್ರವಣಾದಿ ಸಮಾಚರೇತ್' ಬೇರೆಲ್ಲ ಕಾರ್ಯವನ್ನು ಸಂಕೋಚ ಮಾಡಿ ಶ್ರವಣಾದಿಗಳನ್ನು ಆಚರಿಸಬೇಕೆಂದು ವಿಷ್ಣುರಹಸ್ಯ ಹೇಳಿದೆ

**ಎಲ್ಲಿ ನೋಡಿದರೂ ಅಲ್ಲಿ ಇರುತಿಹನು**

ಪರಾವರೇಷು ಭೂತೇಷು ಬ್ರಹ್ಮಾಂತಸ್ಥಾವರಾದಿಷು।
ಏಕ ಏವ ಪರೋ ಹ್ಯಾತ್ಮಾ ಭಗವಾನೀಶ್ವರೋऽವ್ಯಯಃ ॥
ಕೇವಲಾನುಭವಾನಂದಸ್ವರೂಪಃ ಪರಮೇಶ್ವರಃ।
ತಸ್ಮಾತ್ ಸರ್ವೇಷು ಭೂತೇಷು ದಯಾಂ ಕುರುತ ಸೌಹೃದಂ ॥ ( ಭಾಗ 7 6 26, 30)

ತೃಣಜೀವಿಯಿಂದ ತೊಡಗಿ ಚತುರ್ಮುಖ ಬ್ರಹ್ಮನವರೆಗೂ ಎಲ್ಲ ಚೇತನರಲ್ಲಿ ಆನಂದಮಯ ಪರಮಾತ್ಮ ನೆಲೆಸಿದ್ದಾನೆ ಅವನ ಪ್ರೀತಿಗಾಗಿ ಅವರಿಗೆ ಉಪಕಾರ ಮಾಡಬೇಕು ದಯೆದೋರಬೇಕು, ಎನ್ನುತ್ತಾನೆ ಪ್ರಹ್ಲಾದ

**ಎಲ್ಲಿ ಬೇಡಿದರೂ ಅಲ್ಲಿ ಇರುತಿಹನು**

ದ್ರೌಪದಿ ಹಸ್ತಿನಾವತಿಯ ಜೂಜಿನ ಸಭೆಯಲ್ಲಿ ನಿಂತು 'ಹಾ ಕೃಷ್ಣ! ದ್ವಾರಕಾವಾಸಿನ್!' ಎಂದು ದ್ವಾರಕೆಯಲ್ಲಿದ್ದ ಭಗವಾನ್ ಕೃಷ್ಣನನ್ನು ಬೇಡಿದಳು ಭಗವಂತ ಅಲ್ಲಿಯೇ ಅದೃಶ್ಯನಾಗಿ ನಿಂತು ಅಕ್ಷಯಾಂಬರ ನೀಡಿದ ಅದರಿಂದ

'ರಕ್ಷತೀತ್ಯೇವ ವಿಶ್ವಾಸಃ ತದೀಯೋಽಹಮಿತಿ ಸ್ಮೃತಿಃ।
ಶರಣಾಗತಿರಿತ್ಯೇಷಾ ವಿಷ್ಣೌ ಮೋಕ್ಷ ಫಲಪ್ರದಾ ॥'

ಎಂಬಂತೆ ಹರಿ ನಾವು ಕರೆದಲ್ಲಿ ಇದ್ದು ಕಾಪಾಡುತ್ತಾನೆ ಎಂಬ ವಿಶ್ವಾಸ ಇಡಬೇಕು ಇದುವೆ ಶರಣಾಗತಿ, ಮೋಕ್ಷವೂ ಇದರಿಂದ ಲಭ್ಯ

**ಎಲ್ಲಿ ನೀಡಿದರೂ ಅಲ್ಲಿ ಇರುತಿಹನು:**

ಅನ್ನ ಗೋ ಭೂ ಹಿರಣ್ಯಾದಿ ದ್ರವ್ಯದಾನ ಮಾಡಿದರೆ, ಜ್ಞಾನ ಸತ್ರಗಳ ಮೂಲಕ ವಿದ್ಯಾದಾನ ಮಾಡಿದರೆ ಅಲ್ಲಿ ಶ್ರೀಹರಿ ಇರುತ್ತಾನೆ ಅದರಿಂದ ಉಪನಿಷತ್ತು 'ಶ್ರದ್ಧಯಾ ದೇಯಂ ಅಶ್ರದ್ಧಯಾ ದೇಯಂ' ಎಂದು ಮುಂತಾಗಿ ದಾನವನ್ನು ವಿಧಿಸಿದೆ

**ಎಲ್ಲಿ ಓಡಿದರೂ ಅಲ್ಲಿ ಅಲ್ಲಿ ಇರುತಿಹನು :**

'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್' ಎಂದು ಸಂಸಾರದಲ್ಲಿ ವಿರಕ್ತಿ ಹೊಂದಿ ಶ್ರೀ ಹರಿ ನಮ್ಮನ್ನು 'ಸಮಾಯಾತ ಸಮಾಯಾತ ಯೇ ಯೇ ಮೋಕ್ಷ ಪದೇಚ್ಛವಃ' ಮೋಕ್ಷ ಬೇಕಾದವರು ಬನ್ನಿ ಬನ್ನಿರೆಂದು ಕೂಗಿ ಕರೆಯುವಾಗ ಅವನ ಬಳಿಗೆ ಓಡಬೇಕು ಅನುಮಾನ ಮಾಡಬಾರದು ಆಗ ಅಲ್ಲಿ ಹರಿ ಸಿಗುತ್ತಾನೆ

ಇಹ ಚೇದವೇದೀತ್ ಅಥ ಸತ್ಯಮಸ್ತಿ ನ ಚೇದಿಹಾವೇದಿನ್ಮಹತೀ ವಿನಷ್ಟಿಃ।

ಈ ಮಾನವ ಜನ್ಮ ಬಂದಾಗ ಮೋಕ್ಷಸಾಧನೆ ಮಾಡಿದರೆ ಆತ್ಮೋದ್ಧಾರ ಉಂಟು ಮಾಡದಿದ್ದರೆ ಮಹಾ ಅನರ್ಥ ಉಂಟು ಎಂದು ಉಪನಿಷತ್ತು ಎಚ್ಚರಿಸುತ್ತಿದೆ

**ಎಲ್ಲಿ ಆಡಿದರೆ ಅಲ್ಲಿ ಇರುತಿಹನು!**

'ಮಧ್ವಮತಾಬ್ಧಿಯೊಳು ಮೀನಾಗಿರಲು ಬೇಕು' ಎಂದು ಪುರಂದರ ದಾಸರು ಹೇಳುವಂತೆ

'ವೇದಾಂತಾಬ್ಧಿಂ ನ ಯೋ ಜಾತು ಜಹೌ ವಿದ್ವತ್ತಿಮಿಂಗಿಲಃ'

'ಶ್ರೀಪದ್ಮನಾಭತೀರ್ಥರು ವೇದಾಂತ ಸಮುದ್ರದಲ್ಲಿ ತಿಮಿಂಗಿಲದಂತೆ ಆಟವಾಡಿದರು' ಎಂದು ಸುಮಧ್ವವಿಜಯ ಹೇಳುವಂತೆ ಸಚ್ಛಾಸ್ತ್ರ ವಿನೋದದಿಂದ ಭಗವಂತನನ್ನು ಸೇವಿಸಿದರೆ ಅವನು ಅಲ್ಲಿಯೆ, ಅವರ ಬಳಿಯಲ್ಲಿಯೇ ಇರುತ್ತಾನೆ

ನೈವೋದ್ವಿಜೇ ಭವ ದುರತ್ಯಯ ವೈತರಣ್ಯಾ
ತ್ವತ್ತೀರ್ಥಗಾಯನ ಮಹಾಮೃತ ಮತ್ತ ಚಿತ್ತಃ (ಭಾಗ 7, 9, 43)

ಎಂದು ಪ್ರಹ್ಲಾದ ಹೇಳುವಂತೆ ಸಂಸಾರದ ಸಕಲ ದುಃಖಗಳನ್ನು ಮರೆಸುತ್ತ ಬಳಿಯಲ್ಲಿರುತ್ತಾನೆ, ಹರಿ

**ಬಲ್ಲಿದರಿಗತಿ ಬಲ್ಲಿದನು**

ಸರ್ವಜ್ಞರಿಗೂ ಸರ್ವಜ್ಞನಾದ ಚತುರ್ಮುಖನಿಗೆ ವೇದ ಹೇಳಿಕೊಟ್ಟವನು ಶ್ರೀ ಹರಿ

'ತೇನೇ ಬ್ರಹ್ಮ ಹೃದಾ ಯ ಆದಿ ಕವಯೇ' - ಎನ್ನುತ್ತದೆ ಭಾಗವತದ ಮೊದಲ ಮಂಗಲ ಪದ್ಯ ಜೀವರ ಅನಾದಿ ಯೋಗ್ಯತೆ ಕರ್ಮಗಳನ್ನು ಅರಿತು ಅದರಂತೆ ಮೋಕ್ಷ ಸಾಧನೆ ಮಾಡಿಸಿ ಫಲನೀಡಬಲ್ಲ, ಬಲ್ಲಿದ, ಸರ್ವಶಕ್ತನೂ ಶ್ರೀಹರಿಯೆ ಉಳಿದವರಿಗೆ ಆ ಶಕ್ತಿ ಇಲ್ಲ

ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ।
ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ।

'ನಮ್ಮಲ್ಲಿ ಬೇರೇನಾದರೂ ಕೇಳು, ಮುಚುಕುಂದ ಮಹಾರಾಜ! ಮೋಕ್ಷವನ್ನು ಕೇಳಬೇಡ ಅದನ್ನು ಕೊಡಲು ಶ್ರೀಹರಿಯೊಬ್ಬನೇ ಶಕ್ತ' ಎನ್ನುತ್ತಾರೆ ದೇವತೆಗಳು

**ಸರಿಯಿಲ್ಲ ಇವಗಾವಲ್ಲಿ ನೋಡಲು:**

'ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ'

ನಾರಾಯಣನಿಗೆ ಸಮನು ಮೂರುಕಾಲಗಳಲ್ಲಿಯೂ ಇಲ್ಲಎನ್ನುತ್ತದೆ ಮಹಾಭಾರತ (1. 1 18)

'ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ'

'ಶ್ರೀಹರಿ! ನೀನು ಎಲ್ಲೆ ಇಲ್ಲದಂತೆ ಎಲ್ಲೆಡೆ ವ್ಯಾಪಿಸಿದವನು, ನಿನ್ನ ಮಹಿಮೆ ಯಾರಿಗೂ ಲಭ್ಯವಾಗದು' ಎಂದು ಶ್ರುತಿ

'ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ'

'ಮುಕ್ತಿಯಲ್ಲಿಯೂ ಚೇತನರು ಹರಿಯ ಆನಂದದಲ್ಲಿ ಒಂದು ಅತಿ ಸಣ್ಣ ಅಂಶದಷ್ಟು ಆನಂದವನ್ನು ಹೊಂದಬಲ್ಲರು' ಎಂದೂ ಶ್ರುತಿ ಹೇಳಿದೆ ಅದರಿಂದ ಅವನಿಗೆ ಯಾರೂ ಸಮರಿಲ್ಲ

**ಖುಲ್ಲ ಮಾನವ ರೊಲ್ಲ:**

ಬ್ರಹ್ಮರುದ್ರಾದಿಗಳು ಹಿರಣ್ಯಕಶಿಪು ರಾವಣ ಮುಂತಾದ ದುರ್ಜನರಿಗೆ ಒಲಿಯುತ್ತಾರೆ ವರನೀಡುತ್ತಾರೆ ಶ್ರೀಹರಿ ಎಂದೂ ದುರ್ಜನರಿಗೆ ವರ ನೀಡುವುದಿಲ್ಲ

**ಅಪ್ರತಿಮಲ್ಲ ಜಗಕೆಲ್ಲ:**

'ದನುಜರಕ್ಕಸರೆಲ್ಲರಿವನೊಳು ಮುನಿದು ಮಾಡುವುದೇನು?' ಎಂದು ಹಿಂದೆ ಹೇಳಿದಂತೆ ಶ್ರೀಹರಿಯನ್ನು ವಿರೋಧಿಸಿ ಬದುಕಿದವರಿಲ್ಲ. ಶ್ರೀ ಕೃಷ್ಣನನ್ನು ನೆರೆಯಲ್ಲಿ ಬಂಧಿಸಿಬಿಡಬೇಕೆಂದು ಹೊರಟು ದುರ್ಯೋಧನ ಸರ್ವನಾಶ ಹೊಂದಿದ. ಅಂಥ ಅಪ್ರತಿಮಲ್ಲ ಶ್ರೀಹರಿ.

**2.** ಜ್ಞಾನಿಗಳಿಗೆ ಭಗವಂತ ಸುಲಭ ಪ್ರಾಪ್ಯ. ಏಕೆಂದರೆ ಎಲ್ಲಿ ಕೇಳಿದರೆ ಅಲ್ಲಿ ಇರುತ್ತಾನೆ. 'ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ' ನನ್ನ ಭಕ್ತರು ಎಲ್ಲಿ ನನ್ನ ಗುಣಗಾನ ಮಾಡುವರೋ ಅಲ್ಲಿ ನಾನು ಇರುತ್ತೇನೆ ಎನ್ನುತ್ತಾನೆ. ಎಲ್ಲಿ ನೋಡಿದರೆ ಅಲ್ಲಿ ಹರಿ ಇದ್ದಾನೆ. ಕನಕದಾಸರಿಗೆ ಬಾಳೆಹಣ್ಣು ಯಾರೂ ಇಲ್ಲದಲ್ಲಿ ತಿನ್ನಲು ಆಗಲಿಲ್ಲ, ಎಲ್ಲೆಡೆ ಹರಿ ಇದ್ದಾನೆ ಎಂದು. ಎಲ್ಲಿಬೇಡಿದರೆ ಅಲ್ಲಿ ಹರಿ ಇದ್ದಾನೆ. ಶ್ರೀ ಜಗನ್ನಾಥದಾಸರು ಶ್ರೀ ಗೋಪಾಲ ದಾಸರೊಂದಿಗೆ ವೆಂಕಟಾಚಲಯಾತ್ರೆ ಮಾಡಿ ದಣಿದು ಅಲ್ಲಿ ಮಲಗಿದರು. ಆಗಲೆ ಅವರ ಹೃದಯ ವ್ಯಾಪಾರ ನಿಂತು ಹೋಯಿತು. ಗೋಪಾಲದಾಸರು ನೀಡಿದ ನಲವತ್ತು ವರ್ಷ ಆಯುಷ್ಯದಿಂದ ಎದ್ದು ಚೇತರಿಸಿಕೊಂಡು ಕುಳಿತರು. ಆದರೂ ಆಹಾರವಿಲ್ಲದೆ ಆಯಾಸಗೊಂಡು ತಿರುಗಿ ಮಲಗಿದರು. ಗೋಪಾಲದಾಸರು ಶ್ರೀನಿವಾಸನ ಪ್ರಸಾದವನ್ನು ತರಲು ಗುಡಿಗೆ ಹೋದರು. ಪ್ರಸಾದ ಸಿಗುವುದು ವಿಲಂಬವಾಯಿತು. ಆಗ ಶ್ರೀನಿವಾಸನೆ ಗೋಪಾಲದಾಸರ ರೂಪದಿಂದ ಬಂದು ಜಗನ್ನಾಥದಾಸರಿಗೆ ಯಥೇಚ್ಛ ಭೋಜನ ನೀಡಿ ಅದೃಶ್ಯನಾದ.

**ಎಲ್ಲಿ ನೀಡಿದರಲ್ಲಿ ಇರುತಿಹನು:**

ಶ್ರೀವಾದಿರಾಜರು ತಲೆಯ ಮೇಲೆ ಬಂಗಾರದ ಹರಿವಾಣದಲ್ಲಿ ಹಯಗ್ರೀವ ನೈವೇದ್ಯವಿಟ್ಟುಕೊಂಡು ಕುಳಿತರೆ ಹಯಗ್ರೀವ ತಾನೆ ಬಂದು ಮೆದ್ದು ಹೋಗುತ್ತಿದ್ದ. 'ಆವಕಡೆಯಿಂದ ಬಂದೆ ವಾಜಿವದನನೆ!' ಎಂದು ಬೆರಗಾದರು ವಾದಿರಾಜರು. ಇದೇ ರೀತಿ ಯುಕ್ತಿಮಲ್ಲಿಕಾಗ್ರಂಥದ ಮೂಲಕ ಸಜ್ಜನರಿಗೆ ಜ್ಞಾನ ನೀಡಿದರೆ ಅಲ್ಲಿಯೂ ಹಯಗ್ರೀವ ಹಸನ್ಮುಖನಾಗಿ ನಿಲ್ಲುತ್ತಿದ್ದ. 'ಯತೋಽಸ್ಯ ಹಾಸೋ ಧವಲಃ' 'ಹಯಗ್ರೀವನ ನಗು ಬೆಳ್ಳಗೆ ಇದೆ' ಎಂದು ಕಣ್ಣಾರೆ ಕಂಡುಕೊಂಡರು ವಾದಿರಾಜರು.

ಎಲ್ಲಿ ಓಡಿದರೆ ಅಲ್ಲಿ ಇರುತಿಹನು. ದೂರ್ವಾಸರು ಹರಿಭಕ್ತನಾದ ಅಂಬರೀಷನಿಗೆ ದ್ರೋಹಬಗೆದು ಓಡಿದರು. ಓಡಿದಲ್ಲೆಲ್ಲ ಸುದರ್ಶನ ಚಕ್ರರೂಪದಿಂದ ಅವರ ಹಿಂದೆಯೇ ಇದ್ದು ಅವರಿಂದ ಕ್ಷಮಾಯಾಚನೆ ಮಾಡಿಸಿ ಅನುಗ್ರಹಿಸಿದ.

ಎಲ್ಲಿ ಆಡಿದರೆ ಅಲ್ಲಿಯೆ ಇರುತಿಹನು. ಪ್ರಹ್ಲಾದ ಕಂಬದಲ್ಲಿಯೂ ಹರಿ ಇರುವನೆಂದ ಅವನು ಆಡಿದ ಆ ಮಾತನ್ನು ಸತ್ಯಗೊಳಿಸಲು ನರಸಿಂಹ ಆ ಕಂಬದಿಂದಲೂ ಮೂಡಿ ಬಂದ

3 ಎಲ್ಲರಿಗೂ ವಿಷಯ ಭೋಗವನ್ನುಣಿಸಲು ಹರಿ ಎಲ್ಲರ ಬಳಿ ಇರುತ್ತಾನೆ ಎಲ್ಲಿ ಕೇಳಿದರೆ ಅಲ್ಲಿಶ್ರೋತ್ರೇಂದ್ರಿಯದಲ್ಲಿ ಇದ್ದು ಕೇಳಿಸುತ್ತಾನೆ ಎಲ್ಲಿ ನೋಡಿದರೆ ಅಲ್ಲಿ ಚಕ್ಷುರಿಂದ್ರಿಯದಲ್ಲಿ ಇದ್ದು ನೋಡಿಸುತ್ತಾನೆ ಎಲ್ಲಿ ಬೇಡಿದರೆ ಅಲ್ಲಿ ಮನ ಇಂದ್ರಿಯದಲ್ಲಿ ಇದ್ದು ಬಯಕೆ ಮೂಡಿಸುತ್ತಾನೆ ಎಲ್ಲಿ ನೀಡಿದರೆ ಅಲ್ಲಿ ಹಸ್ತೇಂದ್ರಿಯದಲ್ಲಿಇದ್ದು ದಾನಕೊಡಿಸುತ್ತಾನೆ ಎಲ್ಲಿ ಓಡಿದರೆ ಅಲ್ಲಿ ಪಾದೇಂದ್ರಿಯದಲ್ಲಿ ಇದ್ದು ಓಡಿಸುತ್ತಾನೆ ಎಲ್ಲಿ ಆಡಿದರೆ ಅಲ್ಲಿ ವಾಗಿಂದ್ರಿಯದಲ್ಲಿ ಇದ್ದು ಮಾತನಾಡಿಸುತ್ತಾನೆ ಇದೇ ರೀತಿ ಕೇಳುವ ನೋಡುವ ಬಯಸುವ ಎಲ್ಲ ಪದಾರ್ಥಗಳಲ್ಲಿಯೂ ಇದ್ದು ಸುಖ ನೀಡುತ್ತಾನೆ ಕೇಳುವ ನೋಡುವ ಬಯಸುವ ವ್ಯಕ್ತಿಯ ಹೃದಯದಲ್ಲಿಯೂ ಇದ್ದು ಎಲ್ಲ ಕಾರ್ಯಗಳನ್ನು ಮಾಡಿಸುತ್ತಾನೆ ಆ ಕಾರ್ಯಕ್ಕೆ ನಿಯುಕ್ತರಾದ ತತ್ವಾಭಿಮಾನಿ ದೇವ ದಾನವರಲ್ಲಿಯೂ ಇದ್ದು ಅವರಿಂದ ಕಾರ್ಯ ನಡೆಸುತ್ತಾನೆ

**4.** ಸಜ್ಜನರಿಂದ ಮೋಕ್ಷಸಾಧನೆ ಮಾಡಿಸಲು ಹರಿ ಎಲ್ಲರ ಬಳಿ ಇದ್ದಾನೆ ಮೊದಲಿಗೆ, ಎಲ್ಲಿ ಕೇಳಿದರೆ ಅಲ್ಲಿ ಶಾಸ್ತ್ರಶ್ರವಣ ಮಾಡುವಲ್ಲಿ, ವಕ್ತೃಶ್ರೋತೃಗಳಲ್ಲಿಯೂ ಶಾಸ್ತ್ರದಲ್ಲಿಯೂ ಇದ್ದು ಶ್ರವಣ ಮಾಡಿಸುತ್ತಾನೆ ಬಳಿಕ ಎಲ್ಲಿ ನೋಡಿದರೆ ಅಲ್ಲಿ, ಅಪರೋಕ್ಷಜ್ಞಾನ ಪಡೆವಾಗ ಅವನಿಗೆ ದಿವ್ಯ ದೃಷ್ಟಿಕೊಟ್ಟು ಅಪರೋಕ್ಷಮಾಡಿಸುತ್ತಾನೆ ಬಳಿಕ ಎಲ್ಲಿ ಬೇಡಿದರೆ ಅಲ್ಲಿ, ಜ್ಞಾನ ಭಕ್ತಿ ವೈರಾಗ್ಯಗಳಬಯಕೆ ಉಂಟುಮಾಡಿ,

'ಇಂದು ಎನಗೆ ಗೋವಿಂದ ನಿನ್ನಯ ಪಾದಾರವಿಂದವ ತೋರೋ ಮುಕುಂದನೆ!'

ಎಂದು ಆರ್ತಭಾವದಿಂದ ಬೇಡುವಂತೆ ಮಾಡುತ್ತಾನೆ ಬಳಿಕ ಎಲ್ಲಿ ನೋಡಿದರೆ ಅಲ್ಲಿ, 'ಬುಧೋಽಭಿಧಾನಂ ಶ್ರವಣಂಬುಧೇತರೋಧ್ರುವಂ ವಿದಧ್ಯಾತ್ ವಿಮುಮುಕ್ಷುರಾತ್ಮನಃ' ಎಂಬಂತೆ ಜ್ಞಾನದಾನ ಮಾಡುವುದು ಜ್ಞಾನಿಯ ಕರ್ತವ್ಯವಾದ್ದರಿಂದ ಅವನಲ್ಲಿ ನಿಂತು ಜ್ಞಾನ ದಾನ ಮಾಡಿಸುತ್ತಾನೆ ಬಳಿಕ 'ಎಲ್ಲಿ ಓಡಿದರಲ್ಲಿ' ಎಂದರೆ ಪ್ರಾರಬ್ಧವನ್ನು ತೀರಿಸಿ 'ತಸ್ಯ ತಾವದೇವ ಚಿರಂ' ಎಂಬಂತೆ ಬೇಗನೆ ಮುಕ್ತಿಮಂದಿರದ ಕಡೆಗೆ ಓಡುವಾಗ ಅರ್ಚಿರಾದಿ ಮಾರ್ಗದಲ್ಲಿ ಜೊತೆಗಿದ್ದು ಜ್ಞಾನಿಗೆ ವೈಭವದ ಸತ್ಕಾರ ಕೊಡಿಸುತ್ತಾನೆ 'ಎಲ್ಲಿ ಆಡಿದರೆ ಅಲ್ಲಿ' ಮುಂದೆ ಮುಕ್ತಿಯಲ್ಲಿ 'ನ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂದು ಉಪನಿಷತ್ತು ಹೇಳುವಂತೆ ಲೀಲೆಯಿಂದ ಕ್ರೀಡೆ ಆಡುವಾಗಲೂ ಜೊತೆಗೆ 'ಅರಂ ಹಿತೋ ಭವತಿ ವಾಜಿನಾಯ' ಕುದುರೆಯ ಆಕಾರದಲ್ಲಿ ಗೋಚರನಾಗಿ ಕುಣಿಯುತ್ತಾನೆ ಎಂದು ವೈಕುಂಠ ವರ್ಣನೆಯಲ್ಲಿ ವಾದಿರಾಜರು ಹೇಳಿದ್ದಾರೆ

**5.** ದುರ್ಜನರು ಹರಿಯ ಆರಾಧನೆ ಮಾಡುವುದಿಲ್ಲ ಅವರಿಗೆ ಆತ ಬಲು ದೂರ ಏಕೆಂದರೆ ಅವರು ಹರಿಯನ್ನು ಎಲ್ಲಿ ಕೇಳಿದರು? ಎಲ್ಲಿ ನೋಡಿದರು? ಎಲ್ಲಿ ಬೇಡಿದರು? ಎಲ್ಲಿ ನೀಡಿದರು? ಎಲ್ಲಿ ಓಡಿದರು? ಎಲ್ಲಿ ಆಡಿದರು? ಆದರಿಂದ ಅವರ ಪಾಲಿಗೆ ಶ್ರೀಹರಿ ಅಲ್ಲಿ, ಬಲು ದೂರದಲ್ಲಿ ಇರುತಿಹನು

ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್
ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ॥

ಎಂದು ದ್ವಾದಶಸ್ತೋತ್ರದಲ್ಲಿ ಹೇಳಿದಂತೆ ಶ್ರೀ ಹರಿ ದುರ್ಜನರಿಗೆ ದೂರಕ್ಕಿಂತ ದೂರ ಸಜ್ಜನರಿಗೆ ಸಮೀಪಕ್ಕಿಂತ ಸಮೀಪ ಅದರಿಂದ ದುರ್ಜನರನ್ನು ಹರಿ ಒಲ್ಲ ಅವರು ಓಡುತ್ತಾರೆ, ಹರಿಯ ಬಳಿಗೆ ಎಲ್ಲಿ ಓಡುತ್ತಾರೆ? ಭಯದಿಂದ ವಿರುದ್ಧ ದಿಕ್ಕಿನಲ್ಲಿ ಓಡುತ್ತಾರೆ, ಪಲಾಯನ ಮಾಡುತ್ತಾರೆ, ಆದರೆ ಅದು ವ್ಯರ್ಥವೇ ಆಗುತ್ತದೆ

ಮರ್ತ್ಯೋ್ಽ ಮೃತ್ಯುವ್ಯಾಳಭೀತಃ ಪಲಾಯನ್
ಲೋಕಾನ್ ಸರ್ವಾನ್ ನಿರ್ಭಯಂ ನಾಧ್ಯಗಚ್ಛತ್ ।
ತ್ವತ್ಪಾದಾಬ್ಜಂ ಪ್ರಾಪ್ಯ ಯದೃಚ್ಛಯಾದ್ಯ ಸ್ವಸ್ಥಃ
ಶೇತೇ ಮೃತ್ಯುರಸ್ಮಾದಪೈತಿ । (ಭಾಗ 10 3 27)

ದುರ್ಜನ ಮೃತ್ಯುವೆಂಬ ಹಾವಿಗೆ ಹೆದರಿ ಓಡುತ್ತಾನೆ ಎಲ್ಲಿಓಡಿದರೂ ಅಲ್ಲಿ ಮೃತ್ಯು ಸ್ವರೂಪಿಯಾಗಿ ಹರಿ ಇರುತ್ತಾನೆ ಅವನಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ ಸಜ್ಜನ ಹರಿಯ ಪಾದಕಮಲವನ್ನೆ ಆಶ್ರಯಿಸಿ ನಿಶ್ಚಿಂತನಾಗಿರುತ್ತಾನೆ, ಅವನಿಂದ ಮೃತ್ಯುವೆ ದೂರ ಓಡುವುದು

6 ದುರ್ಜನ ಮೋಕ್ಷದಾಶೆಯಿಂದ, ಹರಿಯಲ್ಲಿ ಭಕ್ತಿಮಾಡದೆ ಶ್ರವಣಾದಿಗಳನ್ನು ಮಾಡಿದರೆ ಅವನಿಗೆ ಹರಿ ಎಲ್ಲಿ? ಕೇಳಿದರೆಲ್ಲಿ? ನೋಡಿದರೆಲ್ಲಿ? ಬೇಡಿದರೆಲ್ಲಿ? ನೀಡಿದರೆಲ್ಲಿ? ಓಡಿದರೆಲ್ಲಿ? ಅವನು ಸಜ್ಜನನಾಗಬೇಕು ಸಜ್ಜನನಾಗಿ ಭಗವಂತನೊಡನೆ 'ತೊಳ ಸದಕ್ಕಿಯ ತಿಂಬ ಕಿಲುಬುತಳಿಗೆಯೊಳುಂಬ'' 'ಅನ್ಯಾಯಕಾರಿ' ಎಂದು ಮುಂತಾಗಿ ಜಗಳಾಡಿದರೂ ಅಲ್ಲಿ ನಗುತ್ತ ನಿಂತಿರುತ್ತಾನೆ! ದುರ್ಜನ ನೇರ ವೈಕುಂಠಕ್ಕೆ ಹೋದರೂ ಅಲ್ಲಿ ಭಗವಂತನನ್ನು ಕಾಣಲಾರ ಹಿರಣ್ಯಕ್ಷಹಾಗೇ ವೈಕುಂಠಕ್ಕೂ ಹೋಗಿ ಎಲ್ಲೆಡೆ ಶೋಧಿಸಿದ ಹರಿ ಸಿಗಲಿಲ್ಲ ಅವನೆದೆಯೊಳಗೇ ಇದ್ದನಂತೆ! ಹಾಗೆ ಶ್ರೀಹರಿ ಬಲಿಚಕ್ರವರ್ತಿಯ ಮುಂದೆ ಹೇಳುತ್ತಾನೆ

7 ಮೋಕ್ಷಸಾಧನೆಯಲ್ಲಿ ಡಂಬಾಚಾರ ಸಲ್ಲದು ಏಕೆಂದರೆ ಭಕ್ತಿಯಿಂದ ಎಲ್ಲಿ ಕೇಳಿದರೆ ಅಲ್ಲಿ, ಎಲ್ಲಿ ನೋಡಿದರೆ ಅಲ್ಲಿ, ಎಲ್ಲಿ ಬೇಡಿದರೆ ಅಲ್ಲಿ, ಎಲ್ಲಿ ನೀಡಿದರೆ ಅಲ್ಲಿ, ಎಲ್ಲಿ ಓಡಿದರೆ ಅಲ್ಲಿ, ಎಲ್ಲಿ ಆಡಿದರೆ 'ಅಲ್ಲಿ' ಇರುತ್ತಾನೆ ಡಂಬಾಚಾರಕ್ಕೆ ಕೇಳುವುದು ನೋಡುವುದು ಮುಂತಾದುವನ್ನು ಮಾಡಿದರೆ 'ಅಲ್ಲಿ' ಬಲು ದೂರದಲ್ಲಿ ಇರುತ್ತಾನೆ ಇಲ್ಲಿ ಅಲ್ಲ ದೂರವೆಂದರೆ, ಗೋಚರವಾಗುವುದಿಲ್ಲ ಹೊರತು ದೂರ ದೇಶದಲಿಲ ಅಲ್ಲ, ಅಲ್ಲಿಯೇ ಹೃದಯದೊಳಗೇ ಇರುತ್ತಾನೆ, ಬಲ್ಲಿದರಿಗೆ ಅತಿ ಬಲ್ಲಿದ, ಸರ್ವಜ್ಞ, ಅಂತರ್ಯಾಮಿಯಾಗಿ ಎಲ್ಲವನ್ನೂ ತಿಳಿದು ಈ ಡಂಭಾಚಾರಕ್ಕೆ ಶಿಕ್ಷೆ ಮಾಡುತ್ತಾನೆ ಅನುಗ್ರಹಿಸುವುದಿಲ್ಲ

ಡಂಭಾಚಾರದಿಂದ ಅಜ್ಞರಾದ ಜನರನ್ನು ವಂಚಿಸಬಹುದು ಸರ್ವಜ್ಞನಾದ ಅಂತರ್ಯಾಮಿಯನ್ನು ವಂಚಿಸಲಾಗದು

**8.** ಅನ್ಯ ದೇವತೆಗಳನ್ನು ಆರಾಧಿಸಿದರೆ ಫಲ ಉಂಟು ಅದರಿಂದ ಜ್ಞಾನಿಗಳೂ ಕೆಲವೊಮ್ಮೆ ಪ್ರಾರಬ್ಧವಶಾತ್ ಅನ್ಯ ದೇವತೋಪಾಸನೆ ಮಾಡುತ್ತಾರೆ ಧರ್ಮರಾಜ ಸೂರ್ಯೋಪಾಸನೆಯಿಂದ ಅಕ್ಷಯಪಾತ್ರೆ ಪಡೆದ ಆಗಲೂ ಎಲ್ಲಿ ಅನ್ಯದೇವತೆಗಳನ್ನು ಕೇಳಿದರೆ, ನೋಡಿದರೆ, ಬೇಡಿದರೆ, ಅವರ ಪ್ರೀತ್ಯರ್ಥವಾಗಿ ನೀಡಿದರೆ, ಅವರ ಬಳಿಗೆ ಓಡಿದರೆ ಅವರೊಂದಿಗೆ ಆಡಿದರೆ ಅಲ್ಲಿ ಆ ದೇವತೆಗಳೊಳಗೇ ಅದೇ ಹೆಸರಿನಿಂದ ಇದ್ದು ಆ ಆರಾಧನೆಯನ್ನು ಸ್ವೀಕರಿಸಿ ಅವರ ಮೂಲಕವೆ ಫಲಕೊಡಿಸುತ್ತಾನೆ ಇಂಥ ಶ್ರೀಹರಿ ಅಪ್ರತಿಮಲ್ಲ ಜಗಕೆಲ್ಲ

**9.** ಅನ್ಯ ದೇವತೆಗಳನ್ನು ಆರಾಧಿಸುವಾಗ ಆ ಆರಾಧನೆಯನ್ನು ಕೊನೆಯಲ್ಲಿ ಹರಿಗೇ ಅರ್ಪಿಸಬೇಕು ಕೃಷ್ಣಾರ್ಪಣವೆನ್ನಬೇಕು

'ಸ ವೈ ಬಲಂ ಬಲಿನಾಂ ಚಾಪರೇಷಾಂ'

ಎಲ್ಲ ಬಲಿಷ್ಠರಲ್ಲಿಯೂ ಬಲ ಅವನಿಂದಲೆ 'ಬಲ್ಲಿದರಿಗೆ ಅತಿ ಬಲ್ಲಿದ' ಆತ ಎಂದು ಪ್ರಹ್ಲಾದ ಹೇಳುತ್ತಾನೆ ಅದರಿಂದ ಅವನನ್ನು ಮರೆತು ಅನ್ಯದೇವತೆಗಳನ್ನು ಆರಾಧಿಸಿದರೆ ಅವನು ಎಲ್ಲಿ? ಕೇಳಿದರೂ ಅಲ್ಲಿ! ಎಲ್ಲಿ? ನೋಡಿದರೂ ಅಲ್ಲಿ! ಎಲ್ಲಿ? ಬೇಡಿದರೂ ಅಲ್ಲಿ! ಎಲ್ಲಿ? ನೀಡಿದರೂ ಅಲ್ಲಿ! ಅದರಿಂದ ಆರಾಧನೆ ವಿಫಲವಾಗುತ್ತದೆ ಅಥವಾ ವಿರುದ್ಧ ಫಲ ನೀಡುತ್ತದೆ

**10.** ಅದರಿಂದ ಸಜ್ಜನರು ಅವನನ್ನೇ ಉಪಾಸನೆ ಮಾಡಬೇಕು ಆಗ ಎಲ್ಲಿ ಕೇಳಿದರೂ ಎಲ್ಲಿ ನೋಡಿದರೂ ಅಲ್ಲಿ ಸಿಗುತ್ತಾನೆ ಅದಕ್ಕೆ ಇಂಥ ದೇಶ ಇಂಥ ಆಸನ ಇತ್ಯಾದಿ ನಿಯಮ ಬೇಕಾಗಿಲ್ಲ ಮನಸ್ಸಿಗೆ ಹರಿಧ್ಯಾನ ಬಂದರೇ ಸರಿ ಇಷ್ಟು ಸುಲಭವಾಗಿ ಇನ್ನಾವ ದೇವನೂ ಸಿಗುವುದಿಲ್ಲ ಅಪ್ರತಿಮಲ್ಲ ಈತ ಪ್ರಹ್ಲಾದ ಹೇಳುತ್ತಾನೆ

'ಕೋಽತಿ ಪ್ರಯಾಸೋಽಸುರ ಬಾಲಕಾ ಹರೇರುಪಾಸನೇ ಸ್ವೇ ಹೃದಿ ಛಿದ್ರವತ್ ಸತಃ? (ಭಾಗ 7 7 39)

**ತಪ್ತ ಲೋಹವು ನೋಳ್ಪ ಜನರಿಗೆ**
**ಸಪ್ತ ಜಿಹ್ವನ ತೆರದಿ ತೋರ್ಪುದು**
**ಲುಪ್ತ ಪಾವಕ ಲೋಹ ಕಾಂಬುದು ಪೂರ್ವದೋಪಾದಿ।**

**ಸಪ್ತವಾಹನ ನಿಖಿಲ ಜನರೊಳು**
**ವ್ಯಾಪ್ತನಾದುದರಿಂದ ಸರ್ವರು**
**ಆಪ್ತರಾಗಿಹರೆಲ್ಲಕಾಲದಿ ಹಿತವ ಕೈಗೊಂಡು** ॥ ೨೨ ॥

ಬೆಂಕಿಯಲ್ಲಿ ಕಾಸಿದ ಕಬ್ಬಿಣ ನೋಡುವ ಜನರಿಗೆ ಬೆಂಕಿಯಂತೆ ಕಾಣುವುದು ಬೆಂಕಿ ಆರಿದಾಗ ಆ ಕಬ್ಬಿಣ ಹಿಂದಿನಂತೆಯೆ ಕಬ್ಬಿಣವಾಗಿ ಕಾಣುವುದು ಹಾಗೆಯೆ ಶ್ರೀಹರಿ ಎಲ್ಲರೊಳಗೆ ವ್ಯಾಪ್ತನಾಗಿ ಇರುವುದರಿಂದ ಎಲ್ಲರೂ ಎಲ್ಲ ಕಾಲದಲ್ಲಿ ಹಿತಕಾರಿಗಳಾಗಿ ಆಪ್ತರಾಗಿರುವರು

**ತಪ್ತಲೋಹವು**

ಎಲ್ಲಿ ನೋಡಿದರಲ್ಲಿ ಹರಿ ಇದ್ದಾನೆ ಎಂದು ಹಿಂದೆ ಹೇಳಿದೆ ಹರಿಯ ಈ ವ್ಯಾಪ್ತಿ ಕೇವಲ ಆಕಾಶದಂತೆ ಅಲ್ಲ ಯಂತ್ರಗಳಲ್ಲಿ ಕೇವಲ ಚಾಲಕಶಕ್ತಿಯಾಗಿ ಅಗೋಚರವಾಗಿ ಹರಿವ ವಿದ್ಯುತ್ತಿನಂತೆಯೂ ಅಲ್ಲ ವಿದ್ಯುತ್ತಿನ ಶಕ್ತಿಯ ವ್ಯಕ್ತಿಗೆ ಯಂತ್ರ ಮಾಧ್ಯಮವಾಗಿರುತ್ತದೆ ಹಾಗಲ್ಲ, ಚೇತನರಲ್ಲಿ ಸೌಂದರ್ಯ ಔದಾರ್ಯ ಪ್ರೀತಿ ವಾತ್ಸಲ್ಯ ಮುಂತಾದ ಭವ್ಯ ಸದ್ಗುಣಗಳನ್ನು ಹರಿ ಒಳಗೆ ವ್ಯಾಪ್ತನಾಗಿ ವ್ಯಕ್ತಗೊಳಿಸುತ್ತಾನೆ ಹೂವಿನ ಕಂಪು, ಕೋಗಿಲೆ ಗಾನದ ಇಂಪು, ತಂಗಾಳಿಯ ತಂಪು, ಬೆಳದಿಂಗಳ ಚೆಲ್ಲಾಟ, ಹೆಂಗಳ ಮೈಮಾಟ, ಮಕ್ಕಳ ಓಡಾಟ, ಹಿರಿಯರ ವಿನೋದಕೂಟ ಎಲ್ಲವೂ ರಸದೂಟ! ಹರಿ ಹೊರಗೆ ಹೊರಟು ಹೋದನೆಂದರೆ ಎಲ್ಲವೂ ನೀರಸ! ಹೂ ಬಾಡಿ ಹೋಗುತ್ತದೆ, ಕಸವಾಗುತ್ತದೆ ಗಾಳಿ ಬಿಸಿಯಾಗುತ್ತದೆ, ಬಿರುಸಾಗುತ್ತದೆ ಬೆಳದಿಂಗಳು ಬಿಸಿಲಾಗುತ್ತದೆ ಹೆಂಡತಿ ಪ್ರಾಣ ಹಿಂಡುತ್ತಾಳೆ ಮಕ್ಕಳು ಭಾರವಾಗಿ ಸಾಕೆನಿಸುತ್ತಾರೆ ಯಾರಲ್ಲಿಯೂ ಸೊಗಸಿಲ್ಲ, ಎಲ್ಲಿಯೂ ಸುಖವಿಲ್ಲ ಎಲ್ಲ ಶೂನ್ಯ ಇದನ್ನು ತಿಳಿಸಲು ತಪ್ತಲೋಹದ ದೃಷ್ಟಾಂತ ಬೆಂಕಿಯಲ್ಲಿ ಕಾಸಿದ ಕಬ್ಬಿಣ ಬೆಂಕಿಯಂತೆ ಕೆಂಪಗೆ ಸುಂದರವಾಗಿ ಹೊಳೆಯುತ್ತದೆ ಆರಿದರೆ ಏನಿಲ್ಲ ಬರಿ ಕಬ್ಬಿಣ, ಎಸೆಯಬೇಕು.

**ನೋಳ್ಪ ಜನರಿಗೆ**

ಯಥಾರ್ಥವಾಗಿ ನೋಡುವ, ನೋಡಬಲ್ಲ ಜನರಿಗೆ. ಕಣ್ಣಿದ್ದೂ ನೋಡಲಾರದ ಜನರಿಗೆ ಅಲ್ಲ ನೋಡುವ ಜನರಿಗೆ ಕಬ್ಬಿಣ ಬೆಂಕಿಯಂತೆ ಕಾಣುವುದು ಹೊರತು ಬೆಂಕಿಯೆ ಆಗುವುದಿಲ್ಲ ಕೇವಲ ಬಾಹ್ಯದೃಷ್ಟಿಯಿಂದಲೇ ನೋಡುವವರಿಗೆ ಕಬ್ಬಿಣ ಬೆಂಕಿಯಾಗೇ ಕಾಣುವುದು ಅದು ಬೆಂಕಿಯಲ್ಲ, ಬೆಂಕಿಯ ಆವೇಶದಿಂದ ಯುಕ್ತವಾದ ಬರಿಕಬ್ಬಿಣ ಎಂದು ತಿಳಿಯಲು ಯಥಾರ್ಥವಾಗಿ ನೋಡುವ ಕಣ್ಣು ಬೇಕು. ಸೊಗಸಾದ ವಸ್ತುಗಳನ್ನು ಕಂಡಾಗ ಆ ಸೊಗಸನ್ನು ನಿರ್ಮಿಸಿದ ಹರಿಯ ನೆನಪಾಗಬೇಕು-

'ಬಹುಚಿತ್ರ ಜಗದ್ ಬಹುಧಾಕರಣಾತ್ ಪರಶಕ್ತಿರನಂತಗುಣಃ ಪರಮಃ॥' ಎನ್ನಬೇಕು

**ಸಪ್ತಜಿಹ್ವನ ತೆರದಿ ತೋರ್ಪುದು:**

ಸಪ್ತಜಿಹ್ವ ಎಂದರೆ ಏಳು ನಾಲಿಗೆ ಉಳ್ಳ ಅಗ್ನಿ ಕಾಲೀ ಕರಾಲೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನಿ, ವಿಶ್ವರುಚಿ - ಇವು ಏಳು ಬೆಂಕಿಯ ನಾಲಿಗೆಗಳು ಅಥವಾ ಹಿರಣ್ಯಾ, ಕನಕಾ, ರಕ್ತಾ, ಕೃಷ್ಣಾ, ಸುಪ್ರಭಾ, ಅತಿರಕ್ತಾ, ಬಹುರೂಪಾ ಎಂದು ಅವುಗಳಿಗೆ ಹೆಸರುಗಳು ಅವು ಕ್ರಮವಾಗಿ ಈಶಾನ್ಯ, ಪೂರ್ವ, ಆಗ್ನೇಯ, ನೈಋತ್ಯ, ಪಶ್ಚಿಮ, ವಾಯವ್ಯ ಮತ್ತು ದಕ್ಷಿಣೋತ್ತರ ದಿಕ್ಕುಗಳಲ್ಲಿರುತ್ತವೆ ಅವುಗಳ ಬಣ್ಣಗಳು ಕ್ರಮವಾಗಿ ಪುಟಕ್ಕಿಟ್ಟ ಚಿನ್ನ, ವೈಡೂರ್ಯ, ಉದಿಸುವ ಸೂರ್ಯ, ಮೋಡ, ದಾಸವಾಳದ ಹೂ, ಚಿತ್ರವರ್ಣಗಳು ಕ್ರಮವಾಗಿ ಔಪಾಸನ, ವೈಶ್ವದೇವ, ಸ್ಥಾಲೀಪಾಕ, ಅಷ್ಟಕ, ಮಾಸಶ್ರಾದ್ಧ, ಈಶಾನಬಲಿ, ಸರ್ವಬಲಿಗಳ ಆಹುತಿಗಳನ್ನು ಸ್ವೀಕರಿಸುತ್ತವೆ ಕಬ್ಬಿಣ ಅಗ್ನಿಯ ಆವೇಶದಿಂದ ಅಗ್ನಿಯಂತೆ ಕಂಡರೂ ಅಗ್ನಿಯ ಈ ಕೆಲಸಗಳನ್ನು ಮಾಡಲಾರದು ಹರಿಯಾವೇಶದಿಂದ ಜೀವರೂ ಅಷ್ಟೆ

**ಲುಪ್ತಪಾವಕ ಲೋಹ.**

ಕಬ್ಬಿಣ ಕೆಂಪಾದಾಗ ಮಾತ್ರ ನೋಡಿದರೆ ಸಾಲದು ಆರಿದಾಗಲೂ ನೋಡಬೇಕು ಆಗ ಬೆಂಕಿಯ ಪ್ರಭಾವದ ಅರಿವಾಗುವುದು ಭೋಗಭಾಗ್ಯಗಳಲ್ಲಿರುವ ಆಕರ್ಷಣೆ ಹರಿಯ ಅಧೀನವೆಂದು ತಿಳಿದಾಗ ಅವುಗಳಲ್ಲಿ ಆಸಕ್ತಿ ಕಡಿಮೆಯಾಗುವುದು ಜಡಶರೀರದಿಂದ ಹರಿ ಹೊರಟುಹೋದಾಗ ಶರೀರ ತಣ್ಣಗಾಗುವುದು ಕಂಡಿದೆ ಚಿನ್ಮಯವಾದ ಸ್ವರೂಪ ಶರೀರದಿಂದ ಅವನೆಂದೂ ಹೋಗುವುದಿಲ್ಲ ಹಾಗಾದರೆ ಅಲ್ಲಿ ಅವನ ಸಾನ್ನಿಧ್ಯದ ಪ್ರಭಾವವೇನೆಂದು ಹೇಗೆ ತಿಳಿಯಬೇಕು? ಅದಕ್ಕೆ ಕೆಲವೊಮ್ಮೆ ಪರಮಪ್ರೀತಿ ಸ್ವರೂಪನಾದ ಹರಿ ತನ್ನ ಆ ಸ್ವರೂಪವನ್ನು ಅವ್ಯಕ್ತಗೊಳಿಸುತ್ತಾನೆ ಆಗ ಜೀವ ತನಗೆ ತಾನೆ ಅಪ್ರಿಯ ನೆನಿಸುತ್ತಾನೆ ಆತ್ಮಹತ್ಯೆಯ ಆಲೋಚನೆಯನ್ನು ಮಾಡುತ್ತಾನೆ. ಉದಾ ಮಹಾಭಾರತ ಸೌಪ್ತಿಕ ಪರ್ವದಲ್ಲಿ ರಾತ್ರಿ ಪಾಂಡವರ ಶಿಬಿರದ ದ್ವಾರವನ್ನು ಕಾಯುತ್ತಿದ್ದ ರುದ್ರನ ಮೇಲೆ ಅವನ ಅವತಾರನೆ ಆದ ಅಶ್ವತ್ಥಾಮ ಎಲ್ಲ ಶಸ್ತ್ರಾಸ್ತ್ರಗಳನ್ನೆಸೆಯುತ್ತಾನೆ ಇದು ಒಂದು ಬಗೆಯ ಆತ್ಮಹತ್ಯೆಯ ಯತ್ನವೆ ಸರ್ವಶಕ್ತಿ ಸ್ವರೂಪನಾದ ಹರಿ ತನ್ನ ಆ ಶಕ್ತಿಸ್ವರೂಪವನ್ನು ಒಬ್ಬ ಜೀವನಲ್ಲಿ ಅವ್ಯಕ್ತಗೊಳಿಸಿದಾಗ ಆ ಜೀವ ನಿರ್ವೀರ್ಯನಾಗುತ್ತಾನೆ. ಉದಾ ಅರ್ಜುನನನ್ನು ಮೂಲೋಕದ ಗಂಡೆಂದು ತೋರಿಸಿಕೊಟ್ಟು ಶ್ರೀಕೃಷ್ಣ ಪರಂಧಾಮಕ್ಕೆ ತೆರಳಿದಾಗ ಕೃಷ್ಣ ಪತ್ನಿಯರನ್ನು ದ್ವಾರಕೆಯಿಂದ ಅರ್ಜುನ ಹೊರಗೊಯ್ಯುತ್ತಿದ್ದ ಆಗ ದಾರಿಯಲ್ಲಿ ಮ್ಲೇಚ್ಛರ ಆಕ್ರಮಣವಾಯಿತು ಅರ್ಜುನನಿಗೆ ಅವರನ್ನು ಇದಿರಿಸಲಾಗಲಿಲ್ಲ ಅವನ ಕಣ್ಣಮುಂದೆಯೆ ಅವರು ಸ್ತ್ರೀಯರನ್ನು ಅಪಹರಿಸಿದರು!

**ಕಾಂಬುದು ಪೂರ್ವದೋಪಾದಿ.**

ಕಾಸಿದ ಕಬ್ಬಿಣ ಅಂದರೆ ಹಿಂದಿನಂತೆಯೆ ಬರಿ ಕಬ್ಬಿಣವಾಗಿಯೆ ಕಾಣುವುದು. ಹಾಗಾದರೆ

ಕಬ್ಬಿಣದಲ್ಲಿ ಏನೂ ಇಲ್ಲವೆ? ಎಲ್ಲವೂ ಬೆಂಕಿಯ ಪ್ರಭಾವವೆ? ಹೌದು ಎಂದರೆ ಹರಿಗೆ ವೈಷಮ್ಯ ನೈರ್ಘೃಣ್ಯದೋಷ ಬಂದೀತು ವಿನಾಕಾರಣ ಅರ್ಜುನನ್ನೇಕೆ ಗೆಲಿಸಬೇಕು? ಕರ್ಣನನ್ನೇಕೆ ಕೊಲಿಸಬೇಕು? ಎಂದರೆ, ವಿನಾಕಾರಣ ಹರಿ ಏನೂ ಮಾಡುವುದಿಲ್ಲ ಅರ್ಜುನನ ಯೋಗ್ಯತೆ ಹಾಗೆ ಇದ್ದಿತು ಬೆಂಕಿ ಕಬ್ಬಿಣವನ್ನೇ ಕೆಂಪಗೆ ಹೊಳೆವಂತೆ ಮಾಡುತ್ತದೆ ಕಲ್ಲು-ಮಣ್ಣನ್ನು ಹಾಗೆ ಮಾಡುವುದಿಲ್ಲ

**ಸಪ್ತವಾಹನ ನಿಖಿಲ ಜನರೊಳು ವ್ಯಾಪ್ತನಾದುದರಿಂದ·**

'ಸಪ್ತವಾಹನ' ಎಂದರೆ ಶ್ರೀಹರಿ ಎಲ್ಲರಿಗೂ ಪರಮಾಪ್ತನಾದ ಶ್ರೀಹರಿ ಎಲ್ಲರಲ್ಲಿ ವ್ಯಾಪ್ತನಾದ್ದರಿಂದ ಎಲ್ಲರೂ ಆಪ್ತರೆನಿಸುತ್ತಾರೆ ಅವನು ಹೊರಗೆ ಹೊರಟು ಹೋದನೆಂದರೆ ಎಲ್ಲರೂ ನಿಶ್ಚೇಷ್ಟರಾಗುತ್ತಾರೆ, ಶವಗಳಾಗುತ್ತಾರೆ ಜೀವಪಕ್ಷಿ ಹಾರಿಹೋದರೆ ಶರೀರ ಶವವಾಗುತ್ತದೆ ಎನ್ನುತ್ತೇವೆ ಆದರೆ ಜೀವಪಕ್ಷಿ ಹಾರುವುದಿಲ್ಲ ಪರಮಾತ್ಮ ಪಕ್ಷಿ ಹಾರುತ್ತದೆ, ಜೊತೆಗೆ ಜೀವಪಕ್ಷಿಯನ್ನೂ ಒಯ್ಯುತ್ತದೆ ಮುಖ್ಯಪ್ರಾಣ ಪರಮಾತ್ಮನನ್ನೂ ಜೀವನನ್ನೂ ಹೊತ್ತು ಹೊರಗೆ ನಡೆಯುತ್ತಾನೆ ಆದರಿಂದಲೆ ಹರಿಗೆ ವಾಯುವಾಹನ ಎಂದೂ ಹೆಸರು ಹಾಗಾದರೆ, ಎಲ್ಲರೊಳಗೆ ವ್ಯಾಪ್ತನಾದವನು 'ವಾಯುವಾಹನ', 'ಸಪ್ತವಾಹನ' ಎಂದೇಕೆ ಹೇಳಬೇಕು? ದ್ವಿತೀಯಾಕ್ಷರ ಪ್ರಾಸಕ್ಕಾಗಿಯೆ? ಎಂದರೆ, ಪ್ರಾಸಕ್ಕಾಗಿ ಅಲ್ಲ ಎನ್ನುವುದಿಲ್ಲ ಆದರೂ ಸಪ್ತಜಿಹ್ವನಾದ ಅಗ್ನಿಯ ದೃಷ್ಟಾಂತವನ್ನು ಕೊಟ್ಟಾಗ ಸಪ್ತವಾಹನನಾದ ಸೂರ್ಯನನ್ನೇ ಬಣ್ಣಿಸಬೇಕು 'ಏಕೋ ಅಶ್ವೋ ವಹತಿ ಸಪ್ತನಾಮಾ' ಎಂದು ಉಪನಿಷತ್ತು ಹೇಳುವಂತೆ 'ಸಪ್ತ' ಎಂಬ ಹೆಸರಿನ ಕುದುರೆ ಸೂರ್ಯನಿಗೆ ವಾಹನ ಅವನೊಳಗಿನ ಹರಿಗೂ ವಾಹನ ಹೀಗಾಗಿ ಇಬ್ಬರಿಗೂ ಸಪ್ತವಾಹನ ಎಂಬ ಹೆಸರು ಸಲ್ಲುತ್ತದೆ ಸಪ್ತಜಿಹ್ವನಾದ ಅಗ್ನಿಯಲ್ಲಿ ತಪ್ಪದೆ ವೈಶ್ವದೇವಾದಿಕರ್ಮಗಳನ್ನು ಆಚರಿಸಿದರೆ ಮಾತ್ರ ಸಪ್ತವಾಹನನಾದ ಸೂರ್ಯಾಂತರ್ಗತ ನಾರಾಯಣ ಸುಷುಮ್ನಾ ನಾಡಿಯನ್ನು ಬೆಳಗಿಸಿ ಆ ಮಾರ್ಗವಾಗಿ ಜ್ಞಾನಿಗೆ ಉತ್ಕ್ರಮಣ ಮಾಡಿಸಿ ವಿಷ್ಣುಲೋಕಕ್ಕೆ ಒಯ್ಯುತ್ತಾನೆ

ಸಪ್ತವಾಹನ ಶಬ್ದದಿಂದ ಸೂರ್ಯಾಂತರ್ಗತನನ್ನು ಹೇಳುವ ಮೂಲಕ ದಾಸರಾಯರು 'ಹರಿ ಹೇಗೆ ಶರೀರದಲ್ಲಿ ವ್ಯಾಪಿಸಿದ್ದಾನೆ' ಎನ್ನುವುದನ್ನೂ ಪರ್ಯಾಯವಾಗಿ ಹೇಳುತ್ತಿದ್ದಾರೆ ಹೇಗೆಂದರೆ 'ಸಪ್ತೈಧಾಃ ಸಪ್ತವಾಹನಃ' ಎಂದು ವಿಷ್ಣುಸಹಸ್ರನಾಮಗಳಲ್ಲಿ ಒಂದು ಈ ಸಪ್ತವಾಹನ ನಾಮ ಬೃಹತೀಸಹಸ್ರ ಮಂತ್ರ ಅದಕ್ಕೆ ವ್ಯಾಖ್ಯಾನರೂಪವಾಗಿದೆ ಎಂದ ಮೇಲೆ ಸೂರ್ಯನ ಅಧೀನವಾದ ಪುರುಷಾಯುಷ್ಯದ ಎಪ್ಪತ್ತೆರಡು ಸಾವಿರ ಹಗಲುರಾತ್ರಿಗಳ ಭಗವದ್ರೂಪಗಳಿಗೆಲ್ಲಕ್ಕೂ ಸಪ್ತವಾಹನ ಎಂದು ನಾಮ ಹೀಗೇ ಪ್ರತಿಯೊಂದು ನಾಮವೂ ಸೂರ್ಯಾಂತರ್ಗತ ಭಗವದ್ರೂಪಗಳನ್ನು ಹೇಳುತ್ತದೆ ಆ ಭಗವದ್ರೂಪಗಳೆ ಮಾನವ ಶರೀರದೊಳಗೆ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ನಿಯಾಮಕವಾಗಿ ವ್ಯಾಪಿಸಿವೆ ಎಂದು ಐತರೇಯೋಪನಿಷತ್ತು ಹೇಳಿದೆ ಈ ರೂಪಗಳು ಜೀವರಿಗೆ ಪರಮಪ್ರಿಯವಾಗಿವೆ ಎಂದೂ ಅಲ್ಲಿಯೆ ಹೇಳಿದೆ-

'ಯೋಽಹಂ ಸೋಽಸೌ, ಯೋಽಸೌ ಸೋಽಹಂ'

'ಅಹಂ' ಎಂದರೆ ಪರಮಪ್ರಿಯವಾದ್ದರಿಂದ ನನಗೆ ನಾನು ಹೇಗೆ ಬಿಡಲಾರದವನೋ ಹಾಗೆ, ಏಕೆ, ಇನ್ನೂ ಹೆಚ್ಚು ಪ್ರಿಯನಾದ್ದರಿಂದ ನನಗೆ ಹರಿ ಬಿಡಲಾಗದವನು, ಅಹೇಯ ಅದರಿಂದ 'ಅಹಂ' ಎಂದು ಹರಿಗೆ ಹೆಸರು ನನ್ನಲ್ಲಿಯೂ ಸೂರ್ಯನಲ್ಲಿಯೂ ಇರುವ ಆ ಹರಿ ಹೀಗೆ ಅಹಂ ಎನಿಸಿದ್ದಾನೆ ಇಂಥ ಪರಮಪ್ರಿಯನಾದ ಹರಿ ವ್ಯಾಪಿಸಿರುವುದರಿಂದ ಎಲ್ಲರೂ ಹಿತಕಾರಿಗಳಾಗಿ ಪ್ರಿಯರೆನಿಸುತ್ತಾರೆ

**ಸರ್ವರು ಆಪ್ತರಾಗಿಹರು**

ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ।
ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ।

-ಬೃಹದಾರಣ್ಯಕೋಪನಿಷತ್ತು

'ಪತಿ ಪತ್ನಿಗೆ ತಾನು ತನ್ನಿಚ್ಛೆಯಿಂದ ಪ್ರಿಯನೆನಿಸಿಕೊಳ್ಳುತ್ತೇನೆ ಎನ್ನುವುದು ಸುಳ್ಳು ಪರಮಪ್ರಿಯನಾದ ಹರಿಯ ಇಚ್ಛೆಯಿಂದ ಆತ ಪತ್ನಿಗೆ ಪ್ರಿಯನೆನಿಸುತ್ತಾನೆ

ತತ್ವಸುವ್ವಾಲಿಯಲ್ಲಿ ದಾಸರಾಯರು ತನಗೆ ಲೋಕದ ಜನರು ಏಕೆ ಮನ್ನಣೆ ನೀಡುತ್ತಾರೆ ಎಂಬುದನ್ನು ಹೀಗೆ ಹೇಳಿಕೊಂಡಿದ್ದಾರೆ-

ಸನ್ನಿಧಾನವು ನಿನ್ನದೆನ್ನಲ್ಲಿ ಇರಲಾಗಿ ಮನ್ನಿಸುತ್ತಿಹರು ಜನರೆಲ್ಲ।
ಮನ್ನಿಸುತ್ತಿಹರು ಜನರೆಲ್ಲ ನಿನ್ನ ಕಾರುಣ್ಯ ಕಾರಣವೋ ಕಮಲಾಕ್ಷ॥ ಸುವ್ವಿಸುವ್ವಾಲಿ॥

**ಎಲ್ಲ ಕಾಲದಿ ಹಿತವ ಕೈಗೊಂಡು**

ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ಸದಾ ಪ್ರಿಯತಮಂ ಮಮ ನನ್ನಮಾಮಿ॥

''ನನಗೆ ಸದಾ ಅತ್ಯಂತಪ್ರಿಯನಾದ ನಾರಾಯಣನನ್ನು ನಮಿಸುತ್ತೇನೆ''-ಇಂಥ ಮಾತು ಏಕಾಂತ ಭಕ್ತರಿಂದ ಮಾತ್ರ ಬರಲು ಸಾಧ್ಯ ಉಳಿದವರಿಗೆ ಭಗವಂತ ಸದಾ ಪ್ರಿಯನೆನಿಸುವುದಿಲ್ಲ, ಅವರೂ ಲೋಕಕ್ಕೆ ಸದಾ ಪ್ರಿಯರೆನಿಸುವುದಿಲ್ಲ ಅದರಿಂದ 'ಎಲ್ಲ ಕಾಲದಲ್ಲಿ ಭಗವತ್ಸನ್ನಿಧಾನದಿಂದಲೆ ಎಲ್ಲರೂ ಲೋಕಪ್ರಿಯರೆನಿಸುತ್ತಾರೆ' ಎಂದರ್ಥ 'ಎಲ್ಲ ಕಾಲದಲ್ಲಿ ಲೋಕಪ್ರಿಯರೆನಿಸುತ್ತಾರೆ' ಎಂದಲ್ಲ ಹಾಗೆ 'ಸರ್ವರು ಆಪ್ತರಾಗಿಹರು' ಎಂಬಲ್ಲಿಯೂ 'ಸರ್ವ ಸಜ್ಜನರು, ಸಾತ್ವಿಕರು ಸಾತ್ತ್ವಿಕರಿಗೆ ಆಪ್ತರಾಗಿಹರು' ಎಂದರ್ಥ ದುರ್ಜನರು ಅವರಿಗೆ ಶತ್ರುಗಳಾಗಿರಬಹುದು ಯಾರೂ ಎಲ್ಲರಿಗೂ ಪ್ರಿಯನಾಗುವುದು ಎಂದಿಗೂ ಸಾಧ್ಯವಿಲ್ಲ

**ವಾರಿದನು ಮಳೆಗರೆಯೆ ಬೆಳೆದಿಹ**
**ಭೂರುಹಂಗಳ ಚಿತ್ರ ಫಲರಸ**
**ಬೇರೆ ಬೇರಿಪ್ಪಂತೆ ಬಹುವಿಧ ಜೀವರೊಳಗಿದ್ದು ।**
**ಮಾರಮಣನವರವರ ಯೋಗ್ಯತೆ**
**ಮೀರದಲೆ ಗುಣಕರ್ಮಗಳ ಅನು**
**ಸಾರ ನಡೆಸುವ ದೇವನಿಗೆ ವೈಷಮ್ಯವೆಲ್ಲಿಹುದೋ ॥ ೨೩ ॥**

ಪರ್ಜನ್ಯದೇವ ಮಳೆಗರೆದಾಗ ಬೆಳೆದಿರುವ ಮರಗಳ ನಾನಾವಿಧ ಫಲ ರಸ ಬೇರೆ ಬೇರೆ ಇರುವಂತೆ ಲಕ್ಷ್ಮೀರಮಣ ನಾನಾವಿಧ ಜೀವರೊಳಗಿದ್ದು ಅವರವರ ಯೋಗ್ಯತೆಯನ್ನು ಕಡೆಗಣಿಸದೆ ತ್ರಿಗುಣಗಳನ್ನೂ ಕರ್ಮಗಳನ್ನೂ ಅನುಸರಿಸಿಯೇ ನಡೆಸುವನು ದೇವನಿಗೆ ವೈಷಮ್ಯವೆಲ್ಲಿ ಇದೆ?

ಹಿಂದಿನ ಪದ್ಯದಲ್ಲಿ ಹೇಳಿದಂತೆ ಬೆಂಕಿ ಕಬ್ಬಿಣವನ್ನು ಮಾತ್ರ ಕೆಂಪಾಗಿ ಸುಂದರವಾಗಿ ಹೊಳೆಯುವಂತೆ ಮಾಡುತ್ತದೆ ಮಣ್ಣು-ಕಲ್ಲುಗಳನ್ನು ಹಾಗೆ ಮಾಡುವುದಿಲ್ಲ ಹಾಗೆಯೆ ಶ್ರೀಹರಿ ಕೆಲವರನ್ನು ಮಾತ್ರ ಆಪ್ತರನ್ನಾಗಿ ಮಾಡುತ್ತಾನೆ ಕೆಲವರನ್ನು ಶತ್ರುಗಳನ್ನಾಗಿ ಮಾಡುತ್ತಾನೆ ಇನ್ನು ಕೆಲವರನ್ನು ತಟಸ್ಥರನ್ನಾಗಿ ಮಾಡುತ್ತಾನೆ ಇದೇಕೆ ಹೀಗೆ? ಇದು ವೈಷಮ್ಯವಲ್ಲವೆ? ಸರ್ವದೋಷರಹಿತನಾದ ಚೇತನನೆ ಭಗವಂತ ವೈಷಮ್ಯವೆಂಬ ಮಹಾದೋಷವಿರುವುದಾದರೆ ಶ್ರೀಹರಿ ಭಗವಂತನೆನಿಸುವುದು ಹೇಗೆ? ಈ ಪ್ರಶ್ನೆಗೆ ಸಮಾಧಾನ ಮೇಲಿನ ಪದ್ಯದಲ್ಲಿ ಬಂದಿದೆ

**ವಾರಿದನು ಮಳೆಗರೆಯೆ ಫಲರಸ ಬೇರೆ ಬೇರಿಪ್ಪಂತೆ**

ಭಗವಂತ ವಿನಾಕಾರಣ ಒಬ್ಬ ವ್ಯಕ್ತಿಯನ್ನು ಆಪ್ತನನ್ನಾಗಿ ಇನ್ನೊಬ್ಬನನ್ನು ಶತ್ರುವನ್ನಾಗಿ ಮಾಡುವುದಿಲ್ಲ ಅವರವರ ಯೋಗ್ಯತೆಗುಣಕರ್ಮಗಳಿಗೆ ಅನುಸಾರವಾಗಿ ಅವ್ಯಕ್ತವಾಗಿರುವ ಶತ್ರುತ್ವ ಮಿತ್ರತ್ವಗಳನ್ನು ವ್ಯಕ್ತಗೊಳಿಸುತ್ತಾನೆ ಅವರವರ ಸುಪ್ತಗುಣ ದೋಷಗಳನ್ನು ವಿಕಾಸಗೊಳಿಸುತ್ತಾನೆ. ಹೊಸದಾಗಿ ಉಂಟುಮಾಡುವುದಿಲ್ಲ. ಆದರಿಂದ ವೈಷಮ್ಯ ದೋಷವಿಲ್ಲ ಇದನ್ನು ಸ್ಪಷ್ಟಪಡಿಸಲು ಪರ್ಜನ್ಯದೇವ ದೃಷ್ಟಾಂತ ವಾರಿ ಎಂದರೆ ನೀರು ವಾರಿದ ನೀರು ಕೊಡುವ ಮೋಡ ಮತ್ತು ಅದಕ್ಕೆ ಅಭಿಮಾನಿಯಾದ ಪರ್ಜನ್ಯನೆಂಬ ದೇವ ಈತ ಮಳೆಗರೆಯುವಾಗ ಎಲ್ಲ ಬಗೆಯ ಮರ ಗಿಡಗಳಿಗೂ ಒಂದೇ ಬಗೆಯ ಸಿಹಿ ನೀರನ್ನೇ ಕೊಡುತ್ತಾನೆ ಮಾವಿನ ಮರಕ್ಕೆ ಮಧುರವಾದ ನೀರನ್ನಾಗಲಿ ಹಾಗಲಕಾಯಿಯ ಬಳ್ಳಿಗೆ ಕಹಿ ನೀರನ್ನಾಗಲಿ ಸುರಿಸುವುದಿಲ್ಲ ಆದರೂ ಮಾವಿನ ಹಣ್ಣು ಸಿಹಿ, ಹಾಗಲಕಾಯಿ ಕಹಿ, ಏಕೆ? ಅವುಗಳ ಬೀಜ ಸ್ವಭಾವದಲ್ಲಿಯೆ ಇರುವ ವೈಷಮ್ಯ ಕಾರಣ ಪರ್ಜನ್ಯನಲ್ಲಿ ಯಾವ

ವೈಷಮ್ಯವನ್ನೂ ನಾವು ಕಾಣಲಾರೆವು ಹಾಗೆಯೆ ಭಗವಂತ ಶ್ರುತಿಸ್ಮೃತಿಗಳಲ್ಲಿ ಇದು ಧರ್ಮ ಇದು ಅಧರ್ಮ ಎಂದು ಮಾನವನಿಗೆ ವಿಧಿ ನಿಷೇಧಗಳನ್ನು ಮಾಡಿದ್ದಾನೆ ವಾಲ್ಮೀಕಿ ಮುನಿಯಲ್ಲಿ ನಿಂತು ರಾಮಾಯಣವನ್ನು ರಚಿಸಿ 'ರಾಮನಂತೆ ಇರು, ರಾವಣನಂತೆ ಅಲ್ಲ' ಎಂದು ಮುಂತಾಗಿ ಉಪದೇಶಿಸಿದ್ದಾನೆ ಎಲ್ಲರಿಗೂ ರಾಮಾಯಣ ಒಂದೇ ಆದರೆ ರಾಮನಂಥ ಸಾತ್ವಿಕ ಸ್ವಭಾವದವರು ರಾಮನಂತಿರಬೇಕೆಂದು ಪಾಠಕಲಿತುಕೊಳ್ಳುತ್ತಾರೆ ತಾಮಸ ಸ್ವಭಾವದವರು ರಾವಣನ ಪಾತ್ರವನ್ನೇ ಮೆಚ್ಚಿಕೊಳ್ಳುತ್ತಾರೆ ಇದೇನೂ ವಾಲ್ಮೀಕಿಯ ತಪ್ಪಲ್ಲ, ಅವನೊಳಗಿದ್ದ ಹರಿಯ ತಪ್ಪೂ ಅಲ್ಲ ತಪ್ಪು ಇರುವುದು ವ್ಯಕ್ತಿಯ ಯೋಗ್ಯತೆಯಲ್ಲಿ ಅದಕ್ಕನುಗುಣವಾದ ಗುಣ ಕರ್ಮಗಳಲ್ಲಿ, 'ಭಗವಂತ ಕೇವಲ ವಾಲ್ಮೀಕಿಯಂತೆ ಅಲ್ಲ, ವಾಲ್ಮೀಕಿ ಹೊರಗೆ ಉಪದೇಶಿಸುತ್ತಾನೆ, ಒಳಗೆ ಅಂತರಂಗದಲ್ಲಿ ಆ ಉಪದೇಶವನ್ನು ಕೇಳುವುದು ಬಿಡುವುದು ವ್ಯಕ್ತಿಯ ಸ್ವಾಭಾವಿಕ ಒಲವಿಗೆ, ಅಭಿರುಚಿಗೆ ಬಿಟ್ಟಿದ್ದು ಭಗವಂತ ಒಳಗೂ ನಿಂತು ಕಾಲಕಾಲಕ್ಕೆ ಮಾನವನ ಬೇಕು ಬೇಡಗಳನ್ನು ಅವನಿಚ್ಛೆಯಂತೆ ಹುಟ್ಟಿಸದೆ ತನ್ನಿಚ್ಛೆಯಂತೇ ಹುಟ್ಟಿಸುತ್ತಾನೆ ಹೊರಗೆ ಧರ್ಮೋಪದೇಶ ಮಾಡಿದರೂ ಒಳಗೆ ಇದರಲ್ಲಿ ಏನೂ ಹುರುಳಿಲ್ಲ ಎಂಬ ಅನಿಸಿಕೆಯನ್ನು ಮೂಡಿಸುತ್ತಾನೆ ಅಥವಾ ಕೆಲವರಲ್ಲಿ ಶ್ರದ್ಧೆ ಹುಟ್ಟಿಸುತ್ತಾನೆ ಒಳಗೆ ಭಗವಂತ 'ಬೇಕು' ಎಂದರೆ ಜೀವಾತ್ಮ 'ಬೇಕು' ಎನ್ನುತ್ತಾನೆ ಅವನು 'ಬೇಡ' ಎಂದರೆ ಇವನು 'ಬೇಡ' ಎನ್ನುತ್ತಾನೆ 'ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ' ಎಂದು ಮುಂತಾಗಿ ಛಾಂದೋಗ್ಯೋಪನಿಷತ್ತು ಇದನ್ನೇ ಹೇಳುತ್ತಿದೆ ಆದರಿಂದ ಶ್ರೀಹರಿ ಎಲ್ಲರ ಒಳಗಿದ್ದು ಎಲ್ಲರಿಗೂ ಒಳ್ಳೆಯ ಅಭಿರುಚಿಯನ್ನೇ ನೀಡಲಿ' ಎನ್ನುವ ಆಕ್ಷೇಪಕ್ಕೂ ಸಮಾಧಾನ ಮಳೆನೀರಿನ ದೃಷ್ಟಾಂತದಲ್ಲಿ ಇದೆ ಮಳೆನೀರು ಬೇರುಕಾಂಡ ಎಲೆ ಹೂ ಹಣ್ಣುಗಳಲ್ಲೆಲ್ಲ ಒಳಗೇ ತುಂಬಿಕೊಂಡು ಮರದ ಅಸ್ತಿತ್ವಕ್ಕೆ, ಬೆಳವಣಿಗೆಗೆ, ಹೂ ಹಣ್ಣು ಮುಂತಾದುದಕ್ಕೆ ಎಲ್ಲಕ್ಕೂ ಕಾರಣವಾಗಿದೆ ಈ ನೀರು ಒಂದೊಂದು ಹಣ್ಣಿನಲ್ಲಿ ಒಂದೊಂದು ರುಚಿಯನ್ನು ವ್ಯಕ್ತಮಾಡಿಕೊಡುತ್ತಿದ್ದರೂ ವೈಷಮ್ಯ ಮಾಡುತ್ತಿಲ್ಲ ವಿಭಿನ್ನ ಸ್ವಭಾವದ ಹಣ್ಣುಗಳಲ್ಲಿ ವಿಭಿನ್ನ ರುಚಿಗಳನ್ನು ಒಂದೇ ಬಗೆಯ ಮಳೆನೀರು ತೋರುವಂತೆ ವಿಭಿನ್ನ ಸ್ವಭಾವದ ವ್ಯಕ್ತಿಗಳಲ್ಲಿ ಶತ್ರುತ್ವ ಮಿತ್ರತ್ವ ಮುಂತಾದ ವಿಭಿನ್ನ ಮನೋಭಾವಗಳನ್ನು ಸ್ವತಃ ಸ್ನೇಹ ಪ್ರೀತಿ ವಾತ್ಸಲ್ಯ ಸ್ವರೂಪನಾದ ಭಗವಂತ ವ್ಯಕ್ತಗೊಳಿಸಿದರೆ ಅದನ್ನು ವೈಷಮ್ಯವೆನ್ನಲಾಗದು

### ಯೋಗ್ಯತೆ ಮೀರದಲೆ

ವ್ಯಕ್ತಿಯ ಸ್ವಭಾವ ಯೋಗ್ಯತೆಯನ್ನು ಮೀರದಲೆ ಭಗವಂತ ಪ್ರವೃತ್ತಿ ಮಾಡಿಸುತ್ತಾನೆ, ಸುಖದುಃಖ ಫಲಗಳನ್ನು ಉಣಿಸುತ್ತಾನೆ, ಏಕೆ? ಸ್ವಭಾವವನ್ನೇ ಏಕೆ ಬದಲಿಸಬಾರದು? ಆತ ಅಶಕ್ತನೆ? ಸರ್ವಶಕ್ತನಲ್ಲಿ ಅಶಕ್ತಿ ಎನ್ನಲು ಶಕ್ಯವಿಲ್ಲ ಅದರಿಂದ ವೈಷಮ್ಯ ಮಾಡುವುದು ಅವನ ಸ್ವಭಾವವೆನ್ನಬೇಕಾಗುತ್ತದೆ ಎಂಬ ಆಕ್ಷೇಪಕ್ಕೂ ಮಳೆನೀರೇ ಉತ್ತರಿಸುತ್ತದೆ ಮಳೆ ನೀರು ಎಲ್ಲಕಡೆ ಸಮಾನವಾಗಿ ಸುರಿಯುವುದಿಲ್ಲ ಎಲ್ಲಿ ಯಾವಾಗ ಮಳೆಯಾಗಬೇಕೋ ಅಲ್ಲಿ ಆಗ

ಆಗುವುದಿಲ್ಲ. ಎಲ್ಲಿ ಯಾವಾಗ ಬೇಡವೊ ಅಲ್ಲಿ ಆಗುತ್ತದೆ. ಅತಿವೃಷ್ಟಿ, ಅನಾವೃಷ್ಟಿಗಳಾಗುತ್ತವೆ. ಮಳೆ ನೀರು ಜಡ ಎನ್ನೋಣ. ಅದನ್ನು ಸುರಿಸುವ ಪರ್ಜನ್ಯದೇವ ಚೇತನ ತಾನೆ! ಅವನು ಶಕ್ತನೇ ಆದರೂ ಅವನಲ್ಲಿ ವೈಷಮ್ಯ ದೋಷವನ್ನು ನಾವು ಕಾಣುವುದಿಲ್ಲ. ಆಯಾ ದೇಶದ ಜನರ ಯೋಗ್ಯತೆ ಅದೃಷ್ಟಗಳು ಕಾರಣ ಎನ್ನುತ್ತೇವೆ. ಅದರಿಂದ ಲೋಕದಲ್ಲಿ ಎಲ್ಲಿಯೂ ಸ್ವಭಾವ ಯೋಗ್ಯತೆಯನ್ನು ವ್ಯತ್ಯಾಸ ಮಾಡದಿರುವುದು ವೈಷಮ್ಯವೆನಿಸುವುದಿಲ್ಲ. ವ್ಯತ್ಯಾಸ ಮಾಡುವುದೇ ವೈಷಮ್ಯವಾಗುತ್ತದೆ. ಇಲ್ಲದಿದ್ದರೆ ಭಗವಂತ ಎಲ್ಲ ಜಡಗಳನ್ನು ಚೇತನವನ್ನಾಗಿ ಮಾಡಲಿ, ಎಲ್ಲ ಪ್ರಾಣಿಗಳನ್ನೂ ಮನುಷ್ಯರನ್ನಾಗಿ ಮಾಡಲಿ, ಹೆಂಡವನ್ನು ಪವಿತ್ರ ತೀರ್ಥವನ್ನಾಗಿ ಮಾಡಲಿ, ಎಲ್ಲ ದುಃಖಿಗಳನ್ನೂ ಸುಖಿಗಳನ್ನಾಗಿ ಮಾಡಲಿ. ಎಲ್ಲಾ ಸುಖಿಗಳನ್ನೂ ದುಃಖಿಗಳನ್ನಾಗಿ ಮಾಡಿ ಅವರ ದುಃಖವನ್ನು ಕಂಡು ತಾನೂ ದುಃಖಿಸಲಿ. ಲೋಕದಲ್ಲಿ ಅದೂ ಒಂದು ಗುಣವೇ ತಾನೆ? ಅದರಿಂದ ಆಯಾ ಜಡಚೇತನರ ಸ್ವಭಾವ ಯೋಗ್ಯತೆಗಳನ್ನು ಹಾಗೇ ಕಾಪಾಡಿ ಅವುಗಳಿಗೆ ಅನುಸಾರವಾಗಿ ಸುಖದುಃಖ ನೀಡುವುದೇ ಭಗವಂತನ ದೊಡ್ಡಗುಣ ಎನ್ನಬೇಕು.

**ಮಾರಮಣ**

ಚೇತನರು ಸ್ವಾರ್ಥದ ಉದ್ದೇಶದಿಂದ ವೈಷಮ್ಯ ಮಾಡುವುದು ಕಂಡಿದೆ. ಮಾರಮಣನಿಗೆ ಅಂದರೆ ಲಕ್ಷ್ಮೀರಮಣನಿಗೆ ಸ್ವಾರ್ಥವಿದೆಯೇ? ಅವನಿಗೆ ಸಂಪತ್ತಿನ ಕೊರತೆಯೆ? ಮಾ ಎಂದರೆ ಜ್ಞಾನ, ರಮಣ ವೆಂದರೆ ಆನಂದ. ಜ್ಞಾನಾನಂದ ಸಾಗರ ಸ್ವರೂಪನಿಗೆ ಯಾವುದೇ ಸ್ವಾರ್ಥವಿರಲು ಶಕ್ಯವಿಲ್ಲ.

**ಗುಣಕರ್ಮಗಳ ಅನುಸಾರ ನಡೆಸುವ.**

'ಶ್ರೀಹರಿ ಜ್ಞಾನಾನಂದಮಯನೆ, ಸಕಲ ಸಂಪತ್ತಿಗೆ ಸ್ವಾಮಿಯೆ. ಆದರೂ ಅವನಿಗೆ ಹಾಗೆ ತನ್ನನ್ನು ಎಲ್ಲರೂ ಹೊಗಳಲಿ, ಆರಾಧಿಸಲಿ ಎನ್ನುವ ಸ್ವಾರ್ಥ ಒಂದಿದೆ. ಅದರಿಂದ ಹೊಗಳಿದರೆ ಸುಖ, ಹೊಗಳದಿದ್ದರೆ ದುಃಖ ನೀಡುತ್ತ ವೈಷಮ್ಯ ಮಾಡುತ್ತಾನೆ' ಎಂದು ಆಕ್ಷೇಪ ಬರಬಹುದು. ಆದರೆ ಶ್ರೀಹರಿ ಹೊಗಳಿಕೆಗೆ ಆಸೆಪಡುವವನಲ್ಲ. 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ' ಎಂದು ಭಗವದ್ಗೀತೆ ಹೇಳುವಂತೆ ಎಲ್ಲಿಯೋ ಸಾವಿರಕ್ಕೊಬ್ಬ, ಲಕ್ಷಕ್ಕೆ ಒಬ್ಬ ಹರಿಯನ್ನು ಹೊಗಳುತ್ತಾನಷ್ಟೆ. ಉಳಿದವರು ಎಲ್ಲರೂ ಸುಮ್ಮನಿರುತ್ತಾರೆ, ಅಥವಾ ನಿಂದಿಸುತ್ತಾರೆ. ಶ್ರೀಹರಿ ಹೊಗಳಿಕೆಯನ್ನು ಬಯಸಿದ್ದರೆ ಎಲ್ಲರಿಂದಲೂ ಹೊಗಳಿಸಿಕೊಳ್ಳಬಹುದಿತ್ತು. ಅವನಿಗೆ ಅದು ಬೇಡವಾಗಿದೆ. ದುರ್ಯೋಧನನ ಅರಮನೆಯ ವೈಭವದ ಸತ್ಕಾರವನ್ನು ಕಡೆಗಣಿಸಿ ವಿದುರನ ಮನೆಯಲ್ಲಿ ಉಣ್ಣುತ್ತಾನೆ ಶ್ರೀಕೃಷ್ಣ. ದುರ್ಯೋಧನನ ಯೋಗ್ಯತೆಯನ್ನೂ ಗುಣಕರ್ಮಗಳನ್ನೂ 'ಪಾಂಡವಾನ್ ದ್ವಿಷಸೇ ರಾಜನ್' 'ಪಾಂಡವರನ್ನು ದ್ವೇಷಿಸುವಿ' ಎಂದು ಒಂದೇ ಮಾತಿನಲ್ಲಿ ಶ್ರೀಕೃಷ್ಣ ಹೇಳಿ ಅವನ ಸತ್ಕಾರವನ್ನು ತಿರಸ್ಕರಿಸಿದ. ದುರ್ಯೋಧನ ಹುಟ್ಟಿನಿಂದಲೆ ದ್ವೇಷ ಮತ್ಸರಗಳಿಂದ ತುಂಬಿ ಹೋಗಿದ್ದ

ತಾಯಿಯ ಗರ್ಭದಲ್ಲಿರುವಾಗಲೆ ಅವನ ಆ ದುರ್ಗುಣಗಳು ಪ್ರಕಟವಾಗಿದ್ದುವು ತಾಯಿ ಗಾಂಧಾರಿ ಕುಂತಿಗೆ ಪುತ್ರೋತ್ಸವವಾಯಿತೆಂದು ಕೇಳಿ ಅಸಹನೆಯಿಂದ ಹೊಟ್ಟೆ ಕಿವುಚಿಕೊಂಡು ಗರ್ಭಪಿಂಡವನ್ನು ನೂರು ಚೂರುಗಳಾಗಿ ಮಾಡಿದ್ದಳು!

## ದೇವನಿಗೆ ವೈಷಮ್ಯವೆಲ್ಲಿಹುದೋ

'ಎಲ್ಲರನ್ನೂ ಹುಟ್ಟಿಸುವ ತಂದೆ, ಎಲ್ಲ ದೇವತೆಗಳ ನಾಮಗಳನ್ನು ಧರಿಸಿದವ, ದೇವರ ದೇವ ಶ್ರೀಹರಿ' ಎಂದು ಶ್ರುತಿ ಸಾರುತ್ತಿದೆ - 'ಯೋ ನಃ ಪಿತಾ ಜನಿತಾ' ಆದರೆ ತಂದೆ ಮಕ್ಕಳಲ್ಲಿ ವೈಷಮ್ಯ ಮಾಡಬಹುದೆ? ಮಕ್ಕಳೆಲ್ಲರೂ ಒಂದೇ ರೀತಿ ಇಲ್ಲದಿರಬಹುದು ಅವರ ಸ್ವಭಾವ ಯೋಗ್ಯತೆಗಳು ಬೇರೆ ಬೇರೆಯಾಗಿರಬಹುದು ಆದರೆ ತಂದೆ ಎಲ್ಲರನ್ನೂ ಒಂದೇ ರೀತಿ ಕಾಣಬೇಕು ಅದರಲ್ಲಿಯೂ ಅಶಕ್ತನಾದ ಮಗನಿಗೆ ಹೆಚ್ಚು ಆಸರೆ ನೀಡಬೇಕು ಭಗವಂತ ಆದರ್ಶ ತಂದೆಯಂತೆ ಇಲ್ಲ ಸಶಕ್ತರಾದ ಬ್ರಹ್ಮಾದಿದೇವತೆಗಳಿಗೆ ಹೆಚ್ಚಿನ ಅನುಗ್ರಹ ಮಾಡುತ್ತಾನೆ ದುರ್ಬಲನಾದ ಮಾನವನನ್ನು ತೃಣೀಕರಿಸುತ್ತಾನೆ ಪಾಪಿ ದೈತ್ಯರನ್ನು ಹಿಂಸಿಸುತ್ತಾನೆ ಈ ವೈಷಮ್ಯ ಸರಿಯೆ? ಎಂಬ ಪ್ರಶ್ನೆಗೆ ಹೀಗೆ ಸಮಾಧಾನ ಹೇಳಬೇಕು ಶ್ರೀಹರಿ ಆದರ್ಶ ತಂದೆ ಹೌದು ತಂದೆ ದುಷ್ಟ ಮಕ್ಕಳನ್ನು ಹಾಗೇ ಮುದ್ದು ಮಾಡಿದರೆ ಮಕ್ಕಳು ಇನ್ನೂ ಕೆಡುತ್ತಾರೆ ಜೊತೆಗೆ ತಾನೂ ಕೆಡುತ್ತಾನೆ ಅವರನ್ನು ತಿದ್ದಲು ಯತ್ನಿಸಬೇಕು ಸ್ವಭಾವದಲ್ಲಿಯೆ ದುಷ್ಟತನವಿದ್ದರೆ ಪರಿತ್ಯಾಗ ಮಾಡಬೇಕಾಗುತ್ತದೆ ಸಗರ ಚಕ್ರವರ್ತಿ ಮಗನಾದ ಅಸಮಂಜಸನನ್ನು ತಿದ್ದಲಾಗದೆ ಪರಿತ್ಯಾಗ ಮಾಡಿದ ಅಂಧನಾದ ಧೃತರಾಷ್ಟ್ರ ದುಷ್ಟಮಕ್ಕಳನ್ನು ಪರಿತ್ಯಾಗ ಮಾಡದೆ ಮುದ್ದುಮಾಡಿ ಸರ್ವನಾಶ ಹೊಂದಿದ ತಂದೆಯಾಗಲಿ ಗುರುವಾಗಲಿ ಮಕ್ಕಳಲ್ಲಿ ಸುಪ್ತವಾಗಿರುವ ಸದ್ಗುಣಗಳನ್ನು ಕಂಡುಕೊಂಡು ಅದಕ್ಕನುಗುಣವಾಗಿ ಅಭ್ಯಾಸಮಾಡಿಸಿ ಒಳ್ಳೆಯ ವ್ಯಕ್ತಿತ್ವವನ್ನು ರೂಪುಗೊಳಿಸಬಲ್ಲ ಹೊರತು ಸ್ವಭಾವದಲ್ಲಿಯೆ ಇಲ್ಲದ ಯಾವುದೇ ಗುಣವನ್ನು ಹೊಸದಾಗಿ ತಂದು ತುಂಬಿಸಲಾರ ಅದಕ್ಕೆ ಅವನು ವ್ಯರ್ಥವಾಗಿ ಪ್ರಯತ್ನಿಸಬಾರದು ಭಗವಂತ ಆದರ್ಶ ತಂದೆಯೂ ಹೌದು, ಆದರ್ಶ ಗುರುವೂ ಹೌದು ಅವನ ಎಲ್ಲ ಮಕ್ಕಳ ಸ್ವಭಾವ ಯೋಗ್ಯತೆ ಎಲ್ಲವೂ ಅವನಿಗೆ ಗೊತ್ತು ಅದನ್ನು ಅವನು ಚೆನ್ನಾಗಿ ವಿಕಾಸಗೊಳಿಸಿ ತಕ್ಕ ಫಲ ನೀಡಿ ಅನುಗ್ರಹಿಸುತ್ತಾನೆ ಅದರಿಂದ ವಿಚಿತ್ರ ಜಗತ್ತನ್ನು ಸೃಷ್ಟಿಮಾಡಿ ಕಾಪಾಡುತ್ತಿರುವ ಅವನು ಸರ್ವಶಕ್ತನೆ ಸರಿ! -

ಬಹುಚಿತ್ರಜಗದ್ ಬಹುಧಾಕರಣಾತ್ ಪರಶಕ್ತಿರನಂತಗುಣಃ ಪರಮಃ ॥

**ವಾರಿಜಾಪ್ತನ ಕಿರಣ ಮಣಿಗಳ**
**ಸೇರಿ ತತ್ತದ್ವರ್ಣಗಳನು ವಿ**
**ಕಾರ ಗೈಸದೆ ನೋಳ್ಪರಿಗೆ ಕಂಗೊಳಿಸುವಂದದಲಿ।**

**ಮಾರಮಣ ಲೋಕತ್ರಯದೊಳಿಹ**
**ಮೂರು ವಿಧ ಜೀವರೊಳಗಿದ್ದು ವಿ**
**ಹಾರ ಮಾಡುವನವರ ಯೋಗ್ಯತೆ ಕರ್ಮವನನುಸರಿಸಿ ॥ ೨೪ ॥**

ಸೂರ್ಯನ ಕಿರಣವು ಮಣಿಗಳನ್ನು ಸೇರಿ ಅವುಗಳ ಆಯಾ ಬಣ್ಣಗಳನ್ನು ವ್ಯತ್ಯಾಸ ಮಾಡದೆ ನೋಡುವವರಿಗೆ ಕಂಗೊಳಿಸುವಂತೆ ಲಕ್ಷ್ಮೀರಮಣ ಮೂಲೋಕದೊಳ ಗಿರುವ ಮೂರು ಬಗೆಯ ಜೀವರೊಳಗಿದ್ದು ಅವರ ಯೋಗ್ಯತೆ ಮತ್ತು ಕರ್ಮವನ್ನು ಅನುಸರಿಸಿ ವಿಹಾರ ಮಾಡುವನು

**ವಾರಿಜಾಪ್ತನ ಕಿರಣ**

ಶ್ರೀಹರಿ ಜೀವನಲ್ಲಿ ವ್ಯಾಪ್ತನಾಗಿದ್ದು ಅವರಲ್ಲಿ ಸ್ವಾಭಾವಿಕವಾಗಿ ಸುಪ್ತವಾಗಿರುವ ಶಕ್ತಿಯನ್ನು ಜ್ಞಾನಾದಿ ಗುಣಧರ್ಮಗಳನ್ನೂ ಅವರ ಅನಾದಿ ಕರ್ಮಕ್ಕೆ ಅನುಸಾರವಾಗಿ ವ್ಯಕ್ತಗೊಳಿಸುತ್ತಾನೆ ಅವರಲ್ಲಿ ಇಲ್ಲದುದೇನನ್ನೂ ಅವರಿಗೆ ಹೊಸತಾಗಿ ಕೊಡುವುದಿಲ್ಲ ಅದರಿಂದ ಕೆಲವರಿಗೆ ಬಲ ಜ್ಞಾನ ಆನಂದಾದಿಗಳನ್ನು ಕೆಲವರಿಗೆ ಅಶಕ್ತಿ ಅಜ್ಞಾನ ದುಃಖಾದಿಗಳನ್ನೂ ಕೆಲವರಿಗೆ ಗುಣದೋಷಮಿಶ್ರಣವನ್ನೂ ಕೊಡುತ್ತ ವೈಷಮ್ಯ ಮಾಡುತ್ತಾನೆ ಎನ್ನಲು ಅವಕಾಶವಿಲ್ಲ

ಆದರೆ ಹಿಂದೆ ಕಾದ ಕಬ್ಬಿಣದ ದೃಷ್ಟಾಂತ ಬಂದಿದೆ ಕಬ್ಬಿಣದಲ್ಲಿ ವ್ಯಾಪ್ತವಾದ ಬೆಂಕಿ ಕಬ್ಬಿಣದಲ್ಲಿ ಇಲ್ಲದ ಕೆಂಬಣ್ಣವನ್ನೂ ಶಾಖವನ್ನೂ ಅದಕ್ಕೆ ನೀಡುತ್ತದೆ ಸ್ವಾಭಾವಿಕವಾಗಿ ಅದರಲ್ಲಿ ಇರುವ ಕಪ್ಪುಬಣ್ಣವನ್ನು ವ್ಯತ್ಯಾಸಗೊಳಿಸುತ್ತದೆ ಹಾಗೇ ಶ್ರೀಹರಿಯೂ ಜೀವರ ಸ್ವಾಭಾವಿಕ ಗುಣಗಳನ್ನು ವ್ಯತ್ಯಾಸ ಮಾಡುವನೆ? ಮಾಡಿದರೆ ವೈಷಮ್ಯ ಮಾಡಿದಂತಾಗದೆ? ಎಂಬ ಪ್ರಶ್ನೆ ಬರುತ್ತದೆ ಅದಕ್ಕೆ ಹಿಂದೆ ಹೇಳಿದ ಮಳೆನೀರಿನ ದೃಷ್ಟಾಂತ ಒಪ್ಪುತ್ತದೆ ಮಳೆನೀರು ಎಲ್ಲ ಮರಗಳಿಗೂ ಒಂದೇ ತೆರನಾಗಿದ್ದು ಮರದ ಸ್ವಭಾವಾನುಸಾರ ಹಣ್ಣುಗಳಲ್ಲಿ ವಿಭಿನ್ನ ರುಚಿಗಳನ್ನು ವ್ಯಕ್ತ ಮಾಡುತ್ತದೆ ಇಲ್ಲಿಯೂ ಒಂದು ಸಮಸ್ಯೆ ಬರುತ್ತದೆ ಮಳೆನೀರಿನಲ್ಲಿ ಯಾವ ರುಚಿಯೂ ಇಲ್ಲ ಹಣ್ಣುಗಳಲ್ಲಿ ವಿಭಿನ್ನ ರುಚಿಗಳನ್ನು ವ್ಯಕ್ತಮಾಡಿಕೊಡುತ್ತದಷ್ಟೆ ಹಾಗೇ ಶ್ರೀಹರಿಯೂ ನಿರ್ಗುಣ ನಾಗಿದ್ದು ಜೀವರಲ್ಲಿ ಭಿನ್ನ ಭಿನ್ನ ಗುಣಗಳನ್ನು ವ್ಯಕ್ತಮಾಡುವನೆ? ಜೀವರ ಜ್ಞಾನ ಆನಂದ ಮುಂತಾದ ಗುಣಗಳು ಹರಿಯ ಜ್ಞಾನಾನಂದಾದಿಗುಣಗಳಿಗೆ ಪ್ರತಿಬಿಂಬದಂತಿರು ವುದೆಂಬ ಅಂಶ ಮಹತ್ವದ್ದು ಅದು ಸ್ಪಷ್ಟವಾಗಲಾರದು ಕಾದ ಕಬ್ಬಿಣದ ದೃಷ್ಟಾಂತ ತಿಳಿಸುವಂತೆ ಜೀವನಲ್ಲಿರುವ ಗುಣಗಳು ಭಗವಂತನಿಗೆ ಅಧೀನವಾದರೆ ಸಾಲದು ಅವನ ಗುಣಗಳಿಗೆ ಸದೃಶವೂ ಆಗಿರಬೇಕು ಆಗ ಮಾತ್ರ ಅವು ಪ್ರತಿಬಿಂಬವೆನಿಸಬಲ್ಲುವು

ವಸ್ತುತಃ ದೃಷ್ಟಾಂತಗಳು ಸಮರ್ಪಕವಾಗಿಯೆ ಇವೆ ಸಮರ್ಪಕವಾಗಿ ಅನ್ವಯಿಸಿ ಕೊಳ್ಳಬೇಕಷ್ಟೆ 'ನಹಿ ದೃಷ್ಟಾಂತೇ ಸರ್ವಸಾಮ್ಯಂ' ದೃಷ್ಟಾಂತದಲ್ಲಿ ಪೂರ್ತಿ ಸಾಮ್ಯವನ್ನು

ತೆಗೆದುಕೊಳ್ಳಬಾರದು ಚಂದ್ರದೃಷ್ಟಾಂತದಿಂದ ಮುಖದಲ್ಲಿ ಕಪ್ಪುಕಲೆಗಳಿವೆ ಎಂದು ತಿಳಿಯಬಾರದು ಪ್ರಕೃತದಲ್ಲಿ ಕಾದಕಬ್ಬಿಣದ ದೃಷ್ಟಾಂತ, ಜೀವನಲ್ಲಿ ಏನಾದರೂ ವೈಶಿಷ್ಟ್ಯ ಕಾಣಬೇಕಾದರೆ ಅದು ಪರಮಾತ್ಮನ ಅಧೀನ, ಕಬ್ಬಿಣ ಕೆಂಪಾಗಿ ಹೊಳೆಯುವುದು ಬೆಂಕಿಯಿಂದ ಎಂಬ ಅಂಶವನ್ನು ಮಾತ್ರ ಹೇಳುತ್ತದೆ ಮಳೆನೀರಿನ ದೃಷ್ಟಾಂತ, ಬಿಂಬನೊಬ್ಬನೆ ಅನಂತ ಪ್ರತಿಬಿಂಬಗಳಲ್ಲಿ ನಾನ ಬಗೆಯ ವೈಶಿಷ್ಟ್ಯಗಳನ್ನು ವ್ಯಕ್ತ ಮಾಡುತ್ತಿದ್ದರೂ ಅವನಿಗೆ ವೈಷಮ್ಯದೋಷವಿಲ್ಲ ಎಂಬ ಅಂಶವನ್ನು ಮಾತ್ರ ತಿಳಿಸುತ್ತದೆ ಈಗಿನ ಸೂರ್ಯಕಿರಣ ದೃಷ್ಟಾಂತ, ಈ ಎರಡು ಅಂಶಗಳ ಜೊತೆಗೆ ಪ್ರತಿಬಿಂಬನಲ್ಲಿ ಕಾಣುವ ವೈಶಿಷ್ಟ್ಯ ಬಿಂಬನ ವೈಶಿಷ್ಟ್ಯಕ್ಕೆ ಅನುರೂಪವಾಗಿದೆ, ಅಂದರೆ ಅಂಥ ವೈಶಿಷ್ಟ್ಯ ಬಿಂಬನಲ್ಲಿ ಇದೆ, ಆತ ನಿರ್ಗುಣನಲ್ಲ ಎಂಬ ಅಂಶವನ್ನು ವ್ಯಕ್ತಮಾಡುತ್ತದೆ

ಸೂರ್ಯಕಿರಣಗಳಲ್ಲಿ ಎಲ್ಲ ಮಣಿಗಳ ಬಣ್ಣಗಳೂ ಇವೆ ಅದರಿಂದ ಕಿರಣದ ಕೆಂಬಣ್ಣ ಮಣಿಯಲ್ಲಿ ಕೆಂಬಣ್ಣವನ್ನು, ಕಿರಣದ ಹಳದಿ ಬಣ್ಣ ಮಣಿಯ ಹಳದಿ ಬಣ್ಣವನ್ನು ಹೀಗೆ ಆಯಾ ಬಣ್ಣಗಳನ್ನು ಕಿರಣದ ಆಯಾ ಬಣ್ಣಗಳೆ ವ್ಯಕ್ತ ಮಾಡುತ್ತವೆ ಅಗ್ನಿಯ ನಾಲಿಗೆಗಳು ಬೇರೆ ಬೇರೆ ಬಣ್ಣದವುಗಳೆಂದು ಹಿಂದೆ ಹೇಳಿದೆ ಹಾಗೇ ಸೂರ್ಯನ ಕಿರಣಗಳೂ ಬೇರೆ ಬೇರೆ ಬಣ್ಣದವುಗಳು ಪೂರ್ವ ದಕ್ಷಿಣ ಪಶ್ಚಿಮ ಉತ್ತರ ರಶ್ಮಿಗಳು ಕ್ರಮವಾಗಿ ಕೆಂಪು ಬಿಳಿ ಹಸಿರು ನೀಲವಾಗಿಯೂ ಮಧ್ಯ ಊರ್ಧ್ವರಶ್ಮಿಗಳು ಕಪ್ಪು ಮತ್ತು ಬಂಗಾರ ಬಣ್ಣದವುಗಳಾಗಿಯೂ ಇವೆ ಎಂದು ಛಾಂದೋಗ್ಯ ಭಾಷ್ಯದಲ್ಲಿ ಉಕ್ತವಾಗಿದೆ ಆಧುನಿಕ ವಿಜ್ಞಾನಪ್ರಕಾರವೂ ಸೂರ್ಯಕಿರಣವನ್ನು ಪಟ್ಟಕದ ಮೂಲಕ ಹಾಯಿಸಿದಾಗ ವರ್ಣವಿಭಜನೆಯಾಗಿ ಉದಾ-ನೇರಳೆ, ನೀಲ, ಹಸಿರು, ಹಳದಿ, ಕಿತ್ತಳೆ, ಕೆಂಪು ಬಣ್ಣಗಳು ಬೇರೆ ಬೇರೆಯಾಗಿ ಗೋಚರವಾಗುತ್ತವೆ ಈ ಏಳು ಬಣ್ಣಗಳಿಂದಲೆ ಕಾಮನ ಬಿಲ್ಲಿನ ಸೃಷ್ಟಿಯಾಗುತ್ತದೆ. ಹೀಗೆ ಕಿರಣದಲ್ಲಿ ಕೆಂಬಣ್ಣವಿದ್ದರೂ ಹಳದಿ ಮಣಿಯಲ್ಲಿ ಸೇರಿಕೊಂಡಾಗ ಅದರ ಹಳದಿ ಬಣ್ಣವನ್ನು ವ್ಯತ್ಯಾಸ ಮಾಡುವುದಿಲ್ಲ ಹಳದಿಬಣ್ಣವೇ ಮಣಿಯ ಹಳದಿಬಣ್ಣವನ್ನು ವ್ಯಕ್ತಗೊಳಿಸುತ್ತದೆ ಹಾಗೇ ಶ್ರೀಹರಿಯ ಬಣ್ಣ ಜೀವನ ಬಣ್ಣವನ್ನು ವ್ಯತ್ಯಾಸ ಮಾಡದೆ ಸರಿಯಾಗಿಯೆ ವ್ಯಕ್ತ ಮಾಡುತ್ತದೆ ಅದರಿಂದಲೆ ಛಾಂದೋಗ್ಯ ಭಾಷ್ಯದಲ್ಲಿ 'ಜೀವವರ್ಣೋ ಜೀವಗತಃ' ಜೀವನಲ್ಲಿ ಜೀವನಂತೆಯೇ ತನ್ನ ಬಣ್ಣವನ್ನು ತೋರುತ್ತಾನೆ ಎಂದಿದೆ

ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಮ್।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್॥ - ಭಗವದ್ಗೀತಾ

ಹರಿಯ ಉಷ್ಣಕಿರಣ ಸೂರ್ಯನ ಉಷ್ಣಕಿರಣವನ್ನೂ ಹರಿಯ ಶೀತಕಿರಣ ಚಂದ್ರನ ಶೀತಕಿರಣವನ್ನೂ ಹರಿಯ ಅಂಗಾರವರ್ಣ ಅಗ್ನಿಯ ಅಂಗಾರ ವರ್ಣವನ್ನೂ ವ್ಯಕ್ತ ಮಾಡುತ್ತದೆ ಇದೇ ರೀತಿ ಜೀವರ ಬೇರೆ ಗುಣಗಳೂ ಹರಿಯಲ್ಲಿರುವ ಸಮಾನ ಗುಣಗಳಿಂದ

ವ್ಯಕ್ತವಾಗುತ್ತವೆ ಗುಣಗಳಲ್ಲಿ ಅಧಿಕ ಸಾಮ್ಯ ದೋಷಗಳಲ್ಲಿ ಮಾತ್ರ ಕಿಂಚಿತ್ ಸಾಮ್ಯ ಏಕೆಂದರೆ ಹರಿಯಲ್ಲಿ ದೋಷಗಳೇ ಇಲ್ಲ

ಯದ್ಯಪಿ ಹರಿಯ ಗುಣಗಳಲ್ಲಿ ಭೇದವಿಲ್ಲ ಆದರೂ ಹರಿಯ ಶುಕ್ಲವರ್ಣವೇ ಜೀವನ ಶುಕ್ಲವರ್ಣಕ್ಕೆ ನಿಯಾಮಕವೆಂದು ಮುಂತಾಗಿ ವಿಶೇಷ ಬಲದಿಂದ ವ್ಯವಹಾರ ಕೂಡುತ್ತದೆ ಆದರಿಂದ 'ತಂ ಯಥಾ ಯಥೋಪಾಸತೇ ತದೇವ ಭವತಿ' ಭಗವಂತನಲ್ಲಿ ಯಾವ ಗುಣವನ್ನು ಉಪಾಸಕ ಆರಾಧಿಸುವನೋ ಆ ಗುಣ ಅವನಲ್ಲಿ ವಿಕಾಸಗೊಳ್ಳುತ್ತದೆ ಎನ್ನುವ ನಿಯಮ ಕಾಣುತ್ತದೆ

ಸೂರ್ಯನನ್ನು ಇಲ್ಲಿ 'ವಾರಿಜಾಪ್ತ' ಎಂದು ಕರೆದುದು ಅರ್ಥಗರ್ಭಿತವಾಗಿದೆ ವಾರಿಜ ಎಂದರೆ ನೀರಲ್ಲಿ ಹುಟ್ಟುವ ಕಮಲ ಅದಕ್ಕೆ ಆಪ್ತಬಂಧುವಿನಂತಿರುವವ ಸೂರ್ಯ ಸೂರ್ಯಕಿರಣ ಕಮಲವನ್ನು ಅರಳಿಸಿ ಆದರ ಬಣ್ಣದ ಬೆಡಗನ್ನೂ ಕಂಪಿನ ಸವಿಯನ್ನೂ ಹಾಳು ಮಾಡದೆ ಇನ್ನಷ್ಟು ಸುಂದರವಾಗಿ ಮಧುರವಾಗಿ ಪ್ರಕಟ ಗೊಳಿಸುತ್ತದೆ ಕಮಲದ ಹೂ ಕೋಮಲ ಸೂರ್ಯನ ಕಿರಣಗಳು ಕಠೋರ ಆದರೂ ಹೂವೆಂದು ಮೃದುವಾಗಿಯೆ ಸ್ಪರ್ಶಿಸಿ ದಳಗಳನ್ನು ಬಿಡಿಸಿ ಹೂವಿನ ಅಂದವನ್ನು ತೆರೆದು ತೋರುತ್ತದೆ ಹಾಗೇ ಸರ್ವಶಕ್ತನಾದ ಶ್ರೀಹರಿ ದುರ್ಬಲರಾದ ಜೀವರ ಸ್ವರೂಪ ಶರೀರವನ್ನು ಮೃದುವಾಗಿಯೆ ಸ್ಪರ್ಶಿಸಿ ಅರಳಿಸಿ ಅವರ ಗುಣಗಳನ್ನು ತೆರೆದು ತೋರಿಸುತ್ತಾನೆ ಬೃಹದಾರಣ್ಯಕ ಭಾಷ್ಯದಲ್ಲಿ ಹಾಗೇ ಹೇಳಿದೆ -

ಅಲ್ಪಂ ತೇಜಸ್ತಥೈವಾಲ್ಪಂ ಜೀವರೂಪಂ ಹಿ ಸಂಸೃತೌ
ತದ್ಧೈವ ಸುಮಹತ್ತೇಜಃ ಕರೋತಿ ಭಗವಾನ್ ಮಹತ್ ।

ಸಂಸಾರಾವಸ್ಥೆಯಲ್ಲಿ ಪರಮಾಣುವಿಗಿಂತಲೂ ಚಿಕ್ಕದಾದ ದುರ್ಬಲವಾದ ಜೀವ ಸ್ವರೂಪ ಶರೀರವನ್ನು ಮುಕ್ತಿಯಲ್ಲಿ ವಿಕಾಸಗೊಳಿಸಿ ದೊಡ್ಡದಾಗಿ ಮಾಡುತ್ತಾನೆ ಹೀಗೆ ಕಮಲಕ್ಕೆ ಸೂರ್ಯನಂತೆ ಜೀವನಿಗೆ ಭಗವಂತ ಆಪ್ತಬಂಧು

**ಮಣಿಗಳ ಸೇರಿ**

ವಜ್ರ ಮಾಣಿಕ್ಯ ಮರಕತ ಪುಷ್ಪರಾಗ ನೀಲ ಗೋಮೇಧಿಕ ವೈಡೂರ್ಯ ಮುತ್ತು ಹವಳ ಎಂಬ ನವರತ್ನಗಳು ಮಾತ್ರವಲ್ಲದೆ ಸೂರ್ಯಕಾಂತ ಚಂದ್ರಕಾಂತ ತೃಣಕಾಂತ ಪರುಷ ಮುಂತಾದ ಅನೇಕ ಬಗೆಯ ರತ್ನಗಳು ಸೂರ್ಯಕಿರಣಗಳ ಸಂಪರ್ಕದಿಂದ ಅನೇಕ ಬಗೆಯ ಬಣ್ಣಗಳಿಂದ ಬೆಳಗುತ್ತವೆ ಉದಾ- ವಜ್ರ ಬಿಳಿ ಹಳದಿ ಗುಲಾಬಿ ಕೆಂಪು ನೀಲ ವರ್ಣಗಳಲ್ಲಿವೆ ಮಾಣಿಕ್ಯ ಕೆಂಪು ಗುಲಾಬಿ ಸಿಂದೂರ ಹಳದಿ ಆಕಾಶ ನೀಲ ಕಪ್ಪು ಬಣ್ಣಗಳಲ್ಲಿವೆ ಮರಕತ ಹಸಿರು ತಿಳಿಹಸಿರು ಬಣ್ಣದ್ದು ಪುಷ್ಪರಾಗ ಹಳದಿ ಬಿಳಿ ನೀಲ ಕಪ್ಪು ಬೂದು ಜೇನಿನ ಬಣ್ಣಗಳಲ್ಲಿರುತ್ತದೆ ನೀಲಮಣಿ ನೀಲವರ್ಣದ್ದು ಗೋಮೇಧಿಕ ಕೆಂಪು ವೈಡೂರ್ಯ ಗೋಮೂತ್ರದ ಬಣ್ಣದ್ದು ಮುತ್ತು ಬಿಳಿ ಕೆಂಪು ಹಳದಿ ಕಪ್ಪು ಬಣ್ಣಗಳಲ್ಲಿದೆ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹುಟ್ಟುವ ಮುತ್ತುಗಳೂ

ಬಣ್ಣದಲ್ಲಿ, ಗಾತ್ರದಲ್ಲಿ ಇಪ್ಪತ್ತೇಳು ಬಗೆಯಾಗಿವೆ ಹವಳ ಕೆಂಪು ಸೂರ್ಯಕಾಂತ ಚಂದ್ರಕಾಂತಗಳು ಬಿಳಿ ತೃಣಕಾಂತ ಹಳದಿ ಸ್ಪಟಿಕ ಬಿಳಿ ಕೆಂಪು ಹಳದಿ ಕಪ್ಪು ಬಣ್ಣಗಳಲ್ಲಿದೆ ಇತ್ಯಾದಿ ಸೂರ್ಯಕಿರಣ ಈ ಎಲ್ಲ ಮಣಿಗಳಲ್ಲಿ ನೇರಿ ಆಯಾ ಬಣ್ಣಗಳನ್ನು ಸರಿಯಾಗಿಯೆ ವ್ಯಕ್ತಗೊಳಿಸುತ್ತ ಕಂಗೊಳಿಸುತ್ತದೆ ಇದು ಅದರ ವಿಹಾರ ಹಾಗೇ ಶ್ರೀಹರಿ ಅನಂತ ಗುಣಗಳುಳ್ಳವನು, ಅನಂತ ವರ್ಣದವನು, ಅನಂತ ಜೀವರಲ್ಲಿ ಇದ್ದು ಅವರ ಆಯಾ ಗುಣಗಳನ್ನೂ ವರ್ಣಗಳನ್ನೂ ವ್ಯಕ್ತಮಾಡುತ್ತ ನೋಡುವ ಕಣ್ಣುಳ್ಳವರಿಗೆ ಸುಂದರವಾಗಿ ಕಂಗೊಳಿಸುತ್ತಾನೆ ಇದು ಅವನ ವಿಹಾರ

**ತತ್ತದ್‌ವರ್ಣಗಳನು ವಿಕಾರಗೈಸದೆ·**

ಬೆಂಕಿ ಕಬ್ಬಿಣದ ಕಪ್ಪುಬಣ್ಣವನ್ನು ಮರೆಮಾಡುತ್ತದೆ ಸೂರ್ಯಕಿರಣ ಮಣಿಯ ಬಣ್ಣವನ್ನು ಮರೆಮಾಡುವುದಿಲ್ಲ ಇನ್ನಷ್ಟು ಪ್ರಕಟ ಮಾಡುತ್ತದೆ ಹಾಗೇ ಪರಂಜ್ಯೋತಿಃಸ್ವರೂಪನಾದ ಹರಿಯೂ ಜೀವರ ಬಣ್ಣವನ್ನು ಮರೆಮಾಡುವುದಿಲ್ಲ ಅವರ ಆನಂದಾದಿಗುಣಗಳನ್ನು ಕೆಡಿಸುವುದಿಲ್ಲ, ಸುಂದರವಾಗಿ ಅಭಿವ್ಯಕ್ತಗೊಳಿಸುತ್ತಾನೆ ಭೂತಪ್ರೇತ ಪಿಶಾಚ ಯಕ್ಷಗಂಧರ್ವ ಮುಂತಾದ ಗ್ರಹಾವೇಶ ಬಂದಾಗ ಮಾನವನ ವ್ಯಕ್ತಿತ್ವದಲ್ಲಿಯೆ ಬದಲಾವಣೆಗಳು ಕಾಣುತ್ತವೆ ಉದಾ

ಹೃಷ್ಟಾತ್ಮಾ ಪುಲಿನವನಾಂತರೋಪಸೇವೀ
ಸ್ವಾಚಾರಃ ಪ್ರಿಯಪರಿಗೀತಗಂಧಮಾಲ್ಯಃ ।
ನೃತ್ಯನ್ ವಾ ಪ್ರಹಸತಿ ಚಾರು ಚಾಲ್ಪಶಬ್ದಂ
ಗಂಧರ್ವಗ್ರಹಪರಿಪೀಡಿತೋ ಮನುಷ್ಯಃ ॥

'ಗಂಧರ್ವಗ್ರಹಾವೇಶಗೊಂಡ ಮನುಷ್ಯ ಸದಾ ಹರ್ಷಚಿತ್ತನಾಗಿ ಮರಳುಪ್ರದೇಶ ಉಪವನಗಳಲ್ಲಿ ವಾಸವನ್ನು ಬಯಸುತ್ತಾನೆ ಸದಾಚಾರ ಸಂಗೀತ ಗಂಧಮಾಲ್ಯಗಳನ್ನು ಬಯಸುತ್ತಾನೆ ಕುಣಿಯುತ್ತಾನೆ ಸಣ್ಣಧ್ವನಿಯಲ್ಲಿ ಮೋಹಕವಾಗಿ ನಗುತ್ತಾನೆ'. ಇಲ್ಲಿ ಗಂಧರ್ವಗ್ರಹಾವೇಶ ಗಂಧರ್ವಸ್ವಭಾವವನ್ನೇ ತೋರುತ್ತದೆ ಹೀಗೇ ಭೂತ ಪ್ರೇತಾದಿ ಆವೇಶಗಳಲ್ಲಿ ಭೂತಚೇಷ್ಟೆಮುಂತಾದವು ಎದ್ದು ಕಾಣುತ್ತದೆ ಆದರೆ ಹರಿಯ ಆವೇಶ ಹಾಗಲ್ಲ ಜೀವರಲ್ಲಿ ಸ್ವಾಭಾವಿಕವಾಗಿ ಮೊದಲೇ ಸುಪ್ತವಾಗಿ ಇದ್ದ ಗುಣವನ್ನೇ ವ್ಯಕ್ತ ಮಾಡುತ್ತದೆ

ಪ್ರಹ್ಲಾದನಲ್ಲಿ ಹರಿಯ ಆವೇಶವನ್ನು ಭಾಗವತ ಹೇಳುತ್ತ 'ಕೃಷ್ಣಗ್ರಹಗೃಹೀತಾತ್ಮಾ' ಎಂದಿದೆ 'ನ್ಯಸ್ತಕ್ರೀಡನಕೋ ಬಾಲಃ' ಬಾಲ್ಯಸಹಜವಾದ ಆಟಗಳನ್ನು ಬಿಟ್ಟನಂತೆ ಹಿರಣ್ಯಕಶಿಪುವಿನ ಭಟರು ಮಾಡಿದ ಅಸಹನೀಯ ಹಿಂಸೆಗಳನ್ನೆಲ್ಲ ತಾಳಿದನಂತೆ ಇದು ಪ್ರಹ್ಲಾದನಲ್ಲಿ ಸ್ವಾಭಾವಿಕವಲ್ಲ, ನಿಜ ಆದರೆ ಈ ಆವೇಶ ವಿಶೇಷಾವೇಶ ಪ್ರಕೃತದಲ್ಲಿ ದಾಸರಾಯರು ಹೇಳುವ ಆವೇಶ ಸಾಮಾನ್ಯಾವೇಶ

**ಮಾರಮಣ ವಿಹಾರ ಮಾಡುವನು**

ಮಾರಮಣ ಎಂದರೆ ಲಕ್ಷ್ಮೀರಮಣ ಎಲ್ಲರಿಗೂ ಸುಖ ನೀಡುವವಳು ಲಕ್ಷ್ಮಿ ಲಕ್ಷ್ಮಿಗೂ ರಮಣ ಸುಖ ನೀಡುವವನು ಶ್ರೀಹರಿ ಎಂದರೆ ಅವನು ಆನಂದಮಯನೆ ನರಿ ಅದರಿಂದ ಅವನು ಆನಂದೋದ್ರೇಕದಿಂದಲೆ ಜೀವರೊಳಗೆ ಪ್ರವೇಶಿಸಿ ವಿಹಾರ ಮಾಡುತ್ತಾನೆ ಆನಂದೋದ್ರೇಕದಿಂದ ನಗುವಾಗ ಕುಣಿವಾಗ ಏನು ಪ್ರಯೋಜನ ಎಂಬ ಪ್ರಶ್ನೆ ಇಲ್ಲ ಏನು ಕಾರಣ ? ಆನಂದೋದ್ರೇಕ ಹೀಗಾಗಿ ಪ್ರಯೋಜನ ಪ್ರಶ್ನೆಯೆ ಇಲ್ಲವೆಂದ ಮೇಲೆ ಹರಿಯ ಈ ವಿಹಾರಕ್ಕೆ ಸ್ವಾರ್ಥದ ಉದ್ದೇಶವಿರಲು ಶಕ್ಯವಿಲ್ಲ ಅದರಿಂದ ವೈಷಮ್ಯ ಪಕ್ಷಪಾತ ಪ್ರಸಕ್ತಿಯೂ ಇಲ್ಲ.

**ಜಲವನಪಹರಿಸುವ ಗಳಿಗೆ ಬ**
**ಟ್ಟಲನುಳಿದು ಜೈಗಂಟೆ ಕೈಪಿಡಿ**
**ದೆಳೆದು ಹೊಡೆವಂದದಲಿ ಸಂತತ ಕರ್ತೃ ತಾನಾಗಿ ।**
**ಹಲಧರಾನುಜ ಪುಣ್ಯಪಾಪದ**
**ಫಲಗಳನು ದೇವಾಸುರರ ಗಣ**
**ದೊಳು ವಿಭಾಗವ ಮಾಡಿ ಉಣಿಸುತ ಸಾಕ್ಷಿಯಾಗಿಪ್ಪ ॥ ೨೫ ॥**

ನಡುವಿನ ಸಣ್ಣರಂಧ್ರದಿಂದ ನೀರನ್ನು ತುಂಬಿಕೊಳ್ಳುವ ಗಳಿಗೆ ಬಟ್ಟಲನ್ನು ಬಿಟ್ಟು ಜಾಗಟೆಯನ್ನು ಕೈಹಿಡಿದೆಳೆದು ಹೊಡೆಯುವಂತೆ ಬಲರಾಮನ ತಮ್ಮನಾದ ಶ್ರೀಕೃಷ್ಣ ಸದಾ ತಾನೇ ಸ್ವತಂತ್ರಕರ್ತನಾಗಿದ್ದು ಪುಣ್ಯಪಾಪಗಳ ಫಲಗಳನ್ನು ದೇವ ಅಸುರರ ಗಣಗಳಲ್ಲಿಯೇ ವಿಭಾಗ ಮಾಡಿ ಉಣಿಸುತ್ತ ತಾನು ಉಣದೆ ಸಾಕ್ಷಿಯಾಗಿರುತ್ತಾನೆ

**ಜಲವನಪಹರಿಸುವ ಗಳಿಗೆ ಬಟ್ಟಲು**

ಸೂರ್ಯಸಿದ್ಧಾಂತ ಜ್ಯೋತಿಷಗ್ರಂಥದಲ್ಲಿ ನಾನಾ ಬಗೆಯ ಕಾಲಮಾಪನ ಯಂತ್ರಗಳನ್ನು ಹೇಳುತ್ತ ಘಟೀಯಂತ್ರ ಅಥವಾ ಕಪಾಲಯಂತ್ರ ಎಂಬ ಹೆಸರಿನ ಗಳಿಗೆ ಬಟ್ಟಲನ್ನೂ ವರ್ಣಿಸಿದೆ ಆರು ಅಂಗುಲ ಎತ್ತರ ಹನ್ನೆರಡು ಅಂಗುಲ ವ್ಯಾಸದ ಒಂದು ಅಗಲದ ತಾಮ್ರಪಾತ್ರೆಯಲ್ಲಿ ನಡುವೆ ಸಣ್ಣರಂಧ್ರ ಕೊರೆಯಬೇಕು ಆ ರಂಧ್ರ, ಮೂರು ಮುಕ್ಕಾಲು ಮಾಷತೂಕದ ಚಿನ್ನದಿಂದ ನಾಲ್ಕು ಅಂಗುಲ ಉದ್ದದ ತಂತಿಯನ್ನು ಮಾಡಿದರೆ ಅದು ಮಾತ್ರ ತೂರುವಷ್ಟು ಸಣ್ಣಗಿರಬೇಕು ನೀರು ತುಂಬಿದ ಪಾತ್ರೆಯಲ್ಲಿ ಅದನ್ನು ತೇಲಿಬಿಟ್ಟರೆ ನಿಧಾನವಾಗಿ ನೀರು ತುಂಬಿಕೊಂಡು ಮುಳುಗುತ್ತದೆ ನಾಕ್ಷತ್ರ ಮಾನದ ಒಂದು ದಿನದಲ್ಲಿ ಅರವತ್ತು ಬಾರಿ ಮಾತ್ರ, ಅಂದರೆ ಒಂದು ಗಳಿಗೆಗೆ ಒಮ್ಮೆ ಮಾತ್ರ ಅದು ಹೀಗೆ ಮುಳುಗುತ್ತದೆ ಒಬ್ಬ ವ್ಯಕ್ತಿ

ಸಾಕ್ಷಿಯಾಗಿ ನಿಂತು ನೋಡುತ್ತಾನೆ ಬಟ್ಟಲು ಮುಳುಗಿದೊಡನೆ ಜಾಗಟೆಯನ್ನು ಹಿಡಿದೆಳೆದು ಕೋಲಿಂದ ಹೊಡೆಯುತ್ತಾನೆ. ವಿವಾಹಾದಿಗಳಲ್ಲಿ ಹಿಂದೆ ಮೊದಲಿಗೆ ಜ್ಯೋತಿಷಿಯನ್ನು ಕರೆದು ಸತ್ಕರಿಸಿ ಸುಮುಹೂರ್ತ ನೀಡಲು ಕೇಳಿಕೊಳ್ಳುತ್ತಿದ್ದರು ಜ್ಯೋತಿಷಿ ಗಳಿಗೆಬಟ್ಟಲಲ್ಲಿ ವರುಣನನ್ನು ಆವಾಹಿಸಿ ಪೂಜಿಸಿ ಅಕ್ಷತೆಕಾಳನ್ನು, ಅಂತಃಪಟವನ್ನು ಹಿಡಿಯುವ ಬ್ರಾಹ್ಮಣರ ಕೈಯಲ್ಲಿ ಕೊಟ್ಟು 'ಸುಮುಹೂರ್ತಾ ಸಾವಧಾನಾಃ। ಸುಲಗ್ನಾ ಸಾವಧಾನಾಃ' 'ಒಳ್ಳೆಯ ಮುಹೂರ್ತಲಗ್ನ ಬರುತ್ತಿದೆ, ಗಮನವಿಟ್ಟು ಕಾದಿರಿ' ಎಂದು ಹೇಳಿ ಗಳಿಗೆ ಬಟ್ಟಲನ್ನು ವೀಕ್ಷಿಸುತ್ತಾನೆ ಬಳಿಕ ಅದು ಮುಳುಗಿದಾಗ ಘಂಟಾನಾದಪೂರ್ವಕವಾಗಿ ಸುಮುಹೂರ್ತ ಬಂದಿತೆಂದು ಘೋಷಿಸುತ್ತಾನೆ ಹೀಗೆ ಶ್ರೀಹರಿ ಎಲ್ಲರ ಹೃದಯದಲ್ಲಿ ಅಂತರ್ಯಾಮಿಯಾಗಿ ವ್ಯಾಪ್ತನಾಗಿದ್ದು ಎಲ್ಲರ ಕರ್ಮಗಳಿಗೆ ತಾನೇ ಕರ್ತನಾಗಿದ್ದರೂ ಅವುಗಳ ಫಲ ತಾನು ಉಣದೆ ಸಾಕ್ಷಿಯಾಗಿರುತ್ತಾನೆ ಫಲಗಳನ್ನು ದೇವತೆಗಳಿಗೂ ಅಸುರರಿಗೂ ಯೋಗ್ಯತಾನುಸಾರ ವಿಭಾಗ ಮಾಡಿ ಉಣಿಸುತ್ತಾನೆ ಎನ್ನುವುದನ್ನು ಸ್ಪಷ್ಟಗೊಳಿಸಲು ಗಳಿಗೆ ಬಟ್ಟಲ ಉದಾಹರಣೆ ಈ ಪದ್ಯದಲ್ಲಿ ಬಂದಿದೆ

**ಪುಣ್ಯಪಾಪದ ಫಲಗಳನು ವಿಭಾಗವ ಮಾಡಿ :**

**1.** ಕರ್ಮಾಚರಣೆಯಲ್ಲಿ ಮೊದಲಿಗೆ ಸಂಕಲ್ಪ ಮಾಡುವಾಗಲೂ ಕೊನೆಗೆ ಕೃಷ್ಣಾರ್ಪಣವೆನ್ನುವಾಗಲೂ ನೀರು ಬಿಡುವುದರಿಂದ ನೀರು ಎಂದರೆ ಕರ್ಮವೆಂದಿಟ್ಟುಕೊಂಡರೆ, ಒಂದು ಛಿದ್ರವುಳ್ಳ ಗಳಿಗೆಬಟ್ಟಲು ನಿಗದಿತ ವೇಳೆಯಲ್ಲಿ ಪೂರ್ತಿ ತುಂಬು ವಾಗ ಒಂಭತ್ತು ಛಿದ್ರವುಳ್ಳ ಸಾಧನ ಶರೀರ ಕ್ಲೃಪ್ತಕಾಲದಲ್ಲಿ ಕರ್ಮದಿಂದ ತುಂಬದಿರುತ್ತದೆಯೆ? ಸಾಧನ ಪೂರ್ತಿಯಾಗುವ ಈ ಕಾಲವೆ ಮೋಕ್ಷಕಾಲ ಅದನ್ನು ಸೂಚಿಸುವವನು ಶ್ರೀಹರಿ ಅವನು ಆ ಸಾಧನ ಶರೀರವನ್ನು ಬಿಟ್ಟು ಜೀವಸ್ವರೂಪ ಶರೀರವನ್ನು ಕೈಹಿಡಿದೆಳೆದು ಚಿನ್ನವನ್ನು ಪುಟಕ್ಕಿಟ್ಟು ಹೊಡೆಯುವಂತೆ ಹೊಡೆದು ಅವಿದ್ಯಾ ಕಾಮಾದಿ ಮಲವನ್ನು ತೊಡೆದು ಶುದ್ಧಗೊಳಿಸುತ್ತಾನೆ ಆಗ ಮಂಗಲಧ್ವನಿ ಆ ಸ್ವರೂಪ ಶರೀರದಿಂದ ಹೊರಡುತ್ತದೆ 'ಒಡಲ ಜಾಗಟೆ ಮಾಡಿ ನುಡಿವ ನಾಲಿಗೆಯ ಪಿಡಿದು ಬಿಡದೆ ಢಣಢಣರೆಂ' ದು ಮುಂತಾಗಿ ಪುರಂದರದಾಸರು ಹೇಳುವುದೂ ಇದನ್ನೆ ನುಡಿವ ನಾಲಿಗೆಯನ್ನು ಹಿಡಿದು ನಾವು ಏನೂ ಹೊಡೆಯಲಾರೆವು ಅವನೆ ಹೊಡೆಯಬೇಕು 'ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ ಸಂಜೀವಯತಿ' ಎಂದು ಧ್ರುವ ಭಾಗವತದಲ್ಲಿ ಹೇಳುತ್ತಾನೆ

**2** ದೇವ ಸ್ವಭಾವದ ಸಾತ್ವಿಕರ ಗಣಕ್ಕೆ ಮೇಲೆ ಹೇಳಿದಂತೆ ನೀರು ಸತ್ಕರ್ಮಕ್ಕೆ ಸಂಕೇತವಾಗುತ್ತದೆ ಆ ನೀರು ತುಂಬಿದಾಗ ಸಾಧನ ಶರೀರ ಮುಳುಗುತ್ತದೆ, ಅಂದರೆ ಬಿದ್ದು ಹೋಗುತ್ತದೆ ಜ್ಞಾನಿ ತನ್ನ ಸ್ವರೂಪ ಶರೀರದ 'ಒಡಲ ಜಾಗಟೆ' ಯಿಂದ 'ಹಯಗ್ರೀವ! ಹಯಗ್ರೀವ! ಹಯಗ್ರೀವ!' ಎಂದು ಧ್ವನಿ ಮಾಡುತ್ತ ಹೋದರೆ ವೈಕುಂಠದ ಬಾಗಿಲು ತೆರೆದುಕೊಳ್ಳುತ್ತದೆ ಎಂದು ವಾದಿರಾಜರು ಹೇಳುತ್ತಾರೆ ಈ ಧ್ವನಿ ಮೋಕ್ಷಕಾಲಸೂಚಕ

3 ಅಸುರಸ್ವಭಾವದ ತಾಮಸರಿಗೆ ನೀರು, ದುಷ್ಕರ್ಮಕ್ಕೆ ಸಂಕೇತ ಅದು ತುಂಬಿದಾಗ ಅವರ ಸ್ಥೂಲದೇಹ ಬಿದ್ದು ಹೋಗುತ್ತದೆ ಅವರ ಸ್ವರೂಪದೇಹ ಒಡೆದ ಜಾಗಟೆ, ಕರ್ಕಶವಾದ ಒಡಕುಧ್ವನಿ ಮಾಡುವಂತೆ ಶ್ರೀಹರಿ, ವಾಯುಗಳು ಹೊಡೆಯುತ್ತಾರೆ ದುರ್ಯೋಧನ ತೊಡೆ ಮುರಿದು ಬಿದ್ದಾಗ ಶ್ರೀಕೃಷ್ಣನನ್ನು 'ನೀನೆ ಮಹಾಪಾಪಿ! ಎನ್ನುತ್ತಾನೆ ಹೀಗೆ ಸಾತ್ವಿಕರಲ್ಲಿ ಪುಣ್ಯವನ್ನು ತಾಮಸರಲ್ಲಿ ಪಾಪವನ್ನು ವಿಭಾಗ ಮಾಡಿ ಹರಿ ಉಣಿಸುತ್ತಾನೆ, ತಾನು ಉಣದೆ ಸಾಕ್ಷಿಯಾಗಿರುತ್ತಾನೆ

4 'ಜಲವ ತುಂಬಿಕೊಳ್ಳುವ' ಎನ್ನದೆ 'ಜಲವನಪಹರಿಸುವ' ಎಂದುದು ಅರ್ಥಪೂರ್ಣವಾಗಿದೆ ಜಲದಾನ ಮಹಾಪುಣ್ಯಕರವಾಗುವಂತೆ ಜಲವನ್ನು ಅಪಹರಿಸುವುದು ಅಷ್ಟೇ ಪಾಪಕರ ಅಪರಾಧವಾಗುತ್ತದೆ ಆದರೆ ಈ ಅಪರಾಧ ಮಾಡುವ ಗಳಿಗೆ ಬಟ್ಟಲನ್ನು ಬಿಟ್ಟು ಏನೂ ಅಪರಾಧ ಮಾಡದಿರುವ ಜೈಗಂಟೆಯನ್ನು ಹೊಡೆಯುತ್ತಾನೆ ಶ್ರೀಹರಿ! ಹಾಗಾದರೆ ನ್ಯಾಯ ಎಲ್ಲಿ? ಈ ಪುಣ್ಯಪಾಪ ಫಲವಿಭಾಗ ಹೇಗೆ ಸರಿಯಾದೀತು? ಎಂದು ಮೇಲು ನೋಟಕ್ಕೆ ಸಂಶಯ ಬಂದೀತು. ವಸ್ತುತಃ ಅಭಿಪ್ರಾಯ ಬೇರೆ ಇದೆ ಗಳಿಗೆ ಬಟ್ಟಲು ನೀರನ್ನು ಅಪಹರಿಸಿ ತಾನಾಗಿಯೆ ಮುಳುಗುತ್ತದೆ ಏಕೆ ಹೊಡೆಯಬೇಕು? ಪಾಪದ ಕೊಡ ತುಂಬಿದಾಗ ನರಕ ಗತಿ ಇದ್ದೇ ಇದೆ ಶ್ರೀಹರಿ ಅವರನ್ನು ಬಿಟ್ಟು ಮೋಕ್ಷಯೋಗ್ಯರ ಒಡಲ ಜಾಗಟೆ ಸುಮ್ಮನಿರುವುದನ್ನು ನೋಡಿ ಹೊಡೆದು ಮಂಗಲಧ್ವನಿಯಿಂದ ತನ್ನ ಗುಣಗಾನ ಮಾಡಿಸಿಕೊಳ್ಳುತ್ತಾನೆ ಇದನ್ನೆ ಧ್ರುವ ಭಾಗವತದಲ್ಲಿ ಹೇಳಿದ್ದು- 'ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ' ಎಂದು

5 ಜಲವನ್ನು ಅಪಹರಿಸುವುದೆಂದರೆ ಭಗವಂತನ ಕರ್ಮವನ್ನು ತನ್ನದೆಂದು ತಿಳಿಯುವುದು ತಾನೆ ಸ್ವತಂತ್ರಕರ್ತನೆನ್ನುವುದು ಹೀಗೆ ಹೇಳುವವರನ್ನು ಶ್ರೀಹರಿ ಮುಳುಗಿಸುತ್ತಾನೆ ನೀ ನುಡಿಸಿದರೆ ನುಡಿವೆನೆನ್ನುತ್ತ ಹೊಡೆದಾಗ ಮಾತ್ರ ಧ್ವನಿ ಮಾಡುವ ಜಾಗಟೆಯಂತೆ ಹೊಡೆದಾಗ 'ನಾಹಂ ಕರ್ತಾ' ಎಂದು ಘೋಷಣ ಮಾಡುವವರನ್ನು ಹೊಡೆಯುತ್ತಾನೆ!

6 ಸಾತ್ವಿಕರೂ ಕೆಲವೊಮ್ಮೆ ಅಸುರಾವೇಶದಲ್ಲಿ ನಾನೇ ಕರ್ತನೆಂದು ಜಲವನ್ನು ಅಪಹರಿಸಬಹುದು ಶ್ರೀಹರಿ ಅವರನ್ನು ಬಿಟ್ಟುಬಿಡುತ್ತಾನೆ ಏಕೆಂದರೆ ಅವರು ಪಶ್ಚಾತ್ತಾಪದ ದುಃಖದಲ್ಲಿ ಮುಳುಗಿ ಪರಿಶುದ್ಧರಾಗುತ್ತಾರೆ ಕರ್ಣ ದುರ್ಯೋಧನನನ್ನು ಮೆಚ್ಚಿಸುವ ಭರದಲ್ಲಿ ದ್ರೌಪದಿಯನ್ನು ವೇಶ್ಯೆ ಎಂದು ಕರೆದ ಬಳಿಕ ಸಂಧಾನಕ್ಕಾಗಿ ಬಂದ ಕೃಷ್ಣನ ಮುಂದೆ 'ಅಂದಿನ ಆ ವರ್ತನೆಗೆ ನಾನು ಪಶ್ಚಾತ್ತಾಪದಿಂದ ಬೇಯುತ್ತಿದ್ದೇನೆ, ಕ್ಷಮಿಸು' ಎನ್ನುತ್ತಾನೆ ಕೃಷ್ಣ ಅವನಿಗೆ ಉತ್ತಮಗತಿಯನ್ನೆ ನೀಡಿದ ದುರ್ಯೋಧನ ಪಶ್ಚಾತ್ತಾಪ ಪಡಲಿಲ್ಲ, ತೊಡೆ ಮುರಿದು ಬಿದ್ದಾಗಲೂ 'ನಾನೇನು ಪಾಪ ಮಾಡಿದ್ದೇನೆ, ನೀನೆ ಪಾಪಿ' ಎನ್ನುತ್ತಾನೆ ಅವನಿಗೆ ಹೊಡೆಯುತ್ತಾನೆ ಶ್ರೀಕೃಷ್ಣ, ನರಕದಲ್ಲಿ

7 ಜಲವನ್ನು ಅಪಹರಿಸುವುದೆಂದರೆ ಭಕ್ತ ಭಗವಂತನ ಕರುಣಾ ಜಲವನ್ನು ಅಪಹರಿಸುವು ದೆಂದಿಟ್ಟುಕೊಂಡರೆ ಅಂಥ ಭಕ್ತನನ್ನು ಕರುಣಾ ಜಲದಲ್ಲಿಯೆ ಮುಳುಗಿಸುತ್ತಾನೆ ಕರುಣಾ ಜಲವನ್ನೊಲ್ಲದ ಒಡಲ ಒಡಕು ಜಾಗಟೆಗೆ ಹೊಡೆಯುತ್ತಾನೆ

**8** ಭಗವದ್ಭಕ್ತಿಯ ರಸವನ್ನು ಅಪಹರಿಸುವ ಭಕ್ತ, ಕ್ಷಣ ಬಿಡದೆ ನಿರಂತರ ಆ ಕಾರ್ಯ ಮಾಡುತ್ತಾನೆ 'ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇತ್' ಎಂದು ವಿಧಿ ಅದರಿಂದ ತನ್ನ ಪಾಲಿನ ಕರ್ತವ್ಯಕರ್ಮ ಮಾಡುತ್ತಾನೆ, ಹೇಳಿಕೊಳ್ಳುವುದಿಲ್ಲ ಮೌನವಾಗಿ ಭಕ್ತಿರಸ ದಲ್ಲಿಯೆ ಮುಳುಗುತ್ತಾನೆ ದುರ್ಜನರೂ ತಾವು ಮಾಡುವ ಪಾಪಕರ್ಮವನ್ನು ಹೇಳಿ ಕೊಳ್ಳುವುದಿಲ್ಲ, ಹೊಡೆಯಬೇಕು ಹೊಡೆದಂತೆಲ್ಲ ಹೆಚ್ಚು ಹೆಚ್ಚಾಗಿ ಭಗವಂತನನ್ನೆ ನಿಂದಿಸಿ ಆ ಮೂಲಕ ತಮ್ಮ ಸ್ವಭಾವವನ್ನು ವ್ಯಕ್ತಮಾಡುತ್ತಾರೆ ಅದಕ್ಕೇ ಭೀಮನಿಂದ ದುರ್ಯೋಧನನ ತೊಡೆ ಮುರಿಸಿದ, ತಲೆ ಮೆಟ್ಟಿಸಿದ

**9** 'ಜಲವನಪಹರಿಸುವ' ಅಂದರೆ ಜಲವನ್ನು ಅಪಹರಿಸುತ್ತಾನೆ, ಹಲಧರಾನುಜ ಮತ್ತು ಸಾಕ್ಷಿಯಾಗಿಪ್ಪ, ಹಲಧರಾನುಜ ಎಂದು ಎರಡು ಬೇರೆ ಬೇರೆ ವಾಕ್ಯಗಳು ಜಲವೆಂದರೆ ಅಪರೋಕ್ಷಿಯ ಅಪ್ರಾರಬ್ಧ ಪುಣ್ಯಪಾಪಗಳು ಅವನ್ನು ಶ್ರೀಹರಿ ಅಪಹರಿಸುತ್ತಾನೆ ಅಪರೋಕ್ಷಿಯ ದ್ವೇಷಿಗಳಿಗೆ ಪಾಪವನ್ನು ಕೊಟ್ಟು ನರಕದಲ್ಲಿ ಮುಳುಗಿಸುತ್ತಾನೆ ಅದರಿಂದ ಅವರನ್ನು ಬಿಟ್ಟು ಇಷ್ಟಮಿತ್ರರಿಗೆ ಪುಣ್ಯವನ್ನು ನೀಡುತ್ತಾನೆ 'ಹೊಡೆಯುತ್ತಾನೆ' ಎಂದರೆ ಅನಿರೀಕ್ಷಿತವಾಗಿ ವೇಗವಾಗಿ ಅಪಾರ ಸಂಪತ್ತನ್ನು ನೀಡುತ್ತಾನೆ! ಲಾಟರಿ ಹೊಡೆಯುವಂತೆ!

**10.** ಅಥವಾ ಅಪರೋಕ್ಷಿಯ ಇಷ್ಟಮಿತ್ರರಿಗೆ ಅಪ್ರಾರಬ್ಧ ಅನಿಷ್ಟಪುಣ್ಯವನ್ನು ಕೊಟ್ಟು ಅವರನ್ನು ಸುಖಸಾಗರದಲ್ಲಿ ಮುಳುಗಿಸುತ್ತಾನೆ ಪಾಪವನ್ನು ದ್ವೇಷಿಗಳಿಗಿತ್ತು ಹೊಡೆಯುತ್ತಾನೆ

**ಹಲಧರಾನುಜ ಸಾಕ್ಷಿಯಾಗಿಪ್ಪ:**

ಶ್ರೀಕೃಷ್ಣ ಬಲರಾಮನನ್ನು ನಿಮಿತ್ತವಾಗಿ ಮಾಡಿಕೊಂಡು ಪ್ರಲಂಬಾದಿ ಅಸುರರ ಸಂಹಾರ ಮಾಡಿಸುತ್ತಾನೆ, ಅಂದರೆ ಮಾಡುತ್ತಾನೆ, ಅವನೆ ಕರ್ತ ಅವನ ಆವೇಶದಿಂದ ಬಲರಾಮ ವಧಕಾರ್ಯ ಮಾಡಿದನೆಂದು ಭಾಗವತ ಹೇಳಿದೆ ಹೀಗೆ ಶ್ರೀಕೃಷ್ಣ ಕರ್ತೃ ತಾನಾಗಿ ಆ ಪುಣ್ಯಫಲವನ್ನು ಮೋಕ್ಷಕಾಲದಲ್ಲಿ ಶೇಷನಿಗೆ ಉಣಿಸುತ್ತಾನೆ ಸುಖಸಾಗರದಲ್ಲಿ ಅವನನ್ನು ಮುಳುಗಿಸುತ್ತಾನೆ ತಾನು ಅದನ್ನು ಉಣದೆ ಕೇವಲ ಸಾಕ್ಷಿಯಾಗಿರುತ್ತಾನೆ ಸ್ಯಮಂತಕಮಣಿ ನಿಮಿತ್ತವಾಗಿ ಬಲರಾಮ ಕೃಷ್ಣನಲ್ಲಿ ಬೇಸರಗೊಂಡು ದೂರ ಹೋದರೂ ಕೃಷ್ಣ ಅವನನ್ನು ಕರೆಸಿಕೊಂಡು ಸಮಾಧಾನ ಮಾಡಿ ಕ್ಷಮಿಸಿ ಅವನ ಆ ಪಾಪವನ್ನು ಆವಿಷ್ಟನಾದ ಅಸುರನಿಗೇ ಉಣಿಸಿ ತಾನು ಸಾಕ್ಷಿಯಾಗಿರುತ್ತಾನೆ

**ಪೊಂದಿಕೊಂಡಿಹ ಸರ್ವರೊಳು ಸಂ-**
**ಬಂಧವಾಗದೆ ಸಕಲ ಕರ್ಮವ-**
**ರಂದದಲಿ ತಾ ಮಾಡಿ ಮಾಡಿಸಿ ತತ್ಫಲಗಳುಣದೆ ।**
**ಕುಂದದಲೆ ಅಣುಮಹತೆನಿಪ ಘಟ**
**ಮಂದಿರದಿ ಸರ್ವತ್ರ ತುಂಬಿಹ**
**ಬಾಂದಳದ ತೆರನಂತೆ ಇರುತಿಪ್ಪನು ರಮಾರಮಣ ॥ ೨೬ ॥**

ರಮಾರಮಣ ನಿರ್ಲಿಪ್ತನಾಗಿಯೆ ಎಲ್ಲರಲ್ಲಿ ಹೊಂದಿಕೊಂಡಿರುತ್ತಾನೆ ಅವರಂತೆ ಎಲ್ಲ ಕರ್ಮಗಳನ್ನು ತಾನು ಮಾಡಿ, ಅವರಿಂದ ಮಾಡಿಸಿ ಆ ಕರ್ಮಗಳ ಫಲವನ್ನು ತಾನು-ಣದೆ, ಸೊರಗದೆ, ಸಣ್ಣ ಮಡಿಕೆಯಲ್ಲಾಗಲಿ, ದೊಡ್ಡ ಮನೆಯಲ್ಲಾಗಲಿ ಎಲ್ಲೆಡೆ ತುಂಬಿರುವ ಆಕಾಶದಂತೆ ವ್ಯಾಪಿಸಿ ಇರುತ್ತಾನೆ

***ಪೊಂದಿಕೊಂಡಿಹ ಸರ್ವರೊಳು***

ಬ್ರಹ್ಮಾಂಡಶರೀರನಾದ ಮಹಾನ್ ಚತುರ್ಮುಖ ಬ್ರಹ್ಮನಿಂದ ತೊಡಗಿ ಅಣು ಶರೀರದ ತೃಣ ಜೀವನವರೆಗೂ ಎಲ್ಲ ಜೀವರಲ್ಲಿ ಹರಿ ಹೊಂದಿಕೊಂಡೇ ಇದ್ದಾನೆ ಏಕೆಂದರೆ ಅವನು ಅಣೋರಣೀಯನೂ ಮಹತೋ ಮಹೀಯನೂ ಆಗಿದ್ದಾನೆ ಚೇತನನಾಗಿಯೂ ಇದ್ದು ಜೀವರ ಎಲ್ಲ ಚಟುವಟಿಕೆಗಳಲ್ಲಿಯೂ ಜೊತೆ ಸೇರಿ ಹೊಂದಿಕೊಂಡು ಪ್ರವೃತ್ತಿ ಮಾಡುತ್ತಾನೆ ಆಕಾಶದಂತೆ ತಟಸ್ಥನಾಗಿ ವ್ಯಾಪಿಸಿಲ್ಲ ಬಾಂದಳದ ತೆರನಂತೆ ಎಂದು ಆಕಾಶದೃಷ್ಟಾಂತ ಕೊಟ್ಟಿರುವುದು ವ್ಯಾಪ್ತಿಯ ಅಂಶದಲ್ಲಿ ಮಾತ್ರ ಎನ್ನಬೇಕು ಜೀವ ತನ್ನ ಪಾಡಿಗೆ ತಾನು ಎಲ್ಲ ಕರ್ಮ ಮಾಡಿ ಫಲ ಉಣ್ಣುತ್ತಾನೆ ಇದರಲ್ಲಿ ಆಕಾಶದ ಪಾತ್ರವೇನಿಲ್ಲ ಹರಿ ಹಾಗಿಲ್ಲ ಅವನು ಪ್ರೇರಕನಾಗಿ ಕರ್ಮ ಮಾಡಿ ಮಾಡಿಸಿ ಫಲದಲ್ಲಿರುವ ಸ್ವಾಖ್ಯರಸವನ್ನು ತಾನುಂಡು ಪ್ರಾಕೃತ ರಸವನ್ನು ಜೀವನಿಗೆ ಉಣಿಸುತ್ತಾನೆ.

***ಸಂಬಂಧವಾಗದೆ***

ತಾಟಸ್ಥ್ಯ ವಹಿಸದೆ ಜೀವರೊಡನೆ ಹೊಂದಿಕೊಂಡಿರುವ ಭಗವಂತನಿಗೆ ಜೀವರ ಕರ್ಮದ ಲೇಪ ಸಂಭಾವಿತ ಆದರೂ ಭಗವಂತನಿಗೆ ಅದಿಲ್ಲ ಒಬ್ಬ ಜೀವನಿಗೆ ಇನ್ನೊಬ್ಬ ಜೀವನ ಕರ್ಮದ ಲೇಪವಿರುವುದಿಲ್ಲ ಏಕೆಂದರೆ ಒಂದು ಹೃದಯದಲ್ಲಿ ಅವರಿಬ್ಬರೂ ಜೊತೆಯಾಗಿ ಇರುವುದಿಲ್ಲ ಆದರೆ ಒಂದೇ ಹೃದಯದಲ್ಲಿ ಇಬ್ಬರು ಚೇತನರಿದ್ದರೆ, ಒಬ್ಬನಿಗೆ ಕರ್ಮಲೇಪ, ಇನ್ನೊಬ್ಬನಿಗೆ ಇಲ್ಲ ಎನ್ನಲಾಗದು ಜೀವದ್ವಯಾವೇಶವಿರುವಲ್ಲಿ ಒಂದೇ ಕರ್ಮದ ಫಲ ಇಬ್ಬರಿಗೂ ಸಿಗುತ್ತದೆ ಹಾಗೇ ಜೀವನ ಹೃದಯದಲ್ಲಿ ಪ್ರೇರಕರಾಗಿ ನೆಲೆಸಿ-ರುವ ತತ್ವಾಭಿಮಾನಿಗಳಿಗೂ ಕರ್ಮಫಲಸಂಬಂಧವಿದೆ ಆದರೆ ಹರಿಗೆ ಕರ್ಮಫಲ-ಸಂಬಂಧವಾಗುವುದಿಲ್ಲ ಅವನು ಜೀವನ ಹೃದಯದಲ್ಲಿ ಜೀವನ ಜೊತೆಗೇ ಹೊಂದಿ-

ಕೊಂಡಿದ್ದು ಅವನಂತೇ ತಾನೂ ಕರ್ಮ ಮಾಡಿ ಮಾಡಿಸಿ ಅದರ ಫಲದಲ್ಲಿರುವ ಸ್ವಾಖ್ಯರಸ ಉಣ್ಣುತ್ತಾನೆ ಆದರೂ ಆ ಫಲದಲ್ಲಿಯೆ ಇರುವ ಪ್ರಾಕೃತರಸವನ್ನು ತಾನು ಉಣ್ಣದೆ ಜೀವನಿಗೆ ಉಣಿಸುತ್ತಾನೆ ಅದರ ಸಂಬಂಧ ಅವನಿಗಿಲ್ಲ ಏಕೆಂದರೆ ಅವನು ಸ್ವತಂತ್ರ, ಸರ್ವಶಕ್ತ ಈ ಅಂಶದಲ್ಲಿಯೂ ಆಕಾಶ ದೃಷ್ಟಾಂತ ಕೊಡುತ್ತದೆ ಭಗವದ್ಗೀತೆ ಹೇಳುತ್ತದೆ—

ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।
ಸರ್ವತ್ರಾವಸ್ಥಿತೋ ದೇಹೇ ತದಾತ್ಮಾ ನೋಪಲಿಪ್ಯತೇ ॥ —(೧೩-೩೩)

'ಆಕಾಶ ಎಲ್ಲೆಡೆ ಇದ್ದರೂ ಅದಕ್ಕೆ ಲೇಪವಿಲ್ಲ ಹಾಗೇ ಭಗವಂತ ಹೀನರು, ಉತ್ತಮರು ಎನ್ನದೆ ಎಲ್ಲ ಜೀವರೊಳಗೂ ಸಮಾನವಾಗಿಯೆ ವ್ಯಾಪಿಸಿದ್ದರೂ ಅವರ ಗುಣದೋಷಗಳ ಲೇಪ ಅವನಿಗಿಲ್ಲ'

***ಸರ್ವಕರ್ಮವ ಮಾಡಿ ಮಾಡಿಸಿ***

ಹರಿ ಬಿಂಬನಾದ್ದರಿಂದ ಸಕಲ ಕರ್ಮವನ್ನೂ ಅವನೇ ಮಾಡಬೇಕು ಆಗ ಪ್ರತಿಬಿಂಬ-ರಾದ ಜೀವರಲ್ಲಿಯೂ ಕರ್ಮ ಉಂಟಾಗುತ್ತದೆ ಅವನು ಸರ್ವಶಕ್ತನಾದ್ದರಿಂದ ಇಚ್ಛಾ-ಮಾತ್ರದಿಂದಲೇ ಜೀವರಿಂದ ಕರ್ಮ ಮಾಡಿಸಬಹದು, ತಾನೂ ಕರ್ಮ ಮಾಡಬೇಕಾಗಿಲ್ಲ ಅವನಿಚ್ಛೆಯಿಂದಲೆ ಜೀವರು ಕರ್ಮದಲ್ಲಿ ತೊಡಗುತ್ತಾರೆ ಎಂದು ಭಗವದ್ಗೀತೆ ಸಾರಿ ಹೇಳುತ್ತಿದೆ—

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥

ಆದರೂ ಬಿಂಬದಲ್ಲಿ ಕ್ರಿಯೆಯಾಗದೆ ಪ್ರತಿಬಿಂಬದಲ್ಲಿ ಆಗದು

ನಹಿ ಪ್ರತಿಬಿಂಬಸ್ಯ ಕ್ರಿಯಾ । ಬಿಂಬಕ್ರಿಯಯೈವ ಕ್ರಿಯಾವಾನ್
—(ಗೀತಾಭಾಷ್ಯ ೨-೧೯)

ಎಂದು ಶ್ರೀಮದಾಚಾರ್ಯರು ಹೇಳುತ್ತಾರೆ ಶ್ರೀಕೃಷ್ಣನೂ,

'ಮಯಾ ಹತಾನ್ ತ್ವಂ ಜಹಿ' 'ನಿಮಿತ್ತಮಾತ್ರಂ ಭವ ಸವ್ಯಸಾಚಿನ್'

'ಅರ್ಜುನ, ಶತ್ರುಗಳನ್ನು ನಾನೇ ಕೊಲ್ಲುತ್ತೇನೆ. ನೀನೂ ನಿಮಿತ್ತಮಾತ್ರನಾಗಿ ಆ ಕಾರ್ಯ ಮಾಡು' ಎನ್ನುತ್ತಾನೆ ಇಲ್ಲಿ ಕ್ರಿಯೆ ಕೇವಲ ಪ್ರತಿಬಿಂಬದಲ್ಲಿ ಇರುವುದಿಲ್ಲ ಬಿಂಬದಲ್ಲಿಯೂ ಇದೆ ಇಲ್ಲದಿದ್ದರೆ, 'ಮಯಾ ಹತಾನ್' ನಾನು ಕೊಲ್ಲುತ್ತೇನೆ ಎಂದು ಶ್ರೀಕೃಷ್ಣ ಹೇಳುವುದು ಕೂಡಲಾರದು

***ತತ್ಫಲಗಳುಣದೆ***

'ಅನಶ್ನನ್ನನ್ಯೋ ಅಭಿಚಾಕಶೀತಿ'

ಎಂಬ ಶ್ರುತಿಗೆ ಅನುಸಾರವಾಗಿ ಹರಿ ಜೀವರ ಕರ್ಮಗಳ ಫಲ ಉಣ್ಣುವುದಿಲ್ಲ ಎಂದಿದೆ ಹೊರತು ಸರ್ವಥಾ ಉಣ್ಣುವುದಿಲ್ಲ ಎಂದು ಅಭಿಪ್ರಾಯವಲ್ಲ ಹಾಗೆ ಹೇಳಿದರೆ,

ಋತಂ ಪಿಬಂತೌ ಸುಕೃತಸ್ಯ ಲೋಕೇ

'ಪರಮಾತ್ಮನು ಜೀವರ ಹೃದಯದಲ್ಲಿದ್ದು ಅವರ ಕರ್ಮಫಲರಸವನ್ನು ಉಣ್ಣುತ್ತಾನೆ' ಎನ್ನುವ ಶ್ರುತಿಯ ವಿರೋಧ ಬಂದೀತು ಎರಡೂ ಶ್ರುತಿಗಳಿಗೆ ವಿರೋಧ ಬಾರದಂತೆ, ಪ್ರಾಕೃತ ರಸವನ್ನು ಉಣ್ಣುವುದಿಲ್ಲ ಅಪ್ರಾಕೃತ ರಸವನ್ನು ಉಣ್ಣುತ್ತಾನೆ ಎಂದು ತಿಳಿಯಬೇಕು

***ಕುಂದದಲೆ***

'ಹಣ್ ತಿಂದ್ಹಕ್ಕಿ ಬಡವಾಗೈತಿ ತಿನ್ನದ ಹಕ್ಕಿ ಬಲಿತೈತಣ್ಣ' ಎಂದು ಪುರಂದರದಾಸರ ಬುಡುಬುಡಿಕೆ ಪದ ಹೇಳುವಂತೆ,

ಸಮಾನೇ ವೃಕ್ಷೇ ಪುರುಷೋ ನಿಮಗ್ನಃ

ಅನೀಶಯಾ ಶೋಚತಿ ಮುಹ್ಯಮಾನಃ

ಎಂದು ಆಥರ್ವಣೋಪನಿಷತ್ತು ಹೇಳುವಂತೆ ಜೀವ ಕರ್ಮಫಲ ಉಂಡೂ ಸೊರಗುತ್ತಾನೆ ಪರಮಾತ್ಮ 'ಅಭಿಚಾಕಶೀತಿ' ಉಣದಿದ್ದರೂ ಸೊರಗುವುದಿಲ್ಲ ಪುಷ್ಟನಾಗೇ ಇರುತ್ತಾನೆ

***ಘಟಮಂದಿರದಿ ಸರ್ವತ್ರ ತುಂಬಿಹ ಬಾಂದಳ***

ಬಾಂದಳವೆಂದರೆ ಆಕಾಶ ಅನಾದಿನಿತ್ಯ ಸರ್ವವ್ಯಾಪಿಯಾದ ಆಕಾಶ ಪ್ರಪಂಚದಲ್ಲಿ ಎಲ್ಲಕಡೆ ಒಂದೆ. ಅದು ಒಂದು ಸಣ್ಣ ಮಡಿಕೆಯಲ್ಲಿಯೂ ತುಂಬುತ್ತದೆ ಹೇಗೆ? ಒಂದು ದೊಡ್ಡ ಬೆಟ್ಟವನ್ನು ಮನಯೊಳಗಿಟ್ಟುಕೊಳ್ಳಲಾರೆವು ಸಣ್ಣ ಮಡಿಕೆಯಲ್ಲಿಯೂ ಆಕಾಶ ಇದೆ, ಮನೆಯಲ್ಲಿಯೂ ಅದೇ ಆಕಾಶವಿದೆ, ಮನೆಯ ಹೊರಗೂ ಅದೇ ಆಕಾಶವಿದೆ ಎಂದರೆ ಒಂದು ಆಕಾಶಕ್ಕೆ ಎಷ್ಟು ಬೇರೆ ಬೇರೆ ಪರಿಮಾಣಗಳಿವೆ? ಘಟಮಂದಿರಗಳಿಗೆ ನಿಶ್ಚಿತ ಪರಿಮಾಣಗಳಿವೆ ನೀರು ಗಾಳಿಗಳಿಗೆ ಆಯಾ ಪದಾರ್ಥಗಳಲ್ಲಿ ಆಯಾ ಪದಾರ್ಥಗಳಂತೆಯೆ ಪರಿಮಾಣಗಳು, ಹೊರತು ನಿಶ್ಚಿತವಾದ ಪರಿಮಾಣವಿಲ್ಲ ಹಾಗೇ ಆಕಾಶಕ್ಕೂ ಎನ್ನೋಣವೆ? ಹಾಗಾದರೆ ಆಕಾಶ ಒಂದೇ ಅಲ್ಲ ನೀರು ಗಾಳಿಗಳಂತೆಯೆ ಅನೇಕ ಎನ್ನಬೇಕಾಗುವುದು ಒಂದು ಪಾತ್ರೆಯೊಳಗೆ ನಾವು ಸುರಿವ ಎಲ್ಲ ನೀರೂ ಒಂದೇ ಅಲ್ಲ ಸ್ವಲ್ಪಸ್ವಲ್ಪವಾಗಿ ಬೇರೆ ಬೇರೆ ನೀರನ್ನು ಹಾಕಿದಾಗ ಪಾತ್ರೆ ತುಂಬುತ್ತದೆ ತಾನೆ? ಹಾಗೇ ಪಾತ್ರೆಯಲ್ಲಿ ಸ್ವಲ್ಪ ಆಕಾಶಗಳಿವೆ ಮನೆ ತುಂಬ ತುಂಬಾ ಆಕಾಶಗಳಿವೆ ಹೊರಗೆ ಅಪಾರ ಪ್ರಮಾಣದಲ್ಲಿ ಆಕಾಶಗಳಿವೆ ಎನ್ನಬೇಕು ಹೊರತು ಒಂದೇ ಆಕಾಶ ಘಟಮಂದಿರಗಳಲ್ಲಿ ತುಂಬಿದೆ ಎನ್ನಲಾಗದು ಅದರಿಂದ ಒಬ್ಬನೆ ಪರಮಾತ್ಮ ಎಲ್ಲರ ಹೃದಯದಲ್ಲಿ ಆಕಾಶದಂತೆ ಇದ್ದಾನೆ ಎಂದು ದೃಷ್ಟಾಂತ ನೀಡಿದ್ದು ಸಮಂಜಸವಾಗದು

ಮೇಲಿನ ಪ್ರಶ್ನೆಗೆ ಹೀಗೆ ಸಮಾಧಾನ ಹೇಳಬೇಕು ಆಕಾಶ ಒಂದೇ ಅಲ್ಲ, ಅನೇಕ ಎನ್ನುವುದು ನಿಜವೆ ಅದು ಅನಾದಿನಿತ್ಯವೂ ಅಲ್ಲ ಸೃಷ್ಟಿಕಾಲದಲ್ಲಿ ಅಹಂಕಾರತತ್ವದಿಂದ ಅದು ಉತ್ಪನ್ನವಾಗುತ್ತದೆ ಲಯಕಾಲದಲ್ಲಿ ಅದರಲ್ಲಿಯೆ ಲಯಹೊಂದುತ್ತದೆ 'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ವೇದವಾಕ್ಯಗಳು ಹೀಗೆ ಸ್ಪಷ್ಟಹೇಳುತ್ತಿವ ಆದರೆ ಅನಾದಿ-ನಿತ್ಯವಾದ ಆಕಾಶ ಒಂದು ಬೇರೆಯೆ ಇದೆ 'ಅನಾದಿರ್ವಾ ಅಯಮಾಕಾಶಃ' ಎಂದು ಮುಂತಾಗಿ ವೇದವಾಕ್ಯಗಳು ಇದನ್ನು ಹೇಳುತ್ತಿವೆ ಇದು ಅವ್ಯಾಕೃತಾಕಾಶ ಹಿಂದೆ ಹೇಳಿದ್ದು ಭೂತಾಕಾಶ ಅವ್ಯಾಕೃತಾಕಾಶ ಉತ್ಪತ್ತಿನಾಶರಹಿತವಾಗಿದ್ದು ಪರಮಾತ್ಮನಂತೆ ಸರ್ವವ್ಯಾಪಿ-ಯಾಗಿದೆ ಭೂತಾಕಾಶಕ್ಕೆ ಎಷ್ಟೆಂದರೂ ಬ್ರಹ್ಮಾಂಡದಾಚೆ ಆಕಾಶಾವರಣದವರೆಗೆ ಮಾತ್ರ ವ್ಯಾಪ್ತಿ ಅದರಾಚೆ ಅಹಂಕಾರಮಹತ್ತತ್ವಾದಿ ಪ್ರದೇಶಗಳಲ್ಲಿ ಅದಕ್ಕೆ ವ್ಯಾಪ್ತಿ ಇಲ್ಲ, ಅಲ್ಲಿ ಎಲ್ಲ ಕಡೆ ಅವ್ಯಾಕೃತಾಕಾಶವಿದೆ ಅದಕ್ಕೆ ಅನಂತ ಅಂಶಗಳಿವೆ ಅಂಶಗಳಿಗೂ ಅದಕ್ಕೂ ಭೇದವಿಲ್ಲ, ವಿಶೇಷಬಲದಿಂದ ಅಂಶ- ಅಂಶಿ ಎಂದು ವ್ಯವಹಾರ ಮಾತ್ರ ಅನಂತ ಅಂಶ-ಗಳಲ್ಲಿ ಅನಂತ ಪರಿಮಾಣಗಳೂ ಇರುವುದರಿಂದ ಒಂದೇ ಆಕಾಶ ಅಣು ಮಹತ್ತೆನಿಸುವ ಘಟಮಂದಿರಗಳಲ್ಲಿಸರ್ವತ್ರ ತುಂಬಿದೆ ಅದು ಪರಮಾತ್ಮನ ವ್ಯಾಪ್ತಿಗೆ ದೃಷ್ಟಾಂತ- ವೆಂದು ದಾಸರಾಯರ ಅಭಿಪ್ರಾಯ

*ಬಾಂದಳದ ತೆರನಂತೆ ಇರುತಿಪ್ಪನು ರಮಾರಮಣ*

ಯಾ ದೇವೀ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ ।

ಎಂದು ಸಪ್ತಶತಿಯಲ್ಲಿ ಹೇಳಿದಂತೆ ರಮಾದೇವಿ ಶಕ್ತಿರೂಪದಿಂದ ಎಲ್ಲರ ಹೃದಯ-ದಲ್ಲಿ ಹೊಂದಿಕೊಂಡು ಪರಮಾತ್ಮನೊಂದಿಗೆ ಅಂತರ್ಯಾಮಿಯಾಗಿಯೇ ಇದ್ದು ಎಲ್ಲ ಕರ್ಮ ಮಾಡಿ ಮಾಡಿಸುತ್ತಾಳೆ

'ತನ್ನೋ ಲಕ್ಷ್ಮೀಃ ಪ್ರಚೋದಯಾತ್'

ಎಂದು ಲಕ್ಷ್ಮೀ ಗಾಯತ್ರಿ ಹಾಗೆ ಹೇಳುತ್ತದೆ ಕರ್ಮ ಮಾಡಿಸಿ ಅದರ ಫಲವನ್ನು ಉಣಿಸುತ್ತಾಳೆ

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ
ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್

'ವೇದವಚನಗಳ ಮೂಲಕ ನಾನು ಹೇಳಿದ್ದನ್ನು ತಿರಸ್ಕರಿಸುವವರಾಗಲಿ, ಉದಾಸೀನ-ರಾಗಿರುವವರಾಗಲಿ, ಹೇಳಿದಂತೆ ನಡೆಯುವವರಾಗಲಿ ಎಲ್ಲರೂ ನಾನು ಉಣಿಸುವ ಅನ್ನ-ವನ್ನೇ ಉಣ್ಣುವರು' ಎಂದು ಅಂಭೃಣೀದೇವಿ ಹೇಳುತ್ತಾಳೆ ಪರಮಾತ್ಮನಂತೆ ಅವಳೂ ಕರ್ಮಫಲದ ಶುಭರಸವನ್ನು ಮಾತ್ರ ತಾನು ಉಂಡು ಅಶುಭವಾದ ಪ್ರಾಕೃತ ರಸವನ್ನೇ

ಜೀವರಿಗೆ ಉಣಿಸುತ್ತಾಳೆ ಹೀಗೆ ಜೀವರಿಗೆ ಹೊಂದಿಕೊಂಡೆ ಇದ್ದರೂ ಸಂಬಂಧವಾಗದೆ ಇದ್ದಾಳೆ ಪ್ರಾಕೃತ ಅಶುಭ ರಸ ಉಣ್ಣುವುದಿಲ್ಲ ಉಣದಿದ್ದರೂ ಸೊರಗುವುದಿಲ್ಲ ಕುಂದ-ದಲೆ ಬಾಂದಳದ ತೆರಸಂತೆಯೆ ಎಲ್ಲರ ಹೃದಯದಲ್ಲಿ ಒಳಗೂ ಇದ್ದಾಳೆ 'ಪದ್ಮೇ ಸ್ಥಿತಾಂ ಪದ್ಮವರ್ಣಾಂ' ಎಂದರೆ ಹೊರಗೆ ಕಮಲದಲ್ಲಿ ಮಾತ್ರವಲ್ಲ, ಹೃದಯಕಮಲದಲ್ಲಿಯೂ ಇದ್ದಾಳೆ, ಬಾಂದಳ, ಅವ್ಯಾಕೃತಾಕಾಶದಂತೆಯೆ ಅವ್ಯಾಕೃತಾಕಾಶಕ್ಕೆ ಅವಳೆ ಅಭಿಮಾನಿನಿ ಅದರಿಂದ ಅವಳ ವ್ಯಾಪ್ತಿಯೂ ಪರಮಾತ್ಮನ ವ್ಯಾಪ್ತಿಗೆ ದೃಷ್ಟಾಂತ ಇಷ್ಟುವ್ಯತ್ಯಾಸ ಪರಮಾತ್ಮ ಸ್ವತಂತ್ರನಾಗಿರುತ್ತಾನೆ ಲಕ್ಷ್ಮಿ ಅವನಿಗೆ ಅಧೀನಳಾಗಿರುತ್ತಾಳೆ ಅವನಿಗೊಬ್ಬನಿಗೆ ಮಾತ್ರ ಅಧೀನಳು ಅನ್ಯರ ವಿಷಯದಲ್ಲಿ ಅವಳೆ ಸರ್ವಸ್ವತಂತ್ರಳು ಶ್ರೀಸೂಕ್ತ ಹೇಳುತ್ತದೆ—

ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್

ಸರ್ವಭೂತೇಶ್ವರಿ ಎಂದು ಅವಳಿಗೆ ಬಿರುದು ಇಂಥ ದೇವಿಗೆ ರಮಣ, ರಮಾರಮಣ ಶ್ರೀಹರಿ. ದೇವಿಯೊಂದಿಗೇ ಎಲ್ಲರ ಹೃದಯದಲ್ಲಿ ಪ್ರೇರಕನಾಗಿ ಹೊಂದಿಕೊಂಡಿರುತ್ತಾನೆ ಸಂಬಂಧವಾಗದೆ ಇದು ಬ್ರಹ್ಮಸೂತ್ರದ ಸಿದ್ಧಾಂತ

'ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ'

'ಜೀವರ ಜೊತೆಗೆ ಅವರ ಹೃದಯದಲ್ಲಿಯೆ ನೆಲೆಸಿದ್ದರೂ ಜೀವರ ಕರ್ಮಫಲದ ಅಶುಭ ರಸಾನುಭವ ಹರಿಗೆ ಇಲ್ಲ ಏಕೆಂದರೆ ಅದು ಅವನ ಸಾಮರ್ಥ್ಯ' ಎನ್ನುತ್ತದೆ ಬ್ರಹ್ಮಸೂತ್ರ ಈ ಮಾತು ಲಕ್ಷ್ಮಿಗೂ ಅನ್ವಯಿಸುತ್ತದೆ ತತ್ತ್ವಾಭಿಮಾನಿ ದೇವತೆಗಳಿಗೂ ಸ್ವಲ್ಪ ಮಟ್ಟಿಗೆ ಅನ್ವಯಿಸುತ್ತದೆ ಅವರೂ ಪ್ರೇರಕರಾಗಿ ಹೃದಯದಲ್ಲಿ ನಿಂತು ಕರ್ಮಮಾಡಿ ಮಾಡಿಸಿ ಕರ್ಮಫಲದ ಶುಭರಸವನ್ನು ಮಾತ್ರ ಉಣ್ಣುತ್ತಾರೆ ಅಶುಭವಾದ ಪಾಪಕರ್ಮ-ಫಲವನ್ನು ಉಣ್ಣುವುದಿಲ್ಲ

ನ ಹ ವೈ ದೇವಾನ್ ಪಾಪಂ ಗಚ್ಛತಿ

ಎಂದು ಬೃಹದಾರಣ್ಯಕ ಸಪ್ತಾನ್ನ ಬ್ರಾಹ್ಮಣದಲ್ಲಿ ಹೇಳಿದೆ ಅದರಿಂದ 'ರಮಾರಮಣ' ಎಂಬುದು ಉಪಲಕ್ಷಣ 'ಸುರಾನಂದ' ಎಂದೂ ಇಟ್ಟುಕೊಳ್ಳಬೇಕು ವಿಷ್ಣುಸಹಸ್ರನಾಮ-ಸ್ತೋತ್ರದಲ್ಲಿ ಹೀಗೆ ಹೇಳಿದೆ—

ಶ್ರೀನಿವಾಸಃ ಸತಾಂ ಗತಿಃ ಅನಿರುದ್ಧಃ ಸುರಾನಂದಃ

'ಶ್ರೀನಿವಾಸನಾಗಿ ಸಜ್ಜನರಿಗೆ ಮೋಕ್ಷದಾಯಕನಾದ ಅನಿರುದ್ಧನೆ ಸುರರಿಗೆ ಕೇವಲ ಆನಂದ ನೀಡುತ್ತಾನೆ, ಅವರು ಪಾಪಕರ್ಮಪ್ರೇರಕರಾದರೂ ಅದರ ಫಲವಾದ ದುಃಖ-ವನ್ನು ಅವರಿಗೆ ನೀಡದೆ ಪುಣ್ಯಫಲವಾದ ಆನಂದವನ್ನೇ ನೀಡುತ್ತಾನೆ' ಎಂದು

**ಕಾದ ಕಬ್ಬಿಣ ಹಿಡಿದು ಬಡಿಯಲು**
**ವೇದನೆಯು ಲೋಹಗಳಿಗಲ್ಲದೆ**
**ಆದುದೇನೈ ಅನಳಗಾ ವ್ಯಥೆ ಏನ ಮಾಡಿದರು।**
**ಆದಿದೇವನು ಸರ್ವಜೀವರ**
**ಕಾದುಕೊಂಡಿಹನೊಳ ಹೊರಗೆ ದುಃ**
**ಖಾದಿಗಳು ಸಂಬಂಧವಾಗುವವೇನೊ ಚಿನ್ಮಯಗೆ ॥ ೨೭ ॥**

ಕಾದ ಕಬ್ಬಿಣವನ್ನು ಹಿಡಿದು ಬಡಿದಾಗ ವೇದನೆ ಆ ಕಬ್ಬಿಣ ಮುಂತಾದ ಲೋಹಗಳಿಗೇ ಹೊರತು ಆ ವ್ಯಥೆ ಏನು ಮಾಡಿದರೂ ಬೆಂಕಿಗೆ ಆಯಿತೇನು? ಆದಿದೇವನಾದ ಶ್ರೀಹರಿ ಸರ್ವಜೀವರನ್ನೂ ಒಳಗೆ ಹೊರಗೆ ಕಾದು ಕೊಂಡಿದ್ದಾನೆ ಎಂದ ಮಾತ್ರಕ್ಕೆ ಜ್ಞಾನಾನಂದಮಯನಾದ ಆತನಿಗೆ ದುಃಖಾದಿಗಳ ಸಂಪರ್ಕಗಳೂ ಆಗುವವೇನು?

ಹಿಂದಿನ ಪದ್ಯದಲ್ಲಿ 'ಘಟಮಂದಿರದಿ ತುಂಬಿಹ ಬಾಂದಳ'ದ ದೃಷ್ಟಾಂತ ಶ್ರೀಹರಿ ಜೀವರೊಳಗಿದ್ದು ಕರ್ಮ ಮಾಡಿದರೂ ನಿರ್ಲಿಪ್ತನಾಗಿರುತ್ತಾನೆ ಎನ್ನಲು ಅದು ಸಾಕು ಇದೀಗ ಶ್ರೀಹರಿ ಜೀವರೊಳಗಿರುವುದು ಜೀವರ ಮೋಕ್ಷಸಾಧನೆಗೆ ಹೇಗೆ ಆವಶ್ಯಕವೆಂಬುದನ್ನೂ ಶ್ರೀಹರಿ ನಿರ್ಲಿಪ್ತ ಎಂಬುದನ್ನೂ ಸುಂದರವಾದ ಒಂದೇ ನಿದರ್ಶನದಿಂದ ತೋರಿಸಿಕೊಡುತ್ತಿದ್ದಾರೆ ದಾಸರಾಯರು

**ಕಾದ ಕಬ್ಬಿಣ :**

ತಣ್ಣಗಿರುವ ಕಬ್ಬಿಣಕ್ಕೆ ಬಡಿದರೆ ಫಲವಿಲ್ಲ ಬಡಿಯದಿದ್ದರೆ ಕಬ್ಬಿಣಕ್ಕೆ ನಮಗೆ ಬೇಕಾದ ಆಕಾರ ಬರಲಾರದು ಅದು ಯಾವ ಉಪಯೋಗಕ್ಕೂ ಬರಲಾರದು ಸುಂದರವಾಗಿಯೂ ಕಾಣಲಾರದು ಬಣ್ಣ ಕಪ್ಪು ಹೊಳಪೂ ಇಲ್ಲ ಸುಂದರ ಆಕಾರವೂ ಇಲ್ಲ ಹೀಗಾಗಿ ಕಬ್ಬಿಣ ತಾನು ಸುಂದರವಾಗಿ ಕಾಣಬೇಕಾದರೆ, ಎಲ್ಲರಿಗೂ ಉಪಯುಕ್ತವೆನಿಸ ಬೇಕಾದರೆ, ಎಲ್ಲರ ಪ್ರಶಂಸೆಗೆ ಪಾತ್ರವಾಗುವಂತಾಗಬೇಕಾದರೆ ಏಟು ತಿನ್ನಬೇಕು ಹೇಗೆ? ತಣ್ಣಗಿದ್ದರೆ ಏಟನ್ನು ಸ್ವೀಕರಿಸಲಾರದು ಆಕಾರ ನುಣುಪು ಹೊಳಪುಗಳನ್ನೂ ಹೊಂದಲಾರದು. ಅದರಿಂದ ಕಬ್ಬಿಣ ಕಾದ ಕಬ್ಬಿಣವಾಗಬೇಕು

ಕಬ್ಬಿಣ ಮಾತ್ರವೆ ಅಲ್ಲ ತಾಮ್ರ ಹಿತ್ತಾಳೆಗಳಂಥ ಬೇರೆ ಲೋಹಗಳೂ ಹೀಗೇ ಉತ್ತಮ ಆಕಾರ ಹೊಳಪು ಇದ್ದರೇ ಚಂದ, ಉಪಯುಕ್ತ ಇಲ್ಲದಿದ್ದರೆ ಅನುಪಯುಕ್ತ ಅವು ವಿವಿಧ ಆಕಾರಗಳ ಪಾತ್ರೆ, ತಂಬಿಗೆ ಮುಂತಾದುವಗಳಾಗಿ ಉಪಯುಕ್ತವಾಗಬೇಕಾದರೆ ಮಂಗಳಾಭಿಷೇಕಕ್ಕೆ ಸಲ್ಲುವ ಪೂರ್ಣಕಲಶವಾಗಿ ರೂಪುತಳೆಯ ಬೇಕಾದರೆ ಅವುಗಳನ್ನು ಚೆನ್ನಾಗಿ ಕಾಯಿಸಬೇಕು ಚಿನ್ನವೂ ಹಾಗೇ ಪವಿತ್ರ ಮಂಗಳಕರ ಆಭರಣಗಳಾಗಿ ರೂಪುಗೊಳ್ಳಬೇಕಾದರೆ

ಅದನ್ನೂ ಕಾಯಿಸಬೇಕು ಈ ಅಭಿಪ್ರಾಯ ದಿಂದ 'ಲೋಹಗಳಿಗಲ್ಲದೆ' ಎಂದು ಬಹುವಚನ ಪ್ರಯೋಗವಿದೆ ಇಲ್ಲದಿದ್ದರೆ ಕಾದ ಕಬ್ಬಿಣಕ್ಕೆ ಬಡಿದರೆ ಆ ಒಂದು ಲೋಹಕ್ಕೆ ಮಾತ್ರ ವೇದನೆ ಉಂಟಾಗಬೇಕು 'ಲೋಹ ಗಳಿಗೆ' ಹೇಗೆ? ಅದರಿಂದ 'ಕಬ್ಬಿಣ' ಎಂಬುದು ಉಪಲಕ್ಷಣ ಎಲ್ಲ ಲೋಹಗಳನ್ನೂ ಚಿನ್ನವನ್ನೂ ಇಟ್ಟುಕೊಳ್ಳಬೇಕು

ಲೋಹಗಳು ಚೇತನರಿಗೆ ಸಂಕೇತ ಚೇತನರು ಸಾತ್ವಿಕ ರಾಜಸ ತಾಮಸರೆಂದು ಮೂರು ಬಗೆ. ಅವರಲ್ಲಿ ತಾಮಸರು ಕಬ್ಬಿಣದಂತೆ, ಒಳ್ಳೆಯ ಬಣ್ಣವಿಲ್ಲ, ಹೊಳಪಿಲ್ಲ ರಾಜಸರು ತಾಮ್ರ ಹಿತ್ತಾಳೆಗಳಂತೆ ಸಾತ್ವಿಕರು ಚಿನ್ನದಂತೆ, ಉಜ್ವಲವಾಗಿ ಹೊಳೆಯು ತ್ತಾರೆ ಎಲ್ಲರೂ ಜ್ಯೋತಿರ್ಮಯನಾದ ಶ್ರೀಹರಿಯ ಆವೇಶದಿಂದ ಅವನೆ ನೀಡುವ ಏಟುಗಳನ್ನು ತಿನ್ನಲು ಶಕ್ತರಾಗುತ್ತಾರೆ ಅವರಲ್ಲಿ ತಾಮಸರಿಗೆ ಬಲವಾದ ಏಟು ಕಬ್ಬಿಣಕ್ಕೆ ಕಮ್ಮಾರನ ಸುತ್ತಿಗೆಯ ಬಲವಾದ ಏಟು ಬೇಕು ತಾನೆ! ರಾಜಸರಿಗೆ ಸ್ವಲ್ಪ ಕಡಿಮೆ ಸಾತ್ವಿಕರಿಗೆ ಬಲು ಸೂಕ್ಷ್ಮವಾದ ಏಟು ಚಿನ್ನಕ್ಕೆ ಅಕ್ಕಸಾಲಿಗ ಜಾಗರೂಕತೆಯಿಂದ ಬಲು ಸೂಕ್ಷ್ಮವಾಗಿ ಹೊಡೆಯುತ್ತಾನೆ

**ಹಿಡಿದು ಬಡಿಯಲು:**

ಕಾದ ಲೋಹಗಳನ್ನು ಇಕ್ಕಳದಿಂದ ಹಿಡಿದು ಸುತ್ತಿಗೆಯಿಂದ ಬಡಿಯಬೇಕು ಹಾಗೇ ಚೇತನರನ್ನು ಶ್ರೀಹರಿ ವೇದದ ವಿಧಿನಿಷೇಧರೂಪವಾದ ಇಕ್ಕಳದಿಂದ ಹಿಡಿದು ಸತ್ಕರ್ಮ ದುಷ್ಕರ್ಮಗಳ ಫಲವಾದ ಸಂಪತ್ತು ವಿಪತ್ತುಗಳೆಂಬ ಸುತ್ತಿಗೆಗಳಿಂದ ಮೇಲಿಂದ ಮೇಲೆ ಬಡಿಯುತ್ತಾನೆ ಅದರಿಂದ ಸುಖದುಃಖಗಳ ವೇದನೆ ಸಂವೇದನೆಗಳು ಚೇತನರಿಗೆ ಉಂಟಾಗುವವು ಇದು ಸಂಸಾರದಲ್ಲಿ ಮಾತ್ರವಲ್ಲ ಅದರಿಂದ ಬಿಡುಗಡೆ ಹೊಂದಿದ ಬಳಿಕವೂ ಚೇತನರು ಭಗವಂತನಿಗೆ ಅಧೀನರೆ ವಿಧಿನಿಷೇಧಗಳ ಇಕ್ಕಳದಿಂದ ಅವರನ್ನು ಆತ ಹಿಡಿಯುವುದಿಲ್ಲ ಅಷ್ಟೆ ಅದರ ಸಹಾಯವಿಲ್ಲದೆ ತಾನೆ ಹಿಡಿದು ತಾಮಸರಿಗೆ ತಮಸ್ಸಿನ ಪಂಚಕಷ್ಟದ ಭಯಂಕರ ಏಟನ್ನು ರಾಜಸರಿಗೆ ಮಿಶ್ರರೀತಿಯ ಏಟನ್ನೂ ಸಾತ್ವಿಕರಿಗೆ ಮಿದುವಾದ ಸುಖಕರವಾದ ಹಿತವಾದ ಏಟನ್ನೂ ಕೊಡುತ್ತಾನೆ ಇಷ್ಟೆ ವ್ಯತ್ಯಾಸ, ಸಂಸಾರದಲ್ಲಿ ಏಟು ಸಾಧನರೂಪ, ಈಗಿನದು ಫಲರೂಪ

**ವೇದನೆಯು ಲೋಹಗಳಿಗೆ**

ಲೋಹಗಳಿಗೆ ವೇದನೆ ಉಂಟು ಮಾಡುವುದೇ ಕಮ್ಮಾರನಿಗಾಗಲಿ ಅಕ್ಕಸಾಲಿಗನಿಗಾಗಲಿ ಉದ್ದೇಶವಾಗಿರುವುದಿಲ್ಲ ಬೇಕಾದ ಆಕಾರ ಹೊಳಪುಗಳನ್ನು ತರುವುದೆ ಉದ್ದೇಶ ಹಾಗೇ ಶ್ರೀಹರಿ ಸಾತ್ವಿಕರಿಗೆ ಸಂಸಾರದಲ್ಲಿ ಸುಖ ದುಃಖಗಳನ್ನು ನೀಡುವುದು ಅವರಿಗೆ 'ಅನ್ಯನ್ನವತರಂ ಕಲ್ಯಾಣತಮಂ ರೂಪಂ' ಎಂಬಂತೆ ಚಿನ್ಮಯವಾದ ಸುಂದರ ಆಕಾರ ಬರಲಿ ಎಂಬ ಉದ್ದೇಶದಿಂದ ಅದರಿಂದಲೆ ಆತ ಕರುಣಾಸಾಗರ ಸುಮ್ಮನೆ ಬಡಿಯುತ್ತಾನೆ, ನಿಷ್ಕರುಣಿ ಎನ್ನಕೂಡದು ರಾಜಸತಾಮಸರ ವಿಷಯದಲ್ಲಿ ಆತ ನಿಷ್ಕರುಣಿ ಎನಿಸಿದರೆ ಅದು ದೋಷವಲ್ಲ ದುಷ್ಟನಿಗ್ರಹ ಒಂದು ಗುಣವೇ ತಾನೆ!

**ಆದುದೇನ್ನೈ ಅನಳಗಾ ವ್ಯಥೆ :**

ಕಬ್ಬಿಣಕ್ಕೆ ಏಟು ಬೀಳಬೇಕಾದರೆ, ಏಟನ್ನು ಸ್ವೀಕರಿಸಬೇಕಾದರೆ ಅದು ಕಾದಿರಬೇಕು ಒಳಗೆ ಹೊರಗೆ ಬೆಂಕಿ ಇರಬೇಕು ಬೆಂಕಿ ಒಳಗೆ ಹೊರಗೆ ವ್ಯಾಪಿಸಿದ್ದರೂ ಏಟು ಕಬ್ಬಿಣಕ್ಕೇ ಹೊರತು ಬೆಂಕಿಗೆ ಏನೂ ಪರಿಣಾಮವಾಗುವುದಿಲ್ಲ ಎಲ್ಲ ಪರಿಣಾಮ ಕಬ್ಬಿಣಕ್ಕೇ ಪ್ರಕೃತದಲ್ಲಿ ಚೇತನರಿಗೂ ಏಟು ಬೀಳಬೇಕಾದರೆ ಅವರ ಒಳಗೆ ಹೊರಗೆ ಶ್ರೀಹರಿ ವ್ಯಾಪಿಸಿರಬೇಕು ಇಲ್ಲದಿದ್ದರೆ ಏಟನ್ನು ಸ್ವೀಕರಿಸುವ ಶಕ್ತಿ ಚೇತನರಿಗಿಲ್ಲ ಮನುಷ್ಯ ಶರೀರಕ್ಕೆ ನರಕದ ಭೀಕರ ಶಿಕ್ಷೆ ಅನುಭವಿಸುವ ಶಕ್ತಿ ಇಲ್ಲ ಮರ್ಮಸ್ಥಳಕ್ಕೆ ಸ್ವಲ್ಪ ಏಟು ತಗುಲಿದರೂ ಮನುಷ್ಯ ಸಾಯುತ್ತಾನೆ ಅದಕ್ಕೆ ನಾರಕಿಶರೀರ ಬೇರೆಯೇ ಬರುತ್ತದೆ ಅದಕ್ಕೆ ಬಲವಾದ ಎಲ್ಲ ಏಟುಗಳೂ ಮರ್ಮಸ್ಥಾನದಲ್ಲಿಯೆ ಬಿದ್ದರೂ ಸಾವು ಬರುವುದಿಲ್ಲ ಹಾಗಯೆ ಸಂಸಾರದ ಸಂಪತ್ತು ವಿಪತ್ತುಗಳ ಆಘಾತವನ್ನು ಅನುಭವಿಸಲು ಚೇತನಸ್ವರೂಪ ಶರೀರಕ್ಕೆ ಶಕ್ತಿ ಇಲ್ಲ ಇದ್ದರೂ ವ್ಯಕ್ತವಾಗಿರುವುದಿಲ್ಲ ಅದಕ್ಕೆ ಶ್ರೀಹರಿ ಪ್ರವೇಶಿಸಿ ಒಳಗೆ ಹೊರಗೆ ವ್ಯಾಪಿಸಿ ಶಕ್ತಿಯನ್ನು ವ್ಯಕ್ತಮಾಡಬೇಕು ಬಳಿಕ ಅವನೆ ಬಡಿಯ ಬೇಕು ಹೊರಗೆ ನಿಂತು ಹೊಡೆಯವವನೂ ಅವನೆ ಒಳಗೆ ನಿಂತು ಹೊಡೆಸಿಕೊಳ್ಳುವವನೂ ಅವನೆ, ನಡುವೆ ಏಟು ಮಾತ್ರ ಚೇತನನಿಗೇ. ಶ್ರೀಹರಿ ಅಸಂಗ, ಕರ್ಮಲೇಪ ವಿಲ್ಲದವ, ಸೋಕನೀಯ

**ಆದಿದೇವನು ಸರ್ವಜೀವರ ಕಾದುಕೊಂಡಿಹನೊಳಹೊರಗೆ**

'ತತ್ರತತ್ರ ಸ್ಥಿತೋ ವಿಷ್ಣುಸ್ತತ್ತಚ್ಛಕ್ತೀಃ ಪ್ರಬೋಧಯನ್' ಎಂಬಂತೆ ಸರ್ವಚೇತನ ರಲ್ಲಿ ಏಟು ತಿನ್ನುವ ಶಕ್ತಿಯನ್ನು ವ್ಯಕ್ತಮಾಡುತ್ತ ಲೋಹಗಳಲ್ಲಿ ಬೆಂಕಿಯಂತೆ ಒಳ ಹೊರಗೆ ವ್ಯಾಪ್ತನಾಗಿ ಕಾದುಕೊಂಡಿದ್ದಾನೆ ಜೀವರನ್ನು ಭಗವಂತ ಕಾಯುವುದೆಂದರೆ ಇದೇ ಹೊರತು ಬೇರೇನಲ್ಲ ಹೊರಗೇ ದೂರದಲ್ಲಿ ನಿಂತು ಹರಿ ಎಲ್ಲವನ್ನೂ ಮಾಡಬಲ್ಲ ಆದರೆ ಚೇತನರಿಗೆ ಉಪಾಸನೆಗೆ ಅನುಕೂಲವಾಗಲೆಂದು ಸಮೀಪದಲ್ಲಿಯೆ ಒಳಗೆ ಹೊರಗೆ ಎಲ್ಲೆಡೆ ಇದ್ದು ಕಾಯುತ್ತಾನೆ ಇದು ಅವನ ಕರುಣೆ ಹೊರತು ಅಶಕ್ತಿಯಲ್ಲ ಅಶಕ್ತಿ ಎನ್ನುವುದಾದರೆ ಚೇತನರಿಗೆ ಬೀಳುವ ಏಟು ಅವರೊಳಗೆ ಹೊರಗೆ ವ್ಯಾಪಿಸಿರುವ ಅವನಿಗೆ ಏಕೆ ಬೀಳುವುದಿಲ್ಲ

**ದುಃಖಾದಿಗಳು ಸಂಬಂಧವಾಗುವವೆನೊ ಚಿನ್ಮಯಗೆ ·**

ಚಿನ್ಮಯ ಎಂದರೆ ಜ್ಞಾನಮಯ ಇದು ಉಪಲಕ್ಷಣ ಆನಂದಮಯನೂ ಹೌದು ಆನಂದಮಯನಲ್ಲಿ ದುಃಖಸಂಬಂಧವಾಗುವುದೆ? ಜ್ಞಾನಮಯನಲ್ಲಿ ಅಜ್ಞಾನ ಸಂಬಂಧವಾಗುವುದೆ?

ಆನಂದಮಯನಲ್ಲಿ ಚೇತನರ ದುಷ್ಕರ್ಮದ ಫಲವಾದ ದುಃಖದ ಸಂಬಂಧವಾಗದು, ವಿರುದ್ಧವಾದ್ದರಿಂದ, ಎನ್ನೋಣ ಸತ್ಕರ್ಮಜನ್ಯವಾದ ಸುಖದ ಸಂಬಂಧ ಏಕಾಗದು? ವಿರುದ್ಧವಲ್ಲ ತಾನೆ? ಸಮುದ್ರ ನೀರಿಂದ ಪೂರ್ಣವೆ ಇದ್ದರೂ ನದಿಗಳು ಬಂದು ಸೇರುವುದನ್ನು

ಬೇಡವೆನ್ನುವುದಿಲ್ಲ. ಹಾಗೆ ಹರಿ ಸ್ವರೂಪಭೂತ ಅನಾದಿನಿತ್ಯ ಆನಂದದಿಂದ ಪೂರ್ಣನೇ ಆಗಿದ್ದರೂ ಸತ್ಕರ್ಮಜನ್ಯವಾದ ಆನಂದವನ್ನು ಏಕೆ ನಿರಾಕರಿಸುತ್ತಾನೆ? ಎಂದರೆ, ಈ ಆನಂದ ದುಃಖಮಿಶ್ರ, ಅಶಾಶ್ವತ. ಹರಿಯ ಆನಂದ ಮಹಾಸಾಗರದ ಮುಂದೆ ಇದು ಅತ್ಯಲ್ಪ, ಒಂದು ಕಣವೂ ಅಲ್ಲ, ಆದರಿಂದ ಆನಂದವೇ ಅಲ್ಲ. ದುಃಖಕ್ಕೇ 'ಆನಂದ' ಎಂದು ಹೆಸರಷ್ಟೆ. ಸೂರ್ಯನ ಮುಂದೆ ಮಿಣಕುಹುಳದ ಬೆಳಕೂ ಒಂದು ಬೆಳಕೆ? ಆದರಿಂದ ಶ್ರೀಹರಿ ಅದನ್ನೊಲ್ಲ. ನ ಕರ್ಮಣಾ ವರ್ಧತೇ. ಸಂಸಾರಿಚೇತನರಿಗೆ ಅವರ ಸ್ವರೂಪಭೂತವಾದ ಶುದ್ಧಸುಖ ಇನ್ನೂ ವ್ಯಕ್ತವಾಗಿಲ್ಲ. ಅದಕ್ಕೆ ಕರ್ಮಜನ್ಯವಾದ ದುಃಖಮಿಶ್ರಸುಖವಾದರೂ ಇರಲಿ ಎಂದು ಶ್ರೀಹರಿ ಕರುಣೆಯಿಂದ ಅದನ್ನೆ ಕೊಡುತ್ತಾನೆ. ಸ್ವತಂತ್ರನಾಗಿ ಒಮ್ಮೆ ಸುಖ ಇನ್ನೊಮ್ಮೆ ದುಃಖ ನೀಡುತ್ತ, ತನ್ನ ಸ್ವಾತಂತ್ರ್ಯವನ್ನು ಮೆರೆಯುತ್ತಾನೆ. ಆದರ ಅರಿವು ಉಂಟುಮಾಡಿ ಭಕ್ತಿ ಹುಟ್ಟಿಸಿ ಉಪಾಸನೆ ಮಾಡಿಸಿ ಸ್ವರೂಪಸುಖ ವ್ಯಕ್ತಮಾಡಿಕೊಡುತ್ತಾನೆ. ಅದಕ್ಕಾಗಿ ಬರುವ ಈ ಸಂಪತ್ತು ಆಪತ್ತುಗಳ ಏಟು ಜೀವನಿಗೆ ಹರಿಯ ವರಪ್ರಸಾದ.

**ಮಳಲ ಮನೆಗಳ ಮಾಡಿ ಮಕ್ಕಳು**
**ಕೆಲವು ಕಾಲದಲಾಡಿ ಮೋದದಿ**
**ತುಳಿದು ಕೆಡಿಸುವ ತೆರದಿ ಲಕುಮೀರಮಣ ಲೋಕಗಳ।**
**ಹಲವು ಬಗೆಯಲಿ ನಿರ್ಮಿಸುವ ನಿ-**
**ಶ್ಚಲನು ತಾನಾಗಿದ್ದು ಸಲಹುವ**
**ಯಲರುಣಿಯವೋಲ್ ನುಂಗುವವ ಗೆಲ್ಲಿಹುದೊ ಸುಖ ದುಃಖ॥ ೨೮ ॥**

ಮಕ್ಕಳು ಆಟಕ್ಕಾಗಿ ಮಳಲ ಮನೆಗಳನ್ನು ಮಾಡಿ ಕೆಲವು ಕಾಲದಲ್ಲಿ ಆಡಿ ಕೆಡಿಸುವಂತೆ ಲಕ್ಷ್ಮೀರಮಣ ತಾನು ನಿಶ್ಚಲನಾಗಿದ್ದು ಹಲವು ಬಗೆಯಲ್ಲಿ ಲೋಕಗಳನ್ನು ನಿರ್ಮಿಸುವನು, ಸಲಹುವನು, ಹಾವಿನಂತೆ ನುಂಗುವನು. ಅವನಿಗೆ ಎಲ್ಲಿದೆಯೊ ಸುಖ ದುಃಖ?

ವ್ಯಾಪ್ತಿ ಸಂಧಿಯಲ್ಲಿ ಭಗವಂತನ ಸೃಷ್ಟಿಸ್ಥಿತಿಲಯ ವ್ಯಾಪಾರಗಳ ವರ್ಣನೆ ಏಕೆ ಎಂದರೆ ಭಗವಂತ ಬ್ರಹ್ಮಾಂಡದೊಳಗೆ ಎಲ್ಲೆಡೆ ವ್ಯಾಪ್ತನಾದರೂ ನಿರ್ಲೇಪನಾಗಿದ್ದಾನೆ ಎಂದು ಹಿಂದಿನ ಪದ್ಯಗಳಲ್ಲಿ ಹೇಳಿ, ಈ ಪದ್ಯದಲ್ಲಿ

'ದೂರೇ ಕ್ರೀಡನಕಾಸಕ್ತಂ ಬಾಲಂ ನಾರಾಯಣಾಹ್ವಯಂ'

ದೂರೇ ಅಂಡಾದ್ ಬಹಿಃಸ್ಥಿತಂ ಜಗತ್ಸರ್ಜನಾದಿ ಲೀಲಾವಿಲಾಸೋಪೇತಂ'

ಎಂಬ ಭಾಗವತ ಹಾಗೂ ಅದರ ವಿಜಯಧ್ವಜೀಯ ವ್ಯಾಖ್ಯಾನಗಳ ಪ್ರಕಾರ ಬ್ರಹ್ಮಾಂಡದ

ಹೊರಗೆ ವ್ಯಾಪ್ತನಾಗಿ ನಿಂತು ಭಗವಂತ ಲೀಲಾಜಾಲವಾಗಿ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತ ತಾನು ನಿರ್ಲೇಪನಾಗಿರುತ್ತಾನೆ ಹೀಗೆ, ಬ್ರಹ್ಮಾಂಡದ ಒಳಗೆ ವ್ಯಾಪ್ತವಾದ ರೂಪದಂತೆ, ಹೊರಗೆ ನಿಂತ ರೂಪವೂ ನಿರ್ಲೇಪ ಎಂದು ಹೇಳುತ್ತಿದ್ದಾರೆ, ದಾಸರಾಯರು

**ಮಳಲ ಮನೆಗಳ ಮಾಡಿ**

ಪ್ರಕೃತಿ ಮಹತ್ತತ್ವ ಮುಂತಾದ ಇಪ್ಪತ್ತನಾಲ್ಕು ತತ್ವಗಳನ್ನು ಜೊತೆ ಸೇರಿಸಿ ಶ್ರೀಹರಿ ಬ್ರಹ್ಮಾಂಡ ನಿರ್ಮಾಣ ಮಾಡುತ್ತಾನೆ ನಮಗೆ ಕೈಗೆ ಸಿಗುವ ಒಂದು ಹಿಡಿ ಮಣ್ಣಿನಲ್ಲಿಯೂ ಇಪ್ಪತ್ತನಾಲ್ಕು ತತ್ವಗಳಿವೆ ಶುದ್ಧ ಪೃಧಿವೀತತ್ವ ನಮಗೆ ಎಲ್ಲಿಯೂ ಸಿಗದು ಶುದ್ಧ ನೀರು ಸಿಗದು ಶುದ್ಧ ಬೆಂಕಿ ಶುದ್ಧ ಗಾಳಿ ಶುದ್ಧ ಆಕಾಶಗಳೂ ಸಿಗಲಾರವು ಎಲ್ಲವೂ ಎಲ್ಲ ತತ್ವಗಳ ಮಿಶ್ರಣ ಪೃಧಿವಿಯಲ್ಲಿ ಪೃಧಿವಿತತ್ವದ ಅಂಶ ಅಧಿಕ ಜಲದಲ್ಲಿ ಜಲತತ್ವ ಅಧಿಕ ಅದರಿಂದ ಅವು ಆ ಹೆಸರಿನಿಂದ ಕರೆಯಲ್ಪಡುತ್ತವೆ ಅದರಿಂದ ಶಿಲ್ಪಿ ಇಟ್ಟಿಗೆ ಸಿಮೆಂಟು ಕಬ್ಬಿಣ ಮುಂತಾದವುಗಳನ್ನು ಸೇರಿಸಿ ದೃಢವಾದ ಮನೆಯನ್ನು ಕಟ್ಟಿಕೊಡುವಂತೆ ಸತ್ವರಜತಮೋಗುಣಗಳನ್ನೂ ಎಲ್ಲ ತತ್ವಗಳನ್ನೂ ಸೇರಿಸಿ ಅಭೇದ್ಯವಾದ ಬ್ರಹ್ಮಾಂಡವೆಂಬ ಮನೆಯನ್ನು ಕಟ್ಟಿದ್ದಾನೆ -

'ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ।'

ಈ ಮನೆಯ ಗೋಡೆಯನ್ನು ಯಾರಿಂದಲೂ ಮುರಿಯಲು ಸಾಧ್ಯವಿಲ್ಲ ಅದನ್ನು ಕಟ್ಟಲು ಅವನೇ ಶಕ್ತ, ಮುರಿಯಲು ಅವನೇ ಶಕ್ತ ಮಳಲ ಗೂಡಿನಂತೆ ಒಂದೇ ಪದಾರ್ಥದಿಂದ ಕಟ್ಟಿದ್ದಲ್ಲ, ಅದರಂತೆ ದುರ್ಬಲವಲ್ಲ ಆದರೂ ಅದನ್ನು ಉದಾಹರಣೆ ಯಾಗಿ ಕೊಟ್ಟಿದ್ದಾರೆ ದಾಸರಾಯರು ಅದರ ಅಭಿಪ್ರಾಯ ಹೀಗೆ - 'ಮದುವೆ ಮಾಡಿ ನೋಡು ಮನೆ ಕಟ್ಟಿ ನೋಡು!' ಎಂಬಂತೆ ಮನೆ ಕಟ್ಟಲು ನಮಗೆ ಪ್ರಯಾಸವಿದೆ, ಹಣದ ಖರ್ಚು ಇದೆ ಬೀಳಿಸಲೂ ಪ್ರಯಾಸವಿದೆ ಹಣದ ಖರ್ಚಿದೆ ಮಕ್ಕಳಿಗೆ ಮಳಲ ಮನೆ ಕಟ್ಟಲು ಪ್ರಯಾಸವಿಲ್ಲ, ಹಣದ ಖರ್ಚಿಲ್ಲ ಶಿಲ್ಪಿಗಳ ಸಹಾಯ ಬೇಕಿಲ್ಲ. ಹಾಗೇ ಆ ಮನೆಯನ್ನು ಕೆಡಿಸಲೂ ಪ್ರಯಾಸವಿಲ್ಲ ಹಾಗೇ ಸರ್ವಶಕ್ತನಾದ ಶ್ರೀಹರಿ ಲೀಲಾಜಾಲ ವಾಗಿಯೇ ಬ್ರಹ್ಮಾಂಡ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಾನೆ ಬ್ರಹ್ಮಾಂಡದ ಗೋಡೆಯನ್ನು ಮುರಿಯುವುದು ಅವನಿಗೆ ಎಷ್ಟು ಲೀಲಾಜಾಲವೆಂದರೆ ಆತ ವಾಮನಾವತಾರದಲ್ಲಿ ತ್ರಿವಿಕ್ರಮನಾಗಿ ಊರ್ಧ್ವಲೋಕಗಳನ್ನು ಅಳೆಯಲು ಕಾಲನ್ನೆತ್ತಿದಾಗ ಸ್ವಲ್ಪ ಉಗುರು ತಾಗಿ ಗೋಡೆಯಲ್ಲಿ ಬಿರುಕು ಉಂಟಾಯಿತು, ಬಾಹ್ಯ ಜಲಾವರಣದ ನೀರು ಒಳಗೆ ಸೋರಿತು, ಗಂಗಾಪ್ರವಾಹ ಆವಿರ್ಭವಿಸಿತು

'ಮಳಲ ಮನೆಗಳ ಮಾಡಿ' ಎಂದು ಬಹುವಚನದಿಂದ ಶ್ರೀಹರಿ ಅನಂತ ಕೋಟಿ ಬ್ರಹ್ಮಾಂಡಗಳನ್ನು ಒಮ್ಮೆಲೆ ಸೃಜಿಸುವನೆಂದು ತಿಳಿಯಬಾರದು ಬ್ರಹ್ಮನ ಒಂದು 'ಪರ' ಕಾಲದಲ್ಲಿ ಒಂದೇ ಬ್ರಹ್ಮಾಂಡದ ಸೃಷ್ಟಿ ಅನಾದಿ ಅನಂತ ಕಾಲಗಳಲ್ಲಿ ಅನಂತ ಕೋಟಿ ಬ್ರಹ್ಮಾಂಡಗಳ ಸೃಷ್ಟಿ 'ಮಳಲ ಮನೆಗಳ' ಎಂಬ ಬಹುವಚನಕ್ಕೂ ಇದೇ ಅರ್ಥ ಮಕ್ಕಳು

ಮಳಲ ಮನೆಗಳನ್ನು ಒಂದೊಂದಾಗಿ ಮಾಡಿ ಕೆಡಿಸುವಂತೆ ಶ್ರೀಹರಿಯೂ ಪ್ರತಿಕಲ್ಪ ಗಳಲ್ಲಿಯೂ ಒಂದೊಂದು ಬ್ರಹ್ಮಾಂಡ ಸೃಷ್ಟಿ ಮಾಡುತ್ತಾನ, ಲಯ ಮಾಡುತ್ತಾನೆ

**ಕೆಲವು ಕಾಲದಲಾಡಿ ಮೋದದಿ**

'ಬಾಲಃ ಕ್ರೀಡನಕೈರ್ಯದ್ವತ್ ಕ್ರೀಡತೇಽಸ್ಮಾಭಿರಚ್ಯುತಃ।'

'ಗೊಂಬೆಗಳೊಡನೆ ಮಕ್ಕಳು ಆಟವಾಡುವಂತೆ ನಮ್ಮೊಡನೆ ಶ್ರೀಹರಿ ಆಟವಾಡು ತ್ತಾನೆ' ಎಂದು ಸೂತ್ರಭಾಷ್ಯದಲ್ಲಿ ಸೃಷ್ಟ್ಯಾದಿಗಳೆಲ್ಲ ಶ್ರೀಹರಿಗೆ ಮಕ್ಕಳಾಟದಂತೆ ಎಂದಿದೆ

'ಸೋಽಯಂ ವಿಹಾರ ಇಹ ಮೇ'

'ಈ ಸೃಷ್ಟಿ ನನಗೊಂದು ಕ್ರೀಡೆ' ಎನ್ನುತ್ತಾನೆ ಶ್ರೀಹರಿ ಮ ಭಾ ತಾ ನಿರ್ಣಯದಲ್ಲಿ

ಮಕ್ಕಳು ಆಟಕ್ಕಾಗಿ ಮಳಲ ಗೂಡನ್ನು ನಿರ್ಮಿಸುತ್ತಾರೆ ಆಟಕ್ಕಾಗಿ ಕೆಡಿಸುತ್ತಾರೆ ಹಾಗೇ ಹರಿಯೂ ಸೃಷ್ಟಿ ಮಾಡುವನೆ? ಮಾಂಡೂಕೋಪನಿಷತ್ತು ಇದನ್ನು ನಿರಾಕರಿಸುತ್ತದೆ -

ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾವರೇ।<br>
ದೇವಸ್ಯೈಷಃ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ ॥

'ಶ್ರೀಹರಿ ತನ್ನ ಸುಖಭೋಗಕ್ಕಾಗಿ ಜಗತ್ತನ್ನು ಸೃಜಿಸುವನೆಂದು ಕೆಲವರು ಬುದ್ಧಿ ಇಲ್ಲದವರು ತಿಳಿಯುತ್ತಾರೆ, ಮತ್ತೆ ಕೆಲವು ಅಜ್ಞಾನಿಗಳು ಅವನು ಕ್ರೀಡೆಗಾಗಿ ಸೃಜಿಸುವನೆಂದೂ ತಿಳಿಯುತ್ತಾರೆ ಜ್ಞಾನಿಗಳು ಹೇಳುತ್ತಾರೆ, ಸೃಷ್ಟಿಕ್ರಿಯೆ ಭಗವಂತನ ಸ್ವಭಾವ ಆಪ್ತಕಾಮನಾದ ಪೂರ್ಣಾನಂದನಾದ ಹರಿಗೆ ಸೃಷ್ಟ್ಯಾದಿಗಳಿಂದ ಏನಾಗಬೇಕಾಗಿದೆ?'

ಅತೃಪ್ತನಾದ ಮಾನವ ತನ್ನ ಸುಖಕ್ಕಾಗಿ ಏನಾದರೂ ಕಾರ್ಯ ಕೈಗೊಳ್ಳುತ್ತಾನೆ ಆಲಸ್ಯ ಹೊಂದಿದವನು ಅದರ ಪರಿಹಾರಕ್ಕಾಗಿ ಕ್ರೀಡೆಯನ್ನು ಬಯಸುತ್ತಾನೆ ಶ್ರೀಹರಿ ಪೂರ್ಣಾನಂದ, ನಿತ್ಯತೃಪ್ತ ಅತೃಪ್ತಿಯಿಂದ ಸುಖಕ್ಕಾಗಿ ಸೃಷ್ಟಿ ಮಾಡಲಾರ ನಿರ್ದುಃಖನಾದ್ದರಿಂದ ಆಲಸ್ಯ ಪರಿಹಾರಕ್ಕಾಗಿ ಕ್ರೀಡೆಯಾಡುವುದಿಲ್ಲ ಹಾಗಾದರೆ ಈ 'ವಿಹಾರ' 'ಕ್ರೀಡೆ' ಏನು? ಎಂದರೆ 'ದೇವಸ್ಯೈಷಃ ಸ್ವಭಾವೋಽಯಂ' ಕ್ರೀಡೆಯಾಡುವುದು ಅವನ ಸ್ವಭಾವ ಅದರಿಂದ ಸೃಷ್ಟಿ ಕ್ರೀಡೆಗಾಗಿ ಅಲ್ಲ, ಕ್ರೀಡೆಯೇ ಸೃಷ್ಟಿ

ಓಂ ಲೋಕವತ್ತು ಲೀಲಾಕೈವಲ್ಯಂ ಓಂ

ಎಂದು ಬ್ರಹ್ಮಸೂತ್ರ ಇದನ್ನೇ ಹೇಳುತ್ತದೆ ದಾನರಾಯರೂ 'ಮೋದದಿ ಕೆಲವು ಕಾಲದಲಾಡಿ' ಆನಂದದಲ್ಲಿ, ಆನಂದೋದ್ರೇಕದ ಅವಸ್ಥೆಯಲ್ಲಿ ಸ್ವಾಭಾವಿಕವಾಗಿ ಸದಾ ಇದ್ದು ಆಡುತ್ತಾನೆ ಹೊರತು 'ಮೋದಕ್ಕಾಗಿ' ಅಲ್ಲ ಎನ್ನುತ್ತಿದ್ದಾರೆ

ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್

ಎಂದು ಉಪನಿಷತ್ತಿನ ವಾಣಿ ಇದನ್ನು ಸಾರುತ್ತಿದೆ

**ಮೋದದಿ ತುಳಿದು ಕೆಡಿಸುವ ತೆರದಿ**

ತಾವೇ ನಿರ್ಮಿಸಿದ ಮಳಲ ಗೂಡುಗಳನ್ನು ತಾವೇ ತುಳಿದು ಕೆಡಿಸುವುದು ಮಕ್ಕಳಿಗೆ ಆಟ ಅವರಿಗೆ ಗೂಡುಗಳ ಮೇಲೆ ಏನೂ ಮೋಹವಿಲ್ಲ ಅದನ್ನು ನಿರ್ಮಿಸುವುದರಲ್ಲಿ ಎಷ್ಟು ಆನಂದ, ಕೆಡಿಸುವುದರಲ್ಲಿಯೂ ಅಷ್ಟೇ ಆನಂದ ಹಾಗೇ ಶ್ರೀಹರಿಗೆ ತಾನು ಸೃಜಿಸಿದ ಮಕ್ಕಳ ಮೇಲೆ ಏನೂ ಮೋಹವಿಲ್ಲ ಏನೂ ಸಂಕೋಚ ಪಡದೆ ಲಯ ಮಾಡುತ್ತಾನೆ ನಖಸ್ತುತಿಯಲ್ಲಿ ಹಾಗೇ ಹೇಳಿದೆ -

ಯದ್ರೋಷೋತ್ಕರದಕ್ಷನೇತ್ರಕುಟಿಲಪ್ರಾಂತೋತ್ಥಿತಾಗ್ನಿಸ್ಫುರತ್-
ಖದ್ಯೋತೋಪಮವಿಸ್ಫುಲಿಂಗಭಸಿತಾ ಬ್ರಹ್ಮೇಶಶಕ್ರೋತ್ಕರಾಃ।

ಆದರೆ ನಪ್ರಯೋಜನವತ್ವಾಧಿಕರಣದಲ್ಲಿ ಭಕ್ತರ ಮೇಲಿನ ಪ್ರೀತಿಯಿಂದ ಅವರಿಗೆ ಮೋಕ್ಷಸಾಧನೆಗಾಗಿ ಶ್ರೀಹರಿ ಸೃಷ್ಟಿ ಮಾಡುತ್ತಾನೆ ಎಂದಿದೆ

'ತನುಭೃತ್‌ಸ್ವಭಾವಸಂಭೂತಯೇ'

ಎಂದು ಮ ಭಾ ತಾ ನಿರ್ಣಯವೂ ಹಾಗೇ ಹೇಳಿದೆ

ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ ಕಲ್ಪಾವಸಾನೇ ಚ ಯಃ

ಎಂದು ವಿಷ್ಣುತತ್ವನಿರ್ಣಯಟೀಕೆ 'ಕಲ್ಪಾಂತ್ಯದಲ್ಲಿ ಭಕ್ತರ ಶ್ರಮಪರಿಹಾರಕ್ಕಾಗಿ ನಿದ್ದೆ ತರಲೆಂದು ಶ್ರೀಹರಿ ಲಯ ಮಾಡುತ್ತಾನೆ' ಎಂದಿದೆ

ಹೊಟ್ಟೆ ಎಂಬ ಹೊನ್ನ ತೊಟ್ಟಿಲೊಳಗಿಟ್ಟು ವಿಟ್ಠಲ ಜೀವರ ನಿದ್ರೆಗೊಳಿಸುವನು।

'ಅನೇಕ ಕಲ್ಪಗಳ ಕಾಲ ಜನನ ಮರಣಗಳ ಚಕ್ರದಲ್ಲಿ ಸಿಲುಕಿ ತಿರುತಿರುಗಿ ಬಳಲಿ ಬೆಂಡಾದ ಜೀವರಿಗೆ ಲಯಕಾಲದಲ್ಲಿ ವಿಟ್ಠಲ ತನ್ನ ಹೊಟ್ಟೆಯನ್ನೇ ಹೊನ್ನ ತೊಟ್ಟಿಲಂತೆ ಮಾಡಿ ಅವರನ್ನು ಮಾತೃವಾತ್ಸಲ್ಯದಿಂದ ಮಲಗಿಸಿ ನಿದ್ರೆ ಬರಿಸುತ್ತಾನೆ ' ಎಂದು ವಾದಿರಾಜರು ಹೇಳಿದ್ದಾರೆ ಇದನ್ನು ಬರಿ ಮಕ್ಕಳಾಟ ಎನ್ನಬಹುದೆ? ಅದರಿಂದ ಮಕ್ಕಳು ಆಟವಾಡುವಂತೆ ಅನಾಯಾಸ ದಿಂದ ಹರಿ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಾನೆ ಎಂದು ಮಾತ್ರ ಉದಾಹರಣೆಯ ಅಭಿಪ್ರಾಯವಿಟ್ಟುಕೊಳ್ಳಬೇಕು ಹಾವಿನ ಉದಾಹರಣೆಯೂ ಈ ಅಭಿಪ್ರಾಯದಲ್ಲಿ ಹೊಂದಿಕೊಳ್ಳುತ್ತದೆ ಏಕೆಂದರೆ 'ಹಾವಿನಂತೆ' ಎನ್ನದೆ 'ಎಲರುಣಿಯ ಓಲ್' ಎಂದಿದ್ದಾರೆ ಎಲರ್=ಗಾಳಿ, ಉಣಿ=ಉಣ್ಣುವ ಹಾವು

ಗಾಳಿ ನುಂಗುವ ಮಂಚ
ಶೃಂಗಾರವಾಗಿದೆ ಶ್ರೀಹರಿಯ ಮಂಚ ॥

ಎಂದು ಪುರಂದರದಾಸರು ಹಾಡುವಂತ ಹಾವು ಎಷ್ಟು ಅನಾಯಾಸದಿಂದ ಗಾಳಿಯನ್ನು ನುಂಗುವುದೋ ಅದಕ್ಕಿಂತಲೂ ಹೆಚ್ಚು ಅನಾಯಾಸದಿಂದ ಶ್ರೀಹರಿ ಬ್ರಹ್ಮಾಂಡವನ್ನು ನುಂಗುತ್ತಾನೆ. ಹೀಗೆ ಅನಾಯಾಸವೇ ಉದಾಹರಣೆಯಲ್ಲಿ ವಿವಕ್ಷಿತವಾಗಿದೆ ಹೊರತು ಶ್ರೀಹರಿಗೆ ಜೀವರಲ್ಲಿ ಪುತ್ರವಾತ್ಸಲ್ಯ ಮಮತೆ ಕರುಣೆಗಳಿಲ್ಲ ವೆಂದಲ್ಲ

**ನಿಶ್ಚಲನು ತಾನಾಗಿ :**

ಈ ಅಂಶ 'ನಿರ್ಮಿಸುವ' 'ನಲಹುವ' 'ನುಂಗುವ' ಈ ಮೂರಕ್ಕೂ ಅನ್ವಯಿಸುತ್ತದೆ ತಾನು ನಿಶ್ಚಲನಾಗಿ ಲೋಕವನ್ನು ನಿರ್ಮಿಸುತ್ತಾನೆ, ಎಂದರೆ ಯಾವುದೇ ಫಲದಾಸೆ ಯಿಂದಾಗಲಿ ಆಲಸ್ಯಾದಿದೋಷದಿಂದಾಗಲಿ ವಿಚಲಿತನಾಗದೆ ಸ್ವಭಾವದಿಂದಲೇ ನಿರ್ಮಿಸುತ್ತಾನೆ ಯಾವುದೇ ಮೋಹದಿಂದಾಗಲಿ ವಿಚಲಿತನಾಗದೆ ಅವರವರಿಗೆ ಯೋಗ್ಯಗತಿ ನೀಡಲೆಂದೇ ನಲಹುತ್ತಾನೆ ಹಸಿವು ಬಾಯಾರಿಕೆಗಳಿಂದಾಗಲಿ ಕ್ರೋಧ ಮತ್ಸರಗಳಿಂದಾಗಲಿ ವಿಚಲಿತನಾಗದೆ ಪ್ರೀತಿಕರುಣೆಗಳಿಂದಲೆ ಲಯಗೈಯುತ್ತಾನೆ ನಿರ್ಣಯ ಹೇಳುತ್ತದೆ -

ಭೂತ್ಯೈ ನಿಜಾಶ್ರಿತಜನಸ್ಯ ಹಿ ಸೃಜ್ಯ ಸೃಷ್ಟೌ
ಈಕ್ಷಾ ಬಭೂವ ಪರನಾಮ ನಿಮೇಷಕಾಂತೇ।

**ಎಲರುಣಿಯ ಓಲ್ ನುಂಗುವ**

ಹಾವು ಅನಾಯಾಸದಿಂದ ಗಾಳಿ ನುಂಗುವಂತೆ ಅನಾಯಾಸದಿಂದ ಬ್ರಹ್ಮಾಂಡವನ್ನು ನುಂಗುವುದು ಶ್ರೀಹರಿಗೆ ಸ್ವಾಭಾವಿಕ ಅಂದರೆ, ಸ್ವಂತಕ್ಕೆ ಯಾವ ಪ್ರಯೋಜನದ ಅಪೇಕ್ಷೆ ಇಲ್ಲ, ಹೊರತು, ಭಕ್ತರ ಮೋಕ್ಷಸಾಧನೆ ಎಂಬ ಪ್ರಯೋಜನದ ಉದ್ದೇಶವಿಲ್ಲವೆಂದಲ್ಲ ಆದರೆ ಐತರೇಯೋಪನಿಷತ್ತು ಹೇಳುತ್ತದೆ -

ಸ ಐಕ್ಷತ ಯದಿ ಹ ವಾವ ಇಮಮಭಿಮಂಸ್ಯೇ
ಕನೀಯೋಽನ್ನಂ ಕರಿಷ್ಯ ಇತಿ।

ಇದರ ಭಾವವನ್ನು ವಾದಿರಾಜರು ವೈಕುಂಠವರ್ಣನೆಯಲ್ಲಿ ಕನ್ನಡಿಸಿದ್ದಾರೆ -

ಹಿಂದೆ ಬೊಮ್ಮನ ಸೃಜಿಸಿ ಅವನಂಗವಾಗಲೆ
ತಿಂದರೆ ತುತ್ತು ಕುಂದುವುದು।
ಎಂದುದಾಸೀನವ ಮಾಡಿದ ಶ್ರೀಕೃಷ್ಣ-
ನಿಂದು ಭುಂಜಿಸಿ ತೇಗುತಿರ್ದ।
ಹೆಡತಲೆಯ ಮೃತ್ಯುವೆ ಅಡಿಗಡಿಗೆ ತುಪ್ಪವಾ-
ಯ್ತೊಡಲೊಂದೊಂದೆಂಬುದೆ ತುತ್ತುಗಳಾದುವು॥

ಇದನ್ನು ನೋಡಿದರೆ, ಹರಿ ಲೋಕಗಳನ್ನು ನಿರ್ಮಿಸಿ ನಲಹುವುದು ಏಕೆ? ಕಟುಕನು

ಕುರಿಗಳನ್ನು ಹುಟ್ಟಿಸಿ ಸಾಕುವುದೇಕೆ? ಬೆಳೆದು ಕೊಬ್ಬಿನಿಂತಾಗ ಕೊಂದು ತಿನ್ನುವುದು ಉದ್ದೇಶ ತಾನೆ! ದಾಸರಾಯರೂ ಕೂಡ ಹಾವಿನ ಉದಾಹರಣೆ ನೀಡಿದ್ದಾರೆ ಹಾವು ಹಸಿವಿಂದ ತಾನೆ ಇಲಿ ಕಪ್ಪೆಗಳನ್ನು ನುಂಗುತ್ತದೆ? ಹೆಣ್ಣುಹಾವು ತನ್ನ ಮೊಟ್ಟೆಯನ್ನು ತಾನೆ ನುಂಗುತ್ತದೆ ಹಾಗೇ ಹರಿ ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೆ ನುಂಗುತ್ತಾನೆ ಎಂದೂ ಉದಾಹರಣೆಯ ಅಭಿಪ್ರಾಯವಿರಬಹುದೆ?

ಈ ಪ್ರಶ್ನೆಗಳಿಗೆ 'ಎಲರುಣಿ' ಸಮಾಧಾನ ನೀಡುತ್ತದೆ ಗಾಳಿ ನುಂಗುವ ಹಾವು ತಾನು ನುಂಗುವ ತುತ್ತನ್ನು ಸವಿಯುವುದಿಲ್ಲ ಎನ್ನುವುದು ಸ್ಪಷ್ಟ ಎರಡು ಹಲ್ಲು ನಾಲಿಗೆಗಳಿದ್ದೂ ಅದು ತುತ್ತನ್ನು ಅಗಿದು ತಿನ್ನುವುದಿಲ್ಲ, ಸವಿನೋಡುವುದಿಲ್ಲ ಹಾಗೇ ನುಂಗುತ್ತದೆ ಶ್ರೀಹರಿಯೂ ಹಾಗೇ ಜಿಹ್ವಾಚಾಪಲ್ಯದಿಂದ ಬ್ರಹ್ಮಾಂಡವನ್ನು ಉಣ್ಣುವುದಿಲ್ಲ ಅದರೊಳಗಿರುವ ಸ್ವಾಖ್ಯರಸವನ್ನೇ ಸ್ವರಮಣನಾದ ತಾನು ಮೆಲ್ಲುತ್ತಾನೆ ಅವನು ನಿಜವಾಗಿ ಹಸಿದರೆ ಅವನಿಗೆ ತೃಪ್ತಿ ನೀಡಬಲ್ಲ ಆಹಾರವೆಲ್ಲಿ ದೊರಕೀತು? ಅವನ ರೋಮಕೂಪದಲ್ಲಿ ಕೋಟಿ ಬ್ರಹ್ಮಾಂಡಗಳು ಅಡಗಬಲ್ಲುವು ಅಂಥ ಮಹಾಕಾಯನಿಗೆ ಒಂದು ಬ್ರಹ್ಮಾಂಡ ಯಾವ ಮೂಲೆಗೆ? ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆ! ವಾದಿರಾಜರು ಯುಕ್ತಿಮಲ್ಲಿಕೆಯಲ್ಲಿ ಹೇಳಿದ್ದಾರೆ -

ಬೃಹಚ್ಛರೀರಃ ಕಿಂ ಭುಂಕ್ತೇ ಬ್ರಹ್ಮಾಂಡಂ ಯಸ್ಯ ರೋಮಸು।

**ಅವಗೆ ಎಲ್ಲಿಯದೊ ಸುಖದುಃಖ?**

ಹಾಗಾದರೆ 'ಕನೀಯೋಽನ್ನಂ ಕರಿಷ್ಯೇ' ಎಂದು ಮುಂತಾಗಿ ಉಪನಿಷತ್ತಿನ ಮಾತಿಗೆ ಏನರ್ಥ? ಕೇವಲ ಲೀಲೆ ! ಬ್ರಹ್ಮಾಂಡ ಬಲಿಯುವುದೆಂದರೆ ಜೀವರ ಮೋಕ್ಷಸಾಧನೆ ಪೂರ್ತಿಯಾಗುವುದೇ ಹೊರತು ಬೇರೇನಲ್ಲ ಹೀಗೆ ಬಲಿತಾಗ ಲಯ ಮಾಡುತ್ತಾನೆ ಬಲಿತ ಕುರಿಯನ್ನು ಕಡಿದು ತಿಂದರೆ ಕಟುಕನಿಗೆ ಹೇಗೆ ತೃಪ್ತಿಯೋ ಹಾಗೇ ಮೋಕ್ಷಸಾಧನೆ ಪೂರ್ತಿ ಮಾಡಿಕೊಂಡ ಜೀವರನ್ನು ಲಯಗೈದು ಮೋಕ್ಷ ನೀಡಿದಾಗ ಹರಿಗೆ 'ತೃಪ್ತಿ', ಲಯ ಮಾಡುವಾಗಲೂ ಸವಿಕಾಣುವ ಲೀಲೆ, ಹೊರತು, ಭಕ್ತರನ್ನು ಸಲಹಿದ್ದರಿಂದ ಸುಖ ಬರುವುದಿಲ್ಲ, ಲಯ ಮಾಡಿದ್ದರಿಂದ ದುಃಖವೂ ಇಲ್ಲ 'ಲಕುಮೀರಮಣ' ತಾನೆ! ಸಕಲ ಸೌಭಾಗ್ಯಸಮೃದ್ಧಿಯ ಅಧಿದೇವತೆಯಾದ ಮಹಾಲಕ್ಷ್ಮಿಗೇ ಸುಖವನ್ನು ನೀಡುವವ, 'ರಮಣ'

**ವೇಷ ಭಾಷೆಗಳಿಂದ ಜನರ ಪ್ರ**
**மோಷ ಗೈಸುವ ನಟ ಪುರುಷನೋಲ್**
**ದೋಷದೂರನು ಲೋಕದೊಳು ಬಹುರೂಪ ಮಾತಿಸಲಿ।**

**ತೋಷಿಸುವನವರವರ ಮನದಭಿ**
**ಲಾಷೆಗಳ ಪೂರೈಸುತನುದಿನ**
**ಪೋಷಿಸುವ ಪೂತಾತ್ಮ ಪೂರ್ಣಾನಂದ ಜ್ಞಾನಮಯ ॥ ೨೯ ॥**

ವೇಷ ಮತ್ತು ಭಾಷೆಗಳಿಂದ ಜನರನ್ನು ಮೈಮರೆಸುವ ನಟಪುರುಷನಂತೆ ದೋಷ ದೂರ ಪೂತಾತ್ಮ ಪೂರ್ಣಾನಂದ ಜ್ಞಾನಮಯನಾದ ಶ್ರೀಹರಿಯೂ ಲೋಕದಲ್ಲಿ ಬಹುರೂಪ ಮಾತುಗಳಿಂದ ಅನುದಿನ ಅವರವರ ಮನದ ಅಭಿಲಾಷೆಗಳನ್ನು ಪೂರೈಸುತ್ತ ಸಂತೋಷಗೊಳಿಸುತ್ತಾನೆ, ಪೋಷಿಸುತ್ತಾನೆ

ಬಹುರೂಪಗಳೆಂದರೆ ರಾಮಕೃಷ್ಣಾದಿ ಅವತಾರ ರೂಪಗಳಲ್ಲ ವ್ಯಾಪ್ತಿಸಂಧಿಯಲ್ಲಿ ಎಲ್ಲರೊಳಗೆ ಬಿಂಬರೂಪದಿಂದ ವ್ಯಾಪ್ತವಾದ ಬಹುರೂಪಗಳನ್ನಿಟ್ಟುಕೊಳ್ಳಬೇಕು ಎಲ್ಲ ಚೇತನರೊಳಗೆ ಪರಮಚೇತನನಾದ ಶ್ರೀಹರಿ ವ್ಯಾಪ್ತನಾಗಿದ್ದು ರಮಾ ಬ್ರಹ್ಮಾದಿ ಗಳಿಗೂ ಮೋಹಕವಾದ ತನ್ನ ಮಾಯಾಶಕ್ತಿಯಿಂದ ಅವರವರ ಮನದ ಅಭಿಲಾಷೆಗಳನ್ನು ಪೂರೈಸುತ್ತ ಅವರನ್ನು ಸಂತೋಷಗೊಳಿಸುತ್ತಾನೆ ಮತ್ತು ಪೋಷಿಸುತ್ತಾನೆ ತಾನು ಮಾತ್ರ ದೋಷದೂರನಾದ್ದರಿಂದ ನಿರ್ಲಿಪ್ತನಾಗಿದ್ದು ಪವಿತ್ರವಾದ ಸ್ವರೂಪಭೂತವಾದ ಪೂರ್ಣಾನಂದವನ್ನೆ ಅನುಭವಿಸುತ್ತ ಜ್ಞಾನಮಯನಾಗಿಯೆ ಇರುತ್ತಾನೆ ಅವನನ್ನು ಯಾರೂ ತೋಷಿಸಬೇಕಾಗಿಲ್ಲ, ಪೋಷಿಸಬೇಕಾಗಿಲ್ಲ

**ವೇಷ ಭಾಷೆಗಳಿಂದ**

ನಾಟಕದಲ್ಲಿ ಪ್ರೇಕ್ಷಕರನ್ನು ಪ್ರಮೋಷಗೈಸಲು, ವಂಚಿಸಲು, ಅಂದರೆ ಮೈಮರೆಸಲು ನಟಪುರುಷ ಒಳ್ಳೆಯ ಅಭಿನಯ ಮಾಡಬೇಕಾಗುತ್ತದೆ ಅಭಿನಯವೆಂದರೆ ಕೇವಲ ಕಣ್ಣು ಕೈಕಾಲುಗಳ ಚಲನೆಯಲ್ಲ ಅದು ಒಂದು ಬಗೆಯ ಅಭಿನಯ ಇದನ್ನು ಆಂಗಿಕ ಅಭಿನಯವೆನ್ನುತ್ತಾರೆ ಉಚಿತವಾದ ಬಣ್ಣ ಉಡುಪುಗಳ ಸುಂದರ ವೇಷ ತೊಡುವುದೂ ಆಹಾರ್ಯ ಅಭಿನಯವೆನಿಸುತ್ತದೆ ಆಯಾ ಬಾವಗಳಿಗೆ ಅನುಗುಣವಾದ ರಸವತ್ತಾದ ಮಾತುಗಳು ವಾಚಿಕ ಅಭಿನಯವೆನಿಸುತ್ತದೆ ಉದಾ ಶ್ರೀರಾಮನ ಪಾತ್ರಕ್ಕೆ ಉಚಿತವಾದ ಮೇಘಶ್ಯಾಮವರ್ಣ ವಲ್ಕಲ ಜಟಾ ಧನುರ್ಬಾಣಗಳನ್ನು ಧರಿಸಿ 'ಹಾ ಸೀತೇ' ಎಂದು ದುಃಖಿತನಂತೆ ವಿಲಾಪ ಮಾಡುತ್ತ ಸೀತಾನ್ವೇಷಣವನ್ನು ನಟ ಅಭಿನಯಿಸುತ್ತಾನೆ ಆಗ ವಿಷಾದ ಔತ್ಸುಕ್ಯ ರೋಮಾಂಚ ಮೈನಡುಕ ಮುಂತಾದ ಸಾತ್ವಿಕ ಭಾವಗಳನ್ನು ತೋರುವ ಅಭಿನಯ ಮಾಡುತ್ತಾನೆ ಇದು ಸಾತ್ವಿಕ ಅಭಿನಯವೆನಿಸುತ್ತದೆ ದಾಸರಾಯರು 'ವೇಷ' ಎಂದು ಆಹಾರ್ಯಾಭಿನಯವನ್ನೂ 'ಭಾಷೆ' ಎಂದು ವಾಚಿಕಾಭಿನಯವನ್ನೂ ಸ್ಪಷ್ಟ ಹೇಳಿ, ಆಂಗಿಕ ಸಾತ್ವಿಕ ಅಭಿನಯಗಳನ್ನು ಉಪಲಕ್ಷಣವಾಗಿ ಹೇಳಿದ್ದಾರೆ

**ಪ್ರಮೋಷಗೈಸುವ**

ನಾಟಕದಲ್ಲಿ ನಟಪುರುಷಪ್ರೇಕ್ಷಕನಿಗೆ ಪ್ರಮೋಷಗೈಸುತ್ತಾನೆ, ಅಂದರೆ ತನ್ನ ನಿಜವ್ಯಕ್ತಿತ್ವವನ್ನು ಮರೆಮಾಡಿ ರಾಮನ ವ್ಯಕ್ತಿತ್ವವನ್ನೇ ಪ್ರದರ್ಶಿಸುತ್ತಾನೆ ಅವನ ಅಭಿನಯದ ಮೋಡಿಗ ಪ್ರೇಕ್ಷಕ ಮೈಮರೆತು ತನ್ಮಯನಾಗಿ ತನಗರಿವಿಲ್ಲದಂತೆ ದುಃಖ ಲೇಶವಿಲ್ಲದ ಆನಂದಮಯವಾದ ಅಲೌಕಿಕ ಕಾವ್ಯಾನಂದದ ರಸಭಾವ ಪ್ರಪಂಚದಲ್ಲಿ ಲೀನನಾಗುತ್ತಾನೆ ಹೀಗೆ ದಕ್ಷನಾದ ನಟ ತನ್ನ ನಾಲ್ಕು ಬಗೆಯ ಅಭಿನಯ ಕೌಶಲದಿಂದ ಸಹೃದಯನಿಗೆ ಮೋಡಿ ಮಾಡುವುದನ್ನು 'ಪ್ರಮೋಷ' ಗೈಸುವ ಎಂಬ ಶಬ್ದದಿಂದ ಹೇಳಲಾಗಿದೆ

**ಬಹುರೂಪ ಮಾತಿನಲಿ**

ಈ ಚೇತನಾಚೇತನ ಪ್ರಪಂಚದೊಳಗಿರುವ ಶ್ರೀಹರಿಗೆ ಎಲ್ಲ ಪ್ರಪಂಚವೂ ಬಾಹ್ಯ ವೇಷ. ಎಲ್ಲರಾಡುವ ಮಾತು ಅವನ ಮಾತಿನ ಬಾಹ್ಯ ವೇಷ. ಎಲ್ಲರ ಮಾತು ಅರ್ಥ ವತ್ತಾಗುವುದು ಬೋಧಕವಾಗುವುದು ಅದರೊಳಗಿರುವ ಭಗವಂತನ ಮಾತಿನಿಂದ ಹೀಗೆ ಶ್ರೀಹರಿ ಬಹುವಾದ ರೂಪಗಳಿಂದ, ಮಾತುಗಳಿಂದ ಜಗತ್ತನ್ನೇ ಒಂದು ನಾಟಕ ವನ್ನಾಗಿಸುತ್ತಾನೆ ಪ್ರೇಕ್ಷಕರು ಜ್ಞಾನಿಗಳಾದ ಸಹೃದಯರಾದ ರಮಾಬ್ರಹ್ಮಾದಿಗಳು ಮತ್ತು ಅಜ್ಞಾನಿಗಳಾದ ಇತರ ಚೇತನರೂ ಕೂಡ

ಬಹುರೂಪಗಳೆಂದರೆ ಅದರ ಕಲ್ಪನೆ ಬರಬೇಕಾದರೆ ಎಂಬತ್ತನಾಲ್ಕು ಲಕ್ಷಯೋನಿ ಗಳನ್ನೂ ಪ್ರತಿಯೋನಿಯಲ್ಲಿಯೂ ಇರುವ ಅಸಂಖ್ಯ ವೈಚಿತ್ರ್ಯಗಳನ್ನೂ ಆಲೋಚಿಸಬೇಕು.

ಜಲಜಾ ನವ ಲಕ್ಷಾಣಿ, ಸ್ಥಾವರಾ ಲಕ್ಷವಿಂಶತಿಃ।
ಕ್ರಿಮಯೋ ರುದ್ರಸಂಖ್ಯಾಕಾಃ, ಪಕ್ಷಿಣಾಂ ದಶಲಕ್ಷಕಂ।
ತ್ರಿಂಶಲ್ಲಕ್ಷಾಣಿ ಪಶವಃ, ಚತುರ್ಲಕ್ಷಾಣಿ ಮಾನುಷಾಃ॥

ಎಂದು ವಿಷ್ಣುಪುರಾಣ ಹೇಳಿದಂತೆ ಜಲಚರ ಪ್ರಾಣಿಗಳಲ್ಲಿ ಒಂಭತ್ತು ಲಕ್ಷ ಜಾತಿ ಗಳಿವೆ ಮರಗಿಡಗಳಲ್ಲಿ ಇಪ್ಪತ್ತು ಲಕ್ಷ, ಕ್ರಿಮಿಗಳಲ್ಲಿ ಹನ್ನೊಂದು ಲಕ್ಷ, ಪಕ್ಷಿಗಳಲ್ಲಿ ಹತ್ತು ಲಕ್ಷ, ಪಶುಗಳಲ್ಲಿ ಮೂವತ್ತು ಲಕ್ಷ ಮತ್ತು ಮನುಷ್ಯರಲ್ಲಿ ನಾಲ್ಕು ಲಕ್ಷ ಜಾತಿಗಳುಂಟು ಒಂದೊಂದು ಜಾತಿಯಲ್ಲಿಯೂ ಅಪಾರ ವೈವಿಧ್ಯ ಉಂಟು ಎಲ್ಲವೂ ಭಗವಂತನು ತೊಟ್ಟ ಬಹುರೂಪಗಳು ವೇಷಗಳು ಎಲ್ಲರಾಡುವ ಮಾತು ಅವನ ಭಾಷೆಗಳು ಮೂಕ ಪ್ರಾಣಿಗಳಿಗೂ ಕಣ್ಣಿನ ಭಾಷೆ ಇದೆ ಅಂಗಚೇಷ್ಟೆಯ ಭಾಷೆಗಳಿವೆ ಮರಗಿಡಗಳೂ ಬಹು ರೂಪ ಮಾತುಗಳಿಗೆ ಮಾರು ಹೋಗುತ್ತವೆ ಎಂದು ಶ್ರೀಮಧ್ವಾಚಾರ್ಯರು ತೋರಿಸಿ ಕೊಟ್ಟಿದ್ದಾರೆ ಗೋವೆಯಲ್ಲಿ ಜನತೆಯ ಪ್ರಾರ್ಥನೆಯ ಮೇರೆಗೆ ಬರಗಾಲದಲ್ಲಿ ಒಣಗಿ ಹೋಗಿದ್ದ ಮರಗಿಡಗಳನ್ನು ಸಂಗೀತರಸಸೇಚನೆಯಿಂದ ಚಿಗುರಿಸಿ ಹೂ ಹಣ್ಣು ಬರಿಸಿದ್ದಾರೆ ಇದೇನೂ ಬರೀ ಪವಾಡವಲ್ಲ 'ಗೀತಾತ್ ಪುಷ್ಪಫಲಾವಾಪ್ತಿಃ' ಎಂದು ಅನುವ್ಯಾಖ್ಯಾನದಲ್ಲಿ ಸ್ಥಾವರಜಂತುಗಳೂ ಸಂಗೀತರಸವನ್ನು ಸವಿಯಬಲ್ಲವು ಎಂದಿದ್ದಾರೆ, ಶ್ರೀಮಧ್ವಾಚಾರ್ಯರು

ಪ್ರಯೋಗರತ್ನಾವಲಿ ಎಂಬ ಗ್ರಂಥದಲ್ಲಿ ಮರಗಿಡಗಳಿಗೆ ಅಕಾಲದಲ್ಲಿ ಫಲಪುಷ್ಪ ತರಲು ದೋಹದ ವಿಧಾನವನ್ನು ಹೇಳಿದ್ದಾರೆ ಅಲಂಕೃತಳಾದ ಸ್ತ್ರೀ ಗೆಜ್ಜೆ ಕಟ್ಟಿದ ಹೂವಿನಂಥ ಮೃದುವಾದ ಪಾದದಿಂದ ತುಳಿದರೆ ಅಶೋಕವೃಕ್ಷ ತಕ್ಷಣ ಹೂ ಬಿಡುತ್ತದೆ ಇದೇ ರೀತಿ ಬೇರೆ ಬೇರೆ ಹೂ ಹಣ್ಣುಗಳ ಗಿಡಗಳಿಗೆ ದೋಹದಗಳನ್ನು ಹೇಳಿದ್ದಾರೆ ಅಲಂಕೃತವಾದ ಮಲ್ಲಿಗೆ ಬಳ್ಳಿಯನ್ನು ಮಾವಿನ ಮರಕ್ಕೆ ಮದುವೆ ಮಾಡುವ ವಿಧಾನ ದಿಂದಲೂ ಹೂಗಳನ್ನು ಪಡೆಯಬಹುದು ಎಂದಿದ್ದಾರೆ-

ವಿವಾಹಮಂಗಲಾಚಾರಾ ಗೀತನೇಪಥ್ಯಸಂಯುತಾ।
ವೃಕ್ಷೇಣೋದ್ವಾಹಿತಾ ಶ್ಯಾಮಾ ಜಾಯತೇ ಕುಸುಮಾನ್ವಿತಾ॥

**ಅವರವರ ಮನದಭಿಲಾಷೆಗಳ ಪೂರೈಸುತ :**

ಮರಗಿಡಗಳಿಗೇ ಹೀಗೆಂದ ಮೇಲೆ ಜಂಗಮಪ್ರಾಣಿಗಳಿಗಿನ್ನೇನು? ಮನುಷ್ಯ ರಿಗಿನ್ನೇನು? ಅವರವರ ಎಲ್ಲ ಮನದಭಿಲಾಷೆಗಳನ್ನು ಹರಿ ಪೂರೈಸುತ್ತಾನೆ

ಸ್ವರೂಪೇಂದ್ರಿಯಸಂಮ್ಮಿಶ್ರೈರ್ಜಡೈರೇವೇಂದ್ರಿಯೈಃ ಸದಾ।
ಆಮೋಕ್ಷಂ ತು ಪ್ರವರ್ತಂತೇ ॥

ಎಂದು ಸತ್ತತ್ವರತ್ನಮಾಲೆ ಹೇಳುವಂತೆ ಜೀವರಿಗೆ ಬಾಹ್ಯ ಜಡಶರೀರ ಮನಸ್ಸು ಇಂದ್ರಿಯಗಳು ಇದ್ದರೆ ಮಾತ್ರ ಪ್ರಪಂಚಜ್ಞಾನ ವ್ಯವಹಾರಗಳು ಸಾಧ್ಯ ಅದರಂತೆ ಅವರೊಳಗೆ ಪ್ರೇರಕನಾದ ಶ್ರೀಹರಿಯ ಸ್ವರೂಪೇಂದ್ರಿಯಶರೀರಮನಸ್ಸುಗಳೂ ಇರಬೇಕು ಹೀಗಾಗಿ ಎಲ್ಲಕ್ಕಿಂತ ಒಳಗೆ ಶ್ರೀಹರಿಯ ಇಂದ್ರಿಯಗಳು ಅವುಗಳಿಗೆ ಹೊರಗೆ ಜೀವಸ್ವರೂಪೇಂದ್ರಿಯ ಗಳು ಇನ್ನೂ ಹೊರಗೆ ಜಡ ಇಂದ್ರಿಯಗಳು ಹರಿಯೆ ಜೀವಸ್ವರೂಪೇಂದ್ರಿಯ ಜಡ ಇಂದ್ರಿಯ ಶರೀರಗಳ ವೇಷತೊಟ್ಟು ಎಲ್ಲರಿಗೂ ಪ್ರಿಯವಾದ ಎಲ್ಲ ವ್ಯವಹಾರಗಳನ್ನು ಮಾಡಿ ಮಾಡಿಸುತ್ತಾನೆ ಅಥವಾ-

ಯಥಾ ಪ್ರವಿಷ್ಟಃ ಕುರುತೇ ಪುಮಾನ್ ದಾರುಮಯಾಕೃತೌ।
ಚೇಷ್ಟಾಂ ತದಂಗಸಂಶ್ಲಿಷ್ಟೈಃ ಸ್ವಾಂಗೈಸ್ತದ್ವತ್ ಸ್ವಯಂ ಹರಿಃ॥

ಎಂಬಂತೆ ನಾನಾ ಬಗೆಯ ತಟ್ಟಿರಾಯ, ಬೆಚ್ಚಪ್ಪ ಆಕೃತಿಯ ಗೂಡುಗಳನ್ನು ಧರಿಸಿ ನಟರು ಕುಣಿವಂತೆ ಹರಿ ಕುಣಿಯುತ್ತಾನೆ, 'ಒಬ್ಬನಲಿ ನಿಂತಾಡುವನು ಮತ್ತೊಬ್ಬನಲಿ ನೋಡುವನು' ಎಂದು ಹಿಂದೆ ಹೇಳಿದಂತೆ

**ತೋಷಿಸುವನು**

'ಬಹುರೂಪ' ಗಳೆಂದರೆ ಪತಿ ಪತ್ನೀ ಪುತ್ರಾದಿರೂಪಗಳನ್ನು ಇಟ್ಟುಕೊಳ್ಳಬೇಕು ಗೃಹಸ್ಥನ ಅಂತರ್ಯಾಮಿಯಾಗಿ ಗೃಹಸ್ಥರೂಪದಿಂದ ವಿಷ್ಣು ಯಜ್ಞಗಳಿಂದ ದೇವತೆಗಳನ್ನೂ

ವೇದಾಧ್ಯಯನದಿಂದ ಋಷಿಗಳನ್ನೂ ಶ್ರಾದ್ಧಗಳಿಂದ ಪಿತೃಗಳನ್ನೂ ಅನ್ನದಾನದಿಂದ ಮನುಷ್ಯಪ್ರಾಣಿಗಳನ್ನೂ ಸಂತೋಷಗೊಳಿಸುತ್ತ ಅವರಿಗೆ ಆಶ್ರಯ ನಾಗಿದ್ದಾನೆ ಈ ಅನುಸಂಧಾನವುಳ್ಳ ಗೃಹಸ್ಥನಿಗೆ ಎಂದೂ ಅನಿಷ್ಟ ಬಾರದಿರಲೆಂದು ದೇವತೆಗಳು ವಿಷ್ಣುವನ್ನು ಬೇಡುತ್ತಾರೆ ಬೃಹದ್ಭಾಷ್ಯದಲ್ಲಿ ಹಾಗೆ ಹೇಳಿದೆ-

ಗೃಹಸ್ಥಾಂತರ್ಗತೋ ವಿಷ್ಣುರ್ಯಜ್ಞೈರ್ದೇವಾಶ್ರಯೋ ಭವೇತ್।
ತಸ್ಮಾವಿನಾಶಮಿಚ್ಛಂತಿ ಸ್ವಾಶ್ರಯಸ್ಯ ಯಥಾ ಸುರಾಃ॥

'ಪತ್ನಿಗೆ ಪ್ರಿಯನಾಗಬೇಕೆಂದು ಪತಿಯ ಇಚ್ಛೆಯಿಂದ ಪತ್ನಿಗೆ ಪತಿ ಪ್ರಿಯ ನಾಗುವುದಿಲ್ಲ, ಪತ್ಯಂತರ್ಗತ ಪತಿರೂಪನಾದ ಶ್ರೀಹರಿಯ ಇಚ್ಛೆಯಿಂದ ಪತಿ ಪತ್ನಿಗೆ ಪ್ರಿಯನಾಗುತ್ತಾನೆ ಪತಿಗೆ ಪ್ರಿಯಳಾಗಬೇಕೆಂದು ಪತ್ನಿಯ ಇಚ್ಛೆಯಿಂದ ಪತ್ನಿ ಪತಿಗೆ ಪ್ರಿಯಳಾಗುವುದಿಲ್ಲ, ಪತ್ನ್ಯಂತರ್ಗತ ಪತ್ನೀರೂಪನಾದ ಶ್ರೀಹರಿಯ ಇಚ್ಛೆಯಿಂದ ಪತ್ನಿ ಪತಿಗೆ ಪ್ರಿಯಳಾಗುತ್ತಾಳೆ ಮಕ್ಕಳ ಇಚ್ಛೆಯಿಂದ ಮಕ್ಕಳು ಪ್ರಿಯರಾಗುವುದಿಲ್ಲ, ಮಕ್ಕಳೊಳಗಿರುವ ಮಕ್ಕಳರೂಪದ ಶ್ರೀಹರಿಯ ಇಚ್ಛೆಯಿಂದ ಮಕ್ಕಳು ಪ್ರಿಯರಾಗು ತ್ತಾರೆ' - ಎನ್ನುತ್ತದೆ ಬೃಹದಾರಣ್ಯಕೋಪನಿಷತ್ತು-

ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ।
ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ॥
ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ।
ಆತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವಂತಿ॥

**ಪೋಷಿಸುವ ಪೂತಾತ್ಮ, ಪೂರ್ಣಾನಂದ, ಜ್ಞಾನಮಯ :**

ಯದ್ಯಪಿ ಬಾಹ್ಯ ಶರೀರೇಂದ್ರಿಯ ಗಳ ಮೂಲಕ ಶ್ರೀಹರಿ ಹೇಗೆ ಸಂತೋಷ ನೀಡುವನೋ ಹಾಗೇ ಜೀವರೂ ಕೂಡ ಆದರೆ ಅದರ ಅರಿವು ಅವರಿಗೇ ಇಲ್ಲ ಕೋಗಿಲೆ ತಾನು ಎಷ್ಟು ಚೆನ್ನಾಗಿ ಹಾಡುತ್ತಿದ್ದೇನೆ ಎಂದು ತಾನು ತಿಳಿಯದು ನವಿಲು ಎಷ್ಟು ಸುಂದರವಾಗಿ ತಾನು ಕುಣಿಯುತ್ತಿದ್ದೇನೆ ಎಂದು ತಾನು ತಿಳಿಯದು ಹಾಗೇ ಮಾನವರೂ ಕೂಡ ಕೆಲವೊಮ್ಮೆ ತಾವು ಸುಂದರರೆಂದು ಅಭಿಮಾನ ಪಡುವುದುಂಟು ಆದರೆ ಸೌಂದರ್ಯವಿರುವುದಿಲ್ಲ ಇದ್ದರೂ ಅದು ಪ್ರಿಯರನ್ನು ಆಕರ್ಷಿಸುವುದಿಲ್ಲ. ಇಲ್ಲದಿದ್ದರೂ ಪ್ರಿಯರು ಆಕರ್ಷಿತರಾಗುತ್ತಾರೆ ಶ್ರೀಹರಿಯೇ ಎಲ್ಲ ತಿಳಿದು ತೋಷಿಸುತ್ತಾನೆ, ಆಕರ್ಷಿಸುತ್ತಾನೆ, ಪೋಷಿಸುತ್ತಾನೆ ಏಕೆಂದರೆ ಅವನು ಪೂತಾತ್ಮ ಅಪವಿತ್ರ ಜಡಶರೀರವಿಲ್ಲದವ ಅಜ್ಞಾನರಹಿತ ದೋಷದೂರ ಅದರಿಂದಲೇ ಆತ ಪೂರ್ಣಾನಂದ ಮತ್ತು ಜ್ಞಾನಮಯ, ಅಥವಾ ಪೂರ್ಣವಾದ ಆನಂದ ಜ್ಞಾನಸ್ವರೂಪ ಅವನನ್ನು ಯಾರೂ ತೋಷಿಸುವುದು ಬೇಡ ಪೋಷಿಸುವುದೂ ಬೇಡ

**ಅಧಮ ಮಾನವನೋರ್ವ ಮಂತ್ರೌ-**
**ಷಧಗಳನು ತಾನರಿತು ಪಾವಕ ಉದಕಗಳ**
**ಸಂಬಂಧವಿಲ್ಲದೆ ಇಪ್ಪನದರೊಳಗೆ ।**
**ಪದುಮಜಾಂಡೋದರನು ಸರ್ವರ**
**ಹೃದಯದೊಳಗಿರೆ ಕಾಲ ಗುಣ ಕ-**
**ರ್ಮದ ಕಲುಷ ಸಂಬಂಧವಾಗುವುದೇ ನಿರಂಜನಗೆ ॥ ೩೦ ॥**

ಅಧಮನಾದ ಒಬ್ಬ ಮಾನವನೂ ಕೂಡ ಮಂತ್ರ ಔಷಧಗಳನ್ನು ತಾನು ಅರಿತು ಬೆಂಕಿ ನೀರುಗಳ ಸಂಬಂಧವಿಲ್ಲದೆ ಅದರೊಳಗೇ ಇರುತ್ತಾನೆ ಬ್ರಹ್ಮಾಂಡವನ್ನು ಉದರದಲ್ಲಿ ಇಟ್ಟುಕೊಂಡ ಭಗವಂತ ಎಲ್ಲರ ಹೃದಯದಲ್ಲಿ ಇದ್ದರೆ ನಿರ್ದೋಷನಾದ ಆತನಿಗೆ ಕಾಲ ಗುಣ ಕರ್ಮಗಳ ದುಷ್ಪರಿಣಾಮಗಳ ಲೇಪವಾಗುವುದೇ?

ಕರ್ಮಲೇಪವುಳ್ಳ ಜೀವರೊಳಗೆ ವ್ಯಾಪ್ತನಾಗಿದ್ದು ತಾನೂ ಕರ್ಮಮಾಡುತ್ತ ಜೀವ ರಿಂದಲೂ ಮಾಡಿಸುತ್ತ ಪಾನ ಮಾಡುವ ಶ್ರೀಹರಿಗೆ ಆ ಕರ್ಮಗಳ ಲೇಪ ಏಕೆ ಆಗುವು ದಿಲ್ಲ? ಸರ್ವಶಕ್ತನಾದ್ದರಿಂದ ಎಂದು ತಟ್ಟನೆ ಉತ್ತರ ನೀಡಬಹುದು ಬ್ರಹ್ಮಾಂಡವನ್ನು ಉದರದಲ್ಲಿಟ್ಟುಕೊಂಡವನೆಂದ ಮೇಲೆ ಸರ್ವಶಕ್ತನೆ ತಾನೆ ಎಂದು ಆದರೆ ಕರ್ಮವನ್ನು ಮಾಡಿ ಮಾಡಿಸುವಂತೆ ಅದರ ಫಲವನ್ನೂ ಉಂಡು ಉಣಿಸುತ್ತಾನೆ ಶ್ರೀಹರಿ ಆತ ಬಿಂಬ ಬಿಂಬ ಕ್ರಿಯಾಧೀನ ಪ್ರತಿಬಿಂಬ ಕ್ರಿಯೆ ಅದರಿಂದ ಅವನಿಗೂ ಕರ್ಮಲೇಪವಾಗಲೇ ಬೇಕು ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ

**ಅಧಮಮಾನವ**

ಅಧಮ ಮಾನವನೆಂದರೆ ದುಷ್ಟ ನೀಚ ಮನುಷ್ಯನೆಂದು ಇಲ್ಲಿ ವಿವಕ್ಷಿತವಲ್ಲ ಅತಿ ಅಶಕ್ತನಾದ ಅಲ್ಪ ಮನುಷ್ಯ ಎಂದರ್ಥ ದೇವತೆಗಳಿಗೆ ಯೋಗಸಿದ್ಧಿ ಇರುವುದರಿಂದ ಅವರು ಕರ್ಮಜನ್ಯವಾದ ದುಃಖಫಲವನ್ನು ಪರಿಹರಿಸಿಕೊಳ್ಳಬಲ್ಲರು ಅಲ್ಪ ಮಾನವನಿಗೆ ಯೋಗಬಲವಿಲ್ಲ ಅವನೂ ಕೂಡ ಮಂತ್ರ ಔಷಧಗಳ ಬಲದಿಂದ ನೀರು ಬೆಂಕಿಗಳ ಸಂಪರ್ಕವಾಗದಂತೆ ಅವುಗಳ ಒಳಗೇ ಇರಬಲ್ಲ ಮಂತ್ರಬಲದಿಂದಾಗಲಿ ಕೆಲವು ವನಸ್ಪತಿ ಗಳ ರಸಲೇಪದಿಂದಾಗಲಿ ಬೆಂಕಿಯನ್ನು ಕೈಯಲ್ಲಿ ಹಿಡಿಯುವುದು, ಬಾಯೊಳಗೆ ಕೆಂಡ ವನ್ನು ಹಾಕಿಕೊಂಡು ಚಮತ್ಕಾರ ತೋರುವುದು, ನೀರ ಮೇಲೆ ನಡೆಯುವುದು ಮುಂತಾದವನ್ನು ಮಾಡಬಲ್ಲ

**ಪಾವಕ ಉದಕಗಳ ಸಂಬಂಧವಿಲ್ಲದೆ**

ದೇವತೆಗಳೂ ಋಷಿಗಳೂ ಯೋಗಸಿದ್ಧರಾದ ಮನುಷ್ಯೋತ್ತಮರೂ ಇಂಧ

ಚಮತ್ಕಾರಗಳನ್ನು ಸುಲಭವಾಗಿ ಮಾಡಬಲ್ಲರು ಅಷ್ಟಸಿದ್ಧಿಗಳೂ ಅಷ್ಟಾದಶ ಸಿದ್ಧಿಗಳೂ ಇವರಿಗೆ ಲಭಿಸಿರುತ್ತವೆ ಅಣಿಮ ಮಹಿಮ ಮುಂತಾದ ಎಂಟು ಸಿದ್ಧಿಗಳು ಅಷ್ಟಸಿದ್ಧಿ ಎನಿಸುತ್ತವೆ ಅಗ್ನಿಸ್ತಂಭ ಜಲಸ್ತಂಭ ಮುಂತಾದ ಹದಿನೆಂಟು ಸಿದ್ಧಿಗಳು ಅಷ್ಟಾದಶಸಿದ್ಧಿ ಗಳೆನಿಸುತ್ತವೆ ಉದಾಹರಣೆಗೆ ಶ್ರೀಮದಾಚಾರ್ಯರು ಬದರಿಯಾತ್ರೆಯ ಸಂದರ್ಭದಲ್ಲಿ ದೋಣಿ ಇಲ್ಲದೆ ಈಜಿಯೆ ಗಂಗಾನದಿಯನ್ನು ದಾಟಿದರು ಅವರ ಮೈಮೇಲಿದ್ದ ಕಾವಿ ಬಟ್ಟೆ ಒದ್ದೆಯಾಗಲಿಲ್ಲ ಭೀಮಸೇನ ಪ್ರಮಾಣಕೋಟಿ ಎಂಬ ಗಂಗೆಯ ಮಡುವಿನಲ್ಲಿ ಮುಳುಗಿ ಪಾತಾಳದಲ್ಲಿ ಅಮೃತಪಾನ ಮಾಡಿ ಬಂದ ಹನುಮಂತನ ಬಾಲಕ್ಕೆ ಬೆಂಕಿ ಹಚ್ಚಿದರೂ ಬಾಲದ ಒಂದು ರೋಮವೂ ಸುಡಲಿಲ್ಲ

**ಮಂತ್ರೌಷಧಗಳನು ತಾನರಿತು**

ದುರ್ಯೋಧನನೂ ಜಲಸ್ತಂಭ ಮಾಡಿ ದ್ವೈಪಾಯನ ಸರೋವರದೊಳಗೆ ಅವಿತು ಕುಳಿತ ಇದು ಯೋಗಬಲವಲ್ಲ ಅಸುರರಿಗೆ ಯೋಗಬಲವಿಲ್ಲ, ವರಬಲವಿರುತ್ತದೆ, ಮಂತ್ರ ಔಷಧಗಳ ಬಲವಿರುತ್ತದೆ ದುರ್ಯೋಧನನಿಗೆ ದುರ್ವಾಸರು ಮೂರು ಸಾವಿರ ಮಂತ್ರಗಳನ್ನು ಉಪದೇಶಿಸಿದ್ದರು. ಅವನು ಅಧಮ ಮಾನವ. ಮಾನವನಾಗಿ ಹುಟ್ಟಿದ ಅಧಮ ಜೀವ ಇದೇ ರೀತಿ ಅಧಮ ಮಾನವ ಭೂತಪಿಶಾಚಾದಿಗಳ ದುರ್ಮಂತ್ರ ಬಲದಿಂದ ಅಗ್ನಿಸ್ತಂಭ ಜಲಸ್ತಂಭದಂಥ ಚಮತ್ಕಾರಗಳನ್ನು ಮಾಡಿ ತೋರಬಹುದು

**ಕಾಲಗುಣ ಕರ್ಮದ ಕಲುಷ**

ಕಾಲಗುಣವೆಂದರೆ ಗ್ರೀಷ್ಮ ವರ್ಷ ಮುಂತಾದ ಕಾಲಗಳ ಬಿಸಿಲು ಮಳೆ ಮುಂತಾದ ಗುಣಗಳು, ಕರ್ಮವೆಂದರೆ ತ್ರಿಕರಣದಿಂದಾಗುವ ಚಟುವಟಿಕೆಗಳೆಂದೂ ಅವುಗಳ ಕಲುಷವೆಂದರೆ ಶೀತೋಷ್ಣಸುಖದುಃಖಾದಿರೂಪವಾದ ಅನಿಷ್ಟಫಲಗಳೆಂದೂ ಇಟ್ಟು ಕೊಳ್ಳಬಹುದು ಅಥವಾ ಕಾಲಕೃತ ಕಲುಷವೆಂದರೆ ಜನನ ಮರಣ ಜರಾರೋಗಾದಿಗಳು ಗುಣಕೃತಕಲುಷವೆಂದರೆ ತ್ರಿಗುಣಜನ್ಯವಾದ ದೈಹಿಕ ಮಾನಸಿಕ ವಿಕಾರಗಳು ಕರ್ಮಕೃತ ಕಲುಷವೆಂದರೆ ಪುಣ್ಯಪಾಪಗಳಿಂದಾಗುವ ಲಾಭಾಲಾಭ ಜಯಾಜಯ ಶೀತೋಷ್ಣಾದಿದ್ವಂದ್ವಗಳಿಂದ ದೈಹಿಕ ಮಾನಸಿಕ ಹಿಂಸೆಗಳು

**ಸಂಬಂಧವಾಗದೆ**

ಈ ಕಾಲ ಗುಣ ಕರ್ಮದ ಕಲುಷಗಳು ಜೀವನಿಗಾಗುವಾಗ ಅವನೊಳಗಿರುವ ಭಗವಂತನಿಗೆ ಅವುಗಳ ಸಂಪರ್ಕವಾಗದಿರುತ್ತದೆಯೆ? ಅನ್ನ ಬೇಯಿಸಲು ಒಲೆಯ ಮೇಲಿಟ್ಟಾಗ ಮೊದಲಿಗೆ ಪಾತ್ರೆ ಬಿಸಿಯಾಗುತ್ತದೆ ಅದರಿಂದ ನೀರು ಕುದಿಯುತ್ತದೆ ಅದರಿಂದ ನೀರೊಳಗಿರುವ ಅಕ್ಕಿಕಾಳು ಬೇಯುತ್ತದೆ

ಸ್ಥಾಲ್ಯಗ್ನಿತಾಪಾತ್ ಪಯಸೋಽಭಿತಾಪಃ ತತ್ತಾಪತಸ್ತಂಡುಲಗರ್ಭರಂಧಿಃ

-(ಭಾಗವತ 5- 10- 33)

ಜೀವನ ಶರೀರ ಪಾತ್ರೆಯಂತೆ ಅದರೊಳಗಿರುವ ಜೀವಾತ್ಮ ನೀರಿನಂತೆ ಜೀವಾತ್ಮನೊಳಗಿರುವ ಪರಮಾತ್ಮ ಅಕ್ಕಿಕಾಳಿನಂತೆ ಎಂದಿಟ್ಟುಕೊಂಡರೆ ಶರೀರಕ್ಕೆ ಕಾಲಗುಣಕರ್ಮಗಳ ನಿಮಿತ್ತವಾಗಿ ತಾಪತ್ರಯ ಉಂಟಾದಾಗ ಜೀವಾತ್ಮನಿಗೆ ಅವುಗಳ ಅನುಭವವಾಗುವುದು ಕಂಡಿದೆ ಎಂದ ಮೇಲೆ ಅವನೊಳಗಿರುವ ಪರಮಾತ್ಮನಿಗೆ ಅನುಭವವಾಗದಿರುತ್ತದೆಯ? ಅವನಿಗೆ ಅದೊಂದೂ ತಿಳಿಯುವುದಿಲ್ಲವೆಂದರೆ ಅವನು ಸರ್ವಜ್ಞ ಹೇಗಾದಾನು?

**ಪದುಮಜಾಂಡೋದರನು**

ಮೇಲಿನ ಪ್ರಶ್ನೆಗೆ ಉತ್ತರ ಭಗವದ್ಗೀತೆಯಲ್ಲಿದೆ-

ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ।

'ಶ್ರೀಹರಿ ಲೋಕತ್ರಯದಲ್ಲಿರುವ ಎಲ್ಲ ಜೀವರೊಳಗೂ ಬಿಂಬರೂಪನಾಗಿ ಆವೇಶಗೊಂಡು ಎಲ್ಲರನ್ನೂ ಕಾಪಾಡುತ್ತಿದ್ದಾನೆ' ಮನೆ ಸುಡುವಾಗ ಒಳಗಿರುವ ಮನುಷ್ಯ ಸುಡುವುದಿಲ್ಲವೆ? ಹಾಗೇ ಬ್ರಹ್ಮಾಂಡ ಲಯ ಹೊಂದುವಾಗ ಅದರೊಳಗಿರುವ ಪರಮಾತ್ಮನೇಕೆ ಸುಡುವುದಿಲ್ಲ? ಜೀವಾತ್ಮನಿಗೆ ತಾಪತ್ರಯ ಬಂದಾಗ ಅವನೊಂದಿಗೆ ಅವನೊಳಗಿರುವ ಪರಮಾತ್ಮ ಏಕೆ ಬೇಯುವುದಿಲ್ಲ? ಎಂಬ ಪ್ರಶ್ನೆಗೆ ಉತ್ತರ, ಆತ 'ಅವ್ಯಯ', ನಾಶರಹಿತ ಏಕೆಂದರೆ ಆತ 'ಈಶ್ವರ' ಸರ್ವಶಕ್ತ ಬ್ರಹ್ಮಾಂಡದ ಒಳಗೇ ಇದ್ದು ಆ ಬ್ರಹ್ಮಾಂಡವನ್ನು ತನ್ನ ಉದರದೊಳಗೆ ಇಟ್ಟುಕೊಳ್ಳಬೇಕೆಂದರೆ ಅಣೋರಣೀಯ ಮಹತೋ ಮಹೀಯನಾದ ಅಚಿಂತ್ಯ ಸರ್ವಶಕ್ತ ಆತನೆಂದು ಬೇರೆ ಹೇಳಬೇಕೆ?

**ನಿರಂಜನಗೆ.**

ಪರಮಾತ್ಮನಿಗೆ ಕರ್ಮಫಲ ಲೇಪವಿಲ್ಲ ಎಂದು ಪರಮಾತ್ಮನೆ ಭಗವದ್ಗೀತೆಯಲ್ಲಿ ಸ್ಪಷ್ಟ ಹೇಳಿದ್ದಾನೆ-

'ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ'

'ನನಗೆ ಕರ್ಮಲೇಪವಿಲ್ಲ ಏಕೆಂದರೆ ಕರ್ಮಫಲದಲ್ಲಿ ಆಸಕ್ತಿ ಇಲ್ಲ' ಜೀವರಿಗೂ ಫಲಾಸಕ್ತಿಯಿಂದ ಕರ್ಮ ಮಾಡಿದಾಗಲೆ ಲೇಪ ಹೊರತು ಫಲಾಸಕ್ತಿ ತೊರೆದು ನಿಷ್ಕಾಮನೆಯಿಂದ ಭಗವದಾರಾಧನಾ ರೂಪವಾಗಿ ಕರ್ಮ ಮಾಡಿದಾಗ ಅದರ ಲೇಪವಾಗುವುದಿಲ್ಲ ಅಂತಃಕರಣ ಶುದ್ಧಿಯಾಗಿ ಕರ್ಮಬಂಧ ಹೊರಟು ಹೋಗುತ್ತದೆ. ಅದರಿಂದ ಫಲಾಸಕ್ತಿ ತೊರೆದು ಕರ್ಮ ಮಾಡು ಎನ್ನುತ್ತಾನೆ ಶ್ರೀಕೃಷ್ಣ ಫಲಾಸಕ್ತಿವುಳ್ಳವರಿಗೆಲ್ಲ ಫಲ ನೀಡುವ ಶ್ರೀಹರಿ ತನಗೂ ಫಲಾಸಕ್ತಿ ಇರುತ್ತಿದ್ದರೆ ಫಲವನ್ನು ಅವರಿಗೆ ಉಣಿಸುವಾಗ ತಾನೂ ಉಣುತ್ತಿದ್ದ ಆದರೆ ಉಣುವುದಿಲ್ಲ-

'ಅನಶ್ನನ್ನನ್ಯಃ ಅಭಿಚಾಕಶೀತಿ।'

ಹಾಗಾದರೆ ಬಿಂಬರೂಪನಾಗಿ ಉಂಡು ಉಣಿಸುವುದೆಂದರೇನು?

'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ನ ಹರಿಃ ಪಿಬೇತ್।'

ಫಲದಲ್ಲಿರುವ ತನ್ನ ಸ್ವರೂಪಭೂತ ಶುಭರಸವನ್ನೆ ಲೀಲೆಯಿಂದ ಸ್ವರಮಣನಾದ ತಾನುಂಡು ಪ್ರಾಕೃತವನ್ನು ಉಣಿಸುತ್ತಾನೆ ಹೀಗಾಗಿ ಕರ್ಮಫಲದಲ್ಲಿ ಅವನಿಗೆ ಆಸಕ್ತಿ ಇಲ್ಲ ಜೀವರಿಗೆ ಉಣಿಸುವುದಕ್ಕಾಗಿ ತಾನು ಉಣ್ಣುತ್ತಾನಷ್ಟೆ ಪೂರ್ಣಾನಂದನಾದ ಆತನಿಗೆ ಕರ್ಮದಿಂದ ಸುಖ ಬರಬೇಕಾಗಿಲ್ಲ ನಿರ್ದುಃಖನಿಗೆ ದುಃಖಪರಿಹಾರವೂ ಆಗಬೇಕಾಗಿಲ್ಲ ಯಾವ ಭೋಗ ಪದಾರ್ಥದಿಂದಲೂ ಅವನಿಗೆ ಪಂಚೇಂದ್ರಿಯ ತೃಪ್ತಿ ರೂಪವಾದ ಫಲವಾಗಲಿ ಪಂಚೇಂದ್ರಿಯಗಳಿಗೆ ಅನಿಷ್ಟವಾದ ರೂಪರಸಾದಿಗಳ ಪರಿಹಾರವಾಗಲಿ ಆಗಬೇಕಾಗಿಲ್ಲ ಬ್ರಹ್ಮಾಂಡೋದರನ ಉದರದಲ್ಲಿಯೆ ಎಲ್ಲವೂ ಇರುವಾಗ ಪಂಚೇಂದ್ರಿಯಗಳಿಗೆ ಇಷ್ಟಪದಾರ್ಥವೆಲ್ಲಿಂದ ತರುತ್ತಾನೆ? ಅನಿಷ್ಟಕರವಾದ ಪದಾರ್ಥವಾದರೂ ಎಲ್ಲಿಂದ ಬರುತ್ತದೆ? ಅದರಿಂದ ಆತ ಫಲಾಸಕ್ತಿರೂಪವಾದ ದೋಷವಿಲ್ಲದವ, ನಿರಂಜನ ಅದರಿಂದ ಕಾಲ ಗುಣ ಕರ್ಮದ ಕಲುಷ ಸಂಬಂಧವಿಲ್ಲ

**ಒಂದು ಗುಣದೊಳನಂತ ಗುಣಗಳು**
**ಒಂದು ರೂಪದೊಳಿಹವು ಲೋಕಗ-**
**ಳೊಂದು ರೂಪದಿ ಧರಿಸಿ ತದ್ಗ ಪದಾರ್ಥದೊಳಹೊರಗೆ।**
**ಬಾಂದಳದ ಪೋಲಿದ್ದು ಬಹು ಪೆಸ-**
**ರಿಂದ ಕರೆಸುತ ಪೂರ್ಣಜ್ಞಾನಾ-**
**ನಂದಮಯ ಪರಿ ಪರಿ ವಿಹಾರವ ಮಾಡಿ ಮಾಡಿಸುವ ॥ ೩೧ ॥**

ಪೂರ್ಣ ಜ್ಞಾನಾನಂದಮಯನಾದ ಶ್ರೀಹರಿಗೆ ಒಂದು ರೂಪದಲ್ಲಿ, ಒಂದು ಗುಣದಲ್ಲಿ ಅನಂತ ಗುಣಗಳಿವೆ ಒಂದು ರೂಪದಲ್ಲಿ ಲೋಕಗಳನ್ನು ಧರಿಸಿ ಆ ಲೋಕ ಗಳಲ್ಲಿ ತಾನಿದ್ದು ಎಲ್ಲ ಪದಾರ್ಥಗಳ ಒಳಗೂ ಹೊರಗೂ ಆಕಾಶದಂತೆ ವ್ಯಾಪಿಸಿ ಬಹು ನಾಮಗಳಿಂದ ಕರೆಸಿಕೊಳ್ಳುತ್ತ ನಾನಾ ಬಗೆಯ ವಿಹಾರವನ್ನು ಮಾಡಿ ಲಕ್ಷ್ಮೀಬ್ರಹ್ಮಾದಿ ಗಳಿಂದಲೂ ವಿಹಾರ ಮಾಡಿಸುತ್ತಾನೆ

**ಒಂದು ಗುಣದೊಳು ಅನಂತ ಗುಣಗಳು .**

ಶ್ರೀಹರಿಗೆ ಅನಂತಾನಂತ ರೂಪಗಳಿವೆ ಅನಂತಾನಂತ ಗುಣಗಳಿವೆ ಅವುಗಳಲ್ಲಿ ಒಂದು ರೂಪದಲ್ಲಿಯೂ ಅನಂತಾನಂತ ಗುಣಗಳಿವೆ ಗುಣದಲ್ಲಿಯೂ ತಿರುಗಿ ಅನಂತಾನಂತ ಗುಣಗಳಿವೆ

ಶ್ರೀಹರಿಯ ಅವತಾರರೂಪಗಳು ಅವನಿಗಿಂತ ಬೇರೆ ಅಲ್ಲ ಹಾಗೇ ಅವನ ಕಣ್ಣು ಕಿವಿ ಮುಂತಾದ ಅವಯವಗಳೂ ಬೇರೆ ಅಲ್ಲ. ಜ್ಞಾನಾನಂದಾದಿ ಗುಣಗಳೂ ಸೃಷ್ಟಿಸಂಹಾರಾದಿ

ಕ್ರಿಯೆಗಳೂ ಅವನಿಂದ ಬೇರೆಯಲ್ಲ ಅವೆಲ್ಲವೂ ಒಂದೊಂದು ಭಗವದ್ರೂಪಗಳೆ ಆ ರೂಪಗಳಿಗೂ ತಿರುಗಿ ಅವಯವ ಗುಣಕ್ರಿಯಾದಿಗಳಿವೆ ಅವೂ ಭಗವದ್ರೂಪಗಳೆ ಹೀಗೆ ಅನಂತಾನಂತ ರೂಪಗಳೆಲ್ಲವೂ ಸೇರಿ ಒಂದು ರೂಪವಾಗುತ್ತದೆ ಅನಂತ ಗುಣಕ್ರಿಯೆಗಳೆಲ್ಲ ಸೇರಿ ಒಂದು ಗುಣವೋ ಕ್ರಿಯೆಯೋ ಆಗುತ್ತದೆ ಉದಾ ನಾರಾಯಣ ಎಂಬ ಒಂದು ರೂಪಕ್ಕೆ ಕಣ್ಣು ಕಿವಿ ಮುಂತಾದ ಅನೇಕ ಅವಯವಗಳಿವೆ ಆದರೆ ಈ ಅವಯವಗಳು ಕೇವಲ ಅವಯವಗಳೆ ಅಲ್ಲ ಕಣ್ಣು ಬರಿ ಕಣ್ಣಲ್ಲ ಅದೊಂದು ಭಗವದ್ರೂಪ ಅದಕ್ಕೆ ಕಣ್ಣು ಕಿವಿ ಮುಂತಾದ ಅವಯವಗಳಿವೆ ಆ ಕಣ್ಣು ಕಿವಿಗಳಿಗೂ ತಿರುಗಿ ಕಣ್ಣುಕಿವಿಗಳಿವೆ ಇದಕ್ಕೆ ಪರ್ಯವಸಾನವಿಲ್ಲ ಕಣ್ಣಿಗೂ ಕಣ್ಣು ಕಿವಿಗಳೆಂದರೇನು? ಎಂಬ ಪ್ರಶ್ನೆಗೆ ಹರಿಕಥಾಮೃತಸಾರದಲ್ಲಿಯೆ ಮುಂದೆ (೬-೮) ಪಂಚನಾರೀತುರಗ ದೃಷ್ಟಾಂತ ಉಕ್ತವಾಗಿದೆ ಒಂದು ಕುದುರೆಯ ಚಿತ್ರ ದೂರದಿಂದ ನೋಡಿದರೆ ಅದು ಕುದುರೆ ಹತ್ತಿರ ಬಂದು ನೋಡಿದರೆ ಮುಖ, ಒಬ್ಬಳು ನಾರಿ ಮುಂಗಾಲುಗಳು, ಒಬ್ಬಳು ನಾರಿ ಹಿಂಗಾಲುಗಳೂ, ಒಬ್ಬಳು ನಾರಿ ಎದೆಯ ಭಾಗ ಉದರ ಭಾಗಗಳೂ ಒಬ್ಬೊಬ್ಬರು ನಾರಿಯರು ಇಲ್ಲಿ ಮುಖ ಬರಿ ಮುಖವಾಗಿಲ್ಲ ಅದಕ್ಕೆ ಬೇರೆ ಮುಖವಿದೆ ಕೈಕಾಲುಗಳಿವೆ ಇಷ್ಟು ವ್ಯತ್ಯಾಸ ಸ್ತ್ರೀಶರೀರದ ಮುಖದಲ್ಲಿ ಬೇರೆ ಮುಖವಿಲ್ಲ ಶ್ರೀಹರಿಯ ವಿಷಯದಲ್ಲಿ ಹೀಗಿಲ್ಲ ಅವನ ಮುಖಕ್ಕೆ ಬೇರೆ ಮುಖವಿದೆ

ನೈವೇದ್ಯ ಸಮರ್ಪಣೆಯ ಕಾಲದಲ್ಲಿ,

'ಕಪಿಲಾತ್ಮಕದಿವ್ಯೇನ ಚಕ್ಷುಷಾ ತ್ವವಲೋಕಯ'

ನಾನಿಟ್ಟ ನೈವೇದ್ಯವನ್ನು ಕಪಿಲಾತ್ಮಕವಾದ ದಿವ್ಯಚಕ್ಷುಸ್ಸಿನಿಂದ ನೋಡಿ ಸ್ವೀಕರಿಸು ನೃಸಿಂಹಾತ್ಮಕವಾದ ದಿವ್ಯ ಘ್ರಾಣೇಂದ್ರಿಯದಿಂದ ಆಘ್ರಾಣಿಸಿ ಸ್ವೀಕರಿಸು ಪರಶುರಾಮಾತ್ಮಕವಾದ ವಾಗಿಂದ್ರಿಯದಿಂದ 'ನೀನಿತ್ತ ನೈವೇದ್ಯ ಬಲು ರುಚಿಯಾಗಿದೆ' ಎಂದು ಹೊಗಳುತ್ತ ಸ್ವೀಕರಿಸು ಮಹಾಕೂರ್ಮಸ್ವರೂಪವಾದ ನಾಲಿಗೆಯಿಂದ ಸವಿದು ರುಚಿಕರವಾಗಿ ಮಾಡಿ ಉಣ್ಣು ಎಂದು ಪ್ರಾರ್ಥಿಸುತ್ತೇವೆ ಇಲ್ಲಿ ಕಣ್ಣು, ಮೂಗು, ಮಾತು, ನಾಲಿಗೆಗಳು ಕ್ರಮವಾಗಿ ಕಪಿಲ ನರಸಿಂಹ ಪರಶುರಾಮ ಕೂರ್ಮರೂಪ ಗಳೆನ್ನುವ ಅನುಸಂಧಾನವಿದೆ ಕಪಿಲ ರೂಪದ ಕಣ್ಣಿಗೆ ತಿರುಗಿ ಕಣ್ಣು ಮೂಗು ನಾಲಿಗೆ ಗಳಿವೆ ನರಸಿಂಹರೂಪಿ ಮೂಗಿಗೆ ತಿರುಗಿ ಮೂಗು ಕಣ್ಣು ನಾಲಿಗೆಗಳಿವೆ

ಏಕ ಗುಣೋಪಾಸಕರು ಉಪಾಸನೆ ಮಾಡುವ ಆತ್ಮಸ್ವರೂಪ ಗುಣ ಅನಿರುದ್ಧರೂಪ ಚತುರ್ಗುಣೋಪಾಸಕರು ಉಪಾಸನೆ ಮಾಡುವ ಆನಂದ ಜ್ಞಾನ ಸತ್ ಆತ್ಮ ಎಂಬ ಗುಣಗಳು ಕ್ರಮವಾಗಿ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ರೂಪಗಳು ಬಿಂಬರೂಪನಲ್ಲಿರುವ ಆನಂದರೂಪಿಯಾದ ವಾಸುದೇವನಲ್ಲಿ ತಿರುಗಿ ಆನಂದ ಜ್ಞಾನಾದಿಗುಣಗಳಿವೆ ಒಂದು ಬಿಂಬರೂಪದಲ್ಲಿರುವ ಆನಂದವೆಂಬ ಒಂದು ಗುಣದಲ್ಲಿ ಆನಂದಾದಿ ಗುಣಗಳು, ಆ

ಗುಣಗಳಲ್ಲಿ ತಿರುಗಿ ಗುಣಗಳು ಹೀಗೆ ಒಂದು ರೂಪದ ಒಂದು ಗುಣದಲ್ಲಿ ಅನಂತ ಗುಣಗಳಿವೆ ಷೋಡಶಿ ಗ್ರಂಥದಲ್ಲಿ ಹೇಳಿದೆ-

ಗುಣಾನಾಮಪಿ ಪ್ರತ್ಯೇಕಮೇಕೈಕರೂಪಾತ್ಮಕತ್ವಾತ್
ಏಕೈಕಗುಣೋಽನೇಕಗುಣಾತ್ಮಕಃ, ತತ್ರಾಪ್ಯೇಕೈಕೋಽ-
ನೇಕಗುಣಾತ್ಮಕ ಇತ್ಯೇಕೈಕಗುಣಸ್ಯಾನಂತಾನಂತಗುಣಾತ್ಮಕತ್ವಮ್।

ಇದೊಂದು ಬಗೆಯ ವ್ಯಾಪ್ತಿ ಶ್ರೀಹರಿ ಎಲ್ಲದರಲ್ಲಿಯೂ ವ್ಯಾಪ್ತನಾಗಿದ್ದಾನೆ ತನ್ನಲ್ಲಿಯೂ ತಾನು ವ್ಯಾಪ್ತನಾಗಿದ್ದಾನೆ ಅವನು ವ್ಯಾಪ್ತ, ಅವನ ಗುಣಕ್ರಿಯಾದಿಗಳೂ ವ್ಯಾಪ್ತ, ಆ ಗುಣಕ್ರಿಯಾದಿಗಳಲ್ಲಿ ತಿರುಗಿ ಗುಣಕ್ರಿಯಾದಿಗಳು ವ್ಯಾಪಿಸಿವೆ ಇದು ಹೇಗೆ ಏಕೆ ಇತ್ಯಾದಿ ಪ್ರಶ್ನೆಗಳಿಗೆ ಅಚಿಂತ್ಯಶಕ್ತಿ ಎಂದು ಉತ್ತರ ಅಚಿಂತ್ಯಶಕ್ತಿಯಿಂದ ಒಂದರೊಳಗೊಂದರಂತೆ ಅನಂತಾನಂತ ರೂಪಗಳನ್ನು ಧರಿಸಿ ವಿಹಾರ ಮಾಡುತ್ತಾನೆ

**ಲೋಕಗಳ ಒಂದು ರೂಪದಿ ಧರಿಸಿ :**

ಅನಂತ ಪದಾರ್ಥಗಳನ್ನು ಧರಿಸಲು ಅನಂತರೂಪಗಳೆಂದೇನಿಲ್ಲ. ಅವು ಬೇಕಾಗಿಲ್ಲ ಒಂದು ರೂಪದಲ್ಲಿ ಎಲ್ಲ ಲೋಕಗಳನ್ನು ಧರಿಸುತ್ತಾನೆ ಯಶೋದೆಯ ಮಡಿಲಲ್ಲಿ ಮಲಗಿದ ಕೃಷ್ಣನ ಬಾಯಲ್ಲಿ ಬ್ರಹ್ಮಾಂಡ ಕಾಣಿಸಿಕೊಂಡಿತು ಬ್ರಹ್ಮನಿಗೆ ಶ್ರೀಹರಿಯ ಒಂದು ರೋಮಕೂಪದಲ್ಲಿ ಅನಂತ ಬ್ರಹ್ಮಾಂಡ ರಾಶಿಗಳು ಕಂಡು ಬಂದವು ಭಾಗವತ ಹೇಳುತ್ತದೆ-

'ಲಕ್ಷ್ಯಂತೇಽಂತರ್ಗತಾಶ್ಚಾನ್ಯೇ ಕೋಟಿಶೋ ಹ್ಯಂಡರಾಶಯಃ।'

ಏಕಕಾಲದಲ್ಲಿ ಅನಂತ ಬ್ರಹ್ಮಾಂಡಗಳನ್ನು ಶ್ರೀಹರಿ ಸೃಜಿಸುವುದಿಲ್ಲ, ನಿಜ ಒಂದು ಕಲ್ಪದಲ್ಲಿ ಒಂದು ಬ್ರಹ್ಮಾಂಡವನ್ನೇ ಸೃಜಿಸುತ್ತಾನೆ ಆದರೆ ಒಂದು ರೋಮಕೂಪ ಒಂದು ಬ್ರಹ್ಮಾಂಡವನ್ನು ಧರಿಸಿದರೆ ಇನ್ನೊಂದು ರೋಮಕೂಪವೂ ಬ್ರಹ್ಮಾಂಡವನ್ನು ಧರಿಸಿರುತ್ತದೆ ಏಕೆಂದರೆ ಅವುಗಳಿಗೆ ಭೇದವಿಲ್ಲ ಹೀಗಾಗಿ ಅನಂತ ರೋಮಕೂಪಗಳು ಅನಂತ ಬ್ರಹ್ಮಾಂಡಗಳನ್ನು ಧರಿಸಲೇಬೇಕು ಹೇಗೆ? ಬ್ರಹ್ಮಾಂಡ ಒಂದೇ ತಾನೆ? ಎಂದರೆ ಒಂದೇ ಬ್ರಹ್ಮಾಂಡ ಹರಿಯ ಅಚಿಂತ್ಯಶಕ್ತಿಯಿಂದ ಅನಂತ ಬ್ರಹ್ಮಾಂಡವಾಗುತ್ತದೆ ಅನಂತ ಕೋಟಿ ಬ್ರಹ್ಮಾಂಡನಾಯಕನೆನಿಸುತ್ತಾನೆ ಆತ ಅರ್ಜುನ ಪಾಶುಪತಾಸ್ತ್ರಕ್ಕಾಗಿ ಇಂದ್ರಕೀಲಪರ್ವತದಲ್ಲಿ ತಪಸ್ಸು ಮಾಡುತ್ತಿದ್ದಾಗ ಕಿರಾತರೂಪಿ ಶಿವನೊಡನೆ ಹೋರಾಡಬೇಕಾಯಿತು ಆಗ ಸೋತು ಶಿವಲಿಂಗದ ಮೇಲೆ ಹೂವನ್ನು ಅರ್ಪಿಸಿದರೆ ಆ ಒಂದು ಹೂವೆ ದ್ವಿಪ್ರತಿಯಾಗಿ ಕಿರಾತನ ತಲೆಯ ಮೇಲೆಯೂ ಕಾಣಿಸಿಕೊಂಡಿತು ಅರ್ಜುನನಿಗೆ ಈತ ಶಿವನೆ ಎನ್ನುವ ಅರಿವುಂಟಾಯಿತು ಗೋಮಂತ ಪರ್ವತದಲ್ಲಿ ಗರುಡ ಶ್ರೀಕೃಷ್ಣನ ತಲೆಯ ಮೇಲಿರಿಸಿದ ಕಿರೀಟ ದ್ವಿಪ್ರತಿಯಾಗಿ ಶ್ವೇತದ್ವೀಪದಲ್ಲಿ ಮಲಗಿದ್ದ ನಾರಾಯಣನ ತಲೆಯ ಮೇಲೂ ಶೋಭಿಸಿತು ಹೀಗೆ ಒಂದೇ ಬ್ರಹ್ಮಾಂಡ ಅನಂತವಾಯಿತು

'ವಿಷ್ಣುಸಾಮರ್ಥ್ಯತೋಽಂಡಾನಾಂ ಬಹುತ್ವಂ ನಾನ್ಯತೋ ಭವೇತ್ ।'

ಎಂದು ಭಾಗವತ ತಾತ್ಪರ್ಯದಲ್ಲಿ ಇದನ್ನು ಹೇಳಿದೆ ಆದರಿಂದ 'ಲೋಕಗಳನ್ನು' ಅಂದರೆ, ಅನಂತಕೋಟಿ ಬ್ರಹ್ಮಾಂಡಗಳನ್ನು, ಒಂದು ರೂಪದ ಒಂದು ರೋಮಕೂಪ ದಲ್ಲಿ ಧರಿಸಿದ್ದಾನೆ ಶ್ರೀಹರಿ

**ತದ್ಗ ಪದಾರ್ಥದೊಳ ಹೊರಗೆ ಬಾಂದಳದವೋಲಿದ್ದು :**

ತನ್ನಲ್ಲಿ ಲೋಕಗಳು, ಲೋಕಗಳಲ್ಲಿ ತಾನು ಹೀಗೆ ಎಲ್ಲ ಪದಾರ್ಥಗಳಲ್ಲಿ 'ತದ್ಗ'ನಾಗಿ ಪದಾರ್ಥದ ಒಳಗೂ ಹೊರಗೂ ಆಕಾಶದಂತೆ ವ್ಯಾಪಿಸಿದ್ದಾನೆ ಪದಾರ್ಥಗಳ ಒಳಗೂ ಹೊರಗೂ ವ್ಯಾಪಿಸುವ ವಿಷಯದಲ್ಲಿ ಆಕಾಶದೃಷ್ಟಾಂತವಿದೆ ಕೇವಲ ಅಚಿಂತ್ಯಶಕ್ತಿ ಎನ್ನಬೇಕಾಗಿಲ್ಲ

**ಬಹು ಪೆಸರಿಂದ ಕರೆಸುತ**

ಆಕಾಶ ವಾಯು ಅಗ್ನಿ ಮುಂತಾದ ಪದಾರ್ಥಗಳಲ್ಲಿ ಒಳಗೂ ಹೊರಗೂ ವ್ಯಾಪಿಸಿ ವೇದದಲ್ಲಿ ಆಕಾಶ ವಾಯು ಅಗ್ನಿ ಮುಂತಾದ ನಾಮಗಳಿಂದ ಶ್ರೀಹರಿ ಕರೆಸಿಕೊಳ್ಳುತ್ತಾನೆ ಏಕೆಂದರೆ ಇದೂ ಒಂದು ವಿಹಾರ ವಿಹಾರದಿಂದ ಲೋಕಕ್ಕೆ ಉಪಕಾರವಿದೆ ಲೋಕ ಅದನ್ನು ಉಪಾಸನ ಮಾಡಿ ಮೋಕ್ಷಸಾಧನೆ ಮಾಡಿಕೊಳ್ಳುತ್ತದೆ

**ಪರಿಪೂರ್ಣಜ್ಞಾನಾನಂದಮಯ .**

ಒಂದು ಬ್ರಹ್ಮಾಂಡವನ್ನು ಅನಂತ ಬ್ರಹ್ಮಾಂಡವನ್ನಾಗಿ ಮಾಡಿ ನೋಡಿ ಆನಂದಿಸ ಬೇಕೆಂದಾಗಲಿ ಆನಂದಾದಿಗುಣಗಳನ್ನೂ ರೂಪಗಳನ್ನಾಗಿ ಮಾಡಿಕೊಂಡು ವಿಹರಿಸಿ ಆನಂದಿಸಬೇಕೆಂದಾಗಲಿ ಯಾವ ಉದ್ದೇಶವೂ ಶ್ರೀಹರಿಗೆ ಇಲ್ಲ ಇರುತ್ತಿದ್ದರೆ ಅವನು ಪರಿಪೂರ್ಣಜ್ಞಾನಾನಂದಮಯನೆನಿಸುತ್ತಿದ್ದಿಲ್ಲ ಆನಂದಿಸುವುದಕ್ಕಾಗಿ ವಿಹಾರವಲ್ಲ, ಆನಂದಿಸುವುದರಿಂದ ವಿಹಾರ

**ಪರಿ ಪರಿ ವಿಹಾರವ ಮಾಡಿ ಮಾಡಿಸುವ**

ಪರಿಪೂರ್ಣಜ್ಞಾನಾನಂದಮಯನಾದ್ದರಿಂದಲೆ ವಿಹಾರ ಮಾಡುತ್ತಾನೆ-

ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಶ ಆಕಾಶ ಆನಂದೋ ನ ಸ್ಯಾತ್ ।

ಎಂದು ತೈತ್ತಿರಿಯೋಪನಿಷತ್ತು ಹೇಳುವಂತೆ ಆನಂದದಲ್ಲಿ ನಗುವುದು ಕುಣಿಯುವುದು ಹೇಗೆ ಸ್ವಭಾವವೋ ಹಾಗೇ ಶ್ರೀಹರಿಯ ಈ ವಿಹಾರವೂ ಸ್ವಭಾವವೆ ಅದೂ ವ್ಯರ್ಥವಲ್ಲ ಲಕ್ಷ್ಮೀಬ್ರಹ್ಮಾದಿಗಳೂ ಅವನ ವಿಹಾರಕ್ಕೆ ಅನುಗುಣವಾಗಿ ತಾವೂ ಅನಂತ ರೂಪಗಳನ್ನು ಧರಿಸಿ ಸೃಷ್ಟ್ಯಾದಿ ವಿಹಾರ ಮಾಡುತ್ತಾರೆ, ಅವನ ಸೇವೆಗಾಗಿ ಅವರಿಗೆ ಈ ವಿಹಾರ ಮಾಡುವ ಶಕ್ತಿಯನ್ನು ವ್ಯಕ್ತ ಮಾಡಿಕೊಡುತ್ತಾನೆ ಶ್ರೀಹರಿ ಅದಕ್ಕಾಗಿಯೆ ತಾನು ವಿಹಾರ ಮಾಡುತ್ತಾನೆ,

ಮಾಡಿಸುತ್ತಾನೆ ಅವನೆ ಎಲ್ಲರಿಗೂ ಬಿಂಬ ತಾನೆ? ಇದರಿಂದ ಲಕ್ಷ್ಮೀಬ್ರಹ್ಮಾದಿಗಳಲ್ಲಿ ಶ್ರೀಹರಿ ಕೇವಲ ಆಕಾಶದಂತೆ ವ್ಯಾಪಿಸಿಲ್ಲ, ಬಿಂಬರೂಪನಾಗಿ ಅವರಿಗ ಅನಂತರೂಪದಾರಣಶಕ್ತಿಯನ್ನು ವ್ಯಕ್ತಗೊಳಿಸುತ್ತ ವ್ಯಾಪಿಸಿದ್ದಾನೆ ಎಂದಂತಾಯಿತು

**ಎಲ್ಲರೊಳು ತಾನಿಪ್ಪ ತನ್ನೊಳ**
**ಗೆಲ್ಲರನು ಧರಿಸಿಹನು ಅಪ್ರತಿ**
**ಮಲ್ಲ ಮನ್ಮಥಜನಕ ಜಗದಾದ್ಯಂತ ಮಧ್ಯಗಳ।**
**ಬಲ್ಲ ಬಹುಗುಣಭರಿತ ದಾನವ**
**ದಲ್ಲಣ ಜಗನ್ನಾಥವಿಟ್ಠಲ**
**ಸೊಲ್ಲ ಲಾಲಿಸಿ ಕಂಬದಿಂದಲಿ ಬಂದ ಬಕುತನಿಗೆ ॥ ೩೨ ॥**

ಶ್ರೀಹರಿ ಎಲ್ಲರಲ್ಲಿಯೂ ತಾನಿರುತ್ತಾನೆ ತನ್ನೊಳಗೇ ಎಲ್ಲರನ್ನೂ ಧರಿಸಿರುತ್ತಾನೆ ಅಪ್ರತಿಮಲ್ಲನಾದ ಮನ್ಮಧನಿಗೂ ಜನಕ ಜಗತ್ತಿನ ಆದಿ ಅಂತ್ಯ ಮಧ್ಯಗಳನ್ನು ಬಲ್ಲವ ಬಹುಗುಣಗಳಿಂದ ತುಂಬಿದವ, ದಾನವರಿಗೆ ಭಯಂಕರ ಭಕ್ತ ಪ್ರಹ್ಲಾದನ ನುಡಿ ಕೇಳಿ ಕಂಬದಿಂದ ಬಂದವ, ಜಗನ್ನಾಥ ವಿಟ್ಠಲ

ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ।
ಅದೃಶ್ಯತಾತ್ಯದ್ಭುತರೂಪಮುದ್ವಹನ್ ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಂ॥
(ಭಾಗ 7 8 18)

ಎಂದು ಭಾಗವತ ಹೇಳುವಂತೆ ತನ್ನ ವ್ಯಾಪ್ತಿಯನ್ನು ಲೋಕಕ್ಕೆ ತೋರುವುದಕ್ಕಾಗಿ ಕಂಬದಿಂದ ಬಂದ ನರಸಿಂಹನಿಗೇ ಈ ವ್ಯಾಪ್ತಿಸಂಧಿಯನ್ನು ದಾನರಾಯರು ಸಮರ್ಪಿಸುತ್ತಿದ್ದಾರೆ ಶ್ರೀಜಗನ್ನಾಥವಿಟ್ಠಲಾಭಿನ್ನ ಗರುಡವಾಹನ ಲಕ್ಷ್ಮೀನರಸಿಂಹನೆ ದಾನರಾಯರ ಉಪಾಸ್ಯಮೂರ್ತಿ

**ಎಲ್ಲರೊಳು ತಾನಿಪ್ಪ:**

ಎಲ್ಲರಲ್ಲಿಯೂ ಶ್ರೀನರಸಿಂಹ ಅಂತರ್ಯಾಮಿಯಾಗಿ ಇರುತ್ತಾನೆ ತನ್ನ ತಮ್ಮ ಹಿರಣ್ಯಾಕ್ಷನನ್ನು ಶ್ರೀವರಾಹ ಕೊಂದನೆಂದು ಸಿಟ್ಟಿನಿಂದ ಹಿರಣ್ಯಕಶಿಪು ಅವನನ್ನು ಶೋಧಿಸುತ್ತ ಹದಿನಾಲ್ಕು ಲೋಕಗಳನ್ನು ಸುತ್ತಿದ ವೈಕುಂಠಕ್ಕೂ ಹೋದ ಸಿಗಲಿಲ್ಲ ಎಲ್ಲೆಡೆ ವ್ಯಾಪ್ತನಾದ ಹರಿ ಎಲ್ಲಿಯೂ ಕಾಣಿಸಲಿಲ್ಲ

ಭ್ರಾತೃಹಾ ಮೇ ಗತೋ ನೂನಂ ಯತೋ ನಾವರ್ತತೇ ಪುಮಾನ್॥

'ನನ್ನ ತಮ್ಮನ ಹಂತಕ ಎಂದೂ ಹಿಂದೆ ಬಾರದಂಥ ಕಡೆಗೆ ಹೋಗಿದ್ದಾನೆ, ಅಂದರೆ

ಸತ್ತಿದ್ದಾನೆ' ಎಂದುಕೊಂಡು, 'ಕ್ವಾಸೌ ಮದನ್ಯೋ ಜಗದೀಶ್ವರಃ' ನನ್ನ ಹೊರತು ಇನ್ನೊಬ್ಬ ಜಗದೀಶ್ವರನನ್ನುವವನು ಎಲ್ಲಿ ಇದ್ದಾನೆ ಎನ್ನುತ್ತ ಕಂಬವನ್ನು ಒದ್ದ ಆಗ ನರಸಿಂಹ ಮೂಡಿ ಬಂದು ತಾನು ಎಲ್ಲರಲ್ಲಿಯೂ ಇದ್ದೇನೆ ಎಂದು ತೋರಿಸಿದ ಅವನು ಹಿರಣ್ಯಕಶಿಪುವಿನ ಹೃದಯದಲ್ಲಿಯೆ ಇದ್ದ ಅದನ್ನು ತಿಳಿಯದೆ ಹಿರಣ್ಯಕಶಿಪು ಎಲ್ಲ ಲೋಕಗಳನ್ನು ಸುತ್ತಿದ್ದ!

**ತನ್ನೊಳಗೆಲ್ಲರನು ಧರಿಸಿಹನು**

ಶ್ರೀಹರಿ ತನ್ನೊಳಗೆ ಎಲ್ಲರನ್ನೂ ಧರಿಸಿದ್ದಾನೆ ಅವನು ಜಗದುದರ ಎಲ್ಲರನ್ನೂ ಧರಿಸುವುದೆಂದರೆ ಎಲ್ಲರಿಗೂ ಬಲ ನೀಡುತ್ತಾನೆ ತನಗೂ ಬಲ ನೀಡುವವನು ಇನ್ನೊಬ್ಬನಿಲ್ಲ, ನಾನೇ ಜಗದೀಶ್ವರನೆಂದು ಹಿರಣ್ಯಕಶಿಪು ಹೇಳಿಕೊಂಡಾಗ ಪ್ರಹ್ಲಾದ ಹೇಳುತ್ತಾನೆ-

ನ ವೈ ಬಲಂ ಬಲಿನಾಂ ಚಾಪರೇಷಾಂ (ಭಾಗ 7 8 8)

ಎಲ್ಲರ ಒಳ ಹೊರಗೆ ವ್ಯಾಪಿಸಿ ಎಲ್ಲರಿಗೂ ಬಲ ನೀಡುವವನು ನರಸಿಂಹ

**ಅಪ್ರತಿಮಲ್ಲ ಮನ್ಮಥಜನಕ**

ಶ್ರೀಹರಿ ಅಪ್ರತಿಮಲ್ಲ ಬ್ರಹ್ಮರುದ್ರಾದಿಗಳಾರೂ ಅವನಂತೆ ಸರ್ವತ್ರ ವ್ಯಾಪ್ತರಲ್ಲ ಶ್ರೀಹರಿ ಮಾತ್ರವಲ್ಲ, ಅವನ ಮಗನಾದ ಮನ್ಮಥನೂ ಅಪ್ರತಿಮಲ್ಲ ಎಲ್ಲರ ಬಾಣ ಒಂದು ಹೃದಯವನ್ನು ಎರಡಾಗಿ ಸೀಳಿದರೆ ಮನ್ಮಥನ ಬಾಣ ಹೆಣ್ಣುಗಂಡುಗಳ ಹೃದಯ ಗಳೆರಡನ್ನು ಒಂದು ಮಾಡುತ್ತದೆ ಈ ಮನ್ಮಥನ ಬಾಣ ಬ್ರಹ್ಮರುದ್ರಾದಿಗಳನ್ನೂ ಬಿಡುವುದಿಲ್ಲ ಬ್ರಹ್ಮ ತನ್ನ ಮಗಳನ್ನೂ, ಶಿವ ಪಾರ್ವತಿಯನ್ನೂ ಮೋಹಿಸುವಂತೆ ಮಾಡಿತ್ತು ಮನ್ಮಥನ ಬಾಣ ಅವನು ಎಲ್ಲರ ಮನಸ್ಸನ್ನೂ ವ್ಯಾಪಿಸಿದವ, ಮನೋಭಿಮಾನಿ ಅಂಥ ಅಪ್ರತಿಮಲ್ಲನಾದ ಮನ್ಮಥನಿಗೂ ಜನಕ, ಮನ್ಮಥಮನ್ಮಥ ಶ್ರೀಹರಿ ಎಂದರೆ ಅವನ ವ್ಯಾಪ್ತಿ ಎಷ್ಟಿರಬಹುದು!

'ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ'

ಶ್ರೀ ಹರಿಯ ಅನುಗ್ರಹ ಬಲ ಒಂದಿಲ್ಲದಿದ್ದರೆ ಮನ್ಮಥನ ಪ್ರಭಾವವನ್ನು ಇದಿರಿಸುವುದಾಗದು ಪ್ರಹ್ಲಾದ ಹೇಳುತ್ತಾನೆ-

ಕಂಡೂಯನೇನ ಕರಯೋರಿವ ದುಃಖದುಃಖಂ (ಭಾಗ 7 9 45)

ಮನ್ಮಥನನ್ನು ತೃಪ್ತಿ ಪಡಿಸುವ ಯತ್ನ ಕಜ್ಜಿಯನ್ನು ತುರಿಸಿಕೊಂಡಂತೆಯೆ, ಇನ್ನೂ ಇನ್ನೂ ದುಃಖಕರ!

**ಜಗದಾದ್ಯಂತ ಮಧ್ಯಗಳ ಬಲ್ಲ**

ಜಗತ್ತಿನ ಸೃಷ್ಟಿ, ಲಯ, ಸ್ಥಿತಿ ಈ ಮೂರನ್ನೂ ಬಲ್ಲವ ಶ್ರೀಹರಿಯೊಬ್ಬನೇ ಎನ್ನುತ್ತಾನೆ ಪ್ರಹ್ಲಾದ-

ಏಕಸ್ತ್ವಮೇವ ಜಗದೇತದಮುಷ್ಯ ಯತ್ತ್ವಂ
ಆದ್ಯಂತಯೋಃ ಪೃಥಗವಸ್ಯಸಿ ಮಧ್ಯತಶ್ಚ ।( ಭಾಗ 7 9 30)

ಸೃಷ್ಟಿಸ್ಥಿತಿ ಲಯ ಮೂರು ಅವಸ್ಥೆಗಳಲ್ಲಿಯೂ ಜಗತ್ತಿನಲ್ಲಿ ವ್ಯಾಪಿಸಿ ಅದರ ಕಣ ಕಣವನ್ನೂ ಬಲ್ಲವನು ಶ್ರೀಹರಿ

**ಬಹುಗುಣ ಭರಿತ**

ಬಹುಗುಣಗಳು ಒಬ್ಬ ಶ್ರೀಹರಿಯಿಂದ ಅಭಿನ್ನವಾಗಿದ್ದೇ ಅವನಲ್ಲಿ ತುಂಬಿ ಕೊಂಡಿವೆ ಇದೂ ಒಂದು ವಿಧದ ವ್ಯಾಪ್ತಿಯೇ ಬಹು ಗುಣವೆಂದರೆ ಎಷ್ಟು ಗುಣ? ಪ್ರಹ್ಲಾದ ನರಸಿಂಹನ ಮುಂದೆ ಹೇಳುವ ಮಾತು-

ಬ್ರಹ್ಮಾದಯಃ ಸುರಗಣಾ ಮುನಯೋಽದ ಸಿದ್ಧಾಃ
ಸತ್ವೈಕತಾನಮತಯೋ ವಚಸಾಂ ಪ್ರವಾಹೈಃ।
ನಾಂತಂ ಪರಸ್ಯ ಪರತೋಽವ್ಯಧುನಾಽಪಿ ಯಾಂತಿ
ಕಿಂ ತೋಷ್ಟುಮರ್ಹತಿ ನ ಮೇ ಹರಿರುಗ್ರಜಾತೇಃ ॥( ಭಾಗ 7 9 8)

ಬ್ರಹ್ಮಾದಿದೇವತೆಗಳು ಮುನಿಗಳು ಸಿದ್ಧರು ಹರಿಯ ಬಲಜ್ಞಾನಾದಿ ಗುಣಗಳಲ್ಲಿ ನೆಟ್ಟ ಮನಸ್ಸಿನಿಂದ ಮಾತಿನ ಪ್ರವಾಹಗಳನ್ನೇ ಹರಿಸಿದರೂ ಕೊನೆಗಾಣದಷ್ಟು ಇವೆ ಹರಿಯಲ್ಲಿ ಆ ಗುಣಗಳು! ಅವೆಲ್ಲವೂ ಒಬ್ಬ ಹರಿಯಲ್ಲಿ ಪೂರ್ತಿಯಾಗಿ ವ್ಯಾಪಿಸಿವೆ ಈ ವ್ಯಾಪ್ತಿ ಅಚಿಂತ್ಯ, ಅನಿರ್ವಚನೀಯ

**ದಾನವ ದಲ್ಲಣ .**

ದುಷ್ಟದಾನವರಿಗೆ ತಲ್ಲಣಗೊಳಿಸುವಂಥ ಉಗ್ರ ಭೀಕರರೂಪ ಶ್ರೀನರಸಿಂಹನದು-

ನೃಸಿಂಹಂ ಭೀಷಣಂ ಭದ್ರಂ!

ಭಯರೂಪದಿಂದ ದಾನವರ ಹೃದಯವನ್ನು ಹೊಕ್ಕು ನಡುಗಿಸುವವನು ಅವನೆ ಬಿಲ್ಲ ಹಬ್ಬಕ್ಕೆ ಹೋಗಿ ಬಿಲ್ಲು ಮುರಿದ ಶ್ರೀಕೃಷ್ಣ ಅದರ ಶಬ್ದದೊಂದಿಗೇ ಭಯರೂಪದಿಂದ ಕಂಸನ ಹೃದಯವನ್ನು ಹೊಕ್ಕು ಅವನನ್ನು ನಡುಗಿಸಿ ಕಂಗೆಡಿಸಿ ಮೃತಪ್ರಾಯನನ್ನಾಗಿಸಿದ ರುಕ್ಮಿಣೀಶವಿಜಯದಲ್ಲಿ ಕಂಸನಿಗೂ ಭಯಕ್ಕೂ ನಡೆದ ರೋಚಕವಾದ ಸಂಭಾಷಣೆ ಇದೆ ಹೀಗೆ ದುಷ್ಟ ದಾನವರ ಹೃದಯದಲ್ಲಿ ಭಯರೂಪದಿಂದ ವ್ಯಾಪಿಸುವ ನರಸಿಂಹನೆ, ಮುದ್ದುನರಸಿಂಹನಾಗಿ ಆನಂದರೂಪದಿಂದ ಬ್ರಹ್ಮರುದ್ರಾದಿ ದೇವತೆಗಳ, ಪ್ರಹ್ಲಾದಾದಿ ಸಾತ್ವಿಕ ದಾನವರ ಹೃದಯದಲ್ಲಿ ವ್ಯಾಪಿಸುತ್ತಾನೆ

**ಸೊಲ್ಲ ಲಾಲಿಸಿ ಕಂಬದಿಂದಲಿ ಬಂದ ಬಕುತನಿಗೆ :**

ಕಂಬದಿಂದಲಿ ಬಂದ ದೇವ ನರಸಿಂಹನೇ ದಾಸರಾಯರು ಅವನನ್ನು ಹೀಗೆ ಕೊಂಡಾಡಿದ್ದಾರೆ-

ತರಳ ಪ್ರಹ್ಲಾದನ ನುಡಿಯ ಕೇಳಿ ತ್ವರಿತದಿ ಬಂದ್ಯೋ ಎನ್ನೊಡೆಯ!

ಪ್ರಹ್ಲಾದ ಹಿರಣ್ಯಕಶಿಪುವಿಗೆ ಹೇಳುತ್ತಾನೆ-

ಸ ವೈ ಬಲಂ ಬಲಿನಾಂ ಚಾಪರೇಷಾಂ।

'ನನಗೆ, ನಿನಗೆ, ಮಾತ್ರವಲ್ಲ ಎಲ್ಲರಿಗೂ ಬಲ ನೀಡುವವ ಬಲ ನೀಡಿ ಕಾಪಾಡುವವ ನರಸಿಂಹ' ಎಂದು ಭಕ್ತನ ಈ ನುಡಿಯನ್ನು ಕೇಳಿ ಬೇಗನೆ ಕಂಬದಿಂದ ಬಂದ ನರಸಿಂಹ

ಅಥವಾ ಹಿರಣ್ಯಕಶಿಪುವೂ ಸ್ವಭಾವತಃ ಭಕ್ತನೆ 'ಜಯ' ಎಂಬ ವೈಕುಂಠದ್ವಾರಪಾಲಕ ಆತ ಅಸುರಾವೇಶದಿಂದ ಆತ ನುಡಿದ-

ಕ್ವಾಸೌ? ಯದಿ ಸ ಸರ್ವತ್ರ, ಕಸ್ಮಾತ್ ಸ್ತಂಭೇ ನ ದೃಶ್ಯತೇ? (ಭಾಗ 7 8. 13)

'ಹರಿ ಎಲ್ಲಿ? ಎಲ್ಲೆಡೆ ಇದ್ದರೆ ಕಂಬದಲ್ಲಿ ಏಕೆ ಕಾಣಿಸುವುದಿಲ್ಲ?' ಈ ಮಾತನ್ನು ಕೇಳಿ ಭಕ್ತನನ್ನು ಉದ್ಧಾರ ಮಾಡಲು ಬೇಗನೆ ಕಂಬದಿಂದ ಬಂದ ನರಸಿಂಹ ಭಕ್ತನಿದ್ದಲ್ಲಿ ಭಗವಂತ ಎಂಬುದೂ ಒಂದು ವ್ಯಾಪ್ತಿ

**ಕಂಬದಿಂದಲಿ ಬಂದ**

ಕಂಬವೆಂದೊಡನೆ ನರಸಿಂಹನ ನೆನವಾಗುತ್ತದೆ ಇದಕ್ಕೆ ಕಾರಣ ಭಾಗವತ 'ಸ್ತಂಭೇ ಸಭಾಯಾಂ' ಎಂದು ಸ್ಪಷ್ಟವಾಗಿ ಕಂಬದಿಂದ ನರಸಿಂಹ ಬಂದಂತೆ ಅದು ವರ್ಣಿಸಿದೆ ಆದರೆ ಹರಿವಂಶ, ಮತ್ಸ್ಯಪುರಾಣ, ನರಸಿಂಹಪುರಾಣ ಮುಂತಾದವು ಕಂಬದ ಬಗ್ಗೆ ಮೌನ ತಾಳುತ್ತವೆ ನರಸಿಂಹ ಹೊರಗಿಂದ ಬಂದು ಹಿರಣ್ಯಕಶಿಪುವಿನ ಸಭಾಭವನವನ್ನು ಪ್ರವೇಶಿಸಿದಂತೆ ವರ್ಣಿಸುತ್ತವೆ ಈ ವಿರೋಧ ಪರಿಹಾರಕ್ಕೆ, ಕೆಲವು ಕಲ್ಪಗಳಲ್ಲಿ ಭಾಗವತ ಹೇಳುವಂತೆ ಕಂಬದಿಂದ ಬರುತ್ತಾನೆ ಕೆಲವು ಕಲ್ಪಗಳಲ್ಲಿ ಹೊರಗಿಂದ ಬರುತ್ತಾನೆ, ಎರಡೂ ಸರಿಯೆ ಎನ್ನಬಹುದು ಅಥವಾ ಎಲ್ಲ ಕಲ್ಪಗಳಲ್ಲಿಯೂ ಪ್ರಹ್ಲಾದನ ರಕ್ಷಣೆ ಗಾಗಿ, ಹಿರಣ್ಯಕಶಿಪುವಿನ ಉದ್ಧಾರಕ್ಕಾಗಿ ನರಸಿಂಹ ಅದೃಶ್ಯನಾಗಿ ಹೊರಗಿಂದ ಬಂದು ಕಂಬದಲಿ ಸನ್ನಿಹಿತನಾಗುತ್ತಾನೆ ಈ ಅಂಶವನ್ನು ಭಾಗವತ ಹೇಳುವುದಿಲ್ಲ ಬಳಿಕ ಹಿರಣ್ಯಕಶಿಪು ಕಂಬವನ್ನು ಒದ್ದಾಗ ಪ್ರಕಟನಾಗುತ್ತಾನೆ ಈ ಅಂಶವನ್ನು ಭಾಗವತ ಹೇಳುತ್ತದೆ ಆದರಿಂದ ವಿರೋಧವಿಲ್ಲ

ನರಸಿಂಹ ಹೊರಗಿಂದ ಸಭಾಭವನಕ್ಕೆ ಬಂದರೂ ಕಂಬದಿಂದ ಹೊರಗೆ ಬಂದರೂ ಮೊದಲಿಗೆ ಅಲ್ಲಿ ಅವನು ಇರಲಿಲ್ಲ ಎಂದು ತಿಳಿಯಬಾರದು ಹರಿಯ ಎಲ್ಲ ರೂಪಗಳೂ ಎಲ್ಲೆಡೆ ವ್ಯಾಪ್ತವೆ ಆಗಿರುತ್ತವೆ ಮಹತೋ ಮಹೀಯ, ಅಪರಿಮಿತವೆ ಆಗಿರುತ್ತವೆ ಅಚಿಂತ್ಯಶಕ್ತಿಯಿಂದ ಪರಿಮಿತ ಆಕಾರದಲ್ಲಿ ಕಾಣಿಸಿಕೊಂಡು ಒಂದೆಡೆ ಯಿಂದ ಇನ್ನೊಂದೆಡೆಗೆ ಸಂಚರಿಸುತ್ತಾನೆ ಆಗ ಬಂದ ರೂಪ ಇದ್ದ ರೂಪದೊಂದಿಗೆ ಐಕ್ಯ ಹೊಂದುತ್ತದೆ ಎರಡು ದೀಪ ಸೇರಿ ಒಂದಾಗುವಂತೆ ಆದರಿಂದ ನರಸಿಂಹ ಮೊದಲೇ ಹಿರಣ್ಯಕಶಿಪುವಿನ ಬಳಿ ಇದ್ದ

ಪ್ರಹ್ಲಾದನ ಬಳಿ ಇದ್ದ. ನರಸಿಂಹನನ್ನೇ ಪ್ರಹ್ಲಾದ ಉಪಾಸನೆ ಮಾಡುತ್ತಿದ್ದ. ನಾರದರು ಅವನಿಗೆ ಉಪದೇಶಿಸಿದ್ದು ನರಸಿಂಹ ಮಂತ್ರವನ್ನೇ-

ಓಂ ನಮೋ ಭಗವತೇ ತುಭ್ಯಂ ಪುರುಷಾಯ ಮಹಾತ್ಮನೇ।
ಹರಯೇಽದ್ಭುತಸಿಂಹಾಯ ಬ್ರಹ್ಮಣೇ ಪರಮಾತ್ಮನೇ॥ (ಭಾಗ. 7. 10. 11)

ಹೀಗೆ ಉಪಾಸಕನ ಬಳಿಯಲ್ಲಿಯೆ ಇದ್ದ ಉಪಾಸ್ಯ ನರಸಿಂಹಮೂರ್ತಿ. ಕಡೆಗೆ ಕಂಬದಿಂದ ನರಸಿಂಹ ಬಂದು ಅವನೊಡನೆ ಐಕ್ಯ ಹೊಂದಿದ. ಹೀಗೆ ಎಲ್ಲ ರೂಪಗಳೂ ಅಭಿನ್ನವಾಗಿದ್ದು ಸರ್ವತ್ರ ವ್ಯಾಪ್ತವಾಗಿವೆ ಎನ್ನುವ ಪ್ರಮೇಯವೂ ಇಲ್ಲಿ ವಿವಕ್ಷಿತವಾಗಿದೆ.

ಕರ್ಮನಿರ್ಣಯದಲ್ಲಿ ಶ್ರೀಮದಾಚಾರ್ಯರು ಮಹಾನಾಮ್ನಿಯ ಕೊನೆಯ ಋಚೆಗೆ ವ್ಯಾಖ್ಯಾನ ಮಾಡುತ್ತ ಹೀಗೆ ಹೇಳುತ್ತಾರೆ-

'ಶ್ರೀಹರಿಯ ನಾಭಿಕಮಲದಲ್ಲಿರುವ ಚತುರ್ಮುಖ ಹರಿಯನ್ನು ಸ್ತುತಿಸುತ್ತ ''ನನ್ನೊಳಗಿರುವ ನಿನ್ನ ಕಡೆಗೇ ನೀನು ಬಾ ಎಂದು ಪ್ರಾರ್ಥಿಸುತ್ತೇನೆ ಹೊರತು ನನ್ನ ಬಳಿಗೆ ಬಾರೆಂದು ಆಹ್ವಾನಿಸುವ ಶಕ್ತಿ ನನಗಿಲ್ಲ'' ಎನ್ನುತ್ತಾನೆ ಎಂದು ಪದ್ಮಪುರಾಣ ಹೇಳುತ್ತದೆ'.

**ಜಗನ್ನಾಥವಿಟ್ಠಲ:**

ಜಗನ್ನಾಥದಾಸರು ಈ ವ್ಯಾಪ್ತಿಸಂಧಿಯನ್ನು ಜಗದ್‌ವ್ಯಾಪ್ತನಾದ ಶ್ರೀಜಗನ್ನಾಥವಿಟ್ಠಲನಿಗೆ ಅಂಕಿತ ಮಾಡಿ ಸಮರ್ಪಿಸುತ್ತಿದ್ದಾರೆ.

॥ ಶ್ರೀಕೃಷ್ಣಾರ್ಪಣಮಸ್ತು ॥

# 4. ಭೋಜನರಸ ವಿಭಾಗ ಸಂಧಿ

**॥ ಹರಿಃ ಓಂ ॥**

**ಹರಿಕಥಾಮೃತಸಾರ ಗುರುಗಳ**
**ಕರುಣದಿಂದಾಪನಿತು ಪೇಳುವೆ**
**ಪರಮಭಗವದ್ಭಕ್ತರಿದನಾದರದಿ ಕೇಳುವುದು ॥**

ಸತ್ತ್ವೈಃ ಸತ್ತ್ವಾ ಹಿ ಜೀವಂತಿ ದುರ್ಬಲೈರ್ಬಲವತ್ತರಾಃ ॥ (ಭಾರತ ಶಾಂತಿ 15 20)

ಎಂದು ಮಹಾಭಾರತ ಹೇಳುವಂತೆ ದುರ್ಬಲ ಜೀವಿಗಳನ್ನು ತಿಂದೇ ಪ್ರಬಲ ಜೀವಿಗಳು ಬದುಕಬೇಕು ಬೇರೆ ಉಪಾಯವಿಲ್ಲ ಆ ದುರ್ಬಲ ಜೀವಿಗಳು ಸಸ್ಯಗಳಿರಬಹುದು, ಪ್ರಾಣಿಗಳಿರಬಹುದು ಅವುಗಳಲ್ಲಿ ವಿಹಿತ ನಿಷಿದ್ಧಗಳೆಂದು ಭೇದವಿದೆ 'ನ ಪಲಾಂಡುಂ ಭಕ್ಷಯೇತ್' ಈರುಳ್ಳಿ ತಿನ್ನಬಾರದು ಎಂದು ಮುಂತಾಗಿ ಸಸ್ಯಗಳಲ್ಲಿ ವಿಹಿತವಾದ ನಿಷೇಧ 'ಪಂಚ ಪಂಚ ನಖಾ ಭಕ್ಷ್ಯಾಃ' ಎಂದು ಪ್ರಾಣಿಗಳಲ್ಲಿ ನಿಯಮ ಯಾವುದೇ ವಿಹಿತವಾದ ಅನ್ನವನ್ನು ಯಜ್ಞರೂಪದಿಂದ ಭಗವಂತನಿಗೆ ಅರ್ಪಿಸಿ ಯಜ್ಞಶೇಷವನ್ನು ತಿರುಗಿ ಯಜ್ಞರೂಪದಿಂದಲೆ ಉಣಬೇಕು ಆಗ ಸಕಲ ಪಾಪ ಪರಿಹಾರ

ತದ್ಯಥೈಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತ,
ಏವಂ ಹ್ಯೇಪಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ,
ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ॥ - ಛಾಂದೋಗ್ಯ

'ಬೆಂಕಿಯಲ್ಲಿ ಹುಲ್ಲುಕಡ್ಡಿಯನ್ನೋ, ಹತ್ತಿಚೂರನ್ನೋ ಹಾಕಿದರೆ ಸುಟ್ಟು ಬೂದಿಯಾಗುವಂತೆ ಪ್ರಾಣಾಗ್ನಿಹೋತ್ರ ಮಾಡುವವನ ಪಾಪಗಳೆಲ್ಲವೂ ನಿಃಶೇಷವಾಗಿ ನಾಶ ಹೊಂದುವವು ' ಭಗವದ್ಗೀತೆಯೂ ಹೀಗೆ ಹೇಳುತ್ತದೆ-

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ (3 13)

'ಯಜ್ಞ ಮಾಡಿ ಉಳಿದ ಅನ್ನವನ್ನೇ ಉಣ್ಣುವವರಿಗೆ ಸಕಲ ಪಾಪ ಪರಿಹಾರವಾಗುತ್ತದೆ ತಮಗಾಗೇ ಬೇಯಿಸಿ ಉಣ್ಣುವ ಪಾಪಿಗಳು ಅನ್ನದ ರೂಪದಲ್ಲಿ ಪಾಪವನ್ನೇ ಉಣ್ಣುತ್ತಾರೆ '

ಹೃದಯಕಮಲದಲ್ಲಿರುವ ವೈಶ್ವಾನರನಾಮಕ ಶ್ರೀಹರಿಯ ಅರಮನೆಗೆ ಐದು ಬಾಗಿಲುಗಳು ನಾಲ್ಕು ದಿಕ್ಕುಗಳಲ್ಲಿ ನಾಲ್ಕು, ಊರ್ಧ್ವದಿಕ್ಕಿನಲ್ಲಿ ಒಂದು ಎಂದು ಇವುಗಳಲ್ಲಿ ಪ್ರಾಣಾಪಾನಾದಿ ಪಂಚರೂಪಿ ಮುಖ್ಯಪ್ರಾಣನೂ ಚತುರ್ಮುಖ ಲಕ್ಷ್ಮಿಯರೂ ದ್ವಾರಪಾಲಕರು ನಾವು ಯಜ್ಞರೂಪದಿಂದ ಉಣ್ಣುವ ಅನ್ನವನ್ನು ವೈಶ್ವಾನರ ಪಚನ ಮಾಡಿ ಉಂಡು ತೃಪ್ತನಾಗುತ್ತಾನೆ, ದ್ವಾರಪಾಲಕರನ್ನೂ ಉಣಿಸಿ ತೃಪ್ತಿಪಡಿಸುತ್ತಾನೆ ಎನ್ನುತ್ತದೆ ಭಗವದ್ಗೀತೆ-

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥

ಈ ಅನುಸಂಧಾನದಿಂದ ಮೊದಲಿಗೆ ಪಂಚಪ್ರಾಣಾಹುತಿ ಉಣ್ಣುವುದು ಸಂಪ್ರದಾಯ ಸುಮ್ಮನೆ ಗಬಗಬನೆ ಉಂಡರೆ ಕೆಂಡವನ್ನು ದೂರಮಾಡಿ ಬೂದಿಯ ಮೇಲೆ ಹೋಮ ಮಾಡಿದಂತೆ ವ್ಯರ್ಥವಾಗುವುದು ಎಂದು ಛಾಂದೋಗ್ಯೋಪನಿಷತ್ತು ಹೇಳುತ್ತದೆ ಅದರಿಂದ 'ಪ್ರಾಣಾಗ್ನಿಹೋತ್ರ' ಅಥವಾ 'ವೈಶ್ವಾನರಯಜ್ಞ'ವೆನಿಸಿರುವ ಭೋಜನವಿಧಿಯನ್ನು ದಾಸರಾಯರು ಈ ಸಂಧಿಯಲ್ಲಿ ವಿವರಿಸುತ್ತಾರೆ

**ವನಜಜಾಂಡದೊಳುಳ್ಳಖಿಲ ಚೇ**
**ತನರು ಭುಂಜಿಪ ಚತುರವಿಧ ಭೋ**
**ಜನ ಪದಾರ್ಥದಿ ಚತುರವಿಧ ರಸರೂಪ ತಾನಾಗಿ ।**
**ಮನಕೆ ಬಂದುದನುಂಡುಣಿಸಿ ಸಂ**
**ಹನನಕುಪಚಯ ಕರಣಕಾನಂ**
**ದನಿಮಿಷರಿಗಾತ್ಮಪ್ರದರ್ಶನಸುಖವನೀವ ಹರಿ ॥ ೧ ॥**

ಶ್ರೀಹರಿ ಬ್ರಹ್ಮಾಂಡದೊಳಗಿರುವ ಎಲ್ಲ ಚೇತನರು ಉಣ್ಣುವ ನಾಲ್ಕು ಬಗೆಯ ಭೋಜನ ಪದಾರ್ಥದಲ್ಲಿ ತಾನು ನಾಲ್ಕು ಬಗೆಯ ರಸರೂಪನಾಗಿದ್ದು ಮನಸಿಗೆ ಬೇಕೆನಿಸಿದುದನ್ನು ಉಂಡು ಚೇತನರಿಗೂ ಉಣಿಸಿ ಅವರ ಶರೀರಕ್ಕೆ ಪುಷ್ಟಿಯನ್ನೂ ಇಂದ್ರಿಯಗಳಿಗೆ ಆನಂದವನ್ನೂ ದೇವತೆಗಳಿಗೆ ಆತ್ಮಪ್ರದರ್ಶನಸುಖವನ್ನೂ ನೀಡುತ್ತಾನೆ

**ವನಜಜಾಂಡದೊಳುಳ್ಳಖಿಲ ಚೇತನರು ಭುಂಜಿಪ .**

'ವನಜ' ಎಂದರೆ ಕಮಲ, ಶ್ರೀಹರಿಯ ನಾಭಿಕಮಲ, ಅದರಲ್ಲಿ 'ಜ' ಹುಟ್ಟಿದವ ಬ್ರಹ್ಮ ಬ್ರಹ್ಮಾಂಡದೊಳಗಿರುವ ಎಲ್ಲ ಚೇತನರೂ ಅನ್ನ ಉಣ್ಣುತ್ತಾರೆ ಎಲ್ಲ ಚೇತನರೆಂದರೆ ಎಲ್ಲ ಸಂಸಾರಿ ಚೇತನರು ಮಾತ್ರವಲ್ಲದೆ ಎಲ್ಲ ಮುಕ್ತಚೇತನರೂ ಅನ್ನ ಉಣ್ಣುತ್ತಾರೆ ಲಕ್ಷ್ಮೀನಾರಾಯಣರೂ ಉಣ್ಣುತ್ತಾರೆ ಉಣದ ಚೇತನನೆ ಇಲ್ಲ ಇಷ್ಟು ವ್ಯತ್ಯಾಸ ಸಂಸಾರಿ ಚೇತನರೂ ತಮ್ಮ ಕರ್ಮಾನುಸಾರ ಪ್ರಾಕೃತ ಅನ್ನವನ್ನು ಉಣ್ಣುತ್ತಾರೆ ಮುಕ್ತರೂ ಲಕ್ಷ್ಮೀನಾರಾಯಣರೂ ಲೀಲೆಯಿಂದ ಅಪ್ರಾಕೃತ ಅನ್ನವನ್ನು ಉಣ್ಣುತ್ತಾರೆ ಮುಕ್ತರು ಕೆಲವೊಮ್ಮೆ ಸ್ವೇಚ್ಛೆಯಿಂದ ಶುದ್ಧ ಸತ್ವಾತ್ಮಕ ಶರೀರ ತಳೆದು ಶುದ್ಧ ಸತ್ವಾತ್ಮಕ ಅನ್ನವನ್ನೂ ಉಂಡು ಸ್ವರೂಪಾನಂದ ವ್ಯಕ್ತಗೊಳಿಸಿಕೊಂಡು ಅನುಭವಿಸುತ್ತಾರೆ

**ಚತುರವಿಧ ಭೋಜನ ಪದಾರ್ಥಾದಿ :**

ಗೀತಾವಿವೃತಿಯಲ್ಲಿ ಹೇಳಿದಂತೆ ಭಕ್ಷ್ಯ ಭೋಜ್ಯ ಲೇಹ್ಯ ಪೇಯವೆಂದು ಅನ್ನ ನಾಲ್ಕು ಬಗೆ ಇರುತ್ತದೆ ಹಲ್ಲಿನಿಂದ ಅಗಿದು ತಿನ್ನುವ ಗಟ್ಟಿ ಪದಾರ್ಥ ಭಕ್ಷ್ಯ ನಾಲಿಗೆಯಿಂದ ಹೊರಳಿಸಿ ತಿನ್ನುವ ಪದಾರ್ಥ ಭೋಜ್ಯ ನಾಲಿಗೆಯಿಂದ ನೆಕ್ಕಿ ತಿನ್ನುವುದು ಲೇಹ್ಯ ದ್ರವಪದಾರ್ಥ ಪೇಯ

ಅಥವಾ ಮಾಂಡೂಕೋಪನಿಷತ್ತಿನಲ್ಲಿ ಹೇಳಿದಂತೆ ಜಾಗ್ರತ್‌ಕಾಲದಲ್ಲಿ ಉಣ್ಣುವ ಸ್ಥೂಲಪದಾರ್ಥ, ಸ್ವಪ್ನದಲ್ಲಿ ಉಣ್ಣುವ ಮಾನಸವಾಸನಾಮಯ ಸೂಕ್ಷ್ಮಪದಾರ್ಥ, ಸುಷುಪ್ತಿಕಾಲದಲ್ಲಿ ಅನುಭವಿಸುವ ಸ್ವರೂಪಾನಂದಲೇಶ ಮತ್ತು ಮೋಕ್ಷದಲ್ಲಿ ಅನುಭವಿಸುವ ಅಭಿವ್ಯಕ್ತ ಸ್ವರೂಪಾನಂದ ಹೀಗೆ ಅನ್ನಗಳು ಚತುರ್ವಿಧ

ಈ ಚತುರ್ವಿಧ ಅನ್ನಗಳಲ್ಲಿ ಚತುರ್ವಿಧ ಅನ್ನರೂಪದಿಂದ ಶ್ರೀಹರಿ ಇರುವುದರಿಂದ ಅನ್ನ ಅನ್ನವೆನಿಸಿದೆ, ತೃಪ್ತಿ ಪುಷ್ಟಿದಾಯಕವಾಗಿದೆ

**ಚತುರವಿಧ ರಸರೂಪ ತಾನಾಗಿ**

ಸಿಹಿ ಹುಳಿ ಖಾರ ಉಪ್ಪು ಕಹಿ ಒಗರು ಎಂದು ರಸಗಳು ಆರು ಇವೆ ಆದರೂ ಭಕ್ಷ್ಯ ಭೋಜ್ಯಾದಿ ಪದಾರ್ಥಗಳಲ್ಲಿ ಈ ರಸಗಳು ಬೇರೆ ಬೇರೆ ಪ್ರಮಾಣದಲ್ಲಿ ಸೇರಿ ಹೊಸ ರುಚಿಯನ್ನೆ ಉಂಟುಮಾಡುತ್ತವೆ ಈ ರುಚಿಯನ್ನೆ ಇಲ್ಲಿ 'ರಸ' ಎನ್ನಲಾಗಿದೆ ಅದರಿಂದ ಭಕ್ಷ್ಯರಸ, ಭೋಜ್ಯರಸ ಎಂದು ಮುಂತಾಗಿ ರಸಗಳು ನಾಲ್ಕುವಿಧ ನಾಲ್ಕು ರಸಗಳಲ್ಲಿ ನಾಲ್ಕು ರಸರೂಪದಿಂದ ಹರಿ ನೆಲೆಸಿದ್ದಾನೆ

ಅಥವಾ 'ರಸ' ಎಂದರೆ ಸಾರಭಾಗ. ಭಕ್ಷ್ಯದ ಸಾರಭಾಗವೆ ಭಕ್ಷ್ಯರಸ ಭೋಜ್ಯದ ಸಾರಭಾಗ ಭೋಜ್ಯರಸ ಇತ್ಯಾದಿ ತಿಳಿಯಬೇಕು ಈ ಭಕ್ಷ್ಯರಸ ಭೋಜ್ಯರಸ ಮುಂತಾದುವು ಮಾತ್ರ ಶರೀರದಲ್ಲಿ ಸೇರುತ್ತವೆ ಸ್ಥೂಲಭಾಗ ಮಲರೂಪದಿಂದ ಹೊರಗೆ ಹೋಗುತ್ತದೆ ಶ್ರೀಹರಿ ಸೂಕ್ಷ್ಮಸಾರಭಾಗವಾದ ರಸದಲ್ಲಿ ರಸರೂಪನಾಗಿ ಇದ್ದು ಆ ಸ್ವಾಖ್ಯರಸವನ್ನು ತಾನು ಉಂಡು ಬಾಹ್ಯರಸವನ್ನು ಜೀವರಿಗೆ ಉಣಿಸುತ್ತಾನೆ ಅಥವಾ ಭಕ್ಷ್ಯ ಭೋಜ್ಯಗಳ ರುಚಿಯಲ್ಲಿ ತಾನೂ ರುಚಿರೂಪದಿಂದಿದ್ದು ಆ ಸ್ವಾಖ್ಯ ರುಚಿಯನ್ನು ತಾನು ಸವಿಯುತ್ತಾನೆ ಏಕೆಂದರೆ ಆತ ಸ್ವರಮಣ ಬಾಹ್ಯರುಚಿಯನ್ನು ಚೇತನರ ಅನುಭವಕ್ಕೆ ತಂದು ಕೊಡುತ್ತಾನೆ

**ಮನಕೆ ಬಂದುದನುಂಡುಣಿಸಿ .**

ಶ್ರೀಹರಿ ಸ್ವತಂತ್ರ ತನ್ನ ಮನಸಿಗೆ ಬಂದುದನ್ನು ತಾನುಂಡು ಜೀವರಿಗೆ ಉಣಿಸುತ್ತಾನೆ. ಅವನ ಮನಸಿಗೆ ಬಾರದುದು ಚೇತನರ ಮನಸಿಗೂ ಬಾರದು ಅವರ ಕರ್ಮಾನುಸಾರ ಅವರಿಗೆ ಉಣಿಸಲು ಬಯಸುತ್ತಾನೆ ಆತ ಆಗ ಅವರಿಗೆ ಹಸಿವಾಗುತ್ತದೆ. ಅನ್ನ ಬೇಕೆನಿಸುತ್ತದೆ ಈ ಅನ್ನ ಜಾಗರದಲ್ಲಿ ಉಣ್ಣುವ ಸ್ಥೂಲ ಪದಾರ್ಥ ಅದರಿಂದ ಅದನ್ನು ಉಣಿಸುವ ವಿಶ್ವರೂಪಿ ಹರಿ ಸ್ಥೂಲಭುಕ್ ಎನಿಸುತ್ತಾನೆ ಸ್ವಪ್ನಾವಸ್ಥೆಯಲ್ಲಿ ಪಂಚೇಂದ್ರಿಯಗಳು ಉಪರತ

ವಾಗುವುದರಿಂದ ಶ್ರೀಹರಿ ನಿರ್ಮಿಸುವ ಮಾನಸ ವಾಸನಾಮಯವಾದ ಸೂಕ್ಷ್ಮ ಪದಾರ್ಥಗಳನ್ನು ಮನಸಿನಿಂದಲೆ ಚೇತನರು ಉಣ್ಣುತ್ತಾರ ಇದು ಪ್ರವಿವಿಕ್ತ ರಸಭೋಗ ಕಂಠದಲ್ಲಿರುವ ತೈಜಸರೂಪಿ ಹರಿಯ ಕಾರ್ಯ ಅದರಿಂದ ಅವನು ಪ್ರವಿವಿಕ್ತಭುಕ್ ಎನಿಸುತ್ತಾನೆ ಮುಂದೆಸುಷುಪ್ತ್ಯವಸ್ಥೆಯಲ್ಲಿ ಜೀವಸ್ವರೂಪಾನಂದದ ಒಂದಂಶವನ್ನು ವ್ಯಕ್ತಮಾಡಿ ಜೀವನಿಗೆ ಉಣಿಸುತ್ತಾನೆ ಜೀವ ಸ್ವರೂಪೇಂದ್ರಿಯ ರೂಪವಾದ ಸಾಕ್ಷಿಯಿಂದ ಅದನ್ನು ಉಣ್ಣುತ್ತಾನೆ ಇದು ಆನಂದಭೋಗ ಹೃದಯ ದಲ್ಲಿರುವ ಪ್ರಾಜ್ಞರೂಪಿ ಹರಿಯ ಕಾರ್ಯ ಅದರಿಂದ ಅವನು 'ಆನಂದಭುಕ್' ಎನಿಸುತ್ತಾನೆ ಮೋಕ್ಷದಲ್ಲಿ ತುರೀಯರೂಪಿ ಹರಿ ಜೀವರ ಸ್ವರೂಪಾನಂದವನ್ನು ಪೂರ್ತಿ ವ್ಯಕ್ತಮಾಡಿ ಉಣಿಸುತ್ತಾನೆ ಇದೂ ಆನಂದಭೋಗವೆ ತುರೀಯ 'ಆನಂದಭುಕ್ ಎನಿಸುತ್ತಾನೆ ಮಾಂಡೂಕಭಾಷ್ಯ ಮಂಗಳಾಚರಣೆಯಲ್ಲಿ-

ಚತುರ್ಧಾ ಸರ್ವಭೋಕ್ತಾರಂ ವಂದೇ ವಿಷ್ಣುಂ ಪರಂ ಪದಂ।

ಎಂದು ತುರ್ಯನೂ ಸೇರಿದಂತೆ ನಾಲ್ಕು ರೂಪಗಳಿಗೂ ಭೋಕ್ತೃತ್ವ ಉಕ್ತವಾಗಿದೆ ಪ್ರಾಜ್ಞನಿಗೆ ಹೇಳಿದ 'ಆನಂದಭುಕ್' ಎಂಬ ನಾಮ ತುರ್ಯನಿಗೂ ಸಲ್ಲುತ್ತದೆ

ಮುಕ್ತರು ಸ್ವರೂಪಾನಂದ ಭೋಕ್ತೃಗಳಾಗಿದ್ದರೂ ಅವರು ಬಯಸಿದರೆ ವೃಕ್ಷಜೀವರು ಸ್ವೇಚ್ಛೆಯಿಂದ ತಾವೇ ಫಲ ಪುಷ್ಪಾದಿರೂಪದಿಂದ ಪರಿಣಮಿಸಿ ಭೋಜನದ ಸುಖ ನೀಡಿ ತಿರುಗಿ ಹಿಂದಿನಂತೇ ಆಗುತ್ತಾರೆ ಎಂದು ವಿಷ್ಣುರಹಸ್ಯ ಹೇಳಿದೆ ಯುಕ್ತಿಮಲ್ಲಿಕೆ ಯಲ್ಲಿಯೂ ಹಾಗೇ ಹೇಳಿದೆ-

ಅತೋ ಮೌಕ್ತಂ ಸಮಸ್ತಂ ಚ ವಸ್ತು ಭುಕ್ತಂ ಚ ತೈಃ ಪುನಃ।
ತದ್ವೈವ ತಿಷ್ಠೇತ್ ತನ್ನಿತ್ಯಂ ಸ್ಯಾಚ್ಚಾಜಂ ಲಿಂಗದೇಹವತ್ ॥

'ಲಿಂಗದೇಹದಂತೆ ಜನನರಹಿತವಾದ ಮುಕ್ತವೃಕ್ಷಜೀವಶರೀರ, ಮುಕ್ತರು ಅದನ್ನು ಉಂಡರೂ, ಮರಣ ಹೊಂದುವುದಿಲ್ಲ'

**ಸಂಹನನಕುಪಚಯ**

ಬಾಹ್ಯಶರೀರ ಪಂಚಭೂತಾತ್ಮಕವಾದ್ದರಿಂದ ಪಂಚಭೂತಾತ್ಮಕವಾದ ಅನ್ನದಿಂದ ಅದಕ್ಕೆ ಪುಷ್ಟಿಯಾಗುವುದು ಸಹಜ ಸ್ವರೂಪಶರೀರಕ್ಕೂ ಉಚ್ಚತ್ವ ನೀಚತ್ವರೂಪ ಕಿಂಚಿದ್ ವಿಕಾರವಿರುವುದರಿಂದ ಉಚ್ಚತ್ವವೆ ಉಪಚಯ

**ಕರಣಕಾನಂದ**

ಕರಣವೆಂದರೆ ಇಂದ್ರಿಯ ಜಡ ಇಂದ್ರಿಯದಲ್ಲಿಯೂ ಜೀವನ ಸ್ವರೂಪೇಂದ್ರಿಯ ಇದ್ದಲಿನಲ್ಲಿ ಬೆಂಕಿಯಂತೆ ವ್ಯಾಪಿಸಿ ಚೈತನ್ಯಪೂರ್ಣವಾಗಿಸುವುದ ರಿಂದ ಆನಂದವಿದೆ

**ಅನಿಮಿಷರಿಗಾತ್ಮ ಪ್ರದರ್ಶನಸುಖವ ನೀವ :**

ತತ್ವಾಭಿಮಾನಿ ದೇವತೆಗಳು ಆಯಾ ಇಂದ್ರಿಯಗಳಲ್ಲಿದ್ದು ಇಂದ್ರಿಯಗಳಿಂದಾಗುವ ಅನ್ನಭೋಗವನ್ನು ಅಲ್ಲಿಯೆ ಇರುವ ಭಗವಂತನಿಗೆ ಅರ್ಪಿಸಿ ಅವನ ದರ್ಶನದ ಸುಖವನ್ನು ಪಡೆಯುತ್ತಾರೆ ಅವನು ಆತ್ಮಪ್ರದರ್ಶನದ ಸುಖವನ್ನು ಅವರಿಗೆ ನೀಡುತ್ತಾನೆ ನಾವು ಅನ್ನ ಉಣ್ಣದಿದ್ದರೆ ತತ್ವಾಭಿಮಾನಿಗಳಿಗೆ ಈ ಭಗವದಾರಾಧನೆಯ ಅವಕಾಶ ತಪ್ಪಿಹೋಗುತ್ತದೆ ಆದರೆ, ಈ ಅವಕಾಶಕ್ಕಾಗಿ ಏಕಾದಶೀ ಮುಂತಾದ ಉಪವಾಸದಿನಗಳಲ್ಲಿ ನಾವು ಉಣಬಾರದು. ಉಂಡರೆ ತತ್ವಾಭಿಮಾನಿಗಳು ಭಗವದಾರಾಧನೆ ನಡೆಸುವುದಿಲ್ಲ ಅದರಿಂದ ಭಗವದಾರಾಧನೆಗೆ ಯೋಗ್ಯವಾದ ಕಾಲದಲ್ಲಿ ಉಣದಿರುವುದು, ಅಯೋಗ್ಯಕಾಲದಲ್ಲಿ ಉಣುವುದು ಹೀಗೆ ಮಾಡಿದರೆ ಅವರು ಆನಂದ ಪಡದೆ ಕೃಶರಾಗುತ್ತಾರೆ ಭಗವದ್ಗೀತೆ ಹೇಳುತ್ತದೆ-

ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।
ಮಾಂ ಚೈವಾಂತಃ ಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥ (17 6)

'ಅವಿಹಿತವಾದ ಉಪವಾಸಗಳಿಂದ ಶರೀರದಲ್ಲಿರುವ ತತ್ವಾಭಿಮಾನಿಗಳನ್ನೂ, ಭಗವಂತನನ್ನೂ ಯಾರು ಕೃಶರನ್ನಾಗಿಸುವರೋ ಅವರನ್ನು ಅಸುರಸ್ವಭಾವದವರೆಂದು ತಿಳಿ' - ಹೀಗೆ ಶ್ರೀವಾದಿರಾಜರ ಲಕ್ಷಾಲಂಕಾರದಲ್ಲಿ ವ್ಯಾಖ್ಯಾನವಿದೆ ಆದ್ದರಿಂದ ವಿಹಿತವಾದ ಅನ್ನವನ್ನು ವಿಹಿತಕಾಲ, ದೇಶಗಳಲ್ಲಿ ವಿಹಿತರೀತಿಯಿಂದ ಸೇವಿಸಿದರೆ ಅದರಿಂದ ಅನಿಮಿಷರಿಗೆ ಆತ್ಮಪ್ರದರ್ಶನದ ಸುಖವನ್ನು ದೊರಕಿಸಿದ ಪುಣ್ಯ ಲಭಿಸುತ್ತದೆ

**ನೀಡದಂದಲಿಪ್ಪ ಲಿಂಗಕೆ**
**ಷೋಡಶಾತ್ಮಕ ರಸ ವಿಭಾಗವ**
**ಮಾಡಿ ಷೋಡಶ ಕಲೆಗಳಿಗೆ ಉಪಚಯಗಳನೆ ಕೊಡುತ ।**
**ಕ್ರೋಡ ಎಪ್ಪತ್ತೆರಡು ಸಾವಿರ**
**ನಾಡಿಗತ ದೇವತೆಗಳೊಳಗಿ**
**ದ್ದಾಡುತಾನಂದಾತ್ಮ ಚರಿಸುವ ಲೋಕದೊಳು ತಾನು ॥ ೨ ॥**

ವರಾಹಮೂರ್ತಿ ಶ್ರೀಹರಿ ಆನಂದಸ್ವರೂಪನಾಗಿರುವುದರಿಂದ ಜೀವಪಕ್ಷಿಯ ಗೂಡಿನಂಥ ಲಿಂಗಶರೀರಕ್ಕೆ ಹದಿನಾರು ಬಗೆಯಾಗಿ ಅನ್ನರಸವನ್ನು ವಿಭಾಗ ಮಾಡಿ ಹದಿನಾರು ಕಲೆಗಳಿಗೆ ಪುಷ್ಟಿ ನೀಡುತ್ತ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿರುವ ದೇವತೆ ಗಳೊಳಗಿದ್ದು ಆಡುತ್ತ ಲೋಕದಲ್ಲಿ ಸಂಚರಿಸುತ್ತಾನೆ

**ನೀಡದಂಡದಲಿಪ್ಪ ಲಿಂಗ**

ಕಲಾಶ್ಚ ಪಂಚಭೂತಾನಿ ಜ್ಞಾನಕರ್ಮೇಂದ್ರಿಯಾಣಿ ಚ ।
ಪಂಚ ಪಂಚ ಮನಶ್ಚೇತಿ ಷೋಡಶೋಕ್ತಾ ಮನೀಷಿಭಿಃ ॥ ( ಭಾಗ ವಿಜ ೧ ೩ ೧)

ಲಿಂಗಶರೀರದ ಹದಿನಾರು ಬಾಗಗಳು, ಪಂಚ ಬೂತಗಳು ಪಂಚ ಜ್ಞಾನೇಂದ್ರಿಯ ಗಳು ಪಂಚ ಕರ್ಮೇಂದ್ರಿಯಗಳು ಮತ್ತು ಮನಸ್ಸು ಎಂದು ಉಕ್ತವಾಗಿವೆ

ಸಂಸಾರಿ ಜೀವರೆಲ್ಲರಿಗೂ ಅನಾದಿಕಾಲದಿಂದಲೂ ಇರುವ ಸೂಕ್ಷ್ಮಶರೀರ ಲಿಂಗಶರೀರ ವೆನಿಸುತ್ತದೆ ಇದು ಜೀವಪಕ್ಷಿಗ ಗೂಡಿನಂತಿದ ಅದರೊಳಗೆ ಜೀವ ಬೆಚ್ಚಗೆ ಸುರಕ್ಷಿತವಾಗಿ ವಾಸ ಮಾಡುತ್ತದೆ ಜನನ ಮರಣಗಳಲ್ಲಿ ಒಂದು ಸ್ಥೂಲಶರೀರದಿಂದ ಇನ್ನೊಂದಕ್ಕೆ ಜೀವ ಪ್ರಯಾಣ ಮಾಡುವುದು ಈ ಲಿಂಗಶರೀರಧಾರಿಯಾಗಿಯೆ ಹಕ್ಕಿ ಗೂಡಿಂದ ಹೊರಗೆ ಹಾರುತ್ತದೆ ಆದರೆ ಜೀವ ಲಿಂಗಶರೀರದಿಂದ ಹೊರಗೆ ಬರಲಾರ ಬಂದರೆ ಅದುವೆ ಸಂಸಾರದಿಂದ ಮುಕ್ತಿ

ಲಿಂಗಶರೀರ ಜೀವನನ್ನು ಆವರಿಸಿದರೂ ಅವನ ಚಿನ್ಮಯ ಪ್ರಕಾಶವನ್ನು ತನ್ನೊಳಗೆ ಹಿಡಿದಿಟ್ಟುಕೊಳ್ಳಲಾರದು ಬೆಳಕು ಹೊರಗೆ ಬರುತ್ತದೆ ಹೊರಗೆ ಸ್ಥೂಲಶರೀರದಲ್ಲಿ ಎಲ್ಲೆಡೆ ವ್ಯಾಪಿಸಿ ಅದನ್ನು ಚೈತನ್ಯಪೂರ್ಣವಾಗಿಸುತ್ತದ

ವಸ್ತುತಃ ಸ್ಥೂಲಶರೀರವ ಜೀವಪಕ್ಷಿಗೆ ಗೂಡು ಜನನಕಾಲದಲ್ಲಿ ಅದನ್ನು ಹೊಕ್ಕು ಮರಣದಲ್ಲಿ ಹೊರಗೆ ಹೋಗುತ್ತದೆ ಜೀವ ಗೂಡಿನ ದೃಷ್ಟಾಂತ ಕೊಟ್ಟಿದ್ದರಿಂದ ಪ್ರಾಯಃ ಇಲ್ಲಿ 'ಲಿಂಗ'ವೆಂದರೆ ಸ್ಥೂಲ ಶರೀರ ವಿವಕ್ಷಿತವಿರಬಹುದು ಅನ್ನದ ಸಾರಭಾಗದಿಂದ ಪುಷ್ಟಿ ಹೊಂದುವುದೂ ಅನ್ನವಿಲ್ಲದಿದ್ದಾಗ ಸೊರಗುವುದೂ ಸ್ಥೂಲ ಶರೀರವೆ

ಅಡವಿ ಆಚಾರ್ಯರ ಷೋಡಶಿಗ್ರಂಥವನ್ನು ಅವಲೋಕಿಸಿದರೆ ಲಿಂಗಶರೀರ ಜೀವನಿಗೆ ಗೂಡಿನಂತಿಲ್ಲ ಕೆಂಡದಲ್ಲಿ ಬೆಂಕಿ, ಹಾಲಲ್ಲಿ ನೀರು ಬೆರತಿರುವಂತೆ ಲಿಂಗಶರೀರ ಜೀವಸ್ವರೂಪ ಸಮರಸವಾಗಿ ಬೆರೆತಿರುತ್ತದೆ ಅದರಿಂದ ಗೂಡಿನಂತಿರುವ ಲಿಂಗವೆಂದರೆ ಸ್ಥೂಲಶರೀರವೆಂದಿಟ್ಟುಕೊಳ್ಳುವುದು ಸೂಕ್ತವೆನಿಸುತ್ತದೆ ಕೆಲವು ವ್ಯಾಖ್ಯಾನಕಾರರು ಹಾಗೇ ಮಾಡಿದ್ದಾರೆ

ಅಥವಾ ಜೀವ ಸ್ವರೂಪವಾದ ಆನಂದಾನುಭವಕ್ಕೆ ವಿರೋಧಿ, ಆವರಕ ಎಂಬ ಅರ್ಥದಲ್ಲಿ ಲಿಂಗಶರೀರವನ್ನು ಗೂಡು ಎಂದರೂ ತಪ್ಪಿಲ್ಲ ಅದಕ್ಕೆ ಅನ್ನರಸದ ಸೂಕ್ಷ್ಮಭಾಗದಿಂದ ಸೂಕ್ಷ್ಮವಾಗಿ ಪುಷ್ಟಿಯನ್ನು ಒಪ್ಪಿ ಲಿಂಗಶರೀರದಿಂದ ತೊಡಗಿ ಸ್ಥೂಲಶರೀರ ಪರ್ಯಂತ ಎಲ್ಲ ಶರೀರಗಳಿಗೂ ಅನ್ನ ರಸದಿಂದ ಪುಷ್ಟಿಯನ್ನು ಹೇಳುವ ಅಭಿಪ್ರಾಯವೂ ಇರಬಹುದು

**ಷೋಡಶಾತ್ಮಕ ರಸವಿಭಾಗವ ಮಾಡಿ**

ಹಿಂದಿನ ಪದ್ಯದಲ್ಲಿ ಹೇಳಿದ 'ಚತುರವಿಧ ಭೋಜನ ಪದಾರ್ಥಾದಿ ಚತುರವಿಧ ರಸ' ಇಲ್ಲಿ ವಿವಕ್ಷಿತವಲ್ಲ ಇಲ್ಲಿ ರಸವೆಂದರೆ ರುಚಿಯಲ್ಲ, ಸಾರಭಾಗ ವಿವಕ್ಷಿತವಾಗಿದ ಶರೀರದ ಹದಿನಾರು ಭಾಗಗಳಿಗೆ ಯೋಗ್ಯವಾದ ಹದಿನಾರು ಸಾರಭಾಗಗಳು ಅನ್ನದಲ್ಲಿ ಲಭ್ಯವಾಗಿವೆ

ಅನ್ನಮಶಿತಂ ತ್ರೇಧಾ ವಿಧೀಯತೇ । (ಛಾಂದೋಗ್ಯ 6 5)

ಎನ್ನುವಂತೆ ಉಂಡ ಅನ್ನ ಮೂರು ಭಾಗವಾಗಿ ವಿಭಾಗಗೊಂಡು ಮೊದಲನೆಯದು ನಿಃಸಾರವಾದ ಮಲವಾಗಿ ಹೊರಗೆ ಹೋಗುತ್ತದೆ ಎರಡನೆಯದಾದ ಸಾರಭಾಗ ಮಾಂಸ ರಕ್ತ ಮುಂತಾದ ಧಾತುಗಳಲ್ಲಿ ಸೇರ್ಪಡೆಯಾಗುತ್ತದೆ ಮೂರನೆಯದಾದ ಅತಿ ಸೂಕ್ಷ್ಮ ಸಾರಭಾಗ ಮನಸ್ಸಿಗೆ ಪುಷ್ಟಿ ನೀಡುತ್ತದೆ ಇಲ್ಲಿ ಮನಸ್ಸಿನೊಂದಿಗೆ ಪಂಚ ಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯಗಳೂ ವಿವಕ್ಷಿತವಾಗಿವೆ ಮಾಂಸಾದಿ ಧಾತು ಗಳೆಂದರೂ ಪಂಚ ಭೂತಾಂಶಗಳು ವಿವಕ್ಷಿತವಾಗಿವೆ ಅದರಿಂದ ಹದಿನಾರು ಸಾರಭಾಗ ಗಳಿಂದ ಹದಿನಾರು ಶರೀರಭಾಗಗಳಿಗೆ ಉಪಚಯ, ಅಂದರೆ ಪುಷ್ಟಿ

**ಷೋಡಶ ಕಲೆಗಳಿಗೆ ಉಪಚಯಗಳನೆ ಕೊಡುತ**

ಮಧ್ಯೇ ತು ಸಮಾನಃ । ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ।

ಎಂದು ಷಟ್‌ಪ್ರಶ್ನೋಪನಿಷತ್ತು ಹೇಳುವಂತೆ ಸಮಾನವಾಯು ಅನ್ನರಸವನ್ನು ನಾಡಿಗಳ ಮೂಲಕ ಆಯಾ ಶರೀರಭಾಗಗಳಿಗೆ ಒಯ್ದು ಅನ್ನರಸದಲ್ಲಿರುವ ಪಂಚ ಭೂತಾಂಶ ಗಳಿಂದ ಶರೀರದ ಪಂಚ ಭೂತಾಂಶಗಳಿಗೂ ಇಂದ್ರಿಯ ಮನಸ್ಸುಗಳ ಅಂಶದಿಂದ ಇಂದ್ರಿಯ ಮನಸ್ಸುಗಳಿಗೂ ಉಪಚಯ ಕೊಡುತ್ತಾನೆ ಶ್ರೀಹರಿ ಕೊಡಿಸುತ್ತಾನೆ

**ಎಪ್ಪತ್ತೆರಡು ಸಾವಿರ ನಾಡಿ**

ಬೆನ್ನುಹುರಿಯೊಳಗೆ ಮೂಲಾಧಾರದಿಂದ ಶಿರಸ್ಸಿನವರೆಗೆ ಹಬ್ಬಿರುವ ಸುಷುಮ್ನಾ ನಾಡಿ ಪ್ರಧಾನ ಇದರ ಎಡಭಾಗದಲ್ಲಿ ಹೊರಟ ಇಡಾನಾಡಿ ಬಲಮೂಗು ಕಣ್ಣು ಕಿವಿಗಳಲ್ಲಿ ಕೊನೆಗೊಳ್ಳುತ್ತದೆ ಬಲಭಾಗದಲ್ಲಿ ಹೊರಟ ಪಿಂಗಳಾನಾಡಿ ಎಡ ಮೂಗು ಕಣ್ಣು ಕಿವಿಗಳಲ್ಲಿ ಕೊನೆಗೊಳ್ಳುತ್ತದೆ ಈ ಇಡಾ ಪಿಂಗಳಾನಾಡಿಗಳು ಐವತ್ತು ನಾಡಿಗಳ ಸಮೂಹವಾಗಿದ್ದು ಸುಷುಮ್ನಾ ಸೇರಿದಂತೆ ಒಟ್ಟು ನೂರೊಂದು ನಾಡಿಗಳು ಪ್ರಧಾನ ವೆನಿಸುತ್ತವೆ

ಶತಂ ಚೈಕಾ ಚ ಹೃದಯಸ್ಯ ನಾಡ್ಯಃ ।

ಎಂದು ಷಟ್‌ಪ್ರಶ್ನೋಪನಿಷತ್ತು ಹೇಳಿದೆ ಇಡಾನಾಮಕ ಐವತ್ತು ನಾಡಿಗಳು ಕವಲೊಡೆದು ಮೂವತ್ತಾರು ಸಾವಿರವಾಗುತ್ತವೆ ಹಾಗೇ ಪಿಂಗಳಾನಾಮಕ ಐವತ್ತು ನಾಡಿಗಳು ಕವಲೊಡೆದು ಮೂವತ್ತಾರು ಸಾವಿರವಾಗುತ್ತವೆ ಒಟ್ಟು ಎಪ್ಪತ್ತೆರಡು ಸಾವಿರ ನಾಡಿಗಳು ಇವೂ ಕವಲೊಡೆದು

ಅಸಂಖ್ಯ ನಾಡಿಗಳಾಗುತ್ತವೆ ಅವು ಅಮುಖ್ಯವೆಂದು ಪ್ರಧಾನವಾಗಿ ಎಪ್ಪತ್ತೆರಡು ಸಾವಿರ ನಾಡಿಗಳನ್ನೇ ಹೇಳಲಾಗಿದೆ ತಂತ್ರಸಾರ ಸಂಗ್ರಹದಲ್ಲಿ ಇದು ಸ್ಪಷ್ಟವಿದೆ-

ದ್ವಾಸಪ್ತತಿಸಹಸ್ರಾಣಿ ನಾಡ್ಯೋಽನ್ಯಾಸ್ತು ಪ್ರಧಾನತಃ ।

**ನಾಡಿಗತ ದೇವತೆಗಳೊಳಗಿದ್ದು ಆಡುತ**

ಚತುರವಿಂಶತಿ ತತ್ವಗಳು ತ
ತ್ಪತಿಗಳೆನಿಸುವ ಬ್ರಹ್ಮಮುಖದೇ
ವತೆಗಳನುದಿನ ಪ್ರತಿ ಪ್ರತಿ ನಾಡಿಗಳೊಳಿರುತಿದ್ದು । (ನಾಡೀ ಪ್ರ 5)

ಮಹತ್ತತ್ವ ಅಹಂಕಾರತತ್ವ ಮುಂತಾದ ಇಪ್ಪತ್ತನಾಲ್ಕು ತತ್ವಗಳು ಮತ್ತು ಅವುಗಳ ಅಭಿಮಾನಿ ದೇವತೆಗಳು ನಾಡಿಗಳಲ್ಲಿರುತ್ತಾರೆ ನಾಡಿಗಳಲ್ಲಿ ಹರಿಯುವ ಅನ್ನರಸದಲ್ಲಿ ಇಪ್ಪತ್ತನಾಲ್ಕು ತತ್ವಗಳಿರುವುದರಿಂದ ಅವುಗಳ ಅಭಿಮಾನಿಗಳೂ ಅಲ್ಲಿ ಇರುವುದು ಸಹಜ ಅವರೊಳಗೆ ಶ್ರೀಹರಿ ಇರುತ್ತಾನೆ

ಈ ತನುವಿನೊಳಗಿಹವು ಓತ
ಪ್ರೋತ ರೂಪದಿ ನಾಡಿಗಳು ಪುರು
ಹೂತ ಮುಖರಲ್ಲಿಹರು ತಮ್ಮಿಂದಧಿಕರೊಡಗೂಡಿ ।
ಭೀತಿಗೊಳಿಸುತ ದಾನವರ ॥ (ನಾಡೀಪ್ರ 16)

ಈ ಶರೀರದಲ್ಲಿ ಹರಡಿದ ನಾಡಿಗಳಲ್ಲಿ ಇಂದ್ರಾದಿ ದೇವತೆಗಳು ಲಕ್ಷ್ಮೀಬ್ರಹ್ಮಾದಿಗಳೊಂದಿಗೆ ಇದ್ದು ಶ್ರೀಹರಿಯ ಉಪಾಸನೆಯ ಬಲದಿಂದ ತತ್ವಾಭಿಮಾನಿ ಅಸುರರೊಂದಿಗೆ ಕಾದಿ ಭೀತಿಗೊಳಿಸುತ್ತ ಆಡುತ್ತಾರೆ ಅವರೊಳಗಿದ್ದು ಶ್ರೀಹರಿ ಆಡುತ್ತಾನೆ

ಮೂವತ್ತಾರು ಸಾವಿರ ಪುರುಷ ನಾಡಿಗಳಲ್ಲಿ ಪುರುಷರೂಪದಿಂದಲೂ ಮೂವತ್ತಾರು ಸಾವಿರ ಸ್ತ್ರೀನಾಡಿಗಳಲ್ಲಿ ಸ್ತ್ರೀರೂಪದಿಂದಲೂ ಇದ್ದು ಪರಸ್ಪರ ಆಲಿಂಗನಾದಿಗಳಿಂದ ಶ್ರೀಹರಿ ಆಟವಾಡುವುದು ಐತರೇಯೋಪನಿಷತ್ತಿನಲ್ಲಿ ಸ್ಪಷ್ಟವಿದೆ ಈ ಪದ್ಯದಲ್ಲಿ ಹೇಳುತ್ತಿರುವುದು ತತ್ವಾಭಿಮಾನಿಗಳೊಳಗಿದ್ದು ಅವನು ಆಡುವ ಆಟ

**ವಾರಿವಾಚ್ಯನು ವಾರಿಯೊಳಗಿ**
**ದ್ದಾರು ರಸವೆಂದೆನಿಸಿ ಮೂವ**
**ತ್ತಾರು ಸಾವಿರ ಸ್ತ್ರೀ ಪುರುಷ ನಾಡಿಯೊಳು ತದ್ರೂಪ**
**ಧಾರಕನು ತಾನಾಗಿ ಸರ್ವ ಶ**
**ರೀರಗಳಲಿ ಅಹಶ್ಚ ರಾತ್ರಿ ವಿ**
**ಹಾರ ಮಾಳ್ಪನು ಬೃಹತಿ ಎಂಬ ಸುನಾಮದಿಂ ಕರೆಸಿ ॥ ೩ ॥**

ಶ್ರೀಹರಿ ವಾರಿಶಬ್ದವಾಚ್ಯನಾಗಿ ನೀರೊಳಗಿದ್ದು ಆರು ರಸವೆಂದೆನಿಸಿ ಮೂವತ್ತಾರು ಸಾವಿರ ಸ್ತ್ರೀಪುರುಷನಾಡಿಯಲ್ಲಿ ಅದೇ ಆಕಾರ ಧರಿಸಿ ಎಲ್ಲರ ಶರೀರಗಳಲ್ಲಿ ಬೃಹತಿ ಎಂಬ ಶುಭನಾಮದಿಂದ ಕರೆಸಿಕೊಂಡು ಹಗಲು ರಾತ್ರಿ ವಿಹಾರಗೈಯುತ್ತಾನೆ

**ವಾರಿವಾಚ್ಯನು ವಾರಿಯೊಳಗಿದ್ದು**

'ವಾರಿ' ಎಂದು ನೀರಿಗೆ ಹೆಸರು ನೀರೊಳಗಿರುವ ಶ್ರೀಪರಿ 'ವಾರಿ'ನಾಮದಿಂದ ವಾಚ್ಯನೆನಿಸುತ್ತಾನೆ ಎಲ್ಲ ವಸ್ತುಗಳಲ್ಲಿಯೂ ಅಂತರ್ಗತನಾಗಿ ಆಯಾ ವಸ್ತುಗಳ ಗುಣ ಧರ್ಮ ಪ್ರಭಾವಕಾರ್ಯಗಳನ್ನು ಶಕ್ತಿಸಾಮರ್ಥ್ಯಗಳನ್ನು ವ್ಯಕ್ತಗೊಳಿಸಿ ನಿಯಂತ್ರಿಸುವ ಅದೃಶ್ಯ ಶಕ್ತಿ ಭಗವಂತನೇ ಆಗಿರುವುದರಿಂದ ಆಯಾ ವಸ್ತುಗಳ ಹೆಸರುಗಳೆಲ್ಲವೂ ಅವನಿಗೇ ಮುಖ್ಯವಾಗಿ ಸಲ್ಲುತ್ತವೆ ಅದರಿಂದ ವಾರಿಯೊಳಗಿರುವ ಹರಿಗೆ ವಾರಿ ಎಂದು ಹೆಸರು

**ವಾರಿಯೊಳಗಿದ್ದು ಆರು ರಸವೆಂದೆನಿಸಿ**

'ರಸೋಽಹಮಪ್ಸು ಕೌಂತೇಯ' (ಗೀತಾ 7 8) 'ನೀರಿನಲ್ಲಿ ಅದರ ರಸವು ನಾನೆ' ಎನ್ನುತ್ತಾನೆ ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಇದರ ಅಭಿಪ್ರಾಯ ಹೀಗಿದೆ- ಕುಂಬಾರ ಗಡಿಗೆ ಯನ್ನು ತಯಾರಿಸುವಂತೆ ಭಗವಂತನೂ ಪ್ರಪಂಚವನ್ನು ನಿರ್ಮಿಸುತ್ತಾನೆ ಆದರೆ ಕುಂಬಾರನಿಗೆ ಗಡಿಗೆಯ ಗುಣಮಟ್ಟದ ವಿಷಯದಲ್ಲಿ ಸಾಮರ್ಥ್ಯವಿಲ್ಲ ಒಳ್ಳೆಯ ಮಣ್ಣನ್ನು ಆರಿಸಿಕೊಂಡರೆ ಒಳ್ಳೆಯ ಗುಣಮಟ್ಟ ಸಾಧ್ಯ ಗಡಿಗೆಯನ್ನು ಅವನು ತಯಾರಿಸಿದರೂ ಗಡಿಗೆಯ ಗುಣವನ್ನು ಅವನು ತಯಾರಿಸಲಾರ ಭಗವಂತ ವಸ್ತುಗಳನ್ನು ತಯಾರಿಸಿದಂತೆ ಅದರ ಗುಣವನ್ನೂ ತಯಾರಿಸುತ್ತಾನೆ ಆ ಗುಣವನ್ನು ಹೇಗೆ ತಯಾರಿಸ ಬೇಕೋ ಹಾಗೆ ತಯಾರಿಸುತ್ತಾನೆ ನೀರಿನಲ್ಲಿರುವ ರಸ ನೀರಿನ ಬೇರೆ ಗುಣಗಳಿಗಿಂತ ಶ್ರೇಷ್ಠವೆನಿಸಿದೆ, ನೀರಿನ ಸ್ವಾಭಾವಿಕ ಗುಣವೆನಿಸಿದೆ ಅದರಲ್ಲಿ ರಸತ್ವ ಮುಂತಾದ ಧರ್ಮ ವಿದೆ ನೀರಿಗಿಂತಲೂ ಅದರ ರಸ ಭಗವಂತನಿಗೆ ವಿಶೇಷವಾಗಿ ಭೋಗ್ಯವಸ್ತುವಾಗಿದೆ ನೀರಿನಲ್ಲಿ ವಾರಿಶಬ್ದವಾಚ್ಯನಾಗಿ ಅವನಿರುವುದರಿಂದ ಅದು ಅವನ ಉಪಾಸನೆಗೆ ಯೋಗ್ಯ ಪ್ರತಿಮೆ ಎನಿಸಿದರೂ ನೀರಿನಲ್ಲಿ ಮಾಡುವುದಕ್ಕಿಂತ ವಿಶೇಷವಾಗಿ ರಸದಲ್ಲಿ ಭಗವಂತನ ಉಪಾಸನೆ ಮಾಡಬೇಕು ಅದು ವಿಶೇಷ ಪ್ರತಿಮೆ ಪ್ರತಿಮೆಗೂ ಭಗವಂತ ನಿಗೂ ಅಭೇದ ವ್ಯವಹಾರವಿರುವುದರಿಂದ ಆರು ರಸಗಳಲ್ಲಿರುವ ಭಗವಂತ ಆರು ರಸ ವೆಂದೆನಿಸುತ್ತಾನೆ ಎಂಬ ಅಭಿಪ್ರಾಯದಿಂದ 'ರಸೋಽಹಂ' ರಸವು ನಾನೆ ಎನ್ನುತ್ತಾನೆ ಶ್ರೀಕೃಷ್ಣ ಹೊರತು ಭೌತಿಕವಾದ ರಸವೆ ಭಗವಂತನಲ್ಲ ಸುಂದರವಾದ ಪ್ರತಿಮೆಯಲ್ಲಿ ಭಗವಂತನನ್ನು ಆರಾಧಿಸುವಂತೆ ಉತ್ತಮವಾದ ರಸವೆಂಬ ಗುಣದಲ್ಲಿ ಅದರ ಅಭಿಮಾನಿ ದೇವತೆಯಲ್ಲಿ ಭಗವಂತನನ್ನು ಆರಾಧಿಸಬೇಕು ಆಗ ನಮಗ ರಸದಿಂದ ಉತ್ತಮವಾದ ಶರೀರ ಪುಷ್ಟಿ ಆರೋಗ್ಯಾದಿ ಫಲ ಲಭಿಸುತ್ತದೆ

ನೀರಿನಲ್ಲಿ ಆರು ರಸಗಳಿವೆಯೆ? ಮಧುರ ಆಮ್ಲ ಲವಣ ತಿಕ್ತ ಕಟು ಕಷಾಯ ಅಂದರೆ, ಸಿಹಿ ಹುಳಿ ಉಪ್ಪು ಕಹಿ ಖಾರ ಒಗರು ಇವು ಆರು ರುಚಿಗಳನ್ನು ಆರು ರಸವೆನ್ನುತ್ತಾರೆ. ಬೇಸಗೆಯ ಬಿಸಿಲಲ್ಲಿ ನೀರಡಿಸಿ ಗಂಗಾಜಲ ಪಾನ ಮಾಡಿದರೆ ಮಧುರ ರಸ ಅನುಭವವಾಗುತ್ತದೆ. ಅಳಲೆಕಾಯಿ ನೆಲ್ಲಿಕಾಯಿ ತಿಂದು ನೀರು ಕುಡಿದರಂತೂ ಹೆಚ್ಚು ಮಧುರ ರಸದ ಅನುಭವ. ಈ ಮಾಧುರ್ಯ ಅಳಲೆಕಾಯಿ ನೆಲ್ಲಿಕಾಯಿಗಳದಲ್ಲ. ಅವುಗಳನ್ನು ತಿಂದ ನಾಲಿಗೆಗೆ ನೀರಿನ ಮಾದುರ್ಯವನ್ನು ಸವಿಯುವ ಸಾಮರ್ಥ್ಯ ಬರುತ್ತದೆ. ಅಳಲೆಕಾಯಿಯಲ್ಲಿಯೆ ಚಿತ್ರರಸವಿದ್ದು ಅದರಲ್ಲಿ ಸೇರಿದ ಮಾಧುರ್ಯ ವನ್ನು ನೀರು ವ್ಯಕ್ತಗೊಳಿಸುತ್ತದೆ. ಹೊರತು ನೀರಲ್ಲಿ ಮಾಧುರ್ಯವಿಲ್ಲ. ಯಾವ ರಸವೂ ಇಲ್ಲ ಎಂದು ಒಂದು ವಾದ. ಚಿತ್ರರಸವೆಂಬ ರಸವೆ ಸುಳ್ಳಾಗಿದ್ದು ಮಾಧುರ್ಯ ನೀರಿನದೆ ಗುಣವೆಂದು ಇನ್ನೊಂದು ವಾದ. ಅಂತೂ ನೀರಿನಲ್ಲಿ ಮಾಧುರ್ಯಗುಣ ವಿವಾದಾಸ್ಪದ. ಇನ್ನು ಬೇರೆ ರಸದ ಪ್ರಶ್ನೆಯೆ ಬರುವುದಿಲ್ಲ. ಹರಿಕಥಾಮೃತ ಸಾರ ಸ್ಪಷ್ಟ ಹೇಳುತ್ತದೆ- ವಾರಿಶಬ್ದವಾಚ್ಯನಾಗಿ ವಾರಿಯಲ್ಲಿದ್ದು ಆರು ರಸವೆಂದೆನಿಸಿದ್ದಾನೆ ಎಂದು. ವಿಜಯದಾಸರು ರಸವಿಭಾಗ ಸುಳಾದಿಯಲ್ಲಿ ಹೇಳುತ್ತಾರೆ-

ಕ್ಷೀರವೆ ಮೊದಲಾದ ಪದಾರ್ಥನಿಕರದಿ<br>
ಶ್ರೀರಮಾಪತಿ ತಾನು ವಿಶದಾದಿರೂಪದಿ<br>
ಧಾರಾಳವಾಗಿ ನಿಂತು ಬಹುರೂಪವನೆನಿಸಿ<br>
ಸಾರವೆ ಸ್ವೀಕರಿಸುವ ತೆರದಲಿ ನಿರುತದಿ<br>
ವಾರಿಲಿ ಆರು ರಸ ವೆನಿಪ ದ್ರವವಾಗಿ<br>
ಮಾರಜನಕ ವಿಜಯ ವಿಟ್ಠಲನ ದಯ ಪಡೆವ<br>
ಧೀರರು ತಿಳಿದಿದನು ಅನುಭವಿಸುವುದು ನಿತ್ಯ ॥

ನೀರಿನಲ್ಲಿ ದ್ರವವಾಗಿ ಆರು ರಸವೆನಿಸುತ್ತಾನೆ ಎನ್ನುತ್ತಾರೆ. ಸಂಕರ್ಷಣ ಒಡೆಯರ ವ್ಯಾಖ್ಯಾನದಲ್ಲಿ 'ಪೃಥಿವಿ ಸರ್ವಗಂಧಾಶ್ರಯ, ಅಪ್ಪು ಸರ್ವರಸಾಶ್ರಯ. ಪೃಥಿವಿಯಲ್ಲಿ ರಸದ ಅನುಭವವಾಗುವುದು ಅದರಲ್ಲಿ ಸೇರಿದ ಅಪ್ಪಿನ ಭಾಗದ್ದು' ಎಂದು ಹೇಳಿದೆ. ಎಲ್ಲ ವ್ಯಾಖ್ಯಾನಗಳೂ ಇದೇ ಅಭಿಪ್ರಾಯದವುಗಳಾಗಿವೆ. ಗಂಧ ತನ್ಮಾತ್ರೆಯಿಂದ ಉಂಟಾಗುವ ಪೃಥಿವಿಯಲ್ಲಿ ಸರ್ವಗಂಧವಿರುವಂತೆ ರಸ ತನ್ಮಾತ್ರೆಯಿಂದ ಉಂಟಾಗುವ ನೀರಿನಲ್ಲಿ ಸರ್ವರಸವಿರಬೇಕಾದುದು ನ್ಯಾಯವೆ. ಆದರೂ ನೀರಿನಲ್ಲಿ ಆರು ರಸಗಳ ಅನುಭವ ಏಕಿಲ್ಲ? ಬೇರೆ ಬೇರೆ ಹಣ್ಣಿನ ರಸದಲ್ಲಿ ಬೇರೆ ಬೇರೆ ರುಚಿ ಕಂಡು ಬಂದರೂ ಅದು ಆ ಹಣ್ಣಿನ ಪೃಥಿವಿ ಭಾಗದ್ದು ಎಂದೇಕೆ ಹೇಳಬಾರದು? ಶುದ್ಧವಾದ ಮಳೆ ನೀರಿನಲ್ಲಿ ಉಪ್ಪು ಕಹಿ ಹುಳಿ ಮುಂತಾದ ಯಾವ ರಸವೂ ಕಾಣುವುದಿಲ್ಲ ಏಕೆ?

ಈ ಪ್ರಶ್ನೆಗೆ ಹೀಗೆ ಸಮಾಧಾನ ಹೇಳಬಹುದು. ರಸತನ್ಮಾತ್ರೆಯಿಂದ ಜನಿಸಿದ ನೀರಿನಲ್ಲಿಯೆ ಎಲ್ಲ ರಸವೆನ್ನುವುದೆ ನ್ಯಾಯ. ಪೃಥಿವಿಯಲ್ಲಿಯೆ ಯಾವ ರಸವೂ ಇಲ್ಲ ಎನ್ನಬೇಕು. ಅದರಲ್ಲಿ

ಎಲ್ಲ ರಸವೂ ಕಾಣುತ್ತದೆ, ಇದು ಭ್ರಮೆ ರಸ ಪೃಥಿವಿಯದಲ್ಲ ಪಂಚೀಕರಣ ಪ್ರಕ್ರಿಯೆಯಿಂದ ಅದರಲ್ಲಿ ಸೇರಿರುವ ನೀರಿನದು ಪೃದಿವಿ ಭಾಗ ಜಲಭಾಗದ ರಸಕ್ಕೆ ವ್ಯಂಜಕವಾಗಿದೆ ಪಂಚೀಕರಣದಿಂದಾಗಿ ನಮಗೆ ಶುದ್ಧವಾದ ಪಂಚ ಭೂತ ಎಲ್ಲಿಯೂ ಸಿಗುವುದಿಲ್ಲ ಎಲ್ಲ ಪೃಥಿವಿ ವಸ್ತುಗಳಲ್ಲಿಯೂ ನೀರಿನ ಅಂಶವಿದ್ದೇ ಇದೆ ಎಷ್ಟು ಒಣಗಿದರೂ ನೀರಿನ ಅಂಶವಿಲ್ಲದಿಲ್ಲ ಆ ನೀರಿನ ರಸವನ್ನೆ ಪೃಥಿವಿಭಾಗ ವ್ಯಕ್ತ ಮಾಡಿ ಕೊಡುತ್ತದೆ ಹೀಗಾಗಿ ನೀರಿನಲ್ಲಿಯೆ ಎಲ್ಲ ರಸ

ಅಥವಾ 'ಜಲೇ ಮಧುರ ಏವ' ನೀರಲ್ಲಿ ಮಧುರರಸ ಒಂದೇ ಇದೆ ಎನ್ನುವುದೂ ತಪ್ಪಲ್ಲ ಆರು ರಸವೆಂದರೆ,

ಆರು ರಸ ಸತ್ವಾದಿ ಭೇದದಿ
ಆರು ಮೂರಾಗಿಹವು ಸಾರಾ
ಸಾರ ನೀತಾನೀತ ಖಂಡಾಖಂಡ ಚಿತ್ರ ಚುರ ॥

ಎಂದು ಹರಿಕಥಾಮೃತ ಸಾರದಲ್ಲಿಯೆ ಮುಂದಿನ ಪದ್ಯದಲ್ಲಿ ಹೇಳುವಂತೆ ಸಾರ, ಅಸಾರ, ನೀತ, ಅನೀತ, ಖಂಡ, ಅಖಂಡ ಎಂದು ಆರು ರಸಗಳು ವಿವಕ್ಷಿತವಾಗಿವೆ ಮಧುರ ಆಮ್ಲ ಮುಂತಾದವುಗಳಲ್ಲ.

**ಮೂವತ್ತಾರು ಸಾವಿರ ಸ್ತ್ರೀಪುರುಷ ನಾಡಿಯೊಳು .**

ನಮ್ಮ ಶರೀರದಲ್ಲಿ ಬಲಭಾಗದಲ್ಲಿ ಮೂವತ್ತಾರು ಸಾವಿರ ಪಿಂಗಲಾನಾಡಿಗಳಿವೆ ಎಡಭಾಗದಲ್ಲಿ ಮೂವತ್ತಾರು ಸಾವಿರ ಇಡಾನಾಡಿಗಳಿವೆ ಬಲಭಾಗದ ನಾಡಿಗಳಲ್ಲಿ ಹರಿವಾಯುಗಳು ಪುರುಷರೂಪದಿಂದಲೂ ಎಡಭಾಗದ ನಾಡಿಗಳಲ್ಲಿ ಸ್ತ್ರೀರೂಪ ದಿಂದಲೂ ಇರುತ್ತಾರೆ ಪುರುಷರೂಪವಿರುವ ನಾಡಿಗಳನ್ನು ಪುರುಷನಾಡಿಗಳೆನ್ನುತ್ತಾರೆ ಸ್ತ್ರೀರೂಪವಿರುವ ನಾಡಿಗಳನ್ನು ಸ್ತ್ರೀನಾಡಿಗಳೆನ್ನುತ್ತಾರೆ

**ಬೃಹತಿ ಎಂಬ ಸುನಾಮದಿಂ ಕರೆಸಿ**

ಈ ಎಲ್ಲ ರೂಪಗಳೂ ಬೃಹತಿ ನಾಮಕವಾಗಿವೆ ಏಕೆಂದರೆ ಬೃಹತೀ ಎಂಬ ಛಂದಸ್ಸಿನ ಪದ್ಯದಲ್ಲಿ ಮೂವತ್ತಾರು ಅಕ್ಷರಗಳೆಂದು ನಿಯಮ ಅಂದರೆ, ಮೂವತ್ತಾರು ಸ್ವರಗಳು, ಮೂವತ್ತಾರು ವ್ಯಂಜನಗಳಿರುತ್ತವೆ ಅದರಿಂದ ಬೃಹತಿ ಛಂದಸ್ಸಿನ ಸಾವಿರ ಪದ್ಯಗಳಲ್ಲಿ ಮೂವತ್ತಾರು ಸಾವಿರ ಸ್ವರಗಳು ಮೂವತ್ತಾರು ಸಾವಿರ ವ್ಯಂಜನಗಳು ನಾಡಿಗಳಲ್ಲಿರುವ ಮೂವತ್ತಾರು ಸಾವಿರ ಪುರುಷರೂಪಗಳು ಬೃಹತಿಯಲ್ಲಿ ಮೂವತ್ತಾರು ಸಾವಿರ ಸ್ವರ ಗಳಿಂದ ಪ್ರತಿಪಾದ್ಯಗಳಾಗಿವೆ ಮೂವತ್ತಾರು ಸಾವಿರ ಸ್ತ್ರೀರೂಪಗಳು ಬೃಹತಿಯಲ್ಲಿ ಮೂವತ್ತಾರು ಸಾವಿರ ವ್ಯಂಜನಗಳಿಂದ ಪ್ರತಿಪಾದ್ಯಗಳಾಗಿವೆ ಅದರಿಂದ ಎಲ್ಲ ಸ್ತ್ರೀ ಪುರುಷರೂಪಗಳು ಬೃಹತೀಪ್ರತಿಪಾದ್ಯಗಳಾಗಿದ್ದು ಬೃಹತಿ ಎನಿಸುತ್ತವೆ

**ಅಹಶ್ಚ ರಾತ್ರಿ·**

ಪುರುಷರೂಪಗಳು ಹಗಲುಗಳಿಗೆ ನಿಯಾಮಕಗಳಾಗಿದ್ದು ಸೂರ್ಯನಲ್ಲಿಯೂ ಇವೆ ಸ್ತ್ರೀರೂಪಗಳು ರಾತ್ರಿಗಳಿಗೆ ನಿಯಾಮಕಗಳಾಗಿದ್ದು ಸೂರ್ಯನಲ್ಲಿಯೂ ಇವೆ ಹೀಗಾಗಿ ಹಗಲುರಾತ್ರಿಗಳನ್ನು ನಿಯಂತ್ರಿಸುವ ಪುರುಷಸ್ತ್ರೀರೂಪಗಳು ನಮ್ಮ ಶರೀರ ನಾಡಿಗಳಲ್ಲಿ ಹಗಲು ರಾತ್ರಿ ವಿಹಾರ ಮಾಡುತ್ತವೆ

**ವಿಹಾರ ಮಾಳ್ಪನು**

ಕೆಲವೊಮ್ಮೆ ವ್ಯಂಜನಗಳಲ್ಲಿರುವ ಸ್ತ್ರೀರೂಪಗಳು ಹಗಲುಗಳಿಗೆ ನಿಯಾಮಕವಾಗಿ ಸೂರ್ಯನಲ್ಲಿರುವ ಪುರುಷರೂಪಗಳೊಂದಿಗೆ ಸೇರಿ ವಿಹಾರ ಮಾಡುತ್ತವೆ ಸ್ವರಗಳಲ್ಲಿ ಇರುವ ಪುರುಷರೂಪಗಳು ರಾತ್ರಿಗಳಿಗೆ ನಿಯಾಮಕವಾಗಿ ಸೂರ್ಯನಲ್ಲಿರುವ ಸ್ತ್ರೀ ರೂಪಗಳೊಡನೆ ಸೇರಿ ವಿಹಾರ ಮಾಡುತ್ತವೆ

ಕೆಲವೊಮ್ಮೆ ರಾತ್ರಿನಿಯಾಮಕ ಸ್ತ್ರೀರೂಪಗಳು ಹಗಲು ನಿಯಾಮಕ ಪುರುಷ ರೂಪ ಗಳೊಂದಿಗೆ ವಿಹರಿಸುತ್ತವೆ ಮತ್ತು ವ್ಯಂಜನಗಳಲ್ಲಿರುವ ಸ್ತ್ರೀರೂಪಗಳು ಸ್ವರಗಳಲ್ಲಿರುವ ಪುರುಷರೂಪಗಳೊಡನೆ ವಿಹರಿಸುತ್ತವೆ

ಕೆಲವೊಮ್ಮೆ ಹಗಲಿನ ಪುರುಷರೂಪಗಳು ಸ್ತ್ರೀರೂಪಗಳಾಗಿ, ರಾತ್ರಿಯ ಸ್ತ್ರೀರೂಪ ಗಳು ಪುರುಷರೂಪಗಳಾಗಿ ಜೊತೆಗೆ ವಿಹರಿಸುತ್ತವೆ ಒಮ್ಮೆಗೇ ಸ್ತ್ರೀಪುರುಷ ಉಭಯ ರೂಪಗಳಾಗಿಯೂ ವಿಹರಿಸುತ್ತವೆ

ಕೆಲವೊಮ್ಮೆ ಎಲ್ಲ ಪುರುಷರೂಪಗಳೂ ಒಂದು ಪುರುಷರೂಪವಾಗಿ, ಎಲ್ಲ ಸ್ತ್ರೀರೂಪ ಗಳೂ ಒಂದು ಸ್ತ್ರೀರೂಪವಾಗಿ ಆ ಎರಡು ಸ್ತ್ರೀಪುರುಷರೂಪಗಳು ಜೊತೆಗೂಡಿ ವಿಹರಿಸುತ್ತವೆ ಹೀಗೆ ಲೀಲೆಯಿಂದ ಆನಂದಮಯನಾದ ಶ್ರೀಹರಿ ವಿಹಾರ ಮಾಡುವನೆಂದು ಐತರೇಯಭಾಷ್ಯದಲ್ಲಿ ವರ್ಣಿಸಲಾಗಿದೆ ಈ ವಿಹಾರದ ಫಲವಾಗಿ ನಾವು ಉಣ್ಣುವ ಅನ್ನದ ರಸ ನಾಡಿಗಳಲ್ಲಿ ಹರಿದು ನಮಗೆ ಉತ್ಸಾಹ ಚೈತನ್ಯಗಳನ್ನು ಉಂಟುಮಾಡುತ್ತದೆ, ನಲಿಯುವಂತೆ ಮಾಡುತ್ತದೆ

**ಆರು ರಸ ಸತ್ವಾದಿ ಭೇದದ**
**ಲಾರು ಮೂರಾಗಿಹವು ಲಾಸಾರಾ**
**ಸಾರ ನೀತಾನೀತ ಖಂಡಾಖಂಡ ಚಿತ್ರಚುರ।**
**ಈರಧಿಕ ಎಪ್ಪತ್ತು ಸಾವಿರ**
**ಮಾರಮಣನ ರಸಾಖ್ಯ ರೂಪ ಶ**
**ರೀರದಲಿ ಭೋಜ್ಯಸುಪದಾರ್ಥದಿ ತಿಳಿದು ಭುಂಜಿಪುದು ॥ ೪ ॥**

ಸಾರ ಅಸಾರ ನೀತ ಅನೀತ ಖಂಡ ಅಖಂಡ ಎಂದು ಆರು ಬಗೆಯ ರಸವಿದೆ ಈ ಆರು ರಸಗಳು ಸಾತ್ವಿಕ ರಾಜಸ ತಾಮಸ ಎಂದು ಮೂರು ಬಗೆಯಾಗಿರುವುದರಿಂದ ಒಟ್ಟು ಹದಿನೆಂಟಾಗುವುವು ಚೈತನ್ಯಮಯವಾದ ಎಪ್ಪತ್ತೆರಡು ಸಾವಿರ ರಸನಾಮಕ ಭಗವದ್ರೂಪಗಳು ಶರೀರದೊಳಗೆ ಭೋಜ್ಯವಾದ ಉತ್ತಮ ಪದಾರ್ಥದಲ್ಲಿ ಇರುತ್ತವೆ ಎಂದು ತಿಳಿದು ಉಣಬೇಕು

**ಆರು ರಸ ಸತ್ವಾದಿ ಭೇದದಲಿ**

ಮಧುರ ಆಮ್ಲ ಲವಣ ತಿಕ್ತ ಕಟು ಕಷಾಯ ಎಂಬ ಆರು ರಸಗಳು ಲೋಕ ವ್ಯವಹಾರದಲ್ಲಿ ಪ್ರಸಿದ್ಧವಾಗಿವೆ ಆದರೆ ಪಾಕಶಾಸ್ತ್ರದಲ್ಲಿ ಬೇರೆ ಆರು ರಸಗಳು ಉಕ್ತವಾಗಿವೆ ಅವು ಸಾರ ಅಸಾರ ನೀತ ಅನೀತ ಖಂಡ ಅಖಂಡ ಎಂದು ಕರೆಯಲ್ಪಡುತ್ತವೆ ಅವು ಮಧುರಾದಿ ಪದಾರ್ಥಗಳಲ್ಲಿ ಇರುತ್ತವೆ ಎಂದು ಶ್ರೀವಿಜಯದಾಸರ ಸುಳಾದಿ ಹೇಳುತ್ತಿದೆ-

ಪಾರಿಲಿ ಮಧುರವೆ ಪ್ರಾಮುಖ್ಯವೆನಿಪುದು
ಸಾರುವೆ ಮದುರಾದಿ ಗತ ರಸ
ಸಾರಾಸಾರ ನೀತಾನೀತ ಖಂಡಾಖಂಡ
ಮೂರೆರಡು ರಸಗಳು ಇಪ್ಪವಯ್ಯ
ಧೀರರು ತಿಳಿವುದು ಸತ್ವಾದಿ ಭೇದದಿಂದ
ಮೂರಾರು ರಸವೆನಿಸಿ ರಾಜಿಪುದು
ವಾರಿಜನಯನ ಸಿರಿ ವಿಜಯವಿಠಲ ತಾನೆ
ಸಾರಭೂತವಾದ ಚಿತ್ತ್ರಚುರ ಸ್ವೀಕರಿಪ ॥

ಇಲ್ಲಿ ಸಾರ ಅಸಾರ ಮುಂತಾದ ರಸಗಳನ್ನು ಸ್ಪಷ್ಟವಾಗಿ 'ಮಧುರಾದಿಗತ' ರಸ ಎಂದಿರುವುದರಿಂದ ಮಧುರ ಮುಂತಾದ ಪ್ರತಿಯೊಂದು ರಸವೂ ಸಾರ ಅಸಾರ ಮುಂತಾಗಿ ಆರು ವಿಧವಾಗಿವೆ ಎಂದಂತಾಯಿತು ಮುಂದೆ ಇದೇ ರೀತಿಯಲ್ಲಿ ಕ್ಷೀರಮಾಧುರ್ಯ 'ವಿಶದ' ವೆನಿಸುತ್ತದೆ, 'ಸ್ಥಿರ' ವೆಂದು ತುಪ್ಪದ ಮಾಧುರ್ಯ, 'ತೀಕ್ಷ್ಣ'ವೆಂದು ಬೆಲ್ಲದ ಮಾಧುರ್ಯ, 'ನಿರ್ಹಾರಿ' ಎಂದು ಹಲಸಿನಹಣ್ಣು ಮುಂತಾದವುಗಳ ಮಾಧುರ್ಯ ಕರೆಯಲ್ಪಡುತ್ತವೆ ಎಂದು ಪಾಕಶಾಸ್ತ್ರದಲ್ಲಿ ಹೇಳುವ ಮಾಧುರ್ಯದ ಅನೇಕ ಬಗೆಗಳನ್ನು ಹರಿಕಥಾಮೃತಸಾರವೆ ಹೇಳುತ್ತದೆ

ಈ ಮಧುರಾದಿ ರಸಗಳೂ ಅವುಗಳ ಪ್ರಬೇದಗಳಾದ ಸಾರ ಅಸಾರ ಮುಂತಾದ ರಸಗಳೂ ಸಾತ್ವಿಕ ರಾಜಸ ತಾಮಸ ಎಂದು ತಿರುಗಿ ಮೂರು ಬಗೆಯವುಗಳಾಗಿವೆ ಭಗವದ್ಗೀತಾ ಸಪ್ತದಶಾಧ್ಯಾಯದಲ್ಲಿ ಸಾತ್ವಿಕ ರಾಜಸ ತಾಮಸ ಆಹಾರಗಳ ಬಗ್ಗೆ ವಿವರಣ ಸಿಗುತ್ತದೆ ಆಯುಸ್ಸು ಚಿತ್ತಶುದ್ಧಿ ಬಲ ಆರೋಗ್ಯಗಳಿಗೆ ಕಾರಣವಾಗುವಂತೆ ಹಿತಮಿತವಾಗಿರುವ

ಮಧುರಾದಿರಸಗಳು ಸಾತ್ವಿಕವೆನಿಸುತ್ತವೆ ಅತಿಯಾಗಿದ್ದು ಅನಾರೋಗ್ಯಕ್ಕೆ ಕಾರಣವಾಗುವಂತಿದ್ದರೆ ರಾಜಸವೆನಿಸುತ್ತವೆ ಎಂಜಲು ಅಶುಚಿ ಯಾಗಿದ್ದರೆ ತಾಮಸವೆನಿಸುತ್ತವೆ

**ಸಾರಾಸಾರ ನೀತಾನೀತ ಖಂಡಾಖಂಡ**

ಸಾರ ಎಂದರೆ ಸಾತ್ವಿಕರು ಸೇವಿಸುವ ಸುಖ, ಅಸಾರ ಎಂದರೆ ತಾಮಸರು ಉಣ್ಣುವ ದುಃಖ, ನೀತ ಎಂದರೆ ರಾಜಸರು ಉಣ್ಣುವ ಸುಖಮಿಶ್ರದುಃಖ ಎಂದು ಮುಂತಾಗಿ ವ್ಯಾಖ್ಯಾನಕಾರರು ವಿವರಣೆ ನೀಡುತ್ತಾರೆ ಆದರೆ ಜಂಬುಖಂಡಿ ವಾದಿರಾಜಾಚಾರ್ಯರು ಹೇಳುತ್ತಾರೆ-

'ಸೂದಶಾಸ್ತ್ರೋಕ್ತ ಷಡ್ರಸನಾಮಾನ್ಯಾಹ'

ಪಾಕಶಾಸ್ತ್ರದಲ್ಲಿ ಹೇಳಿದ ಆರು ರಸನಾಮಗಳು ಇವು ಎಂದು ರಸಗಳಲ್ಲಿ ರಸರೂಪನಾಗಿ ಇರುವ ಭಗವಂತನ ಎಪ್ಪತ್ತೆರಡುಸಾವಿರ ರೂಪಗಳನ್ನು ಹೇಳುವ ಪ್ರಸಂಗ ಇದಾದುದರಿಂದ ಸಾರ ಅಸಾರ ಮುಂತಾದವು ರಸಗಳೆಂದೇ ಹೇಳುವುದು ಸೂಕ್ತ ಶ್ರೀವಿಜಯದಾಸರ ಸುಳಾದಿಯೂ ಹಾಗೇ ಹೇಳುತ್ತದೆ

ಹರಿಕಥಾಮೃತಸಾರದಲ್ಲಿ 'ನೀತಾನೀತ' ಎಂಬಲ್ಲಿ 'ನೀತಪ್ರಚುರ' ಎಂದು ಗುರುಯೋಗಿಧ್ಯೇಯರು ಸ್ವೀಕರಿಸಿದ ಪಾಠ 'ನೀತಾಪ್ರಚುರ' ಎಂದು ಸಂಕರ್ಷಣ ಒಡೆಯರ ಪಾಠ 'ನೀತಾನೀತ' ಎಂದು ಕಮಲಾಪತಿದಾಸರ ಪಾಠ ಇದೇ ಸುಳಾದಿಗೆ ಅನುಸಾರಿಯಾದ ಪಾಠ

**ಚಿತ್ಪ್ರಚುರ**

ರಸಗಳಲ್ಲಿ ರಸರೂಪನಾಗಿ ರಸನಾಮಕನಾಗಿ ಭಗವಂತನಿರುತ್ತಾನೆ ಎಂದೊಡನೆ ಚಿನ್ಮಯನಾದ ಭಗವಂತ ತಾನೆ ಜಡರಸವಾಗುತ್ತಾನೆ ಎಂದು ತಿಳಿಯಬಾರದು ಜಡವಾದ ರಸದಲ್ಲಿ ತನ್ನದೇ ಆದ 'ಚಿತ್ಪ್ರಚುರ' ಅಂದರೆ ಚಿನ್ಮಯವಾದ ರೂಪದಿಂದಲೆ ಇರುತ್ತಾನೆ ಆ ರೂಪಗಳಿಗೂ ರಸನಾಮಗಳೆ ಇರುತ್ತವೆ ಎಂದು ತಿಳಿಯಬೇಕು ಭೋಜ್ಯವಾದ ಅನಿಷಿದ್ಧವಾದ ಉತ್ತಮ ಪದಾರ್ಥಗಳಲ್ಲಿ ಚಿನ್ಮಯವಾದ ಎಪ್ಪತ್ತೆರಡು ಸಾವಿರ ಭಗವದ್ರೂಪಗಳನ್ನು ಚಿಂತಿಸುತ್ತ ಉಣಬೇಕು

**ಈರಧಿಕ ಎಪ್ಪತ್ತು ಸಾವಿರ ಮಾರಮಣನ ರಸಾಖ್ಯರೂಪ**

ಹಿಂದೆ ಹೇಳಿದ ಹದಿನೆಂಟು ಬಗೆಯ ರಸಗಳಲ್ಲಿ ಶ್ರೀಹರಿಯ ಎಪ್ಪತ್ತೆರಡು ಸಾವಿರ ರಸಾಖ್ಯರೂಪಗಳಿವೆ ಅವು ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ದ್ರವರೂಪದಿಂದ ಹರಿಯುತ್ತವೆ ಏಕೆಂದರೆ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಅನ್ನರಸ ಹರಿಯುತ್ತ ದೇಹವನ್ನು ಕಾಪಾಡುತ್ತದೆ ಅದರೊಳಗೆ ಚಿನ್ಮಯವಾದ ಹರಿಯ ರೂಪಗಳಿರುವುದು ಆವಶ್ಯಕ

ಭೋಜ್ಯ ಸುಪದಾರ್ಥಾದಿ

ಭೋಜ್ಯವಾದ ಅನಿಷಿದ್ಧವಾದ ಅನ್ನದಲ್ಲಿ ಭಗವದ್ರೂಪಗಳನ್ನು ತಿಳಿದರೆ ಮಾತ್ರ ಅದು ಉಪಾಸನೆಯಾಗುತ್ತದೆ ನಿಷಿದ್ಧವಾದ ಕೆಟ್ಟ ಅನ್ನದಲ್ಲಿ ಉಪಾಸನೆ ಕೂಡದು ಅದರಿಂದ ಈ ಅನ್ನರಸ ನನ್ನ ಶರೀರದ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಹರಿಯಲಿ ಅಲ್ಲಿ ಎಪ್ಪತ್ತೆರಡು ಸಾವಿರ ರೂಪಗಳಿಂದ ಹರಿ ಇದ್ದು ಶರೀರಧಾರಣೆ ಮಾಡಲಿ ಎಂಬ ಅನುಸಂಧಾನದಿಂದ ಉಂಡರೆ ಅದು ಅವನಿಗೆ ಪ್ರಿಯವಾದ ಒಳ್ಳೆಯ ಯಜ್ಞವಾಗುವುದು

ಕ್ಷೀರಗತರಸರೂಪಗಳು ಮು
ನ್ನೂರು ಮೇಲೈವತ್ತು ನಾಲಕು
ಚಾರು ಘೃತಗತರೂಪಗಳು ಇಪ್ಪತ್ತರೊಂಬತ್ತು।
ಸಾರ ಗುಡದೊಳಗೈದು ಸಾವಿರ
ನೂರವೊಂದು ಸುರೂಪ ದ್ವಿಸಹ
ಸ್ರಾರೆರಡು ಶತ ಪಂಚವಿಂಶತಿ ರೂಪ ಫಲಗಳಲಿ ॥ ೫ ॥

ವಿಶದ ಸ್ಥಿರ ತೀಕ್ಷಣವು ನಿರಹರ
ರಸಗಳೊಳು ಮೂರೈದು ಸಾವಿರ
ತ್ರಿಸತನವ ರೂಪಗಳ ಚಿಂತಿಸಿ ಭುಂಜಿಪುದು ವಿಷಯ।
ಶ್ವಸನ ತತ್ವೇಶರೊಳಗಿದ್ದೀ
ಪೆಸರಿನಿಂದಲಿ ಕರೆಸುವನು ಧೇ
ನಿಸಿದರೀಪರಿ ಮನಕೆ ಪೊಳೆವನು ಬಲ್ಲ ವಿಬುಧರಿಗೆ ॥ ೬ ॥

ಹಾಲಿನ ಮಧುರರಸದಲ್ಲಿರುವ ಭಗವದ್ರೂಪಗಳು ಮುನ್ನೂರೈವತ್ತನಾಲಕು ಮನೋಹರವಾದ ತುಪ್ಪದ ಮಧುರರಸದಲ್ಲಿರುವ ಭಗವದ್ರೂಪಗಳು ಇಪ್ಪತ್ತರೊಂಬತ್ತು ಉತ್ತಮವಾದ ಬೆಲ್ಲದ ಮಧುರರಸದಲ್ಲಿರುವ ಭಗವದ್ರೂಪಗಳು ಐದು ಸಾವಿರದ ನೂರೊಂದು ಹಲಸಿನ ಹಣ್ಣು ಮುಂತಾದ ಹಣ್ಣುಗಳ ಮಧುರರಸಗಳಲ್ಲಿರುವ ಭಗವದ್ರೂಪಗಳು ಎರಡು ಸಾವಿರದೆಂಟು ನೂರಿಪ್ಪತ್ತೈದು

ಹೀಗೆ ವಿಶದ ಸ್ಥಿರ ತೀಕ್ಷ್ಣ ನಿರ್ಹಾರಿ ಎಂಬ ನಾಲ್ಕು ಬಗೆಯ ಮಧುರ ರಸಗಳಲ್ಲಿ ಒಟ್ಟು ಎಂಟು ಸಾವಿರದ ಮುನ್ನೂರೊಂಬತ್ತು ಭಗವದ್ರೂಪಗಳನ್ನು ಚಿಂತಿಸಿ ಭೋಜ್ಯ ಪದಾರ್ಥಗಳನ್ನು ಭುಂಜಿಸಬೇಕು ವಾಯು ಮತ್ತು ತತ್ವಾಭಿಮಾನಿ ದೇವತೆಗಳಲ್ಲಿ ಶ್ರೀಹರಿ ಇದ್ದು ಈ ಹೆಸರಿನಿಂದ ಕರೆಸುತ್ತಾನೆ ಹೀಗೆ ಧ್ಯಾನಿಸಿದರೆ ಬಲ್ಲ ಜ್ಞಾನಿಗಳಿಗೆ ಶ್ರೀಹರಿ ಮನಸಿಗೆ ಹೊಳೆಯುತ್ತಾನೆ

**ಕ್ಷೀರಗತ ರಸರೂಪಗಳು**

ಕ್ಷೀರರಸದಲ್ಲಿ ಭಗವದ್ರೂಪಗಳು 354 ಹೀಗೆ ಕರಾರುವಾಕ್ಕಾಗಿ ಹೇಗೆ ಹೇಳಲು ಸಾಧ್ಯವೆಂದರೆ ಅದಕ್ಕೆ ಪ್ರಮಾಣವಿದೆ, ಮಾತ್ರವಲ್ಲ, ಕ್ಷೀರರಸಕ್ಕೆ 'ವಿಶದ' ಎಂದು ಹೆಸರಿದೆ ಈ ಹೆಸರಿನಲ್ಲಿ 354 ಎಂಬ ಸಂಖ್ಯೆ ಅಡಗಿದೆ

ವಿಶದಂ ಕ್ಷೀರಮಾಧುರ್ಯಂ, ಸ್ಥಿರಮಾಜ್ಯಸ್ಯ, ತೀಕ್ಷ್ಣಕಮ್।
ಗುಡಸ್ಯ, ಪನಸಾದೀನಾಂ ನಿಹರ್ರೀತ್ಯಭಿಧೀಯತೇ॥

ಎಂಬ ಸೂದಶಾಸ್ತ್ರವಚನ ಪ್ರಕಾರ ಕ್ಷೀರರಸಕ್ಕೆ ವಿಶದ ಎಂದು ಹೆಸರು

ಕಾದಿ ಚತುಃ, ಚಾದಿ ಚತುಃ, ಟಾದಿ ಪಂಚ, ತಾದಿ ಪಂಚ, ಪಾದಿ ಪಂಚ, ಯಾದಿ ದಶ॥

ಎಂಬ ಗುರುವೃತ್ತವಚನ ಹೇಳುವಂತೆ ವರ್ಣಮಾಲೆಯಲ್ಲಿ ಕ ಖ ಗ ಘ ಎಂಬ ನಾಲ್ಕು ಅಕ್ಷರಗಳು ಕ್ರಮವಾಗಿ 1, 2, 3, 4 ಎಂಬ ಸಂಖ್ಯಗಳನ್ನು ಹೇಳುತ್ತವೆ ಇದೇ ರೀತಿ ಚ, ಛ, ಜ, ಝ ಎಂಬ ನಾಲ್ಕು ಅಕ್ಷರಗಳೂ ಕ್ರಮವಾಗಿ ಆ ಸಂಖ್ಯೆಗಳನ್ನು ಹೇಳುತ್ತವೆ ಟ, ಠ, ಡ, ಢ, ಣ ಎಂಬ ಐದು ಅಕ್ಷರಗಳು ಕ್ರಮವಾಗಿ 1, 2, 3, 4, 5 ಎಂಬ ಐದು ಸಂಖ್ಯೆಗಳನ್ನು ಹೇಳುತ್ತವೆ ತ, ಥ, ದ, ಧ, ನ ಎಂಬ ಐದು ಅಕ್ಷರಗಳೂ ಕ್ರಮವಾಗಿ ಆ ಐದು ಸಂಖ್ಯೆಗಳನ್ನೆ ಹೇಳುತ್ತವೆ ಪ, ಫ, ಬ, ಭ, ಮ ಎಂಬ ಐದು ಅಕ್ಷರಗಳೂ ಹಾಗೇ ಯ, ರ, ಲ, ವ, ಶ, ಷ, ಸ, ಹ, ಳ, ಕ್ಷ ಈ ಹತ್ತು ಅಕ್ಷರಗಳೂ ಕ್ರಮವಾಗಿ ಹತ್ತು ಸಂಖ್ಯೆಗಳನ್ನು ಹೇಳುತ್ತವೆ

ಈ ನಿಯಮದಂತೆ ಕ್ಷೀರರಸನಾಮವಾದ 'ವಿಶದ' ಎಂಬ ಮೂರಕ್ಷರಗಳು ಕ್ರಮವಾಗಿ, ವಿ=4, ಶ=5, ದ=3, ಅಂದರೆ 453 ಎನ್ನುತ್ತವೆ ಆದರೆ, ಅಂಕೆಗಳನ್ನು,

'ಅಂಕಾನಾಂ ವಾಮತೋ ಗತಿಃ'

ಕ್ರಮವಾಗಿ ಎಡದಿಂದ ಬಲಕ್ಕೆ ಓದಬೇಕು ಆಗ 354 ಆಗುತ್ತದೆ

**ಚಾರು ಘೃತಗತ ರೂಪಗಳು:**

ಮನೋಹರವಾದ ಘೃತಗತರೂಪಗಳು 29 'ಚಾರು' ಮನೋಹರ ಎಂದುದು ಕೇವಲ ಪ್ರಾಸಕ್ಕಾಗಿ ಅಲ್ಲ ಪದಾರ್ಥ ಮನೋಹರವಾದಂತೆಲ್ಲ, ಅದರಲ್ಲಿರುವ ಭಗವದ್ರೂಪಗಳು ಹೆಚ್ಚು ಸನ್ನಿಧಾನ ತೋರುವುವು ಅದರಿಂದ ಮನೋಹರವಾದ ಉತ್ತಮವಾದ ಪ್ರತೀಕವೆ ಭಗವಂತನ ಧ್ಯಾನಕ್ಕೆ ಹೆಚ್ಚು ಉಪಯುಕ್ತ ಇದೇ ಅಭಿಪ್ರಾಯದಿಂದ 'ಸಾರ ಗುಡ' ಎಂದೂ ಮುಂದೆ ಹೇಳುತ್ತಾರೆ

ಘೃತದ ಮಾಧುರ್ಯರಸಕ್ಕೆ ಸ್ಥಿರ ಎಂದು ಹೆಸರು 'ಸ್ಥಿರ' ಎಂಬಲ್ಲಿ ಸಕಾರ 7, ಥಕಾರ 2 ಎರಡೂ ಸೇರಿ 'ಸ್ಥಿ' ಎಂದು ಸಂಧ್ಯಕ್ಷರವಾಗಿರುವುದರಿಂದ 7 + 2= 9 ಎಂದಾಗುತ್ತದೆ ಹೀಗೆ ಸ್ಥಿ=9, ರ=2 ಅಂದರೆ '92', ಎಡದಿಂದ ಓದಿದರೆ 29

**ಸಾರ ಗುಡದೊಳಗೈದು ಸಾವಿರ ನೂರ ಒಂದು ಸುರೂಪ**

ಬೆಲ್ಲದ ಮಾಧುರ್ಯದಲ್ಲಿರುವ ಭಗವದ್ರೂಪಗಳು 5,101 ಏಕೆಂದರೆ ಬೆಲ್ಲದ ಮಾಧುರ್ಯಕ್ಕೆ 'ತೀಕ್ಷ್ಣ' ಎಂದು ಹೆಸರು ತೀ= 1, ಕ್ಷ= 10, ಣ= 5 ಈ ಸಂಖ್ಯೆಗಳನ್ನು ಎಡದಿಂದ ಬಲಕ್ಕೆ ಇರಿಸಿ ಓದಿದರೆ 5,101 ಆಗುತ್ತದೆ ಇಲ್ಲಿ ಕ್ಷಕಾರ ಣಕಾರಗಳು ಸೇರಿ ಸಂಧ್ಯಕ್ಷರವಾಗಿದ್ದರೂ 10+5= 15 ಎಂದು ಅಂಕೆಗಳನ್ನು ಕೂಡುವುದಿಲ್ಲ ಬೇರೆ ಬೇರೆಯಾಗಿಯೇ ಇಟ್ಟುಕೊಳ್ಳುತ್ತಾರೆ ಇದನ್ನು ಸೂಚಿಸುವುದಕ್ಕಾಗಿ ದಾಸರಾಯರು 'ತೀಕ್ಷ್ಣ' ಎನ್ನದೆ 'ತೀಕ್ಷಣ' ಎಂದು ಬಿಡಿಸಿ ಹೇಳಿದ್ದಾರೆ ಛಂದಸ್ಸಿನ ದೃಷ್ಟಿಯಿಂದಲೂ ಹೀಗೆ ಹೇಳಿದ್ದಾರ ಸ್ಥಿರ ಎಂಬಲ್ಲಿರುವ 'ಸ್ಥಿ' ಎಂಬ ಸಂಧ್ಯಕ್ಷರವನ್ನು ತೇಲಿಸಿ ಹೇಳಬೇಕು ಅದರಿಂದ ಹಿಂದಿನ 'ವಿಶದ' ಎಂಬಲ್ಲಿರುವ ದಕಾರ ಲಘು ಅಕ್ಷರವಾಗುತ್ತದೆ ಛಂದಸ್ಸು ಕಡುವುದಿಲ್ಲ

**ದ್ವಿಸಹಸ್ರಾರೆರಡು ಶತ ಪಂಚ ವಿಂಶತಿ**

ಹಣ್ಣಿನ ರಸದಲ್ಲಿರುವ ಭಗವದ್ರೂಪಗಳು 2825 ಏಕೆಂದರೆ ಹಣ್ಣಿನ ರಸದ ಮಾಧುರ್ಯಕ್ಕೆ 'ನಿರ್ಹಾರಿ' ಎಂದು ಹೆಸರು ನಿ=5, ರ=2, ಹ=8, ರ=2 ಅಂದರೆ, 5282 ಎಡದಿಂದ ಬಲಕ್ಕೆ ಓದಿದರೆ 2825 ಇಲ್ಲಿ ರಕಾರ ಹಕಾರಗಳು ಸೇರಿ ಸಂಧ್ಯಕ್ಷರವಾಗಿದ್ದರೂ, 2+8= 10 ಎಂದಾಗುವುದಿಲ್ಲ ಬೇರೆಯಾಗಿಯೇ ಇರುತ್ತದೆ ಇದನ್ನು ಸೂಚಿಸಲು ದಾಸರಾಯರು 'ನಿರ್ಹಾರಿ' ಎನ್ನದೆ 'ನಿರಹರ' ಎಂದಿದ್ದಾರೆ 'ಹಾ' ಎಂಬ ದೀರ್ಘವನ್ನು 'ಹ' ಎಂದು ಹ್ರಸ್ವ ಮಾಡಿದುದು ಛಂದಸ್ಸಿನ ದೃಷ್ಟಿಯಿಂದ 'ರಿ' ಎನ್ನದೇ 'ರ' ಎಂದುದು ಮಾತ್ರ ಪ್ರಾಯಃ ಪಾಠದೋಷ ಛಂದಸ್ಸಿನ ದೃಷ್ಟಿಯಿಂದ ಅದು ಅನಪೇಕ್ಷಿತ

**ವಿಶದ ಸ್ಥಿರ ತೀಕ್ಷಣವು ನಿರಹರ**

ಲೋಕದಲ್ಲಿ ಹಾಲು ತುಪ್ಪ ಬೆಲ್ಲ ಹಣ್ಣಿನರಸಗಳ ಎಲ್ಲ ಸಿಹಿಯನ್ನೂ 'ಸಿಹಿ' ಎಂದು ಒಂದೇ ಶಬ್ದದಿಂದ ಕರೆಯುತ್ತಾರೆ ಸಿಹಿಯಲ್ಲಿ ವ್ಯತ್ಯಾಸವಿದ್ದರೂ ಪೆಸರಿನಲ್ಲಿ ವ್ಯತ್ಯಾಸ ಮಾಡುವುದಿಲ್ಲ ವ್ಯತ್ಯಾಸವಿಲ್ಲವೆಂದಲ್ಲ ಅದನ್ನು ಗುರುತಿಸಿ ಬೇರೆ ಬೇರೆ ಹೆಸರಿಡುವುದಿಲ್ಲ ಶಾಸ್ತ್ರದಲ್ಲಿ ಬೇರೆ ಬೇರೆ ಹೆಸರಿಟ್ಟಿದ್ದಾರೆ ಏಕೆಂದರೆ, ಬೇರೆ ಬೇರೆ ಸಿಹಿಗಳಲ್ಲಿ ಬೇರೆ ಬೇರೆ ಸಂಖ್ಯೆಯಿಂದ ಭಗವದ್ರೂಪಗಳು ಸನ್ನಿಹಿತವಾಗಿವೆ ಎಂದು ತಿಳಿಸುವುದು ಅದರ ಉದ್ದೇಶ ಹೆಸರಿನಿಂದ ಸಂಖ್ಯೆಯನ್ನು ಸೂಚಿಸುವುದಕ್ಕೆ ಉದಾಹರಣೆ- ಮಹಾಭಾರತಕ್ಕೆ 'ಜಯ' ಎಂದು ಹೆಸರು

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್।
ದೇವೀಂ ಸರಸ್ವತೀಂ ವ್ಯಾಸಂ ತತೋ 'ಜಯಮ್' ಉದೀರಯೇತ್॥

'ಜಯ' ಎಂಬಲ್ಲಿ ಜ=8, ಯ= 1, ಅಂದರೆ 81 ಎಡದಿಂದ ಬಲಕ್ಕ ಓದಿದರೆ 18 ಈ ಸಂಖ್ಯೆ ಮಹಾಭಾರತದಲ್ಲಿ ಹಾಸುಹೊಕ್ಕಾಗಿದೆ ಅದರಲ್ಲಿ ಪರ್ವಗಳು 18, ಕುರುಕ್ಷೇತ್ರ ಯುದ್ಧದ ದಿನಗಳು 18, 18 ಅಧ್ಯಾಯಗಳ ಗೀತೋಪದೇಶ ನಡೆಯಿತು 18 ಅಕ್ಷೋಹಿಣೀ ಸೈನ್ಯ

ಸಾಶವಾಯಿತು, ಇತ್ಯಾದಿ ಇದೇ ರೀತಿ ಪ್ರಕೃತ, ವಿಶದ ಸ್ಥಿರ ಇತ್ಯಾದಿ ನಾಮಗಳಿಂದ ಬಗವದ್ರೂಪ ಸಂಖ್ಯೆಗಳನ್ನು ಸೂಚಿಸಲಾಗಿದೆ

ಸಂಖ್ಯೆಯಿಂದ ಹೆಸರನ್ನು ಸೂಚಿಸುವುದೂ ಉಂಟು ಉದಾ ಬ್ರಹ್ಮಸೂತ್ರಗಳು ಒಟ್ಟು 564, ಏಕೆ? ಏನು ಈ ಸಂಖ್ಯೆಯ ವೈಶಿಷ್ಟ್ಯ? ಇದು 'ವಿಷ್ಣು' ಎಂಬ ಹೆಸರನ್ನು ಸೂಚಿಸುತ್ತದೆ ವಿ=4, ಷ=6, ಣ=5, ಅಂದರೆ 465 ಎಡದಿಂದ ಬಲಕ್ಕೆ ಓದಿದರೆ 564 ಬ್ರಹ್ಮಸೂತ್ರಗಳು ವಿಷ್ಣುವನ್ನೇ, ಅಂದರೆ ವಿಷ್ಣುಸರ್ವೋತ್ತಮತ್ವವನ್ನೇ ಪ್ರತಿಪಾದಿಸುತ್ತವೆ ಆದರಿಂದ ಸಮಸ್ತ ವಾಙ್ಮಯಪ್ರಪಂಚಕ್ಕೇ ಭೂಷಣಪ್ರಾಯವಾದ ಪರವಿದ್ಯೆ ಎನಿಸಿದೆ ಇದನ್ನು ಸೂಚಿಸಲು ಈ 564 ಸಂಖ್ಯೆಯಿಂದಲೇ 'ಬೂಷಣ' ಎಂಬ ಶಬ್ದವೂ ಉಕ್ತವಾಗಿದೆ ಬೂ=4, ಷ=6, ಣ=5, 465, ಎಡದಿಂದ ಓದಿದರೆ 564 ಇಲ್ಲಿ 'ವಿಷ್ಣು' ಎಂಬ ನಾಮದಲ್ಲಿ ಷಕಾರಣಕಾರಗಳು ಸೇರಿ ಸಂಧ್ಯಕ್ಷರವಾಗಿದ್ದರೂ ಅವು ಸೂಚಿಸುವಸಂಖ್ಯೆ ಗಳನ್ನು ಕೂಡಿಲ್ಲ ಹಾಗೇ ದಾಸರಾಯರೂ ತೀಕ್ಷ್ಣ ಎಂಬಲ್ಲಿ ಸಂಧ್ಯಕ್ಷರಸಂಖ್ಯೆಗಳನ್ನು ಕೂಡಿಲ್ಲ

ಹಾಗಾದರೆ, ಸಂಧ್ಯಕ್ಷರಗಳಿರುವಲ್ಲಿ ಸಂಖ್ಯೆಗಳನ್ನು ಎಲ್ಲಿ ಕೂಡಿಸಬೇಕು ಎಲ್ಲಿ ಕೂಡಿಸಬಾರದು ಎಂಬುದನ್ನು ತಿಳಿಯದೆ, ಹೆಸರಿನಿಂದ ಸಂಖ್ಯೆಯನ್ನು ತಿಳಿಯಲಾಗದು ತಾನೆ? ಎಂದರೆ, ಹೆಸರೇ ಸಂಖ್ಯೆಗೆ ಪ್ರಮಾಣವಲ್ಲ ಬೇರೆ ಪ್ರಮಾಣ ಬೇಕು ಅದು ಇದ್ದರೆ ಹೆಸರೂ ಸಂಖ್ಯೆಗೆ ಪ್ರಮಾಣವಾದೀತೆಂದು ಹೇಳಬೇಕು ಪ್ರಕೃತ, ವಿಶದ, ಸ್ಥಿರ ಎಂದು ಮುಂತಾಗಿ ಲೋಕದಲ್ಲಿ ರಸಗಳಿಗೆ ಬಳಕೆಯಾಗದಿರುವ ಅಪ್ರಸಿದ್ಧ ಹೆಸರುಗಳೂ ಶಾಸ್ತ್ರದಲ್ಲಿ ಬಳಕೆಯಾಗಿರುವುದು ಸಂಖ್ಯಾಸೂಚನೆಯ ಉದ್ದೇಶದಿಂದ ಪಂಚರಾತ್ರಾದಿ ಗ್ರಂಥಗಳಲ್ಲಿ ರಸಗಳಲ್ಲಿರುವ ಭಗವದ್ರೂಪಗಳ ಸಂಖ್ಯೆಗಳು ಕಂಡು ಬರುತ್ತವೆ ಉದಾ

ತ್ರಿಶತೋತ್ತರಪಂಚಾಶದ್ರೂಪೈಃ ಕ್ಷೀರಗತಃ ಪ್ರಭುಃ।<br>
ಸರ್ಪಿಷಿ ಕ್ರೀಡತೇ ದೇವಃ ಏಕೋನತ್ರಿಂಶದಾತ್ಮಭಿಃ।<br>
ಸಹಸ್ರಪಂಚಕಂ ಚೈಕಶತಂ ತೀಕ್ಷ್ಣಾತ್ಮಸೋ ಹರೇಃ।<br>
ಸಹಸ್ರದ್ವಿತಯಂ ಪಂಚವಿಂಶತಿಶ್ಚಶತಾಷ್ಟಕಮ್।<br>
ಫಲಪ್ರದೋ ವಾಸುದೇವಃ ಫಲಾತ್ಮಾ ಫಲಗಃ ಪ್ರಭುಃ॥

ವಿಶದ ಸ್ಥಿರ ಮುಂತಾದ ಹೆಸರುಗಳೂ ಕೇವಲ ಭಗವದ್ರೂಪಸಂಖ್ಯಾಸೂಚಕವೆನ್ನಕೂಡದು ರಸಗಳಿಗಾಗಲಿ ಅವುಗಳಲ್ಲಿರುವ ಭಗವದ್ರೂಪಗಳಿಗಾಗಲಿ ಅನ್ವರ್ಥಕ, ಸಾರ್ಥಕ ನಾಮವಾಗಿಲ್ಲ ಎಂದೂ ತಿಳಿಯಬಾರದು ಆಯಾ ರಸಗಳ ಸ್ವಭಾವವನ್ನೂ ಭಗವದ್ರೂಪಗಳ ಮಹಿಮೆಗಳನ್ನೂ ಅವು ಸೂಚಿಸಬಲ್ಲುವು ಎಂದು ವ್ಯಾಸದಾಸ ಸಿದ್ಧಾಂತಕೌಮುದೀಕಾರರು ಹೇಳುತ್ತಾರೆ-

ವಿಶದೀಕೃತಕೀರ್ತಿತ್ವಾತ್ ಉತ್ತಮತ್ವಾತ್ ತಥೋದಿತಃ।

ಹಾಲು ವಿಶದವಾಗಿ ಅಂದರೆ ಬೆಳ್ಳಗೆ ನಿರ್ಮಲವಾಗಿ ಇರುವಂತ ಬಗವಂತನ ಕೀರ್ತಿಯೂ ಸ್ವಚ್ಛ, ನಿರ್ಮಲ ಪದಾರ್ಥದಲ್ಲಿ ಅದರ ರಸಭಾಗ ಉತ್ತಮವಿರುವಂತೆ ಪ್ರಪಂಚದಲ್ಲಿ

ಅಂತರ್ಗತನಾದ ಭಗವಂತ ಉತ್ತಮನಾಗಿರುತ್ತಾನೆ ಅದರಿಂದ ಅವನನ್ನು 'ವಿಶದರಸ' ಎನ್ನಬಹುದು

ಸ್ಥಿರತಾ ಬಿಂಬರೂಪೇಷು ।

ತುಪ್ಪ ಸ್ಥಿರವಾಗಿ ಆರೋಗ್ಯಕರವಾಗಿರುತ್ತದೆ ಎಷ್ಟು ವರ್ಷ ಕಳೆದರೂ ಪುರಾಣಘೃತ ಮಹಾಘೃತವೆನಿಸಿ ಬಹಳ ಪ್ರಶಸ್ತವೆನಿಸುತ್ತದೆ ಎಂದು ಆಯುರ್ವೇದದ ಸುಶ್ರುತಸಂಹಿತೆ ಹೇಳುತ್ತದೆ 'ಅಮೃತ' ಎಂದೇ ಅದಕ್ಕೆ ಬೇರ ಹೆಸರಿದೆ ಆಯುಷ್ಯಕರವಾಗಿದ್ದು 'ಆಯುಸ್' ಎಂದೂ ಕರೆಸಿಕೊಳ್ಳುತ್ತದೆ ಬಿಂಬರೂಪಿ ಶ್ರೀಹರಿ ಅದನ್ನು ಸ್ವೀಕರಿಸಿದರೆ ಜೀವನಿಗೆ ಸ್ಥಿರವಾಗಿ ಆಯುರಾರೋಗ್ಯ ನೀಡುತ್ತಾನೆ ಅದರಿಂದ ಅವನಿಗೆ 'ಸ್ಥಿರ' ಎಂದು ಹೆಸರು ಘೃತರಸಕ್ಕೂ ಸ್ಥಿರವೆಂದು ಹೆಸರು

ದೇಹತೈಕ್ಷ್ಣ್ಯಪ್ರದೋ ಯತಃ-

ಬೆಲ್ಲದ ಮಾಧುರ್ಯರಸ ಶರೀರಕ್ಕೆ ತೀಕ್ಷ್ಣತೆ ನೀಡುತ್ತದೆ ಭಗವಂತನೂ ಹಾಗೆ ಮಾಡುವುದರಿಂದ 'ತೀಕ್ಷ್ಣ' ಎನಿಸುತ್ತಾನೆ

ಅತ್ಯಂತಂ ನಿರ್ಹರತ್ಯೇವ ಪಾಪಾನೀತಿ ತದೋದಿತಃ।

ಹಣ್ಣಿನ ರಸದ ಸಿಹಿ ನಿರ್ಹಾರಿ, ಅಂದರೆ ರೋಗಪರಿಹಾರಕ ಭಗವಂತನೂ ಭಕ್ತನ ರೋಗಮೂಲ ಪಾಪವನ್ನು ಪರಿಹರಿಸುವುದರಿಂದ ಅವನು ನಿರ್ಹಾರಿ ಎನಿಸುತ್ತಾನೆ ಹಾಲು ತುಪ್ಪ ಬೆಲ್ಲ ಹಣ್ಣುಗಳು ಎಲ್ಲವೂ ದರ್ಶನಮಾತ್ರದಿಂದಲೇ ಪಾಪಪರಿಹಾರ ಮಾಡುವ ಮಂಗಳದ್ರವ್ಯಗಳೆನಿಸಿವೆ. ಈ ಅನುಸಂಧಾನದಿಂದ ಆ ದ್ರವ್ಯಗಳನ್ನು ಬಿಂಬರೂಪಿಯ ಆರಾಧನೆಯ ಭಾವದಿಂದ ಸೇವಿಸಬೇಕು

**ಶ್ವಸನ ತತ್ವೇಶರೊಳಗಿದ್ದು:**

ಕ್ಷೀರಾದಿಗಳಲ್ಲಿ ಮುಖ್ಯಪ್ರಾಣನ ಮತ್ತು ಇತರ ತತ್ವದೇವತೆಗಳ ಸನ್ನಿಧಾನ ಅಧಿಕ ಅವರಲ್ಲಿ ಶ್ರೀಹರಿಯ ಸನ್ನಿಧಾನ ಅಧಿಕ ಕ್ಷೀರದಲ್ಲಿ ಸರಸ್ವತಿ, ಅವಳಲ್ಲಿ ವಾಯು, ಅವನಲ್ಲಿ ವಿಷ್ಣು ಘೃತದಲ್ಲಿ ವಾಯು, ಅವನಲ್ಲಿ ಲಕ್ಷ್ಮೀ, ಅವಳಲ್ಲಿ ಗೋವಿಂದ, ಬೆಲ್ಲದಲ್ಲಿ ದೇವೇಂದ್ರ, ಅವನಲ್ಲಿ ವಾಯು, ಅವನಲ್ಲಿ ವಾಸುದೇವ ಫಲರಸದಲ್ಲಿ ಆಹಂಕಾರಿಕ ಪ್ರಾಣ, ಅವನಲ್ಲಿ ಮುಖ್ಯಪ್ರಾಣ, ಅವನಲ್ಲಿ ಉಪೇಂದ್ರ- ಹೀಗೆ ತಿಳಿಯಬೇಕು

**ಧೇನಿಸಿದರೀ ಪರಿ ಮನಕೆ ಪೊಳೆವನು**

ಭೋಜನಕಾಲದಲ್ಲಿ ಲೋಕವಾರ್ತೆ ಸಲ್ಲದು ವೈಶ್ವಾನರಯಜ್ಞಭಾವನೆಯಿಂದ ಹವಿಸ್ಸಿನ ರೂಪದಲ್ಲಿ ಸೇವಿಸುವ ಕ್ಷೀರಾದಿಗಳಲ್ಲಿ ಭಗವದ್ರೂಪಚಿಂತನೆ ನಡೆಸಿದರೆ ನಿತ್ಯೋಪವಾಸ ಫಲ, ಶರೀರ ಅಂತಃಕರಣಶುದ್ಧಿ ಉಂಟಾಗುತ್ತದೆ ಅಂತಃಕರಣದಲ್ಲಿ ಅನಾಯಾಸವಾಗಿ ಹರಿಧ್ಯಾನ ಒದಗುತ್ತದ

**ಕಪಿಲ ನರಹರಿ ಭಾರ್ಗವ ತ್ರಯ**
**ವಪುಷ ನೇತ್ರದಿ ನಾಸಿಕಾಸ್ಯದಿ**
**ಶಫರ ನಾಮಕ ಜಿಹ್ವೆಯಲಿ ದಂತದಲಿ ಹಂಸಾಖ್ಯ ।**
**ತ್ರಿಪದಿ ವಾದ್ಯ ಹಯಾಸ್ಯ ವಾಚ್ಯದೊ-**
**ಳಪರಿಮಿತ ಸುಖ ಪೂರ್ಣ ಸಂತತ**
**ಕೃವಣರೊಳಗಿದ್ದವರವರ ರಸ ಸ್ವೀಕರಿಸಿ ಕೊಡುವ ॥ ೭ ॥**

ಕಪಿಲ ನರಸಿಂಹ ಪರಶುರಾಮ ಈ ಮೂರು ರೂಪಗಳಿಂದ ಶ್ರೀಹರಿ ನೇತ್ರದಲ್ಲಿ ನಾಸಿಕದಲ್ಲಿ ಮತ್ತು ಬಾಯಿಯಲ್ಲಿ ಇರುತ್ತಾನೆ ಮತ್ಸ್ಯನಾಮಕ ನಾಲಿಗೆಯಲ್ಲಿ, ಹಂಸನಾಮಕ ದಂತದಲ್ಲಿ, ಗಾಯತ್ರೀಪ್ರತಿಪಾದ್ಯ ಹಯಗ್ರೀವಮೂರ್ತಿ ಮಾತಿನಲ್ಲಿ, ಅಪರಿಮಿತ ಸುಖಪೂರ್ಣನಾಗಿದ್ದರೂ ದೀನರಾದ ಬ್ರಹ್ಮಾದಿ ಸಕಲ ಜೀವರಲ್ಲಿ ಹೀಗೆ ಇದ್ದು ಅವರವರ ಅನ್ನರಸವನ್ನು ಮೊದಲಿಗೆ ತಾನು ಸ್ವೀಕರಿಸಿ ಬಳಿಕ ಅವರವರಿಗೇ ಕೊಡುತ್ತಾನೆ

**ಕಪಿಲ:**

ಕರ್ದಮಮುನಿಯಿಂದ ದೇವಹೂತಿಯಲ್ಲಿ ಅವತರಿಸಿದ ಶ್ರೀಹರಿಯ ರೂಪ ವಿಷ್ಣುಸಹಸ್ರನಾಮಗಳಲ್ಲಿ 'ಮಹರ್ಷಿಕಪಿಲಾಚಾರ್ಯಃ' ಎಂದು ಗೌರವದಿಂದ ಕರೆದಿದೆ ಭಾಗವತ ತೃತೀಯಸ್ಕಂಧ ಕಪಿಲಾವತಾರಕ್ಕೇ ಮೀಸಲು ರಾಮಾಯಣದಲ್ಲಿ ಅರವತ್ತು ಸಾವಿರ ಮಂದಿ ಸಗರಪುತ್ರರನ್ನು ಒಂದು ಕಣ್ಣುನೋಟದಿಂದ ಸುಟ್ಟು ಬೂದಿ ಮಾಡಿದ ಕಪಿಲ ಸ್ವತಃ ಶ್ರೀಹರಿಯ ಕಣ್ಣೇ ಆಗಿದ್ದಾನೆ ಈ ಕಣ್ಣಿನಿಂದಲೆ ಹರಿ ನೈವೇದ್ಯವನ್ನು ಕಂಡು ಸ್ವೀಕರಿಸುತ್ತಾನೆ ಕಣ್ಣನೋಟದಿಂದಲೆ ಅನ್ನದ ಪಚನಕ್ರಿಯೆ ಪ್ರಾರಂಭ ಆದರಿಂದ ದೇವರಿಗೆ ನೈವೇದ್ಯವನ್ನು ಒಯ್ಯುವಾಗ ಇತರರು ನೋಡಬಾರದು ಅದನ್ನು ಮುಚ್ಚಿರಬೇಕು ನೈವೇದ್ಯ ಸಮರ್ಪಿಸುವಾಗ ಅರ್ಚಕನೂ ಮುಖಕ್ಕೆ ಬಟ್ಟೆಯ ಮುಸುಕು ಹಾಕಿಕೊಳ್ಳಬೇಕು ಗುಡಿಯ ಬಾಗಿಲು ಮುಚ್ಚಬೇಕು ಉಣ್ಣುವ ಭಗವಂತ ಮಾತ್ರ ನೋಡುತ್ತಾನೆ, ನೋಡಬೇಕು ಇತರರು (ಅಡಿಗೆ ಮಾಡುವವರು, ಬಡಿಸುವವರು ಹೊರತು) ಕಂಡರೆ ಕಣ್ಣೆಂಜಲಾಗುವುದು

ನಾವು ಉಣ್ಣುವಾಗ ಕಣ್ಣಿಂದ ಅನ್ನವನ್ನು ಕಂಡು ಸುಖಿಸುತ್ತೇವೆ ಆಗ ಕಣ್ಣಿನಲ್ಲಿದ್ದು ಕಾಣುವವನು ಕಪಿಲ ಬಿಂಬಕ್ರಿಯೆಯಿಂದ ಪ್ರತಿಬಿಂಬದಲ್ಲಿ ಕ್ರಿಯೆ

**ನರಹರಿ ·**

ವಾಸನೆಯಿಂದ ಕಾಡಿನಲ್ಲಿ ಇತರ ಪ್ರಾಣಿಗಳನ್ನು ತಿಳಿಯುವುದು ಹುಲಿ ಸಿಂಹ ಮುಂತಾದ ಮೃಗಗಳ ಸ್ವಭಾವ 'ವ್ಯಾಘ್ರ- ವಾಸನೆಯಿಂದ ತಿಳಿಯುವ ಮೃಗ' ಎಂದು ಹುಲಿಗೆ ಹೆಸರಿದೆ ಹಾಗೇ ನರಸಿಂಹ ಈ ಸಿಂಹಸ್ವಭಾವವನ್ನು ತೋರುತ್ತ ವಾಸನೆಯಿಂದ ನೈವೇದ್ಯ ಸ್ವೀಕರಿಸುತ್ತಾನೆ

ವಾಸನೆಯಿಂದ ಸುಖಪಡುವುದೂ ನೈವೇದ್ಯ ಸ್ವೀಕಾರವೆ ಆದರಿಂದಲೆ ಏಕಾದಶಿದಿವಸ ಅನ್ನದ ವಾಸನೆಯೂ ನಿಷಿದ್ಧವಾಗಿದೆ-

ಮಹಾದೋಷಮಯಂ ಚಾನ್ನಮೇಕಾದಶ್ಯಾಂ ಭವೇದ್ ಯತಃ।
ನ ದಾತವ್ಯಂ ನ ಭೋಕ್ತವ್ಯಂ ನ ಘ್ರಾತವ್ಯಂ ವಿಶೇಷತಃ ॥

**ಭಾರ್ಗವ**

ಪರಶುರಾಮಾವತಾರ ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ದುಷ್ಟಕ್ಷತ್ರಿಯರ ಸಂತಾನವನ್ನೆ ರಣಯಜ್ಞದಲ್ಲಿ ಆಹುತಿಗೊಂಡವನು, ಅಗ್ನ್ಯಂತರ್ಗತನಾಗಿ ಎಲ್ಲ ಯಜ್ಞಗಳಲ್ಲಿಯೂ ಎಲ್ಲ ಹವಿಸ್ಸನ್ನು ಉಣ್ಣುವವನು ಭೋಜನವೂ ಪ್ರಾಣಾಗ್ನಿಹೋತ್ರಯಜ್ಞ ಅನ್ನವನ್ನು ಬಾಯಲ್ಲಿ ಇಡುವುದೆಂದರೆ ಪರಶುರಾಮಾಗ್ನಿಯಲ್ಲಿ ಆಹುತಿ ನೀಡುವುದೆಂದೇ ಅರ್ಥ ಈ ಪರಶುರಾಮ ಸ್ವತಃ ಶ್ರೀಹರಿಯ ಬಾಯಿಯೆ ಆಗಿದ್ದಾನೆ ಈ ಬಾಯಿಯಿಂದಲೆ ಹರಿ ನೈವೇದ್ಯ ಉಣ್ಣುತ್ತಾನೆ

ನಾವು ಉಣ್ಣುವಾಗಲೂ ನಮ್ಮ ಬಾಯಿಯಲ್ಲಿದ್ದು ಅನ್ನ ಉಣ್ಣುವವ ಪರಶುರಾಮ

**ತ್ರಯ ವಪುಷ·**

ಮೂರು ಶರೀರವುಳ್ಳವನೆಂದರ್ಥ ಶ್ರೀಹರಿಗೆ ತನ್ನ ಸ್ವರೂಪವೆ ಶರೀರ ಆದರಿಂದ ಮೂರು ರೂಪಗಳಿಂದ ನಮ್ಮ ಶರೀರಗಳಲ್ಲಿ ಹರಿ ಇರುತ್ತಾನೆ ಎಂದರ್ಥ

**ನೇತ್ರದಿ ನಾಸಿಕಾಸ್ಯದಿ**

ಕಣ್ಣಲ್ಲಿ ಮೂಗು ಬಾಯಿಗಳಲ್ಲಿ ಹೀಗೆ ಮೂರು ಕಡೆ ಮೂರು ರೂಪಗಳಿಂದ ಇರುತ್ತಾನೆ ಶ್ರೀಹರಿ

ಕಪಿಲೋ ನರಸಿಂಹಶ್ಚ ಭಾರ್ಗವಶ್ಚೇತಿ ಮೂರ್ತಯಃ ।
ನೇತ್ರನಾಸಾಸ್ಯದೇಶೇಷು ವಿಜಾನೀಹಿ ಸದಾತ್ಮಜ ॥ ಇತಿ ಗುರುವೃತ್ತೇ

ವ್ಯಾಪ್ತತ್ವಾದ್ ಜೀವದೇಹೇಷು ಮುಖೇ ವಿಷ್ಣೋರ್ಮುಖಂ ಸ್ಮೃತಂ ।
ನಾಸಯೋರ್ನಾಸಿಕಾ ವಿಷ್ಣೋರಕ್ಷ್ಣೋರೇವ ತದಕ್ಷಿಣೀ ।
ಜೀವವಾಕ್‌ಪ್ರಾಣಚಕ್ಷುಃಷು ತದ್ವಾಗಾದ್ಯಾಸ್ತತಃ ಸ್ಥಿತಾಃ ।
ವಿಷ್ಣೋರ್ವಾಗ್ ಭಾರ್ಗವೋ ರಾಮಃ ಪ್ರಾಣೋಽಸ್ಯ ನರಕೇಸರೀ ।
ಚಕ್ಷುಸ್ತು ಕಪಿಲೋ ವಿಷ್ಣುರಗ್ನ್ಯಾದೀನಾಂ ಚ ಕಾರಣಂ ।
ಜೀವವಾಗಾದಿಸಂಸ್ಥಂ ಚ ಸುಪರ್ಣಮಧಿಸಂಸ್ಥಿತಾಃ ।
ಅವಿಶೇಷೋಽಪಿ ಭಗವಾನ್ ಪೂರ್ಣೈಶ್ವರ್ಯಸ್ವರೂಪತಃ ।
ಅಂಗಾಂಗಿತ್ವೇನೈಕ ಏವ ಸ್ವಾನಂದಾನುಭವೇ ಸ್ಥಿತಃ ।

ತದನಾಘ್ರಾಣದೃಷ್ಟ್ಯಾಖ್ಯಭೋಗತ್ರಯವಿಭಾಗತಃ ।
ಮುಖನಾಸಾಚಕ್ಷುಷಾಂ ತದ್ ಭೋಗ್ಯಮನ್ನಂ ಹರೇಃ ಸ್ಮೃತಂ ॥

'ಕಪಿಲ ನರಸಿಂಹ ಪರಶುರಾಮ ಎಂದು ಮೂರು ಭಗವದ್ರೂಪಗಳು ಕಣ್ಣು ಮೂಗು ಬಾಯಿಗಳಲ್ಲಿ ಸದಾ ಇರುತ್ತವೆ'

'ವಿಷ್ಣು ಜೀವರ ಸ್ವರೂಪದೇಹ ಬಾಹ್ಯದೇಹಗಳಲ್ಲಿ ವ್ಯಾಪ್ತನಾಗಿರುವುದರಿಂದ ಆ ದೇಹಗಳ ಬಾಯಿಗಳಲ್ಲಿ ಅವನ ಬಾಯಿಗಳು, ಮೂಗುಗಳಲ್ಲಿ ಅವನ ಮೂಗುಗಳು, ಕಣ್ಣುಗಳಲ್ಲಿ ಅವನ ಕಣ್ಣುಗಳಿವೆ ಹರಿಯ ಬಾಯಿಗಳು ಪರಶುರಾಮರೂಪಗಳು ಮೂಗುಗಳು ನರಸಿಂಹ ರೂಪಗಳು ಕಣ್ಣುಗಳು ಕಪಿಲರೂಪಗಳು ಹರಿಯ ರೂಪಗಳಿಗೆ ಪರಸ್ಪರಭೇದ ವೈಲಕ್ಷಣ್ಯ ಗಳಿಲ್ಲದಿದ್ದರೂ ಅಚಿಂತ್ಯಶಕ್ತಿಯಿಂದ ಶರೀರರೂಪನೂ ಅವಯವರೂಪನೂ ಆಗಿರುತ್ತಾನೆ, ಸ್ವರೂಪಾನಂದಾನುಭವ ಮಗ್ನನಾಗಿರುತ್ತಾನೆ'

'ಉಣ್ಣುವುದು ಆಘ್ರಾಣಿಸುವುದು ಕಣ್ಣಿಂದ ನೋಡುವುದು ಹೀಗೆ ಹರಿ ನೈವೇದ್ಯವನ್ನು ಬಾಯಿ ಮೂಗು ಕಣ್ಣು ಮೂರರಿಂದ ಮೂರು ಬಗೆಯಾಗಿ ನೈವೇದ್ಯವನ್ನು ಭುಂಜಿಸುತ್ತಾನೆ' ಎನ್ನುತ್ತದೆ ಐತರೇಯಭಾಷ್ಯ

**ಶಫರ ನಾಮಕ ಜಿಹ್ವೆಯಲಿ**

ಮತ್ಸ್ಯರೂಪಿ ಶ್ರೀಹರಿ ನಾಲಿಗೆಯಲ್ಲಿ ಅಂದರೆ ರಸನೇಂದ್ರಿಯದಲ್ಲಿರುತ್ತಾನೆ ಜಲೀಯ ಇಂದ್ರಿಯವಾದ ರಸನೇಂದ್ರಿಯದಲ್ಲಿ ಜಲಚರ ಮತ್ಸ್ಯಮೂರ್ತಿ ಇದ್ದು ಅನ್ನರಸವನ್ನು ಸವಿಯುತ್ತಾನೆ ಅದರಿಂದ ನಮ್ಮ ಬಾಯೊಳಗಿಟ್ಟ ಅನ್ನವನ್ನು ನಾಲಿಗೆಯಿಂದ ಒಸರುವ ಲಾಲಾರಸ ಪಚನ ಮಾಡುತ್ತದೆ ಶ್ರೀಹರಿಯೂ ಮತ್ಸ್ಯರೂಪಿಯಾದ ನಾಲಿಗೆಯಿಂದಲೆ ಅನ್ನವನ್ನು ಉಣ್ಣುತ್ತಾನೆ, ನಾವೂ ಆ ನಾಲಿಗೆಯಿಂದಲೆ ಅನ್ನ ಉಣ್ಣುತ್ತೇವೆ ಎಂದು ಅನುಸಂಧಾನ ಮಾಡಿಕೊಳ್ಳಬೇಕು

'ಜಿಹ್ವಾಯಾಂ ಮತ್ಸ್ಯದೇವಂ ಚ' 'ಮತ್ಸ್ಯೋ ಜಿಹ್ವಾಗತಃ' ಎಂದು ಗುರುವೃತ್ತ ಮುಂತಾದುದು ಇದನ್ನೇ ಹೇಳಿದೆ

**ದಂತದಲಿ ಹಂಸಾಖ್ಯ**

ಅನ್ನವನ್ನು ಅಗಿಯುವುದು ಹಲ್ಲುಗಳಿಂದ ಹಲ್ಲುಗಳು ಬಿಳಿಯಾಗಿ ನಿರ್ಮಲವಾಗಿರಬೇಕು ದಂತಧಾವನ ಶೌಚದಲ್ಲಿ ಪ್ರಮುಖವಾದ ಅಂಶ ಹಂಸ ಬಿಳಿಬಣ್ಣಕ್ಕೆ ನೈರ್ಮಲ್ಯಕ್ಕೆ ಸಂಕೇತ ಹಂಸಮೂರ್ತಿಯೂ ಹಾಗೇ ಅವನ ಸ್ಥಾನವಾದ ಚಂದ್ರಬಿಂಬವೂ ಹಾಗೇ ದಂತಧಾವನ ಕಾಲದಲ್ಲಿ ಚಂದ್ರಾಂತರ್ಗತನನ್ನೇ ನೆನೆಯಬೇಕು ಅವನು ದಂತದಲ್ಲಿಯೂ ಇರುವುದು ಸಹಜ

'ಹಂಸಂ ದಂತೇಷು ಭೂಸುರ' 'ಹಂಸೋ ದಂತಾನಾಶ್ರಿತ್ಯ ತಿಷ್ಠತಿ' ಎಂದು ಗುರುವೃತ್ತ ಮುಂತಾದುದು ಹೇಳಿದೆ

**ತ್ರಿಪದಿ ಪಾದ್ಯ ಹಯಾಸ್ಯ ವಾಚ್ಯದೊಳು**

'ವಾಚದೊಳು' 'ವಾಕ್ಯದಲಿ' ಎಂದು ಪಾಠವಿರಬಹುದು ಮಾತಿನಲ್ಲಿ ಹಯಗ್ರೀವ ಮೂರ್ತಿ ಅವನು ತ್ರಿಪದಿಪಾದ್ಯ ತ್ರಿಪದಿ ಎಂದರೆ ಗಾಯತ್ರೀಮಂತ್ರ ಅದಕ್ಕೆ,

ತತ್ಸವಿತುರ್ವರೇಣ್ಯಂ
ಭರ್ಗೋ ದೇವಸ್ಯ ಧೀಮಹಿ
ಧಿಯೋ ಯೋ ನಃ ಪ್ರಚೋದಯಾತ್

ಎಂದು ಮೂರು ಪಾದಗಳಿವೆ ಅದರಿಂದ ತ್ರಿಪದಿ ಎನಿಸಿದೆ ಈ ಮೂರು ಪಾದಗಳ ವ್ಯಾಖ್ಯಾನರೂಪವಾಗಿ ಮೂರು ವೇದಗಳು ಋಗ್ವೇದ ಯಜುರ್ವೇದ ಸಾಮವೇದಗಳು ಅಥರ್ವಣವೇದ ಋಗ್ವೇದದಲಿಯೆ ಸೇರಿ ಹೋಗುತ್ತದೆ ಏಕೆಂದರೆ, ಅದೂ ಶ್ಲೋಕರೂಪ ಶ್ಲೋಕರೂಪವೆಲ್ಲ ಋಗ್ವೇದ ಗದ್ಯರೂಪ ಯಜುರ್ವೇದ ಶ್ಲೋಕಗಳಲ್ಲಿ ತಿರುಗಿ ಗಾನಯುಕ್ತವಾದುದು ಸಾಮವೇದ ಶಾಖಾವಿಭಾಗದಲ್ಲಿ ಮಾತ್ರ ಅಥರ್ವಣವೇದ ಪ್ರತ್ಯೇಕವಾಗಿ ಒಂದು ವೇದವೆಂದು ಪರಿಗಣಿಸಲ್ಪಟ್ಟಿದೆ ಓಂಕಾರದ ಮೂರು ಅಕ್ಷರಗಳು ಅ ಉ ಮ್ ಇವುಗಳಿಗೆ ಭೂಃ ಭುವಃ ಸ್ವಃ ಎಂದು ಮೂರು ವ್ಯಾಹೃತಿಗಳು ವ್ಯಾಖ್ಯಾನರೂಪವಾಗಿವೆ ಅವುಗಳಿಗೆ ಗಾಯತ್ರಿಯ ಮೂರು ಪಾದಗಳು ಅವುಗಳಿಗೆ ಪುರುಷಸೂಕ್ತದ ಮೂರು ವರ್ಗಗಳು, ಅವುಗಳಿಗೆ ಮೂರು ವೇದಗಳು ಹೀಗೆ ಸಮಸ್ತ ವಾಙ್ಮಯಪ್ರತಿಪಾದ್ಯ ಗಾಯತ್ರೀಪ್ರತಿಪಾದ್ಯ ನಾದ ಹಯಗ್ರೀವನೆ ಪ್ರತ್ಯೇಕವಾಗಿ ಗಾಯತ್ರೀಪ್ರತಿಪಾದ್ಯನೆಂದು ಹೇಳಿದುದು ಪ್ರಕೃತ ಅನ್ನಾಭಿಮಂತ್ರಣಮಂತ್ರ ಗಾಯತ್ರಿಯಾದ್ದರಿಂದ ಗಾಯತ್ರೀ ಪ್ರತಿಪಾದ್ಯನಾದ ಹಯಗ್ರೀವನೆ ಅನ್ನಪ್ರಶಂಸಾರೂಪವಾದ ಮಾತಿನಲ್ಲಿರುತ್ತಾನೆ ಎಂಬ ಅಭಿಪ್ರಾಯ ದಿಂದ 'ಅನ್ನಂ ಪ್ರಶಂಸನ್ ಭುಂಜೀತ' ಅನ್ನವನ್ನೂ ಅನ್ನದಾತನನ್ನೂ ಪ್ರಶಂಸಿಸುತ್ತ ಸಂತೋಷದಿಂದ ಉಂಡಾಗ ಅನ್ನಪಚನ ಸುಗಮವಾಗುತ್ತದೆ

ಗಾಯತ್ರೀಪ್ರತಿಪಾದ್ಯ ಸವಿತೃನಾಮಕ ನಾರಾಯಣನೆಂಬುದು ಪ್ರಸಿದ್ಧ ಆದರೂ,

'ತೃತೀಯೋ ವಾಚಿ ಸಂಸ್ಥಶ್ಚ ಸ್ತ್ರೀರೂಪೋ ಹಯಶೀರ್ಷಕಃ ।'

ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದಂತೆ ಗಾಯತ್ರಿಯಲ್ಲಿ ನಿಯಾಮಕ ನಾಗಿರುವ ಹಯಗ್ರೀವಮೂರ್ತಿ ಮಾತಿನಲ್ಲಿಯೂ ಸ್ತ್ರೀರೂಪದಿಂದ ಇದ್ದಾನೆ ನಿಯಾಮಕ ಮತ್ತು ಪ್ರತಿಪಾದ್ಯರೂಪೈಕ್ಯ ವಿವಕ್ಷೆಯಿಂದ ಪ್ರತಿಪಾದ್ಯನೆನಿಸಿದ್ದಾನೆ ತ್ರಿಪದಿಪಾದ್ಯ ಎಂದರೆ ತ್ರಿಪದಿಪ್ರತಿಪಾದ್ಯ

'ಹಯಗ್ರೀವಂ ತಥಾ ವಿದ್ಧಿ ವಾಙ್ಮಂಟಪವಿಲಾಸಿನಂ' 'ಗಂಧರ್ವಾಸ್ಯಃ ಸದಾ ವಾಚಿ' ಎಂದು ಗುರುವೃತ್ತ ಮುಂತಾದವು ಹೇಳಿವೆ

ಅದನಾಘ್ರಾಣದೃಷ್ಟ್ಯಾಖ್ಯಭೋಗತ್ರಯವಿಭಾಗತಃ।
ಮುಖನಾಸಾಚಕ್ಷುಷಾಂ ತದ್ ಭೋಗ್ಯಮನ್ನಂ ಹರೇಃ ಸ್ಮೃತಂ ॥

ಬಾಯೊಳಗೆ ಅಗಿದು ಸವಿಯುವುದು, ವಾಸನೆಯನ್ನು ಅನುಭವಿಸುವುದು, ನೋಟದಿಂದ ಸುಖಿಸುವುದು ಎಂದು ಹರಿ ಅನ್ನಭೋಗವನ್ನು ಮೂರು ಬಗೆಯಿಂದ ನಡೆಸಿ ಜೀವರಿಂದಲೂ ಹಾಗೇ ಮಾಡಿಸುತ್ತಾನೆ ಎನ್ನುವುದು ಒಟ್ಟು ತಾತ್ಪರ್ಯ

**ಅಪರಿಮಿತ ಸುಖಪೂರ್ಣ ಸಂತತ ಕೃಪಣರೊಳಗಿದ್ದು :**

'ಕೃಪಣೋಽಜಿತೇಂದ್ರಿಯಃ' 'ಇಂದ್ರಿಯನಿಗ್ರಹವಿಲ್ಲದವನು ಕೃಪಣ' ಎನ್ನುವುದು ಪ್ರಕೃತದಲ್ಲಿ ವಿವಕ್ಷಿತವಲ್ಲ ಇಂದ್ರಿಯನಿಗ್ರಹವುಳ್ಳವರಿಗೂ ಮೂರು ಬಗೆಯಿಂದ ಅನ್ನ ಉಣಿಸುವವನು ಮೇಲೆ ಹೇಳಿದ ಆರು ರೂಪಗಳ ಹರಿಯೆ ಅದರಿಂದ ಕೃಪಣರೆಂದರೆ ದೀನರು ಅನ್ನ ಉಣಲೂ ಕೈಲಾಗದವರು ಸ್ವತಃ ಯಾವುದಕ್ಕೂ ಅಸಮರ್ಥರಾದ ಬ್ರಹ್ಮಾದಿ ಜೀವರು ಅವರಲ್ಲಿ ಶ್ರೀಹರಿ ಕುಳಿತು ತಾನು ಉಂಡು ಅವರನ್ನು ಉಣಿಸುತ್ತಾನೆ ಅವನು ಅಪರಿಮಿತ ಸುಖಪೂರ್ಣ ಸಾಗರದಂತೆ ಆದರೂ ಲೀಲೆಯಿಂದ ಬ್ರಹ್ಮಾದಿ ಜೀವರಲ್ಲಿದ್ದು ಉಣ್ಣುತ್ತಾನೆ ಏಕೆಂದರೆ ಅವರು ಕೃಪಣರು

**ಅವರವರ ರಸ ಸ್ವೀಕರಿಸಿ ಕೊಡುವ**

ಶ್ರೀಹರಿ ಅವರವರ ಅನ್ನರಸ ಉಣ್ಣುತ್ತಾನೆ ಎಂದರೆ, ಅದರಲ್ಲಿರುವ ಸ್ವಾಖ್ಯರಸವನ್ನೆ ಉಣ್ಣುತ್ತಾನೆ, ಲಕ್ಷ್ಮೀ ಬ್ರಹ್ಮಾದಿಗಳಿಗೆ ಯೋಗ್ಯವಾದ ರಸಗಳನ್ನು ಕೇವಲ ಆಘ್ರಾಣನ ದರ್ಶನಗಳಿಂದ ಸ್ವೀಕರಿಸಿ ಆ ಲಕ್ಷ್ಮೀಬ್ರಹ್ಮಾದಿಗಳಿಗೇ ಕೊಡುತ್ತಾನೆ ಮನುಷ್ಯರಿಗೆ ಅವರಿಗೆ ಯೋಗ್ಯವಾದ ಪ್ರಾಕೃತರಸವನ್ನೇ ಕೊಡುತ್ತಾನೆ ಹಾಗೆ ತಿಳಿದರೆ ಪ್ರಾಣಾಗ್ನಿಹೋತ್ರದ ಫಲ ಸಿಗುತ್ತದೆ ಅನ್ನದಲ್ಲಿ ಅಭಿಮಂತ್ರಣದಿಂದ ಸನ್ನಿಹಿತನಾದ ಗಾಯತ್ರೀಪ್ರತಿಪಾದ್ಯನಾದ ನಾರಾಯಣ 'ಧಿಯೋ ಯೋ ನಃ ಪ್ರಚೋದಯಾತ್' ಎಂದು ಗಾಯತ್ರಿ ಹೇಳುವಂತೆ ಬುದ್ಧಿ ಪ್ರಚೋದನೆ ಮಾಡುತ್ತಾನೆ ಇದೇ ನಿತ್ಯೋಪವಾಸಕ್ಕೂ ಫಲ

**ನಿರುಪಮಾನಂದಾತ್ಮ ಹರಿ ಸಂ**
**ಕರುಷಣ ಪ್ರದ್ಯುಮ್ನ ರೂಪದಿ**
**ಇರುತಿಹನು ಭೋಕ್ತೃಗಳೊಳಗೆ ತಚ್ಛಕ್ತಿದನು ಎನಿಸಿ।**
**ಕರೆಸುವನು ನಾರಾಯಣನಿರು**
**ದ್ಧೆರಡು ನಾಮದಿ ಭೋಜ್ಯ ವಸ್ತುಗ**
**ನಿರುತ ತರ್ಪಕನಾಗಿ ತೃಪ್ತಿಯನೀವ ಚೇತನಕೆ ॥ ೮ ॥**

**ವಾಸುದೇವನು ಒಳ ಹೊರಗೆ ಅವ**
**ಕಾಶ ಕೊಡುವ ನಭಸ್ಥನಾಗಿ ರ**
**ಮಾ ಸಮೇತ ವಿಹಾರಮಾಳ್ಪನು ಪಂಚರೂಪದಲಿ।**
**ಆ ಸರೋರುಹಸಂಭವಾ ಭವ**
**ವಾಸವಾದ್ಯಮರಾದಿ ಚೇತನ**
**ರಾಶಿಯೊಳಗಿಹನೆಂದು ಅರಿತವನವನೆ ಕೋವಿದನು ॥ ೯ ॥**

ನಿರುಪಮ ಆನಂದ ಸ್ವರೂಪನಾದ ಶ್ರೀಹರಿ ಭೋಕ್ತೃಗಳಿಗೆ ಶಕ್ತಿಪ್ರದನೆನಿಸಿ ಸಂಕರ್ಷಣ ಪ್ರದ್ಯುಮ್ನ ರೂಪಗಳಲ್ಲಿರುತ್ತಾನೆ ಭೋಜ್ಯ ವಸ್ತುಗಳಲ್ಲಿ ತೃಪ್ತಿಕರನಾಗಿ ನಾರಾಯಣ ಅನಿರುದ್ಧ ಎರಡು ಹೆಸರುಗಳಿಂದ ಸದಾ ಇದ್ದು ಜೀವನಿಗೆ ತೃಪ್ತಿ ನೀಡುತ್ತಾನೆ

ವಾಸುದೇವನು ಶರೀರದ ಒಳಗೂ ಹೊರಗೂ ಆಕಾಶದಲ್ಲಿದ್ದು ಅವಕಾಶ ಕೊಡುತ್ತಾನೆ ಹೀಗೆ ಪಂಚರೂಪಗಳಲ್ಲಿ ಶ್ರೀಹರಿ ಪಂಚರೂಪಗಳಲ್ಲಿರುವ ರಮಾದೇವಿ ಯೊಂದಿಗೆ ವಿಹಾರ ಮಾಡುತ್ತಾನೆ ಆ ಬ್ರಹ್ಮವಾಯುಗಳೊಳಗೆ, ಆ ಶಿವನೊಳಗೆ ಮತ್ತು ಇಂದ್ರಾದಿದೇವತೆಗಳು ಮುಂತಾಗಿ ಸಕಲ ಚೇತನ ಸಮೂಹದೊಳಗೆ ಹೀಗೆ ಶ್ರೀಹರಿ ಇರುತ್ತಾನೆ ಎಂದು ಅರಿತವನು ಅವನೆ ಜ್ಞಾನಿ ಎನಿಸುತ್ತಾನೆ

**ನಿರುಪಮಾನಂದಾತ್ಮ ಹರಿ·**

ಶ್ರೀಹರಿ ಆನಂದ ಸ್ವರೂಪನಾಗಿದ್ದಾನೆ ಆನಂದವುಳ್ಳವನೂ ಆಗಿದ್ದಾನೆ ದೀಪ ಪ್ರಕಾಶಸ್ವರೂಪ ಆದರೂ ಅದರಲ್ಲಿ ಪ್ರಕಾಶವಿದೆ ಹಾಗೆ ಇದು ಇಷ್ಟು ಮಾತ್ರವಲ್ಲ ಶ್ರೀಹರಿ ಅನುಭವಸ್ವರೂಪನೂ ಹೌದು ಅನುಭವ ಬೇರೆ ಅಲ್ಲ, ಅವನು ಬೇರೆ ಅಲ್ಲ ಆನಂದ ಬೇರೆ ಅಲ್ಲ, ಆದರ ಅನುಭವ ಬೇರೆ ಅಲ್ಲ ಆನಂದದ ಅನುಭವ ಆ ಅನುಭವಸ್ವರೂಪನಾದ ಅವನಲ್ಲಿ ಇದೆ, ವಿಶೇಷಬಲದಿಂದ ಹೀಗಾಗಿ ಆನಂದರೂಪಿ ಹರಿ ಭೋಗ್ಯ, ಅನುಭವರೂಪಿ ಹರಿ ಭೋಕ್ತೃ ಈ ಆನಂದಕ್ಕೆ ಉಪಮಾನವಿಲ್ಲ ನಿರುಪಮ ತನ್ನದೆ ಆದ ಒಂದು ರೂಪ ತನ್ನ ಇನ್ನೊಂದು ರೂಪಕ್ಕೆ ಭೋಗ್ಯ ಭೋಗ್ಯವೆಂದಮಾತ್ರಕ್ಕೆ ಆ ರೂಪ ಕಡಿಮೆಯಲ್ಲ ಭೋಕ್ತೃ ವೆಂದು ಇನ್ನೊಂದು ರೂಪ ಹೆಚ್ಚಲ್ಲ ಪತಿಗೆ ಪತ್ನಿ ಭೋಗ್ಯಳಾಗಿರುವಂತೆ ಪತಿಯೂ ಪತ್ನಿಗೆ ಭೋಗ್ಯನಾಗಿರುತ್ತಾನೆ

**ಸಂಕರ್ಷಣ ಪ್ರದ್ಯುಮ್ನರೂಪದಿ ಇರುತಿಹನು ಭೋಕ್ತೃಗಳೊಳಗೆ**

ಪ್ರತಿಬಿಂಬಕ್ರಿಯೆ ಬಿಂಬಕ್ರಿಯಾಧೀನವಾಗಿರುವುದರಿಂದ ಬಿಂಬನಾದ ಶ್ರೀಹರಿ ಭೋಕ್ತೃಜೀವರಲ್ಲಿ ಸಂಕರ್ಷಣ ಪ್ರದ್ಯುಮ್ನರೂಪಗಳಿಂದ ಇದ್ದು ಅನ್ನಭಕ್ಷಣಕ್ರಿಯೆ ನಡೆಸುತ್ತಾನೆ

ಇದು ಕೇವಲ ವಿಹಾರ, ಲೀಲೆ ಆನಂದಸ್ವರೂಪನಿಗೆ ಇದು ಬೇಕಾಗಿಲ್ಲ ಜೀವರಿಗೆ ಭೋಜನ ಶಕ್ತಿ ನೀಡುವುದಕ್ಕಾಗಿ ಹಾಗೆ ಮಾಡುತ್ತಾನೆ ಐತರೇಯಭಾಷ್ಯದಲ್ಲಿ ಹೇಳಿದೆ-

ಸಂಕರ್ಷಣಶ್ಚ ಪ್ರದ್ಯುಮ್ನಸ್ತತ್ರ ಭೋಕ್ತೃಷು ಸಂಸ್ಥಿತೌ ।
ಭೋಕ್ತೃಶಕ್ತಿಪ್ರದೌ ನಿತ್ಯಂ ಭೋಕ್ತಾರೌ ಚ ವಿಶೇಷತಃ ॥

ಭೋಕ್ತೃಶಕ್ತಿ ಎಂದರೆ ಅನ್ನವನ್ನು ಉಂಡು ಅರಗಿಸಿಕೊಳ್ಳುವ ಶಕ್ತಿ ಅನ್ನಪಚನಶಕ್ತಿ ಅಡಿಗೆಮನೆಯಲ್ಲಿ ಅನ್ನಪಾನಕ್ಕೆ ಗಾಳಿ ಬೆಂಕಿ ಬೇಕು ಗಾಳಿಯಲ್ಲಿ ಸಂಕರ್ಷಣ, ಬೆಂಕಿಯಲ್ಲಿ ಪ್ರದ್ಯುಮ್ನರು ಬೇಕು

ಬಲಜ್ಞಾನಸ್ವರೂಪತ್ವಾತ್ ವಾಯುನಾಮಾ ಸ ಏವ ಚ।
ವಾಯೌ ಸಂಕರ್ಷಣೋ ನಿತ್ಯಂ ಸ್ಥಿತಃ ॥

ಬಲಜ್ಞಾನಸ್ವರೂಪನಾದ್ದರಿಂದ ವಾಯುನಾಮಕನಾಗಿ ವಾಯುವಿನಲ್ಲಿ ಸಂಕರ್ಷಣ ನಿದ್ದಾನೆ.

ಪ್ರದ್ಯುಮ್ನೋ ಜ್ಯೋತಿಷಿ ಸ್ಥಿತಃ, ಜ್ಯೋತಿರ್ನಾಮಾ ದ್ಯೋತನಾಚ್ಚ ।

ಜ್ಯೋತಿಃಸ್ವರೂಪನಾದ್ದರಿಂದ ಜ್ಯೋತಿರ್ನಾಮಕನಾಗಿ ಬೆಂಕಿಯಲ್ಲಿ ಪ್ರದ್ಯುಮ್ನನಿದ್ದಾನೆ ಎಂದು ಐತರೇಯಭಾಷ್ಯದಲ್ಲಿ ಹೇಳಿದೆ

ಸಂಕರ್ಷಣ ಲಯಮೂರ್ತಿ ಪ್ರದ್ಯುಮ್ನ ಸೃಷ್ಟಿಕರ್ತ ಅನ್ನಪಚನವೂ ಅದರ ಹಿಂದಿನ ರೂಪವನ್ನು ಕಳೆದು ಹೊಸರೂಪ ಕೊಡುವ ಪ್ರಕ್ರಿಯೆಯೆ ಆಗಿರುತ್ತದೆ ಹಿಂದಿನ ರೂಪ ಕಳೆಯುವುದು ಲಯ ಹೊಸರೂಪ ಕೊಡುವುದು ಸೃಷ್ಟಿ ಹೀಗಾಗಿ ಭೋಕ್ತೃಗಳಲ್ಲಿ ಅನ್ನಪಚನಶಕ್ತಿಗಾಗಿ ಲಯ ಸೃಷ್ಟಿಕರ್ತರಾದ ಸಂಕರ್ಷಣ ಪ್ರದ್ಯುಮ್ನರು ಬೇಕು

ಹೀಗೆ ದೇಹದ ಹೊರಗೆ ಅಧಿಭೂತದಲ್ಲಿ ಗಾಳಿ ಬೆಂಕಿಗಳು ಅನ್ನಪಾಕ ಮಾಡುವಂತೆ ದೇಹದ ಒಳಗೂ ಅಧ್ಯಾತ್ಮದಲ್ಲಿ ವಾಯು ಅಗ್ನಿಗಳೆ ಆ ಕಾರ್ಯ ನಡೆಸುತ್ತವೆ ಅವುಗಳಿಗೆ ಶಕ್ತಿ ನೀಡಲು ಎರಡೂ ಕಡೆ ಸಂಕರ್ಷಣ ಪ್ರದ್ಯುಮ್ನರಿರುತ್ತಾರೆ

**ನಾರಾಯಣನಿರುದ್ಧರೆಡು ನಾಮದಿ ಭೋಜ್ಯವಸ್ತುಗ**

ಭೋಜ್ಯವಾದ ಅನ್ನ ನೀರುಗಳಲ್ಲಿ ನಾರಾಯಣ ಅನಿರುದ್ಧರು ಇರುತ್ತಾರೆ ಅನ್ನದಲ್ಲಿ ನಾರಾಯಣ, ನೀರಿನಲ್ಲಿ ಅನಿರುದ್ಧ ಅಧಿಭೂತದಲ್ಲಿ, ದೇಹದ ಹೊರಗೆ, ಪೃಥಿವಿಯಲ್ಲಿ ನಾರಾಯಣ, ಜಲದಲ್ಲಿ ಅನಿರುದ್ಧ-

ಪೃಥುತ್ವಾತ್ ಪೃಥಿವೀನಾಮಾ ಭೂಮೌ ನಾರಾಯಣಃ ಸ್ಥಿತಃ।
ಅನಿರುದ್ಧಸ್ತಥೈವಾಪ್ಸು ಬಹುರೂಪೋ ವ್ಯವಸ್ಥಿತಃ ।
ಅಪ್ ನಾಮಾ ಪಾಲನಾನ್ನಿತ್ಯಂ ।

ಹಾಗೇ ದೇಹದೊಳಗೆ, ಅಧ್ಯಾತ್ಮದಲ್ಲಿ, ಅನ್ನದಲ್ಲಿ ನಾರಾಯಣ, ನೀರಲ್ಲಿ ಅನಿರುದ್ಧ-

ನಾರಾಯಣಾನಿರುದ್ಧೌ ತೌ ಭೋಗ್ಯವಸ್ತುಷು ಸಂಸ್ಥಿತೌ।
ತರ್ಪಕೌ ಸರ್ವಲೋಕಾನಾಂ ತಸ್ಮಾದ್ ಭೋಗ್ಯೌ ನ ಚರ್ವ್ಯತಃ ॥

**ತರ್ಪಕನಾಗಿ ತೃಪ್ತಿಯನೀವ ಚೇತನಕೆ**

ಅನ್ನ ನೀರು ಹೊಟ್ಟೆಯಲ್ಲಿ ಪಚನಗೊಂಡಾಗ ಅವು ಜೀವನಿಗೆ ತೃಪ್ತಿ ನೀಡುತ್ತವೆ ತೃಪ್ತಿ ನೀಡುವ ಶಕ್ತಿ ವ್ಯಕ್ತವಾಗಲು ನಾರಾಯಣಾನಿರುದ್ಧರು ಅವುಗಳಲ್ಲಿರುತ್ತಾರೆ ಅವರು ಲೀಲೆಯಿಂದ ಭೋಕ್ತೃಜೀವರೊಳಗಿರುವ ಸಂಕರ್ಷಣ ಪ್ರದ್ಯುಮ್ನರಿಗೆ ತೃಪ್ತಿ ನೀಡುತ್ತಾರೆ ಆಗ ಜೀವರಿಗೂ ಅನ್ನ ನೀರು ತೃಪ್ತಿ ನೀಡುತ್ತವೆ

**ವಾಸುದೇವನು ಒಳಹೊರಗೆ**

ವಾಸುದೇವ ದೇಹದೊಳಗೆ ಅಂದರೆ ಅಧ್ಯಾತ್ಮದಲ್ಲಿಯೂ ದೇಹದ ಹೊರಗೆ ಅಧಿಭೂತದಲ್ಲಿಯೂ ಆಕಾಶದಲ್ಲಿದ್ದು ಅವಕಾಶ ನೀಡುತ್ತಾನೆ ಅವಕಾಶ ನೀಡುವುದೇ ಆಕಾಶದ ಕಾರ್ಯ

ಅವಕಾಶಪ್ರದೋ ನಿತ್ಯಂ ವಾಸುದೇವೋ ನಭಃಸ್ಥಿತಃ।

ಶರೀರದೊಳಗೆ ಜಠರದಲ್ಲಿ ಅನ್ನನಾಳ ಕರುಳುಗಳಲ್ಲಿ ನಾಡಿಗಳಲ್ಲಿ ಅನ್ನ, ಅನ್ನರಸಗಳ ಸಂಚಾರಕ್ಕಾಗಿ ಅಧ್ಯಾತ್ಮದಲ್ಲಿ ಎಲ್ಲ ಅವಕಾಶಗಳಲ್ಲಿಯೂ ವಾಸುದೇವನೆ ಇದ್ದು ಅವಕಾಶ ನೀಡುತ್ತಾನೆ ಎಲ್ಲಿಯಾದರೂ ಒಂದೆಡೆ ಸ್ವಲ್ಪ ಅನ್ನಸಂಚಾರಕ್ಕೆ ಅಡ್ಡಿ ಉಂಟಾದರೆ ಶರೀರ ಪತನವೆ ಸರಿ

ಹೊರಗೂ ಅಧಿಭೂತದಲ್ಲಿ ಅನ್ನ ನೀರುಗಳಿಗೆ ಅವಕಾಶ ಕೊಡುವವನು ಆಕಾಶದಲ್ಲಿರುವ ವಾಸುದೇವನೆ-

ಆಕಾಶನಾಮಕಃ, ವ್ಯಾಪ್ತತ್ವಾತ್ ವಾಸುದೇವಸ್ತು ಸದಾಕಾಶೇ ಸ್ಥಿತಃ ಪ್ರಭುಃ।

'ವಾಸುದೇವ' ಎಂದರೆ ಅವನ ಹೆಸರೇ ಸ್ಪಷ್ಟವಾಗಿ ಹೇಳುತ್ತದೆ-

ವಾಸನಾದ್ ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಂ।
ಸರ್ವಭೂತನಿವಾಸಾಯ ವಾಸುದೇವಾಯ ತೇ ನಮಃ ॥

ಸಮಸ್ತ ಚೇತನಗಳಿಗೆ ತನ್ನಲ್ಲಿ ವಾಸ ಮಾಡಲು ಅವಕಾಶ ನೀಡುವವನಾದ್ದರಿಂದ 'ವಾಸುದೇವ'ನೆನಿಸಿದ್ದಾನೆ

**ರಮಾಸಮೇತ ವಿಹಾರ ಮಾಳ್ಪನು ಪಂಚರೂಪದಲಿ**

ಮಾಯಾ ಜಯಾ ಕೃತಿ ಶಾಂತಿ ಲಕ್ಷ್ಮೀ ಎಂಬ ಐದು ರೂಪಗಳಿಂದ ರಮಾದೇವಿ ಕ್ರಮವಾಗಿ

ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ನಾರಾಯಣ ಎಂದು ಐದು ರೂಪಗಳಲ್ಲಿರುವ ಹರಿಯೊಂದಿಗೆ ವಿಹಾರ ಮಾಡುತ್ತಾಳೆ. ಹರಿ ಅವಳೊಂದಿಗೆ ವಿಹಾರ ಮಾಡುತ್ತಾನೆ. ಜೀವರಿಗೆ ಅನ್ನ ಉಣಿಸಿ ತೃಪ್ತಿ ನೀಡುವುದೇ ಅವರ ವಿಹಾರ.

**ಆ ಸರೋರುಹಸಂಭವ ಆ ಭವ**

'ಸರೋರುಹಸಂಭವ' ಎಂದು ಪದ್ಮನಾಭನ ನಾಭಿಕಮಲದಲ್ಲಿ ಜನಿಸಿದ ಚತುರ್ಮುಖ, ಮುಂದೆ ಜನಿಸಲಿರುವ ವಾಯು ಇಬ್ಬರೂ ವಿವಕ್ಷಿತರು. ಏಕೆಂದರೆ ಜೀವರಿಗೆ ಅನ್ನ ನೀಡುವವ ಅನ್ನಾಭಿಮಾನಿ ಚತುರ್ಮುಖ. ಅನ್ನ ಉಂಡು ಅರಗಿಸಿ ತೃಪ್ತಿ ನೀಡುವವ ವಾಯು.

ಅನ್ನದೇವನಾದ ಬ್ರಹ್ಮನಿಗೆ ಅನ್ನ ಉಣಿಸುವ ಪ್ರಾಣಶಕ್ತಿಯೂ ವಾಯುವೆ. ವಾಯುವಿಗೆ ಅನ್ನ ನೀಡುವವನೂ ಬ್ರಹ್ಮನೆ.

ಅನ್ನದೇವಸ್ಯ ಚಾಯುಃ ಸ ತಸ್ಮಾದ್ ದೇವೋತ್ತಮೋ ಮರುತ್।

'ಅನ್ನಾಭಿಮಾನಿ ಚತುರ್ಮುಖನಿಗೂ ಆಯುಃಪ್ರದ ವಾಯುವಾದ್ದರಿಂದ ಅವನು ದೇವೋತ್ತಮ'

ಅನ್ಯೋನ್ಯಗುಣದಾತೃತ್ವಾತ್ ಸಮಾನೌ ಬ್ರಹ್ಮಮಾರುತೌ ॥

ವಾಯು ಬ್ರಹ್ಮನಿಗೆ ಆಯುಸ್ಸು ನೀಡುತ್ತಾನೆ. ಬ್ರಹ್ಮ ವಾಯುವಿಗೆ ಅನ್ನ ನೀಡುತ್ತಾನೆ. ಹೀಗೆ ಇಬ್ಬರೂ ಪರಸ್ಪರ ಉಪಕಾರಕರು, ಸಮಾನರು.

'ಆ ಸರೋರುಹಸಂಭವ' ಎಂದರೆ ಇಂಥ ಮಹಾತ್ಮರಾದ ಆ ಬ್ರಹ್ಮವಾಯುಗಳು ಎಂದರ್ಥ. ಅವರಿಗೂ ಒಳಗಿದ್ದು ಅನ್ನ ಉಣಿಸಿ ತೃಪ್ತಿ ನೀಡುವ ಪ್ರಭು ಶ್ರೀಹರಿ.

ಸರ್ವಜೀವಶರೀರಾಭಿಮಾನಿ ಶಿವ ಎಂದು ಐತರೇಯಭಾಷ್ಯದಲ್ಲಿ ಉಕ್ತವಾಗಿದೆ-

ಸರ್ವದೇಹಾಭಿಮಾನೀ ತು ಶರೀರಪುರುಷಃ ಶಿವಃ ।

ಅನ್ನಾಭಿಮಾನಿಯೂ ಶಿವನೆ ಎಂದು ಛಾಂದೋಗ್ಯಭಾಷ್ಯದಲ್ಲಿ ಉಕ್ತವಾಗಿದೆ-

ತೇಜೋಽಭಿಮಾನಿನೀ ಲಕ್ಷ್ಮೀಃ ಪ್ರಾಣಸ್ತ್ವಬಭಿಮಾನವಾನ್।
ಅನ್ನಾಭಿಮಾನೀ ರುದ್ರಶ್ಚ ತಿಸ್ರಸ್ತಾ ದೇವತಾಃ ಪುರಾ ॥ ಇತಿ ಚ ಬ್ರಹ್ಮಾಂಡೇ ॥

ಅದರಿಂದ ಎಲ್ಲ ಶರೀರಗಳೂ ಶಿವನ ಅನುಗ್ರಹದಿಂದ ಅನ್ನ ಉಂಡು ಪಚನ ಮಾಡಿಕೊಂಡು ಜೀವಂತವಾಗಿರುವುದು ಶ್ರೀಹರಿಯ ವಿಹಾರದ ಫಲ. 'ಆ ಭವ' ಎಂದರೆ ಅಂಥ ಮಹಾತ್ಮನಾದ ಶಿವ. ಆ ಶಿವನೂ ಅನ್ನ ಉಣ್ಣುವುದು ಶ್ರೀಹರಿಯ ಅನುಗ್ರಹದಿಂದಲೆ.

**ವಾಸವಾದ್ಯಮರಾದಿ ಚೇತನರಾಶಿಯೊಳಗಿಹನು .**

ವಾಸವಾದ್ಯಮರರೆಂದರೆ ಇಂದ್ರಾದಿ ದೇವತೆಗಳು. ಇಂಥ ದೇವತೆಗಳು, ದಾನವರು, ಮಾನವರು,

ಪಶುಪಕ್ಷಿಗಳು, ಗಿಡಮರಗಳು ಹೀಗೆ ಎಲ್ಲ ಜೀವರೂ ಶರೀರಗಳೂ ಜೀವಂತವಾಗಿರುವುದು ಅನ್ನದ ಬಲದಿಂದ ಅದಕ್ಕೆ ಪಂಚರೂಪಿ ಹರಿಯ ಅನುಗ್ರಹ ಬೇಕು

ಇಂದ್ರಾದಿ ದೇವತೆಗಳನ್ನು ಮೊದಲಿಗೆ ಹೇಳಿ 'ಆದಿ' ಪದದಿಂದ ದಾನವಮಾನವಾದಿ ಗಳನ್ನು ಹೇಳಲು ಕಾರಣ ಇದು- ದೇವತೆಗಳಿಗೆ ಅನ್ನ ಉಂಡರೆ ಸುಖವಿದೆ ಉಣದಿದ್ದರೆ ದುಃಖವಿಲ್ಲ ಅವರ ಯೋಗಬಲ ಅಂಥದ್ದು

ಕ್ಷುತ್ ಪಿಪಾಸಾದಯಶ್ಚೈವ ದೇವಾನಾಂ ಭೋಗಸಾಧಕಾಃ।
ನತು ಪೀಡಾಕರಾಸ್ತೇಷಾಂ ಐಶ್ವರ್ಯಾದಿಗುಣೋನ್ನತೇಃ॥

ಆದರೂ ಸುಖಪ್ರಾರಬ್ಧವಶದಿಂದ ಅನ್ನ ಉಂಡು ಸುಖಿಸುತ್ತಾರೆ ಅದಕ್ಕೆ ಅವರಿಗೂ ಶ್ರೀಹರಿಯೆ ಅನ್ನ ಉಣಿಸಬೇಕಾಗುತ್ತದೆ ಸ್ವತಃ ಉಣ್ಣುವ ಶಕ್ತಿ ಇಲ್ಲ ದೇವತೆಗಳಿಗೆ ಹೀಗೆಂದ ಮೇಲೆ ಉಳಿದವರ ಪಾಡೇನೆಂದು ಸೂಚಿಸಲು 'ಆದಿ ಚೇತನರಾಶಿ' ಎನ್ನಲಾಗಿದೆ

**ಅರಿತವನೆ ಕೋವಿದನು**

ಏವಂ ಪಂಚಾತ್ಮಕಂ ವಿಷ್ಣುಂ ಯ ಉಪಾಸ್ತೇ ಸದೈವ ತು।
ಅವಕಾಶಪ್ರದಃ ಸೋಽಪಿ ಸ್ವಜಾತೀನಾಂ ಭವಿಷ್ಯತಿ।
ಭೋಕ್ತಾ ಚಾಪ್ಯಾಯಕಶ್ಚೈವ ತಸ್ಯ ವಿಷ್ಣೋಃ ಪ್ರಸಾದತಃ।
ಬ್ರಹ್ಮೇಂದ್ರಾದ್ಯಾಃ ಸ್ವಜಾತೀಶಪದಯೋಗ್ಯಾ ಅಮುಷ್ಯ ಚ।
ಯೋಗ್ಯಾ ಉಪಾಸನಸ್ಯ ಸ್ಯುಸ್ತದನ್ಯೇ ಜ್ಞಾನಮಾತ್ರಕೇ॥

'ಹೀಗೆ ಐದು ರೂಪಗಳುಳ್ಳ ಶ್ರೀಹರಿಯನ್ನು ಸದಾ ಉಪಾಸನೆ ಮಾಡುವವನು ತನ್ನ ಸಜಾತೀಯರಿಗೆ ಆಶ್ರಯನೆನಿಸುತ್ತಾನೆ ಇದು ವಾಸುದೇವೋಪಾಸನೆಯ ಫಲ ತನ್ನ ಸಜಾತೀಯರೊಳಗೆ ಹೆಚ್ಚು ಸುಖಭೋಗವುಳ್ಳನೆನಿಸುತ್ತಾನೆ ಇದು ಸಂಕರ್ಷಣ ಪ್ರದ್ಯುಮ್ನರ ಉಪಾಸನೆಯ ಫಲ ತನ್ನ ಸಜಾತೀಯರಿಗೆ ಸುಖಭೋಗ ನೀಡುತ್ತಾನೆ ಇದು ನಾರಾಯಣಾನಿರುದ್ಧೋಪಾಸನೆಯ ಫಲ ಈ ಉಪಾಸನೆಗಳಿಗೆ ಬ್ರಹ್ಮರುದ್ರೇಂದ್ರಾದಿ ದೇವತೆಗಳೇ ಅಧಿಕಾರಿಗಳು ಇತರರು ಜ್ಞಾನಮಾತ್ರಕ್ಕೇ ಅಧಿಕಾರಿಗಳು'

ಅದರಿಂದ ಈ ಪಂಚರೂಪವನ್ನರಿತವನೆ ಜ್ಞಾನಿ ಎನಿಸುತ್ತಾನೆ

**ವಾಸುದೇವನು ಅನ್ನದೊಳು ನಾ**
**ನಾ ಸುಭಕ್ಷ್ಯದಿ ಸಂಕರುಷಣ ಕೃ**
**ತೀಶ ಪರಮಾನ್ನದೊಳು ಘೃತದೊಳಗಿಪ್ಪನನಿರುದ್ಧ।**

**ಆ ಸುಪರ್ಣಾಂಸಗನು ಸೂಪದಿ**
**ವಾಸವಾನುಜ ಶಾಕದೊಳು ಮೂ**
**ಲೇಶ ನಾರಾಯಣನು ಸರ್ವತ್ರದಲಿ ನೆಲೆಸಿಹನು ॥ ೧೦ ॥**

ಅನ್ನದಲ್ಲಿ ವಾಸುದೇವನಿರುತ್ತಾನೆ ನಾನಾ ಸುಭಕ್ಷ್ಯಗಳಲ್ಲಿ ಸಂಕರ್ಷಣನಿರುತ್ತಾನೆ ಪರಮಾನ್ನದಲ್ಲಿ ಪ್ರದ್ಯುಮ್ನ, ಘೃತದೊಳಗೆ ಅನಿರುದ್ಧ, ತೊವ್ವೆಯಲ್ಲಿ ಆ ಗರುಡವಾಹನ, ಶಾಕದಲ್ಲಿ ಇಂದ್ರಾನುಜ ವಾಮನನಿರುತ್ತಾನೆ ಸರ್ವತ್ರ ಮೂಲೇಶನಾದ ನಾರಾಯಣ ನೆಲೆಸಿದ್ದಾನೆ

ಭೋಜನಕಾಲದಲ್ಲಿ ಅನ್ನಾದಿ ಪದಾರ್ಥಗಳಲ್ಲಿ ನಿಯಾಮಕನಾಗಿ ನೆಲೆಸಿರುವ ಭಗವದ್ರೂಪಗಳನ್ನು ಅವಶ್ಯ ಚಿಂತಿಸಬೇಕು ಚಿಂತಿಸದೆ ಉಂಡರೆ ಒಂದೊಂದು ಅಗುಳಿನಲ್ಲಿಯೂ ಪಾಪವನ್ನೆ ನುಂಗಿದಂತಾಗುವುದು

ಭುಂಜತೇ ತೇ ತ್ವಘಂ ಪಾಪಾಃ।

ಎಂದು ಭಗವದ್ಗೀತೆ ನಮ್ಮನ್ನು ಎಚ್ಚರಿಸುತ್ತಿದೆ ಚಿಂತಿಸುತ್ತ ಉಂಡರೆ ಅದು ಪ್ರಾಣಾಗ್ನಿಹೋತ್ರವೆನಿಸುತ್ತದೆ ಉಂಡರೂ ಉಪವಾಸದ ಫಲವೆ ಲಭಿಸುತ್ತದೆ ಇದನ್ನು ಮುಂದೆ ಇಲ್ಲಿಯೆ ಹೇಳುತ್ತಾರೆ-

'ಈ ಪರಿಯಲರಿತುಂಬ ನರ ನಿತ್ಯೋಪವಾಸಿ'

ಚಿಂತಿಸುವ ಕ್ರಮವನ್ನು 'ಮೂಲೇಶ' ಪದದಿಂದ ಸೂಚಿಸಿದ್ದಾರೆ ನಮ್ಮ ಹೃದಯದ ಅಷ್ಟದಳಕಮಲದಲ್ಲಿ ಬಿಂಬಮೂರ್ತಿ 'ಅಗ್ರೇಶ, ಮೂಲೇಶ, ಪ್ರಾದೇಶ' ಎಂದು ಮೂರು ರೂಪಗಳಿಂದ ನೆಲೆಸಿದ್ದಾನೆ ನಾವು ಉಣ್ಣುವುದನ್ನೆಲ್ಲ ಉದರದಲ್ಲಿರುವ ವೈಶ್ವಾನರರೂಪದಿಂದ ತಾನೆ ಪಚನ ಮಾಡಿ ಅದರ ರಸವನ್ನು ಬಿಂಬರೂಪದಿಂದ ಉಣ್ಣುತ್ತಾನೆ ಉಣ್ಣುವುದು ಪ್ರತಿಬಿಂಬನಾದ ಜೀವನಿಗೆ ಉಣಿಸುವುದಕ್ಕಾಗಿ

**ವಾಸುದೇವನು ಅನ್ನದೊಳು·**

'ಸರ್ವಾತ್ತಾರಂ ವಾಸುದೇವಂ ವಿದ್ಧ್ಯನ್ನೇ ಸುರಪೂಜಿತಂ।'

'ಎಲ್ಲವನ್ನೂ ಉಣ್ಣುವ ದೇವಪೂಜ್ಯ ವಾಸುದೇವನನ್ನು ಅನ್ನದಲ್ಲಿ ನಿಯಾಮಕನೆಂದು ಚಿಂತಿಸು' ಎನ್ನುತ್ತದೆ ಗುರುವೃತ್ತಗ್ರಂಥ 'ಮಾಯೇಡನ್ನಗತಃ' 'ಮಾಯಾಪತಿವಾಸುದೇವ ಅನ್ನದಲ್ಲಿ ನಿಯಾಮಕ' ಎನ್ನುತ್ತದೆ ಇನ್ನೊಂದು ವಚನ ಅನ್ನದಲ್ಲಿ ಅನ್ನನಾಮಕನಾಗಿರುತ್ತಾನೆ ವಾಸುದೇವ. ಉಣ್ಣುವ ಪದಾರ್ಥವಾದ್ದರಿಂದ ಅನ್ನ 'ಅನ್ನ'ವೆನಿಸಿದೆ ಉಣ್ಣುವವನಾದ್ದರಿಂದ ವಾಸುದೇವ 'ಅನ್ನ' ಅನ್ನ ಶಬ್ದಕ್ಕೆ ಎರಡೂ ಅರ್ಥ

'ಮಾಯೇಟ್' ಎಂದರೆ ಮಾಯಾದೇವಿಯ ಪತಿ ಮಾಯಾದೇವಿ ಲಕ್ಷ್ಮಿಯ ಒಂದು ರೂಪ ಅವಳೊಂದಿಗೇ ವಾಸುದೇವ ಅನ್ನದಲ್ಲಿರುತ್ತಾನೆ ಇದು ಉಪಲಕ್ಷಣ ಎಲ್ಲ ಕಡೆ ಭಗವಂತ ಲಕ್ಷ್ಮೀದೇವಿಯೊಂದಿಗೇ ಇರುತ್ತಾನೆ ಮಾತ್ರವಲ್ಲ, ಸುರಪೂಜಿತನಾಗಿಯೆ ಇರುತ್ತಾನೆ

ಬ್ರಹ್ಮವಾಯುಶಿವಾಹೀಶವಿಪ್ಯೈಃ ಶಕ್ರಾದಿಕೈರಪಿ।
ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯಂ ನಿಃಶೇಷಶಕ್ತಿಮಾನ್॥

ಬ್ರಹ್ಮ ವಾಯು ರುದ್ರಾದಿ ದೇವತೆಗಳು ಹೀಗೆ ಭಕ್ತಿಯಿಂದ ಸೇವಿಸುತ್ತಾರೆ ಎನ್ನುತ್ತಿದೆ ಮೇಲೆ ಹೇಳಿದ ಗುರುವೃತ್ತವಚನ

'ಅನ್ನ' ಎಂದರೆ ಇಲ್ಲಿ ಭಕ್ಷ್ಯಭೋಜ್ಯ ಮುಂತಾದ ಚತುರ್ವಿಧವಾದ ಷಡ್ರಸಾನ್ನ ವಿವಕ್ಷಿತವಲ್ಲ ಅವೆಲ್ಲಕ್ಕೂ ಬೇರೆ ಬೇರೆಯಾಗಿ ಸಂಕರ್ಷಣಾದಿ ರೂಪಗಳಿವೆ ಅದರಿಂದ ಇಲ್ಲಿ ಅಕ್ಕಿಯ ಅನ್ನ ಅಥವಾ ಗೋದಿ ಜೋಳ ರಾಗಿಗಳ ಅನ್ನ ವಿವಕ್ಷಿತವಾಗಿದೆ

ಭಕ್ಷ್ಯಭೋಜ್ಯ ಮುಂತಾದ ಎಲ್ಲ ಬಗೆಯ ಅನ್ನಗಳಿಗೆ ಒಟ್ಟಾಗಿ ಅಭಿಮಾನಿ ಬ್ರಹ್ಮದೇವರು ಅವರಿಗೆ ತಂದೆ ತಾಯಿಗಳು ವಾಸುದೇವ ಮಾಯಾ ದಂಪತಿಗಳಾದ್ದರಿಂದ ಅವರೇ ಅನ್ನದಲ್ಲಿ ನಿಯಾಮಕರು ಎಂದುದು ಅರ್ಥಪೂರ್ಣವಾಗಿದೆ

'ಶರ್ಕರಾಗುಡಗಃ ಶಕ್ರೋ ವಾಸುದೇವಸ್ತು ತತ್ರಗಃ।'

'ಸಕ್ಕರೆ ಬೆಲ್ಲಗಳಲ್ಲಿ ದೇವೇಂದ್ರ, ಅವನಲ್ಲಿ ವಾಸುದೇವ' ಎಂದು ಪಂಚರಾತ್ರಾಗಮದಲ್ಲಿ ಹೇಳಿದ್ದರೂ ಅದು ಈ ವಾಸುದೇವನಲ್ಲ ಕೇಶವಾದಿ ಚತುರ್ವಿಂಶತಿ ರೂಪಾಂತರ್ಗತನಾದ ವಾಸುದೇವ ಪ್ರಕೃತದಲ್ಲಿ ವಾಸುದೇವಾದಿ ಪಂಚರೂಪಾಂತರ್ಗತ ವಾಸುದೇವ ವಿವಕ್ಷಿತ

## ನಾನಾ ಸುಭಕ್ಷ್ಯಾದಿ ಸಂಕರ್ಷಣ

ಹಿಂದೆ ಹೇಳಿದಂತೆ ಜಯಾಪತಿ ಸಂಕರ್ಷಣ ಜಯಾದೇವಿಯೊಂದಿಗೆ ಹೋಳಿಗೆ ಮಂಡಿಗೆ ಮುಂತಾದ ನಾನಾ ಭಕ್ಷ್ಯಗಳಲ್ಲಿ ನೆಲೆಸಿದ್ದಾನೆ

'ಭಕ್ಷ್ಯಂ ವಾಯುರ್ಜಗತ್ಪತೇಃ।'

ಭಕ್ಷ್ಯಗಳನ್ನು ಸಿದ್ಧಮಾಡಿ ತನ್ನ ತಾಯಿತಂದೆಗಳಾದ ಜಯಾಸಂಕರ್ಷಣರಿಗೆ ಉಣಿಸುವವನು ವಾಯುದೇವ ಅದರಿಂದ ನಾನಾ ಭಕ್ಷ್ಯಗಳಲ್ಲಿ ಸಂಕರ್ಷಣ ನೆಲೆಸಿರುವುದು ಸಹಜ

'ಅನಾಮ್ಲದ್ರವ್ಯಗೋ ರುದ್ರಶ್ಚಿಂತ್ಯಃ ಸಂಕರ್ಷಣಃ ಪರಃ।'

ಎಂದು ಪಂಚರಾತ್ರದಲ್ಲಿ ಹುಳಿಯಿಲ್ಲದ ಭಕ್ಷ್ಯಗಳಲ್ಲಿ ರುದ್ರನೊಂದಿಗೆ ಇರುವವನೆನ್ನಲಾದ ಸಂಕರ್ಷಣ ಚತುರ್ವಿಂಶತಿ ರೂಪಾಂತರ್ಗತ ಎಲ್ಲ ಭಕ್ಷ್ಯಗಳಲ್ಲಿರುವ ಸಂಕರ್ಷಣ ಪಂಚರೂಪಾಂತರ್ಗತ

'ಸುಭಕ್ಷ್ಯ' ಎಂಬಲ್ಲಿ 'ಸು' ಎಂದರೆ ಒಳ್ಳೆಯ ಅನಿಷಿದ್ದವಾದ ಭಕ್ಷ್ಯ ಎಂದು ಹೇಳಿದುದು ಉಪಲಕ್ಷಣ ಒಳ್ಳೆಯ ಅನಿಷಿದ್ಧವಾದ ಅನ್ನ ತೊವ್ವೆ ಪಲ್ಯ ಮುಂತಾದವುಗಳಲ್ಲಿಯೆ ಆಯಾ ಭಗವದ್ರೂಪಗಳನ್ನು ಚಿಂತಿಸಬೇಕು ಹೊರತು ನಿಷಿದ್ದ ಪದಾರ್ಥಗಳಲ್ಲಿ ಅಲ್ಲ ನಿಷಿದ್ದ ಪದಾರ್ಥಗಳಲ್ಲಿಯೂ ಅವೇ ರೂಪಗಳಿದ್ದರೂ ಅವುಗಳ ಚಿಂತನೆಯಲ್ಲಿ ಅಜ್ಞಾನಿಗಳಿಗ ಅಧಿಕಾರವಿಲ್ಲ

**ಕೃತೀಶ ಪರಮಾನ್ನದೊಳು**

ಕೃತಿದೇವಿಯ ಪತಿಯಾದ ಪ್ರದ್ಯುಮ್ನ ಕೃತಿದೇವಿಯೊಂದಿಗೇ ಪರಮಾನ್ನದಲ್ಲಿ ನಿಯಾಮಕನಾಗಿದ್ದಾನೆ

'ಪರಮಾನ್ನಂ ಭಾರತೀ ಚ ಕುರ್ಯಾತ್।'

ಎಂಬಂತೆ ಪರಮಾನ್ನವನ್ನು ತನ್ನ ಪತ್ಯಂತರ್ಗತರಾದ, ತನ್ನ ತಾಯಿತಂದೆಗಳೇ ಆದ ಕೃತಿ ಪ್ರದ್ಯುಮ್ನರಿಗಾಗಿ ಸಿದ್ದಪಡಿಸುವವಳು ಭಾರತೀದೇವಿ ಅವಳೆ ಪರಮಾನ್ನಕ್ಕೆ ಅಭಿಮಾನಿನಿಯೂ ಹೌದು 'ಭಾರತೀ ಪರಮಾನ್ನಸ್ಥಾ' ಎನ್ನುತ್ತದೆ ಪಂಚರಾತ್ರ

'ಪರಮಥ ಪರಮಾನ್ನಂ ಪ್ರಾಪ್ತಮೇಪಾಪ್ರಯಾನಂ
ಪ್ರಭುರಿಹ ಬುಭುಜೇऽಸೌ ವೇದವಾದಪ್ರವೀಣಃ।
ಅಜಿತಪರಮಭಕ್ತಃ ಸಂತತಂ ಮನ್ಯಮಾನಃ
ಸಕಲಜಗದಧೀಶಃ ಪ್ರೀಯತಾಂ ಶೌರಿರಿತ್ಥಂ।'

'ಶ್ರೀಮದಾಚಾರ್ಯರು ತಮ್ಮೊಳಗಿರುವ ಜಗದೊಡೆಯನಾದ ಪ್ರದ್ಯುಮ್ನ ಪ್ರೀತನಾಗ ಲೆಂದು ಪರಮಾನ್ನವನ್ನು ಭುಂಜಿಸುತ್ತಾರೆ' ಎಂದು ಸುಮಧ್ವವಿಜಯದಲ್ಲಿ ಹೇಳಿದೆ ಅದರಿಂದ ಪರಮಾನ್ನದಲ್ಲಿ ಕೃತಿಪ್ರದ್ಯುಮ್ನರಿರುವುದು ಸಹಜ

'ಭಾರತೀ ಪರಮಾನ್ನಸ್ಥಾ ದೇವೋ ನಾರಾಯಣಃ ಪ್ರಭುಃ।'

ಎಂದು ಪಂಚರಾತ್ರದಲ್ಲಿ ಪರಮಾನ್ನದಲ್ಲಿ ನಾರಾಯಣನಿದ್ದಾನೆ ಎಂದುದು ಚತುರ್ವಿಂಶತಿ ರೂಪಾಂತರ್ಗತ ನಾರಾಯಣನ ಬಗ್ಗೆ ಪ್ರಕೃತದಲ್ಲಿ ಪಂಚರೂಪಾಂತರ್ಗತ ರೂಪವಿವಕ್ಷೆಯಿಂದ ಪ್ರದ್ಯುಮ್ನನಿದ್ದಾನೆ ಎನ್ನಲಾಗಿದೆ

**ಘೃತದೊಳಗಿಪ್ಪನನಿರುದ್ಧ**

ತುಪ್ಪದಲ್ಲಿ ನಿಯಾಮಕನಾಗಿ ಅನಿರುದ್ಧನಿದ್ದಾನೆ

'ಅನಿರುದ್ಧೋ ಘೃತಗತಃ' 'ಘೃತಗಃ ಸ್ತ್ರೀಯವಶ್ಯಃ'

ಎಂಬ ವಚನಗಳು ತುಪ್ಪದಲ್ಲಿ ಅನಿರುದ್ಧನಿರುವನೆಂದಿವೆ 'ಸ್ತ್ರೀಯವಶ್ಯಃ' ಎಂಬುದು

ಅನಿರುದ್ಧಶಬ್ದದಿಂದ ಹೊರಡುವ ಒಂದು ಅರ್ಥ- 'ತಮ್ಮವರಿಗೆ ವಶನಾಗುವವನು' ಅನಿರುದ್ಧನಿಗೆ ಯಾರು ತಮ್ಮವರು? 'ಅನಿ-ರುದ್ಧ' ಎಂಬಲ್ಲಿ 'ಅನಿ' ಗಳೆಂದರೆ 'ಅನ' ಎನಿಸಿರುವ ಮುಖ್ಯಪ್ರಾಣನ ಉಪಾಸಕರು ಅವರಿಂದ 'ರುದ್ಧ'ನಾಗುತ್ತಾನೆ, ಅವರ ಭಕ್ತಿಪಾಶಗಳಿಂದ ಬದ್ಧನಾಗುತ್ತಾನೆ ಇತರರಿಗೆ 'ಅ-ನಿರುದ್ಧ' ವಶನಾಗುವುದಿಲ್ಲ ಯಾರೂ ಅವನನ್ನು ತಡೆಯಲಾರರು

ಕುರ್ಯಾನ್ಮಹಾಲಕ್ಷ್ಮೀರ್ಘೃತಂ ನಾರಾಯಣಸ್ಯ ವೈ।

ಎಂಬಂತೆ ತುಪ್ಪವನ್ನು ಸಿದ್ಧ ಮಾಡುವವಳು 'ಘೃತಪ್ರತೀಕ'ಳೆನಿಸಿದ ತುಪ್ಪದ ಅಭಿಮಾನಿನಿಯಾದ ಸಾಕ್ಷಾತ್ ರಮಾದೇವಿ ಅದರಿಂದ ಘೃತದಿಂದ ಅನ್ನಶುದ್ಧಿ ಮಾಡಲೇಬೇಕು ಅಂಥ ಘೃತದಲ್ಲಿ ರಮಾದೇವಿಯ ಒಂದು ರೂಪವಾದ ಶಾಂತಿದೇವಿಯೊಂದಿಗೆ ಅನಿರುದ್ಧನಾಮಕ ಭಗವಂತ ನಿರುತ್ತಾನೆ

**ಆ ಸುಪರ್ಣಾಂಸಗನು ಸೂಪದಿ**

ತೊವ್ವೆಯಲ್ಲಿ ಸುಪರ್ಣಾಂಸ ಅಂದರೆ ಗರುಡನ ಅಂಸ- ಗ, ಹೆಗಲೇರಿದವನು ಗರುಡವಾಹನ ನಿದ್ದಾನೆ ಇದನ್ನು 'ಸುಸೂಪೇ ತಾರ್ಕ್ಷ್ಯವಾಹನಃ' ಎಂದಿದೆ ಗುರುವೃತ್ತ

'ಆ' ಗರುಡವಾಹನ ಎಂದರೆ ಯಾರು? 'ಗರುಡವಾಹನ' ಎಂದು ಒಂದು ಬೇರೆ ರೂಪ ಕಾಣುವುದಿಲ್ಲ ಅಜಿತಾದಿ ಅನಂತರೂಪಗಳಲ್ಲಿ ಒಂದಾಗಿರಬಹುದೇ? ವಿಷ್ಣುಸಹಸ್ರನಾಮ ಗಳಲ್ಲಿಯೂ 'ವಾಯುವಾಹನ' ಎಂಬ ರೂಪವಿದೆ 'ಯಜ್ಞವಾಹನ' ರೂಪವಿದೆ 'ಸಪ್ತವಾಹನ' ರೂಪವಿದೆ. 'ಗರುಡಧ್ವಜ' ರೂಪವೂ ಇದೆ 'ಗರುಡವಾಹನ' ವಿಲ್ಲ 'ಆ ಗರುಡವಾಹನ' ಎಂದರೆ ಪ್ರಸಿದ್ಧವಾದ ಗರುಡವಾಹನರೂಪ ಅದು ಎಲ್ಲಿ?

'ಸೂಪಾಭಿಮಾನೀ ಗರುಡಃ ಶ್ರೀಧರಸ್ತತ್ರ ದೇವತಾ।'

ಎಂದು ಪಂಚರಾತ್ರಾಗಮ ಹೇಳುವಂತೆ ತೊವ್ವೆಯಲ್ಲಿ ಅಭಿಮಾನಿಯಾಗಿ ಗರುಡನಿದ್ದಾನೆ ಅವನಲ್ಲಿ ನಿಯಾಮಕನಾಗಿ 'ಶ್ರೀಧರ' ಇದ್ದಾನೆ 'ಶ್ರೀಧರ' ಚತುರ್ವಿಂಶತಿ ರೂಪಾಂತರ್ಗತ ಇಲ್ಲಿ ವಿವಕ್ಷಿತ ಏಕೆಂದರೆ ಹಿಂದ ಮುಂದೆ ಎಲ್ಲ ಕಡೆ ಭೋಜನ ಪದಾರ್ಥಗಳಲ್ಲಿ ಕ್ರಮವಾಗಿ ಚತುರ್ವಿಂಶತಿರೂಪಗಳನ್ನೆ ಹೇಳಿದೆ ಈ ಪ್ರಸಿದ್ಧನಾದ ಶ್ರೀಧರನೆ ಗರುಡವಾಹನನೆಂದು ಇಲ್ಲಿ ವಿವಕ್ಷಿತನೆನ್ನಬಹುದು ಗರುಡವಾಹನ 'ಶ್ರೀಕೃಷ್ಣ' ಎನ್ನುವುದುಂಟು ಆದರೆ ಶ್ರೀಕೃಷ್ಣ ಚತುರ್ವಿಂಶತಿ ರೂಪಾಂತರ್ಗತರೂಪ ಸ್ವಾದೂದಕದಲ್ಲಿ ನಿಯಾಮಕ-

'ಬುಧಃ ಸ್ವಾದೂದಕಪತಿಃ ಶ್ರೀಕೃಷ್ಣಸ್ತತ್ರ ದೇವತಾ।'

**ವಾಸವಾನುಜ ಶಾಕದೊಳು·**

'ಶಾಕೇಷ್ವಿಂದ್ರಾನುಜಂ ವಿದ್ಧಿ' ಎಂದು ಗುರುವೃತ್ತ ಹೇಳಿದೆ 'ವಾಮನಃ ಶಾಕಗಃ' ಎಂದು

ಇನ್ನೊಂದು ವಚನವಿದೆ ಇಲ್ಲಿ ವಿಚಾರಿಸಬೇಕಾದ ಅಂಶವಿದೆ ಶಾಕದಲ್ಲಿ ಹೇಳಿದ 'ಇಂದ್ರಾನುಜ' ವಾಮನನಲ್ಲ ಉಪೇಂದ್ರ

'ಪಲತದ್ರಸಗಃ ಪ್ರಾಣ ಉಪೇಂದ್ರಸ್ತತ್ರ ದೇವತಾ।'

'ಫಲಶಾಕದ ಅಭಿಮಾನಿ ಪ್ರಾಣ ಅವನಲ್ಲಿ ಉಪೇಂದ್ರ ನಿಯಾಮಕ' ಎಂದು ಪಂಚರಾತ್ರ ಹೇಳಿದೆ ವಾಮನ ಉಪೇಂದ್ರರು ಬೇರೆ ಬೇರೆ ರೂಪಗಳು ವಾಮನ ಕೇಶವಾದಿ ದ್ವಾದಶಮೂರ್ತ್ಯಂತರ್ಗತ ಉಪೇಂದ್ರ ಸಂಕರ್ಷಣಾದಿ ದ್ವಾದಶಮೂರ್ತ್ಯಂತರ್ಗತ ಉಪೇಂದ್ರನನ್ನು ಫಲಶಾಕದಲ್ಲಿ ನಿಯಾಮಕನೆಂದು ಹೇಳಿದ ಪಂಚರಾತ್ರವೆ ವಾಮನನನ್ನು ದಧಿನಿಯಾಮಕನೆಂದು ಹೇಳಿದೆ-

'ದಧಿಸ್ಥೌ ಸೋಮವರುಣೌ ವಾಮನಸ್ತತ್ರ ದೇವತಾ।'

ಈ ಸಮಸ್ಯೆಗೆ ಹೀಗೆ ಸಮಾಧಾನ ಹೇಳಬಹುದು-

'ಫಲಶಾಕ ಪತ್ರಶಾಕಗಳೆರಡರಲ್ಲಿಯೂ ಸಾಮಾನ್ಯವಾಗಿ ಒಬ್ಬ ದಶಾವತಾರ ಮೂರ್ತ್ಯಂತರ್ಗತ ಇಂದ್ರಾನುಜವಾಮನ ನಿಯಾಮಕನೆಂದು ಗುರುವೃತ್ತಾದಿವಚನಗಳ ಅಭಿಪ್ರಾಯ ಪಂಚರಾತ್ರಾಗಮ ಪ್ರಕಾರ ಕೇವಲ ಫಲಶಾಕಕ್ಕೆ ಮತ್ತು ದಧಿಗೆ ನಿಯಾಮಕರಾಗಿ ಚತುರ್ವಿಂಶತಿ ಮೂರ್ತ್ಯಂತರ್ಗತರಾದ ಉಪೇಂದ್ರ ವಾಮನರು ನಿಯಾಮಕರು

**ಮೂಲೇಶ ನಾರಾಯಣನು ಸರ್ವತ್ರದಲಿ**

ಮೇಲುನೋಟಕ್ಕೆ ಇದೂ ಅಸಂಗತ ಮೂಲೇಶ ಜೀವರ ಹೃದಯಗಳಲ್ಲಿ ಸದಾ ಬಿಂಬಮೂರ್ತಿಯಾಗಿ ನೆಲೆಸಿರುವ ಭಗವದ್ರೂಪ ಆದರೂ, 'ವಾಮನಃ ಶಾಕಗಃ ಸರ್ವಗತೋ ನಾರಾಯಣೋಽರಿಹಾ।' ಎಂದು ಸರ್ವತ್ರ ನೆಲೆಸಿದವನೆನ್ನಲಾದ ನಾರಾಯಣನನ್ನೇ ಗುರುವೃತ್ತದಲ್ಲಿ, 'ಮೂಲೇಶಂ ಚಿಂತಯೇತ್ ಸದಾ।' ಎಂದು ಮೂಲೇಶನಾಮದಿಂದ ಕರೆದಿದೆ ಇದಕ್ಕೆ ಹಿಂದೆ ಹೇಳಿದಂತೆ ಸರ್ವತ್ರ ಭೋಜ್ಯ ಪದಾರ್ಥಗಳಲ್ಲಿ ನೆಲೆಸಿರುವ ಪಂಚರೂಪಾಂತರ್ಗತನಾದ ನಾರಾಯಣನಿಗೆ ಹೃದಯ ಕಮಲವಾಸಿ ಬಿಂಬಮೂರ್ತಿ ಮೂಲೇಶನೊಂದಿಗೆ ಅಭೇದ ಚಿಂತನೆ ಮಾಡಬೇಕೆಂದು ತಿಳಿಸುವ ಅಭಿಪ್ರಾಯವನ್ನು ಗ್ರಹಿಸಬೇಕು

**ಅಗಣಿತಾತ್ಮ ಸುಭೋಜನ ಪದಾ**
**ರ್ಥಗಳ ಒಳಗೆ ಅಖಂಡ ಒಂದೊಂ**
**ದಗಳಿನೊಳನಂತಾಂಶದಿಂದಲಿ ಖಂಡನೆಂದೆನಿಸಿ।**

**ಜಗದಿ ಜೀವರ ತೃಪ್ತಿಪಡಿಸುವ**
**ಸ್ವಗತಭೇದವಿವರ್ಜಿತನ ಈ**
**ಪರ್ಗೆಯ ರೂಪವನರಿತು ಭುಂಜಿಸಿ ಅರ್ಪಿಸವನಡಿಗೆ || ೧೧ ||**

ಅಗಣಿತಸ್ವರೂಪನಾದ ಶ್ರೀಹರಿ ಉತ್ತಮ ಭೋಜನಪದಾರ್ಥಗಳ ಒಳಗೆ ಅಖಂಡನೆಂದೆನಿಸಿ, ಒಂದೊಂದು ಅಗಳಿನಲ್ಲಿ ಅನಂತಾಂಶದಿಂದ ಖಂಡನೆಂದೆನಿಸಿ ಜಗತ್ತಿನಲ್ಲಿ ತೃಪ್ತಿಪಡಿಸುವನು ಸ್ವಗತಭೇದರಹಿತನಾದ ಅವನ ಎರಡು ಬಗೆಯ ರೂಪವನ್ನರಿತು ಉಂಡು ಅವನ ಪಾದಕ್ಕೆ ಅರ್ಪಿಸು

**ಅಗಣಿತಾತ್ಮ ಸುಭೋಜನ ಪದಾರ್ಥಗಳ ಒಳಗೆ**

ಸು- ಭೋಜನ ಪದಾರ್ಥಗಳೆಂದರೆ ಒಳ್ಳೆಯ ರುಚಿಕರವಾದ ಮತ್ತು ಅನಿಷಿದ್ಧವಾದ ಭೋಜ್ಯವಸ್ತುಗಳು ರುಚಿ ಹೆಚ್ಚಿದಂತೆಲ್ಲ ಹರಿಯ ಸನ್ನಿಧಾನ ಅಧಿಕವಿರುತ್ತದೆ

ಯದ್ಯದ್ ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವ ವಾ।
ತತ್ತದೇವಾವಗಚ್ಛತ್ವಂ ಮಮ ತೇಜೋಽಂಶಸಂಭವಂ॥ *(ಗೀತಾ 10 41)*

'ಯಾವ ಯಾವ ವಸ್ತು ಇತರ ವಸ್ತುಗಳಿಗಿಂತ ಶ್ರೇಷ್ಠವಾಗಿದೆಯೋ ಹೆಚ್ಚು ರುಚಿಕರವಾಗಿದೆಯೋ ಸಂಪದ್ಭರಿತವಾಗಿದೆಯೋ ಅವೆಲ್ಲವೂ ನನ್ನ ವಿಶೇಷ ಸನ್ನಿಧಾನ ಉಳ್ಳದ್ದೆಂದು ತಿಳಿ' ಎನ್ನುತ್ತಾನೆ ಶ್ರೀಕೃಷ್ಣ ರುಚಿಕರವಾಗಿದ್ದರೂ ನಿಷಿದ್ಧವಾಗಿದ್ದರೆ, ಉದಾ ಏಕಾದಶ್ಯಾದಿ ದಿನಗಳಲ್ಲಿ ನಿಷಿದ್ಧ, ಸನ್ನಿಧಾನ ಕಡಿಮೆ ಅದರಿಂದ ರುಚಿಕರವೂ ಅನಿಷಿದ್ಧವೂ ಆದ ಪದಾರ್ಥಗಳನ್ನು ಹರಿಗೆ ಸಮರ್ಪಿಸಿ ಉಣಬೇಕು

ಭೋಜ್ಯ ಪದಾರ್ಥಗಳ ರುಚಿ ಒಂದರಂತೆ ಇನ್ನೊಂದಿಲ್ಲ ಎಲ್ಲವೂ ಬೇರೆ ಬೇರೆ ಒಬ್ಬನೆ ವ್ಯಕ್ತಿ ಸಿದ್ಧಪಡಿಸುವ ಎರಡು ಅಡಿಗೆಗಳಲ್ಲಿ ಎಷ್ಟೇ ಪ್ರಯತ್ನಿಸಿದರೂ ಒಂದೇ ರುಚಿ ಬರಲಾರದು ರುಚಿಗಳು ಅನಂತ, ಲೆಕ್ಕವಿಲ್ಲದಷ್ಟು ಬಗೆಯವುಗಳು. ಅವುಗಳೊಳಗಿರುವ ಭಗವದ್ರೂಪಗಳೂ ಹಾಗೇ ಅನಂತ, ಅಗಣಿತಾತ್ಮ

**ಅಖಂಡ ಖಂಡನೆಂದೆನಿಸಿ.**

ಸುಭೋಜನ ಪದಾರ್ಥಗಳೊಳಗೆ ಅಖಂಡ, ಒಂದೊಂದು ಅಗಳಿನೊಳಗೂ ಅಖಂಡ ಮತ್ತು ಸುಭೋಜನ ಪದಾರ್ಥಗಳೊಳಗೆ ಅನಂತಾಂಶದಿಂದ ಖಂಡ, ಒಂದೊಂದು ಅಗಳಿನೊಳಗೂ ಅನಂತಾಂಶದಿಂದ ಖಂಡ- ಹೀಗೆ ಅನ್ವಯಿಸಿ ಕೊಳ್ಳಬೇಕು

ಅನ್ನದ ರಾಶಿಯನ್ನು ಇಡಿಯಾಗಿ ನೋಡಿದರೆ ಅಖಂಡ ಅದರ ಅನಂತಾಂಶಗಳನ್ನು ಬಿಡಿಯಾಗಿ ಕಂಡರೆ ಖಂಡ ಒಂದೊಂದು ಅಗಳನ್ನೂ ಇಡಿಯಾಗಿ ಕಂಡರೆ ಅಖಂಡ, ಅದರ ಅನಂತಾಂಶಗಳನ್ನೂ ಬಿಡಿಯಾಗಿ ಕಂಡರೆ ಖಂಡ ಅವುಗಳೊಳಗಿರುವ ಭಗವದ್ರೂಪಗಳೂ

ಹೀಗೆ ಖಂಡವೂ ಹೌದು ಅಖಂಡವೂ ಹೌದು ನವನಾರೀ ಕುಂಜರವನ್ನೋ ಪಂಚನಾರೀ ತುರಗವನ್ನೋ ಕಂಡರೆ ಇದು ಸ್ಪಷ್ಟವಾಗುವುದು. ಚಿತ್ರವನ್ನು ಇಡಿಯಾಗಿ ಕಂಡರೆ ಅದೊಂದು ಆನೆ, ಅಥವಾ ಕುದುರೆ ಅದರ ಅವಯವ ಗಳನ್ನು ಬಿಡಿಯಾಗಿ ಕಂಡರೆ ಪ್ರತಿಯೊಬ್ಬಳೂ ಒರ್ವ ನಾರಿ ಒಂದು ಮನೆಯನ್ನು ಇಡಿಯಾಗಿ ಕಂಡರೆ ಒಂದು ಮನೆ ಅದರ ಭಾಗಗಳನ್ನು ಬಿಡಿಯಾಗಿ ಕಂಡರೆ ಇಟ್ಟಿಗೆಗಳು ಇಟ್ಟಿಗೆಗಳ ಅಂಶಗಳನ್ನು ಬಿಡಿಯಾಗಿ ಕಂಡರೆ ಮಣ್ಣು ಪ್ರಕೃತದಲ್ಲಿ ಭಗವದ್ರೂಪಗಳು ಇಡಿಯಾಗಿ ಕಂಡರೂ ಅಖಂಡವಾಗಿ ಸರ್ವಾಂಗ ಪರಿಪೂರ್ಣ ವಾದ ರೂಪಗಳು, ಅವುಗಳ ಅವಯವಗಳನ್ನು ಬಿಡಿಯಾಗಿ ಕಂಡರೂ ಪ್ರತಿಯೊಂದೂ ಸ್ವತಃ ಸರ್ವಾಂಗ ಪರಿಪೂರ್ಣವಾದ ಅಖಂಡರೂಪಗಳೆ, ಅವಯವಗಳೆಂದು ಖಂಡರೂಪ ಗಳೆನಿಸುವವು, ಅವಯವಿ ಎಂದು ಅಖಂಡರೂಪಗಳೆನಿಸುವುವು ಅನ್ನದ ರಾಶಿಯನ್ನು ಇಡಿಯಾಗಿ ಕಂಡರೆ ಅಖಂಡ ಅದರೊಳಗೆ ಅದೇ ಆಕಾರದಲ್ಲಿರುವ ಭಗವದ್ರೂಪವೂ ಅಖಂಡ ಅದರ ಅಗಳು ಖಂಡ, ಅದರೊಳಗಿರುವ ಭಗವದ್ರೂಪವೂ ಖಂಡ ಈ ಅಗಳು ತಿರುಗಿ ಅನಂತ ಅಂಶಗಳಿಂದ ಕೂಡಿದ್ದು ಅಖಂಡವೂ ಆಗಿದೆ ಅದರ ಅಂಶಗಳು ಖಂಡ ವಾಗಿವೆ ಈ ಖಂಡಾಖಂಡ ಅಂಶಗಳಿಗೆ ಕೊನೆಯಿಲ್ಲ ಅವುಗಳೊಳಗಿರುವ ಖಂಡಾಖಂಡ ಭಗವದ್ರೂಪಗಳಿಗೂ ಕೊನೆಯಿಲ್ಲ ಹೀಗೆ ಅಖಂಡನಾದ ಶ್ರೀಹರಿ ಅನಂತಾಂಶದಲ್ಲಿ ಖಂಡನೆನಿಸುತ್ತಾನೆ

**ಜಗದಿ ಜೀವರ ತೃಪ್ತಿ ಪಡಿಸುವ**

ಉಣ್ಣದ ಜೀವನಿಲ್ಲ, ಜಗತ್ತಿನಲ್ಲಿ ಅದರಿಂದ ಉಣ್ಣುವ ಜೀವನಿಗೆ ಅಗಳಿನ ಚಿಕ್ಕ ಅಂಶಗಳಿಂದಲೂ ತೃಪ್ತಿ ಇದೆ ಅಗಳಿನಿಂದಲೂ ತೃಪ್ತಿ, ಅನೇಕ ಅಗಳುಗಳಿಂದ ಕೂಡಿದ ತುತ್ತಿನಿಂದಲೂ ತೃಪ್ತಿ ಅನ್ನದ ರಾಶಿಯಿಂದಲೂ ತೃಪ್ತಿ ಇದಕ್ಕೆ ಕಾರಣ ಅನ್ನದ ಅಗಳಿನಲ್ಲಿ, ತುತ್ತಿನಲ್ಲಿ, ರಾಶಿ ಅನ್ನದಲ್ಲಿರುವ ಹರಿಯ ಸನ್ನಿಧಾನ ತನ್ನ ಅನಂತರೂಪಗಳ ಸನ್ನಿಧಾನ ಯುಕ್ತವಾದ ಅನ್ನವನ್ನು ಬಿಂಬರೂಪನಾಗಿ ತಾನೆ ಲೀಲೆಯಿಂದ ಉಂಡು ನಲಿದು ಪ್ರತಿಬಿಂಬ ರಾದ ಜೀವರನ್ನೂ ಅದೇ ಸಮಯದಲ್ಲಿ ತೃಪ್ತಿ ಪಡಿಸುತ್ತಾನೆ

**ಸ್ವಗತ ಭೇದವಿವರ್ಜಿತ:**

ಅಗಳಿನ ಸೂಕ್ಷ್ಮ ಅಂಶಗಳಿಂದ ಏನೂ ರುಚಿ ತಿಳಿಯದಿರಬಹುದು ಅಗಳಿನಿಂದಲೂ ಸರಿಯಾಗಿ ರುಚಿ ತಿಳಿಯದಿರಬಹುದು ತುತ್ತು ರುಚಿಸುತ್ತದೆ ಅನ್ನದ ರಾಶಿ ಪೂರ್ಣ ತೃಪ್ತಿ ನೀಡುತ್ತದೆ ಈ ವ್ಯತ್ಯಾಸಕ್ಕೆ ಅವುಗಳೊಳಗಿರುವ ಭಗವದ್ರೂಪಗಳೆ ಕಾರಣ ಹೀಗೆಂದ ಮಾತ್ರಕ್ಕೆ ಭಗವದ್ರೂಪಗಳಲ್ಲಿ ವ್ಯತ್ಯಾಸವಿದೆಯೆ? ಇಲ್ಲ ಅವನ ರೂಪಗಳಲ್ಲಿ ಸರ್ವಥಾ ಭೇದವಿಲ್ಲ ವ್ಯತ್ಯಾಸವಿಲ್ಲ ಸ್ವಗತಭೇದವಿವರ್ಜಿತ, ಆತ ಭೋಜ್ಯ ಪದಾರ್ಥಗಳಲ್ಲಿ ಮಾತ್ರ ಭೇದವಿದೆ, ವ್ಯತ್ಯಾಸವಿದೆ ಆ ಭೇದ- ವ್ಯತ್ಯಾಸಗಳು ವ್ಯಕ್ತವಾಗುವುದು ಭಗವದ್ರೂಪಗಳ ಸನ್ನಿಧಾನದಿಂದ ಭಗವದ್ರೂಪಗಳು ಮಾತ್ರ ಭೇದ ವ್ಯತ್ಯಾಸಗಳಿಲ್ಲದವು ಇದು ಭಗವಂತನ ವಿಶೇಷ ಶಕ್ತಿಯ ಮಹಿಮೆ.

**ಈರ್ವಗೆಯ ರೂಪವನರಿತು:**

ಹರಿಯ ರೂಪಗಳು ಹೀಗೆ ಖಂಡ ಅಖಂಡಗಳೆಂದು ಈರ್ವಗೆ, ಎರಡು ಬಗೆಯವುಗಳು ಅಂದರೆ ಕೆಲವು ಖಂಡ, ಇನ್ನೂ ಕೆಲವು ಅಖಂಡವೆಂದಲ್ಲ ಒಬ್ಬನೆ ವ್ಯಕ್ತಿ ತನ್ನ ತಂದೆಗೆ ಮಗ, ಮಗನಿಗೆ ತಂದೆ ಹಾಗೆಯೆ ಭಗವದ್ರೂಪ ಇಡಿಯಾಗಿ ಅಖಂಡ, ಬಿಡಿಯಾಗಿ ಖಂಡ ಇಡಿ ಬಿಡಿಗಳು ಬೇರೆ ಅಲ್ಲ ಹೀಗೆ ಪ್ರತಿಯೊಂದು ರೂಪವೂ ಈರ್ವಗೆಯದು

'ಈ ಬಗೆ- ಈ ಪ್ರಕಾರ' ಎಂದು ವ್ಯಾಸದಾಸಸಿದ್ಧಾಂತ ಕೌಮುದೀಕಾರರ ಪಾಠ ಈ ರೀತಿ ಖಂಡವೂ ಅಖಂಡವೂ ಆದ ರೂಪ ಎಂದರ್ಥ ಹೀಗೆ ಈ ಬಗೆಯ ಅಥವಾ ಈರ್ವಗೆಯ ರೂಪವನ್ನು 'ಅನ್ನ ನಿಯಾಮಕ, ಉಣುವವನಿಗ ತೃಪ್ತಿದಾಯಕ' ಎಂದರಿತು ಭುಂಜಿಸಬೇಕು ಆಗ ಆ ಭಕ್ತಿರಸಾಮೃತ ಭೋಜನದಿಂದ ಶರೀರದ ಹಸಿವಿನೊಂದಿಗೆ ಆತ್ಮದ ಹಸಿವೂ ಹಿಂಗುತ್ತದೆ, ತೃಪ್ತಿ ಉಂಟಾಗುತ್ತದೆ

**ಭುಂಜಿಸಿ ಅರ್ಪಿಸು**

ನೈವೇದ್ಯವನ್ನು ಭಗವಂತನಿಗೆ ಅರ್ಪಿಸಿ ಭುಂಜಿಸಬೇಕು ಆದರೆ ಇದೀಗ ಭುಂಜಿಸಿ ಅರ್ಪಿಸಬೇಕು ಎನ್ನುತ್ತಾರೆ ತಪ್ಪಲ್ಲ ಶಬರಿಯಂತೆ ಭುಂಜಿಸಿ ಅರ್ಪಿಸುವ ಜ್ಞಾನಿಗಳೂ ಇಲ್ಲದಿಲ್ಲ ವಸ್ತುತಃ 'ಅರಿತು ಭುಂಜಿಸಿ, ಅರ್ಪಿಸು' ಅರಿತು ಭುಂಜಿಸುವುದು ಜ್ಞಾನಪೂರ್ವಕ ಕರ್ಮ ಒಂದು ಬಗೆಯ ಯಜ್ಞ, ವೈಶ್ವಾನರ ಯಜ್ಞ, ಪ್ರಾಣಾಗ್ನಿಹೋತ್ರ, ಅದೊಂದು ಪುಣ್ಯಕರ್ಮವೆಂದ ಮೇಲೆ ಅದನ್ನು ಅರ್ಪಿಸಲೇಬೇಕು ಕರ್ಮವನ್ನು ಅರ್ಪಿಸುವುದೆಂದರೆ, ನಾನು ನನ್ನ ಸುಖಕ್ಕಾಗಿ ಕರ್ಮ ಮಾಡಿಲ್ಲ, ಭಗವತ್ಪ್ರೇರಣಯಾ ಭಗವತ್ಪ್ರೀತ್ಯರ್ಥಂ, ಭಗವಂತನ ಆರಾಧನರೂಪವಾಗಿ ಮಾಡುತ್ತಿದ್ದೇನೆ, ಅದರಿಂದ ಆತ ಸುಪ್ರೀತನಾಗಲಿ ಎಂದು ಚಿಂತಿಸುವುದೆ ಅರ್ಪಣ ಅದರಿಂದ ಭುಂಜಿಸಿ, ಆ ಭೋಜನ ಕ್ರಿಯೆಯನ್ನು ಅರ್ಪಿಸಬೇಕೆಂದು ಅಭಿಪ್ರಾಯ

ಅಥವಾ ಬಾಯ್ತೆರೆದು ಮಲಗುವವರಿದ್ದಾರೆ ಅಂದರೆ ಬಾಯಿ ತೆರೆದ ಮೇಲೆ ಮಲಗುತ್ತಾರೆ ಎಂದಲ್ಲ ಬಾಯ್ತೆರೆದುಕೊಂಡೇ ಮಲಗುತ್ತಾರೆ ಹಾಗೆ ಭುಂಜಿಸಿ ಅರ್ಪಿಸುವುದೆಂದರೆ ಭುಂಜಿಸುತ್ತಲೆ ತುತ್ತು ತುತ್ತಿಗೆ 'ಗೋವಿಂದ! ಗೋವಿಂದ!' ಎನ್ನುತ್ತ ತುತ್ತನ್ನು ಅವನಿಗೆ ಅರ್ಪಿಸಬೇಕು

**ಅವನಡಿಗೆ ಅರ್ಪಿಸು:**

ಭೋಜನ ಕ್ರಿಯೆಯನ್ನು, ತನ್ನೆಲ್ಲ ಕ್ರಿಯೆಯನ್ನೂ, ಏಕೆ, ತನ್ನನ್ನೂ ಕೂಡ ಅವನ ಪಾದಕ್ಕೆ ಅರ್ಪಿಸಬೇಕು

ತುತ್ತನ್ನು ಅರ್ಪಿಸುವುದಾದರೆ, 'ಅವನಡಿಗೆ' ಎಂದರೆ, ಅವನ ಸ್ವರೂಪಕ್ಕೆ ಅರ್ಪಿಸುವುದೆಂದರ್ಥ 'ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ' ಉತ್ತಮರ

ಸ್ವರೂಪವನ್ನು ಪಿತೃಪಾದರು, ಗುರುಪಾದರು, ಶ್ರೀಪಾದರು ಎಂದು ಮುಂತಾಗಿ ಪಾದಶಬ್ದ ದಿಂದ ಹೇಳುವುದುಂಟು ಕೇವಲ ಕಾಲನ್ನಲ್ಲ ಆದರಿಂದ ಅವನಡಿಗೆ ಎಂದರೆ ಅವನಿಗೆ ಅರ್ಪಿಸಬೇಕು ಆಗ ಭೋಜನ ಒಂದು ಯಜ್ಞವಾಗುವುದು ಇಲ್ಲದಿದ್ದರೆ ಬರಿ ಕವಳಧ್ವಂಸ ವಾಗುವುದು

**ಈ ಪರಿಯಲರಿತುಂಬ ನರ ನಿ**
**ತ್ಯೋಪವಾಸಿ ನಿರಾಮಯನು ನಿ**
**ಷ್ಪಾಪಿ ನಿತ್ಯಮಹಾಸುಯಜ್ಞಗಳಾಚರಿಸಿದವನು ।**
**ಪೋಪುದಿಪ್ಪುದ ಬಪ್ಪುದೆಲ್ಲ ರ**
**ಮಾಪತಿಗಧಿಷ್ಠಾನವೆನ್ನು ಕೃ**
**ಪಾಪಯೋನಿಧಿ ಮಾತನಾಲಿಸುವನು ಜನನಿಯಂತೆ ॥ ೧೨ ॥**

ಈ ರೀತಿಯಲ್ಲಿ ಜ್ಞಾನಪೂರ್ವಕ ಭೋಜನಯಜ್ಞವನ್ನು ಆಚರಿಸುವ ಮಾನವನು ನಿತ್ಯೋಪವಾಸಫಲವನ್ನು ಹೊಂದುತ್ತಾನೆ ರೋಗಮುಕ್ತನಾಗುತ್ತಾನೆ ಪಾಪರಹಿತ ನಾಗುತ್ತಾನೆ ನಿತ್ಯ ಮಹಾ ಸುಯಜ್ಞಗಳನ್ನಾಚರಿಸಿದ ಪುಣ್ಯಕ್ಕೆ ಭಾಗಿಯಾಗುತ್ತಾನೆ ಹೋಗುವ ಇರುವ ಮುಂದೆ ಬರುವ ಎಲ್ಲ ಸಂಪತ್ತೂ ರಮಾರಮಣನಿಗೆ ಸನ್ನಿಧಾನ ಪಾತ್ರವೆನ್ನುತ್ತಿರು ಆಗ ನಿನ್ನ ಮಾತನ್ನು ಕರುಣಾಸಮುದ್ರನಾದ ಭಗವಂತ ಆಲಿಸುತ್ತಾನೆ, ತಾಯಿ ಮಗುವಿನ ಮಾತನ್ನಾಲಿಸುವಂತೆ

**ಈ ಪರಿಯಲರಿತುಂಬ ನರ**

ಹಿಂದಿನ ಹನ್ನೊಂದು ಪದ್ಯಗಳಲ್ಲಿ ಹೇಳಿದಂತೆ ಅನ್ನದಲ್ಲಿಯೂ ಅನ್ನಭೋಕ್ತನಲ್ಲಿಯೂ ಭಗವಂತನಿದ್ದು ಭೋಜನಕ್ರಿಯೆಯನ್ನು ಅವನೆ ನಡೆಸುತ್ತಾನೆ ಅನ್ನದಲ್ಲಿದ್ದು ಅನ್ನದಲ್ಲಿ ತೃಪ್ತಿ ನೀಡುವ ಶಕ್ತಿಯನ್ನೂ ಭೋಕ್ತನಲ್ಲಿದ್ದು ಭೋಕ್ತನಲ್ಲಿ ಭೋಜನ ಶಕ್ತಿಯನ್ನೂ ವ್ಯಕ್ತಗೊಳಿಸಿ ಭೋಜನಯಜ್ಞ ನಡೆಸುತ್ತಾನೆ ಭೋಕ್ತನ ಜಾಠರಾಗ್ನಿಯಲ್ಲಿ ವೈಶ್ವಾನರರೂಪದಿಂದ ಇರುವ ತಾನೆ ಈ ಯಜ್ಞದ ಅಗ್ನಿ ಅನ್ನದಲ್ಲಿ ವಾಸುದೇವಾದಿ ರೂಪಗಳಿಂದ ಇರುವ ಸ್ವರಮಣನಾದ ತಾನೆ ಆ ಅಗ್ನಿಯಲ್ಲಿ ಲೀಲೆಯಿಂದ ಆಹುತಿ ಯಾಗುವ ಹವಿಸ್ಸು- ಬಿಂಬರೂಪನ ಈ ಲೀಲೆಯರಿತು ಜ್ಞಾನಪೂರ್ವಕವಾಗಿ ಅಂದರೆ ಅನುಸಂಧಾನ ಪೂರ್ವಕವಾಗಿ ಭೋಜನಯಜ್ಞ ಮಾಡುವ ಮಾನವನೆ ಆದರ ಫಲಕ್ಕೆ ಭಾಗಿಯಾಗುತ್ತಾನೆ ಏನು ಫಲ?

**ನಿತ್ಯೋಪವಾಸಿ**

ವಸ್ತುತಃ ಭೋಜನವೆಂಬುದು ನಾವು ದಿನ ನಿತ್ಯ ಮಾಡುವ ದೊಡ್ಡ ಒಂದು ಜೀವಹತ್ಯ ಉಪವಾಸ ಅದಕ್ಕೆ ಪ್ರಾಯಶ್ಚಿತ್ತ

ಅಹಸ್ತಾನಿ ಸಹಸ್ತಾನಾಂ ಅಪದೋ ದ್ವಿಚತುಷ್ಪದಾಂ ।
ಅಣೂನಿ ತಾತ ಮಹತಾಂ ಜೀವೋ ಜೀವಸ್ಯ ಜೀವನಂ ॥ *(ಬಾಗ 1 12 47)*

ಭಾಗವತದಲ್ಲಿ ನಾರದರು ಯುಧಿಷ್ಠಿರನಿಗೆ ಹೇಳುವ ಮಾತು- 'ಸಸ್ಯಗಳು ಪ್ರಾಣಿಗಳಿಗೆ ಪ್ರಾಣಿಗಳು ಮನುಷ್ಯರಿಗೆ ಮನುಷ್ಯರು ರಾಕ್ಷಸರಿಗೆ ಆಹಾರವಾಗುವುದು ಜೀವಶರೀರ ಜೀವನಿಗೆ ಜೀವನಾಧಾರವಾಗುವುದು ಭಗವಂತ ಮಾಡಿದ ನಿಯಮ' ಎಂದು ಇದೇ ಬಗೆಯ ಹೇಳಿಕೆಗಳು ಮಹಾಭಾರತ ಶಾಂತಿಪರ್ವದ ಹದಿನೈದನೆ ಅಧ್ಯಾಯದಲ್ಲಿಯೂ ಬರುತ್ತವೆ ಬಗವದ್ಗೀತೆಯೂ ಹೇಳುತ್ತದೆ-

'ಭುಂಜತೇ ತೇ ತ್ವಘಂ ಪಾಪಾಃ' *(3 13)*

'ಉಣ್ಣುವವರು ಪ್ರತಿ ತುತ್ತಿಗೂ ಪಾಪವನ್ನೆ ನುಂಗುತ್ತಾರೆ ' ಏಕೆಂದರೆ ಪಾಕಕ್ರಿಯೆಯೆ 'ಪಂಚಸೂನಾ'- ಐದು ಬಗೆಯ ಜೀವ ಹತ್ಯೆಯಾಗಿದೆ ಹೀಗೆ ಪಾಪಸಾಧನವಾದ ಭೋಜನಕ್ಕೆ ಪಾಪನಾಶಕವಾದ ಉಪವಾಸದ ಫಲ ಬರಬೇಕೆಂದರೆ ಭಗವದ್ಗೀತೆಯೆ ಹೇಳುತ್ತದೆ-

'ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।' *(3 13)*

ಪಾಪಸಾಧನವಾದ ಭೋಜನವನ್ನು ಯಜ್ಞರೂಪದಿಂದ ಆಚರಿಸಿದಾಗ ಉಪವಾಸದಂತೆ ಸರ್ವಪಾಪನಾಶಕವೆ ಆಗುತ್ತದೆ ಪುಣ್ಯಕರವೆ ಆಗುತ್ತದೆ

ನಿತ್ಯೋಪವಾಸಿಯಾಗುತ್ತಾನೆ ಎಂದರೇನು? ನಿತ್ಯೋಪವಾಸ ಎಂಬುದಿಲ್ಲ ಅದು ವಿಹಿತವೂ ಅಲ್ಲ, ಮಾಡಲು ಶಕ್ಯವೂ ಅಲ್ಲ ಅವಿಹಿತ ದಿನಗಳಲ್ಲಿ ಉಪವಾಸ ಮಾಡುವುದೆ ಪಾಪಕರ ಶ್ರೀವಾದಿರಾಜರು ಗೀತಾ ಲಕ್ಷಾಲಂಕಾರದಲ್ಲಿ,

ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತನಃ ।
ಮಾಂ ಚೈವಾಂತಃಶರೀರಸ್ಥಂ ತಾನ್ ವಿದ್ಧ್ಯಸುರನಿಶ್ಚಯಾನ್ ॥ *(17 6)*

'ಅವಿಹಿತ ದಿನಗಳಲ್ಲಿ ಉಪವಾಸ ಮಾಡುವವನು ಶರೀರದಲ್ಲಿರುವ ತತ್ವದೇವತೆಗಳಿಗೂ ಭಗವಂತನಿಗೂ ಅನ್ನವಿಲ್ಲದಂತೆ ಮಾಡುತ್ತಾನೆ, ಅಸುರಬುದ್ಧಿಯವನೆನಿಸುತ್ತಾನೆ' ಎಂದಿದ್ದಾರೆ ಅದರಿಂದ 'ನಿತ್ಯೋಪವಾಸಿ' ಎಂದರೆ ವಿಹಿತ ದಿನಗಳಲ್ಲಿ ಉಪವಾಸವನ್ನೇ ಮಾಡುತ್ತ ಬೇರೆ ದಿನಗಳಲ್ಲಿಯೂ ಯಜ್ಞರೂಪದಿಂದಲೆ ಭೋಜನ ಮಾಡುತ್ತಿದ್ದರೆ ನಿತ್ಯವೂ ಉಪವಾಸಫಲ ಲಭಿಸುತ್ತದೆ ಎಂದು ಅಭಿಪ್ರಾಯ

**ನಿರಾಮಯ ನಿಷ್ಪಾಪಿ** ·

ಯಜ್ಞರೂಪದಿಂದ ಭೋಜನ ಮಾಡುವವನು 'ನಿರಾಮಯ', ನೀರೋಗಿ, ಏಕೆಂದರೆ, ನಿಷ್ಪಾಪಿ, ಅವನ ಪಾಪಗಳೆಲ್ಲ ಪರಿಹಾರವಾಗಿರುತ್ತವೆ ರೋಗಗಳಿಗೆ ಮುಖ್ಯ ಕಾರಣ ಪಾಪ ಅಪಥ್ಯ ಮಾಡಿದರೂ ರೋಗ ಬಾರದಿರಬಹುದು, ಅಪಥ್ಯ ಮಾಡದಿದ್ದರೂ ರೋಗ

ಬರಬಹುದು ಏಕೆ ಹೀಗೆ? ಪಾಪವೆ ರೋಗಕ್ಕೆ ಕಾರಣ ಅದುವೆ ಅಪಥ್ಯ ಮಾಡಿಸಿ ಇಲ್ಲವೆ ಮಾಡಿಸದೆಯೋ ರೋಗ ತರುತ್ತದೆ

ಭೋಜನ ಯಜ್ಞ ಮಾಡಿದರೆ ಪಾಪ ಬರಲಾರದು, ಬಂದ ಪಾಪವೂ ಹಿಂಗೀತು ಆಗ ನಿಷ್ಪಾಪಿ ನಿರಾಮಯನಾಗುತ್ತಾನೆ

**ನಿತ್ಯ ಮಹಾಸುಯಜ್ಞಗಳಾಚರಿಸಿದವನು .**

ವಿಧಿನಾ ಭುಜ್ಯತೇ ಯೇನ ಮುಚ್ಯತೇ ನ ಋಣತ್ರಯಾತ್ ।
ಕುಲಾನ್ಯುದ್ಧರತೇ ವಿಪ್ರೋ ನರಕಾದೇಕವಿಂಶತಿಂ ।
ಸರ್ವಯಜ್ಞಫಲಾವಾಪ್ತಿಂ ಬ್ರಹ್ಮಲೋಕಂ ಚ ಗಚ್ಛತಿ ॥

ವಿಧ್ಯುಕ್ತವಾಗಿ ಭೋಜನಯಜ್ಞವನ್ನು ನಡೆಸುವವನು ದೇವಋಣ ಋಷಿಋಣ ಪಿತೃಋಣ ಎಂಬ ಮೂರೂ ಬಗೆಯ ಋಣಗಳನ್ನು ಪರಿಹರಿಸಿಕೊಳ್ಳುತ್ತಾನೆ ನರಕದಿಂದ ಇಪ್ಪತ್ತೊಂದು ಕುಲಗಳನ್ನು ಉದ್ಧರಿಸುತ್ತಾನೆ ಸರ್ವಯಜ್ಞಫಲಭಾಗಿಯಾಗಿ ಬ್ರಹ್ಮಲೋಕವನ್ನು ಹೊಂದುತ್ತಾನೆ ಎಂದು ಪ್ರಾಣಾಗ್ನಿಹೋತ್ರವಿಧಿಯಲ್ಲಿ ಉಕ್ತವಾಗಿದೆ

ಏವಂ ಜ್ಞಾತವಿಧಿರ್ಭುಕ್ತ್ವಾ ಬ್ರಹ್ಮಭೂಯಾಯ ಕಲ್ಪತೇ ।
ಏಕಾಹುತಿಪ್ರದಾನೇನ ಯಜ್ಞಾಯುತಫಲಂ ಲಭೇತ್ ॥

ಪ್ರಾಣಾಗ್ನಿಹೋತ್ರವಿಧಿಯನ್ನು ಅರಿತು ಭೋಜನ ಮಾಡಿದರೆ ಒಂದೊಂದು ತುತ್ತಿಗೂ ಹತ್ತು ಸಾವಿರ ಯಾಗಗಳ ಫಲ ಸಿಗುವುದರಿಂದ ಬ್ರಹ್ಮಲೋಕವನ್ನು ಪಡೆಯುತ್ತಾನೆ ಕರ್ಮದಿಂದಲೆ ಮೋಕ್ಷವಿಲ್ಲ, ನಿಜ, ಆದರೆ ಜ್ಞಾನದಿಂದಲೂ ಮೋಕ್ಷವಿಲ್ಲ ಜ್ಞಾನಪೂರ್ವಕವಾದ ಕರ್ಮದಿಂದ ಮೋಕ್ಷ ಅಪರೋಕ್ಷಜ್ಞಾನಿಗಳು ಮಾತ್ರವೇ 'ಈ ಪರಿಯಲರಿತುಂಬ ನರರು' ಎನ್ನಬೇಕು ನಮಗೆ ಅವರು ಆದರ್ಶಭೂತರೆಂಬ ಅಭಿಪ್ರಾಯ ಅದರಿಂದ ಇದರಲ್ಲಿ ಅತಿಶಯೋಕ್ತಿ ಏನಿಲ್ಲ

'ಪ್ರಾಣಾಗ್ನಿಹೋತ್ರಂ ವಕ್ಷ್ಯಾಮಿ ಸರ್ವಯಜ್ಞೇಷು ದುರ್ಲಭಂ'

ಎಲ್ಲ ಯಜ್ಞಗಳಲ್ಲಿ ಭೋಜನಯಜ್ಞ ದುರ್ಲಭವೆನ್ನುವುದು ಇದೇ ಅಭಿಪ್ರಾಯದಿಂದ

**ಪೋಪುದು – ಇಪ್ಪುದು – ಬಪ್ಪುದು ·**

ಪ್ರಾಣಸಂಸ್ಥಸ್ಯ ವೈ ವಿಷ್ಣೋಃ ಸಂಪ್ರೀತ್ಯೈ ಭೋಜನಂ ಭವೇತ್ ।
ತದಿಚ್ಛಯೈವ ಚೌರ್ಯಾದಿ ಕುರ್ಯುರಜ್ಞಾ ಅಪಿ ಧ್ರುವಂ ।
ತಥಾಪಿ ತಂ ನ ಜಾನೀಯುಃ ಪ್ರಾಣಾತ್ಮಾನಂ ಜನಾರ್ದನಂ ॥ (ಬೃಹದಾರಣ್ಯಕ ಭಾಷ್ಯ)

'ಮುಖ್ಯಪ್ರಾಣಾಂತರ್ಗತನಾದ ವಿಷ್ಣುವಿನ ಪ್ರೀತಿಗಾಗಿಯೆ ಅವನಿಚ್ಛೆಯಿಂದಲೆ ಎಲ್ಲರೂ

ಅನ್ನ ಉಣ್ಣುತ್ತಾರೆ ಉಣ್ಣುವುದಕ್ಕಾಗಿಯೆ ಹಣ ಗಳಿಸುತ್ತಾರೆ, ಕಳ್ಳತನ ಮಾಡುವುದಕ್ಕೂ ಮುಂದಾಗುತ್ತಾರೆ ಆದರೂ ವಿಷ್ಣುವನ್ನು ಅವರು ತಿಳಿಯಲಾರರು ' ಎಂದು ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳುತ್ತಾರೆ ದಾಸರೂ, '*ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ*' ಎಂದು ಹಾಡಿದ್ದಾರೆ ಭೋಜನ ನಡೆಸುವುದು ಪ್ರಾಣನಿಗೆ ಹೊಟ್ಟೆಗಾಗಿ, ಭೋಜನದ ಪೂರ್ವೋತ್ತರದಲ್ಲಿ ಆಪೋಶನ ನಡೆಸುವುದು ಪ್ರಾಣನಿಗೆ ಬಟ್ಟೆಗಾಗಿ ಅದರಿಂದ ಅದು ಮುಕ್ತಿಯಲ್ಲಿಯೂ ಜೀವನಿಗೆ ಹೊಟ್ಟೆಗೆ ಬಟ್ಟೆಗೆ ಸಾಧನವಾದೀತು.

ಹೊಟ್ಟೆಗಾಗಿ ಬಟ್ಟೆಗಾಗಿ ಕೂಡಿಟ್ಟ ಹಣದ ಬಗ್ಗೆ ಭರ್ತೃಹರಿ ನೀತಿಶತಕದಲ್ಲಿ ಹೀಗೆ ಹೇಳುತ್ತಾನೆ-

ದಾನಂ ಭೋಗೋ ನಾಶಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ ।
ಯೋ ನ ದದಾತಿ ನ ಭುಂಕ್ತೇ ತಸ್ಯ ತೃತೀಯಾ ಗತಿರ್ಭವತಿ ॥

ಗಳಿಸಿಟ್ಟ ಹಣಕ್ಕೆ ದಾನ, ಭೋಗ, ನಾಶ ಇವು ಮೂರೇ ಗತಿಗಳು ಉಣಲೊಲ್ಲೆ, ಕೊಡಲೂ ಒಲ್ಲೆ ಎಂದರೆ ಅದು ಉಳಿಯಲೊಲ್ಲದು 'ಪೋಪುದು' ಎಂದರೆ ಹೀಗೆ ತಾನೂ ಉಣದೆ ಪರರಿಗೂ ಕೊಡದೆ ನಶಿಸಿಹೋಗುವುದು ಇದನ್ನೂ ಪಶ್ಚಾತ್ತಾಪದಿಂದ ರಮಾಪತಿಗೆ ಅಧಿಷ್ಠಾನವೆಂದು ಬಗೆದು ಕೃಷ್ಣಾರ್ಪಣವೆನ್ನಬೇಕು ಅದಕ್ಕೂ ಅವನು ಮೆಚ್ಚುತ್ತಾನೆ

'ಇಪ್ಪುದು' ಎಂದರೆ ಈಗ ಇರುವುದು ಉಣಲೆಂದು ಪಾಕ ಮಾಡಿ ಸಿದ್ಧವಾಗಿರುವುದು ಇದನ್ನೂ ರಮಾಪತಿಗಧಿಷ್ಠಾನವೆಂದು ಅರ್ಪಿಸಬೇಕು

ಅದ್ಯ ತಿಷ್ಠತಿ ಯತ್ ಕಿಂಚಿತ್ ಕಲ್ಪಿತಂ ಚಾಪರಂ ಗೃಹೇ ।
ಪಕ್ವಮನ್ನಂ ಸಪಾನೀಯಂ ಸರ್ವೋಪಸ್ಕರಸಂಯುತಂ ।
ಯಥಾಕಾಲಂ ಮನುಷ್ಯಾದ್ಯೈರ್ಭೋಕ್ಷ್ಯಮಾಣಂ ಶರೀರಿಭಿಃ ।
ತತ್ಸರ್ವಂ ವಿಷ್ಣುಪೂಜಾಸ್ತು ಪ್ರೀಯತಾಂ ಮೇ ಜನಾರ್ದನಃ ॥

'ಪ್ರಭು, ನಿನ್ನ ಮುಂದೆ ಇಟ್ಟಿರುವ ಈ ಅನ್ನ, ಮನೆಯಲ್ಲಿ ಸಿದ್ಧವಾಗಿರುವ ಬೇರೆ ಅನ್ನ, ಪಾನೀಯ ವ್ಯಂಜನಪದಾರ್ಥಗಳು, ಆಗಾಗ ನಾವು ಉಣ್ಣುವುದು ಎಲ್ಲವೂ ನಿನ್ನ ಪೂಜೆಯೆನಿಸಲಿ, ನಿನಗೆ ಪ್ರೀತಿ ಉಂಟಾಗಲಿ' ಎಂದು ನೈವೇದ್ಯಕಾಲದಲ್ಲಿ ಪ್ರಾರ್ಥಿಸುವುದು ವಿಹಿತವಾಗಿದೆ

'ಬಪ್ಪುದು'- ಮುಂದೆ ಬರಲಿರುವುದು

'ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ'

ಎಂದು ರಾಮಾಯಣ ಹೇಳುವಂತೆ ದುಃಖಕ್ಕಾಗಿ ಪ್ರಯತ್ನ ಮಾಡದಿದ್ದರೂ ದುಃಖ

ಬರುವಂತೆ ಸುಖಕ್ಕಾಗಿ ಪ್ರಯತ್ನ ಮಾಡದಿದ್ದರೂ ಸುಖವೇಕೆ ಬರಲಾರದು? ಅದನ್ನೂ ಮೊದಲೇ ರಮಾಪತಿಗಧಿಷ್ಠಾನವೆನ್ನುತ್ತ ಕೃಷ್ಣಾರ್ಪಣವೆನ್ನಬೇಕು ಜೊತೆಗೆ ಮುಂದೆ ಬರಬಹುದಾದ ನಾನಾ ವ್ಯಾಧಿಗಳನ್ನೂ ಮರಣವನ್ನೂ, ಏಕೆ, ಸ್ಮಶಾನಕ್ಕೆ ಪಯಣ, ಶವದಹನಗಳನ್ನು ತಪಸ್ಸೆಂದು ಭಾವಿಸಿ ಮುಂಚಿತವಾಗಿಯೆ ರಮಾಪತಿಗೆ ಅಧಿಷ್ಠಾನವೆಂದು ಅರ್ಪಿಸಿ ಬಿಡಬೇಕು ಬೃಹದಾರಣ್ಯಕ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಹಾಗೇ ಹೇಳಿದ್ದಾರೆ-

ವ್ಯಾಧೀನ್ ಶವಹೃತಿಂ ಚೈವ ಶವದಾಹಾದಿಕಂ ತಥಾ ।
ವಿಷ್ಣವೇ ತವ ಇತ್ಯೇವ ಚಿಂತಯನ್ ಯಾತಿ ತತ್ ಪರಂ ॥

**ಕೃಪಾಪಯೋನಿಧಿ ಮಾತನಾಲಿಸುವನು ಜನನಿಯಂತೆ :**

ಸರ್ವಯಜ್ಞಗಳಲ್ಲಿ ಶ್ರೇಷ್ಠವಾದ ಈ ಭೋಜನಯಜ್ಞ ಸುಲಭವೇನಲ್ಲ ಅದಕ್ಕೆ ಯಜ್ಞಪ್ರಕ್ರಿಯೆಗಳ ಆಳವಾದ ವಿಶಾಲವಾದ ಅಧ್ಯಯನ ಬೇಕು ಅನುಸಂಧಾನವೂ ಬೇಕು

ಯಜ್ಞಕುಂಡದಲ್ಲಿ ಬೆಂಕಿಕಡ್ಡಿ ಗೀರಿ ಬೆಂಕಿ ಹೊತ್ತಿಸಲಾಗದು ಅರಣಿಮಥನ ವಾಗಬೇಕು ಅದಕ್ಕೆ ಅರಣಿ, ಕಡಗೋಲು, ಹಗ್ಗಗಳು ಬೇಕು ಹೃದಯಕಮಲ ಅರಣಿ, ಮನಸ್ಸು ಕಡಗೋಲು, ವಾಯು ಹಗ್ಗ ಮನಸ್ಸು ಪರವಶವಾಗಿರುವಾಗ ಹಸಿವಿಲ್ಲ, ಊಟ ಬೇಡವೆನಿಸುತ್ತದೆ ಪ್ರಾಣವಾಯುವಿನ ಸಹಾಯದಿಂದ ಮನಸ್ಸು ಮಥನ ಮಾಡಿದರೆ ಹೃದಯಕಮಲವೆಂಬ ಅರಣಿಯಲ್ಲಿ ಹಸಿವಿನ ಅನುಭವವಾಗುತ್ತದೆ ಜಾಠರಾಗ್ನಿ ಪ್ರಜ್ವಲಿಸುತ್ತದೆ ಬಾಯಲ್ಲಿ ನೀರೂರುತ್ತದೆ ಅನ್ನ ಬೇಕೆನಿಸುತ್ತದೆ ಬಾಯಿ ಆಹವನೀಯ ವೆಂಬ ಯಜ್ಞಕುಂಡ ಹೃದಯ ಗಾರ್ಹಪತ್ಯ ನಾಭಿ ದಕ್ಷಿಣಾಗ್ನಿ ಉದರದ ಬಲಭಾಗ ಆವಸಥ್ಯ ಎಡಭಾಗ ಸಭ್ಯ ಈ ಪಂಚಾಗ್ನಿಗಳಲ್ಲಿ ಅನ್ನಪಾನೀಯಗಳ ಆಹುತಿ ಜೀವ ಅಧ್ವರ್ಯು ಅವನೆ ಯಜಮಾನನೂ ಹೌದು ಬುದ್ಧಿ ಪತ್ನಿ ಬುದ್ಧಿಪೂರ್ವಕವಾಗಿ ಯಜ್ಞಮಾಡಿದರೇ ಫಲ ನಾಲಿಗೆಯೆ ಸ್ರುಕ್‌ಸ್ರುವ ಪ್ರಾಣಾಯಾಮ ಮಾಡಿ ಪ್ರಣವಾದಿ ಸ್ವಾಹಾಂತ ಮಂತ್ರಪೂರ್ವಕವಾಗಿ ಜಾಠರಾಗ್ನಿಯಲ್ಲಿ ಹೋಮ ನಡೆಸಬೇಕು ಎಂದು ಪ್ರಾಣಾಗ್ನಿಹೋತ್ರ ವಿಧಿ ಇದೆ-

ಹೃತ್ಪುಂಡರೀಕಮರಣಿಂ ಮನೋಮಂಥಾನಸಂಜ್ಞಿತಂ ।
ವಾಯುರಜ್ಜ್ವಾಮಥೇದಗ್ನಿಂ ಆತ್ಮಾಽಧ್ವರ್ಯುಃ ಪ್ರಕೀರ್ತಿತಃ ।
ಪ್ರಾಣಾನಾಯಮ್ಯ ವಿಧಿವತ್ ಮಂತ್ರಾನುಚ್ಚಾರಯನ್ ಕ್ರಮಾತ್ ।
ಸ್ವಾಹಾಂತಾನ್ ಪ್ರಣವಾದೀಂಶ್ಚ ಜುಹುಯಾದ್ ಜಾಠರಾಗ್ನಿಷು ॥

ಮಂತ್ರಗಳು - 'ಅಮೃತೋಪಸ್ತರಣಮಸಿ' ಆಪೋಶನಮಂತ್ರ ಬಳಿಕ ಪ್ರಾಣಾಹುತಿ- ಓಂ ಶ್ರದ್ಧಾಯಾಂ ಪ್ರಾಣೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾವಿಶಾಪ್ರದಾಹಾಯ। ಪ್ರಾಣಾಯ ಸ್ವಾಹಾ । ಕ್ಷುಧಾಗ್ನಯೇ ಆದಿತ್ಯಾಯೇದಂ ನ ಮಮ ।'

'ಶ್ರದ್ಧಾದೇವಿಯೆಂಬ ಪತ್ನಿಯಿಂದೊಡಗೂಡಿದ ಮುಖ್ಯಪ್ರಾಣನಿಗೆ ನೈವೇದ್ಯ

ವೈಶ್ವದೇವಗಳಿಂದ ಸಂಸ್ಕೃತವಾದ ಅಮೃತತುಲ್ಯವಾದ ಈ ಅನ್ನವನ್ನು ಹೋಮಿಸುತ್ತೇನೆ ಅದು ನನಗೆ ಸುಖಕರವಾಗಿ ಪರಿಣಮಿಸಲಿ ಜಠರಾಗ್ನಿಯ ದಾಹವನ್ನು ಕಳೆಯಲು ನನ್ನ ಜಠರವನ್ನು ಪ್ರವೇಶಿಸಲಿ ಮುಖ್ಯಪ್ರಾಣನಲ್ಲಿರುವ ಹಸಿವೆಂಬ ಬೆಂಕಿಯ ರೂಪದ ಆದಿತ್ಯನಾಮಕ ಹರಿಗೆ ಇದೊ ಆಹುತಿ ' ಹೀಗೆ ಎನ್ನುತ್ತ ಉಪ್ಪು ಹುಳಿ ಖಾರವಿಲ್ಲದ ತುಪ್ಪಸಹಿತವಾದ ಅನ್ನವನ್ನು ತುಲಸೀದಲದೊಂದಿಗೆ ಹಲ್ಲುಗಳ ಸ್ಪರ್ಶವಾಗದಂತೆ ನುಂಗಬೇಕು ಹೀಗೆ ಪಂಚಪ್ರಾಣರಿಗೆ, ಬ್ರಹ್ಮನಿಗೆ ಎಂದು ಆರು ಆಹುತಿಗಳಿವೆ

ಇವೆಲ್ಲವನ್ನೂ ಅರಿಯದೆ ಯಾಂತ್ರಿಕವಾಗಿಯಾದರೂ ಮಂತ್ರಪೂರ್ವಕವಾಗಿ ಆಹುತಿ ನೀಡಿದರೂ ಹರಿ, ಕೃಪಾಪಯೋನಿಧಿ, ಆ ಮಂತ್ರಗಳನ್ನು ಆಲಿಸುತ್ತಾನೆ, ಬಾಲಕನ ಕಲಭಾಷೆ ಜನನಿಯು ಕೇಳಿ ಸುಖ ಪಡುವಂತೆ ತಾಯಿ, ಮುಂದೆ ಮಗುವಿಗೆ ಸರಿಯಾಗೇ ಮಾತು ಕಲಿಸುತ್ತಾಳೆ ಹಾಗೇ ಭಗವಂತನೂ ಭೋಜನಯಜ್ಞಕರ್ತನಿಗೆ ಪಾಪಪರಿಹಾರ ಮಾಡಿ ಅಂತಃಕರಣಶುದ್ಧಿಪೂರ್ವಕ ಕ್ರಮವಾಗಿ ಜ್ಞಾನಸಾಧನೆ ಮಾಡಿಸುತ್ತಾನೆ ಅದಕ್ಕೇ ಅವನನ್ನು ಕೃಪಾಪಯೋನಿಧಿ, ಕರುಣಾಸಮುದ್ರ ಎನ್ನುತ್ತೇವೆ ನಾವು ಅರ್ಥಜ್ಞಾನವಿಲ್ಲದೆ ಪಠಿಸುವ ಮಂತ್ರಗಳಿಗೂ ಹೀಗೇ ಅವನು ಮೆಚ್ಚಿಕೊಳ್ಳುತ್ತಾನೆ ಎಂದು ವಿಶ್ವಾಸವಿಡಬೇಕು

**ಆರೆರಡು ಸಾವಿರದ ಮೇಲಿ-**
**ನ್ನೂರ ಐವತ್ತೊಂದು ರೂಪದಿ**
**ಸಾರಭೋಕ್ತನಿರುದ್ಧದೇವನು ಅನ್ನಮಯನೆನಿಪ ।**
**ಮೂರೆರಡುವರೆ ಸಾವಿರದ ಮೇಲ್**
**ಮೂರಧಿಕ ನಾಲ್ವತ್ತು ರೂಪದಿ**
**ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ ॥ ೧೩ ॥**

ಜಗತ್ತಿನಲ್ಲಿ ಸಾರಭೋಕ್ತನಾದ ಅನಿರುದ್ಧದೇವ ಎಂಟುಸಾವಿರದ ಇನ್ನೂರೈವತ್ತೊಂದು ರೂಪದಿಂದ ಅನ್ನಮಯನೆನಿಸುತ್ತಾನೆ ಪ್ರದ್ಯುಮ್ನ ಐದು ಸಾವಿರದ ಐನೂರ ನಲ್ವತ್ತಮೂರು ರೂಪದಿಂದ ಪ್ರಾಣಮಯನಾಗಿ ತೋರುತ್ತಿದ್ದಾನೆ

**ಆರೆರಡು ಸಾವಿರದ ಮೇಲಿನ್ನೂರ ಐವತ್ತೊಂದು ರೂಪದಿ**

8251-ಈ ಭಗದ್ರೂಪ ಸಂಖ್ಯೆ 'ಅನಿರುದ್ಧ' ನಾಮದಲ್ಲಿ ಅಡಕವಾಗಿದೆ 'ಟಾದಿ ಚತುಃ, ತಾದಿ ಪಂಚ' ಎಂಬ ನಿಯಮದಂತೆ 'ಟಠಡಢ' ಎಂಬ ನಾಲ್ಕು ಅಕ್ಷರಗಳೂ 'ತಥದಧನ' ಎಂಬ ಐದು ಅಕ್ಷರಗಳೂ ಸೇರಿ ಒಂಬತ್ತು ಅಕ್ಷರಗಳು ಕ್ರಮವಾಗಿ ಒಂದರಿಂದ ಒಂಬತ್ತು ಸಂಖ್ಯೆಗಳನ್ನು ಸೂಚಿಸುತ್ತವೆ ಅನಿರುದ್ಧ ನಾಮದಲ್ಲಿ ಕೊನೆಯ 'ದ್ಧ' ಎಂಬುದು ಒತ್ತಕ್ಷರ ಅದರಲ್ಲಿ

ಮೊದಲಿನ ದಕಾರ ಅವಿವಕ್ಷಿತ ಕೊನೆಯ ಧಕಾರವನ್ನು ತೆಗೆದುಕೊಳ್ಳಬೇಕು ಏಕೆಂದರೆ 'ಅಂಕಾನಾಂ ವಾಮತೋ ಗತಿಃ' ಎಂದು ನಿಯಮ ಧಕಾರ ಟಕಾರದಿಂದಾರಂಭಿಸಿ ಎಂಟನೆ ಅಕ್ಷರ, 8 ಎಂಬ ಸಂಖ್ಯೆಗೆ ಸೂಚಕ ಅದರ ಹಿಂದಿನ 'ರು' ಎಂಬುದು 'ಯಾದ್ಯಷ್ಟ' ಎಂಬ ನಿಯಮದಂತೆ 2 ಎಂದೂ, ಅದರ ಹಿಂದಿನ 'ನಿ' ಅಕ್ಷರ 'ತಾದಿ ಪಂಚ' ನಿಯಮದಂತೆ 5 ಎಂದೂ ಸೂಚಿಸುತ್ತವೆ ಹಿಂದಿನಂತೆ, 'ಟಾದಿ ಚತುಃ, ತಾದಿ ಪಂಚ' ಎಂದು ಜೊತೆಗೆ ಸೇರಿಸಿ ಇಟ್ಟುಕೊಂಡರೆ 'ನಿ' ಎಂಬುದು 9 ಎಂದು ಸೂಚಿಸಬಲ್ಲುದು ಆದರೆ ಹಾಗೆ ಜೊತೆಗೆ ಇಟ್ಟುಕೊಳ್ಳುವ ವಿವಕ್ಷೆ ಈಗ ಇಲ್ಲ ಹಾಗಾದರೆ ವಿವಕ್ಷಾನುಸಾರ ಯಾವ ಶಬ್ದವೂ ಯಾವ ಸಂಖ್ಯೆಯನ್ನೂ ತಿಳಿಸಬಲ್ಲುದೆ ಎಂದರೆ ಹೌದು ಎಂದೇ ಉತ್ತರ ಆದರೆ ಪ್ರಮಾಣಬೇಕು ಪ್ರಕೃತ,

ದ್ಯುತ್ತರಂ ಷಟ್‌ಸಹಸ್ರಂ ತು ದ್ವಿಶತಂ ರೂಪಜಾತಕಂ ।
ಏಕಪಂಚಾಶದಾತ್ಮಾ ಯೋಽನಿರುದ್ಧೋಽನ್ನಮಯಾಭಿಧಃ ॥

ಎಂಬ ಪ್ರಕಾಶ ಸಂಹಿತಾವಚನವನ್ನು ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ಉದಾಹರಿಸಿದ್ದಾರೆ ಹೀಗಾಗಿ 'ನಿ' ಎಂದರೆ 5 ಅ ಎಂದರೆ 1 ಎಲ್ಲ ಸೇರಿದಾಗ 8251 ಆಗುತ್ತದೆ ಅಷ್ಟು ರೂಪಗಳಿಂದ ಅನ್ನದಿಂದ ಅನಿರುದ್ಧದೇವ ಬಂದು ಅನ್ನಮಯ ಕೋಶದಲ್ಲಿ ನಿಯಾಮಕನಾಗಿ ನೆಲೆಸುತ್ತಾನೆ

**ಮೂರೆರಡು ಸಾವಿರದ ಮೇಲ್ ಮೂರಧಿಕ ನಾಲ್ವತ್ತು ರೂಪದಿ**

5543-ಈ ಭಗವದ್ರೂಪಸಂಖ್ಯೆ 'ಪ್ರದ್ಯುಮ್ನ' ನಾಮದಲ್ಲಿ ಅಕ್ಷರಗಳಿಂದ ಸೂಚಿತವಾಗುತ್ತದೆ ಕೊನೆಯ ಒತ್ತಕ್ಷರ 'ಮ್ನ'ವನ್ನು ಬಿಡಿಸಿ ಮ ನ ಎಂದು ಬೇರೆ ಬೇರೆಯಾಗಿ ವಿವಕ್ಷೆ ಮಾಡುತ್ತಾರೆ ಅದರ ಹಿಂದಿನ 'ದ್ಯು' 'ಪ್ರ' ಅಕ್ಷರಗಳನ್ನು ಹಾಗೆ ಮಾಡುವುದಿಲ್ಲ ಅದರಿಂದ 'ಮ್ನ' 55 ಆಗುತ್ತದೆ ಆದರೆ ದ್ಯು ಎಂಬುದು ದ3, ಯ1 ಸೇರಿ ನಾಲ್ಕಾಗುತ್ತದೆ ಹೊರತು 31 ಆಗುವುದಿಲ್ಲ 'ಪ್ರ' ಎಂಬುದೂ ಪ1, ರ2 ಸೇರಿ ಮೂರಾಗುತ್ತದೆ 12 ಆಗುವುದಿಲ್ಲ ಈಗ 5543 ಎಂಬ ಸಂಖ್ಯೆ ಸಿಗುತ್ತದೆ ಅನ್ನದಿಂದ ಪ್ರಾಣಮಯ ಕೋಶದಲ್ಲಿ ಬಂದು ಸೇರಿ ಪ್ರದ್ಯುಮ್ನ 5543 ರೂಪಗಳಿಂದ ನೆಲೆಸಿದ್ದಾನೆ ಇದಕ್ಕೂ ಪ್ರಕಾಶ ಸಂಹಿತಾ ವಚನ ಪ್ರಮಾಣ—

ಶತ ಪಂಚಕ ಪೂರ್ವಂ ತು ಸಹಸ್ರಾಣಾಂ ಸುಪಂಚಕಂ ।
ತ್ರಿಚತ್ವಾರಿಂಶದಾತ್ಮಾಯಂ ಕೃತೀಟ್ ಪ್ರಾಣಮಯಾಭಿಧಃ ॥

**ಸಾರಭೋಕ್ತನಿರುದ್ಧದೇವನು ಅನ್ನಮಯನೆನಿಪ**

ಪ್ರತಿಯೊಬ್ಬ ಸಂಸಾರಿಜೀವನಿಗೆ ಸ್ವರೂಪಶರೀರದ ಮೇಲೆ 25 ಆವರಣಗಳಿವೆ—

'ಭಗವದಿಚ್ಛಾವರಣ, ಲಿಂಗಶರೀರ, ಅವ್ಯಕ್ತಶರೀರ, ಅವಿದ್ಯಾವರಣ, ಕರ್ಮಾವರಣ, ಕಾಮಾವರಣ, ಜೀವಾಚ್ಛಾದಕ, ಪರಮಾಚ್ಛಾದಕ, ನಾರಾಯಣಾವರಣ, ವಾಸುದೇವಾವರಣ, ಸಂಕರ್ಷಣಾವರಣ, ಪ್ರದ್ಯುಮ್ನಾವರಣ, ಅನಿರುದ್ಧಾವರಣ ಅನಿರುದ್ಧ ಶರೀರ, ವಾಸುದೇವ ಕವಚ, ನಾರಾಯಣ ಕವಚ, ಆನಂದಮಯ ಕೋಶ, ವಿಜ್ಞಾನಮಯ ಕೋಶ, ಮನೋಮಯ ಕೋಶ, ವಾಙ್ಮಯ ಕೋಶ, ಶ್ರೋತ್ರಮಯ ಕೋಶ, ಚಕ್ಷುರ್ಮಯ ಕೋಶ, ಪ್ರಾಣಮಯ ಕೋಶ, ಅನ್ನಮಯ ಕೋಶ, ಸ್ಥೂಲಶರೀರ' ಜೀವನನ್ನು ಬಲು ಜೋಪಾನವಾಗಿ ಕಾಪಾಡುತ್ತ ಅವನಿಂದ ಮೋಕ್ಷಸಾಧನೆ ಮಾಡಿಸಲು ಈ ಆವರಣಗಳಿವೆ

ಸ್ಥೂಲಶರೀರದಲ್ಲಿ ನಾವು ಉಣ್ಣುವ ಆಹಾರವನ್ನು ಪಚನಮಾಡಿ ಸಾರಭಾಗವನ್ನು ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯ ಕೋಶಗಳಲ್ಲಿ ಹಂಚುತ್ತಾನೆ ಶ್ರೀಹರಿ ಪೃಥಿವಿ ಅಪ್‌ಗಳನ್ನು ಅನ್ನಮಯ ಕೋಶದಲ್ಲಿಯೂ, ತೇಜ ವಾಯು ಆಕಾಶಗಳನ್ನು ಪ್ರಾಣಮಯಕೋಶದಲ್ಲಿಯೂ, ಮನಸ್ಸು ಅಹಂಕಾರ ತತ್ವಗಳನ್ನು ಮನೋಮಯ ಕೋಶದಲ್ಲಿಯೂ, ಮಹತ್ತತ್ವವನ್ನು ವಿಜ್ಞಾನಮಯ ಕೋಶದಲ್ಲಿಯೂ, ಅವ್ಯಕ್ತತತ್ವವನ್ನು ಆನಂದಮಯಕೋಶದಲ್ಲಿಯೂ ಸೇರಿಸುತ್ತಾನೆ ಒಂದು ತುತ್ತು ಅನ್ನದಲ್ಲಿಯೂ ಇಷ್ಟು ತತ್ವಗಳಿರುತ್ತವೆ

ಅನ್ನಮಯದಲ್ಲಿ ಸೇರ್ಪಡೆಯಾಗುವ ಪೃಥಿವೀತತ್ವವೆಂದರೆ, ಜೊತೆಗೆ ಅದರ ಗಂಧ ಗುಣ, ಘ್ರಾಣೇಂದ್ರಿಯ ಉಪಸ್ಥೇಂದ್ರಿಯಗಳು ವಿವಕ್ಷಿತವಾಗಿವೆ ಅಪ್‌ತತ್ವ ವೆಂದರೂ ಜೊತೆಗೆ ಅದರ ರಸಗುಣ ರಸನೇಂದ್ರಿಯ ಪಾಯು ಇಂದ್ರಿಯಗಳೂ ಸೇರಿವೆ ಜೊತೆಗೆ ಇವುಗಳ ಅಭಿಮಾನಿ ದೇವತೆಗಳೂ ಅವರಿಗೆ ಪ್ರೇರಕರಾಗಿ ಮುಖ್ಯಪ್ರಾಣನ ಐದು ರೂಪಗಳಲ್ಲಿ ಒಂದಾದ ಪ್ರಾಣ, ಅವನಿಗೆ ನಿಯಾಮಕನಾದ ಅನಿರುದ್ಧ, ಅವನ ಪತ್ನಿ ಶಾಂತಿದೇವಿ ಇವರೆಲ್ಲ ಅನ್ನದಿಂದ ಅನ್ನಮಯ ಕೋಶದಲ್ಲಿ ಬಂದು ಸೇರುತ್ತಾರೆ ಇವರೆಲ್ಲರೂ ಒಂದು ರೂಪದಿಂದ ಅಲ್ಲಿಯೆ ಸದಾ ಇರುವವರೇ ಅನ್ನದಲ್ಲಿರುವ ಅವರ ಇನ್ನೊಂದು ರೂಪ ಕೋಶಕ್ಕೆ ಬಂದು ಅಲ್ಲಿರುವ ರೂಪದೊಂದಿಗೆ ಐಕ್ಯಹೊಂದುತ್ತದೆ, ಒಂದು ದೀಪದೊಂದಿಗೆ ಇನ್ನೊಂದು ದೀಪ ಬಂದು ಸೇರಿ ಒಂದಾಗುವಂತೆ ಇದು

**ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ**

ಪ್ರಾಣಮಯ ಕೋಶದಲ್ಲಿ ಸೇರುವ ತೇಜಸ್ತತ್ವದ ಜೊತೆಗೆ ಅದರ ರೂಪ ಗುಣ ಚಕ್ಷುರಿಂದ್ರಿಯ ಪಾದೇಂದ್ರಿಯಗಳೂ, ವಾಯುತತ್ವದ ಜೊತೆಗೆ ಅದರ ಸ್ಪರ್ಶಗುಣ ತ್ವಗಿಂದ್ರಿಯ ಪಾಣೀಂದ್ರಿಯಗಳೂ, ಆಕಾಶತತ್ವದ ಜೊತೆಗೆ ಅದರ ಶಬ್ದಗುಣ, ಶ್ರೋತ್ರೇಂದ್ರಿಯ ವಾಗಿಂದ್ರಿಯಗಳೂ ವಿವಕ್ಷಿತವಾಗಿವೆ ಹೀಗೆ ಹನ್ನೆರಡು ತತ್ವಗಳು, ಅವುಗಳ ಅಭಿಮಾನಿ ದೇವತಾರೂಪಗಳು, ಅವುಗಳ ಪ್ರೇರಕರಾದ ಅಪಾನವಾಯು ಮತ್ತು ಪ್ರದ್ಯುಮ್ನ ಕೃತಿದೇವಿಯರು ಪಚನವಾದ ಅನ್ನದ ಸಾರಭಾಗರೂಪವಾಗಿ ಬಂದು ಪ್ರಾಣಮಯ

ಕೋಶದಲ್ಲಿ ನೇರಿ ಅದನ್ನು ಬಲವಡಿಸುತ್ತಾರೆ ಈ ಎಲ್ಲ ವಿವರಗಳು ವಿಜಯದಾಸರ ಸುಳಾದಿಯಲ್ಲಿ ಉಕ್ತವಾಗಿವೆ—

ಧರೆಯೊಳು ಮಾನವ ಉದಕಾನ್ನ ಉ
ದರದಲ್ಲೆರೆದರೆ ಆದರಲ್ಲಿ ಚ
ತುರ ವಿಂಶತಿ ತತ್ವವಿರುತಿಪ್ಪುವು ಕೇಳಿ
ಪರಮಾಣು ಆತ್ಮಣು ಒಂದನಂತವಾಗಿ
ಪರಿವರಿ ಅಂಶಿ ಅಂಶಗಳಿಂದ ತತ್ವೇ
ಶರ ಸಹಿತವಾಗಿ ಉಪಚಯ ಕೊಡುತಲಿ ।

ನಾವಿರಾರು ರೂಪಗಳಿಂದ ಭಗವಂತ ಕೋಶಗಳಲ್ಲಿ ನೆಲೆಸುವುದು ಅವನಿಗೆ ಒಂದು ಲೀಲೆ ಉಪಾನಕನಿಗೆ ಹಾಗೆ ಉಪಾಸನೆ ಮಾಡುವುದರಿಂದ ವಿಶೇಷ ಫಲ ಪ್ರಾಣೇಶದಾಸರು ಹೇಳುತ್ತಾರೆ—

ಇಂದಿರೇಶಾರಲ್ಲಾವ ನಾಮದಲ್ಲಿಹನು ಆ
ನಂದ ತೀರ್ಥರಾವ ನಾಮದಲ್ಲಿಹರು
ವೃಂದಾರಕರು ಅಲ್ಲೆಲ್ಲಿರುತಿಹರು
ಎಂದು ತಿಳಿಯದವ ಬಾಳಲ್ಯಾತಕೆ? ಹದ್ದಿ
ನಂದದಿ ಬಹುಕಾಲ ವ್ಯರ್ಥವಾಗಿ ?
ಸಿಂಧುಶಯನ ಸಿರಿ ಪ್ರಾಣೇಶ ವಿಟ್ಠಲ ಅವ
ಗೆಂದೆಂದು ಪೊಲಿಯನು ಕೇಳಿ ಸಜ್ಜನರು ॥

**ಎರಡು ಕೋಶಗಳೊಳ ಹೊರಗೆ ಸಂ**
**ಕರುಷಣೈದು ಸುಲಕ್ಷದರವ**
**ತ್ತೆರಡು ಸಾವಿರದೇಳಧಿಕ ಶತ ರೂಪಗಳ ಧರಿಸಿ ।**
**ಕರೆಸಿಕೊಂಬ ಮನೋಮಯನು ಎಂ**
**ದರ ವಿದೂರನು ಈರೆರಡು ಸಾ**
**ವಿರದ ಮುನ್ನೂರಾದ ಮೇಲ್ ನಾಲ್ಕಧಿಕ ಎಪ್ಪತ್ತು ॥ ೧೪ ॥**

**ರೂಪದಿಂ ವಿಜ್ಞಾನ ಮಯ ನೆಂ**
**ಬೀಪೆಸರಿನಿಂ ವಾಸುದೇವನು**
**ವ್ಯಾಪಿಸಿಹ ಮಹದಾದಿ ತತ್ವದಿ ತತ್ಪತಿಗಳೊಳಗೆ ।**

**ಈ ಪುರುಷ ನಾಮಕನ ಶುಭ ಸ್ವೇ**
**ದಾಪಳೆನಿಸಿ ರಮಾಂಬ ತಾ ಬ್ರ**
**ಹ್ಮಾಪರೋಕ್ಷಿಗಳಾದವರ ಲಿಂಗಾಂಗ ಕೆಡಿಸುವಳು ॥ ೧೫ ॥**

ಎರಡು ಕೋಶಗಳ ಒಳಗೆ, ಮತ್ತೆ ಎರಡು ಕೋಶಗಳ ಹೊರಗೆ ಸಂಕರ್ಷಣ ನಾಮಕ ಪರಮಾತ್ಮ ಐದು ಲಕ್ಷದ ಅರವತ್ತೆರಡು ಸಾವಿರದ ನೂರೇಳು ರೂಪಗಳನ್ನು ಧರಿಸಿ ಮನೋ ಮಯ ಎಂದೆನಿಸಿಕೊಳ್ಳುತ್ತಾನೆ ದೋಷದೂರನಾದ ವಾಸುದೇವನು ನಾಲ್ಕು ಸಾವಿರದ ಮುನ್ನೂರ ಎಪ್ಪತ್ತನಾಲ್ಕು ರೂಪಗಳಿಂದ ವಿಜ್ಞಾನಮಯನೆಂಬ ಈ ಹೆಸರಿ ನಿಂದ ಮಹದಾದಿ ತತ್ವದಲ್ಲಿಯೂ ಅದರ ಅಭಿಮಾನಿಗಳಲ್ಲಿಯೂ ವ್ಯಾಪಿಸಿದ್ದಾನೆ ಈ ಪುರುಷ ನಾಮಕ ವಾಸುದೇವನ ನಿರ್ಮಲವಾದ ಬೆವರೆಂದೆನಿಸಿ ಜಗನ್ಮಾತೆ ರಮಾದೇವಿ ಪರಮಾತ್ಮಾಪರೋಕ್ಷಿಗಳಾದವರ ಲಿಂಗಶರೀರವನ್ನು ನಾಶ ಪಡಿಸುತ್ತಾಳೆ

ಮೇಲಿನ ಎರಡು ಪದ್ಯಗಳಲ್ಲಿ ಮನೋಮಯ ವಿಜ್ಞಾನಮಯ ಕೋಶಗಳ ವಿವರವಿದೆ 'ಎಪ್ಪತ್ತು ರೂಪದಿಂ' ಎಂದು ಎರಡೂ ಪದ್ಯಗಳನ್ನು ಸೇರಿಸಿಕೊಳ್ಳಬೇಕು ಸಂಸ್ಕೃತದಲ್ಲಿ ಇದೇ ರೀತಿ ಶ್ಲೋಕಗಳನ್ನು ಸೇರಿಸಿ ಏಕಾನ್ವಯ ಮಾಡುವುದುಂಟು

**ಎರಡು ಕೋಶಗಳೊಳ ಹೊರಗೆ**

ಮೇಲುನೋಟಕ್ಕೆ ಇದು ಅಸಂಗತವಾಗಿ ಕಾಣುತ್ತದೆ ವ್ಯಾಖ್ಯಾನಕಾರರೂ ಸರಿಯಾಗಿ ಮಾರ್ಗದರ್ಶನ ಮಾಡುತ್ತಿಲ್ಲ ಇದು ಮನೋಮಯ ಕೋಶದ ಬಗ್ಗೆ ಹೇಳಿದ ಮಾತು ಮನೋಮಯ ಕೋಶ ಹಿಂದೆ ಹೇಳಿದ ಅನ್ನಮಯ ಪ್ರಾಣಮಯ ಎಂಬ ಎರಡು ಕೋಶಗಳ ಒಳಹೊರಗೆ ವ್ಯಾಪಿಸಿಲ್ಲ ಮುಂದೆ ಹೇಳುವ ವಿಜ್ಞಾನಮಯ ಆನಂದಮಯ ಎಂಬ ಎರಡು ಕೋಶಗಳ ಒಳಹೊರಗೂ ವ್ಯಾಪಿಸಿಲ್ಲ ಇತ್ತ ಅನ್ನಮಯ ಪ್ರಾಣಮಯ ಎಂಬ ಎರಡು ಕೋಶಗಳು, ಅತ್ತ ವಿಜ್ಞಾನಮಯ ಆನಂದಮಯ ಎಂಬ ಎರಡು ಕೋಶ ಗಳು, ನಡುವೆ ಮನೋಮಯ ಕೋಶವಿದೆ ಅದರಿಂದ ಅನ್ನಮಯ ಪ್ರಾಣಮಯ ಕೋಶಗಳ ಒಳಗೆ, ವಿಜ್ಞಾನಮಯ ಆನಂದಮಯಗಳ ಹೊರಗೆ, ಎರಡೂ ಸರಿ ಎಂಬ ಅಭಿಪ್ರಾಯದಿಂದ ಎರಡು ಕೋಶಗಳೊಳ ಹೊರಗೆ ಎಂದಿದ್ದಾರೆ, ಹೊರತು, ಯಾವ ಕೋಶಕ್ಕೂ ಒಳಹೊರಗೆ ಮನೋಮಯ ವ್ಯಾಪಿಸಿಲ್ಲ 'ಎರಡು ಕೋಶಗಳ' ಎಂಬ ಶಬ್ದಕ್ಕೆ ಆವೃತ್ತಿ ಮಾಡಿಕೊಂಡು ಬೇರೆ ಬೇರೆ ಎರಡು ಕೋಶಗಳೆಂದು ಅರ್ಥವಿಟ್ಟುಕೊಂಡು 'ಒಳಹೊರಗೆ' ಎಂಬುದಕ್ಕೆ ಅನ್ವಯ ಮಾಡಬೇಕು ಇಂಥ ವಿಲಕ್ಷಣ ಶಬ್ದ ಪ್ರಯೋಗ ಮಾಡುವುದು ಸರಿಯೆ? ಏಕೆ ಮಾಡಬೇಕು? ಎಂದರೆ ದಾಸರಾಯರು ಇಲ್ಲಿ ಮೂಲ ಪ್ರಮಾಣ ಶ್ಲೋಕವನ್ನು ಅಕ್ಷರಶಃ ಅನುವಾದ ಮಾಡಿದ್ದಾರೆ ಎನ್ನಬೇಕು ಉದಾಹರಣೆಗೆ ಗುರುವೃತ್ತದ ಪ್ರಮಾಣಶ್ಲೋಕ ಹೀಗಿದೆ-

ಕೋಶದ್ವಯಸ್ಯ ಬಾಹ್ಯಾಂತರ್ಗತಸ್ಯ ಪರಮಾತ್ಮನಃ ।
ಸಂಕರ್ಷಣಸ್ಯ ರೂಪಾಣಿ ಚಿಂತನೀಯಾನಿ ಚೇಶ್ವರ ॥
ದ್ವ್ಯತ್ತರೈಃ ಷಷ್ಟಿಸಾಹಸ್ರೈಃ ಸಪ್ತಾಧಿಕ ಶತಾಧಿಕೈಃ ।
ಪಂಚಲಕ್ಷಮಿತಾನ್ಯೇವ ವಾಸುದೇವಸ್ಯ ಚಾರ್ಭಕ ॥
ಚತುಃಸಪ್ತತಿಯುಕ್ತೈಶ್ಚ ತ್ರಿಶತೇತೈಃ ಸಹಸ್ರಕೈಃ ।
ಚತುರ್ಭಿಶ್ಚ ಸುರೂಪಾಣಿ ನ ವಿಸ್ಮರ ಕದಾಚನ ॥

ಇಲ್ಲಿ 'ಕೋಶದ್ವಯಸ್ಯ ಬಾಹ್ಯಾಂತಃ' ಎಂದಿದೆ ಇದರ ಅನುವಾದ, 'ಎರಡು ಕೋಶಗಳೊಳಹೊರಗೆ' ಎಂದು ಇದೇ ರೀತಿ ಪ್ರಕಾಶಸಂಹಿತೆಯಲ್ಲಿಯೂ ಹೇಳಿದೆ-

ಅಂತರ್ಬಹಿರ್ದ್ವಿಷಷ್ಟೀತ ಲಕ್ಷಪಂಚಕಸಂಖ್ಯಯಾ ।
ಸಪ್ತೋತ್ತರಶತಾತ್ಮೇಶೋ ಜಯಾಯಾಶ್ಚ ಮನೋಮಯಃ ॥
ಚತುಃಸಪ್ತತಿರೂಪಾತ್ಮಾ ತ್ರಿಶತಂ ತು ಚತುಷ್ಟಯಮ್ ।
ಸಹಸ್ರಾಣಾಂ ವಾಸುದೇವೋ ವಿಜ್ಞಾನಮಯ ಈರಿತಃ ॥

ಇಲ್ಲಿಯೂ 'ಅಂತರ್ಬಹಿಃ' 'ಒಳಹೊರಗೆ' ಎಂದಿದೆ

ಇಲ್ಲಿ ಇನ್ನೊಂದು ಸಮಸ್ಯೆ ಬರುತ್ತದೆ. ಪ್ರಾಣಮಯ ಮನೋಮಯ ಕೋಶಗಳ ನಡುವೆ ವಾಙ್ಮಯ ಶ್ರೋತ್ರಮಯ ಚಕ್ಷುರ್ಮಯ ಕೋಶಗಳೂ ಇವೆ ಆದರಿಂದ ಮನೋಮಯ ಕೋಶವು ವಿಜ್ಞಾನಮಯ ಆನಂದಮಯಗಳ ಹೊರಗೆ ಎನ್ನುವುದು ಸರಿಯಾದರೂ, ಅನ್ನಮಯ ಪ್ರಾಣಮಯಗಳ ಒಳಗೆ ಚಕ್ಷುರ್ಮಯ ಶ್ರೋತ್ರಮಯ ವಾಙ್ಮಯ ಕೋಶಗಳಿರುವುದರಿಂದ ಎರಡು ಕೋಶಗಳ ಒಳಗೆ ಎನ್ನುವುದು ಕೂಡಲಾರದು ಈ ಸಮಸ್ಯೆಗೆ ಹೀಗೆ ಪರಿಹಾರ ಹೇಳಬೇಕು- ಈ ಶ್ರೋತ್ರಮಯ ಮುಂತಾದ ಕೋಶಗಳು ಅಷ್ಟೊಂದು ಮುಖ್ಯವಲ್ಲ ನಾರಾಯಣಾದಿ ಪಂಚರೂಪಗಳ ಉಪಾಸನೆಗೆ ಆನಂದಮಯಾದಿ ಪಂಚಕೋಶಗಳು ಅಧಿಷ್ಠಾನವಾಗುವುದರಿಂದ ಅವೇ ಮುಖ್ಯವಾಗಿವೆ ಉಪನಿಷತ್ತಿನ ಶುದ್ಧಿಪ್ರಾರ್ಥನೆಯಲ್ಲಿಯೂ ಪಂಚಕೋಶಗಳೇ ಕಾಣುತ್ತವೆ-

ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ
ಮಾನಂದಮಯಮಾತ್ಮಾ ಮೇ ಶುದ್ಧ್ಯಂತಾಂ ಜ್ಯೋತಿರಹಂ
ವಿರಜಾ ವಿಪಾಪ್ಮಾ ಭೂಯಾಸಂ ಸ್ವಾಹಾ ॥

ವಿಜಯದಾಸರೂ ಸುಳಾದಿಯಲ್ಲಿ ಹೀಗೆ ಹೇಳುತ್ತಾರೆ-

ಅನ್ನಮಯ ಪ್ರಾಣಮಯ ಮನೋ ವಿ
ಜ್ಞಾನಮಯ ಆನಂದಮಯವೋ
ಇನಿತು ಪಂಚಕೋಶ ತನುವಿನೊಳಗೆ ಉಂಟು ॥

ಆದ್ದರಿಂದ ವಾಙ್ಮಯ ಮುಂತಾದ ಮೂರು ಕೋಶಗಳನ್ನು ಇತ್ತ ಪ್ರಾಣಮಯ ದಲ್ಲಿಯೋ ಅತ್ತ ಮನೋಮಯದಲ್ಲಿಯೋ ಅಂತರ್ಭಾವಗೊಳಿಸಿ ಪಂಚಕೋಶ ಗಳೆಂದೆ ಇಟ್ಟುಕೊಳ್ಳಬೇಕು ಆಗ ಅನ್ನಮಯ ಪ್ರಾಣಮಯಗಳೊಳಗ, ವಿಜ್ಞಾನಾನಂದ ಮಯಗಳ ಹೊರಗೆ ಮನೋಮಯವೆನ್ನುವುದು ಸರಿಯಾಗುತ್ತದೆ

**ಐದು ಸುಲಕ್ಷದರವತ್ತೆರಡು ಸಾವಿರದೇಳಧಿಕ ಶತ ರೂಪಗಳ ಧರಿಸಿ**

ಮನೋಮಯ ಕೋಶದಲ್ಲಿರುವ ಸಂಕರ್ಷಣ 5, 62, 107 ರೂಪಗಳಿಂದ ಅಲ್ಲಿ ನಿಯಾಮಕನಾಗಿದ್ದಾನೆ ಈ ಸಂಖ್ಯೆ 'ಸಂಕರ್ಷಣ' ನಾಮದಲ್ಲಿಯೆ ಅಡಗಿದೆ-

ಸ-7, ಂ-0, ಕ-1, ರು-2, ಷ-6, ಣ-5 'ಅಂಕಾನಾಂ ವಾಮತೋ ಗತಿಃ' ಎಂಬಂತೆ ಬಲದಿಂದ ಎಡಕ್ಕೆ ಓದಿದಾಗ 5, 62, 107 ಆಗುತ್ತದೆ

**ಈರೆರಡು ಸಾವಿರದ ಮುನ್ನೂರಾದ ಮೇಲ್ ನಾಲ್ಕಧಿಕ ಎಪ್ಪತ್ತು.**

ವಿಜ್ಞಾನಮಯ ಕೋಶದಲ್ಲಿರುವ ವಾಸುದೇವ, ತನ್ನ ನಾಮವೇ ಹೇಳುವಂತೆ, 4374 ರೂಪಗಳಿಂದ ನಿಯಾಮಕನಾಗಿದ್ದಾನೆ ವಾ-4, ಸು-7, ದೇ-3, ವಾ-4 ಬಲದಿಂದ ಎಡಕ್ಕೆ ಓದಬೇಕು 'ಟಾದಿನವ' ನಿಯಮದಲ್ಲಿ ದೇ-8 ಆಗಬೇಕು ಆದರೆ ಇಲ್ಲಿ 'ಟಾದಿ ಚತುಃ ತಾದಿ ಪಂಚ' ನಿಯಮವಿಟ್ಟುಕೊಳ್ಳಬೇಕು ಆಗ ದೇ-3 ಆಗುತ್ತದೆ ಪ್ರಮಾಣ ವಚನದಲ್ಲಿ ಹೇಳಿದ ಸಂಖ್ಯೆಯಲ್ಲಿ ಉಪಾಸ್ಯ ಭಗವದ್ರೂಪಗಳನ್ನು ನಾಮದೊಳಗೆ ತೋರಿಸುವುದಷ್ಟೇ ನಮ್ಮ ಕೆಲಸ, ಹೊರತು, ನಾಮದಲ್ಲಿ ನಾವು ಕಾಣಬಹುದಾದ ರೂಪ ಗಳನ್ನೆಲ್ಲ ಉಪಾಸನೆ ಮಾಡಿರೆಂದು ಹೇಳುವ ಅಧಿಕಾರ ನಮಗಿಲ್ಲ ಆದರಿಂದ ಸಂಖ್ಯಾ ನಿಯಮಗಳನ್ನು ಯಥಾಯೋಗ್ಯವಾಗಿ ಬದಲಿಸಿಕೊಳ್ಳಬೇಕಾಗುತ್ತದೆ ಎನ್ನುವುದು ದಾಸರಾಯರ ಅಭಿಪ್ರಾಯ

**ಮಹದಾದಿ ತತ್ವದಿ ತತ್ಪತಿಗಳೊಳಗೆ ವ್ಯಾಪಿಸಿ**

ಮನೋಮಯ ಕೋಶದಲ್ಲಿ ಮನಸು ಅಹಂಕಾರ ತತ್ವಗಳಿವೆ ಅವುಗಳಿಗೆ ಅಭಿಮಾನಿ ಗಳಾದ ಕಾಮ, ಇಂದ್ರ, ರುದ್ರರೂ ಅವರ ಪತ್ನಿಯರೂ ಇದ್ದಾರೆ ವ್ಯಾನನಾಮಕ ಮುಖ್ಯ ಪ್ರಾಣ ನಿಯಾಮಕ ಅವನಿಗೂ ಜಯಾಸಹಿತ ಸಂಕರ್ಷಣ ನಿಯಾಮಕ ಅನ್ನ ಉಂಡಾಗ, ಅದರಲ್ಲಿರುವ ಮನಸ್ತತ್ವ ಅಹಂಕಾರತತ್ವ ಭಾಗಗಳೂ ಅವುಗಳ ನಿಯಾಮಕ ರಾದ ಎಲ್ಲ ದೇವತೆಗಳ ಅಂಶಗಳೂ ಮನೋಮಯ ಕೋಶದಲ್ಲಿರುವ ತಮ್ಮ ಅಂಶಗಳೊಂದಿಗೆ ಸೇರಿ ಉಪಚಯ ಹೊಂದುತ್ತವೆ ಶರೀರಕ್ಕೆ ಆದರಿಂದ ಪುಷ್ಟಿ ವಿಜಯದಾಸರು ಸುಳಾದಿಯಲ್ಲಿ ಹಾಗೇ ಹೇಳಿದ್ದಾರೆ-

ಮರಳೆ ಮನಸು ಅಹಂಕಾರ ಮನೋಮಯ ।
ಬೆರಸಿಗೊಂಡಿಪ್ಪುದು ಉಪಚಯ ಕೊಡುತಲಿ ॥

ಜಗನ್ನಾಥದಾಸರೂ ಹೇಳಿದ್ದಾರ-

ಕಾಮೇಂದ್ರ ಶಿವ ರತೀಂದ್ರಾಣಿ ಪಾರ್ವತಿ ಮುಖ್ಯ

ರೀ ಮನೋಮಯಕಧಿಪರೆನಿಸುತಿಹರು ॥

ಇದೇ ರೀತಿ ವಿಜ್ಞಾನಮಯ ಕೋಶದಲ್ಲಿ ಮಹತ್ತತ್ವವಿದೆ ಅಭಿಮಾನಿ ಚತುರ್ಮುಖನಿದ್ದಾನೆ ಸಮಾನನಾಮಕ ಮುಖ್ಯಪ್ರಾಣ, ಮಾಯಾಸಹಿತ ವಾಸುದೇವರಿದ್ದಾರೆ ಉಂಡ ಅನ್ನದಲ್ಲಿಯೂ ಈ ಮಹತ್ತತ್ವ, ಹಾಗೂ ಅದರ ಅಭಿಮಾನಿ ಮತ್ತು ನಿಯಾಮಕರಿದ್ದಾರೆ ಅವರು ಅನ್ನರಸದಿಂದ ಬಂದು ವಿಜ್ಞಾನಮಯ ಕೋಶದಲ್ಲಿರುವ ತಮ್ಮ ಅಂಶಗಳೊಡನೆ ಸೇರಿ ಶರೀರಕ್ಕೆ ಉಪಚಯ ಉಂಟು ಮಾಡುತ್ತಾರೆ

ಇಲ್ಲಿ ಹರಿಕಥಾಮೃತಸಾರದಲ್ಲಿ 'ಮಹದಾದಿ ತತ್ವದಿ' ಎಂದಿದ್ದಾರೆ ಮಹದಾದಿ ಎಂದರೆ ಮಹತ್ತತ್ವ ಅವ್ಯಕ್ತಗಳೆಂದರ್ಥವಲ್ಲ ಹಾಗೆ ಹೇಳಿದರೆ ಮುಂದೆ ಆನಂದಮಯ ಕೋಶದಲ್ಲಿ ಹೇಳಬೇಕಾಗಿರುವ ಅವ್ಯಕ್ತವನ್ನು ಆನಂದಮಯ ಕೋಶದಲ್ಲಿ ಹೇಳುವುದು ಅಯುಕ್ತವಾದೀತು ಹಿಂದೆ ಮನೋಮಯ ಕೋಶದಲ್ಲಿ ಹೇಳಬೇಕಾಗಿದ್ದ ಮನಸ್ತತ್ವ ಅಹಂಕಾರತತ್ವಗಳನ್ನು ಹೇಳಿಲ್ಲವೆಂದು ನ್ಯೂನತೆಯೂ ಬಂದಿತು ಅದಕ್ಕಾಗಿ ಮಹದಾದಿ ಎಂದರ ಮಹತ್ತತ್ವ ಅಹಂಕಾರತತ್ವ ಮನಸ್ತತ್ವಗಳನ್ನಿಟ್ಟುಕೊಳ್ಳಬೇಕು ಮನೋಮಯ ವಿಜ್ಞಾನಮಯ ಕೋಶಗಳಲ್ಲಿ ಈ ಮೂರು ತತ್ವಗಳನ್ನು ಯಥಾಯೋಗ್ಯವಾಗಿ ಇಟ್ಟು ಕೊಳ್ಳಬೇಕು ಅಂದರೆ, ಮನೋಮಯದಲ್ಲಿ ಮನಸು, ಅಹಂಕಾರ ವಿಜ್ಞಾನಮಯದಲ್ಲಿ ಮಹತ್ತತ್ವ

**ಶುಭ ಸ್ವೇದಾವಳೆನಿಸಿ ರಮಾಂಬ**

ಅನಾದಿಕಾಲದಿಂದ ಜೀವರಿಗೆ ಅಂಟಿಕೊಂಡು ಬಂದಿರುವ ಲಿಂಗದೇಹವೆಂಬ ಶರೀರವು ಅಚ್ಛೇದ್ಯ ಅಭೇದ್ಯವಾಗಿದೆ ಎಷ್ಟೇ ಸ್ಥೂಲಶರೀರಗಳು ಹೊಸ ಬಟ್ಟೆಗಳಂತೆ ಬಂದು ಜೀರ್ಣವಾಗಿಯೋ ಶಸ್ತ್ರ ಘಾತಾದಿಗಳಿಂದಲೋ ಹೊರಟು ಹೋದರೂ ಲಿಂಗಶರೀರ ಹಾಗೇ ಇರುತ್ತದೆ ಭಗವಂತನ ಅಪರೋಕ್ಷ, ವಿರಜಾಸ್ನಾನಗಳಾದಾಗಲೇ ಅದನ್ನು ಭಗವಂತನ ಆಜ್ಞೆಯಂತೆ ರಮಾದೇವಿ ನಾಶಪಡಿಸಿ, ಸುಂದರವಾದ ಸಚ್ಚಿದಾನಂದಮಯವಾದ ಸ್ವರೂಪಶರೀರದಲ್ಲಿ ಆ ಸಾತ್ವಿಕರನ್ನು ಮುಕ್ತಿಮಂಟಪಕ್ಕೆ ಒಯ್ಯುತ್ತಾಳೆ ಹೀಗೆ ಅನಾದಿಲಿಂಗಶರೀರವನ್ನು ನಾಶ ಮಾಡುವ ಶಕ್ತಿ ಸರ್ವಶಕ್ತಳಾದ ರಮಾದೇವಿಗೆ ಮಾತ್ರ ಇದೆ ಆದರೆ ಆ ಶಕ್ತಿಯನ್ನು ಭಗವಂತ ವ್ಯಕ್ತ ಮಾಡಬೇಕಾಗುತ್ತದೆ ಅದಕ್ಕೆ ದೇವಿ ಭಗವಂತನ ಅಂಗಸಂಗದಲ್ಲಿ ಅವನ ಮೈಯ 'ಸ್ವೇದಾಪ' ಬೆವರ ಹನಿಯ ರೂಪದಿಂದ ಇಳಿದು ನೀರಾಗಿ ಹರಿದು ವಿರಜಾನದಿಯಾಗಿ ವೈಕುಂಠದ ಸುತ್ತಲೂ ಜಲದುರ್ಗವಾಗುತ್ತಾಳೆ ಸುಗಂಧ ಸುರಸ ಸ್ವರೂಪಳಾದ ಸಾಕ್ಷಾದ್ ದೇವಿಯು ಲೀಲೆ ಯಿಂದ ನದಿಯ ರೂಪದಲ್ಲಿ ಹರಿಯುವುದರಿಂದ ಸಾಮಾನ್ಯ ಜನರ ಬೆವರಿನಂತೆ ದುರ್ಗಂಧದ ಲೇಶವೂ ಅದರಲ್ಲಿಲ್ಲ ಅದಕ್ಕೇ 'ವಿ-ರಜಾ' ಎಂದು

ಹೆಸರು 'ರಜ' ಎಂದರೆ ಕೊಳೆ ಬೆವರೇ ಆದರೂ ಕೊಳೆ ಇಲ್ಲ! ಏಕೆ? 'ರಜ' ಎಂದರೆ ರಜೋಗುಣ, ಇದು ಉಪಲಕ್ಷಣ ಪ್ರಕೃತಿಯ ಸತ್ವರಜಸ್ತಮೋಗುಣಗಳು ಇಲ್ಲ, ಅದರಿಂದ 'ವಿ-ರಜ' ವಾದ ನದಿ ವಿರಜಾ ಎನಿಸಿದೆ ಈ ನದಿ ಬ್ರಹ್ಮಾಂಡದೊಳಗೆ ಧಾಮತ್ರಯದಲ್ಲಿರುವ ಚಿನ್ಮಯವಾದ ಶ್ರೀಭಾಗದ ಸುತ್ತಲೂ ಹರಿಯುತ್ತದೆ, ಹೊರಗೂ ಬ್ರಹ್ಮಾಂಡದ ಆಚೆ, ಸತ್ವಾವರಣ ಅವ್ಯಾಕೃತಾಕಾಶಗಳ ನಡುವೆ ಹರಿಯುತ್ತದೆ

ವೈಕುಂಠವರ್ಣನೆಯಲ್ಲಿ ಶ್ರೀ ವಾದಿರಾಜರು ಹೀಗೆ ಹೇಳಿದ್ದಾರೆ-

ಹರಿಯಂಗದೊಳಗಿದ್ದ ಬೆವರುದಕವಾಗಿ
ಸಿರಿದೇವಿ ತಾನೇ ಪೊರಮಟ್ಟು ।
ಪರಿವಳು ರಜಶಬ್ದಸೂಚಿತ ಗುಣತ್ರಯ
ವಿರದ ಕಾರಣ ವಿರಜೆ ಎನಿಪಳು ॥

ಲೆಕ್ಕವಿಲ್ಲದ ಮುಕ್ತಿಯೋಗ್ಯ ಜೀವರನು ಮು
ಸುಕ್ಕಿರ್ದ ಪ್ರಕೃತಿಯ ಕೆಡಿಸುವ ।
ಶಕ್ತಿಯ ವ್ಯಕ್ತಿಗೆ ಹರಿಯಂಗ ಸಂಗದು
ದಕ್ಕವಾದಳು ಲಕ್ಷ್ಮೀದೇವಿ ॥

ಪ್ರಕಾಶ ಸಂಹಿತೆಯಲ್ಲಿಯೂ ಹೀಗೆ ಹೇಳಿದೆ-

ಪ್ರಧಾನಪರಮವ್ಯೋಮ್ನೋರಂತರಾ ವಿರಜಾನದೀ ।
ದೇವ್ಯಾಂಗಸ್ವೇದಜನಿತತೋಯೈಃ ಪ್ರಸ್ರವಿತಾ ಶುಭಾ ॥

ಈ 'ಶುಭ' ಶಬ್ದವನ್ನೆ ದಾಸರಾಯರೂ ಇಲ್ಲಿ ಪ್ರಯೋಗಿಸಿದ್ದಾರೆ ಬ್ರಹ್ಮಾಂಡದಂತೆ ಪಿಂಡಾಂಡ ಅದರಿಂದ ಶರೀರದ ಒಳಗೂ ಇಪ್ಪತ್ತನಾಲ್ಕು ತತ್ವಗಳಿವೆ ಭಗವಂತನ ಧಾಮವಿದೆ ಅದರ ಸುತ್ತಲೂ ವಿರಜಾನದಿ ಹರಿಯುತ್ತದೆ ಉಂಡ ಅನ್ನದಲ್ಲಿಯೂ ಇವೆಲ್ಲ ಇವೆ ಅದರಿಂದ ಹಿಂದೆ ಹೇಳಿದ ಉಪಚಯ ಪ್ರಕ್ರಿಯೆಯನ್ನು ಇಲ್ಲಿಯೂ ತಿಳಿಯಬೇಕು ತಿಳಿದರೆ ಭೋಜನ ಯಜ್ಞವೆನಿಸುತ್ತದೆ

**ಐದು ಸಾವಿರ ನೂರ ಇಪ್ಪ**
**ತ್ತೈದು ನಾರಾಯಣನ ರೂಪವ**
**ತಾ ಧರಿಸಿಕೊಂಡನುದಿನದಲಾನಂದಮಯನೆನಿಪ ।**
**ಐದು ಲಕ್ಷದ ಮೇಲೆ ಎಂಬ**
**ತ್ತೈದು ಸಾವಿರ ನಾಲ್ಕು ಶತಗಳ**
**ಐದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು ॥ ೧೬ ॥**

ಶ್ರೀ ಹರಿ ತಾನು ಐದು ಸಾವಿರದ ನೂರಿಪ್ಪತ್ತೈದು ನಾರಾಯಣರೂಪಗಳನ್ನು ಧರಿಸಿಕೊಂಡು ಪ್ರತಿದಿನದಲ್ಲಿಯೂ ಆನಂದಮಯನೆನಿಸುತ್ತಾನೆ ಐದು ಕೋಶಗಳಿಗೆ ಸ್ವಾಮಿಯಾಗಿ ಅವುಗಳಲ್ಲಿ ಒಟ್ಟು ಐದು ಲಕ್ಷದ ಎಂಬತ್ತೈದು ಸಾವಿರದ ನಾನೂರು ರೂಪಗಳಿಂದ ಬ್ರಹ್ಮಾಂಡದಲ್ಲೆಲ್ಲ ತುಂಬಿರುತ್ತಾನೆ

**ಐದು ಸಾವಿರ ನೂರ ಇಪ್ಪತ್ತೈದು ನಾರಾಯಣನ ರೂಪವ**

'ನಾರಾಯಣ'ನ ನಾರಾಯಣ ನಾಮಕವಾದ ರೂಪಗಳು 5125 ಇವೆ. ಈ ಸಂಖ್ಯೆ 'ನಾರಾಯಣ' ನಾಮದಲ್ಲಿಯೆ ಅಡಗಿದೆ 'ಟಾದಿಚತುಸ್ತಾದಿ ಪಂಚ' ನಿಯಮದಂತೆ ನಾ=5, 'ಯಾದ್ಯಷ್ಟ' ನಿಯಮದಂತೆ ರಾ=2, ಅದೇ ನಿಯಮದಂತೆ ಯ=1, 'ಟಾದಿನವ' ನಿಯಮದಂತೆ ಣ=5 ಎಲ್ಲ ಸೇರಿದರೆ 5215 ಆಗುತ್ತದೆ 'ಅಂಕಾನಾಂ ವಾಮತೋ ಗತಿಃ' ಬಲದಿಂದ ಎಡಕ್ಕೆ ಸಂಖ್ಯೆಯನ್ನು ಒದಬೇಕು ಆಗ 5125 ಆಗುತ್ತದೆ

ಇಲ್ಲಿ ಕೇವಲ 'ಟಾದಿನವ' ನಿಯಮವನ್ನೇ ಇಟ್ಟುಕೊಂಡರೆ ನಾ=0, ಣ=5 ಆಗುವುದರಿಂದ 0215, ಅಂದರೆ ಎಡಕ್ಕೆ ಒದಿದಾಗ 5120 ಆಗುತ್ತದೆ ಕೇವಲ ಟಾದಿಚತುಸ್ತಾದಿ ಪಂಚ ನಿಯಮವನ್ನೇ ಇಟ್ಟುಕೊಂಡರೆ ನಾ=5, ಣ=0 ಆಗುವುದರಿಂದ 5210, ಅಂದರೆ, ಎಡಕ್ಕೆ ಓದಿದಾಗ 125 ಆಗುತ್ತದೆ ಇವು ಎರಡೂ ಸರಿಯಲ್ಲ 5125 ಆಗಬೇಕು ಗುರುವೃತ್ತದಲ್ಲಿ-

ಅನುಗ್ರಹಂ ವರ್ಣಯೇ ಕಿಂ ತತ್ವೇಶೇಷು ಮದಾದಿಷು ।
ಪಂಚವಿಂಶತ್ಯಧಿಕಶತ ಪಂಚಸಾಹಸ್ರಸಂಖ್ಯಕೈಃ ।
ನಾರಾಯಣ ಸ್ವರೂಪೈಶ್ಚ ಆನಂದಮಯ ಈರ್ಯತೇ ॥

'ನನ್ನಂಥ ತತ್ವದೇವತೆಗಳ ಮೇಲೆ ಶ್ರೀಹರಿಯ ಅನುಗ್ರಹ ಎಷ್ಟೆಂದು ಹೇಳಲಿ? 5125 ನಾರಾಯಣರೂಪಗಳಿಂದ ಅವನು ಆನಂದಮಯಕೋಶದಲ್ಲಿ ಆನಂದಮಯ ನೆನಿಸುತ್ತಾನೆ' ಎಂದು ಹೇಳಿದೆ ಆದರಿಂದ 'ತಾದಿ ಪಂಚ' ನಿಯಮದಂತೆ ನಾ=5, 'ಟಾದಿನವ' ನಿಯಮದಂತೆ ಣ=5 ಎಂದಿಟ್ಟುಕೊಂಡರೆ ಪ್ರಮಾಣವಚನ ವಿರೋಧವಿಲ್ಲ

**ತಾ ಧರಿಸಿಕೊಂಡು :**

'ತಾ ಧರಿಸಿಕೊಂಡು' ಎಂದರೆ ತಾನೇ ಧರಿಸಿಕೊಂಡು ತತ್ವದೇವತೆಗಳನ್ನು ಅನುಗ್ರಹಿಸುತ್ತಾನೆ ಪಂಚಕೋಶಗಳಲ್ಲಿರುವ ಇಪ್ಪತ್ತನಾಲ್ಕು ತತ್ವಗಳಿಗೆ ಅಭಿಮಾನಿಗಳಾದ ದೇವತೆಗಳು ತಮ್ಮ ತಮ್ಮ ಕಾರ್ಯಭಾರ ಮಾಡುತ್ತ ಎಲ್ಲ ಶರೀರಿಗಳನ್ನೂ, ವಿಶೇಷವಾಗಿ ಜ್ಞಾನಿಗಳಾದ ಉಪಾಸಕರನ್ನು ಅನುಗ್ರಹಿಸಬೇಕಾದರೆ ಶ್ರೀಹರಿ ಪಂಚಕೋಶಗಳಲ್ಲಿಯೂ ಅನೇಕಾನೇಕ ರೂಪಗಳಿಂದ ನೆಲೆಸಿ ಅವರನ್ನು ಅನುಗ್ರಹಿಸಬೇಕು ಅದಕ್ಕೆ ಸ್ವತಂತ್ರನಾದ ಅವನು ತಾನೇ ಆ ರೂಪಗಳನ್ನು ಧರಿಸುತ್ತಾನೆ, ಹೊರತು ಯಾರ ಪ್ರಭಾವಕ್ಕೂ ಮಣಿಯುವುದಿಲ್ಲ

**ಅನುದಿನದಲಾನಂದಮಯನೆನಿಪ**

5125 ನಾರಾಯಣನಾಮರೂಪಗಳಿಂದ ಯುಕ್ತನಾದ ನಾರಾಯಣ ಪ್ರತಿದಿನದಲ್ಲಿಯೂ ಅನ್ನರಸದ ಮೂಲಕ ಆನಂದಮಯ ಕೋಶವನ್ನು ಸೇರಿ ಅಲ್ಲಿ ಆನಂದಮಯನಾಮಕನಾಗಿ ನಿಯಾಮಕನಾಗಿರುತ್ತಾನೆ

'ತತುವ ವಿಭಾಗವ ಮಾಡಿ ವ್ಯಾನನೆಂಬೊ ಮಾರುತ ಸೇರಿಸುತ್ತಿಪ್ಪ' ಎಂದು ವಿಜಯದಾಸರ ಸುಳಾದಿಯಲ್ಲಿ ಹೇಳಿದಂತೆ ವ್ಯಾನನಾಮಕ ವಾಯುದೇವ ಅನ್ನರಸದಲ್ಲಿರುವ ಅವ್ಯಕ್ತ ತತ್ವವನ್ನು ಆನಂದಮಯ ಕೋಶಕ್ಕೂ, ಇತರ ತತ್ವಗಳನ್ನು ವಿಜ್ಞಾನಮಯ ಮುಂತಾದ ಕೋಶಗಳಿಗೂ ಸರಿಯಾಗಿ ಅಲ್ಲಿಗಲ್ಲಿಗೆ ತಂದು ಸೇರಿಸುತ್ತಾನೆ ಆಗ ಆ ತತ್ವಗಳಲ್ಲಿರುವ ನಾರಾಯಣಾದಿ ರೂಪಗಳೂ ಆಯಾ ಕೋಶಗಳಲ್ಲಿ ಬಂದು ಸೇರಿ ಅಲ್ಲಿಯೆ ಇರುವ ನಾರಾಯಣಾದಿ ರೂಪಗಳೊಂದಿಗೆ ಐಕ್ಯ ಹೊಂದುತ್ತವೆ ರಮಾ ಬ್ರಹ್ಮಾದಿ ತತ್ವದೇವತೆಗಳು ಆ ರೂಪಗಳನ್ನು ಅಲ್ಲಿ ಉಪಾಸನೆ ಮಾಡುತ್ತಾರೆ ಹೀಗೆ ಪ್ರತಿದಿನ ನಾವು ಅನ್ನ ಉಂಡಾಗ ಅನ್ನರಸದ ಮೂಲಕ ನಾರಾಯಣ ಆನಂದಮಯಕೋಶವನ್ನು ಸೇರಿ ಆನಂದಮಯ ನೆನಿಸುತ್ತಾನೆ ಇದನ್ನು ವಿಜಯದಾಸರ ಸುಳಾದಿ ಹೀಗೆ ಹೇಳುತ್ತದೆ—

ಪರಮಶೋಭಿತವಾದ ಅವ್ಯಕ್ತ ತತ್ವನಿಂ
ದಿರದೆ ಆನಂದಮಯದಲ್ಲಿ ಸೇರೋದು ಸ್ಥಿರವಕ್ಕು ।

ಅವ್ಯಕ್ತ ತತ್ವ ಆನಂದಮಯ ಕೋಶದಲ್ಲಿ ಸೇರುತ್ತದೆ ಏಕೆಂದರೆ, ಆನಂದಮಯಕೋಶ ವಾಗಿರುವುದು ಅವ್ಯಕ್ತತತ್ವದಿಂದ—

ಕಾಮಜನನಿ ತತ್ವದಿಂದ ಆನಂದಮಯವೋ ।

ಅಲ್ಲಿ ಅಭಿಮಾನಿನಿಯಾಗಿ ವಾಸವಾಗಿರುವವಳು ಮಹಾಲಕ್ಷ್ಮೀ—

ಸೋಮನೋದರೆ ಲಕುಮಿ ಆನಂದಮಯದಲ್ಲಿ
ಕೋಮಲ ನಡತೆಯಲ್ಲಿ ವಾಸವಕ್ಕು ।

**ಐದು ಲಕ್ಷದ ಮೇಲೆ ಎಂಬತ್ತೈದು ಸಾವಿರ ನಾಲ್ಕು ಶತ .**

ಅನ್ನಮಯ ಕೋಶದಲ್ಲಿ ಅನಿರುದ್ಧನಾಮಕ ರೂಪಗಳು 8251 ಪ್ರಾಣಮಯ ಕೋಶದಲ್ಲಿ ಪ್ರದ್ಯುಮ್ನನಾಮಕ ರೂಪಗಳು 5543, ಮನೋಮಯ ಕೋಶದಲ್ಲಿ ಸಂಕರ್ಷಣನಾಮಕ ರೂಪಗಳು 5,62, 107, ವಿಜ್ಞಾನಮಯಕೋಶದಲ್ಲಿ ವಾಸುದೇವನಾಮಕ ರೂಪಗಳು 4374, ಆನಂದಮಯ ಕೋಶದಲ್ಲಿ ನಾರಾಯಣನಾಮಕ ರೂಪಗಳು 5125 ಒಟ್ಟು 5, 85, 400 ರೂಪಗಳಾಗುತ್ತವೆ

**ಐದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು**

ಬ್ರಹ್ಮಾಂಡದಲ್ಲಿ ಎಲ್ಲೆಡೆ ಪ್ರತಿ ಶರೀರದಲ್ಲಿ ಪಂಚಕೋಶಗಳೊಳಗೆ 5,85,400 ರೂಪಗಳಿಂದ ನಿಯಾಮಕನಾಗಿ ನೆಲೆಸಿದ್ದಾನೆ, ಶ್ರೀಹರಿ ಐದು ಕೋಶಾತ್ಮಕ ಎಂದರೆ ಐದು ಕೋಶಗಳಿಗೆ ನಿಯಾಮಕ ಎಂದರ್ಥ 'ತನ್ನಿಯಾಮಕ' ನನ್ನು 'ತದಾತ್ಮಕ' ಎಂದು ಕರೆಯುವುದು ರೂಢಿಯಾಗಿರುವುದರಿಂದ ಹಾಗೆ ಹೇಳಿದೆ ಐದು ಕೋಶ ನಿಯಾಮಕ ಎಂದರೆ ಐದು ಕೋಶಗಳಲ್ಲಿ ನಿಂತು ಅವುಗಳ ಕಾರ್ಯಗಳನ್ನು ನಡೆಸುವವನು ಕಾರ್ಯ ನಡೆಸುವ ತತ್ತ್ವದೇವತೆಗಳಲ್ಲಿ ಪ್ರೇರಕನಾಗಿರುವವನು ಹೀಗ ಉಪಾಸನೆ ನಡೆಸುವವರಿಗೆ ಕರುಣೆಯಿಂದ ಫಲ ನೀಡುವವನು ಅವನು ಕರುಣಾಕರ ಉಪಾಸನೆ ಮಾಡುವವರಿಗೆ ಕರ್ಮಬಂಧದಿಂದ ಮುಕ್ತಿ ನೀಡುವುದಕ್ಕಾಗಿಯೆ ಪಂಚಕೋಶಗಳಲ್ಲಿ ನೆಲೆಸಿದ್ದಾನೆ ವಿಜಯದಾಸರ ಸುಳಾದಿ ಹೇಳುತ್ತದೆ—

ಈ ಪರಿ ತತ್ವಭಾಗದಲ್ಲಿ ವಿ ।
ವರಗಳ ತಿಳಿವುದು ಸ್ಥೂಲಸೂಕ್ಷ್ಮವೆಂದು ।
ಪುರುಷೋತ್ತಮ ನಮ್ಮ ವಿಜಯವಿಟ್ಠಲರೇಯ ।
ಕರುಣಾಕರನಾಗಿ ಸರ್ವರೊಳಗೆ ಇಪ್ಪ ॥

ಜಗನ್ನಾಥದಾಸರ ಕೀರ್ತನೆ ಇದನ್ನು ಸ್ಪಷ್ಟಗೊಳಿಸುತ್ತದೆ-

ಪಂಚಕೋಶ ವಿವರ ತಿಳಿದ ಮಹಾತ್ಮರಿಗೆ
ಕಿಂಚಿತಾದರು ದೋಷ ಬರಲರಿಯದು ।
ಪಂಚಮಾರ್ಗಣ ಪಿತ ಜಗನ್ನಾಥವಿಟ್ಠಲನು
ಸಂಚಿತಾಗಾಮಿ ಕರ್ಮಗಳ ಬಿಡಿಸುವನು ॥

**ನೂರ ಒಂದು ಸುರೂಪದಿಂ ಶಾಂ**
**ತೀರಮಣ ತಾನನ್ನನೆನಿಪ್ಪೆ**
**ನೂರು ಮೇಲ್ ಮೂರಧಿಕ ದಶ ಪ್ರಾಣಾಖ್ಯ ಪ್ರದ್ಯುಮ್ನ ।**
**ತೋರುತಿಹನ್ಯೆವತ್ತು ಐದು ವಿ**
**ಕಾರ ಮನದೊಳು ಸಂಕರುಷಣ್ಮೆ**
**ನೂರು ಚತುರಾಶೀತಿ ವಿಜ್ಞಾನಾತ್ಮ ವಿಶ್ವಾಖ್ಯ** ॥ ೧೭ ॥

ಶಾಂತಿಪತಿ ಅನಿರುದ್ಧನು ನೂರೊಂದು ರೂಪದಿಂದ ಅನ್ನನೆನಿಸುತ್ತಾನೆ ಪ್ರದ್ಯುಮ್ನನು ಐನೂರ ಹದಿಮೂರು ರೂಪದಿಂದ ಪ್ರಾಣನೆನಿಸುತ್ತಾನೆ

ಸಂಕರ್ಷಣನು ಐವತ್ತೈದು ರೂಪದಿಂದ ಮನಸ್ಸಿನಲ್ಲಿ ತೋರಿಸಿಕೊಳ್ಳುತ್ತಾನೆ

ವಾಸುದೇವನು ಐನೂರ ಎಂಬತ್ತನಾಲ್ಕು ರೂಪದಿಂದ ವಿಜ್ಞಾನನೆನಿಸುತ್ತಾನೆ

**ನೂರ ಒಂದು ಸುರೂಪದಿಂ ಶಾಂತೀರಮಣ ತಾನನ್ನನೆನಿಪ**

ಶಾಂತೀರಮಣನಾದ ಅನಿರುದ್ಧ ನೂರೊಂದು ರೂಪದಿಂದ ಅನ್ನನೆನಿಸುತ್ತಾನೆ ಇದು ಹೇಗೆ? ಹಿಂದೆ 8251 ರೂಪಗಳಿಂದ ಅನಿರುದ್ಧ ಅನ್ನಮಯದಲ್ಲಿ ಇದ್ದಾನೆ ಎಂದಿದೆ ತಾನೆ? ಈ ಪ್ರಶ್ನೆಗೆ ವ್ಯಾಖ್ಯಾನಕಾರರ ಸಮಾಧಾನ ಹೀಗಿದೆ-

'ಹಿಂದೆ ಹೇಳಿದುದು ಖಂಡರೂಪ ಈಗ ಹೇಳುವುದು ಅಖಂಡರೂಪ' -ಇದು ಭಾವಪ್ರಕಾಶಿಕೆಯಲ್ಲಿ ಹೇಳಿದ ಸಮಾಧಾನ ಇಲ್ಲಿ 8251 ಖಂಡರೂಪಗಳಿಂದ 101 ಅಖಂಡ ರೂಪಗಳಾಗುವುದು ಹೇಗೆಂಬುದು ತಿಳಿಯುವುದಿಲ್ಲ

'ಹಿಂದೆ ಹೇಳಿದ್ದು ಅನಿರುದ್ಧ ರೂಪಗಳು ಈಗ ಹೇಳುತ್ತಿರುವುದು ಪಂಚಕೋಶ ನಾಮಕ ಅಂದರೆ, ಅನ್ನಮಯನಾಮಕ ರೂಪಗಳು'

-ಇದು ಭಾವದರ್ಪಣಕಾರರ ಸಮಾಧಾನ ಆದರೆ ಅನ್ನಮಯ ನಾಮದಲ್ಲಿ ಗರ್ಭಿತವಾದ ಸಂಖ್ಯೆ ಅ= 1, ನ್ನ= 5+ 5= 10 (ಎಡಕ್ಕೆ ಓದಿದರೆ, 01) ಮ= 5, ಯ= 1 ಈಗ 10 15 1ನ್ನು ಎಡಕ್ಕೆ ಓದಿದರೆ 15101 ಆಗುತ್ತದೆ ಹರಿಕಥಾಮೃತಸಾರ ಹೇಳುವಂತೆ 101 ಅಲ್ಲ ಅನ್ನಮಯ ನಾಮದಲ್ಲಿ 15, 101 ಮತ್ತು ಅನಿರುದ್ಧನಾಮದಲ್ಲಿ 8251 ಎಂದು ಎರಡು ಸಂಖ್ಯೆಗಳು ಸಿಗುತ್ತಿರುವಾಗ ಅನ್ನಮಯ ಅನಿರುದ್ಧ ಎಷ್ಟು ರೂಪಗಳಿಂದ ಅನ್ನಮಯ ಕೋಶದಲ್ಲಿ ಇರುತ್ತಾನೆ ಎಂಬ ಪ್ರಶ್ನೆಗೆ ಎರಡೂ ಸಂಖ್ಯೆಗಳನ್ನು ಹೇಳಬಹುದೆ? ಅಥವಾ ಎರಡನ್ನೂ ಬಿಟ್ಟು 101 ಎಂಬ ಮೂರನೆ ಸಂಖ್ಯೆಯನ್ನು ಹೇಳಬೇಕೆ?

'ಪೂರ್ವದಲ್ಲಿ ಕೋಶಾಂತರ್ಗತ ಭಗವಂತನ ವಿಚಾರ ಹೇಳಿದರು ಈಗ ಆಯಾ ಕೋಶಾಕಾರದಿಂದ ಇರತಕ್ಕ ಭಗವದ್ರೂಪಗಳ ವಿಚಾರವನ್ನು ಹೇಳುತ್ತಾರೆ' ಇದು ಸಂಕರ್ಷಣತೀರ್ಥರ ವ್ಯಾಖ್ಯಾನ ಆದರೆ ಕೋಶಾಂತರ್ಗತ ಕೋಶನಿಯಾಮಕ ಭಗವದ್ರೂಪಗಳು ಕೋಶಾಕಾರದಿಂದ ತಾನೆ ಇರುತ್ತವೆ?

ವ್ಯಾಸದಾಸ ಸಿದ್ಧಾಂತ ಕೌಮುದಿಯಲ್ಲಿ ಹೀಗೆ ಸಮಾಧಾನ ಉಕ್ತವಾಗಿದೆ-

'ಏವಂ ಪಂಚಕೋಶವ್ಯಾಪ್ತಿಮುಪಪಾದ್ಯ ಅಧುನಾ ತತ್ಕೋಶಮೂಲಾನ್ನಾದಿಸ್ಥಿತ ರೂಪಾಣ್ಯಾಹ।'

'ಹಿಂದೆ ಪಂಚಕೋಶಗತ ಭಗವದ್ರೂಪಗಳನ್ನು ಹೇಳಿ ಇದೀಗ ಈ ಕೋಶಗಳಿಗೆ ಮೂಲವಾದ ಅನ್ನ ಮೊದಲಾದವುಗಳಲ್ಲಿರುವ ಭಗವದ್ರೂಪಗಳನ್ನು ಹೇಳುತ್ತಾರೆ'

ಇದರ ಅಭಿಪ್ರಾಯ ಹೀಗೆ-

ನಾವು ಉಣ್ಣುವ ಅನ್ನದಲ್ಲಿ ಐದು ಬಗೆಯ ಸಾರಭಾಗವಿದೆ ಅನ್ನ, ಪ್ರಾಣ, ಮನಸ್, ವಿಜ್ಞಾನ, ಆನಂದ ಎಂದು 'ಅನ್ನ' ಎಂಬ ಸಾರಭಾಗದಿಂದ ಅನ್ನಮಯಕೋಶಕ್ಕೆ ಪುಷ್ಟಿ 'ಪ್ರಾಣ' ಎಂಬ ಸಾರಭಾಗದಿಂದ ಪ್ರಾಣಮಯ ಕೋಶಕ್ಕೆ ಪುಷ್ಟಿ ಹೀಗೇ ಮನ ವಿಜ್ಞಾನ ಆನಂದಗಳಿಂದ ಮನೋಮಯ ವಿಜ್ಞಾನಮಯ ಆನಂದಮಯ ಕೋಶಗಳಿಗೆ ಪುಷ್ಟಿ ಅನ್ನಮಯಕೋಶವೆಂದರೆ ಹೊರಗೆ ಕಾಣುವ ಸ್ಥೂಲ ಶರೀರವಲ್ಲ ಅದರೊಳಗಿರುವ ಸೂಕ್ಷ್ಮವಾದ ಬೇರೇ ಶರೀರ ಅನ್ನಮಯ ಕೋಶ ಶಾಂಕರ ರಾಮಾನುಜ ದರ್ಶನಗಳಲ್ಲಿ ಸ್ಥೂಲಶರೀರವೆ ಅನ್ನಮಯಕೋಶವೆಂದು ಸ್ವೀಕರಿಸಲಾಗಿದೆ ಪ್ರಾಣವಾಯು, ಮನಸ್ಸು, ಅದರ ಕಾರ್ಯವಾದ ಬುದ್ಧಿ ಮತ್ತು ಅದರಲ್ಲಿ ಉಂಟಾಗುವ ವೈಷಯಿಕ ಸುಖ ಇವೇ ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಕೋಶಗಳೆಂದೂ ಹೇಳಿದೆ ವಸ್ತುತಃ ಅನ್ನವೆಂದರೆ ಪೃಥಿವೀ, ಗಂಧ, ಘ್ರಾಣ, ಪಾಯು, ಅಪ್, ರಸ, ರಸನಾ, ಉಪಸ್ಥ ಎಂಬ ಎಂಟು ತತ್ವಗಳಿಂದಾಗಿರುವ ಅನ್ನರಸ ಪ್ರಾಣವೆಂದರೆ ತೇಜ, ರೂಪ, ಚಕ್ಷುಸ್, ಪಾದ, ವಾಯು, ಸ್ಪರ್ಶ, ತ್ವಕ್, ಪಾಣಿ, ಆಕಾಶ, ಶಬ್ದ, ಶ್ರೋತ್ರ, ವಾಕ್ ಎಂಬ ಹನ್ನೆರಡು ತತ್ವಗಳಿಂದಾಗಿರುವ ಅನ್ನರಸ ಮನಸ್ ಎಂದರೆ ಮನಸ್ತತ್ವ ಅಹಂಕಾರ ತತ್ವಗಳಿಂದಾದ ಅನ್ನರಸ ವಿಜ್ಞಾನವೆಂದರೆ ಮಹತ್ತತ್ವದಿಂದಾದ ಅನ್ನರಸ ಆನಂದವೆಂದರೆ ಅವ್ಯಕ್ತತತ್ವದಿಂದಾದ ಅನ್ನರಸ

ತತ್ವವಿಭಾಗವ ಮಾಡಿ ವ್ಯಾನನೆಂಬೊ ಮಾ
ರುತ ಸೇರಿಸುತಿಪ್ಪನಲ್ಲಿಗಲ್ಲಿಗೆ ಒಯ್ದು ॥

ಎಂದು ವಿಜಯದಾಸರು ಹೇಳುವಂತೆ ವ್ಯಾನವಾಯು ಆಯಾ ಅನ್ನರಸಗಳನ್ನು ಆಯಾ ಕೋಶಗಳಿಗೆ ಒಯ್ದು ಸೇರಿಸುತ್ತಾನೆ ಅದಕ್ಕಾಗಿಯೇ ಈ ಭೋಜನ ಯಜ್ಞ

ಈಗ ಹಿಂದಿನ ಪ್ರಶ್ನೆಗೆ ಸಮಾಧಾನ ಬಂದಿತು 'ಅನ್ನ' ಎಂಬ ಸಾರಭಾಗದಲ್ಲಿರುವ ಭಗವದ್ರೂಪಗಳು 101. ಹಿಂದೆ ಹೇಳಿದ ಅನ್ನಮಯಕೋಶ ನಿಯಾಮಕ ಅನಿರುದ್ಧ ರೂಪಗಳು 8251 ಈಗ ವಿರೋಧವಿಲ್ಲ ಅನ್ನನಿಯಾಮಕ ಅನ್ನನಾಮಕ ಭಗವದ್ರೂಪ ಗಳ ಸಂಖ್ಯೆ 'ಅನ್ನ' ನಾಮದಲ್ಲಿಯೂ ಅನ್ನಮಯಕೋಶನಿಯಾಮಕ ಅನಿರುದ್ಧನಾಮಕ ಭಗವದ್ರೂಪಗಳ ಸಂಖ್ಯೆ ಅನಿರುದ್ಧ ನಾಮದಲ್ಲಿಯೂ ಗರ್ಭಿತವಾಗಿದೆ

'ಅನ್ನ' ಎಂಬಲ್ಲಿ ಅ= 1, 'ನ್ನ' ಎಂಬಲ್ಲಿ ಎರಡು ನಕಾರಗಳು, ಮೊದಲಿನ ನಕಾರಕ್ಕೆ 'ಟಾದಿನವ' ನಿಯಮದಂತೆ ಶೂನ್ಯಸಂಖ್ಯೆ ಎರಡನೆ ನಕಾರಕ್ಕೆ 'ಟಾದಿ ಚತುಸ್ತಾದಿ ಪಂಚ' ನಿಯಮದಂತೆ 1 ಎಂಬ ಸಂಖ್ಯೆ ಏಕೆಂದರೆ 'ಅದ್' ಧಾತುವಿನ ಮೇಲೆ 'ತ' ಪ್ರತ್ಯಯ ಬಂದಾಗ ಆ ತಕಾರ ನಕಾರವಾಗಿ ಪರಿಣಮಿಸಿದ್ದರಿಂದ ಮೂಲತಃ ಅದು ತಕಾರವೆ ಈಗ ಸಿಗುವ ಸಂಖ್ಯೆ 101, ಇದನ್ನು ಹೇಗೆ ಓದಿದರೂ 101 ಆಗುತ್ತದೆ

'ಏಕೋತ್ತರಶತಾತ್ಮಾऽನ್ನೇऽನಿರುದ್ಧಃ'

'ಏಕೋತ್ತರಶತೋಪೇತರೂಪೈಃ ಶಾಂತಿಮನೋರಮಃ।
ಅನ್ನಸ್ಥತ್ವಾದನ್ನನಾಮಾ'

ಎಂಬ ಪ್ರಮಾಣವಚನಗಳು ಹೇಳುವಂತೆ 'ಅನ್ನ' ನಾಮದಲ್ಲಿ 101 ಎಂಬ ಸಂಖ್ಯೆಯನ್ನು ಹೇಗಾದರೂ ನಾವು ಕಂಡುಕೊಳ್ಳಬೇಕು

ಅ= 1, 'ನ್ನ' ಎಂದರೆ (ನ+ನ) 'ತಾದಿ ಪಂಚ' ನಿಯಮ ದಂತೆ ಎರಡು ನಕಾರಗಳಿಂದ 5+5 ಎಂದರೆ, ಹತ್ತು ಈ ಸಂಖ್ಯೆಯನ್ನು ಎಡಕ್ಕೆ ಇಟ್ಟುಕೊಂಡು ಅಕಾರದ 1 ಎಂಬ ಸಂಖ್ಯೆಯನ್ನು ಜೊತೆಗೆ ಇಟ್ಟರೆ 101 ಆಗಬಹುದು

ಈಗ ಹರಿಕಥಾಮೃತಸಾರದಲ್ಲಿ ನೂರ ಒಂದು ಸುರೂಪದಿಂ ಶಾಂತೀರಮಣ ತಾನು 'ಅನ್ನಮಯ' ನೆನಿಪ ಎನ್ನದೆ 'ಅನ್ನ' ನೆನಿಪ ಎಂದು ಹೇಳಿದುದು ಅರ್ಥಪೂರ್ಣವಾಗಿದೆ ಇದೇ ರೀತಿ ಮುಂದೆಯೂ 'ಪ್ರಾಣಾಖ್ಯ', 'ಮನ' ದೊಳು, 'ವಿಜ್ಞಾನಾಖ್ಯ' ಎಂದು ಹೇಳುತ್ತಾರೆ, ಹೊರತು, 'ಪ್ರಾಣಮಯ, ಮನೋಮಯ, ವಿಜ್ಞಾನಮಯ' ಎನ್ನುತ್ತಿಲ್ಲ

**ಐನೂರಮೇಲ್ ಮೂರಧಿಕದಶ ಪ್ರಾಣಾಖ್ಯ**

ಹಿಂದೆ ಹೇಳಿದಂತೆ ಅನ್ನದಲ್ಲಿರುವ 'ಪ್ರಾಣ' ಎಂಬ ಸಾರಭಾಗದಲ್ಲಿ ನಿಯಾಮಕ ವಾದ ಪ್ರಾಣನಾಮಕ ಭಗವದ್ರೂಪಗಳ ಸಂಖ್ಯೆ 513 ಎನ್ನುತ್ತಿದ್ದಾರೆ ಏಕೆಂದರೆ 'ಪ್ರಾಣ' ಶಬ್ದ 'ಪ್ರ+ ಅನ' ಎಂದು ಎರಡು ಶಬ್ದಗಳು ಸೇರಿ ಉಂಟಾದ ಶಬ್ದ ಅದರಿಂದ 'ಪ್ರ' ಎಂಬುದು 'ಪ,ರ' ಅಕ್ಷರಗಳು ಸೇರಿರುವ ಸಂಧ್ಯಕ್ಷರವಾದ್ದರಿಂದ 'ಪಾದಿ ಪಂಚ, ಯಾದ್ಯಷ್ಟ' ನಿಯಮಗಳಂತೆ 1+2=3, ಅ= 1, ನ=5 ಇದನ್ನು ಎಡಕ್ಕೆ ಓದಿದರೆ 513 ಆಗುತ್ತದೆ

'ಶತಪಂಚಕಂ ತ್ರಯೋದಶಾಧಿಕಂ ಭೂತ್ವಾ ಪ್ರಾಣೇ।'

'ತ್ರ್ಯಧಿಕೈರ್ದಶಭಿರ್ಯುಕ್ತೈಃ ಶತೈಃ
ಪಂಚಾತ್ಮಕೈಃ ಪ್ರಾಣೇ ಪ್ರದ್ಯುಮ್ನೋऽಯಂ ವಿರಾಜತೇ।'

ಎಂಬ ವಚನಾನುಸಾರ ಈ ಸಂಖ್ಯೆಯನ್ನಿಟ್ಟುಕೊಳ್ಳಬೇಕು 'ಪ್ರದ್ಯುಮ್ನೋऽಯಂ ವಿರಾಜತೇ' ಎಂಬುದನ್ನೇ 'ಪ್ರದ್ಯುಮ್ನ ತೋರುತಿಹನು' ಎನ್ನಲಾಗಿದೆ

**ಐವತ್ತ ಐದು ವಿಕಾರ ಮನದೊಳು**

ಇಲ್ಲಿ ಮನಸ್ಸನ್ನು ವಿಕಾರ ಮನಸ್ಸೆಂದುದು ಅರ್ಥಪೂರ್ಣವಾಗಿದೆ ನಮ್ಮ ಮನಸ್ಸೆಂಬ ಇಂದ್ರಿಯಕ್ಕೆ ಕಾಮಕ್ರೋಧಾದಿ ವಿಕಾರಗಳಿವೆ ಹೊರತು ಮನಸ್ಸೇ ವಿಕಾರವಲ್ಲ ಅದು ಅಹಂಕಾರ ತತ್ವದಿಂದ ಸೃಷ್ಟಿಕಾಲದಲ್ಲಿ ಉಪಚಯ ಹೊಂದುತ್ತದೆ ಹೊರತು ಹೊಸದಾಗಿ ಹುಟ್ಟುವುದಿಲ್ಲ ಸಾಂಖ್ಯರು ಮನಸ್ಸನ್ನು ಅಹಂಕಾರ ತತ್ವದ ವಿಕಾರ ಎಂದರೂ ನಾವು ಹಾಗೆ ಹೇಳುವುದಿಲ್ಲ

ಅದರಿಂದ ವಿಕಾರ ಮನಸ್ಸೆಂದರೆ 'ಓಷಧೀಭ್ಯೋಽನ್ನಂ' ಎಂಬಂತೆ ಸಸ್ಯಗಳ ಪರಿಣಾಮರೂಪವಾದ ಅನ್ನದ ಒಂದು ಸಾರಭಾಗ ಇದು ಮನೋಮಯ ಕೋಶಕ್ಕೆ ಪುಷ್ಟಿ ನೀಡುತ್ತದೆ ಇದರಲ್ಲಿ ಭಗವದ್ರೂಪಗಳು ಐವತ್ತೈದು

'ಪಂಚೋತ್ತರೈರ್ವಿಕಾರೇ ತು ಪಂಚಾಶದ್ಭಿರ್ಮನಸ್ಯುತ'

ಎಂದು ಪ್ರವೃತ್ತವಚನ 'ವಿಕಾರ' ಎಂದು ಮನಸ್ಸನ್ನು ವರ್ಣಿಸಿದೆ ವಿಕಾರ ಮನಸ್ಸಿನಲ್ಲಿ ಐವತ್ತೈದು ರೂಪಗಳಿಂದ ಸಂಕರ್ಷಣನಿರುತ್ತಾನೆ ಎಂದಿದೆ-

'ಸಂಕರ್ಷಣೋಽಪಿ ಭಗವಾನಾಸ್ತೇ ಕಲ್ಪತರುರ್ನೃಣಾಮ್ ।'

'ಮನ' ಎಂಬ ನಾಮದಲ್ಲಿ ಮ=5, ನ=5 ಇದನ್ನು ಹೇಗೆ ಓದಿದರೂ 55 ಸಂಖ್ಯೆ ಸಿಗುತ್ತದೆ ಇದನ್ನೇ ಹರಿಕಥಾಮೃತಸಾರ ಹೇಳುತ್ತಿದೆ

**ಐನೂರು ಚತುರಾಶೀತಿ ವಿಜ್ಞಾನಾತ್ಮ ವಿಶ್ವಾಖ್ಯ·**

'ವಿಜ್ಞಾನಾತ್ಮ' ಎಂದರೆ ವಿಜ್ಞಾನರೂಪ 'ವಿಜ್ಞಾನ' ಎಂಬ ಅನ್ನದ ಸಾರಭಾಗದಲ್ಲಿ ವಿಜ್ಞಾನರೂಪದಿಂದ ವಿಜ್ಞಾನನಾಮಕನಾಗಿ ವಾಸುದೇವ ನಿಯಾಮಕನಾಗಿದ್ದಾನೆ ವಿಜ್ಞಾನನಾಮಕರೂಪಗಳು ಎಷ್ಟೆಂದು ವಿಜ್ಞಾನ ನಾಮವೆ ಹೇಳುತ್ತದೆ-

ವಿ=4, ಜ್ಞಾ= ಜ+ಞ= 3+5=8, ನ=5, ಎಡಕ್ಕೆ ಓದಿದರೆ 584 ಇಲ್ಲಿ 'ಕಾದಿ ನವ' ನಿಯಮವಿಟ್ಟುಕೊಂಡಿಲ್ಲ 'ಚಾದಿ ಪಂಚ' ಎಂದಿಟ್ಟುಕೊಳ್ಳಲಾಗಿದೆ

'ಚತುರಶೀತಿ' ಎಂಬತ್ತನಾಲ್ಕು ಛಂದಸ್ಸಿಗಾಗಿ ದೀರ್ಘ ಮಾಡಿ ಚತುರಾಶೀತಿ ಎಂದಿದೆ

'ವಿಶ್ವಾಖ್ಯ' ಎಂದರೆ ವಿಶ್ವನಾಮಕನಲ್ಲ, ಸರ್ವನಾಮಕ, ಸರ್ವಶಬ್ದವಾಚ್ಯನಾದ ವಾಸುದೇವ, ವಿಜ್ಞಾನದಲ್ಲಿ ವಿಜ್ಞಾನರೂಪದಿಂದ ಇದ್ದಾನೆ 'ತುರ್ಯಾಖ್ಯ' ಎಂದು ಪಾಠವಿರುತ್ತಿದ್ದರೆ ಸ್ಪಷ್ಟವಿರುತ್ತಿತ್ತು

ವಿಜ್ಞಾನದಲ್ಲಿದ್ದು ವಿಜ್ಞಾನನಾಮಕನಾದ ಹರಿಯೆ ವಿಜ್ಞಾನಮಯ ಕೋಶವನ್ನು ಸೇರಿದಾಗ 'ವಾಸುದೇವ' ನಾಮಕನಾಗುತ್ತಾನೆ ವಿಜ್ಞಾನಮಯನಾಮಕನೂ ಆಗುತ್ತಾನೆ, ಸರ್ವಶಬ್ದವಾಚ್ಯನಾದ್ದರಿಂದ ಇದು ಸರಿಯೆ ಎಂದು ಸೂಚಿಸಲು 'ವಿಶ್ವಾಖ್ಯ' ಸರ್ವಶಬ್ದ ವಾಚ್ಯ ಎನ್ನಲಾಗಿದೆ ಎಂದು ಅಭಿಪ್ರಾಯವನ್ನು ಊಹಿಸಬೇಕು

**ಮೂರು ಸಾವಿರದರ್ಧಶತ ಮೇ**
**ಲೀರಧಿಕ ರೂಪಗಳ ಧರಿಸಿ ಶ**
**ರೀರದೊಳಗಾನಂದಮಯ ನಾರಾಯಣಾಹ್ವಯನು ।**

**ಈರೆರಡು ಸಾವಿರದ ಮೇಲ್ ಮು**
**ನ್ನೂರು ಐದು ಸುರೂಪದಿಂದಲಿ**
**ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ** || ೧೮ ||

ನಾರಾಯಣನಾಮಕನಾದ ಹರಿ ಮೂರು ಸಾವಿರದೈವತ್ತೆರಡು ರೂಪಗಳನ್ನು ಧರಿಸಿ ಆನಂದಮಯನಾಗಿ ಶರೀರದೊಳಗಿರುತ್ತಾನೆ ನಾಲ್ಕು ಸಾವಿರದ ಮುನ್ನೂರೈದು ರೂಪಗಳಿಂದ ಮುಖ್ಯಪ್ರಾಣನಲ್ಲಿ ಬೆಣ್ಣೆಯಲ್ಲಿ ತುಪ್ಪದಂತೆ ಇರುತ್ತಾನೆ

**ಮೂರು ಸಾವಿರದರ್ಧಶತಮೇಲೀರಧಿಕ ರೂಪಗಳ ಧರಿಸಿ**

ಆ= 2, ನ=5, ಂ=0, ದ= 3 ಇವುಗಳನ್ನು ಎಡಕ್ಕೆ ಓದಿದರೆ 3052 ಆಗುತ್ತದೆ ಇದು 'ಆನಂದ' ನಾಮದಿಂದ ಸೂಚಿತವಾಗಿದೆ ಆದರೆ 'ಆನಂದನಾಮಕನು' ಎಂದಿಲ್ಲ 'ನಾರಯಣಾಹ್ವಯನು' ನಾರಾಯಣನಾಮಕ ಎಂದಿದೆ ಏಕೆ? ನಾರಾಯಣನಾಮದಿಂದ ಸೂಚಿತವಾಗುವ ಸಂಖ್ಯೆ ಹಿಂದೆ ಹೇಳಿದಂತೆ 5125 ಇದು ಆನಂದಮಯಕೋಶದಲ್ಲಿರುವ ನಾರಾಯಣನಾಮಕ ರೂಪಗಳ ಸಂಖ್ಯೆ ಹೊರತು ಆನಂದಮಯಕೋಶಕ್ಕೆ ಪುಷ್ಟಿ ನೀಡುವ 'ಆನಂದ' ಎಂಬ ಅನ್ನದ ಸಾರಭಾಗ ನಿಯಾಮಕವಾದ ಆನಂದನಾಮಕ ರೂಪಗಳ ಸಂಖ್ಯೆಯಲ್ಲ ದಾಸರಾಯರು ಹೀಗೇಕೆ ಹೇಳಿದರು?

ಇನ್ನೊಂದು ಪ್ರಶ್ನೆ- ಇದು ಆನಂದದಲ್ಲಿರುವ ಆನಂದನಾಮಕನ ರೂಪಗಳ ಬಗ್ಗೆ ಹೇಳುವ ಸಂದರ್ಭ ಆನಂದಮಯನ ಬಗ್ಗೆ ಅಲ್ಲ ಹಿಂದಿನ ಪದ್ಯದಲ್ಲಿ ಅನ್ನನೆನಿಪ, ಪ್ರಾಣಾಖ್ಯ, ಮನದೊಳು, ವಿಜ್ಞಾನಾಖ್ಯ ಎಂದು ಹೇಳಿದಂತೆ ಈ ಪದ್ಯದಲ್ಲಿ 'ಆನಂದನೆನಿಹ' ಎನ್ನಬೇಕಾಗಿತ್ತು ಆನಂದಮಯನ ಪ್ರಸ್ತಾವವೇಕೆ?

ಮೇಲಿನ ಎರಡು ಪ್ರಶ್ನೆಗಳಿಗೆ ಒಂದೇ ಉತ್ತರ- 'ಆನಂದಮಯಕೋಶದಲ್ಲಿರುವ ಆನಂದಮಯನಾದ ನಾರಾಯಣನಾಮಕ ಹರಿ ಮೂರು ಸಾವಿರದ ಐವತ್ತೆರಡು ಆನಂದ ನಾಮಕ ರೂಪಗಳನ್ನು ಧರಿಸಿ ಆನಂದವೆಂಬ ಅನ್ನದ ಸಾರಭಾಗದ ಮೂಲಕ ಶರೀರದೊಳಗೆ ಪ್ರವೇಶಿಸಿ ಆನಂದಮಯಕೋಶಕ್ಕೆ ಪುಷ್ಟಿ ನೀಡುತ್ತ ಇರುತ್ತಾನೆ' ಎಂದು ಪದ್ಯಕ್ಕೆ ಅಭಿಪ್ರಾಯ ಹೇಳಬೇಕು. 'ಮೂರು ಸಾವಿರದೈವತ್ತೆರಡು' 'ಆನಂದನಾಮಕ' ರೂಪಗಳೆಂದು ಅಧ್ಯಾಹಾರ ಮಾಡಿಟ್ಟುಕೊಳ್ಳಬೇಕು ಈಗ ಹಿಂದಿನ ಎರಡೂ ಪ್ರಶ್ನೆಗಳಿಗೆ ಅವಕಾಶವಿಲ್ಲ

ಆದರೂ ಈ ಅಧ್ಯಾಹಾರಕ್ಲೇಶವೇಕೆ ಎಂದರೆ, ಮೂಲಪ್ರಮಾಣವಚನದಲ್ಲಿ 'ಆನಂದ' ಎನ್ನಬೇಕಾಗಿರುವಲ್ಲಿ 'ಆನಂದಮಯ' ಎಂದಿದೆ ಅದನ್ನೇ ದಾಸರಾಯರು ಕನ್ನಡಿಸಿದ್ದಾರೆ-

ತ್ರಿಸಹಸ್ರದ್ವಿಪಂಚಾಶದ್ ರೂಪೀ ನಂದಮಯೋ ಹರಿಃ ।

ಇನ್ನೊಂದು ಪ್ರಮಾಣವಚನವೂ 'ಆನಂದಮಯ' ಎಂದೇ ಹೇಳುತ್ತಿದೆ-

ತ್ರಿಸಾಹಸ್ರೈಃ ಸ್ವರೂಪೈಸ್ತು ಪಂಚಾಶದ್ಭಿಶ್ಚ ದ್ವ್ಯುತ್ತರೈಃ ।
ನಾರಾಯಣೋ ನಂದಮಯೋ ಭಾರತೀಶೋಽಪಿ ತ್ವಂ ಶೃಣು ॥

**ಈರೆರಡು ಸಾವಿರದ ಮೇಲ್ ಮುನ್ನೂರಐದು ಸುರೂಪದಿಂದಲಿ**

ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯ ಪಂಚಕೋಶಗಳಿಗೆ ಪುಷ್ಟಿ ನೀಡುವ ಅನ್ನದ ಸಾರಭಾಗಗಳಾದ ಅನ್ನ ಪ್ರಾಣ ಮನ ವಿಜ್ಞಾನ ಆನಂದಗಳಲ್ಲಿ ಕ್ರಮವಾಗಿ 101, 51, 55, 584, 3052 ರೂಪಗಳಿಂದ ಶ್ರೀಹರಿ ಇರುವನೆಂದರೆ ಒಟ್ಟು 4305 ರೂಪಗಳಾದುವು ಇದನ್ನು,

'ಚತುಃಸಹಸ್ರತ್ರಿಶತಪಂಚಾತ್ಮಾ ಪ್ರಾಣಗೋಚರಃ ।'

ಎಂದು ಪ್ರಕಾಶಸಂಹಿತೆಯೂ,

ಪಂಚೋತ್ತರೈಶ್ಚ ತ್ರಿಶತೈಃ ಸಹಸ್ರಾಣಾಂ ಚತುಷ್ಟಯೈಃ ।
ಘೃತಸ್ಯೇವ ವಿಜಾನೀಯಾನ್ನವನೀತಗತಸ್ಯ ಚ ॥

ಎಂದು ಪ್ರವೃತ್ತಗ್ರಂಥವೂ ಹೇಳುತ್ತಿದೆ

**ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ**

ಭೋಜನಕಾಲದಲ್ಲಿ ನಾವು ಉಣ್ಣುವ ಅನ್ನದಲಲಿ ಅನ್ನ ಪ್ರಾಣ ಮನ ವಿಜ್ಞಾನ ಆನಂದಗಳೆಂಬ ಐದು ಬಗೆಯ ಸಾರಭಾಗಗಳನ್ನೂ ಅವುಗಳಲ್ಲಿ ಅನ್ನಾದಿನಾಮಕ ಪಂಚಮೂರ್ತಿಗಳನ್ನೂ ನೆನೆದು ಇವರು ಸ್ಥೂಲಶರೀರದೊಳಗೆ ಇರುವ ಪಂಚಕೋಶಗಳನ್ನು ಪುಷ್ಟಿಗೊಳಿಸಲಿ ಎಂಬ ಅನುಸಂಧಾನ ಮಾಡಬೇಕೆಂಬುದು ಇಷ್ಟರವರೆಗಿನ ನಿರೂಪಣೆಯಿಂದ ತಿಳಿದು ಬರುತ್ತಿದೆ ಆದರೆ ನಮ್ಮ ಭಗವದುಪಾಸನೆ ಎಲ್ಲವೂ ಮುಖ್ಯಪ್ರಾಣನ ಅಧಿಷ್ಠಾನದಲ್ಲಿಯೇ ನಡೆಯಬೇಕು ಹೇಗೆ ಎನ್ನುವ ಜಿಜ್ಞಾಸೆಗೆ ಉತ್ತರ ಇಲ್ಲಿ ಇದೆ ಅನ್ನಾದಿಗಳಲ್ಲಿ ಅನ್ನಾದಿನಾಮಕನಾದ ಭಾರತೀಶನನ್ನು ಚಿಂತಿಸಬೇಕು ಅವನಲ್ಲಿ ಅನ್ನಾದಿ ನಾಮಕನಾದ ಹರಿಯನ್ನು ಆರಾಧಿಸಬೇಕು ಹಾಲಿನಲ್ಲಿ ತುಪ್ಪವಿದ್ದರೂ ನಮಗೆ ಆ ತುಪ್ಪ ಹಾಲಿನಲ್ಲಿಯೆ ನೇರವಾಗಿ ಸಿಗುವುದಿಲ್ಲ ಕಡದು ಬೆಣ್ಣೆ ತೆಗೆಯಬೇಕು ಬೆಣ್ಣೆ ಕಾಯಿಸಿದರೆ ತುಪ್ಪ ಹಾಗೇ ಅನ್ನಾದಿಗಳಲ್ಲಿ ಭಗವಂತನಿದ್ದರೂ ಹಾಗೇ ಉಪಾಸನೆ ಮಾಡಿದರೆ ಅವನು ಸಿಗಲಾರ ವಿಚಾರ ಮಾಡಿ ಅನ್ನಾದಿನಾಮಕನಾದ ಭಾರತೀಶನನ್ನು ತಿಳಿದು ಅವನಲ್ಲಿ ಅನ್ನಾದಿ ನಾಮಕ ಭಗವಂತನ ಉಪಾಸನೆ ಮಾಡಿದರೇ ಅವನ ಅನುಗ್ರಹ ದೊರಕುವುದು

ಅನ್ನಾದಿಪಂಚದಲ್ಲಿ ಭಾರತೀಶನ ಪ್ರಾಣಾದಿ ಪಂಚಕವನ್ನು ಅದರಲ್ಲಿ ಶ್ರೀಹರಿಯ ಅನಿರುದ್ಧಾದಿ ಪಂಚಕವನೂ ನೆನೆಯಬೇಕು ಅಂದರೆ ಅನ್ನ ಪ್ರಾಣ ಮನ ವಿಜ್ಞಾನ ಆನಂದ

ಗಳಲ್ಲಿ ಕ್ರಮವಾಗಿ ಮುಖ್ಯಪ್ರಾಣನ ಪ್ರಾಣ ಅಪಾನ ವ್ಯಾನ ಉದಾನ ಸಮಾನ ಎಂಬ ಪಂಚ ರೂಪಗಳು ಅನ್ನಾದಿನಾಮಗಳಿಂದಲೇ ನಿಯಾಮಕವಾಗಿವೆ ಅವುಗಳಲ್ಲಿ ಶ್ರೀಹರಿಯ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ನಾರಾಯಣ ರೂಪಗಳು ಅನ್ನಾದಿನಾಮಗಳಿಂದಲೆ ನಿಯಾಮಕವಾಗಿವೆ ಎಂದು ಉಪಾಸನೆ ಮಾಡಬೇಕು ಇದನ್ನೇ ಪ್ರವೃತ್ತಗ್ರಂಥ 'ಘೃತಸ್ಯೇವ ವಿಜಾನೀಯಾತ್ ನವನೀತಗತಸ್ಯ ಚ । ಭಾರತೀಶೋಽಪಿ ತ್ವಂ ಶೃಣು ॥' ಎಂದು ಹೇಳಿದೆ

ಪ್ರಕಾಶಸಂಹಿತೆಯಲ್ಲಿ 'ಚತುಃಸಹಸ್ರತ್ರಿಶತಪಂಚಾತ್ಮಾ ಪ್ರಾಣಗೋಚರಃ' ಎಂದು 'ಪ್ರಾಣ' ಶಬ್ದ ಮಾತ್ರವಿದೆ 'ಪ್ರಾಣ ಎಂದರೆ ಬೇರೆ ಕಡೆ ಮುಖ್ಯಪ್ರಾಣನೂ ಆಗಬಹುದು, ಪ್ರಾಣಪುತ್ರರೂ ಐದು ಮಂದಿ ಆಗಬಹುದು ಇಲ್ಲಿ, ಮುಖ್ಯಪ್ರಾಣನ ಐದು ರೂಪಗಳೇ ವಿವಕ್ಷಿತವೆಂದು ತಿಳಿಸಲು ಪ್ರವೃತ್ತಗ್ರಂಥ 'ಭಾರತೀಶೋ' ಎಂದಿದೆ ಹರಿಕಥಾಮೃತಸಾರವೂ 'ಭಾರತೀಶನೊಳಿಪ್ಪ' ಎಂದಿದೆ

ಸ್ಥೂಲಶರೀರದಲ್ಲಿ ಷಟ್‌ಪ್ರಶ್ನೋಪನಿಷತ್ತು ಹೇಳುವಂತೆ ಪ್ರಾಣ- ಕಣ್ಣು ಕಿವಿ ಬಾಯಿ ಮೂಗುಗಳಲ್ಲಿಯೂ, ಅಪಾನ ಮಲ ಮೂತ್ರ ವಿಸರ್ಜನಾಂಗಗಳಲ್ಲಿಯೂ, ಸಮಾನ- ನಾಭಿ ಪ್ರದೇಶದಲ್ಲಿಯೂ, ವ್ಯಾನ- ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿಯೂ, ಉದಾನ- ಸುಷುಮ್ನಾ ನಾಡಿಯಲ್ಲಿಯೂ ಇದ್ದು ಜೀವನಿಂದ ಸ್ಥೂಲಶರೀರದ ಮೂಲಕ ಮೋಕ್ಷಸಾಧನ ಮಾಡಿಸುತ್ತಾನೆ ಆದರೆ ಸ್ಥೂಲಶರೀರದೊಳಗಿರುವ ಅನ್ನಮಯಾದಿ ಪಂಚಕೋಶಗಳಿಗೆ ಪುಷ್ಟಿ ನೀಡುವುದಕ್ಕಾಗಿ ಅನ್ನ ಪ್ರಾಣ ಮನ ವಿಜ್ಞಾನ ಆನಂದ ಎಂಬ ಐದು ಬಗೆಯ ಅನ್ನರಸಗಳಲ್ಲಿ ಪ್ರಾಣಾದಿ ಪಂಚರೂಪಗಳಿಂದ ಮುಖ್ಯಪ್ರಾಣನಿದ್ದಾನೆ ಎಂದು ಇಲ್ಲಿ ಹರಿಕಥಾಮೃತಸಾರ ಹೇಳುತ್ತಿದೆ

**ಮೂರಧಿಕವೈವತ್ತು ಪ್ರಾಣ ಶ**
**ರೀರದೊಳಗನಿರುದ್ಧನಿಪ್ಪೆ**
**ನೂರು ಹನ್ನೊಂದಧಿಕಪಾನನೊಳಿಪ್ಪ ಪ್ರದ್ಯುಮ್ನ ।**
**ಮೂರನೇ ವ್ಯಾನನೊಳಗೈದರೆ**
**ನೂರು ರೂಪದಿ ಸಂಕರುಷಣೈ**
**ನೂರು ಮೂವತ್ತೈದುದಾನನೊಳಿಪ್ಪ ಮಾಯೇಶ ॥ ೧೯ ॥**

**ಮೂಲ ನಾರಾಯಣನು ಐವ**
**ತ್ತೇಳಧಿಕ ಐನೂರು ರೂಪವ**
**ತಾಳಿ ಸರ್ವತ್ರದಿ ಸಮಾನನೊಳಿಪ್ಪ ಸರ್ವಜ್ಞ ।**

**ಲೀಲೆಗೈವನು ಸಾವಿರದ ಮೇ**
**ಲೇಳು ನೂರ್ಹನ್ನೊಂದು ರೂಪವ**
**ತಾಳಿ ಪಂಚ ಪ್ರಾಣರೊಳು ಲೋಕಗಳ ಸಲಹುವನು ॥ ೨೦ ॥**

ಪ್ರಾಣನ ಶರೀರದೊಳಗೆ ಐವತ್ತಮೂರು ರೂಪಗಳಿಂದ ಅನಿರುದ್ಧನಿದ್ದಾನೆ ಅಪಾನನಲ್ಲಿ ಐನೂರ ಹನ್ನೊಂದು ರೂಪಗಳಿಂದ ಪ್ರದ್ಯುಮ್ನನಿದ್ದಾನೆ ಮೂರನೆ ವ್ಯಾನದಲ್ಲಿ ಐವತ್ತೈದು ರೂಪಗಳಿಂದ ಸಂಕರ್ಷಣ, ಉದಾನದಲ್ಲಿ ಐನೂರ ಮೂವತ್ತೈದು ರೂಪಗಳಿಂದ ವಾಸುದೇವನಿರುತ್ತಾನೆ

ಸಮಾನನಲ್ಲಿ ಐನೂರ ಐವತ್ತೇಳು ರೂಪಗಳನ್ನು ತಾಳಿ ಮೂಲ ನಾರಾಯಣನು ಎಲ್ಲೆಡೆ ಇರುತ್ತಾನೆ ಸರ್ವಜ್ಞನಾದ ಶ್ರೀಹರಿ ಹೀಗೆ ಸಾವಿರದ ಏಳುನೂರ ಹನ್ನೊಂದು ರೂಪಗಳನ್ನು ತಾಳಿ ಪಂಚಪ್ರಾಣರಲ್ಲಿ ಲೀಲೆಗೈಯುತ್ತಾನೆ, ಲೋಕಗಳನ್ನು ಸಲಹುತ್ತಾನೆ

**ಮೂರಧಿಕಪೈವತ್ತು ಪ್ರಾಣಶರೀರದೊಳಗೆ :**

ಪ್ರಾಣಾಪಾನಾದಿ ಪಂಚರೂಪಗಳಲ್ಲಿ ಒಂದಾದ ಪ್ರಾಣನ ಶರೀರದಲ್ಲಿ ಪ್ರಾಣನಾಮಕ ಅನಿರುದ್ಧ 'ಪ್ರಾಣ' ನಾಮದಿಂದಲೆ ಸೂಚಿತವಾಗುವಂತೆ ಐವತ್ತಮೂರು ರೂಪಗಳಿಂದ ಇರುತ್ತಾನೆ ಪ್ರಾ ಎಂಬಲ್ಲಿ ಪಕಾರ-ರಕಾರಗಳು ಸೇರಿರುವುದರಿಂದ 1+2= 3, ಣ ಎಂದರೆ 5 ಎಡಕ್ಕೆ ಓದಿದರೆ 53, 'ಪ್ರಾಣ' ಎಂಬ ನಾಮ 53 ಸಂಖ್ಯೆಯನ್ನು ಸೂಚಿಸುತ್ತದೆ

ಹಿಂದಿನ ಪದ್ಯದಲ್ಲಿ 'ಪ್ರಾಣ' ನಾಮ 513 ಎಂಬ ಸಂಖ್ಯೆಯನ್ನು ಸೂಚಿಸುತ್ತದೆ ಎಂದಿಟ್ಟುಕೊಳ್ಳಲಾಗಿದೆ 'ಪ್ರಾಣ' ಶಬ್ದವನ್ನು 'ಪ್ರ+ಅನ' ಎಂದು ವಿಂಗಡಿಸಿ ಅಕಾರಕ್ಕೆ 1 ಎಂಬ ಸಂಖ್ಯೆಯನ್ನು ನಡುವೆ ಇಟ್ಟುಕೊಳ್ಳಲಾಗಿದೆ

'ಶತಪಂಚಕಂ ತ್ರಯೋದಶಾಧಿಕಂ ಭೂತ್ವಾ ಪ್ರಾಣೇ'

ಎಂಬ ಪ್ರಕಾಶಸಂಹಿತಾ ವಾಕ್ಯಾನುಸಾರ ಅಲ್ಲಿ ಹಾಗೆ ಅರ್ಥ ಮಾಡಿಕೊಳ್ಳಬೇಕಾಯಿತು ಇಲ್ಲಿ ವಾಯುಪುರಾಣವಚನ ಹೀಗಿದೆ-

'ತ್ರ್ಯುತ್ತರೈಶ್ಚ ಸುಪಂಚಾಶತ್ ಸುರೂಪೈಃ ಪ್ರಾಣದೇಹಗಃ ।'

ಪ್ರಕಾಶಸಂಹಿತೆಯೂ ಹೇಳುತ್ತಿದೆ-

'ತ್ರಿಪಂಚಾಶದ್‌ರೂಪವೃಂದೈಃ ಪ್ರಾಣಗಃ ಶಾಂತಿವಲ್ಲಭಃ ।'

ಅದರಿಂದ ಇಲ್ಲಿ 'ಪ್ರಾಣ' ಶಬ್ದದಿಂದ 53 ರೂಪಗಳು ಸೂಚಿತವೆಂದೇ ಇಟ್ಟುಕೊಳ್ಳಬೇಕಾಯಿತು ಆದರೂ, ವಿರೋಧವಿಲ್ಲ ಅಲ್ಲಿ ಪ್ರಾಣಮಯಕೋಶಕ್ಕೆ ಪುಷ್ಟಿ ನೀಡುವ

'ಪ್ರಾಣ' ಎಂಬ ಹೆಸರಿನ ಅನ್ನದ ಸಾರಭಾಗದಲ್ಲಿ 513 ರೂಪಗಳಿಂದ ಪ್ರದ್ಯುಮ್ನನಿದ್ದಾನೆ ಎಂದಿದೆ ಇಲ್ಲಿ ಈಗ ಅನ್ನಮಯಕೋಶ ನಿಯಾಮಕವಾದ ಮುಖ್ಯಪ್ರಾಣನ ಪ್ರಾಣರೂಪದಲ್ಲಿ 53 ರೂಪಗಳಿಂದ ಅನಿರುದ್ಧನಿದ್ದಾನೆ ಎನ್ನುತ್ತಿದ್ದಾರೆ

**ಐನೂರು ಹನ್ನೊಂದಧಿಕಪಾನನೊಳಿಪ್ಪ ಪ್ರದ್ಯುಮ್ನ .**

ಪ್ರಾಣಮಯಕೋಶ ನಿಯಾಮಕನಾದ ಅಪಾನನ ಶರೀರದಲ್ಲಿ 'ಅಪಾನ' ನಾಮವೇ ಹೇಳುವಂತೆ ಅ= 1, ಪಾ= 1, ನ=5, ಎಡಕ್ಕೆ ಓದಿದರೆ 511 ರೂಪಗಳಿಂದ 'ಅಪಾನ' ನಾಮಕ ಪ್ರದ್ಯುಮ್ನನಿದ್ದಾನೆ

ಏಕಾದಶಾಧಿಕ್ಯೈಃ ಪಂಚಶತರೂಪೈರ್ವಿಭಾವಯ ।
ಪ್ರದ್ಯುಮ್ನೋಽಪಾನಗಶ್ಚಾಪಿ । -ವಾಯುಪುರಾಣ

ಏಕಾದಶೋತ್ತರಂ ಪಂಚಶತಂ ಪ್ರದ್ಯುಮ್ನರೂಪಿಣಃ ।
ಅಪಾನಗಸ್ಯ । -ಪ್ರಕಾಶಸಂಹಿತಾ

**ಮೂರನೇ ವ್ಯಾನನೊಳಗೈದರೆ ನೂರು ರೂಪದಿ ಸಂಕರುಷಣ :**

ಮನೋಮಯಕೋಶ ನಿಯಾಮಕ ಮುಖ್ಯಪ್ರಾಣರೂಪ ಪಂಚಪ್ರಾಣರಲ್ಲಿ ಮೂರನೆಯವನಾದ ವ್ಯಾನ ಅವನಲ್ಲಿ ವ್ಯಾನನಾಮಕ ಸಂಕರ್ಷಣ 'ವ್ಯಾನ' ನಾಮವೇ ಸೂಚಿಸುವಂತೆ ಐದು ಮತ್ತು 'ಅರೆನೂರು' ಎಂದರೆ ಐವತ್ತು, ಒಟ್ಟು ಐವತ್ತೈದು ರೂಪಗಳಿಂದ ಇದ್ದಾನೆ 'ವ್ಯಾನ' ಎಂಬಲ್ಲಿ ವ್ಯಾ ಎಂದರೆ 4+ 1= 5, ನ ಎಂದರೂ 5, ಹೇಗೆ ಓದಿದರೂ 55 ಆಗುತ್ತದೆ

ವ್ಯಾನೇಽಪಿ ಶೃಣು ದೇವಕಃ ।
ಸ್ವರೂಪ ಪಂಚಪಂಚಾಶದ್ಯುತಃ ಸಂಕರ್ಷಣೋಽಸ್ತಿ ಹಿ ॥ -ವಾಯುಪುರಾಣ

ವ್ಯಾನೇಽಪಿ ಪಂಚಪಂಚಾಶದೇವ ಹಿ ಜಯೇಶಃ । -ಪ್ರಕಾಶಸಂಹಿತಾ

ಇಲ್ಲಿ ಒಂದು ಪ್ರಶ್ನೆ 'ಮೂರನೇ ವ್ಯಾನ' ಎಂದುದೇಕೆ? ಮೊದಲನೇ ವ್ಯಾನ, ಎರಡನೇ ವ್ಯಾನ ಎಂದೂ ಇದೆಯೇ? ಹಾಗೇನಿಲ್ಲ ಪ್ರಾಣ ಅಪಾನ ವ್ಯಾನ ಉದಾನ ಸಮಾನರೆಂಬ ಪಂಚಪ್ರಾಣರಲ್ಲಿ ಮೂರನೆಯವನು ವ್ಯಾನ ಎಂದಿಷ್ಟೇ ಹೇಳುವ ಅಭಿಪ್ರಾಯ ಎನ್ನುವುದಾದರೆ ಅದನ್ನೇಕೆ ಹೇಳಬೇಕು ಹಿಂದು ಮುಂದಿನ ರೂಪಗಳಿಗೆ ಒಂದು ಎರಡನೆ, ನಾಲ್ಕು ಐದನೆ ಎಂದು ಏಕೆ ವಿಶೇಷಣ ಹೇಳುತ್ತಿಲ್ಲ? ದ್ವಿತೀಯಾಕ್ಷರಪ್ರಾಸಕ್ಕಾಗಿ 'ಮೂರನೆಯ' ಎಂಬ ಶಬ್ದ ಸೇರಿಸಿದ್ದಾರೆ ಎಂದರೆ ಅದು ಕವಿವರೇಣ್ಯರಾದ ದಾಸರಾಯರಲ್ಲಿ ಅಶಕ್ತಿಯನ್ನು ಹೇಳಿದಂತಾಗುತ್ತದೆ

ಇದಕ್ಕೆ ಹೀಗೆ ಸಮಾಧಾನ ಹೇಳಬಹುದು ಬೃಹದಾರಣ್ಯಕೋಪನಿಷತ್ತಿನಲ್ಲಿ,

'ಸ ತ್ರೇಧಾತ್ಮಾನಂ ವ್ಯಾಕುರುತ ಆದಿತ್ಯಂ ತೃತೀಯಂ ವಾಯುಂ ತೃತೀಯಮ್।'

ಮುಖ್ಯಪ್ರಾಣನ ಮೂರು ರೂಪಗಳು- ಅಗ್ನಿ ಆದಿತ್ಯ ವಾಯು ಪ್ರತಿಯೊಂದೂ ಮೂರನೆಯ ರೂಪವೆ ಏಕೆಂದರೆ ಉಳಿದ ರೂಪಗಳಿಂದ ತೊಡಗಿ ಗಣನೆ ಮಾಡಿದಾಗ ತಾನು ಮೂರನೆಯದೇ ಆಗುತ್ತದೆ ಎಂದಿದೆ ಹಾಗಾದರೆ ಮೂರನೆಯದೆಂದು ಏಕೆ ಹೇಳಬೇಕು ಎಂದರೆ, ಅಗ್ನಿ ಮೊದಲನೆಯ ರೂಪ, ಆದಿತ್ಯ ಎರಡನೆಯ ರೂಪ, ವಾಯು ಮೂರನೆಯ ರೂಪ ಎಂದು ವಾಯುವನ್ನೇ ಮೂರನೆಯದೆಂದು ಹೇಳಿದರೂ ಅಥವಾ ಯಾವುದನ್ನೂ ಮೂರನೆಯದೆಂದು ಹೇಳದಿದ್ದರೂ, ಮೊದಲನೆಯದು ಉತ್ತಮ, ಎರಡನೆಯದು ಮಧ್ಯಮ, ಮೂರನೆಯದು ಕನಿಷ್ಠವೆಂದು ತಾರತಮ್ಯವನ್ನು ತಿಳಿಯುವ ಸಂಭವವಿದೆ ಹಾಗಾಗದಿರಲೆಂದು, ಮುಖ್ಯಪ್ರಾಣನ ಎಲ್ಲ ರೂಪಗಳೂ ಬಲಜ್ಞಾನಾದಿ ಗಳಲ್ಲಿ ಸಮವೇ ಎಂದು ತಿಳಿಸುವುದಕ್ಕಾಗಿ ಮೂರು ರೂಪಗಳೂ ಮೂರನೆಯವು ಎನ್ನುತ್ತಿದೆ ಉಪನಿಷತ್ತು ಇದನ್ನು ನೆನಪಿಸುವುದಕ್ಕಾಗಿ ಪ್ರಾಯಃ ದಾಸರಾಯರು 'ಮೂರನೆಯ ವ್ಯಾನ' ಎಂದಿದ್ದಾರೆ ಪ್ರಾಣದಿಂದ ತೊಡಗಿ ಪಂಚರೂಪಗಳ ಎಣಿಕೆಯಲ್ಲಿ ವ್ಯಾನ ಮೂರನೆಯ ರೂಪ, ನಿಜ ಆದರೆ ಅಪಾನದಿಂದ ತೊಡಗಿ ಎಣಿಸುವಾಗ ಉದಾನನೂ ಮೂರನೆಯವನಾಗುತ್ತಾನೆ ವ್ಯಾನದಿಂದ ತೊಡಗಿ ಎಣಿಸಿದರೆ ಸಮಾನನೂ ಮೂರನೆಯವ ಉದಾನನಿಂದ ತೊಡಗಿ ಎಣಿಸಿದರೆ ಉದಾನ, ಸಮಾನ, ಪ್ರಾಣ ಎಂದು ಪ್ರಾಣನೂ ಮೂರನೆಯವನೆ ಹೀಗೇ ಸಮಾನನಿಂದ ತೊಡಗಿ ಎಣಿಸಿದರೆ ಅಪಾನನೂ ಮೂರನೆಯವನೆ ಅಂತೂ ಎಲ್ಲ ರೂಪಗಳೂ ಸಮವಾಗಿವೆ ಎಂದು ಸಾಮ್ಯವನ್ನು ತಿಳಿಸುವ ಉದ್ದೇಶ ಕಾಣುತ್ತದೆ ಮುಂದಿನ ಪದ್ಯದಲ್ಲಿ ಶ್ರೀಹರಿಯ ಎಲ್ಲ ರೂಪಗಳೂ ಸರ್ವಶಕ್ತವಾಗಿದ್ದು ಸಮಾನವೇ ಆದರೂ ಲೀಲೆಯಿಂದ ಒಂದೊಂದು ರೂಪದಿಂದ ಒಂದೊಂದು ಕಾರ್ಯ ಮಾಡುತ್ತಾನೆ ಎಂದು ಹೇಳುತ್ತಿದ್ದಾರೆ ಅದೇ ರೀತಿ ಮುಖ್ಯಪ್ರಾಣನೂ ಎಲ್ಲ ರೂಪಗಳಲ್ಲಿ ಸಮಾನನೇ ಆಗಿದ್ದರೂ ಒಂದೊಂದು ರೂಪದಿಂದ ಒಂದೊಂದು ಕೋಶವನ್ನು ನಿಯಮಿಸುವ ಲೀಲೆ ಮಾಡುತ್ತಾನೆ ಎನ್ನುತ್ತಿದ್ದಾರೆ

**ಐನೂರ ಮೂವತ್ತೈದುದಾನನೊಳಿಪ್ಪ ಮಾಯೇಶ·**

ಮಾಯಾರಮಣನಾದ ವಾಸುದೇವ ವಿಜ್ಞಾನಮಯಕೋಶ ನಿಯಾಮಕನಾದ ಉದಾನನಲ್ಲಿ ಉದಾನನಾಮಕನಾಗಿ 'ಉದಾನ' ನಾಮವೆ ತಿಳಿಸುವಂತೆ 535 ರೂಪಗಳಿಂದ ಇದ್ದಾನೆ ಉ= 5, ದಾ= 3, ನ= 5 ಹೇಗೆ ಓದಿದರೂ 535 ಆಗುತ್ತದೆ

ಪಂಚಶತೈಶ್ಚ ಪಂಚತ್ರಿಂಶದ್ಯುತೈಃ ಸುಮನೋಹರೈಃ ।
ಸ್ವರೂಪೈರಿಂದಿರಾಯಾಸ್ತು ಮಾಯಾಯಾಃ ಪತಿರಾಬಭೌ ॥ -ವಾಯುಪುರಾಣ

ವಾಸುದೇವೋಽಪಿ ಶತಪಂಚಕಯುಕ್ ತಥಾ ।
ಪಂಚತ್ರಿಂಶದುದಾನೇ ಚ । -ಪ್ರಕಾಶಸಂಹಿತಾ

**ಮೂಲನಾರಾಯಣನು ಐವತ್ತೇಳಧಿಕ ಐನೂರು ರೂಪವ ತಾಳಿ**

ಮೂಲ ನಾರಾಯಣ 'ಮೂಲ' ಏಕೆಂದರೆ ಅವನಿಂದಲೆ ವಾಸುದೇವಾದಿ ನಾಲ್ಕು ರೂಪಗಳು ಆವಿರ್ಭವಿಸಿದವು ನಾರಾಯಣ ಮೂಲನೇ ಆಗಿದ್ದರೂ ಅವನಿಗಿಂತ ವಾಸುದೇವಾದಿಗಳು ಕಡಿಮೆಯವರಲ್ಲ ಎಂದು ಒಂದೇ ಪಂಕ್ತಿಯಲ್ಲಿ ಐವರನ್ನೂ ವರ್ಣಿಸಿದ್ದಾರೆ ಆನಂದಮಯಕೋಶ ನಿಯಾಮಕನಾದ ಸಮಾನ ವಾಯುವಿನಲ್ಲಿ ನಾರಾಯಣ ಸಮಾನನಾಮಕನಾಗಿ 'ಸಮಾನ' ಎಂಬ ನಾಮವ ಹೇಳುವಂತೆ 557 ರೂಪಗಳಿಂದ ಇದ್ದಾನೆ ಸ= 7, ಮಾ= 5, ನ= 5, ಎಡಕ್ಕೆ ಓದಿದರೆ 557 ಆಗುತ್ತದೆ

**ಸಾವಿರದ ಮೇಲೇಳು ನೂರ್ಹನ್ನೊಂದು ರೂಪವ ತಾಳಿ**

ಪ್ರಾಣ 53, ಅಪಾನ 511, ವ್ಯಾನ 55, ಉದಾನ 535 ಮತ್ತು ಸಮಾನ 557 ಹೀಗೆ ಒಟ್ಟು 1711 ರೂಪಗಳಿಂದ ಶ್ರೀಹರಿ ಪಂಚಪ್ರಾಣರಲ್ಲಿ ನೆಲೆಸಿದ್ದಾನೆ ಏಕೆ ಇಷ್ಟು ರೂಪಗಳಿಂದ ಇರಬೇಕು? ಒಂದು ರೂಪದಿಂದಾಗುವ ಕಾರ್ಯ ಇನ್ನೊಂದರಿಂದಾಗದಿದ್ದುದರಿಂದ ಎಲ್ಲ ರೂಪಗಳೂ ಬೇಕೆಂದೆ? ಎಂದರೆ, ಅಲ್ಲ, ಇದೊಂದು ಲೀಲೆ

**ಸರ್ವಜ್ಞ ಲೀಲೆಗೈವನು ಲೋಕಗಳ ಸಲಹುವನು**

ಯದ್ಯಪ್ಯಸ್ಯ ಹರೇ ಸರ್ವರೂಪಾಣ್ಯಪ್ಯಖಿಲೈರ್ಗುಣೈಃ ।
ಪೂರ್ಣಾನ್ಯಥಾಪಿ ಚೈಕೈಕರೂಪೇಷು ಸ ಪೃಥಗ್ ಗುಣೈಃ ।
ವ್ಯವಹಾರಾನ್ ಪೃಥಗ್ ದೇವಃ ಕರೋತೀವ ಹಿ ಲೀಲಯಾ ॥

- ಬೃಹದಾರಣ್ಯಕಭಾಷ್ಯ

ಶ್ರೀಹರಿಯ ಎಲ್ಲ ರೂಪಗಳೂ ಸರ್ವಗುಣಪರಿಪೂರ್ಣವೆ ಆದರೂ ಒಂದೊಂದು ರೂಪದಲ್ಲಿ ಒಂದೊಂದೆಡೆ ಬೇರೆ ಬೇರೆ ಗುಣಗಳಿಂದ ಬೇರೆ ಬೇರೆ ಪ್ರವೃತ್ತಿಗಳನ್ನು ಮಾಡುತ್ತಿರುವಂತೆ ತೋರಿಕೊಳ್ಳುತ್ತಾನೆ ಇದು ಅವನ ಲೀಲೆ ಈ ಲೀಲೆಯಿಂದ ಲೋಕಗಳನ್ನು ಸಲಹುತ್ತಾನೆ ಹೇಗೆಂದರೆ, ಮುಖ್ಯಪ್ರಾಣ ಆ ಎಲ್ಲ ರೂಪಗಳನ್ನೂ ಉಪಾಸನೆ ಮಾಡುತ್ತಾನೆ ನಮ್ಮಿಂದಲೂ ಮಾಡಿಸುತ್ತಾನೆ ಅದರಿಂದ ಲೋಕಕ್ಕೇ ಕ್ಷೇಮ

**ತ್ರಿನವತಿ ಸುರೂಪಾತ್ಮಕನಿರು**
**ದ್ಧನು ಸದಾ ಯಜಮಾನನಾಗಿ**
**ದ್ದನಲ ಯಮ ಸೋಮಾದಿ ಪಿತೃದೇವತೆಗಳಿಗೆ ಅನ್ನ ।**
**ನೆನಿಪನಾ ಪ್ರದ್ಯುಮ್ನ ಸಂಕರು**
**ಷಣ ವಿಭಾಗವ ಮಾಡಿ ಕೊಟ್ಟುಂ**
**ಡುಣಿಪ ನಿತ್ಯಾನಂದ ಭೋಜನದಾಯಿ ತುರ್ಯಾಹ್ವ** ॥ ೨೧ ॥

ತೊಂಬತ್ತಮೂರು ಉತ್ತಮರೂಪಗಳಿಂದ ಅನಿರುದ್ಧನು ಸದಾ ಯಜಮಾನನಲ್ಲಿದ್ದು, ಮತ್ತೆ ಪ್ರದ್ಯುಮ್ನನಾಗಿ ಅವನೆ ಅಗ್ನಿ ಸೋಮ ಯಮ ಮುಂತಾದ ಪಿತೃದೇವತೆಗಳಿಗೆ ಅನ್ನನೆನಿಸುತ್ತಾನೆ ಸಂಕರ್ಷಣನಾಗಿ ಆ ಅನ್ನವನ್ನು ಪಿತೃಗಳಿಗೆ ವಿಭಾಗ ಮಾಡಿ ಬಡಿಸಿ ವಾಸುದೇವನಾಗಿ ತಾನುಂಡು ಅವರಿಗೆ ಉಣಿಸುತ್ತಾನೆ ಆ ವಾಸುದೇವನೆ ಮೋಕ್ಷದಲ್ಲಿ ಮುಕ್ತರಿಗೆ ನಿತ್ಯಾನಂದ ಉಣಿಸುವವನು

**ತ್ರಿನವತಿ ಸುರೂಪಾತ್ಮಕನಿರುದ್ಧನು ಸದಾ ಯಜಮಾನನಾಗಿದ್ದು**

'ತ್ರಿನವತಿ' ಎಂದರೆ ತೊಂಬತ್ತಮೂರು ಪಿತೃಕಾರ್ಯ ಮಾಡುವ ಯಜಮಾನನಲ್ಲಿ ಪ್ರೇರಕನಾಗಿ ತೊಂಬತ್ತಮೂರು ರೂಪಗಳಿಂದ ಅನಿರುದ್ಧನಿದ್ದು ವಾಸ್ತವದಲ್ಲಿ ಅವನೆ ಯಜಮಾನನಾಗಿರುತ್ತಾನೆ ಒಂದು ಪಿತೃಕಾರ್ಯವಾಗಬೇಕಾದರೆ ಕರ್ತನಾದ ಯಜಮಾನ ಬೇಕು. ಅನ್ನದಾನಕ್ಕೆ ಅನ್ನ ಬೇಕು ಅನ್ನ ವಿಭಾಗ ಮಾಡಿ ಬಡಿಸುವವನು ಬೇಕು ಉಣ್ಣುವ ಬ್ರಾಹ್ಮಣ ಬೇಕು ಈ ನಾಲ್ಕರಲ್ಲಿ ಅನಿರುದ್ದನೆ ತನ್ನ ಅಚಿಂತ್ಯಶಕ್ತಿಯಿಂದ ಅನಿರುದ್ದ ಪ್ರದ್ಯುಮ್ನ ಸಂಕರ್ಷಣ ವಾಸುದೇವ ರೂಪಗಳಿಂದ ಅಂತರ್ಯಾಮಿ ಯಾಗಿರುತ್ತಾನೆ ತಾನೆ ಅನ್ನದಾತ, ಅನ್ನ, ಅನ್ನ ಬಡಿಸುವವನು, ಉಣ್ಣುವವ ಎಲ್ಲವೂ ಆಗುತ್ತಾನೆ ಹೀಗೆ ಬಿಂಬಕ್ರಿಯೆ ನಡೆದರೆ ಪ್ರತಿಬಿಂಬ ಕ್ರಿಯೆ ನಡೆಯುತ್ತದೆ ಇಲ್ಲದಿದ್ದರೆ ಇಲ್ಲ ಅನಿರುದ್ಧ ತೊಂಬತ್ತಮೂರು ರೂಪಗಳಿಂದ ಯಜಮಾನನಲ್ಲಿರುತ್ತಾನೆ ಮುಂದಿನ ಪದ್ಯದಲ್ಲಿ ಹೇಳುವಂತೆ ತೊಂಬತ್ತಾರು ರೂಪಗಳಿಂದ ಪಿತೃಗಳಲ್ಲಿರುತ್ತಾನೆ

**ಯಜಮಾನನಲ್ಲಿರುವ ಅನಿರುದ್ಧನ ತೊಂಬತ್ತಮೂರು ರೂಪಗಳು ಯಾವುವು?**

ಅಷ್ಟವಸುಗಳು, ಏಕಾದಶ ರುದ್ರರು, ದ್ವಾದಶ ಆದಿತ್ಯರು ಒಟ್ಟು ಮೂವತ್ತೊಂದು ಮಂದಿ ಅವರಲ್ಲಿ ಪ್ರತಿಯೊಬ್ಬರಲ್ಲಿಯೂ ಅನಿರುದ್ಧನು ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂಬ ಮೂರು ರೂಪಗಳಿಂದ ಇದ್ದಾನೆ, ಅದರಿಂದ ತೊಂಬತ್ತಮೂರು ರೂಪಗಳು ಎನ್ನೋಣವೆ? ತಪ್ಪಿಲ್ಲ ಆದರೆ, ಈ ವಸು ರುದ್ರ ಆದಿತ್ಯರು ಯಜಮಾನ ನಲ್ಲಿಲ್ಲ ಪಿತೃ ಪಿತಾಮಹ ಪ್ರಪಿತಾಮಹರಲ್ಲಿ ಇರುತ್ತಾರೆ ಪ್ರಕೃತ ಯಜಮಾನನಲ್ಲಿರುವ ಭಗವದ್ರೂಪಗಳನ್ನು ತಿಳಿಯಬೇಕಾಗಿದೆ

ಈ ಪ್ರಶ್ನೆಗೆ ಹೀಗೆ ಸಮಾಧಾನ- ವಸುರುದ್ರಾದಿತ್ಯರು ಯಜಮಾನನಲ್ಲಿ ಇಂದ್ರಿಯಾಭಿ ಮಾನಿಗಳಾಗಿ ನೆಲೆಸಿದ್ದಾರೆ ವಸುಗಳೆಂದರೆ ವಾಸ ಮಾಡುವವರು ಯಜಮಾನನ ಇಂದ್ರಿಯಗಳಲ್ಲಿ ವಾಸ ಮಾಡಿ ಯಜಮಾನನನ್ನು ಸುಖವಾಗಿ ವಾಸ ಮಾಡಿಸುತ್ತಾರೆ ರುದ್ರರು ಇಂದ್ರಿಯಗಳನ್ನು ಪ್ರೇರಿಸದಿದ್ದರೆ ಯಜಮಾನ ದುಃಖಗೊಂಡು ಅಳುತ್ತಾನೆ, ರೋದನ ಮಾಡಿಸುವುದರಿಂದ ಅವರು ರುದ್ರರು ಆದಿತ್ಯರು ಆದಾನ ಮಾಡುತ್ತಾರೆ, ಇಂದ್ರಿಯಗಳಿಗೆ ತೃಪ್ತಿ ನೀಡುವುದಕ್ಕಾಗಿ ವಿಷಯಪದಾರ್ಥಗಳನ್ನು ಸ್ವೀಕರಿಸುತ್ತಾರೆ ಮಾನವನ ಬದುಕನ್ನು

ಭಗವಂತನ ಪ್ರೀತಿಗಾಗಿ ಯಜ್ಞರೂಪದಿಂದ ನಡೆಸಿಕೊಡುತ್ತಾರೆ ಪೂರ್ಣ ಆಯುಷ್ಯ ನೂರಹದಿನಾರು ವರ್ಷ ಅದರಲ್ಲಿ ಮೊದಲನೆ ಭಾಗ ಇಪ್ಪತ್ತನಾಲ್ಕು ವರ್ಷ ಯಜ್ಞದಲ್ಲಿ ಪ್ರಾತಃಸವನರೂಪವಾಗಿದೆ ಆಗ ಆಧಿವ್ಯಾಧಿಮರಣಗಳಿಂದ ಯಜ್ಞ ನಿಲ್ಲುವಂತಿದ್ದರೆ ನಾವು ವಸುಗಳನ್ನು ಬೇಡಬೇಕು ಅವರು ಆರೋಗ್ಯ ಆಯುಷ್ಯ ನೀಡಿ ಪ್ರಾತಃಸವನವನ್ನು ಪೂರ್ತಿಗೊಳಿಸುತ್ತಾರೆ ಮುಂದೆ ನಲವತ್ತನಾಲ್ಕು ವರ್ಷ ಮಾಧ್ಯಂದಿನ ಸವನ ಆಗ ಆಧಿ ವ್ಯಾಧಿ ಮುಂತಾದವು ಬಾರದಂತೆ ರುದ್ರರನ್ನು ಪ್ರಾರ್ಥಿಸಬೇಕು ಮುಂದಿನ ನಲವತ್ತೆಂಟು ವರ್ಷದ ಬದುಕು ತೃತೀಯ ಸವನವೆಂಬ ಅನುಸಂಧಾನ ಬೇಕು ಆಗ ಅದನ್ನು ನಡೆಸಿಕೊಡುವವರು ಆದಿತ್ಯರು ಹೀಗೆ ವಸು ರುದ್ರಾದಿತ್ಯರು ಮೂವತ್ತೊಂದು ಮಂದಿ ಯಜ್ಞಕರ್ತನಲ್ಲಿರುತ್ತಾರೆ ಎಂದು ಛಾಂದೋಗ್ಯ ಉಪನಿಷತ್ತಿನಲ್ಲಿ 'ಪುರುಷೋ ವಾವ ಯಜ್ಞಃ' (3 4 1) ಎಂದು ಮುಂತಾಗಿ ವರ್ಣಿತ ವಾಗಿದೆ ಪಿತೃಕಾರ್ಯವೂ ಒಂದು ಯಜ್ಞ ಎಂದಿಟ್ಟುಕೊಂಡರೆ ಯಜಮಾನನಲ್ಲಿರುವ ಮೂವತ್ತೊಂದು ಮಂದಿ ವಸುರುದ್ರಾದಿತ್ಯರಲ್ಲಿ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂಬ ಮೂರುರೂಪಗಳಿಂದ, ಅಂದರೆ ಒಟ್ಟು ತೊಂಬತ್ತಮೂರು ರೂಪಗಳಿಂದ ಅನಿರುದ್ಧನಿರುತ್ತಾನೆ ಎನ್ನಬಹುದು ವ್ಯಾಸದಾಸಸಿದ್ಧಾಂತ ಕೌಮುದಿಯಲ್ಲಿ ಮುಂದಿನ ಪದ್ಯ ವ್ಯಾಖ್ಯಾನ ಮಾಡುತ್ತಾ 'ಪ್ರದ್ಯುಮ್ನಾದಿಭಿಸ್ತ್ರಿತ್ವೇ ಷಾಣ್ಣವತ್ಯಂ ಬೋಧ್ಯಂ' ಎಂದು ಹೇಳಿದಂತೆ ಕಾಣುತ್ತದೆ ವಸ್ತುತಃ ಅದು 'ಷಾಣ್ಣವತ್ಯ' ಅಲ್ಲ, ತ್ರೈಣವತ್ಯವಿರಬೇಕು ಅಂದರೆ ಮೂವತ್ತೊಂದನ್ನು ತೊಂಬತ್ತಮೂರಾಗಿ ಮಾಡುವ ವಿಧಾನ, ತೊಂಬತ್ತಾರಾಗಿ ಅಲ್ಲ

**ಅನಲ ಯಮ ಸೋಮಾದಿ ಪಿತೃದೇವತೆಗಳಿಗೆ ಅನ್ನ**

ಆಶ್ವಲಾಯನ ಗೃಹ್ಯ ಪರಿಶಿಷ್ಟದಲ್ಲಿ ಸ್ನಾನಾಂಗ ಪಿತೃತರ್ಪಣವಿಧಿಯನ್ನು ಹೇಳುವಾಗ,

ಅಥ ದಕ್ಷಿಣಾಮುಖಃ ಪ್ರಾಚೀನಾವೀತೀ ಪಿತೃತೀರ್ಥೇನ ಸತಿಲಾಭಿರ- ದ್ಭಿರ್ವ್ಯಾಹೃತಿಭಿರೇವ ಸೋಮಃ ಪಿತುಮಾನ್, ಯಮೋಂಗಿರಸ್ವಾನ್, ಅಗ್ನಿಃ ಕವ್ಯವಾಹನಃ ಇತ್ಯಾದೀನ್ ಪಿತೄನ್ ತ್ರಿಸ್ತರ್ಪಯೇತ್ ।

ದಕ್ಷಿಣಾಭಿಮುಖವಾಗಿ ಯಜ್ಞೋಪವೀತವನ್ನು ಎಡಕ್ಕಿಟ್ಟುಕೊಂಡು ಪಿತೃತೀರ್ಥ ದಿಂದ ಎಳ್ಳುನೀರಿನ ಮೂರು ತರ್ಪಣಗಳನ್ನು ವ್ಯಾಹೃತಿಗಳಿಂದ ಕೊಡಬೇಕು ಎಂದಿದೆ ಪಿತೃಪಿತಾಮಹಾದಿಗಳು ಬರುವುದಿಲ್ಲ ಕೇವಲ ಅಗ್ನಿ ಯಮ ಸೋಮರಿಗೆ ಅನ್ನರೂಪ ವಾಗಿ ಎಳ್ಳುನೀರು ತರ್ಪಣ ಆಗ ಯಜಮಾನನಲ್ಲಿ ಅನಿರುದ್ಧ ತೊಂಬತ್ತಮೂರು ರೂಪಗಳಿಂದಿರುತ್ತಾನೆ ತಿಲೋದಕದಲ್ಲಿ ಪ್ರದ್ಯುಮ್ನ ಅದನ್ನು ವಿಭಾಗ ಮಾಡಿ ಕೊಡುವವನು ಸಂಕರ್ಷಣ ಉಣ್ಣುವವನು ಅಗ್ನಿ ಯಮ ಸೋಮರೊಳಗಿರುವ ವಾಸುದೇವ

**ಸಂಕರುಷಣ ವಿಭಾಗವ ಮಾಡಿ ಕೊಟ್ಟು :**

ಅನಿರುದ್ಧ ಪ್ರದ್ಯುಮ್ನನನ್ನು ವಾಸುದೇವನಿಗೆ ಅರ್ಪಿತ ಮಾಡಿದಾಗ ಸಂಕರ್ಷಣನು ಆ

ಪ್ರದ್ಯುಮ್ನನನ್ನು ವಿಭಾಗ ಮಾಡಿ ವಾಸುದೇವನಿಗೆ ಬಡಿಸುತ್ತಾನೆ ಒಂದು ದೀಪದಿಂದ ಅನೇಕ ದೀಪಗಳು ಹೊರ ಬಂದು ತಿರುಗಿ ಸೇರಿಸಿದರೆ ಒಂದಾಗುವಂತೆ ಲೀಲೆಯಿಂದ ಒಂದು ರೂಪ ಅನೇಕವಾಗಿ ತಿರುಗಿ ಒಂದರೊಡನೆ ಸೇರಿ ಐಕ್ಯ ಹೊಂದುವ ಲೀಲೆ ಇದು

**ಉಂಡುಣಿಪ ನಿತ್ಯಾನಂದ ಭೋಜನದಾಯಿ ತುರ್ಯಾಹ್ವ**

ತುರ್ಯಾಹ್ವ ಎಂದರೆ ನಾಲ್ಕನೆಯವನೆನಿಸಿದ ವಾಸುದೇವ ಅನಿರುದ್ಧಾದಿ ಚತುರ್ವ್ಯೂಹದಲ್ಲಿ ಈತ ನಾಲ್ಕನೆಯವ ಇವನು ಅಗ್ನಿ ಯಮ ಸೋಮಾದಿ ಪಿತೃಗಳಲ್ಲಿ ಇದ್ದು ತಾನು ಉಂಡು ಅವರಿಗೆ ಉಣಿಸುತ್ತಾನೆ 'ವಾಸುದೇವನು ಅನ್ನದೊಳು' ಎಂದು ಅನ್ನದಲ್ಲಿ ವಾಸುದೇವನನ್ನು ಚಿಂತನ ಮಾಡುವಾಗ ನಾರಾಯಣಾದಿ ಪಂಚರೂಪಗಳಲ್ಲಿ ಐದನೆಯವನಾದ ವಾಸುದೇವ ವಿವಕ್ಷಿತ ಪ್ರಕೃತದಲ್ಲಿ ಅನಿರುದ್ಧಾದಿ ಚತುರ್ವ್ಯೂಹಾಂತರ್ಗತ ನಾದ ನಾಲ್ಕನೆಯವ ಎಂದು ತಿಳಿಸಲು 'ವಾಸುದೇವ' ಎನ್ನದೆ 'ತುರ್ಯಾಹ್ವ' ಎಂದಿದ್ದಾರೆ ಆ ವಾಸುದೇವ ಅನ್ನ, ಈ ವಾಸುದೇವ ಉಣ್ಣುವವ ವಿರೋಧವಿಲ್ಲ ಮುಕ್ತರಿಗೆ ನಿತ್ಯಾನಂದ ನೀಡುವ ವಾಸುದೇವನೆ ಬೇರೆ ರೂಪದಿಂದ ಪಿತೃಗಳಿಗೆ ಭೋಜನದ ಆನಂದ ನೀಡುತ್ತಾನೆ ಪರಮಾತ್ಮನ ರೂಪಗಳಲ್ಲಿ ಭೇದವಿಲ್ಲ ಎನ್ನುತ್ತಿದ್ದಾರೆ, 'ನಿತ್ಯಾನಂದ ಭೋಜನದಾಯಿ' ಎಂಬ ವಿಶೇಷಣದಿಂದ

**ಷಣ್ಣವತಿ ನಾಮಕನು ವಸು ಮೂ**
**ಗಣ್ಣ ಭಾಸ್ಕರರೊಳಗೆ ನಿಂತು ಪ್ರ**
**ಪನ್ನರನುದಿನ ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ ।**
**ಪುಣ್ಯಕರ್ಮವ ಸ್ವೀಕರಿಸಿ ಕಾ**
**ರುಣ್ಯಸಾಗರನಾ ಪಿತೃಗಳಿಗ**
**ಗಣ್ಯಸುಖವಿತ್ತವರ ಪೊರೆವನು ಎಲ್ಲ ಕಾಲದಲಿ ॥ ೨೨ ॥**

ಕರುಣಾಸಾಗರನಾದ ಷಣ್ಣವತಿನಾಮಕನಾದ ಅನಿರುದ್ಧ ವಸು-ರುದ್ರ-ಆದಿತ್ಯ ರೊಳಗೆ ನಿಂತು ಭಕ್ತರು ನಿಷ್ಕಪಟ ಸದ್ಭಕ್ತಿಯಲ್ಲಿ ಮಾಡುವ ಪುಣ್ಯಕರ್ಮಗಳನ್ನು ಸ್ವೀಕರಿಸಿ ಆ ಪಿತೃಗಳಿಗೆ ಅಪರಿಮಿತ ಸುಖ ನೀಡಿ ಅವರನ್ನು ಎಲ್ಲ ಕಾಲದಲ್ಲಿ ಕಾಪಾಡುತ್ತಾನೆ

**ಷಣ್ಣವತಿನಾಮಕನು** ·

ಮನ್ವಾದ್ಯಾಶ್ಚ ಮಹಾಲಯಾ ಯುಗದಿನಾನ್ಯಾದಿತ್ಯಸಂಕ್ರಾಂತಯೋ
ದರ್ಶಾಶ್ಚ ವ್ಯತಿಪಾತ ವೈಧೃತಿದಿನಾನ್ಯನ್ವಷ್ಟಕಾಃ ಪೈತೃಕೇ ।

ಕಾಲಾಃ ಷಣ್ಣವತಿಃ ಸ್ಮೃತಾಶ್ಚ ಸತತಂ ದಾತುಃ ಸುಪುತ್ರಾರ್ಥಕಾಃ
ವಾಯಂ ತೋಯವನಂ ರಿಪೂ ರಿಪುಬಕಾ ಲೋಕಾ ರಿಪುಶ್ಚ ಕ್ರಮಾತ್ ॥ -ಕಾಲಾಮೃತ

ಒಂದು ವರ್ಷಕಾಲದಲ್ಲಿ ಮನ್ವಾದಿ ದಿನಗಳು ಹದಿನಾಲ್ಕು ಬರುತ್ತವೆ ಮಹಾಲಯ ದಿನಗಳು ಹದಿನಾರು ಕೃತತ್ರೇತಾ ದ್ವಾಪರ ಕಲಿಯುಗಾದಿಗಳೆಂದು ಯುಗಾದಿ ದಿನಗಳು ನಾಲ್ಕು ಸೂರ್ಯಸಂಕ್ರಮಣಗಳು ಹನ್ನೆರಡು, ಹನ್ನೆರಡು ದರ್ಶಗಳು, ಹದಿಮೂರು ವ್ಯತಿಪಾತಗಳು, ಹದಿಮೂರು ವೈಧೃತಿಗಳು ಮತ್ತು ಹನ್ನೆರಡು ತಿಸ್ರಾಷ್ಟಕಗಳು ಎಂದು ತೊಂಬತ್ತಾರು ತಿಲತರ್ಪಣಗಳು ಬರುತ್ತವೆ ಈ ಷಣ್ಣವತಿ ಶ್ರಾದ್ಧಗಳನ್ನು ತಪ್ಪದೆ ಮಾಡಬೇಕು 'ದಾತುಃ ಸುಪುತ್ರಾರ್ಥಕಾಃ' ಸತ್ಪುತ್ರಸಂತಾನಫಲ ಈ ತೊಂಬತ್ತಾರು ದಿನಗಳಲ್ಲಿ ಅನಿರುದ್ಧ ತೊಂಬತ್ತಾರು ರೂಪಗಳಿಂದ ನಿಯಾಮಕನಾಗಿದ್ದಾನೆ ಅವೇ ರೂಪಗಳಿಂದ ವಸು-ರುದ್ರ-ಆದಿತ್ಯರಲ್ಲಿಯೂ ಇದ್ದಾನೆ ಆದರಿಂದ ಷಣ್ಣವತಿ ಶ್ರಾದ್ಧದಲ್ಲಿ ವಸು-ರುದ್ರ-ಆದಿತ್ಯರಿಗೆ ತರ್ಪಣ ಸ್ನಾನಾಂಗ ತರ್ಪಣ ಅಗ್ನಿ-ಯಮ-ಸೋಮಾದಿಗಳಿಗೆ

ತೊಂಬತ್ತಾರು ರೂಪಗಳು ಯಾವುವು ಎಂದರೆ ತೊಂಬತ್ತಾರು ದಿನಗಳಲ್ಲಿ ಆಯಾ ದಿನಗಳ ನಾಮದಿಂದ ಕರೆಸುವ ರೂಪಗಳು ಮನ್ವಾದಿ ದಿನಗಳಲ್ಲಿ ಮನುಗಳಿಗೆ ಆದಿ ಜನಕನಾದ ಮನ್ವಾದಿನಾಮಕ ಅನಿರುದ್ಧನಿರುತ್ತಾನೆ ಮಹಾಲಯ ದಿನಗಳಲ್ಲಿ ಮಹಾಪ್ರಲಯಕಾರಿ ಮಹಾಲಯನಾಮಕ ರೂಪಗಳು ಯುಗಾದಿಗಳಲ್ಲಿ ಯುಗಪ್ರವರ್ತಕ ಯುಗಾದಿನಾಮಕ ರೂಪಗಳು ಸಂಕ್ರಮಣಗಳಲ್ಲಿ 'ಸಂ-ಕ್ರಮ-ಣ' ಅಂದರೆ ಚೆನ್ನಾಗಿ- ಮೂಲೋಕವನ್ನು ತ್ರಿವಿಕ್ರಮನಾಗಿ ಅಳೆದ- ಸುಖರೂಪಿಯಾದ ಅನಿರುದ್ಧ ಅಮಾವಾಸ್ಯೆಗಳಲ್ಲಿ 'ಅ-ಮಾ' ಅಪ್ರಮೇಯನಾದ ಭಗವಂತ 'ವ್ಯತಿಪಾತ'ಗಳಲ್ಲಿ ವಿಶೇಷವಾಗಿ ಅಧಿಕವಾಗಿ ರಕ್ಷಕನಾದ ಭಗವಂತ ವೈಧೃತಿಗಳಲ್ಲಿ ವಿ-ಧೃತಿ ವಿಶೇಷ ಧೈರ್ಯಸ್ವರೂಪನಾದ ಅನಿರುದ್ಧ ತ್ರಿಸ್ರಾಷ್ಟಕಗಳೆಂದರೆ ಮಾರ್ಗಶೀರ್ಷ ಪುಷ್ಯ ಮಾಘ ಫಾಲ್ಗುನ ಕೃಷ್ಣಪಕ್ಷಗಳಲ್ಲಿ ಬರುವ ಸಪ್ತಮಿ ಅಷ್ಟಮಿ ನವಮಿ ತಿಥಿಗಳು ಸಪ್ತಮಿಗಳಲ್ಲಿ ಸ-ಪ್ತ-ಮಿ, ಪ್ತ ಎಂದರೆ ಜಟೆ ಜಟಾಧಾರಿಯಾಗಿ ಲೋಕಕ್ಕೆ ತತ್ವಜ್ಞಾನ ನೀಡುವವನು, ಅಷ್ಟಮಿಗಳಲ್ಲಿ ವ್ಯಾಪ್ತಜ್ಞಾನವುಳ್ಳವ, ಸರ್ವಜ್ಞ ನವಮಿಗಳಲ್ಲಿ ನಿತ್ಯನೂತನ ಜ್ಞಾನವುಳ್ಳ ಭಗವಂತನಿರುತ್ತಾನೆ-

ವಿಜ್ಞೇಯ ಏತನ್ನಾಮಾಯಂ ಯೋಗವೃತ್ತ್ಯಾ ಹರಿಃ ಪ್ರಭುಃ ।
ಮಿತೋ ನೈವೇತ್ಯಮಾ ಯಸ್ಮಾತ್, ಮನೂನಾಂ ಕಾರಣಂ ತಥಾ ।
ತ್ರಿಪಾದಸಂಕ್ರಮಾತ್ ಸೌಖ್ಯಾತ್, ವಿಶೇಷಧೃತಿರೂಪತಃ ।
ವಿಶೇಷೇಣಾಧಿಕಃ ಪಾತಾ, ಮಹಾಲಯಕರೋ ಹರಿಃ ।
ಜಟಿತ್ವಾದ್ ಧೀಯುತತ್ವಾಚ್ಚ ಸಪ್ತಮೀ ಪರದೇವತಾ ।
ಅಂತೇ ಗಣಿತಭೀಷ್ಮತ್ವಾತ್ ಅಷ್ಟಮೀ ಪ್ರಾಣವಲ್ಲಭಾ ।
ನವಮೀ ನೂತನಜ್ಞಾನಾತ್ ॥

**ವಸು ಮೂಗಣ್ಣ ಭಾಸ್ಕರರೊಳಗೆ ನಿಂತು**

ಅಷ್ಟವಸುಗಳು ಏಕಾದಶ ರುದ್ರರು ದ್ವಾದಶಾದಿತ್ಯರು ಒಟ್ಟು ಮೂವತ್ತೊಂದು ಮಂದಿ ಅವರಲ್ಲಿ ಮೂರು ರೂಪಗಳಿಂದ ಅನಿರುದ್ಧ, ಒಟ್ಟು ತೊಂಬತ್ತಮೂರು, ಜೊತೆಗೆ ಪ್ರದ್ಯುಮ್ನ ಸಂಕರ್ಷಣ ವಾಸುದೇವರು ಮೂವರು ಎಂದು ತೊಂಬತ್ತಾರು ಎನ್ನಬಹುದೆ? ಈ ಪ್ರಶ್ನೆಗೆ ಮನ್ವಾದಿ ಮಹಾಲಯ ಮುಂತಾದ ಸಾಮದ ತೊಂಬತ್ತಾರು ರೂಪಗಳೆ ಇರುವಾಗ ತಿರುಗಿ ಕಷ್ಟದಿಂದ ಬೇರೆ ರೀತಿ ಬೇಡವೆಂದು ಒಂದು ಉತ್ತರ ವಸ್ತುತಃ ಷಣ್ಣವತಿ ಶ್ರಾದ್ಧದ ಪಿತೃ ಪಿತಾಮಹ ಪ್ರಪಿತಾಮಹರಲ್ಲಿ ಅಷ್ಟವಸುಗಳು ಏಕಾದಶ ರುದ್ರರು ದ್ವಾದಶಾದಿತ್ಯರು ಇಲ್ಲ ಏಕೆಂದರೆ ಅವರು ಪಿತೃದೇವತೆಗಳೆ ಅಲ್ಲ ಅವರು ಕೇವಲ ಗಣದೇವತೆಗಳು, ಯಜ್ಞಗಳಲ್ಲಿ ಹವಿರ್ಭಾಗಿಗಳು

ಪ್ರಧಾನವಾಯುರ್ವಸವೋ ರುದ್ರಾದಿತ್ಯಮರುದ್ಗಣಾಃ ।
ಬೃಹಸ್ಪತಿರ್ಋಭುರ್ದ್ಯಾವಾಪೃಥಿವ್ಯಾವಶ್ವಿನೌ ತಥಾ ।
ವಿಶ್ವೇದೇವಾಶ್ಚ ಪಿತರಃ ಶತಸ್ಥಾ ದೇವತಾ ಮತಾಃ ॥

ಎಂದು ಶತಸ್ಥದೇವತೆಗಳನ್ನು ಹೇಳುವ ವಚನದಲ್ಲಿ ವಸು ರುದ್ರ ಆದಿತ್ಯರ ಜೊತೆಗೆ, ಬೇರೆಯಾಗಿ ಪಿತೃಗಳನ್ನು ಸೇರಿಸುತ್ತಾರೆ ಪ್ರಧಾನವಾಯು- 1, ವಸುಗಳು- 8, ರುದ್ರರು- 11, ಆದಿತ್ಯರು- 12, ಮರುತರು- 49, ವಿಶ್ವೇದೇವತೆಗಳು- 10, ಬೃಹಸ್ಪತಿ- 1, ಋಭು- 1, ಪಿತೃಗಳು- 3, ದ್ಯಾವಾಪೃಥಿವಿಗಳು- 2, ಅಶ್ವಿನೀದೇವತೆಗಳು- 2 ಹೀಗೆ ಒಟ್ಟು ನೂರು ಮಂದಿ ಶತಸ್ಥದೇವತೆಗಳು, ಸೋಮಪಾನಾರ್ಹರು, ಅಂದರೆ ಯಜ್ಞದಲ್ಲಿ ಹವಿರ್ಭಾಗಿಗಳು ಇಲ್ಲಿ ಪಿತೃಗಳು ಮೂರು ಮಂದಿ ಹೊರತು, ಮೂವತ್ತೊಂದು ಮಂದಿ ಎಂದಿಟ್ಟುಕೊಂಡರೆ ನೂರಕ್ಕಿಂತ ಹೆಚ್ಚಾಗುತ್ತಾರೆ ಈಗ ಮೂರು ಮಂದಿ ಪಿತೃದೇವತೆಗಳು ಯಾರು? ಅನಲ ಯಮ ಸೋಮಾದಿಗಳಂತೂ ಅಲ್ಲ ಆದಿವದದಿಂದ, ಅವರು ಮೂರಕ್ಕಿಂತ ಹೆಚ್ಚೇ ಇದ್ದಾರೆ

ವಸುರುದ್ರಾದಿತ್ಯಸಂಜ್ಞಾಃ ಪಿತರಃ ಶ್ರಾದ್ಧದೇವತಾಃ ।
ಪ್ರೀಣಯಂತಿ ಮನುಷ್ಯಾಣಾಂ ಪಿತೄನ್ ಶ್ರಾದ್ಧೇನ ತರ್ಪಿತಾಃ ॥

ಎಂಬ ವಚನದಂತೆ ವಸು ರುದ್ರ ಆದಿತ್ಯರೆ ಮನುಷ್ಯರ ಪಿತೃಗಳಲ್ಲಿ ಸನ್ನಿಹಿತರು ಅವರು ಮೂವತ್ತೊಂದು ಮಂದಿ ಅಲ್ಲ, ಮೂವರು ವಸು ಎಂಬ ಒಬ್ಬ ದೇವತೆ, ರುದ್ರ ಎಂಬ ಒಬ್ಬ ದೇವತೆ, ಆದಿತ್ಯ ಎಂಬ ಒಬ್ಬ ದೇವತೆ ಹೀಗೆ ಮೂವರು ಬೇರೆ ಇದ್ದಾರೆ

ವಸೂ ರುದ್ರಸ್ತಥಾದಿತ್ಯಃ ಪಿತ್ರಾದಿತ್ರಿತಯೇ ಕ್ರಮಾತ್ ।
ಮಾತಾಮಹಾದಿ ಮಾತ್ರಾದಿ ತ್ರಯೇ ಚ ಸ್ಮೃತಿಮರ್ಹತಿ ॥

ಎಂಬ ವಚನದಲ್ಲಿ ಹಾಗೆಯೆ ವಸು ರುದ್ರ ಆದಿತ್ಯರನ್ನು ಏಕವಚನದಿಂದಲೆ ಹೇಳಿದೆ

ವಸವಃ ಪಿತರೋ ಜ್ಞೇಯಾ ರುದ್ರಾಸ್ತತ್ರ ಪಿತಾಮಹಾಃ ।
ಪಿತುಃ ಪಿತಾಮಹಾಃ ಪ್ರೋಕ್ತಾ ಆದಿತ್ಯಾ ಬರ್ಹಿಷಿ ಸ್ಥಿತಾಃ ॥

ಎಂಬ ಬಹುವಚನವೂ ಕೆಲವೆಡೆ ಕಂಡು ಬರುತ್ತದೆ ಆದರೆ, ಅಲ್ಲಿ ಪಿತರಃ, ಪಿತಾಮಹಾ ಪ್ರಪಿತಾಮಹಾಃ ಎಂದು ಒಬ್ಬ ಪಿತ, ಒಬ್ಬ ಪಿತಾಮಹ, ಒಬ್ಬ ಪ್ರಪಿತಾಮಹನನ್ನೆ ಬಹುವಚನದಿಂದ ಕರೆದುದು ಹೇಗೆ?

'ಶುಂಧಂತಾಂ ಪಿತರಃ ಶುಂಧತಾಂ ಪಿತಾಮಹಾಃ ಶುಂಧಂತಾಂ ಪ್ರಪಿತಾಮಹಾಃ' ಎಂಬಲ್ಲಿಯೂ ಹಾಗೇ ಬಹುವಚನವಿದೆ, ಹೇಗೆ? ಎಂದರೆ,

'ಪಿತರ್ಯಥೋಕ್ತನಾಮಗೋತ್ರ ಯೇ ಚ ತ್ವಾಮತ್ರಾನು'

ಎಂದು ಪಿತನನ್ನೂ ಜೊತೆಗೆ ಅವನ ಅನುವರ್ತಿಗಳನ್ನೂ ಸ್ಮರಿಸಿಕೊಂಡು, ಅವರೆಲ್ಲರಿಗೂ 'ತಸ್ಮೈ ತೇ ಸ್ವಧಾ ಸಮಸ್ತೇಭ್ಯಶ್ಚ' ಎಂದು ಒಂದು ಪಿಂಡಪ್ರದಾನ ಮಾಡುವುದು ಸಂಪ್ರದಾಯ ಆದರಿಂದ ಒಬ್ಬ ಪಿತನ ಜೊತೆಗೆ ಏಕಪಿಂಡಭಾಗಿಗಳಾದ ಅವನ ಅನುವರ್ತಿಗಳನ್ನು ಸೇರಿಸಿ ಬಹುವಚನದಿಂದ ಕರೆಯುವುದು ಕಂಡಿದೆ ಹೀಗಾಗಿ ಪಿತನಲ್ಲಿಯೂ ಅವನ ಅನುವರ್ತಿಗಳಲ್ಲಿಯೂ ಒಬ್ಬ ವಸು ಬೇರೆ ಬೇರೆ ಅಂಶಗಳಿಂದ ಇದ್ದಾನೆ, ಅಂಶಗಳು ಬಹುವಾದ್ದರಿಂದ ಬಹುವಚನ ಎನ್ನಬೇಕು

ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ ।

ಎಂದು ಇಬ್ಬರು ವಿಶ್ವೇದೇವತೆಗಳನ್ನು ಬಹುವಚನದಿಂದ ಕರೆಯುವುದು ಗೌರವಾರ್ಥ ಹಾಗೇ ಇಲ್ಲಿಯೂ ಒಬ್ಬ ವಸುವನ್ನು ಬಹುವಚನದಿಂದ ಕರೆಯುವುದು ಗೌರವಾರ್ಥ ಎಂದರೂ ತಪ್ಪಿಲ್ಲ ಆದರಿಂದ ಪಿತ್ರಾದ್ಯಂತರ್ಗತ ವಸುರುದ್ರಾದಿತ್ಯರು ಮೂವರೆ ಅವರಲ್ಲಿ ತೊಂಬತ್ತಾರು ದಿನಗಳಿಗೆ ನಿಯಾಮಕವಾದ ತೊಂಬತ್ತಾರು ರೂಪಗಳಿಂದ ಅನಿರುದ್ಧನಿದ್ದಾನೆ ಎನ್ನುವುದು ಸೂಕ್ತ

**ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ ಪುಣ್ಯಕರ್ಮವ ಸ್ವೀಕರಿಸಿ .**

ನಿಷ್ಕಪಟ ಸದ್ಭಕ್ತಿಯಿಂದ ಶ್ರದ್ಧೆಯಿಂದ ಮಾಡಿದರೇ ಅದು ಶ್ರಾದ್ಧವೆನಿಸುತ್ತದೆ ಅದನ್ನು ಪಿತ್ರಂತರ್ಗತ ಜನಾರ್ದನ ವಾಸುದೇವ ಸ್ವೀಕರಿಸುತ್ತಾನೆ ವಿವಾಹಾದಿ ಶುಭಕರ್ಮಕ್ಕಿಂತ ವಿಲಕ್ಷಣ ಈ ಕರ್ಮವೆಂದು ಪುಣ್ಯಕರ್ಮವೆನ್ನುತ್ತಾರೆ ಹೊರತು ಅಶುಭಕರ್ಮವೆಂದಲ್ಲ

**ಪಿತೃಗಳಿಗಗಣ್ಯ ಸುಖವಿತ್ತು**

ನಾವು ನೀಡುವ ಪಿಂಡತರ್ಪಣಗಳು ನಮ್ಮ ಪಿತೃಗಳಿಗೆ ಹೇಗೆ ಸಿಗುತ್ತವೆ? ಅವರೇನೂ ನಾಂಶರಲ್ಲ ಸರ್ವಜ್ಞರೂ ಅಲ್ಲ ಹಾಗಿದ್ದರೆ ಅವರು ನಾವು ಕರೆದಾಗ ಅಂಶದಿಂದ ಬಂದು ಸ್ವೀಕರಿಸುತ್ತಿದ್ದರು ನಿರಂಶಜೀವರಾಗಿದ್ದು ಅಜ್ಞರಾಗಿದ್ದು ಸ್ವಕರ್ಮಾನುಸಾರ ಯಾವುದೋ

ಜನ್ಮ ತಳೆದಿರುತ್ತಾರೆ ಆದರೆ ಅವರ ಅಂತರ್ಗತರಾದ ವಸುರುದ್ರಾದಿತ್ಯರು ಅಂಶದಿಂದ ಪಿಂಡದಲ್ಲಿ ಸನ್ನಿಹಿತರಾಗಿ ಕರ್ಮವನ್ನು ಸ್ವೀಕರಿಸಿ ಆ ಪಿತೃಗಳಿಗೆ ಸುಖ ನೀಡುತ್ತಾರೆ ಅವರಿಗೆ ಈ ಸಾಮರ್ಥ್ಯ ಅವರೊಳಗೆ ನಿಯಾಮಕನಾದ ಅನಿರುದ್ಧನಿಂದ ಬಂದಿದೆ ಅನಿರುದ್ಧನೇ ಅವರ ಮೂಲಕ ಪಿತೃಗಳಿಗೆ ಅಪರಿಮಿತ ಸುಖ ನೀಡುತ್ತಾನೆ ಕರ್ತನಿಗೆ ಈ ಅನುಸಂಧಾನವಿದ್ದರೆ ಮಾತ್ರ ಇದು ಸಾಧ್ಯ

**ಅವರ ಪೊರೆವನು ಎಲ್ಲ ಕಾಲದಲಿ :**

'ಅವರನ್ನು' ಎಂದರೆ ಪಿತೃಗಳನ್ನು ಮತ್ತು ಶ್ರಾದ್ಧಕರ್ತನನ್ನು ಪೊರೆಯುತ್ತಾನೆ, ನರಕದಲ್ಲಿ ಬೀಳದಂತೆ ಕಾಪಾಡುತ್ತಾನೆ ಶ್ರಾದ್ಧ ಮಾಡದಿದ್ದರೆ ಅವನು ಪಿತೃಗಳೊಂದಿಗೆ ನರಕಭಾಗಿಯಾಗುತ್ತಾನೆ ಮಾಡಿದರೆ ಇಬ್ಬರಿಗೂ ರಕ್ಷಣೆ ಸಿಗುತ್ತದೆ ಮತ್ತು ಪಿತೃಗಳ ಅನುಗ್ರಹದಿಂದ, ಅಂದರೆ ಅವರ ಅಂತರ್ಗತರಾದ ದೇವತೆಗಳ ಅನುಗ್ರಹದಿಂದ ಶ್ರಾದ್ಧಕರ್ತನಿಗೆ ಸತ್ಪುತ್ರಸಂತತಿ ಲಾಭ ಅದರಿಂದ ಬದುಕಿರುವಾಗಲೂ ಸುಖ, ಸತ್ತ ಮೇಲೂ ಪಿತೃಕಾರ್ಯ ನಡೆಯುವುದರಿಂದ ಸುಖ ಅದರಿಂದ 'ಪೊರೆವನು ಎಲ್ಲ ಕಾಲದಲಿ' ಎಂದಿದ್ದಾರೆ

**ಸುತಪ ಏಕೋತ್ತರ ಸುಪಂಚಾ**
**ಶತ ವರುಣ ಕರಣದಿ ಚತುರ ವಿಂ**
**ಶತಿ ಸುತತ್ವದಿ ಧಾತುಗಳೊಳಿದ್ದವಿರತನಿರುದ್ಧ ।**
**ಜತನ ಮಾಳ್ಪನು ಜಗದಿ ಜೀವರ**
**ಪ್ರತತಿಗಳ ಷಣ್ಣವತಿ ನಾಮಕ**
**ಚತುರ ಮೂರ್ತಿಗಳರ್ಚಿಸುವರದರಿಂದ ಬಲ್ಲವರು ॥ ೨೩ ॥**

ಸುತಪನಾಮಕನಾದ ಅನಿರುದ್ಧ ಐವತ್ತೊಂದು ವರ್ಣಗಳಲ್ಲಿ, ಹನ್ನೊಂದು ಇಂದ್ರಿಯಗಳಲ್ಲಿ, ಇಪ್ಪತ್ತನಾಲ್ಕು ತತ್ವಗಳಲ್ಲಿ ಮತ್ತು ಹತ್ತು ಧಾತುಗಳಲ್ಲಿ ಹೀಗೆ ತೊಂಬತ್ತಾರು ಸ್ಥಾನಗಳಲ್ಲಿ ತೊಂಬತ್ತಾರು ರೂಪಗಳಿಂದ ಷಣ್ಣವತಿ ನಾಮಕನಾಗಿದ್ದು ಸದಾ ಜಗತ್ತಿನಲ್ಲಿ ಜೀವರ ಸಮೂಹಗಳನ್ನು ರಕ್ಷಿಸುತ್ತಾನೆ ಈ ಕಾರಣದಿಂದಲೇ ಬಲ್ಲವರು ಅನಿರುದ್ಧಾದಿ ಚತುರ್ಮೂರ್ತಿಗಳನ್ನು ಅರ್ಚಿಸುತ್ತಾರೆ

**ಸುತಪ**

ಹಿರಣ್ಯನಾಭಃ ಸುತಪಾಃ ಪದ್ಮನಾಭಃ ಪ್ರಜಾಪತಿಃ ।

ಎಂದು ವಿಷ್ಣುಸಹಸ್ರನಾಮದಲ್ಲಿ ಸುತಪನಾಮವನ್ನು ಹೇಳಲಾಗಿದೆ ಅಸುರರ ಮಾಯೆಯನ್ನು ಸುಟ್ಟು ಹಾಕುವನು ಎಂದರ್ಥ ಹಾಗೆ ಬೃಹತೀಸಹಸ್ರ ಮಂತ್ರ ಹೇಳುತ್ತದೆ

ಸಹಸ್ರನಾಮಗಳೆಲ್ಲವೂ ನಮ್ಮ ಶರೀರನಾಡಿಗಳಲ್ಲಿ ಧಾರಕನಾಗಿರುವ ಭಗವಂತನ ನಾಮಗಳು ಅದರಿಂದ ಶ್ರಾದ್ಧಕರ್ತನಲ್ಲಿಯೂ ಪಿತೃಗಳಲ್ಲಿಯೂ ಅವರ ಶರೀರಗಳಲ್ಲಿ ಈ ಸುತಪನಾಮಕ ಹರಿ ಇದ್ದು ಆಸುರೀಮಾಯೆ ಮುಂತಾದ ದುಷ್ಟಶಕ್ತಿಗಳನ್ನು ಸುಟ್ಟು ರಕ್ಷಣೆ ನೀಡುತ್ತಾನೆ

**ಏಕೋತ್ತರ ಸುಪಂಚಾಶತ ವರಣ ಕರಣದಿ**
**ಚತುರವಿಂಶತಿಸುತತ್ವದಿ ಧಾತುಗಳೊಳಿದ್ದು**

ಅಕಾರದಿಂದ ಕ್ಷಕಾರದ ವರೆಗೆ ಐವತ್ತೊಂದು ಅಕ್ಷರಗಳ ಸ್ಥಾನಗಳು ಶರೀರದಲ್ಲಿ ಇವೆ ಮಾತೃಕಾನ್ಯಾಸದಲ್ಲಿ ಇದು ಸ್ಪಷ್ಟವಿದೆ ತಲೆ, ಮುಖ, ಬಲಗಣ್ಣು, ಎಡಗಣ್ಣು, ಬಲಗಿವಿ, ಎಡಗಿವಿ ಮುಂತಾದ ಐವತ್ತೊಂದು ಸ್ಥಾನಗಳಲ್ಲಿ ಐವತ್ತೊಂದು ವರ್ಣಗಳಿವೆ ಅವುಗಳಲ್ಲಿ ಐವತ್ತೊಂದು ರೂಪಗಳಿಂದ ಅನಿರುದ್ಧ ನಿಯಾಮಕನಾಗಿದ್ದಾನೆ ಹಾಗೇ ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ ಹಾಗೂ ಮನಸ್ಸು ಎಂದು ಹನ್ನೊಂದು ಇಂದ್ರಿಯಗಳಲ್ಲಿಯೂ ನಿಯಾಮಕವಾದ ಹನ್ನೊಂದು ಭಗವದ್ರೂಪಗಳಿವೆ ತತ್ವನ್ಯಾಸ ಪ್ರಕಾರ ಅವ್ಯಕ್ತಮಹದಹಂಕಾರಾದಿ ಇಪ್ಪತ್ತನಾಲ್ಕು ತತ್ವಗಳಿಗೂ ಶರೀರದಲ್ಲಿ ಬಲಭುಜ, ಎಡಭುಜ, ಬಲತೊಡೆ, ಎಡತೊಡೆ ಮುಂತಾಗಿ ಇಪ್ಪತ್ತನಾಲ್ಕು ಸ್ಥಾನಗಳಿವೆ ಧಾತುಗಳು ಶರೀರದಲ್ಲಿ ಎರಡು ಬಗೆ ಸಪ್ತಧಾತು ಮತ್ತು ತ್ರಿಧಾತುಗಳೆಂದು ರಸ, ರಕ್ತ, ಮಾಂಸ, ಮೇದ, ಮಜ್ಜಾ, ಸ್ನಾಯು, ಅಸ್ಥಿ ಎಂಬ ಸಪ್ತಧಾತುಗಳು, ವಾತ, ಪಿತ್ತ, ಕಫ ಎಂಬ ಮೂರು ಧಾತುಗಳು ಸೇರಿ ಧಾತುಗಳು ಹತ್ತು ಶರೀರದಲ್ಲಿ ಹತ್ತು ಧಾತುಗಳಿಗೆ ನಿಯಾಮಕವಾದ ಹತ್ತು ಭಗದ್ರೂಪಗಳಿವೆ ಹೀಗೆ ಒಟ್ಟು ತೊಂಬತ್ತಾರು ರೂಪದವನಾದ್ದರಿಂದ ಷಣ್ಣವತಿನಾಮಕನೆನಿಸುತ್ತಾನೆ

**ಷಣ್ಣವತಿನಾಮಕ** ·

ಹಿಂದಿನ ಪದ್ಯದಲ್ಲಿ 'ಮನ್ವಾದಿ' 'ಮಹಾಲಯ' ಮುಂತಾದ ನಾಮದ ತೊಂಬತ್ತಾರು ರೂಪಗಳಿರುವ ಪ್ರಯುಕ್ತ ಅನಿರುದ್ಧ ಷಣ್ಣವತಿನಾಮಕನೆಂದು ಹೇಳಿದ್ದಾರೆ ಈಗ, ವರ್ಣ, ಇಂದ್ರಿಯ, ತತ್ವ, ಧಾತುಗಳಲ್ಲಿ ತೊಂಬತ್ತಾರು ರೂಪಗಳಿರುವುದರಿಂದ ಅವನೆ ಷಣ್ಣವತಿ ನಾಮಕನೆಂದಿದ್ದಾರೆ

**ಜತನ ಮಾಳ್ಪನು ಜಗದಿ ಜೀವರ ಪ್ರತತಿಗಳ**

'ಸುತಪ' ಶಬ್ದಕ್ಕೆ ಸುತರಂತೆ ಕಂಡು ಪಾಲನ ಮಾಡುವ ಭಗವಂತ ಎಂದೂ ಅರ್ಥ ಜಗದ ತಂದೆಯಾಗಿ ಎಲ್ಲ ಸಜ್ಜೀವರನ್ನೂ ರಕ್ಷಣೆ ಮಾಡುತ್ತಾನೆ 'ಸು-ತಪ' ಚೆನ್ನಾಗಿ ದುಷ್ಟಶಕ್ತಿಗಳನ್ನು ಸುಟ್ಟು ಹಾಕುತ್ತಾನೆ ಎಂಬ ಅರ್ಥದಲ್ಲಿ ಎಲ್ಲ ಅಪಾಯಗಳಿಂದ ಸಜ್ಜೀವರನ್ನು ರಕ್ಷಿಸುತ್ತಾನೆ ಎಂದೂ ಹೇಳುತ್ತದೆ ಈ ಶಬ್ದ 'ಸು-ತಪ' ಒಳ್ಳೆ ಆಲೋಚನೆ, ಬೌದ್ಧಿಕ ಚಟುವಟಿಕೆ ನೀಡಿಯೂ ರಕ್ಷಿಸುತ್ತಾನೆ 'ಸುತ-ಪ'- ಸೋಮಲತೆಯನ್ನು ಹಿಂಡಿ ತೆಗೆದ ರಸ 'ಸುತ' ಎನಿಸುತ್ತದೆ ಅದನ್ನು 'ಪ' ಪಾನ ಮಾಡುವವನು ಶರೀರದ ಆರೋಗ್ಯ ಕಾಪಾಡುವ ರಸಾಯನ ಸೋಮರಸ ಅದನ್ನು ಶರೀರದೊಳಗಿರುವ ಭಗವಂತ ಪಾನ ಮಾಡಿ ಶರೀರವನ್ನು ಆರೋಗ್ಯದಲ್ಲಿರಿಸಿ ಕಾಪಾಡುತ್ತಾನೆ

**ಚತುರಮೂರ್ತಿಗಳರ್ಚಿಸುವರದರಿಂದ ಬಲ್ಲವರು :**

ಅಜ್ಞರು ರಾಮ ಕೃಷ್ಣ ನರಸಿಂಹ ಮುಂತಾದ ಅವತಾರರೂಪಗಳನ್ನು ಮಾತ್ರ ಅರ್ಚಿಸುತ್ತಾರೆ ಬಲ್ಲವರು ಅನಿರುದ್ಧಾದಿ ಚತುರ್ಮೂರ್ತಿಗಳನ್ನು ಅರ್ಚಿಸುತ್ತಾರೆ ಅನಿರುದ್ಧಾದಿ ಮೂರ್ತಿಗಳು ಅಧಿದೈವದಲ್ಲಿ ಸೃಷ್ಟಿ-ಸ್ಥಿತಿ-ಲಯ-ಮೋಕ್ಷ ಕಾರ್ಯ ಗಳನ್ನು ನಡೆಸುವಂತೆ ಅಧ್ಯಾತ್ಮ ಅಧಿಭೂತಗಳಲ್ಲಿಯೂ ಭೋಕ್ತೃ-ಭೋಜ್ಯರೂಪ ಗಳಿಂದ ಇದ್ದು ಪ್ರತಿಕ್ಷಣ ಅವಿರತವಾಗಿ ಜೀವರ ಶರೀರಗಳನ್ನು ಕಾಪಾಡುತ್ತಾರೆ ರಾಮಕೃಷ್ಣಾದಿ ಅವತಾರರೂಪಗಳು ಆಯಾ ನಿರ್ದಿಷ್ಟ ಕಾಲಗಳಲ್ಲಿ ಅವತರಿಸಿ ಬಲಕಾರ್ಯ-ಜ್ಞಾನಕಾರ್ಯಗಳನ್ನು ನಡೆಸುತ್ತಾರೆ ಅನಿರುದ್ಧಾದಿ ಮೂರ್ತಿಗಳು ಸದಾ ಶರೀರ-ಮನಸ್ಸು-ಇಂದ್ರಿಯಗಳನ್ನು ಸುಸ್ಥಿತಿಯಲ್ಲಿಟ್ಟು ಕಾಪಾಡುತ್ತಾರೆ ಭಗವದ್ರೂಪ ಗಳಲ್ಲಿ ಪರಸ್ಪರ ಭೇದವಿಲ್ಲದಿದ್ದರೂ ಅವು ನಿರ್ದಿಷ್ಟ ಕಾರ್ಯಗಳನ್ನು ಮಾಡುತ್ತ ಹಾಗೆ ಉಪಾಸನೆ ಮಾಡಿದರೆ ಫಲ ನೀಡುತ್ತವೆ

**ಅಬುಜಜಾಂಡೋದರನು ವಿಪಿನದಿ**
**ಶಬರಿಯೆಂಜಲನುಂಡ, ಗೋಕುಲ**
**ದಬಲೆಯರನೊಲಿಸಿದನು, ಋಷಿಪತ್ನಿಯರು ಕೊಟ್ಟನ್ನ ।**
**ಸುಭುಜ ತಾ ಭುಂಜಿಸಿದ ಸ್ವರಮಣ**
**ಕುಬುಜೆಗಂಧಕ್ಕೆ ಒಲಿದ, ಮುನಿಗಣ**
**ವಿಬುಧ ಸೇವಿತ ಬಿಡುವನೇ ನಾವಿತ್ತ ಕರ್ಮಫಲ ॥ ೨೪ ॥**

ಬ್ರಹ್ಮಾಂಡವನ್ನೇ ಉದರದೊಳಗೆ ಹುದುಗಿಸಿಕೊಂಡಿರುವ ಶ್ರೀಹರಿ ಕಾಡಿನಲ್ಲಿ ಶಬರಿಯ ಎಂಜಲನ್ನು ಉಂಡಿದ್ದಾನೆ ಗೋಕುಲದ ಅಬಲೆಯರನ್ನು ಒಲಿಸಿದ್ದಾನೆ ಋಷಿಪತ್ನಿಯರು ಕೊಟ್ಟ ಅನ್ನ ಭುಂಜಿಸಿದ್ದಾನೆ ಕುಬುಜೆಯ ಗಂಧಕ್ಕೆ ಒಲಿದಿದ್ದಾನೆ ಮುನಿಗಣಗಳಿಂದಲೂ ವಿಬುಧರಿಂದಲೂ ಸೇವಿತನಾದ, ಸುಭುಜನೆನಿಸಿದ, ಸ್ವರಮಣನೆನಿಸಿದ ಆ ಹರಿ ನಾವು ನೀಡಿದ ಕರ್ಮಫಲವನ್ನು ಬಿಡುವನೆ?

**ಅಬುಜಜಾಂಡೋದರನು :**

ಇಡಿ ಬ್ರಹ್ಮಾಂಡವನ್ನ ಹೊಟ್ಟೆಯೊಳಗಿಟ್ಟುಕೊಂಡು 'ಅತ್ಯತಿಷ್ಠದ್ ದಶಾಂಗುಲಂ' ಎಂದು ಹೊರಗೂ ವ್ಯಾಪಿಸಿರುವ ಆ ಮಹಾಕಾಯದ ಹರಿಗೆ ಕಾಡಿನಲ್ಲಿ ಶಬರಿ ನೀಡಿದ ಎಂಜಲು ಬೇಕಾಗಿತ್ತೆ? ಗೋಕುಲದ ಹೆಣ್ಣುಗಳ ಅಧರರಸ ಸವಿಯಬೇಕಾಗಿತ್ತೆ? ಋಷಿಪತ್ನಿಯರ ಅನ್ನ ಸಾಕೆ? ಕುಬುಜೆ ನೀಡಿದ ಗಂಧ ಅವನ ಮೈಗೆ ಅದಾವ ಮೂಲೆಗೆ? ಆದರೂ ಭಕ್ತಿಯನ್ನು ಮೆಚ್ಚುವ ಹರಿ ಅವಾವುದನ್ನೂ ಬಿಡಲಿಲ್ಲ ಭಕ್ತಿಯಿಂದ ನಾವಿತ್ತ ಕರ್ಮಫಲ ಬಿಡುವನೆ?

ಆದರೂ ಇಲ್ಲಿ ಪ್ರಶ್ನೆ ಬರುತ್ತದೆ- ನಾವು ಭೋಜನಕಾಲದಲ್ಲಿ ಬಾಯಿಗೆ ಹಾಕಿಕೊಂಡ ತುತ್ತನ್ನು ಅಗಿದು ರಸವನ್ನು ಸವಿದು ಚಪ್ಪರಿಸುತ್ತೇವೆ ಬಳಿಕ ನುಂಗಿ ಆ ಎಂಜಲನ್ನೇ ಹೊಟ್ಟೆಯೊಳಗಿರುವ ವೈಶ್ವಾನರನಾಮಕನಾದ ಭಗವಂತನಿಗೆ ಪವಿತ್ರವಾದ ಆಹುತಿ ಎಂದು ನೀಡುತ್ತೇವೆ, ಈ ಎಂಜಲನ್ನು ಭಗವಂತ ಉಣಬೇಕೆ?

ಮುಖದಲ್ಲಿರುವ ಅಗ್ನಿ ಅನ್ನವನ್ನು ಅಲ್ಲಿಯೇ ಒಂದು ಹಂತದವರೆಗೆ ಪಚನ ಮಾಡಿ ಅಲ್ಲಿಯೆ ಇರುವ ಭಗವಂತನಿಗೆ ಸಮರ್ಪಿಸುತ್ತಾನೆ ಎಂದು ಉಪನಿಷತ್ತು ಹೇಳುತ್ತಿದೆ ನಾವು ಅಗಿದು ಅನ್ನರಸವನ್ನು ಸವಿಯುವುದೆಂದರೆ ಇದೇ ಆದರೂ ಅದು ನಮ್ಮ ಎಂಜಲಾಗಲಿಲ್ಲವೆ?

ಗೋವಿಂದ ನಾಮೋಚ್ಚಾರಣ ಮಾಡುತ್ತ ಭಕ್ತಿಯಿಂದ ಅಗಿದು ರಸವನ್ನು ಪರೀಕ್ಷಿಸಿ ಇದು ಚೆನ್ನಾಗಿದೆ, ಭಗವಂತ ಪ್ರೀತನಾಗಲಿ ಎಂದು ಶಬರಿಯ ಮನೋಭಾವದಿಂದ ವೈಶ್ವಾನರನಿಗೆ ಅರ್ಪಿಸುತ್ತೇವೆ ಎಂದರೆ ಸರಿಯೆ ಆದರೆ ಈ ಅನುಸಂಧಾನ ಎಷ್ಟು ಮಂದಿಗೆ ಇರುತ್ತದೆ? ನಾವು ಭಗವಂತನನ್ನು ಮರೆತು ರಸವನ್ನು ಸವಿದು ಎಂಜಲು ಮಾಡಿ ನುಂಗುತ್ತೇವೆ ಬಳಿಕ ಭಗವಂತನನ್ನು ಸ್ಮರಿಸಿ ಪಾರಣವನ್ನು ಕೃಷ್ಣಾರ್ಪಣವೆನ್ನುತ್ತೇವೆ ಇದನ್ನು ಭಗವಂತನು ಸ್ವೀಕರಿಸುವನೆ? ಎಂಜಲನ್ನು ಭಗವಂತನಿಗೆ ನೀಡುವುದು ಪಾಪಕರ್ಮ ಅದನ್ನು ಸಮರ್ಪಿಸಲಾದೀತೆ? ಈ ಪ್ರಶ್ನೆಗೆ ದಾಸರಾಯರು ಪ್ರಕೃತ ಈ 24ನೇ ನುಡಿಯಿಂದ ಮುಂದೆ, 'ಪುಣ್ಯಪಾಪಗಳರ್ಪಿಸವನಡಿಗೆ' ಎನ್ನುವ 29ನೇ ನುಡಿಯವರೆಗೂ ಸಮಾಧಾನ ನೀಡುತ್ತಿದ್ದಾರೆ, ಅನೇಕ ಉದಾಹರಣೆಗಳನ್ನು ತೋರಿಸುತ್ತಿದ್ದಾರೆ

**ವಿಪನದಿ ಶಬರಿಯೆಂಜಲನುಂಡ**

ಶಬರಿ ಕನ್ಯೆಯಾಗಿದ್ದಾಗಲೆ ಪತಿವಿಯೋಗ ಹೊಂದಿ ವಿರಕ್ತ ಜೀವನ ನಡೆಸಿದ ಪುಣ್ಯ ಚೇತನ ಭಗವದ್ಭಕ್ತೆ ತನ್ನ ಗುಡಿಸಿಲಿಗೆ ಶ್ರೀರಾಮ ಬರುವನೆಂದು ತಿಳಿದು ಅವನಿಗಾಗಿ ಭಕ್ತಿಯಿಂದ ಫಲಮೂಲಗಳನ್ನು ಸಂಗ್ರಹಿಸಿದಳು ನನ್ನ ರಾಮನಿಗೆ ಒಳ್ಳೆಯ ರಸಭರಿತವಾದುದನ್ನೇ ನೀಡಬೇಕು ಎಂದು ಪ್ರತಿಯೊಂದು ಹಣ್ಣನ್ನೂ ಗಡ್ಡೆಯನ್ನೂ ಕಚ್ಚಿ ನೋಡಿ ರಸವನ್ನು ಪರೀಕ್ಷಿಸಿದಳು ಒಂದು ಮರದಿಂದ ಒಂದು ಹಣ್ಣು ತಿಂದು ನೋಡಿದ್ದರೆ ಸಾಕಾಗಿತ್ತು ಆದರೆ ಬೇರೆ ಹಣ್ಣುಗಳು ಹುಳಿಯಾಗಿದ್ದರೆ? ಎಂದು ಮನಃಸಮಾಧಾನಕ್ಕಾಗಿ ಎಲ್ಲವನ್ನೂ ಎಂಜಲು ಮಾಡಿದಳು ಇದು ಅಗ್ನಿಪುರಾಣದ ಮಾತು ಅವಳು ರಾಮನಿಗೆ ಹೇಳುತ್ತಾಳೆ-

ದಂತದಷ್ಟಮಿದಂ ಪಶ್ಯ ವತ್ಸ ಮೂಲಂ ಮಹಾರಸಂ ।

'ಮಗು, ರಾಮ, ನೋಡು, ಈ ಗಡ್ಡೆ ತುಂಬ ರುಚಿಕರವಾಗಿದೆ ನಾನು ಹಲ್ಲುಗಳಿಂದ ಕಚ್ಚಿ ನೋಡಿದ್ದೇನೆ '

'ಈ ಗಡ್ಡೆ' ಎಂದರೆ 'ಈ ಜಾತಿಯ ಗಡ್ಡೆಯನ್ನು ನಾನು ಕಚ್ಚಿ ನೋಡಿದ್ದೇನೆ' ಎಂದು ವ್ಯಾಖ್ಯಾನಿಸಬಹುದೇನೊ! ಆದರೂ ಶಬರಿ ಎಂಜಲು ಮಾಡಿಯೆ ಇಲ್ಲವೆಂದು ಸಮರ್ಥಿಸಿದರೆ

ವನವಾಸಿಯಾಗಿದ್ದು ಫಲಮೂಲಭಕ್ಷಣ ಮಾಡುತ್ತಿದ್ದ ರಾಮ ಶಬರಿ ನೀಡಿದ ಫಲಮೂಲಗಳನ್ನು ಭಕ್ಷಿಸಿದ, ಇದರಲ್ಲೇನು ವಿಶೇಷವಿದೆ? ಆ ಪ್ರಸಂಗವನ್ನು ಒತ್ತಿ ಹೇಳಬೇಕಾದ ಆವಶ್ಯಕತೆಯೇನಿದೆ? ಅದರಿಂದ ಎಂಜಲಾಗಿತ್ತೆಂದು ಗ್ರಹಿಸುವುದೇ ಸೂಕ್ತ

ಆಯುಃಸತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾಃ ॥ (ಭ ಗೀ 17 8)

'ಆಯುಷ್ಯ ಚಿತ್ತಶುದ್ಧಿ ಬಲ ಆರೋಗ್ಯಗಳನ್ನು ಹೆಚ್ಚಿಸುವ, ಒಮ್ಮೆ ಸೇವಿಸದರೂ ಬಹುಕಾಲ ಸುಖ ನೀಡಬಲ್ಲ ತತ್ಕಾಲದಲ್ಲಿಯೂ ಸುಖ ನೀಡುವ ರುಚಿಕರವಾದ, ಸ್ನಿಗ್ಧವಾದ, ಒಮ್ಮೆ ಸೇವಿಸದರೆ ಇನ್ನೂ ಸೇವಿಸಬೇಕೆನಿಸುವ ಆಹಾರ ಸಾತ್ವಿಕ ಸ್ವಭಾವದವರಿಗೆ ಪ್ರಿಯವಾಗುತ್ತದೆ

ಇಂಥ ಸಾತ್ವಿಕ ಆಹಾರವನ್ನೇ ದೇವರಿಗೆ ಅರ್ಪಿಸಬೇಕು ಇದು ಅನಿಷಿದ್ಧ ರಾಜಸತಾಮಸ ಆಹಾರಗಳು ನಿಷಿದ್ಧ ಶಬರಿ ರುಚಿಕರವಾದ ಹಣ್ಣುಗಡ್ಡೆಗಳನ್ನೇ ಆರಿಸಿ ರಾಮನ ಮುಂದಿಟ್ಟಳು ಇದು ಪುಣ್ಯಕರ್ಮವೆ ಆದರೇನು?

ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ । (ಭ ಗೀ 17 10)

'ಎಂಜಲಾದ ಅಶುಚಿಯಾದ ಅನ್ನ ತಾಮಸಸ್ವಭಾವದವರಿಗೆ ಪ್ರಿಯ' ಎನ್ನುತ್ತದೆ ಭಗವದ್ಗೀತೆ ಶಬರಿ ನೀಡಿದ ಹಣ್ಣುಗಡ್ಡೆ ಎಂಜಲಾದ್ದರಿಂದ ಅದನ್ನು ರಾಮನಿಗೆ ಅರ್ಪಿಸುದುದು ಪಾಪಕರ್ಮ ತಾನೆ? ಶಬರಿ ಎಂಜಲು ನೀಡಿದ್ದೂ ತಪ್ಪು, ರಾಮ ಅದನ್ನು ಉಂಡದ್ದೂ ತಪ್ಪು ಭಗವಂತನಿಗೆ ಯಾವುದೂ ತಪ್ಪಿಲ್ಲ, ಅಧರ್ಮವಾಗುವುದಿಲ್ಲ, ನ ಕರ್ಮಣಾ ವರ್ಧತೇ ನೋ ಕನೀಯಾನ್, ಕರ್ಮಲೇಪರಹಿತ ಆತ ಎನ್ನುವುದು ನಿಜವೆ ಆದರೂ ಅವನೆಂದೂ ಅಧರ್ಮ ಮಾಡುವುದಿಲ್ಲ 'ಉತ್ಸೀದೇಯುರಿಮೇ ಲೋಕಾಃ' ಲೋಕನಾಶವಾಗಬಾರದೆಂದು ಧರ್ಮಾಚರಣೆಯನ್ನೇ ಮಾಡುತ್ತೇನೆ ಎನ್ನುತ್ತಾನೆ

ನಮ್ಮ ಸದಾಚಾರಗಳೂ ಹೀಗೇ ಅನೇಕ ಸಂದರ್ಭಗಳಲ್ಲಿ ದುರಾಚಾರಗಳಾಗಿ ಮಾರ್ಪಡುವುದುಂಟು, ಅದೂ ಬಲು ಸುಲಭವಾಗಿ, ಉದಾ ಅಚಮನ, ಅಂಗೈನಡುವಿನಿಂದ ನೀರು ಕುಡಿದರೆ ಸುರಾಪಾನಕ್ಕೆ ಸಮಾನ ಇತ್ಯಾದಿ ಇತ್ಯಾದಿ 'ಮಂತ್ರೋ ಹೀನಃ ಸ್ವರತೋ ವರ್ಣತೋ ವಾ' ಮಂತ್ರೋಚ್ಚಾರಣೆಯಲ್ಲಿ ಲೋಪದೋಷಗಳು ಉಂಟಾದರೆ ಅನರ್ಥ ಜಪಪೂಜೆಗಳಲ್ಲಿ ಮಂತ್ರ ತಂತ್ರ ಸ್ವರ ವರ್ಣಲೋಪಗಳು ಸ್ವಾಭಾವಿಕ ಆದರೆ ಪ್ರಾಯಶ್ಚಿತ್ತಾರ್ಹ, ಪಾಪಕರ ಪುರಾಣಪ್ರಸಿದ್ಧರಾದ ಮಹಾಭಗವದ್ಭಕ್ತರಲ್ಲಿಯೂ ಅನೇಕ ದೋಷಗಳಿದ್ದುವು ಗೋಪಿಯರು ಕಾಮಭಾವನೆಯಿಂದ ಕೃಷ್ಣನಲ್ಲಿ ಭಕ್ತಿ ಮಾಡಿದರು ಕಂಸ ಭಯದಿಂದ ಕೃಷ್ಣನನ್ನು ಕಂಡ, ಶಿಶುಪಾಲ ಮುಂತಾದವರು ಕ್ರೋಧದಿಂದ ಕಂಡರು ಇವರ ಭಕ್ತಿ ಕಾಮಕ್ರೋಧಾದಿಗಳಿಂದ ಕಲುಷಿತವಾಗಿತ್ತು ಆದರೂ ಭಗವಂತ ಸ್ವೀಕರಿಸಿದ ಸರ್ವಥಾ ಪಾಪಕರ್ಮವೆನಿಸದ ಶುದ್ಧ ಪುಣ್ಯಕರ್ಮ ಪುರಾಣಪುರುಷರಿಗೇ ಸಾಧ್ಯವಾಗದುದು, ನಮ್ಮಿಂದ

ಸಾಧ್ಯವೆ? ಜಪಪೂಜೆ ಭೋಜನಾದಿಗಳು ಎಲ್ಲವೂ ಯಜ್ಞಗಳು ಯಜ್ಞಗಳಲ್ಲಿ ಪ್ರಾಕೃತಭಾಷೆ ನಿಷಿದ್ಧ ಸಂಸ್ಕೃತವನ್ನೇ ಆಡಬೇಕು ಇದು ಎಲ್ಲರಿಗೂ ಸಾಧ್ಯವೆ? ನಾನು ಮಾಡುತ್ತೇನೆ ಎಂಬ ಸ್ವಾತಂತ್ರ್ಯಾಭಿಮಾನ ನಿಷಿದ್ಧ ಆದರೆ ಅದಿಲ್ಲದೆ ನಾವೇನೂ ಮಾಡುವುದಿಲ್ಲ ಕೊನೆಯಲ್ಲಿ 'ನಾಹಂ ಕರ್ತಾ ಹರಿಃ ಕರ್ತಾ' ಎನ್ನುತ್ತೇವೆ ಎನ್ನುವುದು ಮಾತ್ರ, ಆಗಲೂ ಅಭಿಮಾನವಿರುತ್ತದೆ ಎಲ್ಲಕ್ಕೂ ಪ್ರಾಯಶ್ಚಿತ್ತವಾಗಿ ನಾಮತ್ರಯಜಪ ಅದರಿಂದ 'ನ್ಯೂನಂ ಸಂಪೂರ್ಣತಾಂ ಯಾತಿ' ಪಾಪಕರ್ಮ ಪೂರ್ಣ ಪುಣ್ಯದಾಯಕವಾಗುತ್ತದೆ

ಶಬರಿ ರಾಮನಿಗಾಗಿ ಹಣ್ಣುಗಳ ರುಚಿಯನ್ನು ಪರೀಕ್ಷಿಸಲು ಬೇರೆ ಉಪಾಯವಿಲ್ಲವೆಂದು ಕಚ್ಚಿ ನೋಡಿದಳು ಕೇವಲ ನಾಲಿಗೆಯ ಚಪಲದಿಂದಲ್ಲ ಎಂದು ಸೂಚಿಸಲು,

ವಿರಕ್ತಾ ಸರ್ವಕಾಮೇಭ್ಯೋ ಭಗವದ್ಭಕ್ತಿಭೂಷಣಾ ।

'ಎಲ್ಲ ವಿಷಯಸುಖಗಳನ್ನು ಪರಿತ್ಯಜಿಸಿ ವಿರಕ್ತ ಜೀವನ ನಡೆಸಿದವಳು ಭಗವದ್ಭಕ್ತಿಯಿಂದ ಭೂಷಿತಳಾಗಿದ್ದಳು' ಎನ್ನುತ್ತದೆ ಅಗ್ನಿಪುರಾಣ

### ಗೋಕುಲದಬಲೆಯರ ನೊಲಿಸಿದನು

ಶರತ್ಕಾಲದ ಬೆಳದಿಂಗಳ ರಾತ್ರಿಯಲ್ಲಿ ಕೃಷ್ಣ ಕೊಳಲೂದಿದಾಗ ಗೋಕುಲದ ಅಬಲೆಯರು ಕೇಳಿ ಮೈಮರೆತು ಓಡಿ ಬಂದರು ಪತಿಪುತ್ರರ ಗುರುಹಿರಿಯರ ಸೇವೆ ನಿಮಗೆ ಧರ್ಮ, ಹೋಗಿರಿ ಎಂದ ಕೃಷ್ಣ ಪತಿಪುತ್ರ ಮುಂತಾಗಿ ಎಲ್ಲವೂ ಮುಖ್ಯವಾಗಿ ನೀನೆ ಬೇರೆ ಎಲ್ಲರೂ ಒಂದು ಜನ್ಮದ ಬಂಧುಗಳು ನೀನು ಜನ್ಮಜನ್ಮಗಳಲ್ಲಿಯೂ ಶಾಶ್ವತವಾಗಿ ಬಂಧುವೆನಿಸಿದವನು, ನಿನ್ನ ಸೇವೆಯೆ ನಮಗೆ ಪರಮಧರ್ಮ ಎಂದರು ಗೋಪಿಯರು ಪತಿಪುತ್ರರನ್ನು ತ್ಯಾಗ ಮಾಡಿ ಬಂದಿದ್ದ ಅವರನ್ನು ಕೃಷ್ಣ ಒಲಿಸಿದ ಅವರೊಡನೆ ರಾಸಲೀಲೆ ಆಡಿದ ಅವರ ಮುಖಗಳನ್ನು ಚುಂಬಿಸಿ ಅಧರರಸವನ್ನು ಸವಿದ ಅವರು ಅದನ್ನು ಭಕ್ತಿಯಿಂದ ಸಮರ್ಪಿಸಿ ಕೃತಾರ್ಥರಾದರು ಆದರೆ ಅವರ ಆ ಅಧರರಸ ಅವರ ಪತಿಗಳ ಎಂಜಲಲ್ಲವೆ?

### ಋಷಿಪತ್ನಿಯರು ಕೊಟ್ಟನ್ನ ಭುಂಜಿಸಿದ

ಗೋಪಬಾಲಕರೊಮ್ಮೆ ಬಹಳ ಹಸಿದಿದ್ದಾಗ ಶ್ರೀಕೃಷ್ಣ ಅವರನ್ನು ಸತ್ರಯಾಗ ಮಾಡುತ್ತಿದ್ದ ಋಷಿಗಳ ಬಳಿಗೆ ಕಳಿಸಿದ ಕೃಷ್ಣರಾಮರು ಹಸಿದಿದ್ದಾರೆ ಎಂದರು ಅವರು ಋಷಿಗಳು ಸುಮ್ಮನಿದ್ದರು ಅವರ ಪತ್ನಿಯರ ಬಳಿಗೆ ಹೋಗಿ ಹಾಗೇ ಹೇಳಿದರು ಆಗ ಅವರು ಸಂಭ್ರಮದಿಂದ ಎಲ್ಲ ಭಕ್ಷ್ಯಭೋಜ್ಯಗಳನ್ನು ತಂದು ಕೃಷ್ಣನಿಗೆ ಅರ್ಪಿಸಿದರು ಕೃಷ್ಣ ಸ್ವೀಕರಿಸಿದ ವಸ್ತುತಃ ಪತ್ನಿಯರು ಋಷಿಗಳ ಅನುಮತಿ ಪಡೆದಿರಲಿಲ್ಲ ಪತಿಗಳು ತಡೆದಿದ್ದರು ಆದರೂ ನಿಲ್ಲದೆ ಅವರನ್ನು ಪರಿತ್ಯಾಗ ಮಾಡಿ ಕೃಷ್ಣನ ಅಂಗಸಂಗ ಬಯಸಿ ಬಂದಿದ್ದರು ಇಂಥ ಸ್ತ್ರೀಯರ ಅನ್ನ ಪತಿಗಳ ಎಂಜಲಲ್ಲವೆ?

**ಕುಬುಜೆ ಗಂಧಕೆ ಒಲಿದ**

ಕುಬ್ಜೆ ಕಂಸನ ವೇಶ್ಯೆ ಅವಳು ಅವನಿಗೆ ಗಂಧ ಒಯ್ಯುತ್ತಿದ್ದರೆ ಕೃಷ್ಣ ಅದನ್ನು ಕೇಳಿದ, ಆಕೆ ಮೋಹಿತಳಾಗಿ ಕೃಷ್ಣನಿಗೇ ಕೊಟ್ಟಳು. ಇದು ಅವಳು ಮಾಡಿದ ಪುಣ್ಯಕಾರ್ಯ ಆದರೆ ಅವಳ ಶರೀರ, ಅವಳು ಕೊಟ್ಟ ಗಂಧ ಎಲ್ಲವೂ ಕಂಸನ ಎಂಜಲಲ್ಲವೆ?

**ಸುಭುಜ ತಾ ಭುಂಜಿಸಿದ ಸ್ವರಮಣ**

'ಸುಭುಜೋ ದುರ್ಧರೋ ವಾಗ್ಮೀ' ಎಂದು ವಿಷ್ಣುಸಹಸ್ರನಾಮಗಳಲ್ಲೊಂದು ಸುಭುಜನಾಮ 'ಸು-ಭುಜ' ಎಂದರೆ ಒಳ್ಳೆಯದನ್ನೇ ಚೆನ್ನಾಗಿ ಭುಂಜಿಸುವವನು ಎಂದರ್ಥ ಏಕೆಂದರೆ ಭಕ್ತರು ಎಂಜಲನ್ನು ನೀಡಿದರೂ ಅದನ್ನು ಬಿಡದೆ ಎಲ್ಲವನ್ನೂ ಚೆನ್ನಾಗಿ ಭುಂಜಿಸುತ್ತಾನೆ ಶ್ರೀಹರಿ ಅವನಿಗೆ ಅದು ಅಧರ್ಮವಾಗುವುದಿಲ್ಲ ಅವನು 'ಸ್ವ-ರಮಣ' ತನ್ನಲ್ಲೆ ತಾನು ಸುಖ ಕಾಣುವವ ಅನ್ನ ಉಣ್ಣುವಾಗಲೂ ಅವನ ಸ್ವರೂಪವಾದ ಪರಮಪವಿತ್ರವಾದ, ಅತ್ಯಂತ ರುಚಿಕರವಾದ, ಅವನಿಗೆ ಹೊರತು ಇನ್ನಾರಿಗೂ ಲಭ್ಯವಲ್ಲದ ರಸವಿದೆ, ಅದನ್ನೇ ತಾನು ಉಣ್ಣುತ್ತಾನೆ ಹೀಗೆಂದ ಮಾತ್ರಕ್ಕೆ ನಾವು ಎಂಜಲನ್ನು, ನಿಷಿದ್ಧವಾದ ಅಭೋಜ್ಯವಸ್ತುಗಳನ್ನು ಅವನಿಗೆ ನಿವೇದಿಸಬಹುದು ಎಂದು ತಿಳಿಯಬಾರದು ವರಾಹಪುರಾಣದಲ್ಲಿ ಅದನ್ನು ನಿಷೇಧಿಸಲಾಗಿದೆ ಏಕೆಂದರೆ, ಅದರಿಂದ ನಮಗೇ ದೋಷ ಅವನಿಗೆ ಇಲ್ಲ ನಾವು ಫಲಾಪೇಕ್ಷೆ ಇಲ್ಲದೆ ಕಾಮಕ್ರೋಧಾದಿಗಳಿಲ್ಲದೆ ಭಕ್ತಿಯಿಂದ ಅನಿಷಿದ್ಧವಾದ ಅನ್ನವನ್ನೇ ಸಮರ್ಪಿಸಬೇಕು ಆಗ ನಮ್ಮ ಅಶಕ್ತಿಯಿಂದ ಅಜ್ಞಾನ ಪ್ರಮಾದಾದಿಗಳಿಂದ ಅನ್ನ ಎಂಜಲಾದರೂ ಸರಿಯೆ, ವಿಷಪೂರಿತವಾದರೂ ಸರಿಯೆ, ಅದನ್ನು ಕ್ಷಮಿಸಿ ಪರಮಪವಿತ್ರವಾಗಿಸಿ ಅಮೃತವಾಗಿಸಿ ಅವನು ಉಂಡು ಅನುಗ್ರಹಿಸುತ್ತಾನೆ ಅದರಿಂದ ನಾವು ಉಣ್ಣುವ ಅನ್ನವನ್ನು ಮೊದಲೂ, ಉಣ್ಣುವಾಗಲೂ, ಉಂಡ ಬಳಿಕವೂ ಅವನಿಗೆ ಸಮರ್ಪಿಸಲೇಬೇಕು ಒಂದು ದಿನ ಅಸಮರ್ಪಿತವಾದ ಅನ್ನ ಉಂಡರೆ ಮೂರು ದಿನ ಉಪವಾಸವಿರಬೇಕೆಂದು ವರಾಹಪುರಾಣ ಪ್ರಾಯಶ್ಚಿತ್ತ ವಿಧಿಸಿದೆ

**ಮುನಿಗಣವಿಬುಧಸೇವಿತ ಬಿಡುವನೇ ನಾವಿತ್ತ ಕರ್ಮಫಲ .**

ಋಷಿಗಳೂ ದೇವತೆಗಳೂ ಕೆಲವೊಮ್ಮೆ ಭಗವಂತನಲ್ಲಿ ಅಪರಾಧ ಮಾಡುವುದುಂಟು ಭೀಷ್ಮ ಪರಶುರಾಮನಲ್ಲಿಯೂ ಕೃಷ್ಣನಲ್ಲಿಯೂ ಬಾಣಪ್ರಯೋಗ ಮಾಡಿದ ಗರ್ಗಮುನಿ ಕೃಷ್ಣನನ್ನು ಕೊಲ್ಲಲು ಕಾಲಯವನನ್ನು ಹುಟ್ಟಿಸಿದ ಭೃಗುಮುನಿ ಹರಿಯ ಎದೆಗೇ ಒದ್ದ ವ್ಯಾಧ ಕೃಷ್ಣನ ಕಾಲಿಗೆ ಬಾಣಪ್ರಯೋಗ ಮಾಡಿದ ಕೃಷ್ಣ ಎಲ್ಲವನ್ನೂ ಕ್ಷಮಿಸಿದ ದೇವತೆಗಳು ಮುನಿಗಳೇ ಹೀಗೆ ಅಪರಾಧ ಮಾಡುವಾಗ ನಾವೆಷ್ಟರವರು? ಅವರು ಅಪರಾಧಗೈದಾಗ ಸ್ವೀಕರಿಸುವ ಹರಿ ನಾವು ಸೇವೆ ಮಾಡಿದಾಗ ಅಪರಾಧವಾದರೆ ಸ್ವೀಕರಿಸಲಾರನೆ? ಅವರು ಜ್ಞಾನಿಗಳು, ಹರಿ ಕ್ಷಮಿಸುತ್ತಾನೆ ಅದರಿಂದ ನಾವೂ ಪಶ್ಚಾತ್ತಾಪಪಟ್ಟು ಕ್ಷಮೆ ಬೇಡಿ ನಮ್ಮ ಅಲ್ಪ ಅಶುದ್ಧ ಕರ್ಮವನ್ನು ಅರ್ಪಿಸಬೇಕು ಆಗ ನಾವಿತ್ತ ಕರ್ಮಫಲವನ್ನು ಅವನು ಬಿಡುವುದಿಲ್ಲ

**ಗಣನೆಯಿಲ್ಲದ ಪರಮಸುಖ ಸದ್**
**ಗುಣಗಣಂಗಳ ಲೇಶಲೇಶಕೆ**
**ಎಣೆಯೆನಿಸದು ರಮಾಬ್ಜಭವ ಶಕ್ರಾದಿಗಳ ಸುಖವು ।**
**ಉಣುತುಣುತ ಮೈಮರೆತು ಕೃಷ್ಣಾ**
**ರ್ಪಣವೆನಲು ಕೈಕೊಂಬ ನರ್ಭಕ**
**ಜನನಿ ಭೋಜನ ಸಮಯದಲಿ ಕೈಯೊಡ್ಡುವಂದದಲಿ ॥ ೨೫ ॥**

ಗಣನೆಗೇ ನಿಲುಕದ ಹರಿಯ ಪರಮಸುಖದ ಸದ್ಗುಣಗಣಗಳ ಲೇಶಲೇಶಕ್ಕೂ ರಮಾ ಬ್ರಹ್ಮ ರುದ್ರ ಇಂದ್ರಾದಿಗಳ ಸುಖವು ಎಣೆಯೆನಿಸದು ಆದರೂ ನಾವು ಉಣುತುಣುತ ಮೈಮರೆತು ಕೃಷ್ಣಾರ್ಪಣ ಎನಲು ಹರಿ ಅದನ್ನೂ ಸ್ವೀಕರಿಸುತ್ತಾನೆ, ತಾಯಿ ಉಣ್ಣುವ ಸಮಯದಲ್ಲಿ ಮಗು ಕೈ ಒಡ್ಡುವಂತೆ

**ರಮಾಬ್ಜಭವಶಕ್ರಾದಿಗಳ ಸುಖವು**

ತಾರತಮ್ಯದ ತುತ್ತತುದಿಯಲ್ಲಿರುವವರು ರಮಾ ಬ್ರಹ್ಮಾದಿ ದೇವತೆಗಳು ಅವರ ಸುಖ ಜ್ಞಾನಾದಿ ಸದ್ಗುಣಗಳು ನಮ್ಮ ಸುಖಾದಿ ಗುಣಗಳಿಗೆ ಹೋಲಿಸಿದರೆ ಅಪರಿಮಿತ ನಾವು ಅಲ್ಪಜ್ಞರು, ಅಲ್ಪಸುಖಿಗಳು ಅವರು ಸರ್ವಜ್ಞರು, ಪೂರ್ಣಾನಂದರು ಆದರೂ ಅವರ ಈ ಸುಖಜ್ಞಾನಾದಿಗಳು ಹರಿಗೆ ಹೋಲಿಸಿದರೆ ಸಾಗರದ ಮುಂದೆ ಒಂದು ನೀರಿನ ಹನಿಯಂತೆ, ಏಕೆ, ಅದಕ್ಕೂ ಕಡಿಮೆ

ಇಲ್ಲಿ 'ಅಬ್ಜಭವ' ಎಂದರೆ ಹರಿಯ ನಾಭಿಕಮಲದಲ್ಲಿ ಜನಿಸಿದವ ಬ್ರಹ್ಮ ಶಕ್ರಾದಿಗಳೆಂದರೆ ಇಂದ್ರಾದಿ ದೇವತೆಗಳು ನಡುವೆ ರುದ್ರನನ್ನೇಕೆ ಮರೆತರು? ಪ್ರಾಯಃ 'ಶಂಭ್ವಾದಿಗಳ ಸುಖವು' ಎಂದು ಮೂಲಪಾಠ ಇದ್ದಿರಬಹುದು ಅಥವಾ ಬ್ರಹ್ಮನನ್ನು ಹೇಳಿದಾಗ ವಾಯುದೇವನನ್ನು ಇಟ್ಟುಕೊಳ್ಳುವಂತೆ, ಅವರ ಪತ್ನಿಯರಾದ ಸರಸ್ವತೀಭಾರತಿಯರನ್ನು ಇಟ್ಟುಕೊಳ್ಳುವಂತೆ ಅವರ ಮಕ್ಕಳಾದ ರುದ್ರಶೇಷಗರುಡರನ್ನೂ ಸೊಸೆಯಂದಿರಾದ ಪಾರ್ವತಿ ವಾರುಣಿ ಸೌಪರ್ಣಿಯರನ್ನೂ ಇಟ್ಟುಕೊಳ್ಳಬಹುದು ಎನ್ನುವ ಅಭಿಪ್ರಾಯವಿರಬಹುದು ಅಥವಾ 'ಶಕ್ರಾದಿ' ಎಂಬ ಶಬ್ದಕ್ಕೆ ಆವೃತ್ತಿಯಿಂದ ಎರಡರ್ಥ ಶಕ್ರನಿಗೆ ಆದಿ, ಮೊದಲಿನವರು ರುದ್ರಾದಿಗಳು ಮತ್ತು ಶಕ್ರನಿಂದ ತೊಡಗಿ ಎಲ್ಲ ದೇವತೆಗಳು ಎಂದು ಅಥವಾ, ಅಬ್ಜಭವ ಎಂಬಲ್ಲಿ 'ಭವ' ಎಂದು ಆವೃತ್ತಿ ಮಾಡಿಕೊಂಡು ರುದ್ರ ಎಂದರ್ಥ ಅಥವಾ 'ಅಬ್ಜ' ಎಂದರೆ 'ಅಬ್ಜಜ' 'ಸಮಾನೇ ಲೋಪಃ' ಎಂಬ ವ್ಯಾಕರಣನಿಯಮದಂತೆ ಒಂದು ಜಕಾರ ಲೋಪವಾಗಿದೆ ಎಂದಿಟ್ಟುಕೊಂಡು ಅಬ್ಜಶಬ್ದದಿಂದಲೇ ಬ್ರಹ್ಮ, ಭವಶಬ್ದದಿಂದ ರುದ್ರರು ಉಕ್ತರಾದರೆಂದು ಗ್ರಹಿಸಬಹುದು

**ಲೇಶಲೇಶಕೆ ಎಣೆಯೆನಿಸದು**

ರಮಾ ಬ್ರಹ್ಮಾದಿ ದೇವತೆಗಳ ಆನಂದ ಜ್ಞಾನಾದಿ ಗುಣಗಳು ಅಪರಿಮಿತವಾದರೂ ಪರಸ್ಪರ ಹೋಲಿಸಿದಾಗ ಇಂತಿಷ್ಟೇ ಎಂದು ನಿಖರವಾಗಿ ಹೇಳಲು ಬರುತ್ತದೆ ಉದಾ ಇಂದ್ರನ ಸುಖಕ್ಕಿಂತ ಶಿವನ ಸುಖ ನೂರುಪಟ್ಟು ಮಿಗಿಲು ಅದಕ್ಕಿಂತ ನೂರು ಪಾಲು ಬ್ರಹ್ಮನ ಸುಖ ಅದಕ್ಕೂ ಕೋಟಿ ಪಾಲು ರಮಾದೇವಿಯ ಸುಖ ಆದರೆ ರಮಾದೇವಿಯರ ಸುಖವನ್ನು ಹರಿಯ ಸುಖದೊಂದಿಗೆ ಹೋಲಿಸುವುದೇ ಶಕ್ಯವಿಲ್ಲ ಹರಿಯ ಸುಖ ಮನೋವಾಚಾಮಗೋಚರ ತೈತ್ತಿರೀಯೋಪನಿಷತ್ತು ಹೇಳಿದೆ-

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ ।

ಈ ಹರಿಯ ಸುಖದ ಒಂದು ಲೇಶದ ಲೇಶವನ್ನು ತೆಗೆದುಕೊಂಡರೂ ಅದು ಅಪರಿಮಿತ, ಮನೋವಾಚಾಮಗೋಚರವೆ

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಹರಿಯ ಮೂಲರೂಪವೂ ಪೂರ್ಣ, ಅಪರಿಮಿತ ಆದರಿಂದ ಹೊರಟು ಬರುವ ಅದರ ಅಂಶವೂ ಪೂರ್ಣ, ಅಪರಿಮಿತ ಅಪರಿಮಿತದಿಂದ ಅಪರಿಮಿತ ಈಚೆ ಬಂದರೂ ಉಳಿಯುವುದು ಪುನಃ ಅಪರಿಮಿತವೆ ಎನ್ನುತ್ತದೆ ಉಪನಿಷತ್ತು ಅದರಿಂದ ರಮಾಬ್ರಹ್ಮಾದಿಗಳ ಸುಖ ಹರಿಯ ಸುಖದ ಲೇಶಲೇಶಕ್ಕೂ ಎಣೆಯೆನಿಸದು

**ಕೃಷ್ಣಾರ್ಪಣವೆನಲು ಕೈಕೊಂಬ**

ನಾವು ಉಣ್ಣುವ ಅನ್ನದಿಂದ ತತ್ಕಾಲದಲ್ಲಿ ಸುಖ ಬಳಿಕ ಪುನಃ ಹಸಿವು, ಪುನಃ ಉಣ್ಣುತ್ತೇವೆ ಈ ಸುಖವೂ ಅಲ್ಪ ಶಾಶ್ವತವಾದ ಪರಮಾನಂದ ಪೂರ್ಣನಾದ ಹರಿ ನಮ್ಮ ಈ ಅಲ್ಪಕ್ಷಣಿಕವಾದ ಅನ್ನದ ಸುಖವನ್ನು ಬಯಸುವನೆ? ಆದರೂ ಭಕ್ತಿಯಿಂದ ಕೃಷ್ಣಾರ್ಪಣ ಎನ್ನಲು ಆ ಭಕ್ತಿಗೆ ಮೆಚ್ಚಿ ಅದನ್ನು ಸ್ವೀಕರಿಸುತ್ತಾನೆ ಅದೂ ನಮಗಾಗಿ ಹೊರತು ಅವನಿಗೆ ಅದರಿಂದೇನೂ ಆಗಬೇಕಿಲ್ಲ ಅದರಿಂದ ನಾನು ನೀಡುವ ಅಶುದ್ಧ ನೀರಸ ಅನ್ನದಿಂದಲೂ ಲೀಲೆಯಿಂದ ತೃಪ್ತಿ ಹೊಂದು ಅದರಲ್ಲಿರುವ ದೋಷವನ್ನು ಕ್ಷಮಿಸಿ ಮರೆತುಬಿಡು ಎಂದು ಕೃಷ್ಣಾರ್ಪಣವೆನ್ನಬೇಕು ಬ್ರಾಹ್ಮಣರಿಗೆ ಅನ್ನದಾನ ಮಾಡುವಾಗ ಅವರಿಗೆ ಹೇಳುತ್ತೇವೆ, ಶಾಕಪಾಕ ಏನೂ ಇಲ್ಲ, ರುಚಿಕರವಾಗಿಲ್ಲ, ಕಾಲವೂ ಮೀರಿದೆ ಆದರೂ ಕ್ಷಮಿಸಿ ಸ್ವೀಕಾರ ಮಾಡಬೇಕು ಎಂದು ಅವರು ನಮ್ಮ ವಿನಯಭಕ್ತಿಗಳಿಗೆ ಮನಸೋತು ಅನ್ನದ ದೋಷಗಳನ್ನು ಮುಚ್ಚಿಟ್ಟು ಪ್ರಶಂಸೆ ಮಾಡುತ್ತಲೆ ಉಣ್ಣುತ್ತಾರೆ, ಉಣಬೇಕು, ಹಾಗೇ ವಿಧಿ ಇದೆ ಹಾಗೇ ಭಗವಂತನಿಗೂ ನಾವು ಹೇಳಬೇಕು-

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।
ಯತ್ ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾನುಸೃತಃ ಸ್ವಭಾವಂ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

'ಭಕ್ತಿ ಮಂತ್ರ ಕ್ರಿಯೆಗಳೆಲ್ಲವನ್ನೂ ಲೋಪ ಮಾಡಿ ನಾನು ಮಾಡಿರುವ ಈ ಪೂಜೆ ಸ್ವತಃ ಅಪೂರ್ಣವೆ ಆಗಿದ್ದರೂ ನಿನ್ನ ದಯೆಯಿಂದ ನಿನಗೆ ಅದು ಪೂರ್ಣತೃಪ್ತಿಕರವೆನಿನಲಿ ತ್ರಿಕರಣಗಳಿಂದ ನಾನು ನನ್ನ ಸ್ವಭಾವಾನುಸಾರ ಮಾಡಿರುವ ಎಲ್ಲ ವಿಹಿತಕರ್ಮಗಳನ್ನೂ ನಿನಗೆ ಅರ್ಪಿಸುತ್ತಿದ್ದೇನೆ' ಎಂದು

**ಉಣುತುಣುತ ಮೈಮರೆತು :**

ಉದರದಲ್ಲಿರುವ ವೈಶ್ವಾನರನಾಮಕ ಹರಿಗೆ ಇದು ರುಚಿಕರವಾದ ಅನ್ನದ ಆಹುತಿ ಎಂದು ಭಕ್ತಿಯಿಂದ ಮೈಮರೆತು ಉಣಬೇಕು ಆಗ ಅವನು ಒಲಿಯುವುದು ಸಹಜ ಆದರೆ ನಾವು ಹಾಗೆ ಮಾಡುವುದಿಲ್ಲ ಭಕ್ತಿಯಿಂದ ಮೈಮರೆತು ಉಣುವುದಿಲ್ಲ ಹೊಟ್ಟೆ ಹಸಿದಿರುತ್ತದೆ ಅನ್ನ ರುಚಿಯಾಗಿರುತ್ತದೆ ಉಣುತ ಉಣುತ ಸುಖಾನುಭವದಲ್ಲಿ ಮೈಮರೆಯುತ್ತೇವೆ ಭಗವಂತನ ನೆನಪೇ ಆಗುವುದಿಲ್ಲ ಆಗಲೂ ಅವನ ನೆನಪಾಗಬೇಕಾದರೆ ನಾವು ಜೀವನ್ಮುಕ್ತರಿರಬೇಕಾಗುತ್ತದೆ ಹೀಗೆ ನಾವು ಉಣುತುಣುತ ಮೈಮರೆತರೆ ನಾವು ಉಂಡ ಎಂಜಲನ್ನೆ ವೈಶ್ವಾನರಿಗೆ ಉಣಿಸಿದಂತಾಗುತ್ತದೆ ಇದು ಅಪರಾಧ ನಾವು ಉಂಡ ಬಳಿಕ ಅಡಿಗೆಮನೆಯಲ್ಲಿ ಉಳಿದ ಬೇರೆ ಅನ್ನವನ್ನು ಇತರರಿಗೆ ಉಣಿಸಿದರೂ ಎಂಜಲುಣಿಸಿದಂತೆಯೇ ಆಗುತ್ತದೆ ಇದರಿಂದ ಉಂಡವನಿಗೂ ದೋಷ, ಉಣಿಸಿದವನಿಗೂ ದೋಷ ಇದಕ್ಕೆ ಒಂದೇ ಉಪಾಯ ಕೃಷ್ಣಾರ್ಪಣವೆನ್ನಬೇಕು ಭಗವಂತ ಕ್ಷಮಿಸುತ್ತಾನೆ

**ಅರ್ಭಕ ಕೈಯೊಡ್ಡುವಂದದಲಿ :**

ತಾಯಿ ಉಣ್ಣುವಾಗ ಮಗು ತುತ್ತಿಗೆ ಕೈಯೊಡ್ಡುತ್ತದೆ ಅದಕ್ಕೆ ಅದು ಎಂಜಲೆಂಬ ಭಾವನೆ ಇರುವುದಿಲ್ಲ ತಾಯಿಯ ಎಂಜಲು ದೋಷವಾಗುವುದೂ ಇಲ್ಲ ಗುರುಹಿರಿಯರಿಗೆ ಮಾತ್ರ ಅದು ಎಂಜಲು ಮಗು 'ನೀನೇಕೆ ಮೊದಲು ನನಗೆ ಕೊಡಲಿಲ್ಲ' ಎಂದೂ ಕೇಳುವುದಿಲ್ಲ ಈಗ ಕೊಡು ಎನ್ನುತ್ತದೆ. ಕೊಡದಿದ್ದರೆ ಅಳುತ್ತದೆ ಭಗವಂತನೂ ಹಾಗೇ ಭಕ್ತಿಯಿಂದ ಉಂಡ ಅನ್ನವನ್ನೂ ಕೃಷ್ಣಾರ್ಪಣ ಮಾಡು ಎನ್ನುತ್ತಾನೆ ಮಾಡದಿದ್ದರೆ ಅಪ್ರಸನ್ನನಾಗುತ್ತಾನೆ ಮಾಡಿದರೆ ಮೊದಲೆ ಏಕೆ ಮಾಡಲಿಲ್ಲ ಎಂದು ಆಕ್ಷೇಪಿಸದೆ ಕ್ಷಮಿಸಿ ಸ್ವೀಕರಿಸುತ್ತಾನೆ ಮೊದಲೆ ಕೃಷ್ಣಾರ್ಪಣಬುದ್ಧಿಯಿಂದ ಉಂಡಿದ್ದರೆ ಬಹಳ ಪ್ರಸನ್ನನಾಗುತ್ತಿದ್ದ. ಈಗಲಾದರೂ ಸಮರ್ಪಿಸದಿದ್ದರೆ ಕ್ಷಮಿಸುವುದಿಲ್ಲ

ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ।

'ನನಗೆ ಸಮರ್ಪಣ ಮಾಡುವ ಅಭಿಪ್ರಾಯವಿಲ್ಲದೆ ತಾವೇ ಉಣ್ಣುವ ಪಾಪಿಗಳು ಪಾಪವನ್ನೇ ಉಣ್ಣುತ್ತಾರೆ' ಎನ್ನುತ್ತಾನೆ ಭಗವದ್ಗೀತೆಯಲ್ಲಿ ಶ್ರೀಕೃಷ್ಣ

ಮಗುವಿಗೂ ಭಗವಂತನಿಗೂ ಇಷ್ಟು ವ್ಯತ್ಯಾಸ, ಮಗುವಿಗೆ ಇದು ಎಂಜಲು ಎಂಬ ಪರಿಜ್ಞಾನವಿಲ್ಲ ಭಗವಂತ ತಿಳಿದಿದ್ದರೂ ಭಕ್ತಿಗೆ ಮೆಚ್ಚಿ ಕ್ಷಮಾಭಾವದಿಂದ ಆ ವಿಷಯದಲ್ಲಿ ತಿಳಿಯದವನಂತಿರುತ್ತಾನೆ ಆದರಿಂದಲೆ ಶಬರಿ ವತ್ಸ, ಮಗು! ಎಂದು ರಾಮನಿಗೆ ಎಂಜಲು ನೀಡುತ್ತಾಳೆ 'ತಾಯಿ!' ಎನ್ನುತ್ತ ರಾಮ ಅದನ್ನು ಸ್ವೀಕರಿಸುತ್ತಾನೆ

**ಜೀವಕೃತಕರ್ಮಗಳ ಬಿಡದೆ ರ**
**ಮಾವರನು ಸ್ವೀಕರಿಸಿ ಫಲಗಳ**
**ನೀವನಧಿಕಾರಾನುಸಾರದಲವರಿಗನವರತ ।**
**ಪಾವಕನು ಸರ್ವಸ್ವ ಭುಂಜಿಸಿ**
**ತಾ ವಿಕಾರವನ್ನೈದನೊಮ್ಮೆಗೆ**
**ಪಾವನಕೆ ಪಾವನನೆನಿಪ ಹರಿಯುಂಬುದೇನರಿದು ॥ ೨೬ ॥**

ಜೀವರು ಮಾಡುವ ಕರ್ಮಗಳನ್ನು ಬಿಡದೆ ರಮಾರಮಣ ಸ್ವೀಕರಿಸಿ ಅವರಿಗೆ ಅಧಿಕಾರಾನುಸಾರವಾಗಿ ಫಲಗಳನ್ನು ಸದಾ ನೀಡುತ್ತಾನೆ ಅಗ್ನಿ ಎಲ್ಲವನ್ನೂ ಭಕ್ಷಿಸಿ ತಾನು ಒಮ್ಮೆಯೂ ವಿಕಾರ ಹೊಂದುವುದಿಲ್ಲ ಪವಿತ್ರ ವಸ್ತುಗಳಿಗೂ ಪಾವಿತ್ರ್ಯ ತರುವ ಹರಿ ಪಾಪಕರ್ಮವನ್ನು ಉಣ್ಣುವುದೇನು ಅಸಾಧ್ಯ?

**ಜೀವಕೃತಕರ್ಮಗಳ ಬಿಡದೆ**

ಜೀವರು ಮಾಡುವ ಪುಣ್ಯಪಾಪ ಕರ್ಮಗಳಿಗೆ ಫಲ ನೀಡುವವನು ಭಗವಂತ ಆ ಕರ್ಮಗಳೆ ಸ್ವತಃ ಫಲ ನೀಡಲಾರವು, ಏಕೆಂದರೆ ಅವು ಜಡ ಪದಾರ್ಥಗಳು ಅವುಗಳಿಗೆ ಅಭಿಮಾನಿಗಳಾಗಿ ಚೇತನರಿದ್ದರೂ ಅವರು ಅಸ್ವತಂತ್ರರು ಭಗವಂತನ ಪ್ರೇರಣೆ ಇಲ್ಲದಿದ್ದರೆ ಜಡಸದೃಶರೆ ದ್ವಾದಶಸ್ತೋತ್ರ ಹೀಗೆ ಹೇಳಿದೆ-

'ನ ಚ ಕರ್ಮವಿಮಾಮಲಕಾಲಗುಣಪ್ರಭೃತೀಶಂ'

'ಕರ್ಮ ಅವಿದ್ಯೆ ಮಲ ಕಾಲ ತ್ರಿಗುಣ ಮುಂತಾದವು ಜಡವಾಗಿರುವುದರಿಂದ ಸ್ವತಃ ಭಗವಂತನ ಪ್ರೇರಣೆಯಿಲ್ಲದೆ ಏನೂ ಕಾರ್ಯ ಮಾಡಲಾರವು' ಎಂದು 'ಫಲಮತ ಉಪಪತ್ತೇಃ' ಎಂಬ ಬ್ರಹ್ಮಸೂತ್ರವು ಭಗವಂತನಿಂದಲೆ ಕರ್ಮಫಲ ಸಿಗುತ್ತದೆ ಎಂದು ನಿರ್ಣಯ ಮಾಡಿಕೊಟ್ಟಿದೆ ಯಮ ಪಾಪಿಗಳಿಗೆ ತಕ್ಕ ಶಿಕ್ಷೆ ಕೊಡುವುದೂ ಭಗವಂತನ ಪ್ರತಿನಿಧಿಯಾಗಿಯೆ

ಹೊರತು ಸ್ವತಃ ಅಲ್ಲ ಅದರಿಂದ ಪುಣ್ಯಪಾಪ ಕರ್ಮಗಳನ್ನು ಹರಿ ತಾನೇ ಸ್ವೀಕರಿಸಬೇಕು ಪುಣ್ಯಕರ್ಮವನ್ನು ಮಾತ್ರ ಸ್ವೀಕರಿಸಿದರೆ ಪಾಪಕರ್ಮವನ್ನು ಸ್ವೀಕರಿಸಿ ಫಲ ಕೊಡುವವರು ಯಾರು? ಪಾಪಕರ್ಮವನ್ನು ಸಮರ್ಪಿಸದಿದ್ದರೂ ಹರಿ ಸ್ವೀಕರಿಸುತ್ತಾನೆ ಉಂಡ ಅನ್ನವನ್ನು ನಾವು ಸಮರ್ಪಿಸದಿದ್ದರೂ ಹರಿ ಸ್ವೀಕರಿಸುತ್ತಾನೆ ಇಲ್ಲದಿದ್ದರೆ ಪಾಪಕರ್ಮದ ದುಃಖಫಲ ನಮಗೆ ಹೇಗೆ ಸಿಗುತ್ತದೆ? ಬಿಂಬರೂಪನಾದ ಹರಿ ಉಂಡು ನಲಿಯದಿದ್ದರೆ ಪ್ರತಿಬಿಂಬರಾದ ನಾವು ನಲಿಯುವುದು ಹೇಗೆ? ಅದರಿಂದ ಸಮರ್ಪಿಸಬೇಕು ಇಲ್ಲದಿದ್ದರೆ ನಮಗೇ ನಷ್ಟ ಮಹಾಪುಣ್ಯದಿಂದ ನಾವು ವಂಚಿತರಾಗುತ್ತೇವೆ

ಭಗವಂತ ಪುಣ್ಯಪಾಪಕರ್ಮಗಳನ್ನು ಸ್ವೀಕರಿಸುವುದೆಂದರೇನು? ನಾವು ಸಮರ್ಪಿಸುವುದೆಂದರೇನು? ಭಗವಂತನ ಪುಣ್ಯಕರ್ಮವನ್ನು ಸ್ವೀಕರಿಸುತ್ತಾನೆ ಎಂದರೆ ಪುಣ್ಯಕರ್ಮದ ಫಲವಾಗಿ ಸ್ವರೂಪಸುಖವನ್ನು ವ್ಯಕ್ತ ಮಾಡಿ ಅಚಿಂತ್ಯಶಕ್ತಿಯಿಂದ ಅದನ್ನು ಅನುಭವಿಸಿ ನಲಿಯುತ್ತಾನೆ ಬಿಂಬ ಹೀಗೆ ಮಾಡಿದಾಗ ಪ್ರತಿಬಿಂಬನಾದ ಜೀವ ಆ ಪ್ರಾಕೃತಸುಖವನ್ನು ತನ್ನದೆಂಬ ಅಭಿಮಾನದಿಂದ ಅನುಭವಿಸಿ ಹಿಗ್ಗುತ್ತಾನೆ ಹೀಗೆ ಜೀವ ಚಿಂತಿಸಿದರೆ ಅದೇ ಪುಣ್ಯಕರ್ಮಸಮರ್ಪಣೆಯೆನಿಸುತ್ತದೆ ಪಾಪಕರ್ಮವನ್ನು ಭಗವಂತ ಸ್ವೀಕರಿಸುವುದೆಂದರೆ ಜೀವನ ಅಂತಃಕರಣದಲ್ಲಿ ಆ ಕರ್ಮದ ಫಲವಾಗಿ ದುಃಖವನ್ನು ಉಂಟುಮಾಡಿ ಅದರೊಳಗೆ ಸುಖರೂಪದಿಂದಲೇ ಇದ್ದು ಆ ಸುಖವನ್ನೆ ಅನುಭವಿಸುತ್ತಾನೆ ಜೀವ ಮಾತ್ರ ದುಃಖವನ್ನೆ ಅನುಭವಿಸಿ ಕುಗ್ಗುತ್ತಾನೆ ಜೀವನ ಪ್ರಾಕೃತದುಃಖಕ್ಕೂ ಭಗವಂತನ ಸ್ವರೂಪಭೂತಸುಖಕ್ಕೂ ಬಿಂಬಪ್ರತಿಬಿಂಬಭಾವಕ್ಕೆ ಕಾರಣ ಜೀವನ ದುಃಖ ಭಗವಂತನ ಸುಖಕ್ಕೆ ಅಧೀನ, ಭಗವಂತನ ಸುಖದಂತೆ ಜೀವನ ದುಃಖವೂ ಚೇತನದ ಒಂದು ಧರ್ಮ ಎಂದು ಕಿಂಚಿತ್ ಸಾದೃಶ್ಯ ಕನ್ನಡಿಯಲ್ಲಿ ನಾವು ಕಾಣುವುದೂ ಪ್ರತಿಬಿಂಬವೆ, ನಮ್ಮ ಕರಿನೆರಳೂ ನಮ್ಮ ಪ್ರತಿಬಿಂಬವೆ ಕನ್ನಡಿಯ ಪ್ರತಿಬಿಂಬದಲ್ಲಿ ಬಹಳ ಸಾದೃಶ್ಯವಿದೆ ನೆರಳಲ್ಲಿ ಏನಿದೆ? ಬರಿ ಆಕಾರ ಮಾತ್ರ ಹಾಗೇ ಇದು

**ಫಲಗಳನೀವನಧಿಕಾರಾನುಸಾರದಲಿ:**

ಒಂದೇ ಕರ್ಮ ಅದನ್ನು ಮಾಡಿದವನ ಸ್ವರೂಪಯೋಗ್ಯತೆಗನುಗುಣವಾಗಿ ಫಲ ನೀಡುತ್ತದೆ ಪಾಂಡವರು ಐವರು ಸೇರಿ ರಾಜಸೂಯಯಾಗ ಮಾಡಿದಾಗ ಭೀಮಸೇನನಿಗೆ ಮಾತ್ರ ಅದು ಬ್ರಹ್ಮಪದಪ್ರಾಪ್ತಿಗೆ ಕಾರಣವಾಯಿತು ಧರ್ಮರಾಜನಿಗೆ ಅವನ ಯೋಗ್ಯತೆಗೆ ಮೀರಿದ್ದರಿಂದ ಜೂಜಾಡುವುದಕ್ಕೆ ಅದರಲ್ಲಿಯೂ ಭೀಮಸೇನ ದ್ರೌಪದಿಯರನ್ನು ಪಣವಿಡುವುದಕ್ಕೆ ಪ್ರೇರಣೆ ನೀಡಿ ಹೆಚ್ಚಿನ ಪುಣ್ಯವನ್ನು ಕಳೆಯಿತು ಅದರಿಂದ ಪುಣ್ಯಕರ್ಮ ಉತ್ತಮರಿಗೆ ಅಧಿಕಫಲ ನೀಡುತ್ತದೆ, ಸಾಮಾನ್ಯರಿಗೆ ಅಲ್ಪ ಫಲ, ಅಧಮರಿಗೆ ಏನೂ ಫಲವಿಲ್ಲ ಎಂದಾಗುತ್ತದೆ ಪಾಪಕರ್ಮ ಉತ್ತಮರಿಗೆ ಫಲ ನೀಡುವುದಿಲ್ಲ, ಸಾಮಾನ್ಯರಿಗೆ ಅಲ್ಪಫಲ, ಅಧಮರಿಗೆ ಅಧಿಕಫಲ ನೀಡುತ್ತದೆ ಅದರಿಂದ ಈ ಕರ್ಮಕ್ಕೆ ಎಲ್ಲರಿಗೂ ಇದೇ ಫಲವೆಂದು

ಸಾಮಾನ್ಯನಿಯಮವಿಲ್ಲ ಸರ್ವಜ್ಞನಾದ ಭಗವಂತ ಜೀವರ ಯೋಗ್ಯತಾನುಸಾರ ಅವರ ಕರ್ಮಗಳಿಗೆ ಫಲ ನೀಡುತ್ತಾನೆ ನಾವು ಅಲ್ಪ ಪುಣ್ಯಕರ್ಮವನ್ನು ಹರಿಗೆ ಅರ್ಪಿಸಿದರೆ ಅವನು ಅದನ್ನು ಮಹತ್ತಾಗಿ ಮಾಡಿ ಮಹಾಫಲ ನೀಡುತ್ತಾನೆ. ಪಾಪಕರ್ಮ ಅರ್ಪಿಸಿದರೆ ಅದನ್ನು ಉಪಮರ್ದ ಮಾಡಿ ದುಃಖಫಲದ ತೀವ್ರತೆಯನ್ನು ಕಡಿಮೆ ಮಾಡಿ ಉಣಿಸುತ್ತಾನೆ

**ಪಾವಕನು ಸರ್ವಸ್ವ ಭುಂಜಿಸಿ ತಾ ವಿಕಾರವನೈದನು**

ಧಗಧಗಿಸಿ ಉರಿವ ಬೆಂಕಿ ಕೆನ್ನಾಲಿಗೆ ಚಾಚಿ ಶುದ್ಧ ಅಶುದ್ಧ ಎನ್ನದೆ ಎಲ್ಲವನ್ನೂ ಭಕ್ಷಿಸುತ್ತದೆ, ಸುಟ್ಟು ಬೂದಿ ಮಾಡುತ್ತದೆ ಅಶುದ್ಧ ಅಶುಚಿ ಆಹಾರಸೇವನೆಯಿಂದ ನಮಗೆ ದೈಹಿಕ ಮಾನಸಿಕ ವಿಕಾರಗಳಾಗುವಂತೆ ಅಗ್ನಿಯಲ್ಲಿ ಯಾವ ವಿಕಾರಗಳೂ ಆಗುವುದಿಲ್ಲ

ತೇಜಸ್ವಿನಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ । (ಭಾಗವತ)

**ಪಾವನಕೆ ಪಾವನನೆನಿಪ ಹರಿ**

ಬೆಂಕಿಗೆ ಸಂಸ್ಕೃತದಲ್ಲಿ 'ಪಾವಕ' ಎಂಬ ಹೆಸರಿದೆ ಅಪವಿತ್ರ ವಸ್ತುಗಳು ಬೆಂಕಿಯ ಸ್ಪರ್ಶದಿಂದ ಪವಿತ್ರವಾಗುವುದರಿಂದ ಬೆಂಕಿ ಅದನ್ನು ಪಾವನ ಮಾಡುವುದರಿಂದ ಪಾವಕ ಎಂದು ಹೆಸರು ಪಾವನವನ್ನೂ ಪಾವನಗೊಳಿಸುವವ ಶ್ರೀಹರಿ

ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಂ ।

ಅಪವಿತ್ರ ವಸ್ತುವನ್ನು ಭಕ್ಷಿಸಿ ಅದನ್ನು ಪಾವನಗೊಳಿಸುವ ಬೆಂಕಿಯನ್ನೂ ಪಾವನಗೊಳಿಸುವವ ಹರಿ ಅದಕ್ಕೆ ಪಾವನಗೊಳಿಸುವ ಶಕ್ತಿ ಹರಿಯ ಸನ್ನಿಧಾನ ಪ್ರಯುಕ್ತವಾಗಿದೆ ಆದರಿಂದ ಅಶುದ್ಧಕರ್ಮವನ್ನು ಹರಿಗೆ ಅರ್ಪಿಸಿದರೆ ಅವನಿಗೇನೂ ತೊಂದರೆ ಇಲ್ಲ ಅರ್ಪಿಸದಿದ್ದರೆ ನಮಗೇ ತೊಂದರೆ ಅದರ ದುಷ್ಟಫಲವನ್ನು ನಾವು ಉಣಲೇಬೇಕಾಗುತ್ತದೆ ಅರ್ಪಿಸಿದರೆ ನಮಗೆ ಕರ್ಮವಿಮೋಚನೆಯಾಗುತ್ತದೆ

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।

ಎಂದು ಗೀತೆ ಹೇಳಿದ ಶರಣಾಗತಿಯನ್ನು ವಿಷ್ಣುಪುರಾಣ ಹೀಗೆ ಸ್ಪಷ್ಟಪಡಿಸಿದೆ-

ಸರ್ವೋತ್ತಮತ್ವವಿಜ್ಞಾನಪೂರ್ವಂ ತತ್ರ ಮನಃ ಸದಾ ।<br>
ಸರ್ವಾಧಿಕಪ್ರೇಮಯುಕ್ತಂ ಸರ್ವಸ್ಯಾತ್ರ ಸಮರ್ಪಣಂ ॥<br>
ಅಖಂಡಾ ತ್ರಿವಿಧಾ ಪೂಜಾ ತದತ್ಯೈವ ಸ್ವಭಾವತಃ ।<br>
ರಕ್ಷತೀತ್ಯೇವ ವಿಶ್ವಾಸಸ್ತದೀಯೋಽಹಮಿತಿ ಸ್ಮೃತಿಃ ।<br>
ಶರಣಾಗತಿರೇಷಾ ಸ್ಯಾತ್ ವಿಷ್ಣೌ ಮೋಕ್ಷಫಲಪ್ರದಾ ॥

ವಿಷ್ಣುವೆ ಸರ್ವೋತ್ತಮನೆಂದರಿತು ಎಲ್ಲಕ್ಕಿಂತ ಹೆಚ್ಚಿನ ಪ್ರೀತಿಯಿಂದ ಅವನಲ್ಲಿಯೇ

ಮನಸ್ಸಿಡುವುದು ಎಲ್ಲವನ್ನೂ ಅವನಲ್ಲಿಯೆ ಅರ್ಪಿಸುವುದು, ಬೇರೆ ಅಪೇಕ್ಷೆ ತೊರೆದು ತ್ರಿಕರಣಗಳಿಂದ ಭಕ್ತಿಪೂರ್ವಕ ಅವನನ್ನೇ ಸೇವಿಸುವುದು, ರಕ್ಷಣೆ ಮಾಡಿಯೆ ಮಾಡುತ್ತಾನೆ ಎನ್ನುವ ವಿಶ್ವಾಸ, ನಾನು ಅವನ ದಾಸ ಎನ್ನುವ ಪ್ರಜ್ಞೆ - ಇದೇ ಶರಣಾಗತಿ, ಇದೇ ಮೋಕ್ಷಸಾಧನ

ಇಲ್ಲಿ ಎಲ್ಲವನ್ನೂ ಸಮರ್ಪಿಸುವುದೆಂದರೆ ತನ್ನ ಅಜ್ಞಾನ ಪ್ರಮಾದಾದಿ ದೋಷಗಳಿಂದ ಪಾಪಕರವೆನಿಸಬಹುದಾದ ಪುಣ್ಯಕರ್ಮವನ್ನು 'ಇದರಿಂದ ನೀನು ಸುಪ್ರೀತನಾಗು' ಎಂದು ಸಮರ್ಪಿಸುವುದೆಂದು ಅಭಿಪ್ರಾಯ. ಮನಃಪೂರ್ವಕ ಮಾಡಿದ್ದ ಪೂರ್ವ ಪಾಪಕರ್ಮಕ್ಕೆ ಪಶ್ಚಾತ್ತಾಪದಿಂದ ಕ್ಷಮಾಯಾಚನೆ ಮಾತ್ರ ಮಾಡಬೇಕೇ ಹೊರತು ಸುಪ್ರೀತನಾಗೆಂದು ಸಮರ್ಪಿಸುವುದು ಶಕ್ಯವಿಲ್ಲ ತಾನೆ? ವಸ್ತುತಃ ಮುಂದಿನ ಎರಡು ನುಡಿಗಳಲ್ಲಿ ದಾಸರಾಯರು ಹೇಳುವುದನ್ನು ಕಂಡರೆ ಪೂರ್ವಪಾಪಕರ್ಮವನ್ನು ಕೂಡ ಅದರಿಂದ ಸುಪ್ರೀತನಾಗೆಂದೇ ಸಮರ್ಪಿಸುವುದು ಶಕ್ಯವೆನ್ನಬಹುದು

**ಕಲುಷಜಿಹ್ವೆಗೆ ಸುಷ್ಠು ಭೋಜನ**
**ಜಲ ಮೊದಲು ವಿಷದೋರುವುದು ನಿ**
**ಷ್ಕಲುಷ ಜಿಹ್ವೆಗೆ ಸುರಸ ತೋರುವುದೆಲ್ಲ ಕಾಲದಲಿ ।**
**ಸುಲಲಿತಾಂಗಗೆ ಸಕಲರಸ ಮಂ**
**ಗಳವೆನಿಸುತಿಹುದನ್ನಮಯ ಕೈ**
**ಕೊಳದೆ ಬಿಡುವನೆ ಪೂತನಿಯ ವಿಷಮೊಲೆಯನುಂಡವನು ॥ ೨೭ ॥**

ಪಿತ್ತದೋಷದಿಂದ ಕಲುಷಗೊಂಡ ನಾಲಿಗೆಗೆ ಒಳ್ಳೆಯ ಅನ್ನ ನೀರು ಮುಂತಾದುದೂ ವಿಷದಂತೆ ಕಹಿಯಾಗಿ ಕಾಣುವುದು ಸ್ವಸ್ಥವಾಗಿರುವ ನಾಲಿಗೆಗೆ ಅವು ಸದಾ ರುಚಿಯಾಗಿಯೆ ಕಾಣುವವು ಅದರಿಂದ ಸದಾ ಆರೋಗ್ಯಯುಕ್ತ ಮನೋಹರ ಶರೀರಿಯಾದ ಭಗವಂತನಿಗೆ ಎಲ್ಲ ರಸವೂ ರುಚಿಕರವಾಗಿಯೆ ಕಾಣುವುದು ಸಹಜ ಪೂತನೆಯ ವಿಷದ ಮೊಲೆಯುಂಡ ಸರ್ವಭಕ್ಷಕನಾದ ಆತ ನಾವಿತ್ತ ಅಶುದ್ಧ ಅನ್ನವನ್ನು ಸ್ವೀಕರಿಸದೆ ಬಿಡುವನೇನು?

**ಸುಷ್ಠು ಭೋಜನ ಜಲ ಮೊದಲು ವಿಷದೋರುವುದು :**

ಜ್ವರದಿಂದ ಪಿತ್ತದೋಷಯುಕ್ತವಾದ ನಾಲಿಗೆಗೆ ಸವಿಯಾದ ಅನ್ನ ನೀರೂ ವಿಷವಾಗಿ ಕಾಣುತ್ತದೆ ಸ್ವಸ್ಥವಾದ ನಾಲಿಗೆಗೆ ಹಾಗೆ ಕಾಣಲಾರದು ನಾವು ಮಾಡುವ ಪಾಪಕರ್ಮದ ಫಲ ನಮಗೆ ಕಹಿಯೆನಿಸಿದರೂ ಭಗವಂತನಿಗೆ ಹಾಗೆ ಅನಿಸದು ನಾನೆಂಬ ಅಹಂಕಾರದ ಜ್ವರದಿಂದ ನಮ್ಮ ನಾಲಿಗೆ ದೋಷಯುಕ್ತವಾಗಿದೆ ತಾನೆ?

**ನಿಷ್ಕಲುಷ ಜಿಹ್ವೆಗೆ ಸುರಸ ತೋರುವುದು**

'ನಾಹಂ ಕರ್ತಾ ಹರಿಃ ಕರ್ತಾ' ಎಂಬ ಅರಿವು ಒಳ್ಳೆಯ ಮದ್ದು. ಅದರ ಸೇವನೆಯಿಂದ ಪಾಪಕರ್ಮದ ಫಲವಾದ ದುಃಖವೂ ಸಹ್ಯವಾಗುತ್ತದೆ. 'ಸಮದುಃಖಸುಖಃ ಸ್ವಸ್ಥಃ' ಎಂದು ಭಗವದ್ಗೀತೆ ಹೇಳುವಂತೆ ನಿರ್ವಿಕಾರಚಿತ್ತತೆ ಸಾಧ್ಯವಿದೆ. ಭಗವಂತನಿಗೆ ಸ್ವಾತಂತ್ರ್ಯದ ದುರಭಿಮಾನ ಇಲ್ಲ. ಏಕೆಂದರೆ ಅವನು ಸ್ವತಂತ್ರನೇ ಆಗಿದ್ದಾನೆ. ಅವನು ನಮ್ಮೊಳಗೆ ಬಿಂಬರೂಪನಾಗಿ ನಡೆಸುವ ಪಾಪಕರ್ಮ ಅವನಿಗೆ ರುಚಿಕರವೆ. ಆದರಿಂದ ವಿಷದಂಥ ಎಂಜಲನ್ನೂ ಪಾಪಕರ್ಮವನ್ನೂ ಪಶ್ಚಾತ್ತಾಪಪೂರ್ವಕ ಭಕ್ತಿಯಿಂದ ಅರ್ಪಿಸುವಾಗ ನೀನು ಈ ಕರ್ಮದಿಂದಲೂ ಸುಪ್ರೀತನಾಗೆಂದೇ ಅರ್ಪಿಸಬಹುದು.

**ಅನ್ನಮಯ ಕೈಕೊಳದೆ ಬಿಡುವನೆ?**

ಶ್ರೀಹರಿ ಪುಣ್ಯಪಾಪ ಎಂಬ ಭೇದವಿಲ್ಲದೆ ಎಲ್ಲ ಕರ್ಮಗಳ ರಸವನ್ನೂ ಸವಿಯುತ್ತಾನೆ. ಏಕೆಂದರೆ ಅವನು ಅನ್ನಮಯ. ಅಂದರೆ, ನಾವು ಉಣ್ಣುವ ಅನ್ನದ ವಿಕಾರವೆಂದರ್ಥವಲ್ಲ, ನಮ್ಮನ್ನೇ ಲಯಕಾಲದಲ್ಲಿ ಉಣ್ಣುವ ತೈತ್ತಿರೀಯೋಪನಿಷತ್ತಿನ ಅನ್ನಬ್ರಹ್ಮ ಎಂದರ್ಥ.

ಅದ್ಯತೇऽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ ।

'ಸೃಷ್ಟಿಕಾಲದಲ್ಲಿ ನಮಗೆ ಜೀವನಾಧಾರ ಅವನೆ. ಲಯಕಾಲದಲ್ಲಿ ನಮ್ಮನ್ನು ನುಂಗುವವನೂ ಅವನೆ, ಹರಿ. ಆದರಿಂದ ಅವನು 'ಅನ್ನ' ಎನಿಸಿದ್ದಾನೆ.' ನಮ್ಮ ಸ್ಥೂಲಶರೀರದೊಳಗೆ ಅನ್ನಮಯಕೋಶದಲ್ಲಿರುವ ಅನಿರುದ್ಧನಾಮಕ ಭಗವಂತನೂ ಅನ್ನಮಯ.

**ಸುಲಲಿತಾಂಗಗೆ ಸಕಲ ರಸ ಮಂಗಳವೆನಿಸುತಿಹುದು .**

ಇಡಿ ಬ್ರಹ್ಮಾಂಡವನ್ನೆ ಮೆದ್ದು ಬಾಯಿ ಚಪ್ಪರಿಸುವವನಿಗೆ ಲೋಕದಲ್ಲಿ ಅಮಂಗಳರಸ ಏನಿದ್ದೀತು? ಎಲ್ಲ ರಸವೂ ಮಂಗಳವೆ. ಅಮಂಗಳರಸದಲ್ಲಿಯೂ ನಿಯಾಮಕವಾದ ತನ್ನ ರೂಪ ಮಂಗಳವೆ. ಅವನು ಸವಿಯುವುದೂ ಈ ನಿಯಾಮಕರೂಪವನ್ನೆ. ಬಾಹ್ಯ ಅಮಂಗಳ ಪದಾರ್ಥವನ್ನಲ್ಲ. ಸ್ವರಮಣನಾದ ಪೂರ್ಣಾನಂದನಾದ ಆತನಿಗೆ ಬಾಹ್ಯ ಪ್ರಾಕೃತ ಪದಾರ್ಥದಿಂದ ಏನು ಸುಖವಿದೆ?

**ಪೂತನಿಯ ವಿಷಮೊಲೆಯನುಂಡವನು .**

ಪೂತನಿಯಲ್ಲಿ ಕೃಷ್ಣನನ್ನು ವಿಷ ಉಣಿಸಿ ಕೊಲ್ಲುವ ದುರ್ಬುದ್ಧಿ ಇತ್ತು. ಜೊತೆಗೆ ಎದೆ ಹಾಲುಣಿಸುವ ವಾತ್ಸಲ್ಯಭಾವವೂ ಇತ್ತು. ದುರ್ಬುದ್ಧಿ ಅವಳಲ್ಲಿದ್ದ ತಾಟಕೆಯದು. ವಾತ್ಸಲ್ಯ ಅವಳಲ್ಲಿದ್ದ ಊರ್ವಶಿಯದು. ಎರಡೂ ಸೇರಿದ ವಿಲಕ್ಷಣ ಸಂಕೀರ್ಣವ್ಯಕ್ತಿತ್ವ ಪೂತನಿಯದಾಗಿತ್ತು. ಶ್ರೀಕೃಷ್ಣ ವಿಷದ ಮೊಲೆಯುಂಡು ಇಬ್ಬರಿಗೂ ತೃಪ್ತಿ ನೀಡಿದ. ವಿಷ ಉಂಡನೆಂದು ತಾಟಕೆಗೆ ಸಂತೃಪ್ತಿ. ಹಾಲುಂಡವನೆಂದು ಊರ್ವಶಿಗೆ ಧನ್ಯತಾಭಾವ. ಬಳಿಕ ಕೃಷ್ಣ

ಪೂತನಿಯ ಪ್ರಾಣವನ್ನೇ ಹೀರಿದ ತಾಟಕೆಯನ್ನು ನರಕಕ್ಕೆ ಕಳಿಸಿದ ಊರ್ವಶಿಯನ್ನು ಸ್ವರ್ಗಕ್ಕೆ ಕಳಿಸಿದ ಅವನಿಗೆ ವಿಷವಾಗಲಿ ಎದೆಹಾಲಾಗಲೀ ಎರಡೂ ಅಮೃತವೆ ಉಣಿಸಿದವರ ಭಾವನೆಗಳು ಬೇರಾಗಿದ್ದರಿಂದ ಅವರ ಗತಿಗಳೂ ಬೇರೇ ಆದುವು

ವಿಷ ಉಣಿಸಿದ್ದ ತಾಟಕೆ ತಮಸ್ಸಿನಲ್ಲಿ ಬಿದ್ದುದು ಸರಿಯೆ ವಿಷದ ಹಾಲುಣಿಸಿದ ಊರ್ವಶಿ ಹೇಗೆ ಸ್ವರ್ಗವೇರಿದಳು? ಅದು ಅವಳ ಪಾಲಿಗೆ ಪಾಪಕರ್ಮವಲ್ಲವೆ? ನಿಜ ಆದರೂ ಭಕ್ತಿಪೂರ್ವಕವಾಗಿ ಅದನ್ನು ಅವಳು ಸಮರ್ಪಿಸಿದುದು ಪುಣ್ಯಕರವಾಯಿತು ಹೀಗೆ ಊರ್ವಶಿಗೆ ಅನುಗ್ರಹಿಸಿದ ಹರಿ ನಾವು ಭಕ್ತಿಯಿಂದ ಅರ್ಪಿಸುವ ಅಶುದ್ಧ ಅನ್ನವನ್ನು ಏಕೆ ಸ್ವೀಕರಿಸಲಾರ? ಹಾಗಾದರೆ ಭಕ್ತಿಯಿಂದ ವಿಷವನ್ನೇ ಅರ್ಪಿಸಬಲ್ಲೆವೆ? ಮದ್ಯ ಮಾಂಸಗಳನ್ನು ಅರ್ಪಿಸಬಲ್ಲೆವೆ? ಎಂದರೆ ಅದು ನಿಜವಾದ ಭಕ್ತಿಯೆ ಎಂದು ತಮ್ಮನ್ನು ತಾವೇ ಕೇಳಬೇಕಾಗುತ್ತದೆ ನಿಜವಾದ ಭಕ್ತಿ ಇದ್ದರೆ, ಜರಾವ್ಯಾಧ ಕೃಷ್ಣನ ಪಾದಗಳಿಗೆ ಬಾಣ ಎಸೆದುದು ಪುಷ್ಪಾರ್ಚನೆಯಾದಂತೆ ನಮ್ಮ ಪಾಪಕರ್ಮವೂ ಅವನ ಆರಾಧನೆ ಎನಿಸುವುದರಲ್ಲಿ ಸಂಶಯವಿಲ್ಲ

**ಪೇಳಲೇನು ಸಮೀರದೇವನು**
**ಕಾಳಕೂಟವನುಂಡು ಲೋಕವ**
**ಪಾಲಿಸಿದ ತದ್ದಾಸನೋರ್ವನು ಅಮೃತನೆನಿಸಿದನು ।**
**ಶ್ರೀಲಕುಮಿವಲ್ಲಭ ಶುಭಾಶುಭ**
**ಜಾಲಕರ್ಮಗಳುಂಬನುಪಚಯ**
**ದೇಳಿಗೆಗಳವಗಿಲ್ಲವೆಂದಿಗು ಸ್ವರಸಗಳ ಬಿಟ್ಟು** **॥ ೨೮ ॥**

ಇನ್ನೇನು ಹೇಳಲಿ? ವಾಯುದೇವ ಕಾಳಕೂಟವಿಷವನ್ನುಂಡು ಲೋಕವನ್ನು ಪಾಲಿಸಿದ ಮರಣ ಹೊಂದಲಿಲ್ಲ ಹೀಗೆ ವಿಷ್ಣುದಾಸನೊಬ್ಬ ಅಮೃತನೆನಿಸಿದ ನೆಂದರೆ ಪ್ರಭುವಾದ ಆ ಲಕ್ಷ್ಮೀರಮಣ ಶುಭ ಅಶುಭ ಎನ್ನದೆ ಎಲ್ಲ ಕರ್ಮ ಸಮೂಹಗಳನ್ನೇ ಉಣಬಲ್ಲನೆಂದು ಏನು ಹೇಳಲಿ? ಸ್ವಾಖ್ಯರಸಗಳನ್ನು ಹೊರತು ಮಾಡಿ ಬೇರೆ ಶರೀರಪುಷ್ಟಿಕಾರಣಗಳಾದ ರಸಗಳು ಅವನಿಗೆ ಇಲ್ಲ

**ಕಾಳಕೂಟವನುಂಡು ಲೋಕವ ಪಾಲಿಸಿದ**

ವಾಯುದೇವ ಹರಿಪ್ರೀತ್ಯರ್ಥವಾಗಿ ಕಾಳಕೂಟವನ್ನೆ ಪಾನ ಮಾಡಿ ಲೋಕವನ್ನು ಪಾಲಿಸಿದ ಶಿವನೆ ನೀಲಕಂಠ ನಂಜುಂಡ ಕಾಳಕೂಟವಿಷ ಉಂಡವನೆಂದು ಲೋಕದಲ್ಲಿ ಪ್ರಸಿದ್ಧಿ ಭಾರತ, ಭಾಗವತಾದಿಗಳಲ್ಲಿಯೂ ಹಾಗೇ ಕಾಣುತ್ತದೆ. ಆದರೆ ಋಗ್ವೇದದ ವಾಯುಸೂಕ್ತದಲ್ಲಿ ಹೇಳಿದಂತೆ ವಾಯುವೆ ವಿಷವನ್ನು ಪೂರ್ತಿ ಕುಡಿದು ಅನಾಯಾಸವಾಗಿ ಅರಗಿಸಿಕೊಂಡವ ಶಿವ ಅತಿ ಸ್ವಲ್ಪ ಮಾತ್ರ ಕುಡಿದು ಬಾಧೆಯಿಂದ ಬಳಲಿ ಬಹಳ ಹಿಂಸೆ ಪಟ್ಟುದು, ನಾಮತ್ರಯ ಜಪದಿಂದ ಸ್ವಸ್ಥನಾದುದು ಪದ್ಮಪುರಾಣದಲ್ಲಿ ಸ್ಪಷ್ಟವಿದೆ ವಾಯುಸೂಕ್ತ ಮಂತ್ರ ಇದು-

ವಾಯುರಸ್ಮಾ ಉಪಾಮಂಥತ್ ಪಿನಿಷ್ಟಿ ಸ್ಮಾ ಕುನನ್ನಮಾ ।
ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ ಸಹ ॥

'ವಾಯುಃ ರುದ್ರೇಣಾಪಿಬತ್ ಸಹ' - ರುದ್ರನೊಂದಿಗೆ ವಾಯು ವಿಷ ಕುಡಿದ ಇಲ್ಲಿ ವಾಯುವಿನ ವಿಷಪಾನದಲ್ಲಿ ರುದ್ರ ಕೇವಲ ಸಹಭಾಗಿಯಾಗಿದ್ದ, ಮುಖ್ಯವಾಗಿ ಕುಡಿದವನು ಅವನಲ್ಲ ಎಂದಂತಾಯಿತು 'ವಾಯುರಸ್ಮಾ ಉಪಾಮಂಥತ್' - ವಾಯು ಶಿವನಿಗಾಗಿ ವಿಷವನ್ನು ಹಿಂಡಿಕೊಟ್ಟ ಹಿಂಡಿದ ಬಳಿಕ ಉಳಿದ ನಿಃಸಾರವಾದ ಭಾಗವನ್ನು ಶಿವ ಕುಡಿದನೆಂದಂತಾಯಿತು 'ವಾಯು' ಎಂದರೆ ಸದಾ ಸಂಚರಿಸುವವ ಎಂಬ ಹೆಸರಿನಿಂದಲೆ ವಾಯು ವಿಷ ಕುಡಿದರೂ ಮೂರ್ಛೆ ಹೊಂದದೆ ಮೊದಲಿನಂತೆ ಅವಿಶ್ರಾಂತವಾಗಿ ಸಂಚರಿಸುತ್ತಲೆ ಇದ್ದ ಎಂದಂತಾಯಿತು 'ರುದ್ರ' ಎಂದರೆ ರೋದನ ಮಾಡುವವ ಎಂಬ ಹೆಸರಿನಿಂದಲೆ ವಿಷಬಾಧೆಯಿಂದ ರೋದನ ಮಾಡಿದನೆಂದಂತಾಯಿತು 'ಕೇಶೀ' ಎಂದರೆ ಕ- ಸುಖಸ್ವರೂಪನಾದ, ಈಶ- ಸ್ವಾಮಿಯಾದ ವಿಷ್ಣುವನ್ನು ದಾಸನಾದ ವಾಯು ತನ್ನೊಳಗೆ ಇಟ್ಟುಕೊಂಡು ಸುಖಿಯಾಗಿಯೇ ಇದ್ದ ಎಂದಂತಾಯಿತು ಇದನ್ನೇ ಸೂಚಿಸಲು ದಾಸರಾಯರು 'ತದ್ದಾಸನೋರ್ವನು' ಎಂದಿದ್ದಾರೆ ಈ ವಾಯುಮಹಿಮೆ ಗೋಪ್ಯ ಎಲ್ಲರೂ ತಿಳಿಯುವುದು ಬೇಡ ಎಂದೇ ಭಾರತ ಭಾಗವತಾದಿಗಳು ಹೇಳಿಲ್ಲ ಶಿವ ವಿಷಬಾಧೆ ಪರಿಹಾರಕ್ಕಾಗಿಯೆ ಚಂದ್ರಮೌಳಿಯಾದ, ಚಂದ್ರಬಿಂಬದಿಂದ ಸುರಿಯುವ ಅಮೃತದಿಂದ ಸದಾ ಅಭಿಷೇಕ ಅವನಿಗೆ ಬೇಕು ಅಭಿಷೇಕಪ್ರಿಯನೆಂದೂ ಪ್ರಸಿದ್ಧನಾದ

**ತದ್ದಾಸನೋರ್ವನು ಅಮೃತನೆನಿಸಿದನು** ·

ಸಮಸ್ತ ಲೋಕವನ್ನೆ ಸುಡುವ ಕಾಳಕೂಟವನ್ನು ಒಬ್ಬನೆ ವಾಯುದೇವ ಲೀಲಾಜಾಲವಾಗಿ ಕುಡಿದು ಅರಗಿಸಿಕೊಂಡನೆಂದರೆ ಅವನು ಅಮೃತ, ಮರಣರಹಿತನೆನ್ನುವುದು ಉಚಿತ ಈಶಾವಾಸ್ಯೋಪನಿಷತ್ತು ಅವನನ್ನು 'ಅಮೃತ' ನೆಂದೇ ಕರೆದಿದೆ ಏಕೆ ಅಮೃತ ಎಂದರೆ ಅನಿಲ, ಅ- ಅಕಾರವಾಚ್ಯನಾದ ಹರಿ ಅವನಿಗೆ, ನಿಲ- ನಿಲಯ, ಆಶ್ರಯ ಹರಿಯನ್ನೇ ಸದಾ ಆಶ್ರಯಿಸಿದವನಿಗೆ ಮರಣವಿಲ್ಲ ಹರಿಯನ್ನಾಶ್ರಯಿಸಿದವನಿಗೆ ಹರಿದಾಸನಿಗೇ ಮರಣವಿಲ್ಲ ಎಂದರೆ ಪ್ರಭುವಾದ ಹರಿಗೆ ಮರಣವಿದ್ದೀತೆ? ಈ ಅಭಿಪ್ರಾಯದಿಂದ ಈಶಾವಾಸ್ಯೋಪನಿಷತ್ತು ಹೇಳಿದೆ-

'ವಾಯುರನಿಲಮಮೃತಂ।'

ಎಲ್ಲ ದೇವತೆಗಳೂ ಅಮೃತವನ್ನು ಕುಡಿದು ಅಮರ್ತ್ಯರೆನಿಸಿದರು 'ಅಮರ್ತ್ಯಾ ಅಮೃತಾಂಧಸಃ' ಎಂದು ಅಮರಕೋಶ ಹೇಳುತ್ತದೆ ಈ ಅಮರ್ತ್ಯರಿಗೂ ಮಹಾಪ್ರಳಯದಲ್ಲಿ ಮರಣವಿದೆ ವಾಯುದೇವನಿಗೆ ವಿಷ ಕುಡಿದರೂ ಮರಣ ಬರಲಿಲ್ಲ, ಲಯಕಾಲದಲ್ಲಿಯೂ ಮರಣವಿಲ್ಲ ಅವನಿಗೇ ಮಹಾಪಾಪರೂಪವಾದ ವಿಷ ಅಮೃತವಾಗುವುದಾದರೆ ಅವನ ಪ್ರಭು

ಶ್ರೀಹರಿಗೆ ಪಾಪಕರ್ಮ ಅಮೃತವೆನಿಸಿ ಪ್ರಿಯವಾಗುವುದು ಏನಾಶ್ಚರ್ಯ? ಅದರಿಂದ ಪಾಪಕರ್ಮವನ್ನು ಪಶ್ಚಾತ್ತಾಪದಿಂದ ಭಕ್ತಿಯಿಂದ ಸಮರ್ಪಿಸುವಾಗ 'ಪ್ರೀಯತಾಂ' ಪ್ರೀತನಾಗಲಿ ಎಂದು ಸಮರ್ಪಣೆ ಮಾಡಬಹುದು

**ಉಪಚಯದೇಳಿಗೆಗಳವಗಿಲ್ಲ :**

ಉಪಚಯ ಎಂದರೆ ಶರೀರಕ್ಕೆ, ಮನಸ್ಸಿಗೆ ಪುಷ್ಟಿ ಅದರ ಏಳಿಗೆ ಎಂದರೆ ಹೆಚ್ಚಳ ನಮಗೆ ಅನ್ನದಿಂದ ಪುಷ್ಟಿ ಒಳ್ಳೆಯ ಶುದ್ಧ ಅನ್ನದಿಂದ ಪುಷ್ಟಿ ಹೆಚ್ಚು ಅಶುದ್ಧ ಅನ್ನದಿಂದ ಕಡಿಮೆ ವಿಷ ಶರೀರಕ್ಕೆ ಹಾನಿಕರ ಹರಿಗೆ ಅನ್ನದಿಂದ ಶರೀರಪುಷ್ಟಿಯಿಲ್ಲ, ವಿಷದಿಂದ ಹಾನಿಯೂ ಇಲ್ಲ ಭೌತಿಕ ಶರೀರಕ್ಕೇ ಇವೆಲ್ಲ ಹರಿಗೆ ಭೌತಿಕಶರೀರವೆ ಇಲ್ಲ, ಅವನದು ಸದಾ ಚಿನ್ಮಯಶರೀರ ಅದು ಸದಾ ಪುಷ್ಟವಾಗಿಯೆ ಇರುತ್ತದೆ ಯಾವುದರಿಂದ ಪುಷ್ಟಿ ಎಂದರೆ ಸ್ವ-ರಸಗಳಿಂದ ಸ್ವರೂಪಭೂತ ಷಡ್ರಸಗಳಿಂದ ಯುಕ್ತವಾದ ಸುಗಂಧಮಯವಾದ ತನ್ನ ಭೋಜ್ಯರೂಪವನ್ನು ತಾನೆ ಭೋಕ್ತನಾಗಿ ಉಂಡು ಸದಾ ಪುಷ್ಟನಾಗಿಯೆ ಇರುತ್ತಾನೆ ಈ ಸ್ವರಸ ಅಮೃತದಲ್ಲಿಯೂ ಇದೆ, ವಿಷದಲ್ಲಿಯೂ ಇದೆ ಅದರಿಂದ ವಿಷ ಕುಡಿದರೂ ಅವನು ಸುಪ್ರೀತನೆ ಆಗುತ್ತಾನೆ ಪಾಪಕರ್ಮ ಸ್ವೀಕರಿಸಿದರೆ ಇನ್ನೇನು?

**ಈ ಪರಿಯಲಚ್ಯುತನ ತತ್ತದ್**
**ರೂಪ ತನ್ನಾಮಗಳ ಸಲೆ ನಾ**
**ನಾ ಪದಾರ್ಥದಿ ನೆನೆನೆನೆದು ಭುಂಜಿಸುತಲಿರು ವಿಷಯ ।**
**ಪ್ರಾಪಕ ಸ್ಥಾಪಕ ನಿಯಾಮಕ**
**ವ್ಯಾಪಕನು ಎಂದರಿದು ನೀನಿ-**
**ರ್ಲೇಪನಾಗಿರು ಪುಣ್ಯಪಾಪಗಳರ್ಪಿಸವನಡಿಗೆ ॥ ೨೯ ॥**

ಈ ರೀತಿಯಲ್ಲಿ ಅಚ್ಯುತನ ಆಯಾ ರೂಪಗಳನ್ನು ಆಯಾ ನಾಮಗಳನ್ನೂ ನಾನಾ ಪದಾರ್ಥಗಳಲ್ಲಿ ಚೆನ್ನಾಗಿ ನೆನೆನೆನೆದು ವಿಷಯ ಪದಾರ್ಥಗಳನ್ನು ಭುಂಜಿಸುತ್ತಿರು ಆ ಅಚ್ಯುತನೆ ಶರೀರಕ್ಕೆ ಅನ್ನರಸಪ್ರಾಪಕ ಅನ್ನರಸಸ್ಥಾಪಕ, ಅನ್ನರಸನಿಯಾಮಕ, ಮತ್ತು ಅನ್ನಮಯಶರೀರದಲ್ಲಿ ವ್ಯಾಪಕನೂ ಆಗಿದ್ದಾನೆ ಎಂದು ತಿಳಿದು ನೀನು ನಿರ್ಲೇಪನಾಗಿರು ಅದಕ್ಕೆ ಪುಣ್ಯಪಾಪಗಳನ್ನು ಸದಾ ಅವನ ಪಾದಗಳಿಗೆ ಅರ್ಪಿಸುತ್ತಿರು

**ತತ್ತದ್ರೂಪ ತನ್ನಾಮಗಳ ನೆನೆನೆನೆದು ಭುಂಜಿಸುತಲಿರು**

'ವಾಸುದೇವನು ಅನ್ನದೊಳು ನಾನಾ ಸುಭಕ್ಷ್ಯದಿ ಸಂಕರ್ಷಣ' ಎಂದು ಮುಂತಾಗಿ ಹಿಂದೆ ಹೇಳಿದಂತೆ ನಾನಾ ಅನ್ನಪದಾರ್ಥಗಳಲ್ಲಿರುವ ಹರಿಯ ರೂಪಗಳನ್ನೂ ಅವುಗಳ ವಾಸುದೇವ

ಸಂಕರ್ಷಣಾದಿ ನಾಮಗಳನ್ನೂ ಚೆನ್ನಾಗಿ ತಿಳಿದು ಆ ನಾಮಯುಕ್ತವಾದ ಎಲ್ಲ ರೂಪಗಳನ್ನೂ ಉದರದಲ್ಲಿರುವ ವೈಶ್ವಾನರನಾಮಕರೂಪದೊಂದಿಗೂ ಪಂಚಕೋಶಗತ ವಾಸುದೇವಾದಿ ನಾಮಕ ರೂಪಗಳೊಂದಿಗೂ ಐಕ್ಯಚಿಂತನೆ ಮಾಡುತ್ತ ಆಹುತಿರೂಪದಿಂದ ಗೋವಿಂದ ನಾಮೋಚ್ಚಾರಣಪೂರ್ವಕ ತುತ್ತು ತುತ್ತಾಗಿ ಉಣಬೇಕು ದೇವತಾರ್ಚನೆಯ ಕಾಲದಲ್ಲಿ ನೈವೇದ್ಯಸಮರ್ಪಣೆಯೂ ಹೀಗೆಯೇ ನೈವೇದ್ಯದಲ್ಲಿರುವ ಹರಿಯ ಸ್ವಾಖ್ಯರಸವನ್ನು ಪ್ರತಿಮಾಂತರ್ಗತ ಹರಿರೂಪದೊಂದಿಗೆ ಐಕ್ಯಚಿಂತನ ಮಾಡುತ್ತ ಅವೆರಡೂ ಭೋಜ್ಯ-ಭೋಕ್ತೃಗಳಾಗಿ ಲೀಲೆ ನಡೆಸುವುದೆಂದು ಚಿಂತನ ಮಾಡುವುದೇ ನೈವೇದ್ಯಸಮರ್ಪಣೆ ಇದೇ ರೀತಿ ನಾವು ಭೋಜನ ಮಾಡುವಾಗ ಅನ್ನದಲ್ಲಿರುವ ಅನ್ನ ಪ್ರಾಣ ಮನ ವಿಜ್ಞಾನ ಆನಂದಗಳೆಂಬ ಅನ್ನರಸದ ಅಂಶಗಳಲ್ಲಿ ಆದೇ ನಾಮಗಳಿಂದ ಇರುವ ಭಗವದ್ರೂಪಗಳನ್ನು ಅನ್ನಮಯಾದಿ ಕೋಶಗಳಲ್ಲಿರುವ ಅದೇ ನಾಮದ ಭಗವದ್ರೂಪಗಳೊಡನೆ ಐಕ್ಯದಿಂದ ಚಿಂತಿಸಿ ಅನ್ನರಸದಿಂದ ಪಂಚಕೋಶಗಳು ಪುಷ್ಟಿ ಹೊಂದುವುವು ಎಂದು ಭಾವಿಸಬೇಕು. ಹೀಗೆ ಭಾವಿಸದಿದ್ದರೂ ಪುಷ್ಟಿಯಾಗೇ ಆಗುತ್ತದೆ ಭಾವಿಸಿದರೆ ಶರೀರಕ್ಕೆ ಪಾವಿತ್ರ್ಯ ಬರುತ್ತದೆ ಜ್ಞಾನಸಾಧನೆ ಮೋಕ್ಷಸಾಧನೆಗಳು ಸುಲಭವಾಗುತ್ತವೆ

**ಪ್ರಾಪಕನು ಎಂದರಿದು**

ಅನ್ನ ಭಕ್ಷ್ಯಾದಿಗಳಲ್ಲಿ ವಾಸುದೇವಾದಿ ಪಂಚರೂಪಗಳಿಂದ ಇದ್ದು ಅಚ್ಯುತನೆ ಅನ್ನ ಮುಂತಾದುವನ್ನು ಶರೀರಕ್ಕೆ ಪ್ರಾಪ್ತವಾಗುವಂತೆ ಮಾಡುತ್ತಾನೆ ಪ್ರಾಪ್ತವಾದ ಅನ್ನದಲ್ಲಿರುವ ಅನ್ನಪ್ರಾಣಾದಿ ರಸಗಳಲ್ಲಿಯೂ ಅದೇ ನಾಮದಿಂದ ಇರುವ ಹರಿ ಆ ಅನ್ನರಸಗಳನ್ನು ಕೋಶಗಳಿಗೆ ಪ್ರಾಪ್ತವಾಗುವಂತೆ ಮಾಡುತ್ತಾನೆ ಹೀಗೆ ಅನ್ನಪ್ರಾಪಕ ಅನ್ನನಾಮಕನೆ ಎಂದರಿತು ನೀನು ನಿರ್ಲೇಪನಾಗಿರು 'ಕರ್ಮಣ್ಯೇವಾಧಿಕಾರಸ್ತೇ' ಎಂಬಂತೆ ಅನ್ನಸಂಪಾದನೆಗೆ ಪ್ರಯತ್ನಮಾಡುವುದನ್ನು ಬಿಡದೆಯೆ, ಅನ್ನಪ್ರಾಪ್ತಿ ಅನ್ನನಾಮಕನ ಅನುಗ್ರಹದಿಂದ ಆಗಿಯೆ ತೀರುವುದೆಂದು ವಿಶ್ವಾಸದಿಂದ ನಿಶ್ಚಿಂತನಾಗಿರು, ಮಾ ಫಲೇಷು, ಫಲದ ಬಗ್ಗೆ ಹೆಚ್ಚಿಗೆ ಯೋಚಿಸಬೇಡ

**ಸ್ಥಾಪಕನು ಎಂದರಿದು :**

ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯ ಎಂಬ ಪಂಚಕೋಶಗಳಲ್ಲಿ ಕ್ರಮವಾಗಿ ಅನ್ನ ಪ್ರಾಣ ಮನಸ್ ವಿಜ್ಞಾನ ಆನಂದ ಎಂಬ ಐದು ಬಗೆಯ ರಸಗಳನ್ನು ಸ್ಥಾಪಿಸಿ ಆ ಕೋಶಗಳಿಗೆ ಉಪಚಯ, ಅಂದರೆ ವೃದ್ಧಿ, ಪುಷ್ಟಿಬಲಗಳನ್ನು ತಂದು ಕೊಡುವವನು ಆಯಾ ನಾಮಗಳಿಂದ ಅಲ್ಲಿರುವ ಅಚ್ಯುತನೆ ಎಂದರಿತು ನಿಶ್ಚಿಂತನಾಗಿರು

**ನಿಯಾಮಕನು ಎಂದರಿದು :**

ಪ್ರಾಣ ಅಪಾನ ವ್ಯಾನ ಉದಾನ ಸಮಾನ ಎಂಬ ಪಂಚಪ್ರಾಣರಲ್ಲಿ ಅವೇ ನಾಮಗಳಿಂದ

ಹರಿ ಇದ್ದು ಆ ಪ್ರಾಣಾದಿಗಳ ಮೂಲಕ ಆಯಾ ಅನ್ನರಸಗಳು ಆಯಾ ಕೋಶಗಳಲ್ಲಿಯೆ ಬಂದು ಸೇರುವಂತೆ ನಿಯಮಿಸುವವನು ಹರಿಯೆ ಎಂದು ತಿಳಿದು ನಿರ್ಲೇಪನಾಗಿರು

**ವ್ಯಾಪಕನು ಎಂದರಿದು :**

'ಸುತಪ ಏಕೋತ್ತರ ಸುಪಂಚಾಶತ ವರಣ ಕರಣದಿ' ಎಂದು ಹೇಳಿದಂತೆ ಷಣ್ಣವತಿನಾಮಕನಾದ ಅನಿರುದ್ಧ ಅನ್ನಮಯವಾದ ಸ್ಥೂಲಶರೀರದಲ್ಲಿ ವ್ಯಾಪಿಸಿದ್ದು ನಮ್ಮನ್ನು ಕಾಪಾಡುತ್ತಾನೆ ಎಂದು ತಿಳಿದು ನಿರ್ಲೇಪನಾಗಿರು

**ನೀ ನಿರ್ಲೇಪನಾಗಿರು ·**

ಈ ರೀತಿಯಲ್ಲಿ ಅನ್ನದಲ್ಲಿ ಶರೀರದಲ್ಲಿ ಎಲ್ಲ ಕಡೆ ಭಗವಂತನನ್ನು ಕಾಣುತ್ತಿದ್ದರೆ ಭಗವಂತನೆ ಧರ್ಮಶಾಸ್ತ್ರಕಾರರೊಳಗೆ ನಿಂತು ಭೋಜ್ಯ ಅಭೋಜ್ಯ ಎಂದು ಮುಂತಾಗಿ ವಿವೇಕವನ್ನು ಉಪದೇಶಿಸಿದ್ದಾನೆ ಎಂಬ ಪ್ರಜ್ಞೆ ಜಾಗರೂಕವಾಗಿರುತ್ತದೆ ನಿಷಿದ್ಧಾನ್ನಭೋಜನ ಸಂಭವಿಸುವುದಿಲ್ಲ ಪ್ರಮಾದಾದಿಗಳಿಂದ ಸಂಭವಿಸಿದರೂ ಅದನ್ನು ಭಗವಂತ ಕ್ಷಮಿಸುತ್ತಾನೆ ಅದರಿಂದ ನಿಷಿದ್ಧಾನ್ನ ಪರಿಣಾಮರೂಪವಾದ ರೋಗ ದಾರಿದ್ರ್ಯಾದಿ ಕರ್ಮಫಲಲೇಪ ಉಂಟಾಗುವುದಿಲ್ಲ ಮಾತ್ರವಲ್ಲ, ಅಂತಃಕರಣಶುದ್ಧಿಯಾಗಿ ಜ್ಞಾನದ್ವಾರಾ ಮೋಕ್ಷ ಲಭಿಸುವುದರಿಂದ ಕರ್ಮಲೇಪ ಪೂರ್ತಿಯಾಗಿ ತೊಡೆದು ಹೋಗುವುದು

**ಪುಣ್ಯಪಾಪಗಳರ್ಪಿಸಪವನಡಿಗೆ**

ಶ್ರೀರಾಘವೇಂದ್ರ ಸ್ವಾಮಿಗಳು ಪ್ರಾತಃಸಂಕಲ್ಪಗದ್ಯದಲ್ಲಿ ವಾಯುದೇವನನ್ನು ಸರ್ವಕರ್ಮಶುದ್ಧಿಪ್ರದನೆಂದು ಕೊಂಡಾಡಿದ್ದಾರೆ-

'ಸರ್ವಕರ್ಮಶುದ್ಧಿಪ್ರದೇನ ಶ್ರೀಮುಖ್ಯಪ್ರಾಣೇನ ಪ್ರೇರಿತಃ ಸನ್'

ನಾವು ಮಾಡುವ ಎಲ್ಲ ಕರ್ಮಗಳೂ ಅಶುದ್ಧವೆ ಕರ್ಮಕಾಲದಲ್ಲಿ ನಾವು ಭಗವಂತನನ್ನು ಮರೆಯುತ್ತೇವೆ ಭಗವಂತನ ಪೂಜೆಗೆ ಕುಳಿತಿರುವಾಗಲೆ ಬೇರೆ ಏನಾದರೂ ಚಿಂತಿಸುತ್ತೇವೆ ಮತ್ತು ನಾನು ಪೂಜೆ ಮಾಡುತ್ತೇನೆ ಎಂಬ ಸ್ವಾತಂತ್ರ್ಯ ಅಭಿಮಾನವಿರುತ್ತದೆ ರುದ್ರಾದಿ ದೇವತೆಗಳ ಕರ್ಮಗಳಲ್ಲಿಯೂ ಈ ದೋಷಗಳು ಕೆಲವೊಮ್ಮೆ ಕಾಣಿಸಿಕೊಳ್ಳುವುದುಂಟು ನಮ್ಮಲ್ಲಿ ಯಾವಾಗಲೂ ಇರುತ್ತವೆ ಇದು ಮುಖ್ಯವಾಗಿ ಅಶುದ್ಧಿ ಇನ್ನು ಫಲಾಪೇಕ್ಷೆ, ಕಾಮಕ್ರೋಧಾದಿಗಳು, ಪ್ರಮಾದಾಲಸ್ಯಾದಿ ಪ್ರಯುಕ್ತ ಮಂತ್ರ ತಂತ್ರ ಸ್ವರವರ್ಣಾದಿ ಲೋಪ ದೋಷಗಳು ಸರ್ವಸಾಮಾನ್ಯ ಅಶುದ್ಧಿಗಳಾಗಿವೆ ಈ ಎಲ್ಲ ಅಶುದ್ಧಿಗಳನ್ನು ಮುಖ್ಯಪ್ರಾಣ ಕಳೆಯುತ್ತಾನೆ, ನಿರ್ಮಲವಾದ ಕರ್ಮಗಳನ್ನೇ ಹರಿಗೆ ಅರ್ಪಿಸುತ್ತಾನೆ

'ತಸ್ಮಿನ್ನಪೋ ಮಾತರಿಶ್ವಾ ದಧಾತಿ'

ಎಂದು ಈಶಾವಾಸ್ಯೋಪನಿಷತ್ತು ಹೇಳುತ್ತದೆ ಇನ್ನು ಸ್ವತಃ ನಿಷಿದ್ಧವಾದ ಪಾಪಕರ್ಮಗಳೇ

ಕೆಲವೊಮ್ಮೆ ಪ್ರಮಾದಾದಿಗಳಿಂದ ನಡೆದಿರುತ್ತವೆ ಅವನ್ನೂ ಕೂಡ ಭಕ್ತಿಯಿಂದ ಅರ್ಪಿಸಿದಾಗ ಭಗವಂತ ಅವುಗಳನ್ನು ವಿಹಿತಕರ್ಮವನ್ನಾಗಿ ಮಾಡಿಕೊಂಡು ಸ್ವೀಕರಿಸುತ್ತಾನೆ ಶ್ರೀವಾದಿರಾಜ ಸ್ವಾಮಿಗಳು ತಾತ್ಪರ್ಯನಿರ್ಣಯ ಟೀಕೆಯಲ್ಲಿ ವ್ಯಾಧನು ಶ್ರೀಕೃಷ್ಣನ ಪಾದಕಮಲಗಳಿಗೆ ಬಾಣ ಎಸೆದದ್ದು ಪುಷ್ಪಾರ್ಚನೆಯೆನಿಸಿತು ಎಂದಿದ್ದಾರೆ ವಿದುರ ಶ್ರೀಕೃಷ್ಣನ ಮುಂದೆ ಕುಳಿತು ಮೈಮರೆತು ಹಣ್ಣಿನ ಸಿಪ್ಪೆ ಸುಲಿದು ಹಣ್ಣನ್ನು ಕೆಳಗೆ ಹಾಕಿ ಸಿಪ್ಪೆಯನ್ನು ಅವನಿಗೆ ತಿನಿಸಿದನೆಂದು ವಿನೋದಕ್ಕಾಗಿ ಕತೆ ಹೇಳುವುದುಂಟು ಇಂಥ ಪಾಪಕರ್ಮಗಳನ್ನು ಹರಿ ಸ್ವೀಕರಿಸಿ ಪಾದುಕೆಗಳನ್ನಾಗಿ ಮೆಟ್ಟಿ ಮುಂದೆ ಪಾಪಕರ್ಮಗಳು ನಡೆಯದಂತೆ ಅನುಗ್ರಹಿಸುವನೆಂದು ಮುಂದೆ ದಾಸರಾಯರೆ ಹೇಳುತ್ತಾರೆ-

ಪಾಪಕರ್ಮವು ಪಾದುಕೆಗಳನುಲೇಪನವು ಸತ್ಪುಣ್ಯ (ವಿಭೂತಿಸಂಧಿ 15)

ಪಾಪಕರ್ಮ ಹರಿಗೆ ಪಾದುಕೆಯಾಗಲಿ ಪುಣ್ಯಕರ್ಮ ಶ್ರೀಗಂಧಲೇಪನವಾಗಲಿ ಎಂದು ಪಾಪಪುಣ್ಯಕರ್ಮಗಳೆರಡನ್ನೂ ಸಮರ್ಪಿಸಬೇಕು ಪಾಪಕರ್ಮವನ್ನು ಹರಿ ಮೆಟ್ಟಿ ದುಃಖ ಬಾರದಂತೆ ಮಾಡಿ ಸುಖವನ್ನೆ ನೀಡುತ್ತಾನೆ ಪುಣ್ಯಕರ್ಮವನ್ನು ಮೈಗೆಲ್ಲ ಪೂಸಿಕೊಂಡು ಮೈಯ ಸುಗಂಧದಿಂದ ಅದಕ್ಕೆ ಇನ್ನಷ್ಟು ಸುಗಂಧ ಬರಿಸಿ ಮಹತ್ತಾದ ಸುಖ ನೀಡುತ್ತಾನೆ

**ಐದು ಲಕ್ಷ್ಯಂಬತ್ತರೊಂಬ**
**ತ್ತಾದ ಸಾವಿರದೇಳು ನೂರ್ಮೇಲ್**
**ಐದು ರೂಪವ ಧರಿಸಿ ಭೋಕ್ತೃಗ ಭೋಜ್ಯನೆಂದೆನಿಸಿ ।**
**ಶ್ರೀಧರಾದುರ್ಗಾರಮಣ ಪಾ**
**ದಾದಿಶಿರಪರ್ಯಂತ ವ್ಯಾಪಿಸಿ**
**ಕಾದುಕೊಂಡಿಹ ಸತತ ಶ್ರೀಜಗನ್ನಾಥ ವಿಟ್ಠಲನು ॥ ೩೦ ॥**

ಐದು ಲಕ್ಷ ಎಂಬತ್ತೊಂಬತ್ತು ಸಾವಿರದ ಏಳು ನೂರೈದು ರೂಪಗಳನ್ನು ಧರಿಸಿ ಶ್ರೀಭೂದುರ್ಗೆಯರ ರಮಣನಾದ ಶ್ರೀಜಗನ್ನಾಥವಿಟ್ಠಲ ಪಾದಾದಿ ಶಿರಪರ್ಯಂತ ವ್ಯಾಪಿಸಿ ಸತತ ನಮ್ಮನ್ನು ಕಾದುಕೊಂಡಿದ್ದಾನೆ

**ಶ್ರೀಧರಾದುರ್ಗಾರಮಣ :**

ನಾವು ಉಣ್ಣುವ ಅನ್ನ ನಮಗೆ ಬಂಧಕವೂ ಹೌದು ಮೋಚಕವೂ ಹೌದು ಏಕೆಂದರೆ ಅದು ಸತ್ತ್ವ ರಜಸ್ ತಮಸ್ ಎಂಬ ತ್ರಿಗುಣಗಳಿಂದಾಗಿರುತ್ತದೆ ಈ ತ್ರಿಗುಣಗಳಲ್ಲಿ ಅಭಿಮಾನಿನಿಯಾಗಿ ಮಹಾಲಕ್ಷ್ಮಿ ಕ್ರಮವಾಗಿ ಶ್ರೀ ಭೂ ದುರ್ಗಾರೂಪಗಳಿಂದ ಇದ್ದಾಳೆ

ಶ್ರೀರ್ದೇವ ಬಂಧಿಕಾ ನೃಣಾಂ ಭೂರ್ದ್ವೈತ್ಯಾನಾಂ ತಥಾ ಪರಾ । (ಗೀ ಭಾ. 14 19)

ಎಂದು ವಿಷ್ಣುಪುರಾಣದ ವಚನ ಹೇಳುವಂತೆ ದೇವತೆಗಳಿಗೆ ಶ್ರೀದೇವಿ, ಮನುಷ್ಯರಿಗೆ ಭೂದೇವಿ, ಅಸುರರಿಗೆ ದುರ್ಗಾದೇವಿ ಬಂಧಕಳು ಈ ಮೂವರು ದೇವಿಯರೂ ಒಬ್ಬಳೆ ಮಹಾಲಕ್ಷ್ಮಿ ಮತ್ತು ಈ ಮೂರು ರೂಪಗಳೂ ಎಲ್ಲರಿಗೂ ಬಂಧಕಳೆ ಆದರೂ ವಿಶೇಷವಾಗಿ ಉತ್ತಮ ಮಧ್ಯಮ ಅಧಮ ಜೀವರಿಗೆ ಕ್ರಮವಾಗಿ ಮೂರು ರೂಪಗಳು ಬಂಧಕ ಎನ್ನಲಾಗಿದೆ ಈ ಮೂವರು ದೇವಿಯರೂ ನಮ್ಮ ಸ್ಥೂಲ ಸೂಕ್ಷ್ಮ ಶರೀರಗಳಲ್ಲಿ ಪಾದಾದಿ ಶಿರಪರ್ಯಂತ ಕಣಕಣಗಳಲ್ಲಿ ನರನಾಡಿಗಳಲ್ಲಿ ವ್ಯಾಪಿಸಿದ್ದಾರೆ ಅವರೊಂದಿಗೆ ಹರಿಯೂ ಅವರ ಶಕ್ತಿಗಳಿಗೆ ಪ್ರೇರಕನಾಗಿ ಇರುತ್ತಾನೆ ಅವರೊಂದಿಗೆ ರಮಿಸುತ್ತಲೂ ಇರುತ್ತಾನೆ

**ಭೋಕ್ತೃಗ ಭೋಜ್ಯನೆಂದೆನಿಸಿ**

ಭೋಕ್ತನಾದ ಮಾನವನ ಶರೀರದ ಪಂಚಕೋಶಗಳಲ್ಲಿ ಅನಿರುದ್ಧಾದಿ ಪಂಚರೂಪಗಳು ಒಟ್ಟು 5,85,400 ರೂಪಗಳಿಂದ ವ್ಯಾಪಿಸಿವೆ ಭೋಜ್ಯವಾದ ಅನ್ನರಸದ ಅನ್ನ ಪ್ರಾಣ ಮನ ವಿಜ್ಞಾನ ಆನಂದ ಎಂಬ ಐದು ಭಾಗಗಳಲ್ಲಿಯೂ ಒಟ್ಟು 4,305 ರೂಪಗಳಿಂದ ವ್ಯಾಪಿಸಿವೆ ಇದನ್ನೆ ದಾಸರಾಯರು 'ಭೋಕ್ತೃಗ ಭೋಜ್ಯನೆಂದೆನಿಸಿ' ಎಂದಿದ್ದಾರೆ ಭೋಕ್ತೃನಲ್ಲಿ ಭೋಜ್ಯದಲ್ಲಿ ಒಟ್ಟು 5,89,705 ರೂಪಗಳು ಮಹಾಲಕ್ಷ್ಮಿಗೂ ಅಷ್ಟೇ ರೂಪಗಳು ಲಕ್ಷ್ಮೀನಾರಾಯಣರ ಅಷ್ಟು ರೂಪಗಳಿಗೆ ಅಧಿಷ್ಠಾನನಾಗಿ ಮುಖ್ಯಪ್ರಾಣನೂ ಅಷ್ಟು ರೂಪಗಳಿಂದ ಇರುತ್ತಾನೆ ಎಂದು ಇಟ್ಟುಕೊಳ್ಳಬೇಕು

ಒಬ್ಬ ಮನುಷ್ಯನ ಶರೀರ ಕಾಪಾಡಲು ಇವರಿಗೆ ಅಷ್ಟು ರೂಪಗಳು ಬೇಕೆ? ಎಂದರೆ ಇದೊಂದು ಲೀಲೆ. ಶ್ರೀಭೂದುರ್ಗೆಯರನ್ನು ರಮಿಸಲು ಹರಿ ಅಷ್ಟು ರೂಪ ಧರಿಸುತ್ತಾನೆ ಅವನು ಅಷ್ಟು ರೂಪ ಧರಿಸುತ್ತಾನೆ ಎಂದು ದೇವಿಯೂ ಅಷ್ಟು ರೂಪಗಳನ್ನು ಧರಿಸುತ್ತಾಳೆ, ಆ ರೂಪಗಳಿಗೆ ಅಧಿಷ್ಠಾನವೆನಿಸಲು ವಾಯುವೂ ಅಷ್ಟು ರೂಪ ಧರಿಸುತ್ತಾನೆ

**ವ್ಯಾಪಿಸಿ ಕಾದುಕೊಂಡಿಹ ಸತತ ಶ್ರೀಜಗನ್ನಾಥವಿಟ್ಠಲನು**

ಶ್ರೀಜಗನ್ನಾಥದಾಸರು ಈ ಭೋಜನರಸ ವಿಭಾಗವನ್ನು ಜಗದುದರನಾದ ಜಗನ್ನಾಥ ವಿಟ್ಠಲನಿಗೇ ಅಂಕಿತ ಮಾಡಿ ಸಮರ್ಪಿಸುತ್ತಿದ್ದಾರೆ ಶ್ರೀಮದಾಚಾರ್ಯರೂ ಶ್ರೀಸುಮಧ್ವ ವಿಜಯದಲ್ಲಿ ಪರಮಾನ್ನಭೋಜನವನ್ನು ಜಗದಧೀಶ ಶೌರಿಗೇ ಸಮರ್ಪಿಸುತ್ತಾರೆ-

ಪರಮಥ ಪರಮಾನ್ನಂ ಪ್ರಾಪ್ತಮೇವಾಪ್ರಯಾಸಂ
ಪ್ರಭುರಿಹ ಬುಭುಜೇಽಸೌ ವೇದವಾದಪ್ರವೀಣಃ ।
ಅಜಿತಪರಮಭಕ್ತಃ ಸಂತತಂ ಮನ್ಯಮಾನಃ
ಸಕಲಜಗದಧೀಶಃ ಪ್ರೀಯತಾಂ ಶೌರಿರಿತ್ಥಂ ॥

॥ ಶ್ರೀಕೃಷ್ಣಾರ್ಪಣಮಸ್ತು ॥